ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ

ಮಹಾಕವಿ ಷಡಕ್ಷರಿದೇವ ವಿರಚಿತ

# ಬಸವರಾಜ ವಿಜಯಂ

(ಭಾಗ-೨)

ಗದ್ಯಾನುವಾದ

ಪಂಡಿತ ಚನ್ನಪ್ಪ ಎರೇಸೀಮೆ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು ೧೮

೧೯೮೨

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ

ಮಹಾಕವಿ ಷಡಕ್ಷರಿದೇವ ವಿರಚಿತ

# ಬಸವರಾಜವಿಜಯಂ

## (ಭಾಗ-೨)

ಗದ್ಯಾನುವಾದ

ಪಂಡಿತ ಚನ್ನಪ್ಪ ಎರೇಸೀಮೆ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ : : ಬೆಂಗಳೂರು-೧೮

೧೯೮೨

*Mahakavi Shadaksharadeva Virachita BASAVARAJA VIJAYAM Part-2 Original with Prose rendering by Sri Pandita Channappa Eresime First Published in 1982 by Kannada Sahitya Parishat, Bangalore-560018 in Commemoration of its Diamond Jubilee, Demy Octavo Pages xxiv+612 Rs. 25-00*



ಮೊದಲನೆಯ ಮುದ್ರಣ : ೧೯೮೨

ಬೆಲೆ : ಇಪ್ಪತ್ತೈದು ರೂಪಾಯಿಗಳು

ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

ಮುದ್ರಣ : ಶ್ರೀ ವಿ ಜೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು-೫೭೦ ೦೦೧

# ಮುನ್ನುಡಿ

ಷಡಕ್ಷರ ಕವಿಯು ಹಳಗನ್ನಡ ಶೈಲಿಯಲ್ಲಿ ಬರೆದಿರುವ 'ಬಸವರಾಜ ವಿಜಯ' ಕಾವ್ಯ ಕೃತಿಯ ಹೊಸಗನ್ನಡ ಗದ್ಯಾನುವಾದವನ್ನು ಇಲ್ಲಿ ಪ್ರಕಟಿಸುತ್ತಿದ್ದೇವೆ. ಷಡಕ್ಷರಿಯ ಸಾಹಿತ್ಯ ಗಾತ್ರ ಹಾಗೂ ಸತ್ವದಲ್ಲಿ ಮಹತ್ವ ಪಡೆದಿದೆ. ಷಡಕ್ಷರಿಯು ಕಥನ ಕೌಶಲವನ್ನು ಪರಿಶೀಲಿಸುವಾಗ ಅವನ ದೋಷ ದೌರ್ಬಲ್ಯಗಳಿಗೆ ಕುರುಡಾಗುವ ಕಾರಣ ವಿಲ್ಲ. ಬಹುಶಃ ಈ ಕವಿ ಚಂಪೂ ಪ್ರಕಾರಕ್ಕೆ ತೆಕ್ಕೆ ಬೀಳದೆ ಷಟ್ಪದಿ ಸಾಂಗತ್ಯಗಳಿಗೆ ಮೊರೆ ಹಾಕಿದ್ದರೆ ಕಾವ್ಯ ಹಾಗೂ ಕಥೆಗಾರಿಕೆಗೆ ಇನ್ನೂ ಹೆಚ್ಚಿನ ಹಾಸು ಬೀಸು ಬರುವ ಸಾಧ್ಯತೆಯಿತ್ತು. ಷಡಕ್ಷರಿ ಕವಿಯ ಕಥನ ಕೌಶಲ ಅಖಂಡವಾದ ಪರಿಭಾವನೆಗೆ ಮ್ಲಾನವಾಗಿ ಕಂಡರೂ ಬಿಡಿಬಿಡಿಯಾದ ಪರಿಶೀಲನೆಗೆ ಕೆಲವು ಕಡೆ ಅತ್ಯುನ್ನತ ಮಟ್ಟ ದಲ್ಲಿ ಮೈದೋರಿರುವುದನ್ನು ಮನಗಾಣಬಹುದು.

ಷಡಕ್ಷರಿಯ ಸಾಹಿತ್ಯ ಗಾತ್ರ ಹಾಗೂ ಸತ್ವದಲ್ಲಿ ಮಹತ್ವ ಪಡೆದಿದೆ. ಈತನ ಮೂರು ಪ್ರಮುಖ ಕಾವ್ಯಗಳಲ್ಲಿ ಒಂದಾದ ರಾಜಶೇಖರ ವಿಳಾಸದ ಕಥೆ ಹಳೆಯದು. ಅದು ಸತ್ಯೇಂದ್ರ ಚೋಳನನ್ನು ಕುರಿತದ್ದು. ಇದನ್ನು ಈಗ ತಿಳಿದಿರುವಂತೆ ಪಿಳ್ಳೆ ನಾಯನಾರರು (ತಿರುಜ್ಞಾನ ಸಂಬಂಧರು) ತಮಿಳಿನಲ್ಲಿ ಹೇಳಿದುದನ್ನು ಕನ್ನಡಿಸಿದವನು ಗುಬ್ಬಿಯ ಮಲ್ಲಣಾರ್ಯ (ಸುಮಾರು 1513). ತಮಿಳು ಕಾವ್ಯ ಹೇಗಿದೆಯೊ ತಿಳಿ ಯದು, ಮಲ್ಲಣಾರ್ಯನ ಕಾವ್ಯ ಮಾತ್ರ ತೀರ ಸಾಮಾನ್ಯ. ಆದರೆ ಷಡಕ್ಷರಿಯ ಕಾವ್ಯ ಶಕ್ತಿಯು, ಕಥನ ಕಲೆಯ ಮಡುವಿನಲ್ಲಿ ಮಿಂದೆದ್ದ ಕಾವ್ಯವಸ್ತು ಮಲ್ಲಣಾರ್ಯಾದಿಗಳ ಪ್ರತಿಕೃತಿ ಎನಿಸದೆ ಮರುಹುಟ್ಟು ಪಡೆದಿದೆ. ಸತ್ಯೇಂದ್ರ ಚೋಳನ ಕಥೆ ಕನ್ನಡಿಗರಿಗೆ ಅರುಚಿಯಾಗಿತ್ತು, ಮಲ್ಲಣಾರ್ಯನ ಅಕಾವ್ಯ ರಚನೆಯಿಂದ. ಆದರೆ ಅದನ್ನು ಸರ್ವ ಜನ ಆಸ್ವಾದ್ಯವನ್ನಾಗಿಸಿ ಪುನರ್ಜನ್ಮವಿತ್ತು ರಸಸಿಂಚನೆ ಮಾಡಿದವನು ಷಡಕ್ಷರದೇವ.

ಆ ಹಳೆಯ ಕಥೆಯ ಹೊನಲನ್ನು ಷಟ್ಪದಿಯ ಪ್ರಣಾಲಿಯಿಂದ ಚಂಪೂಕಾಲುವೆಗೆ ಹರಿಸಿ ಹೊರಮೈ ಬದಲಾಯಿಸಿದ್ದೇ ಅಲ್ಲದೆ ಅದರ ಅಂತರಂಗಕ್ಕೂ ಕಾವ್ಯದ ಜೀವ ತುಂಬಿ ಪುಷ್ಟಿಯ ಪ್ರಾಣಪ್ರತಿಷ್ಠಾಪನೆ ಮಾಡಿದ್ದಾನೆ. ಈತನ ಕುಶಲ ಕಥೆ ಗಾರಿಕೆಯ ಕುಬಚ್ಚಿನಲ್ಲಿ ನುಸುಳಿಬರುವಾಗ ಆ ಪುರಾತನ ಕಥೆ ಚರ್ವಣ ಇಲ್ಲವೇ ಬಡ ಕಲು ಎಂದನ್ನಿಸದು. ಅದಕ್ಕೊಂದು ಹೊಸ ಹೊಳಪು, ಮೊನಚು, ಒಪ್ಪ ಓರಣ ಲಭಿ ಸಿರುವುದು ಎದ್ದು ಕಾಣುತ್ತದೆ.

ಪಾತ್ರಗಳಿಗೆ ಪ್ರಭೆ, ವಸ್ತುವಿಗೆ ಪರಿಷ್ಕಾರ—ಇವೆರಡೂ ಕಥೆಗಾರ ಷಡಕ್ಷರಿಯ ದೇಣಿಗೆ. ಸತ್ಯೇಂದ್ರಚೋಳ (ರಾಜ), ಅಮೃತಮತಿ (ರಾಣಿ), ಪತಿಮೋಹಿ (ಮಂತ್ರಿ), ಮಿತವಚನ (ಸಚಿವಪುತ್ರ), ರಾಜಶೇಖರ (ರಾಜಪುತ್ರ), ತಿರುಕೊಳವಿನಾಚಿ (ಭಕ್ತೆ),

ಕುಮಾರ ಶಂಕರ (ಭಕ್ತಿಯ ಮಗ)— ಇವರೆಲ್ಲ ಶಿವಪುರಾಣದ ಹಾಜರಿ ಪುಸ್ತಕದಲ್ಲಿ ಬರುವ ಸಪ್ಪೆ ಹೆಸರುಗಳಾಗಿ ಭಾವಚಿಂತಾರತ್ನದಲ್ಲಿ ಓದುಗರಿಂದ ದೂರ ಉಳಿಯುತ್ತಾರೆ. ಇಲ್ಲಿ ಅವರು ಮತ್ತೆ ಸಹೃದಯರಿಗೆ ಆತ್ಮೀಯರಾಗುತ್ತಾರೆ. ಇದು ಇವನ ಕಥನ ಕೌಶಲದ ಸ್ಪರ್ಶಜನ್ಯ ಮಾರ್ಪು. ಅವರ ನೋವು ನಲಿವುಗಳು ನಮ್ಮವೇ ಆಗುತ್ತವೆ. ಕಡೆಗೆ ಪವನಗಮನ, ಹರಿಣಗತಿ ಎಂಬ ಆ ಜಾತ್ಯಶ್ವಗಳು ಕೂಡ (ಕಾವ್ಯದ) ಕಥಾನಕದ ಸಕ್ರಿಯ ಸಜೀವ ಪಾತ್ರಗಳಾಗಿಬಿಡುತ್ತವೆ. ಇಂದ್ರನ ಮಗ ಜಯಂತನ ಜೊತೆಯಲ್ಲಿ ಕುಬೇರನ ಮಗ ನಳಕೂಬರ ವೈಹಾಳಿ ಹೊರಟಂತೆ ರಾಜಶೇಖರ ಮಿತವಚನರು ವೈಹಾಳಿಗೆ ಹೊರಟಾಗ ನೋಡಬೇಕು ಕಥೆಯಲ್ಲಿನ ಹಯಗತಿಯನ್ನು.

ಕಂತುಕದಂತ ಪುಷ್ಕರತಳಕ್ಕೊಗೆದೂರ್ಮಿಕೆಯಂತೆ ಪಾಯ್ದು ಮೀ
ನಂತಿರೆ ಮೀರಿ ಲಂಘಿಸಿ ಲಸನ್ಮೃಗದಂತಿರೆ ದಾಂಟಿ ಮಿಂಚಿ ದೆಂ
ಬಂತೆ ಸಭಾಂತದೊಳ್ ಪೊಳೆದು ಸುಟ್ಟುರೆಯಂತಿರೆ ಸುತ್ತಿಪತ್ತಿ ನಾ
ಗಾಂತಕನಂತೆ ಪಾರಿದುದು ತುಂಗ ತುರಂಗಮಿಳಾಧಿನಾಥನಾ ॥

ಪರಿಯಿಪ ನೆಟ್ಟುವುಟ್ಟುವಿದಿರೇರಿಪ ಪಾರಿಪ ಕಿಳ್ತು ಪಾಂಟಿಪಿ
ಬ್ಬರಿಯೊಳೆ ಸುತ್ತಿಪಾಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯಲು
ಪ್ಪರಿಪ ಬೆಡಂಗಿನಿಂ ನಡೆಯಿಪಂಗಮಲುಗಂದೆ ಪಂಚಧಾರೆಯೊಳ್
ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿ ಪುತ್ರನಾ ॥

ಸುಳಿ ಸುಳಿದೊತ್ತಿ ಪತ್ತಿ ತವೆ ಸುತ್ತಿ ಕಡಂಗಿ ಬೆಂಡಗುವೆತ್ತು ಸಂ
ಚಳಿಸಿ ನಭಕ್ಕೆ ಮೀರಿ ಮಿಗೆ ಪಾರಿ ಚಮತ್ಕೃತಿವೀರಿ ತೋರಿ ತ
ನ್ನಳವನಿಳಾತಳಕ್ಕೆ ಕಿಳಿರ್ದುಪ್ಪಳಿಸುತ್ತುರೆ ಮೀಂಟಿದಾಂಟಿ ಕಂ
ಟಳಿಸಿ ಪೊದಳ್ದು ಪಾಯ್ದು ಪರಿಯಿಟ್ಟುದು ಪಾಯುರಯಂ ಹಯದ್ವಯಂ ॥

ಕಥೆಗಾರನ ಬಂಡವಾಳ ಮಾತುಗಾರಿಕೆ, ಶಬ್ದಗಳ ಸರಕನ್ನು ಢಾಳಾಗಿ ಪ್ರದರ್ಶಿಸಬೇಕು. ಇಲ್ಲಿನ ಶಬ್ದ ರಚನೆ, ಛಂದಸ್ಸು ಕುದುರೆಯ ಖುರಪುಟದಂತೆ ತಾಳಕುಟ್ಟುವ ಗತಿಯಲ್ಲಿದೆ. ಇದನ್ನು ಗಟ್ಟಿಯಾಗಿ ಓದಿಯೇ ಮಲಕು ಹಾಕಬೇಕು. ಅದರಲ್ಲಿಯೂ ಮೊದಲನೆಯ ಪದ್ಯದಲ್ಲಿ ದಂತ್ಯಧ್ವನಿ ತಕಾರದ ಪುನರಾವೃತ್ತಿಯನ್ನು ಪರಿಭಾವಿಸಬೇಕು. ಅದು ಬಿಡಿಯಾಗಿ ಬರದೆ ಅನುನಾಸಿಕದ ಜೊತೆಯಲ್ಲೇ ಬರುತ್ತದೆ ; ಅಂತೆ, ಅಂತಿರೆ—ಎಂಬಂತೆ ಎರಡನೆಯ ವೃತ್ತದಲ್ಲಿ—ಇಪ ಪ್ರತ್ಯಯಾಂತ ರೂಪಗಳ ಲಾಲಿತ್ಯಕ್ಕೆ ಕಿವಿಗೊಡಬೇಕು. ಮೂರನೆಯ ಪದ್ಯದಲ್ಲಿ ಇವೆರಡರ ಜೊತೆ ರೇಫದ ಕುಪ್ಪಳಿಸುವಿಕೆಯನ್ನು ಗಮನಿಸಬೇಕು. ಅಲ್ಲದೆ ಇಲ್ಲಿನ ಇನ್ನೊಂದು ವಿಶೇಷವೆಂದರೆ ಜೋಡಿಗುದುರೆಗಳ ಜತೆಗತಿಯೂ ಸೇರಿದೆ. ಸಂಭ್ರಮದ ಸ್ಪಂದನವೇ ಇಲ್ಲಿಯ ನ್ಯಾಯ. ಭಾವನೆಯನ್ನು ಭಾಷೆಯಲ್ಲಿ ಬಿಂಬಿಸುವುದು ಕಥೆಯ ಕೌಶಲಮಾತ ಕಲೆಗಾರನ ಕೆಲಸ. ಆದರ ಕುಸುರಿಗೆಲಸ ಇಂಥ

ಕಡೆಗಳಲ್ಲಿ ಮೈದೊರೆಯುತ್ತದೆ. ಇವೆಲ್ಲದರ ಪರಿಣಾಮವಾಗಿ ಇದು ಅಶ್ವವಿಹಾರವಾಗಷ್ಟೇ ಪರ್ಯವಸಾನವಾಗುವುದಿಲ್ಲ. ಅದನ್ನು ದಾಟಿ ಕಾವ್ಯವಿಹಾರವೂ ಆಗಿ ಸುಖ ಕೊಡುತ್ತದೆ.

ಗೆಳೆಯರಿಬ್ಬರು ವೈಹಾಳಿಗೆ ಹೊರಡುವಲ್ಲಿಂದ ಹಿಡಿದು ಶಂಕರ ಕುಮಾರ (ಹೆಸರುಗಳೂ ಪ್ರತಿಮೆಗಳೇ) ಅವರ ಕುದುರೆ ಕಾಲಿಗೆ ಸಿಕ್ಕಿ ಸಾಯುವತನಕ ಒಟ್ಟು ಪ್ರಸಂಗವನ್ನು ತನಿಯಾಗಿ ತೆಗೆದು ಓದಿ ಓದಿ ತಲೆದೂಗಬಹುದು. ಆದರೆ, ಅಷ್ಟರ ಗುಣಗಳನ್ನೇ ಗಣಿಸಿ ಪ್ರಾಯೋಗಿಕ ವಿಮರ್ಶೆಕೂಡ ಮಾಡಿ ನೋಡಿ ಆನಂದಿಸಬಹುದು. ಕಾರಣ, ಈ ಪ್ರಸಂಗವನ್ನು ಲವಲವಿಕೆಯೊಂದು ತುಂಬಿಕೊಂಡಿದೆ. ಉತ್ಸಾಹವೇ ನೆಲೆಯಾಗಿ ಉದ್ದಕ್ಕೂ ಉಲ್ಲಾಸ ಉಕ್ಕುತ್ತದೆ. ಕುದುರೆಯ ಲಯಗತಿ ಸವಾರರ ಮನೋಗತ ಭಾವವನ್ನು ಬಹಿರಂಗದಲ್ಲೆ ಬಿಂಬಿಸಿದಂತೆ ಭಾಸವಾಗುತ್ತದೆ. ವಸ್ತುವಿನ ಮೇಲಿನ ಇಲ್ಲಿನ ಹಿಡಿತ, ಒಬ್ಬ ಪಳಗಿದ ಕಥೆಗಾರನಿಗೆ ಮಾತ್ರ ಸಾಧ್ಯ ಎನ್ನುವ ಮಟ್ಟದಲ್ಲಿದೆ. ಕಾವ್ಯದುದ್ದಕ್ಕೂ ಇದೇ ತೂಕದ ಎಚ್ಚರದ ಸಂಗ್ರಹದ ನಿರೂಪಣೆ ಇರಬಾರದಿತ್ತೆ ಎಂಬ ಸಂಚಾರಿ ಭಾವ ಹಾಯುತ್ತದೆ. ಏಕೆಂದರೆ ಇಲ್ಲಿ ಮಾತ್ರ, ಅಶ್ವಾರೋಹಿಯ ಹಿಡಿತ ತಪ್ಪಿದರೂ, ಕವಿಯ ಹಿಡಿತ ಕಥೆಯ ನಿಯಂತ್ರಣದಿಂದ ಎಡವಿಲ್ಲ.

ಕಾವ್ಯದ ಆರಂಭದ ಒಂಬತ್ತು ಆಶ್ವಾಸಗಳು ಕೇವಲ ಒಂದು ಆಶ್ವಾಸಕ್ಕಷ್ಟೇ ಸೀಮಿತವಾಗುವ ಮಿತವಸ್ತುವೆನ್ನಿಸಿ, ಈ ಭಾಗದ ಮತ್ತು ಇದರ ಅನಂತರದ ಕಥೆ ಮಾತ್ರ ಕಣ್ಮುಂದೆ ನಡೆದುಹೋಗುತ್ತದೆ. ಆಧುನಿಕ ಪರಿಸರದ ಉಪಮೆ ತೆಗೆದು ಹೇಳುವದಾದರೆ, ಚಲನಚಿತ್ರದಲ್ಲಿ ಕುಳಿತು ರಜತ ಪರದೆಯ ಮೇಲೆ ಅಭಿನಯವಾಗುವ ದೃಶ್ಯಾದಿಗಳನ್ನು ನೋಡಿದ ಜೀವಂತ ಅನುಭವ ಆಗುತ್ತದೆ. ಅದೇ ಮಟ್ಟದ ತಾದಾತ್ಮ್ಯ ದಕ್ಕುತ್ತದೆ. ಅವನ ಮೂರೂ ಕನ್ನಡ ಚಂಪೂಕಾವ್ಯಗಳಿಂದ ಹಲವು ಇಂಥ ತನಿ ಚಿತ್ರಗಳನ್ನು ತೆಗೆದು ಕಥಾಪ್ರಿಯರು ದೃಶ್ಯಾತ್ಮಕ ಅನುಭವವನ್ನು ಶ್ರವ್ಯಾತ್ಮಕ ಕಾವ್ಯದಲ್ಲೂ ಆಸ್ವಾದಿಸಬಹುದು. ಶಿವ ಲೀಲಾವಿನೋದಕ್ಕಾಗಿ ಶಬರನಾಗಿ ಕಾಣಿಸಿಕೊಂಡ ಚಿತ್ರವನ್ನು ಕೇಳುಗರ ಕಣ್ಮುಂದೆ ಕಡೆದಿಟ್ಟಿದ್ದಾರೆ :

ಜಡೆಗಳ ಬಂಬಲೇ ತಲೆದಳಿರ್ ಫಣಿ ಸುತ್ತಿದ್ದ ಬಳ್ಳಿ ತಾಳ್ದ ಬಾನ್
ಗಡಲದು ಪುಷ್ಪಮಾಲೆ ಗಟಿವೂ ಗಜಿ ತೆಳ್ವಜಿಬಗ್ಗ ಸಮ್ಮದೊ
ಳ್ಪಡೆ ಪೊಸಚಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಧ ಮಪರಾಗ ವಿಲೇಪನ ಮಗ್ನಿಲೋಚನಂ ॥

ಅದರ ಜೊತೆಗೇ ವಾಗರ್ಥದಂತೆ ಸಂಪೃಕ್ತರಾಗಿ ಬಂದ ಪಾರ್ವತಿ ಶಬರಿತಿಯಾಗಿ ಕಾಣಿಸಿಕೊಂಡ ಚಿತ್ರ ಕೊಡುತ್ತಾನೆ :

ತಳಿರುಡೆ ಸಂಜೆಗೆಂಪು ಪೂಸಮುತ್ತಿನ ಹಾರಮೆ ತಾರಕಾಳಿ ತ
ಳ್ತಳಿರುಚಿ ಕಾಯಕಾಂತಿ ಕಡುಗಲೆಲೆ ಮೂಗುತಿ ಮುತ್ತು ಶುಕ್ರಮಂ ।

ಡಳಮುಮದೊರ್ಪ್ಪೆ ಭಿಲ್ಲಿಯ ವಿಳಾಸಮನಾಳ್ದೆಸೆದಂದು ಸರ್ವಮಂ
ಗಳೆ ನಿಜಕಾಳರಾತ್ರಿ ಪೆಸರಂ ಮಿಗೆ ಸಾರ್ಥಕಮಂ ತಿಗೞ್ಚಿದಳ್ ॥

ಇದೇ ಸಂದರ್ಭದಲ್ಲಿ ರಾಜಶೇಖರವಿಲಾಸದಲ್ಲಿ (5-24) ಬರುವ ಬೇಡನ ವರ್ಣನೆಯೊಡನೆ ಇವನ್ನೂ ತೂಗಿ ನೋಡಿ ಅಲ್ಲಿನ ಸ್ವಭಾವೋಕ್ತಿಯ ಸೊಗಸನ್ನೂ ಚಪ್ಪರಿಸಬಹುದು.

ಮಾನವ ಸ್ವಭಾವದ ಸೂಕ್ಷ್ಮಗಳನ್ನೂ ಸಂವೇದನೆಗಳನ್ನೂ ಸಂಕೀರ್ಣತೆಗಳ ಸುಳಿಗಳನ್ನೂ ಕವಿ ಆಳವಾಗಿ ಅರಿತು ಕಾವ್ಯದಲ್ಲಿ ಅಳವಡಿಸಿದ್ದಾನೆ. ಕಥೆ ಪೇಲವ ಇಲ್ಲವೇ ಸಪ್ಪೆ ವರದಿಯಾಗಿ ಸಾಗದೆ ಈತನ ಕಥೆಯು ತಂತ್ರದಲ್ಲಿ ರಕ್ತಮಾಂಸ ಮಜ್ಜೆಗಳಿಂದ ಉಸಿರಾಡುವ ಪಾತ್ರಗಳ ಕುಟುಂಬ ಚಿತ್ರಣವಾಗಿ ಬರುತ್ತದೆ. ತಂದೆ-ತಾಯಿ, ಭಕ್ತ-ಭಗವಂತ, ರಾಜ-ಮಂತ್ರಿ, ತಂದೆ-ಮಗ, ತಾಯಿ-ಮಗ, ರಾಜ-ಪ್ರಜೆ, ಗೆಳೆಯರ ಗೆಳೆತನ ಹೀಗೆ ಹಲವು ಭಾವಗಳ, ಸಂಬಂಧಗಳ ಸಂಗಮದಿಂದ ರಾಜಶೇಖರವಿಳಾಸ ವರ್ತುಲವಾಗಿ ಸಾಗುತ್ತದೆ. ಈ ಬಗೆಯ ಭಾವಾವಳಿಯ ಪ್ರಭಾವಳಿಯಲ್ಲಿ ಪಾತ್ರಗಳು ಸ್ಫುಟವಾಗಿ ಕಾಣುತ್ತಾರೆ. ಪುತ್ರವಾತ್ಸಲ್ಯ, ಪ್ರಜಾವಾತ್ಸಲ್ಯಗಳ ತಕ್ಕಡಿಯ ತೂಗಾಟ ನವೀನ ಕಲ್ಪನೆಯಲ್ಲ. ಇಲ್ಲಿ ಶಿವಭಕ್ತಿಯ ಕೇಂದ್ರದ ಸುತ್ತ ಸ್ವಾಮಿಭಕ್ತಿ ಗುರುಭಕ್ತಿ ಪತಿಭಕ್ತಿಗಳು ಗೂಡು ಕಟ್ಟಿವೆ. ಈ ನಿರೂಪಣೆಯನ್ನು ಸುತ್ತಿಕೊಂಡ ಆತ್ಮೀಯ ಪರಿವೇಶ ಈ ಕವಿಯ ಸ್ವೋಪಜ್ಞ ಸ್ಪರ್ಶ. ಇಂಥ ಸ್ವಂತಿಕೆಯ ಆಕರ್ಷಕ ರಸಮಯ ಸನ್ನಿವೇಶಗಳು ಒಳ್ಳೆಯ ಕಥೆಗಾರನ ಕಾಣ್ಕೆಗೆ ಸಾಧ್ಯವಾಗುವಂತಹವು. ಸ್ವಪ್ರತಿಭೆಯಲ್ಲಿ ಅದ್ದಿ ತೆಗೆದ ಕಥಾಕುಂಚದ ಬೀಸಿನಿಂದ ಕಾವ್ಯಗಳು ಕಲಾಕೃತಿಗಳಾಗಿವೆ.

ಕಥೆ ರಂಜಕವಾಗಲು, ಯಶಸ್ವಿಯಾಗಲು, ಹೃದ್ಯವಾಗಲು ಅಗತ್ಯವಾದ (ಕಾವ್ಯಪಾಕ) ಪರಿಕರಗಳೇನೆಂಬುದು ಕಥೆಗಾರ ಷಡಕ್ಷರಿಗೆ ಕರತಲಾಮಲಕ. ಆತ ಕಥಾತ್ಮಕ ನಿರೂಪಣೆಗೆ ಒಲಿದುದರಿಂದ ಶೈಲಿ ವರ್ಣನಾತ್ಮಕವಾಗಿದೆ. ಇದರಿಂದ ಕಾವ್ಯ ಒಂದು ಸಲಿಲವಾಗಿ, ಕಥಾವಾಹಿನಿಯಾಗಿ ಪ್ರವಹಿಸುತ್ತದೆ. ವೃತ್ತ ಕಂದಗಳ ಮಿತಿಯಲ್ಲೇ ಆತ ತನ್ನ ಸಮಕಾಲೀನ ಛಂದಸ್ಸಾದ ಷಟ್ಪದಿ ಸಾಂಗತ್ಯಗಳ ಗತಿಯನ್ನು ತರುತ್ತಾನೆ. ಆಗ ಕಾವ್ಯಲಯ ಲಲಿತವಾಗಿ ಕದಳೀಪಾಕವಾಗುತ್ತದೆ.

ಕಥೆ ಗೆಲ್ಲಲು, ಮತ್ತು ಜನಮನವನ್ನು ಮುಟ್ಟಲು ಬೇಕಾದ ಸಾಮಗ್ರಿಯನ್ನು ಕವಿ ಆಶ್ರಯಿಸುತ್ತಾನೆ. ಭಗವಂತ ಭಕ್ತಿ ಸಂಧಾನಕ್ಕೆ ಸುಲಭ ಸಾಧ್ಯನೆಂಬ ಸತ್ಯಾಂಶದ ಸ್ಪಷ್ಟತೆಗಾಗಿ ಹುಟ್ಟಿಕೊಂಡ ಪದ್ಯವಿದು :

ಪೂಜಿಪೆಯ್ಯವೇಷದಿರವೇ
ತೆಱನಾದೊಡಮೇನೋ ಮಾನಸಾಬ್ಜಾಂತರದೊಳ್ ।
ಕಱಿ ಗೊರಲನಂಘ್ರಿದಳೆದ
ಬ್ಕಱಿಯೊಳಾಂ ಜಾನಿಸಿ ಮಹೇಶನಂ ಮೆಚ್ಚಿಸುವೆಂ ॥

ಶಬರಶಂಕರವಿಳಾಸದ ಈ ಪದ್ಯ ಮನುಷ್ಯನ ಆತ್ಮ ಪ್ರತ್ಯಯವನ್ನೂ ಮನೋದೃಢತೆಯನ್ನೂ ಕನ್ನಡಿಸುತ್ತದೆ. ಕಥೆಗಾರ ಇಂಥ ಕಡೆಗಳಲ್ಲಿ ತನ್ನ ಉದ್ದೇಶವನ್ನು ಸಹೃದಯರೊಡನೆ ಹೇಗೆ ಸಂವಹನಗೊಳಿಸಿದ್ದಾನೆಂಬುದನ್ನು ಪರಿಶೀಲಿಸಬಹುದು. ಸೋತ ಜೀವದಲ್ಲಿ ವಿಶ್ವಾಸದ ತರಂಗಗಳನ್ನು ಬಡಿದೆಬ್ಬಿಸುವ ಪ್ರಸಂಗವಿದು. ಕಾವ್ಯಧರ್ಮ—ಜಿನಧರ್ಮ ಮೇಳೈಸಿಕೊಂಡ ಜೈನ ಚಂಪೂಪುರಾಣಗಳಂತೆ ಇಲ್ಲಿ ಕಾವ್ಯಧರ್ಮದ ಕವಚತೊಟ್ಟ ಶಿವ ಧರ್ಮ ಇದೆ. ತಾನು ಸೆಣಸಿದ ಶಬರನೇ ಶಿವನೆಂಬ ಸತ್ಯಾಂಶ ಪ್ರಕಟವಾದಾಗ ಅರ್ಜುನನ ಚಿತ್ತಸ್ಥಿತಿಯನ್ನು ಸ್ಫುಟವಾಗಿ ಬಿಂಬಿಸುವ ಪದ್ಯ :

ಪಡಿದೆೞಿದಂತೆ ಪಾೞಿತೆರ್ದೆ ಪವ್ವನೆ ಜುಮ್ಮನೆ ಮೆಯ್ಯನಿರ್ ಪೊದ
ಱ್ದಡಿವಿೞಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹ ಗ್ರಹಂ ।
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುಸ್ತವಂ ಮಡ
ಲ್ತಡರ್ದುದು ಭೀತಿ ಬೇರ್ವರಿದುದೇೞ್ಗೆಯನಾಳ್ದುದು ರಾಗ ಸಂಪದಂ ॥

ಭಾವಕ್ಕೆ ಅನುಗುಣವಾಗಿ ಕುಣಿಯುವ, ತಾಳ ಹಾಕುವ ಭಾಷೆಯ ಛಾಯೆ ಇಲ್ಲಿದೆ. ಶಬರಶಂಕರವಿಳಾಸದಲ್ಲಿ ಪಾತ್ರಗಳು ಕಡಿಮೆ. ಕಾರಣ ಅದು ಪಾತ್ರ ಪ್ರಧಾನ ಕಾವ್ಯ ಅಲ್ಲ. ಅದು ಘಟನಾ ಪ್ರಧಾನ ಕಾವ್ಯ. ಆದ್ದರಿಂದ ಕಥೆಯ ಕ್ರಿಯೆಯೆಲ್ಲ ಇರುವುದು ಶಬರಾರ್ಜುನರ ಕಲಹದಲ್ಲಿ ಅಲ್ಲಿ ಮಿಂಚಿನ ಕ್ರಿಯೆ ನಿರೀಕ್ಷಿತ ಪ್ರಮಾಣದಲ್ಲಿ ಇಲ್ಲ: ನಾಟಕೀಯ ಪ್ರತಿಭೆ ತಕ್ಕಮಟ್ಟಿಗಿದೆ. ಕಥಾಂಶಕ್ಕೆ ಮಾತ್ರ ಕೊರತೆಯಿಲ್ಲ.

ವೀರ, ಕರುಣ, ಶೃಂಗಾರ ಇವು ಮೂರು ಬಹುಬೇಗ ಜನಸಾಮಾನ್ಯರ ಹೃದಯ ಮಿಡಿಯುವ ರಸಗಳು. ಈ ಕವಿ ಈ ಮೂರೂ ರಸಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಕಥೆ ಹೆಣೆಯುತ್ತಾನೆ. ನೇಮಿಚಂದ್ರನೊಡನೆ ಹುರುಡಿಸುವ ಭರದಲ್ಲೆ ಶೃಂಗಾರದ ಕಟ್ಟಲೆಯೂ ಆಗಿಬಿಡುತ್ತದೆ. ಶಬರಶಂಕರ ವಿಲಾಸದಲ್ಲಂತೂ ಶೃಂಗಾರದ ದಾಸನಾಗಿ ಮುಗ್ಗರಿಸಿ ಆಭಾಸ ಮಾಡುತ್ತಾನೆ. ಅರ್ಜುನನ ತಪಃಪ್ರಭಾವದಿಂದ ನಿಸ್ತೇಜರಾದ ಯತಿತಂಡ ಶಿವನಲ್ಲಿ ಮೊರೆಯಿಡುತ್ತಾ, ಇಂದ್ರಕೀಲ ನಗರದ ಬಣ್ಣನೆಯಲ್ಲಿ ಖಚರ ದಂಪತಿಗಳ ಪ್ರಣಯ ವಿಲಾಸ ನಿರೂಪಣೆಯಲ್ಲಿ ಆಸಕ್ತರಾಗುತ್ತಾರೆ. ಸ್ಮರಶಸ್ತ್ರ ಸದನ ಸದೃಶಕಾಸಾರ, ಕಾಮುಕನಂತಿರೆ ಸುಳಿವ ಮಂದಮಾರುತ, ಮಲಯಜವಿಲಿಪ್ತ ಕುಚ ಕುಂಭದಂತೆ ಆನೆಯ ಕುಂಭಸ್ಥಳ–ಇನ್ನೂ ಮುಂತಾಗಿ ಋಷಿಪಾಣಿ ಮೊಳಗುತ್ತದೆ. ಋಷಿ ನಡೆಗೆ ಈ ರಸಿಕನುಡಿ ಸಂಗಮಿಸುವುದಿಲ್ಲ. ಒಳ್ಳೆಯ ಕಥೆಗಾರನೂ ಔಚಿತ್ಯ ತಪ್ಪಿದಾಗ, ಒಮ್ಮೊಮ್ಮೆ ಹೇಗೆ ಸೋಲುತ್ತಾನೆಂಬುದಕ್ಕೆ ಇದು ಲೇಸಾದ ದೃಷ್ಟಾಂತ. ಶಬರಶಂಕರ ವಿಲಾಸದಲ್ಲಿ ಶೃಂಗಾರದಲ್ಲಿ ಸೋತರೂ ರಾಜಶೇಖರ ವಿಲಾಸದಲ್ಲಿ ಸಾವರಿಸಿಕೊಳ್ಳುತ್ತಾನೆ. ವಾಸ್ತವವಾಗಿ ಶಬರವೇಷಿಯಾದ, ಶಿವನ ಮಹಾತ್ಮೆಯ ಕಿರುಕಾವ್ಯದಲ್ಲೂ ಶೃಂಗಾರವನ್ನು ತರುವ ಚಪಲದಿಂದ ಸೋತಿದ್ದಾನೆ. ರಾಜಶೇಖರವಿಳಾಸದಲ್ಲಿ ಶೃಂಗಾರಕ್ಕೆ ಮೊದಲೆ ಅವಕಾಶ ಮಾಡಿಕೊಂಡಿದ್ದಾನೆ. ಸತ್ಯೇಂದ್ರಚೋಳನರ್ಧಾಂಗಿ

ಅಮೃತಮತಿಯ ಚೆಲುವನ್ನು ಕಂಡರಿಸುವಾಗ ಅವನ ಕಣ್ಣು ಅದರಾಚೆಗಿನ ಆರು ಆಶ್ವಾಸಗಳವರೆಗೆ ಚಾಚಿಕೊಂಡಿದೆ.

ಪಂಪ, ಅರ್ಜುನನನ್ನು ದ್ವಾರಕೆಯಲ್ಲಿ ಕೃಷ್ಣ ಸ್ವಾಗತಿಸಿದಾಗ ಊರ ಚೆಲುವೆಲ್ಲ ವೈಗಣ್ಣಾಗಿ ಕಂಡ ಪರಿಯನ್ನು ವರ್ಣಿಸಿರುವ ಸೊಗಸಾದ (ಚತುರ್ಥಾಶ್ವಾಸದ) ಭಾಗ ದಿಂದ ಸಹಜವಾಗಿ ಸ್ಫೂರ್ತಿಗೊಂಡು ಷಡಕ್ಷರದೇವ, ರಾಜಶೇಖರನನ್ನು ಸಿಂಹಳೇಂದ್ರ ರಾಜವೀಥಿಯೊಳೋಜೆಮಿಗೆ ನಡೆದಿದಿರ್ಗೊಂಡುದನ್ನು ವರ್ಣಿಸಿದ್ದಾನೆ. ಆದರೆ ನೆಲೆ ವಾಡಂಗಳ ನೆಲೆನೆಲೆಯೊಳಗೆ ನೆರೆನೆರೆದು ನಿಂತ ನೀರೆಯರು ರಾಜಶೇಖರನನ್ನು ನೋಡುವ ಹಾಗೂ ಸರ್ವಮಂಗಳೆಯನ್ನು ವರ್ಣಿಸುವ ಪ್ರಸಂಗದಲ್ಲೂ ಪಂಪನನ್ನೇ ಆಶ್ರಯಿಸಿ ಅನುಸರಿಸದೆ, ನೇಮಿಚಂದ್ರನ ಮಾದರಿಯನ್ನು ಅವಲಂಬಿಸುತ್ತಾನೆ. ಕವಿ ಸಮಯಗಳಿಗೆ ಜೋತುಬೀಳುತ್ತಾನೆ. ಕಾವ್ಯದ ದೃಷ್ಟಿಯಿಂದ ಇಂಥ ಹತ್ತು ಕುಂದು ಗಳನ್ನು ಪೋಣಿಸಬಹುದು. ಕಥೆಯ ದೃಷ್ಟಿಯಿಂದ ಕುಂದೆ ? ಎಂದು ಪ್ರಶ್ನಿಸಿದಾಗ ಉತ್ತರ ನಿಷೇಧಾರ್ಥಕವಾಗಿರದು. ಕಥೆಯನ್ನು ರಂಜಕವನ್ನಾಗಿಸಲು ನೂರು ದಾರಿ ಗಳಿವೆ. ಹೇಳುವ ವಿಷಯವನ್ನು ನೂರ್ಮಡಿಸಿ ಉತ್ಪ್ರೇಕ್ಷಿಸಿ ಹೇಳಿದರೆ ಕೇಳುಗರಲ್ಲಿ ನಿರೀಕ್ಷಿತ ಪರಿಣಾಮ ಸ್ಥಾಪಿತವಾಗುತ್ತದೆಂಬುದೇ ಒಟ್ಟು ಆಶಯ.

ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜನೋಜೆ ನೋ
ಡಿದು ನನೆವಿಲ್ಲ ಬಲ್ಲಹನ ಚೆಲ್ವಿದು ಕಾವನ ಜೀವರತ್ನಮಿಂ
ತಿದು ರತಿಕಾಂತನಾಂತ ಪೊಸಕೂರಸಿ ತಾನಿದು ಮಾರವೀರನ
ಗ್ಗದ ಸದಳಂಕೃತಿಧ್ವಜಮಿದೆಂದೆನಿಸಿರ್ದುದು ರೂಪು ನೀರೆಯಾ ‖

ಎಂಬ ಒಂದು ಪದ್ಯ ಸಾಕೆಂದೆನಿಸಬಹುದು ಹಿತಮಿತ ಪ್ರಿಯ ಪಂಡಿತ ಮಂಡಳಿಗೆ. ಸರ್ವಮಂಗಳೆಯ ಸೌಂದರ್ಯವನ್ನು ಕಾವ್ಯಶಿಲ್ಪದಲ್ಲಿ ಕಡೆಯ ಹೊರಟ ಕಥೆಗಾರನಿಗೆ ಇದಿಷ್ಟೇ ಸಾಲದು. ಉತ್ಪ್ರೇಕ್ಷಾಲಂಕಾರಗಳ ಮೊರೆ ಹೊಕ್ಕಾಗಲೇ ಅವನಿಗೆ ತೃಪ್ತಿ. ಅದಕ್ಕಾಗಿ ಆತ ಹನ್ನೆರಡು ಪದ್ಯಗಳಲ್ಲಿ ಚೆಲುವಿನ ಪರಿಗಳನ್ನು ವಿವಿಧ ಕೋನದಿಂದ ನಿರೂಪಿಸುತ್ತಾನೆ. ಎರಡು ಉದಾಹರಣೆ :

ಅಂದುಗೆಯ ಕಳನಿನಾದದೊ
ಳೊಂದಿದ ಸುಂದರಿಯ ಮಂದಗತಿಯತಿಶಯಮಂ ।
ಕುಂದದೆ ಮಾಡೆಂದಜನಂ
ಬಂದೀಗಳ್ ಪೊತ್ತು ಸೇವಿಪುದು ಕಳಹಂಸಂ ‖
ತರಳೆಯ ತ್ರಿವಳಿಯ ಪೋಲ್ವೆಯ
ತರಂಗಮಂ ಪಡೆವೆನೆಂದು ಸುರನದಿ ಪುಲವಂ ।
ತೆರೆಗಳನೆ ಪದೆದು ಪಡೆಯದೆ
ಸರಿದೆರೆಯಂ ಮಾಂಜಿ ಮಗುಳ್ದು ಪಡೆದಪುದಿನ್ನುಂ ‖

ಈ ಮೊದಲಾದ ಹನ್ನೆರಡೂ ಪದ್ಯಗಳು ವಾಙ್ಮಯ ವಿಹಾರಿಗಳಿಗೆ ಹೊಸವಲ್ಲ. ಆದರೆ ಸಾಮಾನ್ಯ ಓದುಗರನ್ನು ಗಮನಿಸಿದಾಗ ಅವರನ್ನೆಲ್ಲ ಒಂದೇ ತಕ್ಕಡಿಯಲ್ಲಿ ತೂಗು ವಂತಿಲ್ಲ. ಅವರಿಗಾಗಿ ಕಥೆಗಾರ ಮತ್ತೆ ಮತ್ತೆ ವಿಸ್ತರಿಸಿ ಹೇಳಬೇಕಾಗುತ್ತದೆ. ಷಡಕ್ಷರ ದೇವ ಅಂಥವರನ್ನು ಗುರುತಿಸಿ ಇವನ್ನು ಬರೆದಿರಬಹುದು. ಎರಡನೆಯದಾಗಿ ಚಂಪೂ ಕಾವ್ಯಗಳು ತಮ್ಮ ಪ್ರಚಾರವನ್ನು ಕುಗ್ಗಿಸಿಕೊಂಡಿದ್ದುವು. ಅವುಗಳನ್ನು ಪುನರ್ ನವೀ ಕರಣಗೊಳಿಸುವ ಕಾರ್ಯಕ್ಕೆ ತೊಡಗಿದ ಕವಿ ಈ ಮಾಮೂಲಿನ ವರ್ಣನೆಗಳನ್ನೂ ಕೊಟ್ಟಿದ್ದಾನೆ. ವೀರರಸವನ್ನು ಶಬರಶಂಕರ ವಿಲಾಸದಲ್ಲೂ, ತಕ್ಕಮಟ್ಟಿಗೆ ರಾಜಶೇಖರ ವಿಳಾಸದಲ್ಲೂ ಅಲ್ಲಲ್ಲೆ ವೃಷಭೇಂದ್ರ ವಿಜಯದಲ್ಲೂ ತಂದಿದ್ದಾನೆ. ಕರುಣರಸವನ್ನೂ ಸಾಕಷ್ಟು ಬಳಸಿಕೊಂಡಿದ್ದಾನೆ. ತಿರುಕೊಳವಿನಾಚಿಯ ಪ್ರಲಾಪ ರಾಜಶೇಖರವಿಳಾಸದ ಹೃದಯ. ಈ ಹೃದಯ ಸ್ಪರ್ಶಿಯಾದ ಕೇಂದ್ರದ ಸುತ್ತ ಕಾವ್ಯದ, ಕಥೆಯ ಕಮಾನು ಕಟ್ಟಿದ್ದಾನೆ. ಇಲ್ಲಿ ಕರುಣರಸ ಓದುಗರ ಕರುಳು ತಟ್ಟಿ ಹೃದಯ ಮುಟ್ಟಿ ರಸಸಿದ್ಧಿ ಪಡೆದಿದೆ. ಕುದುರೆ ತುಳಿತಕ್ಕೆ ಸಿಕ್ಕಿ ಕೂಸು ಶಂಕರ ಹರಣಹೋಗಿ ಹೊಸೆದ ಹೂವಾ ಗಿದ್ದಾನೆ. ಹಡೆದಬ್ಬೆ ಪಡೆದ ಕಂದನಿಗಾಗಿ ಹಲುಬುವ ಪ್ರಸಂಗ. ಕಂದನ್ನ ನೆನೆನೆನೆದು ತಾಯ್ಗರುಳು ಹಾಗೂ ಮನದಳಲು ಕಟ್ಟು ಹರಿದ ಪಂಜಾಗುತ್ತದೆ. ಇಂಥ ಹೃದಯ ವಿದ್ರಾವಕ ಪ್ರಸಂಗ ಕನ್ನಡ ಸಾಹಿತ್ಯದಲ್ಲಿ ಹೊಸದಲ್ಲ. ಹರಿಶ್ಚಂದ್ರ ಕಾವ್ಯದಲ್ಲಿ ಚಂದ್ರಮತಿಯ ಪ್ರಲಾಪ, ಮಹಾಭಾರತದಲ್ಲಿ ಅಭಿಮನ್ಯು ಸತ್ತಾಗಿನ ಪ್ರಲಾಪ ಇತ್ಯಾದಿ. ಆದರೆ ಈ ಕವಿಯ ಕಥನಶಕ್ತಿಯ ಪರಮಾವಧಿ ಇಲ್ಲಿ ಮಡುಗಟ್ಟಿದೆ. ಈ ಭಾಗವನ್ನು ಸಾಮಾನ್ಯವಾಗಿ ಎಲ್ಲ ವಿಮರ್ಶಕರೂ ಉದಾಹರಿಸುತ್ತಾರೆ, ಆದರಿಂದ ಇಲ್ಲಿ ಇದನ್ನು ವಿಸ್ತರಿಸುವುದಿಲ್ಲ.

ಮಲ್ಲಣಾರ್ಯನಲ್ಲಿ ಪಾತ್ರ—ಪ್ರಸಂಗಗಳು ಕಳಾಹೀನ ಎಲುಬಿನ ಹಂದರಗಳಾಗಿವೆ, ಷಡಕ್ಷರದೇವ ಅದಕ್ಕೆ ಕಥೆಯ ಜೀವ ತುಂಬಿದ್ದಾನೆ—ಎಂಬರ್ಥದ ಹೇಳಿಕೆಗೆ ಪುಷ್ಟಿ ಕೊಡಲು ಈ ಸನ್ನಿವೇಶ ಒದಗಿ ನಿಲ್ಲುತ್ತದೆ. ಷಡಕ್ಷರ ದೇವನಲ್ಲೇ ಅನ್ಯತ್ರ ವರ್ಣನೆಗಳು ಅತಿಯಾಗುತ್ತವೆ. ಆದರೆ ಇಲ್ಲಿ ಎಲ್ಲ ಸಾರ್ಥಕವಾಗಿ ಸಾವಯುವ ಸಮಗ್ರೀಕರಣದ ಸಾಫಲ್ಯವಿದೆ. ಅಯ್ದುವರ್ಷದ ಮಗುವಿನ ತಲೆ ತುರಂಗಗೊರಸಿಂದ ಕತ್ತರಿಸಿ ಬಿದ್ದಿದೆ. ನೆರೆದ ಪುರಜನ ರುಂಡ—ಮುಂಡಗಳನ್ನು ಕಂಡು ಅಕಟಕಟಾ ಎಂದು ನೊಂದು ನೋಡುತ್ತಿದ್ದರೆಂಬಲ್ಲಿಂದ ಕಾವೇರಿದ ಕಾವ್ಯ ಕಾವೇರಿ ಕಾವ್ಯಾಂತದವರೆಗೆ ಉಸಿರಾಡಲವ ಕಾಶವಾಗದಂತೆ ಘಟನಾವಳಿಗಳಿಗೆಡೆಗೊಡುತ್ತದೆ. ಕಥೆಗಾರ ಷಡಕ್ಷರಿ ಇಲ್ಲಿ ದಿಗ್ವಿಜಯ ವನ್ನೇ ಪಡೆದಿದ್ದಾನೆ. ಪಂಪಾದಿ ಚಂಪೂ ಕವಿಗಳ ಸಾರ ಮೈಗೂಡಿಸಿಕೊಂಡ ಬೆಡಗು ಇಲ್ಲಿ ಬಯಲಾಗುತ್ತದೆ.

ಎಲೆ ಸುಕುಮಾರಶಂಕರ ಕುಮಾರಕ ಬಾರ ಮದೀಯ ಲೋಚನೋತ್ಪಳರ ಜನೀಶ......ಎಂದು ಆರಂಭವಾಗುವ ವೃತ್ತದಲ್ಲಿ ತಾಯಿ ಮಗನನ್ನು ಕೂಗುವ

ಕರೆಯೇ ಅನುರಣಿತವಾಗುತ್ತದೆ: ಸುಕುಮಾರ ಕುಮಾರಬಾರ—ಎಂಬುದಂತೂ ಪ್ರತಿಭೆಯ ಕುಡಿ.

ಕರಿಗಳ ಕಾಲ್ಗೊಳಗಾದನೊ
ವರೂಥ ಚಕ್ರಕ್ಕೆ ಸಿಲ್ಕಿದನೊ ಹಯ ಚಂಚತ್
ಖುರಹತಿಯಿಂದಳಿದನೊ ಶಂ
ಕರನಕಟಕಟೆಂದು ಬಗೆದು ಬಾಯ್ವಿಡುತಿರ್ದಳ್ ॥

ಕಣ್ಣಾರಿಯದೊಡಂ ಕರುಳರಿಯದೆ ಎಂಬ ಗಾದೆ ಮಾತಿಗೆ ಇದು ನಿದರ್ಶನ. ಬಾಹ್ಯ ಘಟನೆಗಳನ್ನು ಕಣ್ಣಾರೆ ನೋಡದಿದ್ದರೂ ಅಂತರಂಗ ಒಮ್ಮೊಮ್ಮೆ ಪರೋಕ್ಷ ಘಟನೆಗಳನ್ನು ಗುರುತಿಸಿಕೊಳ್ಳುತ್ತದೆ. ಕುದುರೆಯ ಗೊರಸಿನೇಟಿನಿಂದ ಅಳಿದನೊ ಎಂಬ ಇಲ್ಲಿನ ಮಾತು 'ಸಾಫೋಕ್ಲಿಸ್'ಐರನಿ'ಯ ಮಾದರಿಯದು. ನಡೆದ ದುರಂತ ಈಗಾಗಲೇ ತಿಳಿದಿರುವ ಓದುಗರಿಗೆ ತಿರುಕೊಳವಿನಾಚಿಯ ಬಾಯಿಂದ ಬಂದ ಈ ಅನಿರೀಕ್ಷಿತ ನುಡಿ ವಿಲಕ್ಷಣ ಪ್ರಭಾವವನ್ನುಂಟುಮಾಡುತ್ತದೆ.

ತನುಭವನೆಲ್ಲಿದ ನೆಲ್ಲಿದ
ನಿನಿವಾತಿನ ನೀರನೆಲ್ಲಿದಂ ಮೆಲ್ಪಗೆಯಿಂ
ಪಿನ ಸೊಬಗನೆಲ್ಲಿದಂ ಚೆ
ಲ್ವಿನ ಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ ॥

ಎಂಬಲ್ಲಿನ ಪರಿಣಾಮವೂ ಅಷ್ಟೆ: ಮಾತೃ ಹೃದಯದಲ್ಲಿ ಮನೆ ಮಾಡಿದ ಪುತ್ರವಾತ್ಸಲ್ಯ ಕೆನೆಗಟ್ಟಿದೆ. ಮಾಂಸದ ಮುದ್ದೆಯಾಗಿಬಿದ್ದ ಮುದ್ದು ಮಗುವನ್ನು ಕಂಡಾದಮೇಲೆ ಬರುವ—

ಎಳಗಿಳಿಯಂ ಕೊರಲ್ ಮುರಿದು ಮೋದಿದರಾರ್ ಮರಿಯಂಚೆಯಂ ಭಯಂ
ಗೊಳಿಸುತೆರಂಕೆಯಂ ಪರಿದು ಪೊಯ್ದವರಾರ್ ಮೃಗಶಾಬಮಂ ಕರಂ
ಮುಳಿದು ಶಿರೋಧಿಯಂ ಕಡೆಯಲೆಚ್ಚವರಾರ್ ಬಿಸನಾಳಕಾಂಡಕೋ
ಮಳತರ ಕಂಠಮಂ ಕಡಿದುರುಳ್ಚಿದರಾರ್ ಸುಕುಮಾರ ಶೇಖರಾ ॥

—ಇಲ್ಲಿನ ಉಪಮಾನ ಉಪಮೇಯಗಳ ಪುದುವಾಳ್ಕನ ಮೆಚ್ಚುಗೆ ಗಳಿಸುತ್ತದೆ. ಮುಂದಿನ ಭಾಗವೂ ಇದೇ ಪುಟ್ಟದಲ್ಲಿ ಮುಂದುವರಿಯುತ್ತದೆ. ಕಥೆಯೇ ಭಾವಪರವಶಗೊಳಿಸುವಂತಹದು. ಅದರ ಜೊತೆಗೆ ಕಥೆಯನ್ನು ನಡೆಸಿಕೊಂಡು ಹೋಗುವ ಕೌಶಲ್ಯವೂ ಉನ್ನತವಾಗಿದೆ. ಪಂಪರನ್ನರ ಪದ್ಯಗಳನ್ನು ಸಮಯೋಚಿತವಾಗಿ ಇಲ್ಲಿ ಅನುವಾದಿಸಿಕೊಂಡು ಕಥೆಗೆ ವ್ಯಥೆಯ ಚಿತ್ರಗಳನ್ನು ಬಿಡಿಸುತ್ತಾನೆ. ಹಾ ಮಗನೆ ಹಾ ಮನೋಜ್ಞನೆ, ಎಲ್ಲಿಯು ಹಯಮೆಲ್ಲಿಯನೃಪ..., ಸರಿವರೆಯದ ಮಕ್ಕಳ್ ಶಂಕರನೆಲ್ಲಿದ..., ದುಃಖಮನಾರಂಟೆನಗಕಟ..., —ಎಂಬ ಕಂದಗಳು ದುಃಖಾರ್ತರ ಕಂದಲ್ಗಳಂತೆ ಬೇರು ಬಿಡುತ್ತವೆ.ಮಗನ ಗುಣಾವಳಿಯನ್ನು ಪೋಣಿಸಿ ಕಟ್ಟಿದ—

ಮಗನೆ ನೀನಿಂತಳಿಯೆ ಸೈರಿಪೆನೆಂತೋ ಪೇಳೈಶಂಕರಾ
ಸುಗುಣನಿಧಿ ನೀನೆನ್ನ ಮೊರೆಗಳನೊರ್ಮೆ ಕೇಳೈಶಂಕರಾ

..................................................

ಎಂತು ಮರೆವೆನೋ ಸವಿಯನಾಲಿಡುವವುದುರ್ಗ ನಗೆಯುಂ ಶಂಕರಾ
ಕಾಂತಿ ಶೋಭಿಸಿ ಮುದ್ದುವೀರುವ ಮೊಗದ ಬಗೆಯುಂ ಶಂಕರಾ
ಝಣಝಣೆಸಿ ಕಿರುಗೆಜ್ಜೆ ಕರತಳ ತಾಳರವಕೆ ಶಂಕರಾ
ಕುಣಿವ ನಿನ್ನಯ ಬಿನದವೊಪ್ಪುಗುಮೆನ್ನಮನಕೆ ಶಂಕರಾ

—ಮುಂತಾಗಿ ಸಾಗುವ ರಗಳೆ ಶೋಕರಗಳೆಯಾಗಿ ಆಳಲನ್ನು ಜಿನುಗಿಸುತ್ತಾ ಸಾಗುತ್ತದೆ. ಓದುಗರ ಮೇಲೆ ಇದು ಎಂಥ ಪರಿಣಾಮ ಬೀರುತ್ತದೆಂಬುದನ್ನು ಮತ್ತೆ ಒತ್ತಿ ಹೇಳುವ ಅಗತ್ಯವಿಲ್ಲ.

ವೃಷಭೇಂದ್ರ ವಿಜಯವೂ ಷಡಕ್ಷರಿ ಉತ್ತಮ ಕತೆಗಾರನೆಂದು ಸಾರುತ್ತದೆ. ವೃಷಭೇಂದ್ರವಿಜಯ ಮಂಗಳ ಜೀವನವನ್ನು ಆಳಿದವರ, ಬಾಳಿದವರ ಅಂಗಳ. ಅದು ಜೈನಪುರಾಣಗಳಲ್ಲಿ ಬರುವ ಹಲವು ಕಥೆಗಳ ಗೊಂಚಲಿನಂತೆ. ಜೈನಪುರಾಣಗಳಂತೆ ಇದೂ ಒಂದು ವೀರಶೈವಪುರಾಣವೇ. ಆದರೂ ಇಲ್ಲಿ ಜೈನಪುರಾಣಗಳ ಭವಾವಳಿಗಳ ಜೈನಾಪೆಟ್ಟಿಗೆ ಇಲ್ಲ. ಅಲ್ಲಿ ಕೆಲವು ಭವಾವಳಿಗಳಲ್ಲಾದರೂ ತೋರುವ ಸಿಕ್ಕುಗೋಜುಗಳು ಇಲ್ಲ. ಅನೇಕ ಶಿವಶರಣರ ಕಥೆಗಳು ತನಿತನಿಯಾಗಿ ಬರುತ್ತದೆ. ಈ ಎಲ್ಲ ಕಥಾ ಪುಷ್ಪಗಳೂ ಕೇವಲ ಶಿವಾರ್ಪಣೆಗೆಂದು ಕೋದಮಾಲೆ, ಶಿವಮಾಲೆ ; ಈ ಮಾಲೆಯ ಬಡಿಸೊಗಸು ಕಥಾಗಾರಿಕೆಯಲ್ಲಿ ಕಂಡುಬರುತ್ತದೆ.

ಹತ್ತಿರ ಹತ್ತಿರ ಎಂಬತ್ತು ಜನ ಶಿವಶರಣರ ಕಥೆಗಳು ಇಲ್ಲಿವೆ. ಭಕ್ತಿಯ ನವ ದೃಷ್ಟಿಯಿಂದ ಅವರೆಲ್ಲ ಶಿವಭಕ್ತಿ ಸಾಣ್ಯದ ಮುಖಗಳು. ವ್ಯಕ್ತಿ ಸ್ವಭಾವದ ವ್ಯಷ್ಟಿದೃಷ್ಟಿಯಿಂದ ಅವರು ಬೇರೆ ಬೇರೆ. ಇದರಿಂದ ಕಥೆಗೆ ವಿಸ್ತಾರ ವೈವಿಧ್ಯ ಉಂಟಾಗಿದೆ. ಬೇಡರಕಣ್ಣಪ್ಪ, ಕೋಳೂರು ಕೊಡಗೂಸಿನಂಥ ಮುಗ್ಧರ ಕಥೆಗಳಿವೆ ; ಓಹಿಲಾರ್ಯ, ಸುರಗಿ ಚೌಡಯ್ಯ, ದೀಪದ ಕಲಿಯಾರರಂಥ ಉಗ್ರ ನಿಷ್ಠಾವಂತ ಶರಣರ ಕಥೆಗಳಿವೆ : ಎಲೇಶ್ವರ ಕೇತಯ್ಯ ; ಮಲ್ಲಶೆಟ್ಟಿ ಮುಂತಾದ ಲಿಂಗನಿಷ್ಠರ ಕಥೆಗಳಿವೆ ; ಸಿದ್ಧರಾಮ, ಮೋಳಿಗೆ ಮಾರಯ್ಯ, ಮೇದಾರ ಕೇತಯ್ಯಾದಿಕಾಯಕ ಯೋಗಿಗಳ ಕಥೆಗಳಿವೆ.

ಇಲ್ಲಿನ ಸಣ್ಣಪುಟ್ಟ ಕಥೆಗಳನ್ನು ಲೆಕ್ಕಿಸಿದಾಗ ಬ್ರಹ್ಮಾಂಡದ ವಿಹಂಗಮ ನೋಟವೇ ಆಗುತ್ತದೆ : ವೀರ ಮಹೇಶ್ವರರು, ಕ್ರಾಂತಿಪುರುಷರು, ಭೂಲೋಕವನ್ನು ಕೈಲಾಸ ಕ್ಕೊಯ್ದು ಭೂಕೈಲಾಸವೆಸಗಿದವರು, ಕಾಮ (ಸ್ಮರ) ತತ್ವದ ಮೂಲಕ (ಶಿವ) ಪರತತ್ವದ ತುದಿಮುಟ್ಟಿದವರು, ಅರ್ಪಿತರು, ಸಂಗವರ್ಜಿತರು ಹೀಗೆ ನಾನಾ ಶೀಲ ಸ್ವಭಾವದೆರಕದ

ಪಾತ್ರಗಳು ಕವಿಯು ಕಥೆಯಲ್ಲಿ ಮೆರವಣಿಗೆ ಬರುತ್ತಾರೆ. ಇವರಲ್ಲಿ ಹಲವರು ಸಜೀವ ಪುತ್ಥಳಿಗಳು. ಮಹತ್ತರವಾದ ಆದರ್ಶವನ್ನು ಬಾಳಿಗೆ ಅಳವಡಿಸಿಕೊಂಡ, ವ್ಯಕ್ತಿಜೀವನದ ಉದಾತ್ತತೆಯ ತರತಮ ಭಾವಲಹರಿ ಇಲ್ಲಿದೆ. ಶಿವಭಕ್ತರ ಜೀವನ ಪರಿಶುದ್ಧಿ ಕಥಾರೂಪವಾಗಿ ಇಲ್ಲಿ ಪ್ರಕಾಶವಾಗಿದೆ.

ಷಡಕ್ಷರಿಯ ಕಥನ ಕೌಶಲವನ್ನು ಪರಿಶೀಲಿಸುವಾಗ ಅವನ ದೋಷ ದೌರ್ಬಲ್ಯಗಳಿಗೆ ಕುರುಡಾಗುವ ಕಾರಣವಿಲ್ಲ. ಬಹುಶಃ ಈ ಕವಿಯು ಚಂಪೂ ಪ್ರಕಾರಕ್ಕೆ ತೆಕ್ಕೆ ಬೀಳದೆ ಷಟ್ಪದಿ ಸಾಂಗತ್ಯಗಳಿಗೆ ಮೊರೆಹೊಕ್ಕಿದ್ದರೆ ಕಾವ್ಯ ಹಾಗೂ ಕಥೆಗಾರಿಕೆಗೆ ಇನ್ನೂ ಹೆಚ್ಚಿನ ಹಾಸುಬೀಸು ಬರುವ ಸಾಧ್ಯತೆಯಿತ್ತು. ಚಂಪೂವಿನ ಬಿಗಿಯಾದ ಇಕ್ಕಟ್ಟಿನಲ್ಲಿ ಈತನ ಕಥೆಗಾರಿಕೆಗೆ ಸ್ವಾತಂತ್ರ್ಯಹರಣವಾಗಿರುವಂತೆ ಅನೇಕ ಕಡೆ ಕಂಡಿದೆ. ಪಾತ್ರಗಳು ಅಸ್ಪಷ್ಟವಾಗಿ, ವಿವರಣೆ ಅಸ್ಫುಟವಾಗಿ ಕಾವ್ಯ–ಕಲೆ ಸೋತಿರುವುದಕ್ಕೆ ಇದೂ ಒಂದು ಕಾರಣ. ಮತ್ತು ಕಥೆಯು ಗತಿಯಲ್ಲಿ ಚುರುಕು ಸಾಲದು. ಹಲವು ಸಲ ಔಚಿತ್ಯ ಹಿಂದೇಟು ಹಾಕುತ್ತದೆ. ಉತ್ಪ್ರೇಕ್ಷೆಗೆ ಲಂಗುಲಗಾಮು ಇರುವುದಿಲ್ಲ. ನಾಲಿಗೆ ಉದ್ದ, ಬಾಯಿ ಜೋರು, ಸಂಗ್ರಹ ಗುಣದಲ್ಲೆ ಶೈಥಿಲ್ಯವಿದೆ—ಹೀಗೆ ಈ ಪಟ್ಟಿ ಲಂಬವಾಗುವುದಕ್ಕವಕಾಶವಿದೆ.

ಹಾಗೆಂದು ಷಡಕ್ಷರದೇವನ ಕಥನ ಕೌಶಲವನ್ನು ಕಡೆಗಣಿಸುವಂತಿಲ್ಲ. ಅದು ಅಖಂಡವಾದ ಪರಿಭಾವನೆಗೆ ಮ್ಲಾನವಾಗಿ ಕಂಡರೂ, ಬಿಡಿಬಿಡಿಯಾದ ಪರಿಶೀಲನೆಗೆ ಕೆಲವು ಕಡೆ ಅತ್ಯುನ್ನತ ಮಟ್ಟದಲ್ಲಿ ಮೈದೋರಿರುವುದನ್ನು ಮನಗಾಣಬಹುದು.

ಕನ್ನಡ ಸಾಹಿತ್ಯ ಪರಿಷತ್ತು ಹಮ್ಮಿಕೊಂಡಿರುವ ಹಳಗನ್ನಡ ಕಾವ್ಯಗಳ ಹೊಸಗನ್ನಡ ಮಾಲೆಯಲ್ಲಿ ಈ ಪುಸ್ತಕವನ್ನು ಪ್ರಕಟಿಸಲಾಗುತ್ತಿದೆ. ಇದನ್ನು ಆಸಕ್ತಿಯಿಂದ ಸಕಾಲದಲ್ಲಿ ಸಿದ್ಧಪಡಿಸಿಕೊಟ್ಟ ಶ್ರೀ ಚನ್ನಪ್ಪ ಎರೇಸೀಮೆ ಅವರಿಗೆ ಕೃತಜ್ಞತೆಗಳನ್ನು ತಿಳಿಸುತ್ತಿದ್ದೇನೆ.

**ಹಂಪ. ನಾಗರಾಜಯ್ಯ**
ಪ್ರಧಾನ ಸಂಪಾದಕ

# ಅನುವಾದದ ಯೋಜನೆ

ಕನ್ನಡದ ಪ್ರಾಚೀನ ಕಾವ್ಯಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ. ಎಂ.ಎ. ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗ ಅಂತೂ ಮೂಲ ಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನ ಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರ ತರುವುದು ಮತ್ತು ಸರ್ಕಾರದ ಸಹಾಯಪಡೆದು ಆ ಪುಸ್ತಕಗಳು ಸಾಧ್ಯವಾದ ಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು. ಇವು ಆ ಯೋಜನೆಯ ಮುಖ್ಯ ಅಂಶಗಳು. ಅಲ್ಲದೆ,

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಿಂದ ಈಗಾಗಲೇ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಆಗತ್ಯಕಂಡರೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳ ತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು.

ಹಳಗನ್ನಡ : ವಿಕ್ರಮಾರ್ಜುನ ವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥ ಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರ ಚರಿತ್ರೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥ ವಿಜಯ, ಕಬ್ಬಿಗರ ಕಾವ, ಶಬರಶಂಕರವಿಳಾಸ, ಹರಿಹರನ

ರಗಳೆಗಳು, ಕೆಳದಿನೃಪ ವಿಜಯ, ದಮಯಂತೀ ಸ್ವಯಂವರ, ಶಾಂತಿಪುರಾಣ, ಚಂದ್ರ ಪ್ರಭ ಪುರಾಣಂ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ, ಅಭಿನವ ದಶಕುಮಾರ ಚರಿತೆ, ಮಲ್ಲಿನಾಥ ಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯ ಸೂರಿಚರಿತೆ.

ನಡುಗನ್ನಡ: ಸಿದ್ಧರಾಮ ಚರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥ ಚರಿತೆ, ಭರತೇಶ ವೈಭವ, ಅನುಭವಾಮೃತ, ಗೀತ ಗೋಪಾಲ, ಹದಿಬದೆಯ ಧರ್ಮ, ನಳಚರಿತ್ರೆ, ಅದ್ಭುತ ರಾಮಾಯಣ, ಚೆನ್ನಬಸವ ಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನ ಚರಿತ, ಮೋಹನ ತರಂಗಿಣಿ.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು, ಮಧ್ಯದಲ್ಲಿ ವಿಚ್ಛಿನ್ನತೆ ಕಾಣ ಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತ ಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶ ಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದುವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದುವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಿಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಊ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದಕಾರ್ಯ ಮಂಡಳಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕನು ತಾನಾಗಿ ಒಪ್ಪಿಸಿದ ಕಾರ್ಯ ಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕ ಮಂಡಳಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗೆ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತು ಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಳಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದ ಕಾರ್ಯ ಮುಗಿದ ಕೂಡಲೆ ಮಂಡಳಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

4. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತ ಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂಬುದು ನಿರ್ಣಯಿಸಿ, ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಳಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15 ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು, ಮತ್ತು ಅದರ ಮೂಲಪಾಠ ಪರಿಷ್ಕಾರ, ಮುನ್ನುಡಿ, ಉಪೋದ್ಘಾತ, ಶೋಧನೆ ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಪಡಿಸಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

5. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದ ಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದ ಮೇಲೆ ಅನುವಾದಕರಿಗೆ ಈ ಗ್ರಂಥದ ಇಪ್ಪತ್ತೈದು ಪ್ರತಿಗಳನ್ನು, ಅನುವಾದಕ ಮಂಡಲಿ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅವಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ

ಕಾರ್ಯ ಎರಡು ಕಡೆಯೂ ನಡೆಯುತ್ತಿದೆ, ಈಚೆಗೆ ಧಾರವಾಡದಲ್ಲೂ ಅನುವಾದ ಕಾರ್ಯ ನಡೆಯುತ್ತಿದೆ. ವಿದ್ವಾಂಸರು ಅನುವಾದ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಳಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದ ಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ.

**ಹಂಪ. ನಾಗರಾಜಯ್ಯ**
ಅಧ್ಯಕ್ಷ
ಕನ್ನಡ ಸಾಹಿತ್ಯ ಪರಿಷತ್ತು

# ಪ್ರಸ್ತಾವನೆ

ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಚಟುವಟಿಕೆಗಳಲ್ಲಿ ಗ್ರಂಥ ಪ್ರಕಟಣೆ ಒಂದು ಪ್ರಮುಖವಾದ ಚಟುವಟಿಕೆ. ಪ್ರಾರಂಭದಲ್ಲಿ ಪರಿಷತ್ತು ತನ್ನ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ಕೆಲವೇ ಪುಸ್ತಕಗಳನ್ನು ಪ್ರಕಟಿಸಿತು. ಆದರೆ ಆ ಪುಸ್ತಕಗಳು ಅತ್ಯಂತ ಅಮೂಲ್ಯದವೂ ಅಪೂರ್ವದವೂ ಅತ್ಯುಪಯುಕ್ತದವೂ ಆಗಿವೆ. 1969 ರಿಂದ ಈಚೆಗೆ ಪರಿಷತ್ತು ತನ್ನ ಚಟುವಟಿಕೆಗಳನ್ನು ಯೋಜನಾ ಬದ್ಧವಾಗಿ ರೂಪಿಸಿಕೊಂಡು ತ್ರೈವಾರ್ಷಿಕ ಯೋಜನೆಯಲ್ಲಿ 100 ಪುಸ್ತಕಗಳನ್ನೂ ಪಂಚವಾರ್ಷಿಕ ಯೋಜನೆಯಲ್ಲಿ 150 ಪುಸ್ತಕಗಳನ್ನೂ ಹೊರತರಲು ಆಲೋಚಿಸಿತು. ಆದರಂತೆ ತ್ರೈವಾರ್ಷಿಕ ಯೋಜನೆಯಲ್ಲಿನ 100 ಪುಸ್ತಕಗಳೂ ಪಂಚವಾರ್ಷಿಕ ಯೋಜನೆಯ 141 ಪುಸ್ತಕಗಳೂ ಈಗಾಗಲೇ ಪ್ರಕಟವಾಗಿವೆ. ಉಳಿದವು ಪ್ರಕಟಣೆಯ ಬೇರೆ ಬೇರೆ ಹಂತದಲ್ಲಿವೆ.

ಪರಿಷತ್ತು ಈಗ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಕ್ರಮಗಳನ್ನು ಆರಂಭಿಸಿದೆ. ಈ ಯೋಜನೆಯಲ್ಲೂ ಪುಸ್ತಕ ಪ್ರಕಟಣೆಯ ಚಟುವಟಿಕೆಯನ್ನೇ ಪ್ರಧಾನ ಕಾರ್ಯವನ್ನಾಗಿ ರೂಪಿಸಿಕೊಂಡಿದೆ. ಆದರೆ ಕಾಲವನ್ನು ಅನುಸರಿಸಿ ಆಯಾ ಕಾಲದ ಕನ್ನಡ ಸಾಹಿತ್ಯದ ಎಲ್ಲಾ ಆಯಾಮಗಳನ್ನೂ ಸಾಹಿತ್ಯ ಧೋರಣೆಯನ್ನೂ ಗಮನದಲ್ಲಿಟ್ಟುಕೊಂಡು ಪ್ರಕಟಣೆಗೆ ಪುಸ್ತಕಗಳನ್ನು ಆಯ್ದುಕೊಳ್ಳುತ್ತಿದೆ. ಅದೆಂದರೆ ಪರಿಷತ್ತು ಪ್ರಕಟಿಸುವ ಗ್ರಂಥಗಳನ್ನು ಒಂದು ಗ್ರಂಥ ಪ್ರಕಟಣಾ ಸಲಹಾ ಸಮಿತಿ ಪರಿಶೀಲಿಸಿ ನಿರ್ಧರಿಸುತ್ತದೆ. ಹಾಗೆ ನಿರ್ಧರಿಸುವಾಗ ಪುಸ್ತಕಗಳ ವಿಷಯವನ್ನು ಕುರಿತು ಕೆಲವೊಮ್ಮೆ ಆಯಾ ವಿಷಯದಲ್ಲಿ ತಜ್ಞರಾದವರ ಅಭಿಪ್ರಾಯವನ್ನು ಪಡೆಯುತ್ತದೆ.

24-7-78 ರಿಂದ ಹೊಸ ಪದಾಧಿಕಾರಿಗಳು ಅಧಿಕಾರವನ್ನು ವಹಿಸಿಕೊಂಡಿದ್ದಾರೆ. ಹೊಸ ದೃಷ್ಟಿಯಿಂದ ಗ್ರಂಥ ಪ್ರಕಟಣ ಸಲಹಾ ಸಮಿತಿಯನ್ನು ರಚಿಸಿದೆ. ಈ ಸಮಿತಿಯ ಸಲಹೆ ಸಹಕಾರಗಳಿಂದ ಇಂದಿನ ಪುಸ್ತಕಗಳು ಹೊರಬರುತ್ತಿವೆ. ಈ ಪುಸ್ತಕಗಳಲ್ಲಿ ಅಚ್ಚಾಗದ ಪ್ರಾಚೀನ ಗ್ರಂಥಗಳು, ಭಾಷಾಂತರದ ಕೃತಿಗಳು, ಜನಸಾಮಾನ್ಯರಿಗೆ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ, ಜನಪದ ಸಾಹಿತ್ಯ, ನಿಘಂಟುಗಳು ಇರುತ್ತವೆ.

ಕನ್ನಡ ಜನತೆಗೆ ಒಳ್ಳೆಯ ಸಾಹಿತ್ಯವನ್ನು ಸುಲಭ ಬೆಲೆಗೆ ಒದಗಿಸಬೇಕು, ಕಾಲ ಕಾಲಕ್ಕೆ ಜನತೆಯ ಆಶೋತ್ತರಗಳನ್ನು ಪೂರೈಸುವಂತೆ ವೈಚಾರಿಕ ಸಾಹಿತ್ಯವನ್ನು ನೀಡಬೇಕು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಶ್ರೇಷ್ಠ ಕೊಡುಗೆಗಳನ್ನು ಪರಿಷತ್ತು ಜನತೆಗೆ

ನೀಡಬೇಕು ಎಂಬ ಪರಿಷತ್ತಿನ ಧ್ಯೇಯ ಧೋರಣೆಗಳನ್ನು ಗಮನಿಸಿ ಕರ್ನಾಟಕ ರಾಜ್ಯ ಸರ್ಕಾರದವರು ಉದಾರ ಸಹಾಯ ನೀಡಿದ್ದಾರೆ ಮತ್ತು ನೀಡುತ್ತಿದ್ದಾರೆ.

ಪರಿಷತ್ತು ಈಗ ತನ್ನ ಎರಡನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಗಳನ್ನು ಆರಂಭಿಸಿದೆ. ಆ ಅವಧಿಯಲ್ಲಿ ಮೇಲೆ ತಿಳಿಸಿದಂತೆ ಅನೇಕ ಹೊಸ ಪುಸ್ತಕಗಳನ್ನು ಹೊಸದಾಗಿ ಹಾಕಿಕೊಂಡ ಧ್ಯೇಯ ಧೋರಣೆಗಳಿಗನುಸಾರವಾಗಿ ಹೊರತರಲು ಯತ್ನಿಸುತ್ತಿದೆ ಎಂಬ ನಂಬಿಕೆ ನನಗಿದೆ. ಈ ಕಾರ್ಯದಲ್ಲಿ ಗ್ರಂಥ ಪ್ರಕಟಣ ಸಲಹಾ ಸಮಿತಿ ಸದಸ್ಯರು, ಲೇಖಕರು, ಸಾಹಿತ್ಯ ವಿದ್ವಾಂಸರು ಮತ್ತು ರಾಜ್ಯ ಸರಕಾರ—ಸಹಕಾರ ನೀಡುತ್ತಿದ್ದಾರೆ. ಅವರಿಗೆ ಪರಿಷತ್ತು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಪರಿಷತ್ತಿನ ಪ್ರಕಟಣೆಗಳು ಕನ್ನಡಿಗರಿಗೆ ಲಾಭದಾಯಕವಾಗುವುದರಲ್ಲಿ ಸಂದೇಹವಿಲ್ಲ. ಆ ಲಾಭವನ್ನು ಅವರು ಪಡೆದು ನಾಡುನುಡಿಯ ಸೇವೆಯಲ್ಲಿ ಪಾಲುದಾರರಾಗಬೇಕೆಂದು ಪ್ರಾರ್ಥಿಸುತ್ತೇನೆ. ಈ ಮಾಲೆಯಲ್ಲಿ ಚನ್ನಪ್ಪ ಎರೇಸೀಮೆ ಅವರು ಷಡಕ್ಷರದೇವ ಕವಿಯ ಬಸವರಾಜ ವಿಜಯ ಕಾವ್ಯವನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಅವರಿಗೆ ಪರಿಷತ್ತಿನ ಕೃತಜ್ಞತೆಗಳು ಸಲ್ಲುತ್ತವೆ.

**ಹಂಪ. ನಾಗರಾಜಯ್ಯ**
**ಅಧ್ಯಕ್ಷರು**
**ಕನ್ನಡ ಸಾಹಿತ್ಯ ಪರಿಷತ್ತು**

# ಬಿನ್ನಹ

ಹಳಗನ್ನಡ ಕಾವ್ಯಗಳ ಅನುವಾದ ಮಾಲೆಯಲ್ಲಿ ಪ್ರಕಟವಾಗುತ್ತಿರುವ "ಬಸವ ರಾಜ ವಿಜಯ" ವು ಓದುಗರಿಗೆ ಕನ್ನಡ ಸಾಹಿತ್ಯ ಪರಿಷತ್ತು ಒದಗಿಸುವ ಇನ್ನೊಂದು ಬೆಲೆಯುಳ್ಳ ಕೊಡುಗೆಯಾಗಿದೆ. ಷಡಕ್ಷರ ಕವಿಯ ಕೃತಿಗಳನ್ನು ಟೀಕಾಗ್ರಂಥಗಳ ಸಹಾಯವಿಲ್ಲದೆ ಅರ್ಥ ಮಾಡಿಕೊಳ್ಳುವುದು ಇಂದಿನವರಿಗೆ ಕಷ್ಟವಾಗುತ್ತದೆ. ಅನುವಾದಕ್ಕೆ ಅದರದೇ ಆದ ಇತಿಮಿತಿಯಿದ್ದರೂ, ಓದುಗರ ಸೌಕರ್ಯ ದೃಷ್ಟಿಯಿಂದ ಅಲ್ಲಲ್ಲಿ ವಿಶೇಷ ವಿವರಗಳನ್ನು ಒದಗಿಸುವುದು ನಮ್ಮ ಅನುವಾದ ಮಾಲೆಯ ನೀತಿ. ಶ್ರೀ ಎರೇಸೀಮೇ ಚನ್ನಪ್ಪನವರು ಈಗಾಗಲೆ ಷಡಕ್ಷರ ಕವಿಯ ರಾಜಶೇಖರ ವಿಲಾಸವನ್ನು ಅನುವಾದ ಮಾಡಿಕೊಟ್ಟಿದ್ದಾರೆ. ಅದೇ ಕ್ರಮವನ್ನು ಪ್ರಕೃತ ಗ್ರಂಥದ ಅನುವಾದದಲ್ಲಿಯೂ ಅನುಸರಿಸಿ, ವಾಚಕರಿಗೆ ಸೌಲಭ್ಯವೊದಗಿಸಿರುವರು. ಕಾವ್ಯಾಭ್ಯಾಸಿಗಳು ಇದರ ಪ್ರಯೋಜನವನ್ನು ಪಡೆದು ಕೊಳ್ಳುವರೆಂದು ಹಾರೈಸುತ್ತೇನೆ.

ಅನುವಾದ ಮಾಡಿಕೊಟ್ಟ ಶ್ರೀ ಚನ್ನಪ್ಪನವರಿಗೂ, ಅನುವಾದ ಮಾಲೆಯನ್ನು ಪೋಷಿಸಿಕೊಂಡು ಬರುತ್ತಿರುವ ಪರಿಷತ್ತಿನ ಅಧ್ಯಕ್ಷ ಶ್ರೀ ಹಂಪ. ನಾಗರಾಜಯ್ಯನವರಿಗೂ ಅಭಿನಂದನೆಗಳು.

ಬೆಂಗಳೂರು 18
17-8-1982

**ರಾ. ನಂ. ಕುಲಕರಣಿ**
ಅಧ್ಯಕ್ಷ
ಬೆಂಗಳೂರು ಅನುವಾದ ಮಂಡಲಿ
ಕನ್ನಡ ಸಾಹಿತ್ಯ ಪರಿಷತ್ತು

# ಗದ್ಯಾನುವಾದಕನ ನುಡಿ

ರಾಜಶೇಖರ ವಿಳಾಸವನ್ನು ಸಾಹಿತ್ಯಪರಿಷತ್ತಿಗೆ ಪರಿಷದಧ್ಯಕ್ಷ ಸನ್ಮಾನ್ಯ ಶ್ರೀ ಜಿ. ನಾರಾಯಣರವರ ಅನುಜ್ಞೆಯ ಮೇರೆ ಮಾಡಿಕೊಟ್ಟುದು ನನ್ನ ಪುಣ್ಯವಿಶೇಷ. ಆ ಕವಿಯ ಇನ್ನೊಂದು ಶ್ರೇಷ್ಠವೂ ಕ್ಲಿಷ್ಟವೂ ಆದ ಬಸವರಾಜ ವಿಜಯ ಅಥವಾ ವೃಷಭೇಂದ್ರ ವಿಜಯವನ್ನು ಗದ್ಯಾನುವಾದಕ್ಕಾಗಿ ಶ್ರೀ ಜಿ. ನಾರಾಯಣರವರು ನನ್ನನ್ನೇ ಆರಿಸಿದಾಗ ಮೈನಡುಗಿತು. ಷಡಕ್ಷರ ದೇವನ ಕಾವ್ಯಗಳನ್ನು ಜೀರ್ಣಿಸಿಕೊಂಡು ತಕ್ಕ ಹಾಗೆ ಗದ್ಯಾನುವಾದ ಮಾಡುವ ಕಾರ್ಯಸುಲಭಸಾಧ್ಯವೇನೂ ಅಲ್ಲ. ಆದರೆ ಧೈರ್ಯದಿಂದ ದೇವರಮೇಲೆ ಭಾರಹಾಕಿ ಒಪ್ಪಿಕೊಂಡು ಸತತ ಪ್ರಯತ್ನಮಾಡಿ ತಿಳಿಯದಿದ್ದಾಗ ಗದ್ಯಾನುವಾದ ಮಂಡಳಿಯ ಅಧ್ಯಕ್ಷರಾದ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ನಿವೃತ್ತ ಮಹಾಮಹೋಪಾಧ್ಯಾಯ ಶ್ರೀ ರಂಗನಾಥಶರ್ಮಾಜಿ ಅವರೊಡನೆ ಇನ್ನಿತರ ವಿದ್ವಾಂಸರೊಡನೆ ಚರ್ಚಿಸಿ ಈ ಕಾರ್ಯವನ್ನು ಮುಗಿಸಿದುದು ಭಗವತ್ಕೃಪೆಯಲ್ಲದೆ ನನ್ನಲ್ಲಿ ಅಂಥಶಕ್ತಿಯಿದೆಯೆಂದೇನೂ ಅಲ್ಲ. ಪರಿಷದಧ್ಯಕ್ಷ ಶ್ರೀ ಜಿ. ನಾರಾಯಣರವರು ಹಳಗನ್ನಡ ಕಾವ್ಯಗಳ ಅರ್ಥಸಾಮಾನ್ಯರಿಗೂ ಆಗಬೇಕೆಂದೆತ್ತಿಕೊಂಡಿರುವ ಈ ಕಾರ್ಯ ಅತ್ಯಂತ ಸ್ತುತ್ಯವಾದುದು. ಇಂಥ ಕಾರ್ಯಕ್ರಮವನ್ನು ಹಾಕಿಕೊಳ್ಳುವವರಿಗೆ ಅದ್ಭುತಧೈರ್ಯಬೇಕು. ಇವೇನು ಚಿಕ್ಕಕಾರ್ಯಗಳೇ ! ಲಕ್ಷಲಕ್ಷಧನವನ್ನು ಆರ್ಜಿಸಿತಂದು ಸುರಿದು ಅವನ್ನು ಸುಲಭ ಬೆಲೆಗೆ ಒದಗಿಸಬೇಕು. ಈ ಮಹಾಸಾಹಸಕ್ಕೆ ಕೈ ಹಾಕಿ ಈಗಾಗಲೇ ಅನೇಕ ಮಹತ್ವದ ಕೃತಿಗಳನ್ನು ಅವರು ಹೊರತಂದು ಕನ್ನಡಿಗರಿಗೆ ಮಹೋಪಕಾರ ಮಾಡಿದ್ದಾರೆ. ಅವರ ಶಾಶ್ವತ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಪರಿಷತ್ತು ಇಂಥ ಅಧ್ಯಕ್ಷ ಶ್ರೇಷ್ಠರನ್ನು ಎಂದೋ ಒಮ್ಮೊಮ್ಮೆ ಪಡೆಯುತ್ತದೆ. ಆಗ ಇಂಥ ಅದ್ಭುತ ಪವಾಡಗಳು ನಡೆದು ಹೋಗುತ್ತವೆ. ಶ್ರೇಷ್ಠಮಟ್ಟದ ಸಂಘಟನಾಚತುರರೂ, ಧೈರ್ಯಸ್ಥೈರ್ಯ ವಿಶಿಷ್ಟರೂ, ಸದ್ದುಗದ್ದಲವಿಲ್ಲದೆ ಕಾರ್ಯವನ್ನು ಮಾಡಿ ಮುಗಿಸುವ ಶಾಂತಗಂಭೀರರೂ ಆದ ಅವರ ಈ ಸ್ತುತ್ಯವಾದ ಮಹಾಕಾರ್ಯ ಯಶಸ್ವಿಯಾಗಿ ನಡೆದು ಕನ್ನಡ ಸಾಹಿತ್ಯದ ಹಳಗನ್ನಡ ಶ್ರೇಷ್ಠ ಕೃತಿಗಳೆಲ್ಲ ಕನ್ನಡಿಗರ ಹಸ್ತಭೂಷಣಗಳಾಗಲೆಂದು ಈಶ್ವರನಲ್ಲಿ .ಪ್ರಾರ್ಥಿಸುತ್ತೇನೆ.

ಬೆಂಗಳೂರು
೪–೭–೭೮

ಚನ್ನಪ್ಪ ಎರೇಸೀಮೆ
597, 4ನೇ ಮೈನ್, 2ನೇ ಕ್ರಾಸ್
ವಿಜಯನಗರ, ಬೆಂಗಳೂರು–40

# ವಿಷಯಾನುಕ್ರಮಣಿಕೆ


ಅಧ್ಯಕ್ಷರ ಮುನ್ನುಡಿ iii
ಅನುವಾದದ ಯೋಜನೆ xiii
ಅಧ್ಯಕ್ಷರ ಪ್ರಸ್ತಾವನೆ xvii
ಬಿನ್ನಹ xiv
ಗದ್ಯಾನುವಾದದ ನುಡಿ xx
ವಿಷಯಾನುಕ್ರಮಣಿಕೆ xxii

೨೫. ಬಸವ ಭಕ್ತ ಪ್ರಾಣಸಖಿತ್ವ ಕಥನಂ (ಮೇದರ ಕೇತಯ್ಯನ ಕಥೆ) ೩
೨೬. ದಸರಿದೇವ ಕಥಾಭಿವರ್ಣನಂ (ದಸರಿದೇವನ ಕಥೆ) ೨೧
೨೭. ಗುರು ಭಕ್ತ ಗುರು ಭಕ್ತಿ ಮಹತ್ವ ಕಥನಂ (ಗುರು ಭಕ್ತಯ್ಯನ ಕಥೆ) ೪೬
೨೮. ಪ್ರೌಢಮತಿ ಕಥಿತ ಶ್ವೇತ ವೃತ್ತಾಂತ ಕಥನಂ (ಗುರು ಭಕ್ತಾಂಡಾರಿ ಕಥೆ) ೭೧
೨೯. ಮಲ್ಹಣ ಪಾಲಗುರ್ಜರ ಕಥಾಭಿವರ್ಣನಂ (ಮಲ್ಹಣನ ಕಥೆ ಪಾಲಗುರ್ಜರನಕಥೆ) ೧೦೭
೩೦. ಗುರುಭಕ್ತಿ ರಾಜ ಗುರು ಭಕ್ತಿ ವರ್ಣನಂ (ಗುರು ಭಕ್ತಾಂಡಾರಿಯ ಕಥೆ) ೧೬೯
೩೧. ವೇಮನಾರ್ಯ ಕಥಾವಿವರಣಂ (ವೇಮನಾರಾರ್ಯರ ಕಥೆ) ೧೮೮
೩೨. ಮಾದಿರಾಜಕೃತ ಚಿಕ್ಕ ಮಾದಣ್ಣ ಪ್ರಾಣದಾನ ಕಥನಂ (ಸಕಳೇಶ ಮಾದರಸರಿಂದ ಚಿಕ್ಕಮಾದಣ್ಣನ ಪ್ರಾಣದಾನದ ಕಥೆ) ೨೧೪
೩೩. ಕದಿರೆ ರೇಮಾರ್ಯ ವೃತ್ತಾಂತ ಕಥನಂ (ಕದಿರೆ ರೇಮಯ್ಯನ ಕಥೆ) ೨೩೩
೩೪. ವೀರಭಕ್ತ ವಿಳಾಸಂ (ಏಕಾಂತ ರಾಮಯ್ಯನ ಕಥೆ, ಮೊರಟದ ಬಂಕಿ ದೇವನ ಕಥೆ, ತಿರುವಾಕರೀಶ್ವರನ ಕಥೆ, ನಿಡುಮಾರನ ಕಥೆ, ಸಾಂಖ್ಯತೇಂಡರ ಕಥೆ) ೨೪೬
೩೫. ಕೋವೂರ ಬ್ರಹ್ಮದಾಸ ದೇವಾದಿ ವಿಜಯ ಕಥನಂ (ಕೋವುರ ಬೊಮ್ಮಯನ ಕಥೆ, ದಾಸಿಮಯ್ಯನ ಕಥೆ) ೨೯೩
೩೬. ಏಕಾಂತ ರಾಮ ದೇವ ವಿಜಯ ವರ್ಣನಂ (ಮಾರುಡಿಗೆಯ ನಾಚಿ ದೇವನ ಕಥೆ, ಪುಲಿಗೆರೆಯ ಸೋಮನಾಥನ ಕಥೆ, ವೈಜಾಂಬಿಕೆಯ ಕಥೆ ಏಕಾಂತರಾಮಯ್ಯಗಳ ಕಥೆ) ೩೧೮
೩೭. ಸೊಡ್ಡಳ ಬಾಚಿರಾಜವಾದಿ ವಿಜಯ ಕಥನಂ (ಸೊಡ್ಡಳಬಾಚರಸರ ಕಥೆ, ಆಶ್ಮನ ಕಥೆ, ಮಂಚಣಾರ್ಯರ ಕಥೆ) ೩೪೫

೩೮. ಕಲಿನಾಥ ಬಿಬ್ಬಿಭಾಸ್ಕರಾದಿ ಕಥಾವಿವರಣಂ (ಶಿವನಾಗಮಯ್ಯನ ಕಥೆ ಹಾವಿನಹಾಳ ಕಲ್ಲಯ್ಯನ ಕಥೆ, ಬಿಬ್ಬಬಾಚಯ್ಯನ ಕಥೆ, ಮಾದರ ದೊಡಯ್ಯನ ಕಥೆ, ಡೋಹರ ಕಕ್ಕಯ್ಯನ ಕಥೆ) ೩೮೭
೩೯. ಶಿವನಾಗಿದೇವ ಮಹತ್ವ ಕಥನಂ (ಕೆಂಬಾವಿಭೋಗಣ್ಣನ ಕಥೆ, ಶ್ವಪಚಯ್ಯನ ಕಥೆ, ಉದ್ಭಟ ದೇವನ ಕಥೆ, ಗುಡ್ಡಾದೇವಿಯ ಕಥೆ, ಶಿವನಾಗಮಯ್ಯನ ಕಥೆ) ೪೨೮
೪೦. ವಿಷ ವಿತರಣ ಕಥನಂ (ಬಸವಣ್ಣನು ವಿಷವನ್ನು ಸುಧೆಯನ್ನಾಗಿ ಮಾಡಿದ ಕಥೆ) ೪೫೬
೪೧. ಬಸವೋಪದೇಶ ಕಥನಂ (ಜಗದೇವನ ಕಥೆ) ೪೮೯
೪೨. ವೃಷಭೇಂದ್ರ ವಿಜಯ ವರ್ಣನಂ (ಅಲ್ಲಯ್ಯ ಮಧುವಯ್ಯಗಳ ಕಥೆ, ಬಿಜ್ಜಳನ ವಧೆ. ಬಸವಣ್ಣನ ಲಿಂಗೈಕ್ಯ) ೫೦೮
ಪರಿಶಿಷ್ಟ. (೧) ಬಸವಕೃತಿ ಲಲಿತ ಪದ ವೃತ್ತಗಳ ಅರ್ಥ ೫೪೧
(೨) ಇತರ ವೃತ್ತಗಳು ಬಸವಸ್ತೋತ್ರಗಳ ಅರ್ಥ ೫೭೭
(೩) ಬಸವರಾಜ ವಿಜಯದಲ್ಲಿ ಬಳಸಿರುವ ಗಾದೆಗಳು ೫೮೫
(೪) ಪಾರಿಭಾಷಿಕ ಪದಾರ್ಥಕೋಶ ೫೮೯
(೫) ಪೂರ್ವ ಕಥೆಗಳು ೫೯೬
(೬) ಆಧಾರ ಗ್ರಂಥಸೂಚಿ ೬೧೧

# ಪಂಚವಿಂಶಾಶ್ವಾಸಂ

## [ಮೋದರ ಕೇತಯ್ಯನ ಕಥೆ]

ಶ್ರೀ ಸದಮಳಾಂಬಿಕಾದರ
ಹಾಸದ್ಯುತಿಮಲ್ಲಿಕಾಮಧುವ್ರತನಭವಂ
ವಾಸವಮುಖಸುರಹೃದಯೋ
ಲ್ಲಾಸಪ್ರದನೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಇಂತು ಚನ್ನಬಸವಂ ಬಸವವೃತ್ತಾಂತಮಂ ಬೆಸಸಿ ಗಣನಿವಹಕಾನಂದಮನೊದವಿಸಿ ಸುಖಮಿರುತಿರೆ ಮತ್ತಮಲ್ಲಿ—

ಚರಲಿಂಗಂ ಸ್ವಾಮಿ ಸುಜ್ಞಾನಮೆ ಸಮುಚಿತ ಸನ್ಮಂತ್ರಿಯಾಚಾರಮೇ ಭಾ
ಸುರರಾಷ್ಟ್ರಂ ಶಾಂತಿ ದುರ್ಗಂ ವಿಮಳಗುಣಮೆ ಮಿತ್ರಂ ಮಹಾಮೂಲಮಂತ್ರಂ
ಚಿರಕೋಶಂ ಶುದ್ಧಬುದ್ಧಿಪ್ರಭೃತಿಬಲಮಿವಿಂತಾಗೆ ಸಪ್ತಾಂಗಮಾಳ್ದ
ಚ್ಚರಿಯಿಂ ಸದ್ಭಕ್ತಿಸಾಮ್ರಾಜ್ಯಕೆ ವಿಭುವೆನಿಸುತ್ತೊಪ್ಪುತಿರ್ದಂ ವೃಷೇಂದ್ರಂ ೨

ಜಿತರಿಪುವರ್ಗನುಪಾಯಾ
ನ್ವಿತನಧಿಗತಮಂತ್ರಶಕ್ತಿತಂತ್ರೋದಿತ ವಿ

### ಮೋದಾರ ಕೇತಯ್ಯನ ಕಥೆ

೧. ಮಂಗಳಕರಳಾದ ಪವಿತ್ರ ಪಾರ್ವತಿಯ ಮುಗುಳುನಗೆಯ ಕಾಂತಿಯೆಂಬ ಮಲ್ಲಿಗೆಯ ಹೂವಿಗೆ ಭ್ರಮರ ಸ್ವರೂಪನೂ, ಭವರಹಿತನೂ, ಇಂದ್ರನೇ ಮೊದಲಾದ ದೇವತೆಗಳ ಮನಸ್ಸಿಗೆ ಸಂತೋಷವನ್ನುಂಟುಮಾಡುವವನೂ ಆದ ಶಿವಲಿಂಗನು ಸೌಖ್ಯವನ್ನು ಉಂಟುಮಾಡಲಿ. ವ॥ ಈ ರೀತಿಯಲ್ಲಿ ಚೆನ್ನಬಸವಣ್ಣನು ಬಸವೇಶ್ವರನ ವೃತ್ತಾಂತವನ್ನು ಶಿವಗಣಸಮೂಹಕ್ಕೆ ಹೇಳಿ, ಆನಂದವನ್ನುಂಟುಮಾಡುತ್ತ ಸುಖವಾಗಿ ಇರುತ್ತಿರಲು ಮತ್ತು ಅಲ್ಲಿ—೨. ಜಂಗಮಲಿಂಗವೇ ಸ್ವಾಮಿ, ಸುಜ್ಞಾನವೇ ಯೋಗ್ಯನಾದ ಮಂತ್ರಿ, ಆಚಾರವೇ ಶೋಭಿಸುವ ರಾಷ್ಟ್ರ, ಶಾಂತಿಯೇ ಕೋಟೆ, ಶ್ರೇಷ್ಠ ಸದ್ಗುಣಗಳೇ ಮಿತ್ರ, ಮಹಾಮೂಲಮಂತ್ರವೇ (ಶಿವಷಡಕ್ಷರಿಯೇ) ಶಾಶ್ವತ ಕೋಶ, ಶುದ್ಧವಾದ ಮನಸ್ಸೇ ಮೊದಲಾದುವುಗಳು ಸೈನ್ಯ (ಬಲ)–ಈ ರೀತಿ ಇವು ಉಂಟಾಗಿರಲು ಇಂಥ ಸಪ್ತಾಂಗ (ಏಳು ಲಿಂಗ)ಗಳನ್ನು ಹೊಂದಿ, ಆನಂದದಿಂದ ಸದ್ಭಕ್ತಿಯೆಂಬ ಸಾಮ್ರಾಜ್ಯಕ್ಕೆ ಪ್ರಭುವೆಂದೆನಿಸಿ ವೃಷಭೇಂದ್ರನು (ಕಲ್ಯಾಣವಲ್ಲಿ) ಇರುತ್ತಿದ್ದನು. ೩. (ಅವನು) ರಿಪುವರ್ಗವನ್ನು ಜಯಿಸಿದ್ದನು. (ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಗೆದ್ದಿದ್ದನು); ಸಾಮ ದಾನ ಭೇದ ದಂಡಾದಿ ಚತುರೋಪಾಯಗಳಿಂದ

ಶ್ರುತಗುಣಗಣನಿಧಿಯವನೀ
ಶತೆಯಂ ತಳೆದಾಳ್ವುದರಿದೆ ಜಸವಂ ಬಸವಂ ೩

ಬಸವಪದಾಬ್ಜಪಾಂಶು ಧರೆಯಂ ಬಸವೇಶನ ದಿವ್ಯಕೀರ್ತಿಯೆ
ಣ್ದೆಸೆಯಧಿನಾಥರಂ ಬಸವರಾಜನಪಾಂಗದ ಕಾಂತಿ ಚಂದ್ರಸಾ
ರಸಸಖರೋಚಿಯಂ ಪದೆದು ಸೋಂಕಿದ ಮಾತ್ರದೆ ಪಾವನತ್ವಮಂ
ಪೊಸಯಿಸಿ ರಂಜಿಸಿರ್ದುವೆನೆ ತನ್ಮಹಿಮಾಬ್ಧಿಯ ಪೆರ್ಮೆಯೆಂತುಟೋ ೪

ವ॥ ಎನಿಸಿ ನೆಗಳ್ತೆವೆತ್ತು ಬಸವಂ ತ್ರಿವಿಧ ಲಿಂಗಸಪರ್ಯೆಯಿಂ ಸುಖಮಿರ್ಪನ್ನಮಾ ಪುರವರದಲ್ಲಿ—

ಖ್ಯಾತಗುಣರಾಶಿ ಮೋದರ
ಕೇತಯ್ಯನೆನಿಪ್ಪ ಶರಣನೊಪ್ಪಿರೆ ಪದಪಿಂ
ದಾತನಸುವಂ ಶಿವಂ ಸಂ
ಪ್ರೀತಿಯಿನೊಡಗೂಡಿಕೊಂಡನಂದೊಂದುದಿನಂ ೫

ವ॥ ಆಗಳಾ ಪೊಳಲ ಭಕ್ತಗಣಂಬೆರಸು ವೃಷೇಂದ್ರನೇಳ್ತಂದು ಸರ್ವಮಾಹೇಶ್ವರರ್ನೆರೆದೊಡ್ಡೋಲಗಂಗೊಟ್ಟು ತತವಿತತಘನಸುಷಿರವಾದ್ಯಧ್ವನಿ ವಿಜೃಂಭಿಸೆ ಪುಷ್ಪಾಂಜಲಿಗಳೊಡನುಘೇರವಂಗುಡುತ್ತುಂ ಶಿವಸಂಕೀರ್ತನಂಗಳಂ ಪಾಡುತಾಡುತಂ ಬಿನದಂಬೆತ್ತಿರ್ಪುದುಂ ಕಂಡು ತತ್ಸಭೆಗೆ

ಕೂಡಿದ್ದನು. (ಶುಭವನ್ನುಂಟುಮಾಡುವ ಉಪಾಯಗಳಿಂದ ಕೂಡಿದ್ದನು) ; ರಾಜತಂತ್ರದಲ್ಲಿ ಹೇಳಲ್ಪಟ್ಟ ಪ್ರಸಿದ್ಧವಾದ ಸದ್ಗುಣ ಸಮೂಹಗಳ ನಿಕ್ಷೇಪನೆನಿಸಿದ್ದನು. [ಆಗಮಗಳಲ್ಲಿ ಹೇಳಲ್ಪಟ್ಟ ಪ್ರಸಿದ್ಧವಾದ ಸದ್ಗುಣಭರಿತರಾದ ಶಿವಗಣ ಸಮೂಹಕ್ಕೆ ನಿಧಿಯೆನಿಸಿದ್ದನು]; (ಹೀಗೆ) ಆ ಬಸವಣ್ಣನು ಭೂಮಿಪಾಲನ ಅಧಿಕಾರವನ್ನೂ ಹೊಂದಿ ಕೀರ್ತಿಯನ್ನು ಹೊಂದಿರುವುದು ಅಸಾಧ್ಯವಾದದ್ದೇ ? ೪. ಬಸವಣ್ಣನ ಪಾದಕಮಲದ ಧೂಳು ಭೂಮಿಯನ್ನೂ, ಬಸವೇಶ್ವರನ ದಿವ್ಯಕೀರ್ತಿಯು ಎಂಟೂದಿಕ್ಕಿನಲ್ಲಿರುವ ಅರಸರನ್ನೂ, ಬಸವರಾಜನ ಕಡೆಗಣ್ಣಿನ ಕಾಂತಿಯು ಚಂದ್ರ ಮತ್ತು ಸೂರ್ಯರ ಕಿರಣಗಳ(ತೇಜಸ್ಸನ್ನು) ಹೊಂದಿ, ಸೋಂಕಿದ ಮಾತ್ರದಿಂದಲೇ ಪರಿಶುದ್ಧತೆಯನ್ನುಂಟು ಮಾಡಿ, ರಂಜಿಸಿರುವುದೋ ಎನ್ನುವಂತೆ ಆ ಮಹಿಮಾ ಸಮುದ್ರನಾದ ಬಸವನ ಹಿರಿಮೆ ಹೇಗಿತ್ತೋ ! ವ॥ ಹೀಗೆನಿಸಿ ಖ್ಯಾತಿಯನ್ನು ಹೊಂದಿ ತ್ರಿವಿಧ (ಇಷ್ಟ, ಪ್ರಾಣ, ಭಾವ) ಲಿಂಗಪೂಜೆಯಿಂದ ಸುಖದಿಂದ ಇರುತ್ತಿರುವಾಗ—೫. ವಿಖ್ಯಾತವಾದ ಗುಣಗಳ ಸಮೂಹವುಳ್ಳ ಮೋದಾರಕೇತಯ್ಯನೆಂಬ ಶರಣನು (ಆ ಕಲ್ಯಾಣದಲ್ಲಿ) ಶೋಭಿಸುತ್ತಿದ್ದನು. ಒಂದು ದಿವಸ ಪ್ರೀತಿಯಿಂದ ಆತನ ಪ್ರಾಣವನ್ನು ಶಿವನು ತನ್ನ ಜೊತೆಯಲ್ಲಿ ಸೇರಿಸಿಕೊಂಡನು (ಲಿಂಗೈಕ್ಯನಾದನು). ವ॥ ಆಗ ಆ ಕಲ್ಯಾಣ ನಗರದ ಭಕ್ತಗಣ ಸಮೇತವಾಗಿ ಬಸವೇಶ್ವರನು ಬಂದು, ಸಕಲ ಮಾಹೇಶ್ವರರುಗಳೊಡನೆ ಒಡ್ಡೋಲಗವನ್ನು ನಡೆಸಿದನು. (ಅಲ್ಲಿ) ತತ, ವಿತತ, ಘನ, ಸುಷಿರ (ತಂತ್ರೀ ವಾದ್ಯಗಳು, ಚರ್ಮ

ಸಾಷ್ಟಾಂಗವೆಱಗಿ ತದನುಜ್ಞೆಯಿಂ ಕುಳ್ಳಿರ್ದು ಶರಣಂ ಹರಣಂಗಳೆದನೆಂದು ಮನಂ ನೊಂದು ಮಱುಗುತನಿತಱೊಳ್ತನ್ನ ಭಾಷೆಯಂ ನೆನೆದು ನೇಹಂಮಿಗೆ ನಿಜಪ್ರಾಣಮನಾಕ್ಷಣದೊಳ್ವಿಸರ್ಜಿಸೆ ಗಣನಿವಹಮದಂ ಕಂಡು ಕೌತುಕಂಗೊಂಡು ಪಡಿಯಱ ಬಾಚಿದೇವನಂ ಮಾಚಿದೇವನಡಿಗಳಿರ್ದೆಡೆಗೇ ಕಜ್ಜಮೆಲ್ಲಮಂ ಬಿನ್ನವಿಪುದೆಂದು ಬೆಸಸಿ ಕಳುಪಲೊಡನೆ—

ಕಡುವೇಗದಿನೇಳ್ತಂದಾ
ಪಡಿಯಱನಾ ಮಾಚಿದೇವನಡಿದಳಿರೊಳ್ಸೈ
ಗೆಡೆದೆಳ್ದು ಮುಗಿದ ಕೈ ನೊಸ
ಲೆಡೆಯೊಳ್ನಿಲೆ ದೇವ ಕೇಳ್ವುದೆಂದಿಂತೆಂದಂ ೬

ಮೋದರ ಕೇತದೇವನಸು ಲಿಂಗದೊಳೊಂದೆ ವೃಷೇಂದ್ರನಂದು ತಾ
ನೋದಿದ ಗೀತಮಂ ನೆನೆದು ಪವ್ವನೆ ಪಾಱೆ ಭವತ್ಪದಾಬ್ಜಮಂ
ಸಾದರಮೆಯ್ದೆ ಜಾನಿಸುತೆ ನೋಳ್ಪರೊಳದ್ಭುತಮುಣ್ಮೆ ಸತ್ಯರ
ತ್ನೋದಧಿ ತನ್ನ ಜೀವನಮನಾಗಳೆ ಬಿಟ್ಟನದೇನನೆಂದಪೆಂ ೭

ವ॥ ಆಗಳಲ್ಲಿ ಸಕಳ ಗುಣನಿಧಿಯೆನಿಪ ಸಕಲೇಶಮಾದರಸಯ್ಯನುಂ, ಜಗನ್ನುತಮಹಿಮನೆನಿಪ

ವಾದ್ಯಗಳು, ತಾಳಗಳು, ಕೊಳಲುಗಳ) ವಾದ್ಯಗಳ ಧ್ವನಿಯು ವಿಜೃಂಭಿಸುತ್ತಿದ್ದವು. ಪುಷ್ಪಾಂಜಲಿ ಸಮೇತವಾಗಿ ಉಘೇ ಉಘೇ ! ಎಂಬ ಧ್ವನಿಯನ್ನುಂಟುಮಾಡುತ್ತ ಶಿವ ಸಂಕೀರ್ತನಗಳನ್ನು ಹಾಡುತ್ತ, ಆಡುತ್ತ ವಿನೋದಗೊಂಡಿರುವುದನ್ನು ಕಂಡು, ಆ ಸಭೆಗೆ ಸಾಷ್ಟಾಂಗ ನಮಸ್ಕಾರ ಪೂರ್ವಕ ನಮಸ್ಕರಿಸಿ, ಅವರ ಅಪ್ಪಣೆಯ ಮೇರೆಗೆ ಕುಳಿತು ಕೊಂಡು, ಶರಣನು (ಮೋದರಕೇತಯ್ಯ ಶರಣನು) ಪ್ರಾಣವನ್ನು ಬಿಟ್ಟನು, ಎಂದು ಮನಸ್ಸಿನಲ್ಲಿ ನೊಂದುಕೊಂಡು, ಮರುಗುತ್ತ ಅಷ್ಟರಲ್ಲಿ ತನ್ನ ಭಾಷೆಯನ್ನು ನೆನೆದು ಸ್ನೇಹಾಧಿಕ್ಯವುಂಟಾಗಲು ತನ್ನ ಪ್ರಾಣವನ್ನು ಆ ಕ್ಷಣದಲ್ಲಿಯೇ ಬಿಟ್ಟನು. ಶಿವಗಣ ಸಮೂಹವು ಅದನ್ನು ಕಂಡು ಆಶ್ಚರ್ಯಗೊಂಡು ಪ್ರತೀಹಾರಿಯಾದ ಬಾಚಯ್ಯದೇವನನ್ನು ಕುರಿತು—ಮಡಿವಳ ಮಾಚಿದೇವನ ಪಾದಗಳು ಎಲ್ಲಿವೆಯೋ ಅಲ್ಲಿಗೆ ಹೋಗಿ ಬಸವಣ್ಣನ ಈ ಕಾರ್ಯವನ್ನು ವಿಜ್ಞಾಪಿಸುವುದು, ಎಂದು ಅಪ್ಪಣೆ ಮಾಡಿ ಕಳಿಸಲಾಗಿ
೬. ಅತಿ ಜಾಗ್ರತೆಯಾಗಿ ಆ ಪ್ರತೀಹಾರಿ ಬಾಚಯ್ಯನು ಹೊರಟುಬಂದು, ಆ ಮಡಿವಳ ಮಾಚಿದೇವನ ತಳಿರಿನಂತಹ ಪಾದಗಳಿಗೆ ಅಡ್ಡಬಿದ್ದು, ಮೇಲೆದ್ದು, ಹಣೆಯ ಮೇಲೆ ಕೈ ಹೊತ್ತು ಮುಗಿದು, ನಿಂತು,—'ದೇವ, ಕೇಳಬೇಕು' ಎಂದು ಹೀಗೆ ಅಂದನು.
೭. 'ಮೋದಾರ ಕೇತಿದೇವನ ಪ್ರಾಣವು ಲಿಂಗದಲ್ಲಿ ಐಕ್ಯಗೊಳ್ಳಲು, ಜಂಗಮ ಪ್ರಾಣಿಯೆಂಬ ತಾನು ಹೇಳಿದ ವಚನವನ್ನು ನೆನೆದು ಹೌಹಾರಿದವನಾಗಿ, ಭಗವಂತನ ಪಾದ ಕಮಲವನ್ನು ಪ್ರೀತಿಯಿಂದ ಧ್ಯಾನ ಮಾಡುತ್ತ ನೋಡುವವರಿಗೆ ಆಶ್ಚರ್ಯವೆನಿಸುವಂತೆ ಆಗ ಸತ್ಯವೆಂಬ ರತ್ನಕ್ಕೆ ಸಮುದ್ರ ಪ್ರಾಯನಾದ ಬಸವೇಶ್ವರನು ತನ್ನ ಜೀವವನ್ನು ಬಿಟ್ಟನು. ಅದನ್ನು ಅದೇನೆಂದು ಹೇಳಲಿ !' ವ॥ 'ಆ ಸಮಯದಲ್ಲಿ ಅಲ್ಲಿ ಸಕಲ

ಜಗದೇವಯ್ಯನುಂ, ಕಲಿಕಲುಷಹರನಾದ ಕಲ[1]ಕೇತಿದೇವನುಂ, ತ್ರಿಲಿಂಗಾರಾಧಕನಾದ ತೆಲುಂಗ ಜೊಮ್ಮಯ್ಯನುಂ, ಶಂಕರನಂಕಕಾಜನೆನಿಪ ಶಂಕರಯ್ಯನುಂ, ಬಲವದಾಚಾರ ಚತುರನಾದ ಬಾಚಿ ರಾಜಯ್ಯನುಂ, ಕಲಿಕ್ಲೇಶನಾಶಕನೆನಿಪ ಕೇಶಿರಾಜಯ್ಯ[2]ನುಂ, ದಾಸೋಹ ಭಾವಮಳವಟ್ಟ ದಾಸಿಮಯ್ಯನುಂ, ಕಱೆಮಱೆಯುಳಿದ ಮೊಱನ ವೇಮಯ್ಯನುಂ, ಗಣದಾಸಭಾವೋದ್ದಾಮನೆನಿಪ ಗಣದಾಸಿ ಭೀಮಯ್ಯನುಂ, ಸುರವಿನುತ ಚರಿತ್ರನಾದ ಸುರಗಿ ಚೌಡಯ್ಯನುಂ, ಸಲ್ಲೀಲಾಶಾಲಿ ಯೆನಿಪ ಕಲ್ಲಿದೇವನುಂ, ಪಾಶಹರಣಪರಿಣತನಪ್ಪ ಕಾಶಿನಾಥನುಂ, ಮನ್ನಣೆಯ ಮಹಿಮೆವೆತ್ತ ಕಿನ್ನರ ಬೊಮ್ಮಯ್ಯನುಂ, ಧರಾತಳದಯಾಪರನಾದ ದಸರಯ್ಯನುಂ, ಭರ್ಗಪ್ರಿಯಚರಿತ ಗೊಗ್ಗಯ್ಯನುಂ, ಕಾರ್ಕಶ್ಯರಹಿತಹೃದಯ ನೆನಿಪ ಕಕ್ಕಯ್ಯನುಂ, ಸಲ್ಲಲಿತ ಪ್ರಭಾವಂಬಡೆದಲ್ಲಮದೇವನುಂ, ಮಾಧುರ್ಯ ಗುಣಮಹಿತನಾದ ಮಧುವಯ್ಯನುಮಿವರ್ಮೊದಲಾದ ನಿರುಪಮ ಸಮಗ್ರೋದಗ್ರಭಕ್ತಿ ಜ್ಞಾನ ವಿರತಿ ವಿಳಸಿತರಾದ ಮಹಾನುಭಾವರ್ನೆರೆದು ಚರಲಿಂಗಮೂರ್ತಿಗಳ್ವೆರಸು ಬಸವ ನಸುವಂ ವಿಸರ್ಜಿಸೆ ವಿಷಾದಂಬಡುತ್ತುಮಿರ್ದೆನ್ನಂ ನಿಮ್ಮಂಘ್ರಿ ಗಳೆಡೆಗಿದನೆಲ್ಲಮಂ ಬಿನ್ನವಿಸಿ ತಳ್ವದೊಡಗೊಂಡು

ಗುಣನಿಧಿಯೆನಿಸಿರುವ ಸಕಳೇಶ ಮಾದರಸನೂ ಪ್ರಪಂಚದ ಜನರಿಂದ ಶ್ಲಾಘಿಸಲ್ಪಡುವ ಜಗದೇವಯ್ಯನೂ, ಕಲಿಯುಗ ಸಂಬಂಧವಾದ ಪಾಪ ನಾಶಕನೆನಿಸಿದ ಕಲಿಕೇತ ಬ್ರಹ್ಮಯ್ಯನೂ, ಇಷ್ಟ ಪ್ರಾಣ ಭಾವ ಲಿಂಗಾರಾಧಕನೆನಿಸಿದ ತೆಲಗು ಜೊಮ್ಮಯ್ಯನೂ, ಶಂಕರನ ಬಿರುದಿನ ಭಂಟನೆನಿಸಿದ ಶಂಕರದೇವನೂ, ಸಮರ್ಥವಾದ ಆಚಾರದಲ್ಲಿ ಕುಶಲನೆನಿಸಿದ ಬಾಚಿರಾಜಯ್ಯನೂ, ಕಲಿಯುಗ ಸಂಬಂಧದ ಕ್ಲೇಶಗಳನ್ನು ನಾಶ ಮಾಡುವವನೆನಿಸಿದ ಕೇಶಿರಾಜಯ್ಯನೂ, ದಾಸೋಹಂಭಾವವು (ಜೀವನಕ್ಕೆ) ಅಳವಟ್ಟ, ದಾಸಿಮಯ್ಯನೂ, ಪಾಪ ವಂಚನೆಗಳನ್ನು ದೂರಗೊಳಿಸಿದ ಮೊರನವೇಮಯ್ಯನೂ, ಶಿವಶರಣರ ಸೇವಾಭಾವನೆಯಿಂದ ಉತ್ಕೃಷ್ಟನೆಂದು ಪ್ರಸಿದ್ಧನಾದ ಗಣದಾಸಿ ಭೀಮಯ್ಯನೂ, ದೇವತೆಗಳಿಂದಲೂ ಶ್ಲಾಘನೆ ಮಾಡಿಸಿಕೊಳ್ಳುವ ಚರಿತ್ರೆಯುಳ್ಳ ಸುರಗಿಯ ಚೌಡಯ್ಯನೂ, ಶ್ರೇಷ್ಠ ಲೀಲಾಮೂರ್ತಿಯೆನಿಸಿದ ಕಲ್ಲಿದೇವನೂ, ಮಾಯಾ ಪಾಶವನ್ನು (ಅಥವಾ ಯಮನ ಪಾಶವನ್ನು) ನಾಶಪಡಿಸುವಲ್ಲಿ ಸಮರ್ಥನೆನಿಸಿದ ಕಾಶಿನಾಥನೂ, ಪೂಜ್ಯತೆಯ ಮಹಿಮಾ ವಿಶೇಷವನ್ನು ಹೊಂದಿರುವ ಕಿನ್ನರಿಯ ಬೊಮ್ಮಯ್ಯನೂ, ಭೂಮಂಡಲದ ಸಕಲ ವಸ್ತು ವಿಶೇಷದಲ್ಲೂ ದಯಾಶಾಲಿಯೆಂದೆ ನಿಸಿದ ದಸರಯ್ಯನೂ, ಶಿವನ ಪ್ರೀತಿಗೆ ಪಾತ್ರವಾದ ಚರಿತ್ರೆಯುಳ್ಳ ಗೊಗ್ಗಯ್ಯನೂ, ಕಾಠಿಣ್ಯ ರಹಿತವಾದ ಹೃದಯವುಳ್ಳವನೆಂದೆನಿಸಿದ ಕಕ್ಕಯ್ಯನೂ, ಮನೋಹರವಾದ ಮಹಿಮಾ ವಿಶೇಷವನ್ನು ಪಡೆದಿರುವ ಅಲ್ಲಮಪ್ರಭು ದೇವನೂ, ಮಧುರವಾದ ಗುಣದಿಂದ ಕೂಡಿದ ಮಧುವರಸನೂ,—ಇವರೇ ಮೊದಲಾದ ಸಮಗ್ರವಾಗಿ ಉತ್ಕೃಷ್ಟ ವೆನಿಸಿರುವ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಪ್ರಕಾಶಮಾನರಾದ ಮಹಾನುಭಾವರೆಲ್ಲ ಸೇರಿ, ಜಂಗಮ ಮೂರ್ತಿಗಳು ಸಹಿತವಾಗಿ, ಬಸವಣ್ಣನು ಪ್ರಾಣವನ್ನು ವಿಸರ್ಜಿಸಲಾಗಿ,

---

1 ಲಿ(ಅ)    2 × (ಮು)

ಬರ್ಪುದೆಂದು ಕಳುಪಿದರಂದವಂ ನುಡಿಯೆ ಮಾಚಿದೇವಂ ಕೇಳ್ದು ಮೆಯ್ಯುರ್ವಿ ಪೊಂಪುಳಿವೋಗಿ ಸಸಂಭ್ರಮಂ ನಿರೀಕ್ಷಿಸಿ—

ಎಂತೆಂತು ಮಗುಳ್ದುಮೊರ್ಮೆ ನಿ
ತಾಂತಂ ಪೇಳ್ವೇಳ್ ಶಿವೈಕ್ಯನಸುವಿನೊಳಸುವಂ
ತಾಂ ತಳ್ವದೆ ಬೆರಸಿದನೆ ಮ
ಹಾಂತಂ ವೃಷಭೇಂದ್ರನಮಮ ಶುಭಗುಣಸಾಂದ್ರಂ ೮

ಪೊಡವಿಯೊಳೆ ಮೃಡನ ಮಾಯೆಯ
ತೊಡಂಕನಪಹರಿಸಿ ತನ್ನ ಭಾಷೆಯ ಚಲಮಂ
ನುಡಿದಂತೆ ನಡೆದು ತೋಱಿದ
ನೆಡೆಯುಡುಗದೆ ಭಕ್ತಿಭಾಮಿನೀಮುಖಮುಕುರಂ ೯

ಪಡುಗಡಲೊಳರ್ಕನುದಯಿಸಿ
ದೊಡಮಂಬುಧಿ ಮೇರೆದಪ್ಪಿದೊಡಮಮರನಗಂ
ನಡೆಗೊಂಡೊಡಮಾಕಾಶಂ
ಕೆಡೆದೊಡಮೇಂ ಬಸವಭಾಷೆ ತೊದಳಾದಪುದೇ ೧೦

ಶರಣನಸು ಪೋಗೆ ತನ್ನಯ
ನಿರುಪಮ ಶಪಥಕ್ರಮೋಕ್ತಿಯಂ ನೆನೆದಿಳೆಗ

ವಿಷಾದಗೊಂಡವರಾಗಿ ನನ್ನನ್ನು ತಮ್ಮ ಪಾದಗಳಿಗೆ ಈ ವಿಷಯವನ್ನೆಲ್ಲ ಬಿನ್ನವಿಸಿ ತಡಮಾಡದೆ ತಮ್ಮನ್ನು ಕರೆದುಕೊಂಡು ಬರಬೇಕೆಂದು ಕಳುಹಿಸಿದರು', ಎಂದು ಆ ಪಡಿಯರನಾದ ಬಾಚಯ್ಯನು ಹೇಳಲು, ಮಾಚಿದೇವನು ಕೇಳಿ, ಉತ್ಸಾಹದಿಂದ ರೋಮಾಂಚನಗೊಂಡವನಾಗಿ ಸಂಭ್ರಮದಿಂದ ಕೂಡಿ ನಿರೀಕ್ಷಿಸುತ್ತ—೮. 'ಹೇಗೆ ಹೇಗೆ ನಡೆಯಿತು ? ಇನ್ನೊಮ್ಮೆ ವಿವರವಾಗಿ ತಿಳಿಸು ! ಮಹಾಮಹಿಮನೂ, ಮಂಗಳಕರವಾದ ಗುಣಗಳಿಂದ ಪರಿಪೂರ್ಣನೂ ಆದ ಆ ಬಸವೇಶ್ವರನು ಶಿವೈಕ್ಯನಾದ (ಕೇತಯ್ಯನ) ಪ್ರಾಣದೊಡನೆ ತನ್ನ ಪ್ರಾಣವನ್ನೂ ಬೆರಸಿದನೇ ! ಅಮಮ !! ೯. 'ಭಕ್ತಿಯೆಂಬ ಸ್ತ್ರೀಯ ಮುಖಕ್ಕೆ ಕನ್ನಡಿಯೆಂದೆನಿಸಿದ ಭೂಮಿಯಲ್ಲಿ ಪರಮೇಶ್ವರನ ಮಾಯೆಯ ಪ್ರತಿಬಂಧನವನ್ನು ಅಪಹರಿಸಿ ತಾನು ಮಾಡಿದ ಭಾಷೆಯ ಛಲವನ್ನು ಚಾಚೂ ತಪ್ಪದ ಹಾಗೆ ನುಡಿದಂತೆ ನಡೆದು ತೋರಿಸಿದನು'. ೧೦. 'ಪಶ್ಚಿಮ ಸಮುದ್ರದಲ್ಲಿ ಸೂರ್ಯನು ಹುಟ್ಟಿದರೂ, ಸಮುದ್ರವು ದಡವನ್ನು ಮಿಕ್ಕಿದರೂ, ಮೇರುಪರ್ವತವು ನಡೆಯುವಿಕೆಯಿಂದ ಕೂಡಿದರೂ, ಆಕಾಶವು ಕಳಚಿ ಬಿದ್ದರೂ, ಬಸವಣ್ಣನ ಭಾಷೆಯು ಸುಳ್ಳಾದೀತೇ ?' ೧೧. ಶರಣನಾದ ಮೇದರಕೇತಯ್ಯನ ಪ್ರಾಣವು ಹೋಗಲು (ಬಸವಣ್ಣನು) ತನ್ನ ಅನುಪಮವಾದ ಪ್ರತಿಜ್ಞೆಯ ಕ್ರಮವನ್ನು

ಚ್ಚರಿಯೊದವೆ ನಿಜಪ್ರಾಣವ
ನಿರದಿತ್ತಂ ಬಸವನೆಂದೊಡೇವಣ್ಣಿಪುದೋ ೧೧

ವ॥ ಎಂದು ಮಾಚಿದೇವಂ ಪಲವಂದದಿಂ ನಲಿಸಲಿದು ಕೊಂಡಾಡುತ್ತುಂ ಗಣಸಭೆಗೇಳ್ತಂದು ಸಡಗರಂ ಮಿಗೆ ಭಕ್ತಿಯಿಂ ಪೊಡವಡಲೊಡನಲ್ಲಿ ಶರಣಗಣಂ ಕಂಡು ಸತ್ಕರಿಸಿ ಬನ್ನಿಮೆಂದಾತನಂ ಕೆಯ್ವಿಡಿದು ಮೂರ್ತಿಗೊಳಿಸಿ—

ನೋಡಿರೆ ಮಾಚಿದೇವ ಬಸವೇಶನ ಭಕ್ತಿಯದೊಂದು ಪೆರ್ಮೆಯುಂ
ಪಾಡಿದ ತನ್ನ ಗೀತದಳವಂ ನೆನೆದಿಂತಸುವಿಟ್ಟ ಭಕ್ತನಂ
ನಾಡೆ ನಿರೀಕ್ಷಿಸುತ್ತೊಡನೆ ತನ್ನಸುವಂ ಸಲಿಸಿರ್ದನದ್ಭುತಂ
ಮೂಡೆ ಧರಿತ್ರಿಗೀ ಬಸವನೀತನ ಬಣ್ಣಿಸಲಾರ್ಗೆ ಗೋಚರಂ ೧೨

ಖಂಡಶಶಿಮೌಳಿ ಭಕ್ತನ
ಕೊಂಡೊಯ್ದೊಡೆ ಬಸವನಂತಿರಸುವಿತ್ತವರಂ
ಕಂಡರೊಳಂ ಕೇಳ್ದರೊಳಂ
ಕಂಡಱಿಯೆವು ಕೇಳ್ದುಮಱಿಯೆವೀ ಭೂತಳದೊಳ್ ೧೩

ವಿದಿತಪವನಾಂಗಜಂಗಮ
ಕಿದು ಯುಕ್ತಂ ಪ್ರಾಣಮಾರುತಾರ್ಪಣಮೆನುತುಂ
ಪನೆದದನರ್ಪಿಪ ಜಾಣ್ಮಂ
ದುದು ಗಡ ಬಸವಂಗೆ ನೋಳ್ಪೊಡೀ ವಸುಮತಿಯೊಳ್ ೧೪

ನೆನೆದು ಲೋಕಕ್ಕೆ ಆಶ್ಚರ್ಯವುಂಟಾಗುವ ಹಾಗೆ ತನ್ನ ಪ್ರಾಣವನ್ನು ತಪ್ಪದೆ ಕೊಟ್ಟನೆಂದರೆ ಅದನ್ನು ಏನು ವರ್ಣಿಸುವುದೋ !' ವ॥ ಹೀಗೆಂದು ಮಡಿವಳ ಮಾಚಿದೇವನು ಹಲವಾರು ವಿಧದಲ್ಲಿ ನಲಿ ನಲಿದು ಕೊಂಡಾಡುತ್ತ, ಶಿವಗಣ ಸಭೆಗೆ ಅತ್ಯಂತ ಸಡಗರದಿಂದ ಹೊರಟುಬಂದು ಭಕ್ತಿಯಿಂದ ನಮಸ್ಕಾರ ಮಾಡಲಾಗಿ ಅಲ್ಲಿದ್ದ ಶರಣ ಸಮೂಹವು ಮಾಚಿದೇವರನ್ನು ಕಂಡು ಸತ್ಕಾರ ಮಾಡಿ, 'ಬನ್ನಿರಿ' ಎಂದೆನ್ನುತ್ತ ಆತನನ್ನು ಕೈ ಹಿಡಿದು ಕರೆದೊಯ್ದು ಕುಳ್ಳಿರಿಸಿ—೧೨. 'ಮಾಚಿದೇವನೇ, ಬಸವಣ್ಣನ ಭಕ್ತಿ ಜೀವನದ ಹಿರಿಮೆಯನ್ನು ನೋಡಿದಿರಾ ! ಬಸವಣ್ಣನು ತಾನು ಹಾಡಿದ ಪ್ರತಿಜ್ಞಾ ವಚನದ ರೀತಿಯನ್ನು ನೆನೆದು ಪ್ರಾಣ ಬಿಟ್ಟ ಭಕ್ತನಾದ ಮೋದರಕೇತಯ್ಯನನ್ನು ಚೆನ್ನಾಗಿ ನಿರೀಕ್ಷಿಸಿ ಭೂಮಂಡಲಕ್ಕೇ ಅದ್ಭುತವು ಮೂಡುವ ಹಾಗೆ ಆ ಕೂಡಲೇ ತನ್ನ ಪ್ರಾಣವನ್ನೂ ಸಲ್ಲಿಸಿ ಇದ್ದಾನೆ. ಈತನ ಈ ಸ್ಥಿತಿಯನ್ನು ವರ್ಣಿಸುವುದಕ್ಕೆ ಯಾರಿಗೆ ತಿಳಿದೀತು !' ೧೩. 'ಈ ಭೂಮಂಡಲದಲ್ಲಿ ಚಂದ್ರಕಳಾಧರನಾದ ಶಿವನು ತನ್ನ ಭಕ್ತನನ್ನು ಕರೆದುಕೊಂಡು ಹೋದರೆ (ಶಿವಭಕ್ತನು ಸತ್ತರೆ), ಬಸವಣ್ಣನ ಹಾಗೆ ಪ್ರಾಣವನ್ನು ಕೊಟ್ಟವರನ್ನು ನಾವು ಕಂಡವರಲ್ಲ, ನೋಡಿದವರಲ್ಲ ಕಂಡೂ ಅರಿಯೆವು ! ಕೇಳಿಯೂ ತಿಳಿಯೆವು'. ೧೪. 'ವಿಖ್ಯಾತವಾದ ವಾಯುವೇ ಅಂಗವಾದ ಜಂಗಮಕ್ಕೆ ಈ ರೀತಿಯ ಪ್ರಾಣ ವಾಯು ಸಮರ್ಪಣೆಯು, ಯುಕ್ತವಾದದ್ದು ? ಎಂದೆನ್ನುತ್ತ 'ಪ್ರೀತಿಯಿಂದ ಅದನ್ನು ಅರ್ಪಿಸುವ ಜಾಣತನವು ಈ ಭೂಮಂಡಲದಲ್ಲಿ ವಿಚಾರಿಸಿ

ವ॥ ಎಂದು ಶರಣಸಮುದಯಂ ಬಸವನೇಳ್ಗೆಯಂ ಕೀರ್ತಿಸುತ್ತುಮಿರ್ಪಿನಮಲ್ಲಿ ಮತ್ತೆ ಕೆಲಂಬ ಭಕ್ತರಳಲ್ದು ಮಱುಗಿ—

ಜಂಗಮಲಿಂಗ ಸಂಕಲಿತಭಕ್ತಿಪರಾಯಣ ಜಂಗಮಕ್ರಿಯಾ
ಸಂಗತ ಜಂಗಮಪ್ರಕರ ಪಾವನಪಾದಸರೋರುಹೋಲ್ಲಸ
ದ್ಭೃಂಗ ಸಮಸ್ತಜಂಗಮಸಮರ್ಚನಲೋಲುಪ ಜಂಗಮಾಳಿಸಂ
ಸಂಗತಜೀವಜಂಗಮಸುರದ್ರುಮ ಪೋಪುದೆ ನೀಂ ವೃಷಾಧಿಪಾ ೧೫

ಕಲ್ಯಾಣಮೂರ್ತಿ ನೀನಿರೆ
ಕಲ್ಯಾಣಮಿದೆನಿಪುದಲ್ತೆ ಮಿಸುಪೀ ನಗರಂ
ಕಲ್ಯಾಣಮಲ್ಲದಿರ್ದೊಡ
ಕಲ್ಯಾಣಂ ತಾನೆನಿಪ್ಪುದೀ ಭೂತಳದೊಳ್ ೧೬

ಜ್ಞಾನಾಭಿವೃದ್ಧಿ ಭಕ್ತಿ ವಿ
ಧಾನಂ ಶಿವಧರ್ಮಸಂಪದಂ ಶಿವಚರಣ
ಧ್ಯಾನರತಿಯೆಂಬಿವೆಲ್ಲಂ
ನೀನಿಲ್ಲದೊಡೊಳವೆ ಪೇಳ್ಗುಣಾರ್ಣವಚಂದ್ರಾ ೧೭

ನೀನುಳ್ಳೊಡುಂಟು ಶರಣ ಜ
ನಾನಂದಂ ತ್ರಿವಿಧಲಿಂಗ ಚರಣಾಂಭೋಜಾ

ನೋಡಿದರೆ ಬಸವಣ್ಣನೊಬ್ಬನಿಗೇ ಪ್ರಾಪ್ತವಾಯಿತಲ್ಲವೇ !' ವ॥ ಹೀಗೆಂದು ಶರಣ ಸಮುದಾಯವು ಬಸವಣ್ಣನ ಹಿರಿಮೆಯನ್ನು ಕೊಂಡಾಡುತ್ತಿರುವಷ್ಟರಲ್ಲಿ ಮತ್ತೆ ಕೆಲವು ಭಕ್ತರು ಸಂಕಟದಿಂದ ಮರುಗಿದವರಾಗಿ—೧೫. 'ಜಂಗಮರಲ್ಲಿ ಕೂಡಿಸಲ್ಪಟ್ಟ ಭಕ್ತಿಯಲ್ಲಿ ಆಸಕ್ತನಾದವನೂ, ಜಂಗಮ ಸಂಬಂಧವಾದ ವ್ಯವಹಾರದಿಂದ ಕೂಡಿರುವವನೂ, ಜಂಗಮ ಸಮೂಹದ ಪರಿಶುದ್ಧವಾದ ಚರಣವೆಂಬ ಕಮಲಕ್ಕೆ ಶೋಭಿಸುವ ಭೃಂಗದೋಪಾದಿಯಲ್ಲಿರುವವನೂ, ಜಂಗಮ ಪಾದ ಪೂಜೆಯಲ್ಲಿ ಆಸಕ್ತಿಯುಳ್ಳವನೂ, ಜಂಗಮ ಸಮೂಹದಲ್ಲಿ ಚೆನ್ನಾಗಿ ಸೇರಿಹೋದ ಪ್ರಾಣವುಳ್ಳವನೂ, ಜಂಗಮರಿಗೆ ಕಲ್ಪವೃಕ್ಷಪ್ರಾಯನೂ ಆದ ಬಸವಣ್ಣನೇ ನೀನು (ಈ ರೀತಿ) ಹೋಗುವುದೇ ?' ೧೬. 'ಮಂಗಳಕರ ಶರೀರಿಯೇ, ನೀನಿದ್ದರೆ ಶೋಭಿಸುವ ಈ ಕಲ್ಯಾಣನಗರವು ಮಂಗಳಕರವಾದುದು (ಕಲ್ಯಾಣವಾದುದು) ಎಂದು ಎನಿಸುವುದಲ್ಲವೇ ? ಮಂಗಳ ಸ್ವರೂಪನಾದ ನೀನು ಇಲ್ಲದಿದ್ದರೆ, ಭೂಮಂಡಲದಲ್ಲಿ ಈ ನಗರವು ಅಮಂಗಳವೆನಿಸುವುದಿಲ್ಲವೇ?' ೧೭. 'ಸದ್ಗುಣಗಳೆಂಬ ಸಮುದ್ರಕ್ಕೆ ಚಂದ್ರಪ್ರಾಯನಾದ ಬಸವೇಶ್ವರನೇ, ಶಿವ ಜ್ಞಾನದ ಅಭಿವೃದ್ಧಿ, ಶಿವಭಕ್ತಿಯ ವಿಧಾನ, ಶಿವಧರ್ಮದ ಸಂಪತ್ತು, ಶಿವನ ಪಾದದ ಧ್ಯಾನದಲ್ಲಿ ಪ್ರೀತಿ—ಎನಿಸುವ ಇವೆಲ್ಲ ನೀನಿಲ್ಲದಿದ್ದರೆ ಇರುತ್ತವೆಯೇ ? ಹೇಳು'. ೧೮. 'ಸನ್ಮಾನ್ಯರೆನಿಸಿದ ಜನರಿಗೆ ಕಲ್ಪವೃಕ್ಷಪ್ರಾಯನಾದ ಬಸವಣ್ಣ, ನೀನು ಇದ್ದರೆ ಶರಣ ಜನರಿಗೆ ಸಂತೋಷವುಂಟು. ಇಷ್ಟಲಿಂಗ, ಪ್ರಾಣಲಿಂಗ, ಭಾವ

ನೂನಪರಿಪೂಜನಾರತಿ
ಮಾನಿತ ಶುಭವೃತ್ತಿಮಾನ್ಯಜನಮಂದಾರಾ ೧೮

ಮಾಮರನಿಲ್ಲದಾರವೆ ಮಹೀವರನಿ[1]ಲ್ಲದ ಭೂರಿರಾಜ್ಯಮು
ದ್ದಾಮಶಶಾಂಕನಿಲ್ಲದಿರುಳುತ್ಪಲವಿಲ್ಲದ ವಾರಿಜಾಕರಂ
ತಾಮರಸಾಪ್ತನಿಲ್ಲದ ಪಗಲ್ ನಯಮಿಲ್ಲದ ಬಾಳ್ಕೆ ದಿವ್ಯಸೌ
ದಾಮಿನಿಯಿಲ್ಲದಿರ್ಪ ಮುಗಿಲಂಬಕವಿಲ್ಲದನಾನನಾಂಬುಜಂ ೧೯

ಶ್ರುತಿಯಿಲ್ಲದ ಪಾರ್ವಂ ಸ
ನ್ಮತಿಯಿಲ್ಲದ ಮಂತ್ರಿ ಸತ್ಯವಿಲ್ಲದ ತಪದು
ನ್ನತಿ ಕವಿತೆಯಿಲ್ಲದ ವಿದ
ಗ್ಧತೆ ಬಸವಾಧೀಶನಿಲ್ಲದಿಳೆ ಸೊಗಯಿಕುಮೇ ೨೦

ದಿನಮಣಿಯಿಲ್ಲದೊಡಂಬುಜ
ವನಮಲರ್ವುದೆ ಚಂದ್ರನಿಲ್ಲದೊಡೆ ಕುಮುದಕುಲಂ
ನನೆಕೊನೆವೋಪುದೆ ಶರಣ
ರ್ಗೆ ನಿತಾಂತಂ ಬಸವನಿಲ್ಲದೊಡೆ ಮುದವೊಳವೇ ೨೧

ಶರಣಲಲಾಮ ಸತ್ಯಗುಣಧಾಮ ಪವಿತ್ರಚರಿತ್ರ ಸಜ್ಜನಾಂ
ಬುರುಹದಿನೇಶ ಭಕ್ತಿನಿಧಿಕೋಶ ಕೃತಾಂತಲತಾಂತಬಾಣಸಂ
ಹರನವತಾರ ನಿರ್ಜಿತವಿಕಾರ ನಿಜಾಂಗಭುಜಂಗಭೂಪ ಭಾ
ಸುರಮತವಾರ್ಧಿಚಂದ್ರ ವೃಷಭೇಂದ್ರ ಭವಾಂಬುಧಿಕುಂಭಸಂಭವಾ ೨೨

ಧಾರಿಣಿಯೊಳ್ಜಂಗಮತತಿ
ಯಾರಂ ಬೇಡುಗುಮುದಾರನಾಶ್ರೈಸುಗುಮಿ

ಲಿಂಗಗಳೆಂದೆನಿಸುವ ತ್ರಿವಿಧ ಲಿಂಗಗಳ ಚರಣಕಮಲಗಳ ಪರಿಪೂರ್ಣ ಪೂಜೆಯ ವಿಶ್ವಾಸವುಂಟು. ಮನ್ನಣೆಗೊಂಡ ಮಂಗಳಕರವಾದ ಕಾಯಕ ವೃತ್ತಿಯುಂಟು.' (ನೀನಿಲ್ಲದಿದ್ದರೆ ಇವೆಲ್ಲ ಇರುವುದಿಲ್ಲವೆಂದು ಭಾವ) ೧೯–೨೦. 'ಮಾವಿನ ಮರವಿಲ್ಲದ ಉದ್ಯಾನವನ, ರಾಜನಿಲ್ಲದ ಅಧಿಕವಾದ ರಾಜ್ಯ, ಉತ್ಕೃಷ್ಟ ಚಂದ್ರನಿಲ್ಲದ ರಾತ್ರಿ, ನೈದಿಲೆಯಿಲ್ಲದ ಸರೋವರ, ಸೂರ್ಯನಿಲ್ಲದ ಹಗಲು, ನೀತಿಯಿಲ್ಲದ ಜೀವನ, ಮನೋಹರವಾದ ಮಿಂಚಿಲ್ಲದಿರುವ ಮೋಡ, ಕಣ್ಣಿಲ್ಲದ ಮನುಷ್ಯನ ಮುಖ, ವೇದ ಜ್ಞಾನವಿಲ್ಲದ ಬ್ರಾಹ್ಮಣ, ಶ್ರೇಷ್ಠ ಬುದ್ಧಿಶಕ್ತಿಯಿಲ್ಲದ ಮಂತ್ರಿ, ಸತ್ಯವಿಲ್ಲದ ತಪಸ್ಸಿನ ಔನ್ನತ್ಯ, ಕವಿತಾ ಶಕ್ತಿಯಿಲ್ಲದ ಪ್ರೌಢಿಮೆ, ಬಸವೇಶ್ವರಾ, ನೀನಿಲ್ಲದ ಭೂಮಂಡಲ—(ಇವೆಲ್ಲ) ಶೋಭಿಸುತ್ತವೆಯೇ ?' ೨೧. 'ಸೂರ್ಯನಿಲ್ಲದಿದ್ದರೆ ಕಮಲಗಳ ಸಮೂಹವು ಅರಳುವುದೇ ? ಚಂದ್ರನಿಲ್ಲದಿದ್ದರೆ, ಕನ್ನೈದಿಲೆಗಳ ಸಮೂಹವು ಸಂತೋಷದಿಂದ ಕೂಡುವುದೇ ? ಶರಣರಿಗೆ ನಿಶ್ಚಯವಾಗಿ ಬಸವಣ್ಣನಿಲ್ಲದಿದ್ದರೆ ಸಂತೋಷವುಂಟೇ ?' ೨೨–೨೩. 'ಶರಣರ ಆಭರಣಪ್ರಾಯನೇ, ಸತ್ಯ ವಿಶಿಷ್ಟವಾದ

---

1 ಂ(ಜ)

ನ್ನಾರಂ ಕಾಡುಗುಮಾರೊಡ
ನೋರಂತೆ ವಿನೋದಕೇಳಿಯಂ ನಟಿಯಿಸುಗುಂ ೨೩

ಇನ್ನೆಲ್ಲಿಯದಕಟೆಮ್ಮಯ
ಹೃನ್ನಳಿನವಿಕಾಸದೇಳ್ಗೆವಡೆದೈಸಿರಿ ಮೇ
ಣಿನ್ನೆಲ್ಲಿಯದಭಿಮತಸುಖ
ಮಿನ್ನೆಲ್ಲಿಯದೋವೊ ಬಸವ ನೀಂ ಪೋದುದಱಿಂ ೨೪

ಹರಪಾದಾಂಬುಜದಲ್ಲಿ ಚಿತ್ತಮನುದಂಚತ್ಕೀರ್ತಿಯಂ ದಿಕ್ಸಮು
ತ್ಕರದೊಳ್ ಚನ್ನವೃಷಾಂಕನೊಳ್ವಿಮಳ ಸಮ್ಯಜ್ಞಾನಮಂ ಪ್ರಾಣಮಂ
ಚರರೂಪಾನ್ವಿತಕೇತಿದೇವನೊಳೆ ನೀನಿಟ್ಟಂತೆ ನಿನ್ನತ್ಯುದಾ
ರರಸಶ್ರೀಯನದಾರೊಳಿಟ್ಟುತಳರ್ದೈ ಪೇಳ್ಭಕ್ತಚೂಡಾಮಣೀ ೨೫

ವ॥ ಎಂದಿಂತು ಭಕ್ತತತಿ ಪಲವಂದದಿಂ ಪಲುಂಬಿ ಪಳಯಿಸುತ್ತುಮಿರೆ ಮಾಚಿದೇವಂ ಮಾಣಿಸಿ

ಪ್ರಮಥತತಿರುದ್ರಸಮುದಯ
ಮುಮೆಯೆಮ್ಮ ಪುರಾತನರ್ಕಳಱಿಯದ ತೆಱದಿಂ

ಗುಣಗಳಿಗೆ ಮನೆಯಾಗಿರುವವನೇ, ಪವಿತ್ರವಾದ ಚರಿತ್ರೆಯುಳ್ಳವನೇ, ಸಜ್ಜನರೆಂಬ ಕಮಲಕ್ಕೆ ಸೂರ್ಯಪ್ರಾಯನಾದವನೇ, ಭಕ್ತಿಯೆಂಬ ನಿಧಿಗೆ ಭಂಡಾರನಾದವನೇ, ಯಮ ಮತ್ತು ಮನ್ಮಥ (ಲತಾಂತಬಾಣ) ರುಗಳನ್ನು ಸಂಹರಿಸಿದವನೇ, ಶಿವನ ಅವತಾರನೆನಿಸಿದವನೇ, ಮನೋವಿಕಾರಗಳನ್ನು ಜಯಿಸಿದವನೇ, ಸರ್ವಾಂಗದಲ್ಲೂ ಶಿವ ಕಳೆಯಿಂದ ಕೂಡಿದವನೇ, ಶ್ರೇಷ್ಠವಾದ ವೀರಶೈವ ಮತವೆಂಬ ಸಮುದ್ರವನ್ನುಕ್ಕಿಸುವ ಚಂದ್ರನೇ, ಸಂಸಾರವೆಂಬ ಸಮುದ್ರಕ್ಕೆ ಅಗಸ್ತ್ಯನಂತಿರುವವನೇ, ಹೇ ಬಸವೇಶ್ವರಾ, ಈ ಭೂಮಿಯಲ್ಲಿ ಇನ್ನು ಜಂಗಮ ಸಮೂಹವು ಯಾರನ್ನು ಬೇಡಬೇಕು ? ಅದಾರನ್ನು ಆಶ್ರಯಿಸಬೇಕು ? ಇನ್ನಾರನ್ನು ಕಾಡಬೇಕು ? ಯಾರೊಡನೆ ವಿನೋದ ಕ್ರೀಡೆಯನ್ನು ಚೆನ್ನಾಗಿ ನಟಿಸಬೇಕು ?' ೨೪. 'ಬಸವಣ್ಣ ನೀನು ಹೋದುದರಿಂದ ನಮ್ಮ ಹೃದಯ ಕಮಲಗಳನ್ನು ಅರಳಿಸುವ ಏಳ್ಗೆಯನ್ನು ಹೊಂದಿದ ಐಶ್ವರ್ಯವು ಇನ್ನೆಲ್ಲಿಯದು ? ಅಕಟಾ ! ಇಷ್ಟಾರ್ಥವನ್ನು ಪಡೆಯುವ ಸುಖವು ಇನ್ನು ನಮಗೆ ಎಲ್ಲಿಯದು? ಓಹೋ!' ೨೫. 'ಹೇ ಭಕ್ತರ ಚೂಡಾಮಣಿಯೆನಿಸಿದ ಬಸವಣ್ಣ ಹರನ ಪಾದಕಮಲದಲ್ಲಿ ಚಿತ್ತವನ್ನೂ, ದಿಕ್ಕುಗಳ ಸಮೂಹದಲ್ಲಿ ಉತ್ಕೃಷ್ಟವಾದ ಯಶಸ್ಸನ್ನೂ, ಚನ್ನಬಸವೇಶ್ವರ ನಲ್ಲಿ ಪರಿಶುದ್ಧವಾದ ಸಮ್ಯಕ್ ಜ್ಞಾನವನ್ನೂ, ಜಂಗಮ ರೂಪದಿಂದ ಕೂಡಿದ ಮೇದಾರಕೇತಯ್ಯನಲ್ಲಿ ಪ್ರಾಣವನ್ನೂ—ನೀನು ಇಟ್ಟ ಹಾಗೆ ನಿನ್ನ ಅತ್ಯಂತ ಔದಾರ್ಯ ದಿಂದ ಕೂಡಿದ ಸಂಪತ್ತನ್ನು ಯಾರಲ್ಲಿಟ್ಟು ಹೊರಟು ಹೋದೆಯಯ್ಯಾ ! ಹೇಳು !!' ವ॥ ಹೀಗೆಂದು ಭಕ್ತಸಮುದಾಯವು ಹಲವಾರು ಪ್ರಕಾರದಿಂದ ಹಲುಬಿ ಅಳು ತ್ತಿರಲು ಮಾಚಿದೇವನು (ಅವರೆಲ್ಲರ ಅಳುವಿಕೆಯನ್ನು) ಹೋಗಲಾಡಿಸಿ ೨೬. ಚಂದ್ರ ಧರನಾದವನು ಈ ಪ್ರಮಥರ ಸಮೂಹ, ರುದ್ರರುಗಳ ಸಮುದಾಯ, ನಮ್ಮ ಪುರಾತನ

ಹಿಮಕರಧರನೀ ಭಕ್ತೋ
ತ್ತಮರಸುವಂ ತನ್ನೊಳಿಟ್ಟೊಡಾಂ ಸೈರಿಪೆನೇ ೨೬

ವ॥ ಎಂದುತ್ಕಟಿಸಿ ನಿಂದು ಭೂಭಾಗಭಾಳನೇತ್ರಂ ವಿಜೃಂಭಿಸಿ—

ಶರಣಪ್ರಾಣವ್ರತಭಾ
ಸುರ ಬಸವಂ ಶರಣನಳಿಯೆ ಹರಣಮನಿತ್ತು
ರ್ವರೆಯಱಿಯೆ ವಿಜಯನಾದಂ
ಹರನಿವರಂ ನುಂಗಿ ಪೊಲ್ಲದೆಸಗಿದನಲ್ತೇ ೨೭

ವ॥ ಎಂದು ಮತ್ತಮಿರದೆ—

ಚರಚರಣಾಬ್ಜ ಪೂಜನಪರಾಯಣ ಭಕ್ತರನಿಂತಕಾಲದೊಳ್
ಪುರಹರ ನೀಂ ವಿಚಾರಿಸದೆ ನಿನ್ನೊಳಡಂಗಿಸಿಕೊಳ್ವುದೇಂ ಸದಾ
ಚರಣಮೆ ಚೆಚ್ಚರಂ ಕುಡು ಕುಡೀಗಳೆ ತಳ್ವದೆ ಕೇತಿದೇವನಾ
ಹರಣಮನೆಯ್ದುಗುಂ ಬಸವಜೀವನಮೊಲ್ದದಱೊಂದುಗೂಡುತುಂ ೨೮

ವ॥ ಎಂದು ಪನ್ನತಿಕೆಯಿಂ ನುಡಿದು—

ಮೃಡಭಕ್ತರಸುವನಭವಂ
ಕುಡದೀಗಳ್ತಳ್ವುಗೆಯ್ದನಾಂ ಸೈರಿಪೆನ
ಲ್ತೆಡೆಯುಡುಗದೆ ಡಂಗುರಮಂ
ಪೊಡೆದಪೆನೆಂದಾರ್ದು ಶರಣನುದ್ಘೋಷಿಸಿದಂ ೨೯

ರುಗಳು ಇವರೆಲ್ಲರಿಗೆ ತಿಳಿಯದ ಹಾಗೆ ಈ ಭಕ್ತೋತ್ತಮರಾದ ಬಸವಣ್ಣನವರ ಪ್ರಾಣವನ್ನು ತನ್ನೊಡನೆ ಇಟ್ಟುಕೊಂಡರೆ ನಾನು ಸೈರಿಸುತ್ತೇನೆಯೇ ?' ವ॥ ಹೀಗೆಂದು ಭೂಭಾಗದ ಪರಮೇಶ್ವರಸಂತಿರುವ ಮಾಚಿದೇವನು ಉತ್ಕಟಗೊಂಡು ನಿಂತು ಶೌರ್ಯ ಪ್ರದರ್ಶನ ಮಾಡುತ್ತ ೨೭. 'ಶರಣರೇ ತನ್ನ ಪ್ರಾಣವೆಂಬ ಭಾಷೆಯಿಂದ ಪ್ರಕಾಶಮಾನನಾದ ಬಸವೇಶ್ವರನು, ಶರಣನಾದ ಮೇದರ ಕೇತಯ್ಯನು ಸಾಯಲು ಭೂಮಂಡಲವೆಲ್ಲ ತಿಳಿಯುವಂತೆ ತನ್ನ ಪ್ರಾಣವನ್ನು ಅವನೊಡನೆ ಅರ್ಪಿಸಿ ವಿಜಯವನ್ನು ಸಂಪಾದಿಸಿದನು. ಪರಮೇಶ್ವರನು ಇಂಥವನನ್ನು ನುಂಗಿ ಮಾಡಬಾರದ ಕಾರ್ಯವನ್ನು ಮಾಡಿದನು.' ೨೮. 'ಹೇ ತ್ರಿಪುರ ಸಂಹಾರಿಯೇ, ಜಂಗಮರ ಪಾದಕಮಲ ಪೂಜೆಯಲ್ಲಿ ಆಸಕ್ತರಾದ ಭಕ್ತರನ್ನು ಈ ರೀತಿ ಕಾಲವಲ್ಲದ ಕಾಲದಲ್ಲಿ ನೀನು ಯಾರನ್ನೂ ವಿಚಾರಿಸದೆ ನಿನ್ನಲ್ಲಿ ಅಡಗಿಸಿಕೊಳ್ಳುವುದು ಯೋಗ್ಯಕ್ರಿಯೆಯೇ? ಈ ಕೂಡಲೇ ಮೇದರಕೇತಿ ದೇವನ ಪ್ರಾಣವನ್ನು ಸಾವಕಾಶಮಾಡದೆ ಜಾಗ್ರತೆಯಾಗಿ ಕೊಡು ಕೊಡು. (ಆಗ) ಬಸವಣ್ಣನ ಜೀವವೂ ಅದರೊಡನೊಂದುಗೂಡಿ ಒಲಿದು ಬರುತ್ತದೆ.' ವ॥ ಹೀಗೆಂದು ಶೌರ್ಯದಿಂದ ಕೂಡಿದ ಮಾತನ್ನಾಡಿ ೨೯. ಶಿವನು ಮೃಡಭಕ್ತರ ಪ್ರಾಣಗಳನ್ನು ಕೊಡದೆ ಸಾವಕಾಶ ಮಾಡುತ್ತಿದ್ದಾನೆ. (ಇದಕ್ಕೆ) ನಾನು ಸೈರಿಸುವವನಲ್ಲ. (ಈಗ ನಾನೂ ಕೂಡ) ತಡಮಾಡದೆ ಡಂಗುರವನ್ನು ಹೊಡೆಯಿಸುತ್ತೇನೆ.' ಎಂದು ಆ ಮಡಿವಾಳ ಮಾಚಿದೇವಶರಣನು

ವ॥ ಅಂತುದ್ಘೋಷಿಸಿ —

ಅದಿರೆ ನಭಸ್ಥಳಂ ಕೆದಱೆ ತಾರಗೆ ತುಳ್ಕೆ ಪಯೋಧಿ ಬಳ್ಕೆ ಪೆಂ
ಪೊದವಿದಹೀಂದ್ರನಿಂದ್ರಮುಖದಿಗ್ವರರಳ್ಕೆ ವಿರಿಂಚಿ ವಿಷ್ಣುಗ
ಳ್ಬೆದಱೆ ಗಣೇಂದ್ರರದ್ಭುತರಸಾಸ್ಪದರಾಗೆ ಮೃದುಸ್ಮಿತಾಮೃತಂ
ಪೊದಳೆ ಕಡಂಗುತಣ್ಮೆ ಪೊಡೆದಂ ಮಿಗೆ ಡಂಗುರಮಂ ಗಣಾಧಿಪಂ ೩೦

ತ್ರ್ಯಕ್ಷನ ಸಭೆ ಗಜಬಜಿಸಿದು
ದಾಕ್ಷಣಮಾ ಪ್ರಮಥರುದ್ರಗಣಮುತ್ಸವಿಸಿ
ತ್ತಕ್ಷಯಮಹಿಮನ ಶೌರ್ಯಮ
ನೀಕ್ಷಿಸಿ ಪೊಸತೆಂದು ಪೊಗಳ್ದರಘಹರಭಕ್ತರ್ ೩೧

ನಂಬಿಯನಂಬಿಕಾರಮಣನಂ ಮೆಱೆವಿಂಡನದೊರ್ಮೆ ದಭ್ರಭ
ಕ್ತಾಂಬರನಿಮ್ನಗಾಧರನಂದು ಹಲಾಯುಧನೊರ್ಮೆ ಗಾಢಶೌ
ರ್ಯಂಬಡೆದೆಮ್ಮವರ್ಗೆ ಪೊಱಗೆಂದೆನುತುಂ ಜಡಿದಾರ್ದು ಪೊಯ್ದನಾ
ಡಂಬರವೊಪ್ಪೆ ಡಂಗುರಮನಿಂದಿಳೆ ಸೈವೆಱಗಾಗೆ ಮಾಚಯಂ ೩೨

ಹೊಡೆದಂ ಡಂಗುರವನಿವಂ
ಮೃಡಂಗೆನುತ್ತಲ್ಲಿ ಶರಣತತಿ ಕೊಂಡಾಡು

ಗಟ್ಟಿಯಾಗಿ ಕೂಗಿ, ಗರ್ಜನೆಮಾಡಿದನು. ವ॥ ಹೀಗೆ ಉದ್ಘೋಷಣೆ ಮಾಡುತ್ತ ೩೦. ಪ್ರಮಥಗಣದ ಅಧಿಪತಿಯಾದ ಮಾಚಿದೇವನು–ಆಕಾಶವೇ ಅಲ್ಲಾಡುವಂತೆ, ನಕ್ಷತ್ರವು ಉದುರುವಂತೆ, ಸಮುದ್ರವು ತುಳ್ಕಾಡುವಂತೆ, ಹಿರಿಮೆಯಿಂದ ಕೂಡಿದ ಆದಿಶೇಷನು ಬಳುಕುವಂತೆ, ಇಂದ್ರನೇ ಮೊದಲಾದ ದಿಕ್ಪತಿಗಳು ಭಯಗೊಳ್ಳುವಂತೆ, ಬ್ರಹ್ಮವಿಷ್ಣುಗಳು ಬೆದರುವಂತೆ, ಶಿವಗಣಶ್ರೇಷ್ಠರು ಆಶ್ಚರ್ಯರಸಾವಿಷ್ಟರಾಗುವಹಾಗೆ, ಮೃದುವಾದ ಮುಗುಳುನಗೆಯೆಂಬ ಅಮೃತವು ಅಧಿಕ್ಯಗೊಂಡು ಕೋಪದಿಂದ ಕೂಡಿದ ಶೌರ್ಯದಿಂದ ಚೆನ್ನಾಗಿ ಡಂಗುರವನ್ನು ಹೊಡೆದನು. ೩೧. ಆ ಕೂಡಲೇ ಪರಮೇಶ್ವರನ ಸಭೆಯು ಗಜಿಬಿಜಿಗೊಂಡಿತು; ಪ್ರಮಥರ ರುದ್ರರ ಸಮೂಹವು ಉತ್ಸಾಹಗೊಂಡಿತು; ಪರಮೇಶ್ವರ ಭಕ್ತರು ನಾಶರಹಿತವಾದ ಮಹತ್ವವುಳ್ಳ ಮಾಚಿದೇವನ ಕಾರ್ಯವನ್ನು ನೋಡಿ,'(ಇದು) ಹೊಸರೀತಿ'ಯೆಂದು ಹೊಗಳಿದರು. ೩೨–೩೩ 'ಹಿಂದೊಮ್ಮೆ, ಮೆರೆಮಿಂಡದೇವನು ಅಗಾಧ ಶೌರ್ಯದಿಂದಕೂಡಿ, ನಂಬಿಯಣ್ಣನನ್ನೂ ಪಾರ್ವತೀ ಪತಿಯಾದ ಶಿವನನ್ನೂ, (ಇವರಿಬ್ಬರೂ) ನಮ್ಮ ಭಕ್ತಸಮೂಹಕ್ಕೆ ಹೊರಗು ಎಂದೆನ್ನುತ್ತ ಗದರಿಸಿ ಗರ್ಜಿಸಿ ಆಡಂಬರದಿಂದ ಡಂಗುರವನ್ನು ಹೊಡೆದನು. ಮತ್ತೊಮ್ಮೆ ಹಲಾಯುಧನು ಸಿರಿಯಾಳ ಸೆಟ್ಟಿ ಮತ್ತು ಗಂಗಾಧರನಾದ ಶಿವ ಇವರಿಬ್ಬರನ್ನೂ ಗಾಢವಾದ ಶೌರ್ಯದಿಂದ ನಮ್ಮ ಭಕ್ತ ಸಮೂಹಕ್ಕೆ ಹೊರಗು ಎಂದೆನ್ನುತ್ತ ಗದರಿ ಗರ್ಜಿಸಿ ಶೋಭಿಸುವ ಆಡಂಬರದಿಂದ ಡಂಗುರವನ್ನು ಹೊಡೆದನು. ಈಗ ಭೂಮಿಯೆಲ್ಲ ಬೆರಗಾಗುವಂತೆ ಮಾಚಿದೇವನು

ತ್ತೊಡನೊಪ್ಪಿರೆ ಕೈಲಾಸದೊ
ಳೆಡೆವಿಡದಾ ಪ್ರಮಥರಭವನೊಡನಿಂತೆಂದರ್ ೩೩

ಕುಡು ಕುಡು ಬೇಗವಿೂಗಳೆಲೆ ದೇವ ವೃಷೇಂದ್ರನ ಕೇತಿದೇವನು
ಗ್ಗಡದಸುವಂ ಕಡಂಗಿ ಕುಡದಿರ್ದೊಡೆ ಸೈರಿಪನಲ್ತು ಮಿಕ್ಕು ತ
ಕ್ಕಡರ್ದ ಮಹಾಬಳಂ ಪ್ರಮಥರಾಳ್ಕಲಿದೇವನ ಭದ್ರಸಿಂಧುರಂ
ಪೊಡವಿಯ ರುದ್ರಮೂರ್ತಿ ಭವದೀಯಮತಾಂಬುಜಭಾನು ಮಾಚಯಂ ೩೪

ಅಲ್ಲಿಯ ಭಕ್ತಾಳಿಗೆ ಮೇ
ಣಿಲ್ಲಿಯ ಶರಣರ್ಗೆ ದೇವ ಪೊಜಗಾಗಿರೆ ಮ
ತ್ತೆಲ್ಲಿಯದೊ ನಿನಗೆ ಪುಗಲೆಡ
ಯೆಲ್ಲಿಯದತಿ ಮಹಿಮೆ ಬೇಗ ಕಳುಪಿವರಸುವಂ ೩೫

ಫಳಮಿಲ್ಲದ ಕೊಳನಿಲ್ಲದ
ಜಳಮಿಲ್ಲದ ಬಸವನಿಲ್ಲದಗಮುಂ ಬನಮುಂ
ವಿಳಸಿತ ತಟಾಕಮುಂ ಭೂ
ವಳಯಮುಮೇಂ ದೇವ ಪೇಳ್ ಮನಂಗೊಳಿಸುಗುಮೇ ೩೬

ರವಿರುಚಿಯಿಂ ಶಶಿಕರದಿಂ
ಭುವನಜಮುಂ ಕುಮುದಮುಂ ಪೊದಳ್ದಲರ್ವವೊಲು
ತ್ಸವಮೆಸಪ ಭಕ್ತಿಯಲರ್ವುದು
ಕುವಲಯಸಖಮೌಳಿ ಬಸವನಿಂ ಭೂತಳದೊಳ್ ೩೭

ಈ ಡಂಗುರವನ್ನು ಶಿವನಿಗೆ ಹೊಡೆದನು,' ಎನ್ನುತ್ತ ಅಲ್ಲಿನ ಶರಣಸಮೂಹವೆಲ್ಲ ಕೂಡಿ ಕೊಂಡಾಡುತ್ತ ಶೋಭಿಸುತ್ತಿರಲು ಆ ಕೈಲಾಸದಲ್ಲಿರುವ ಶಿವನ ಪ್ರಮಥಗಣದವರೆಲ್ಲ ತಡಮಾಡದೆ ಶಿವನೊಡನೆ ಹೀಗೆ ಹೇಳಿದರು. ೩೪. 'ಎಲೈ ಪರಮೇಶ್ವರನೇ, ಬಸವಣ್ಣನ ಮತ್ತು ಕೇತಿದೇವನ ಉತ್ಕೃಷ್ಟವಾದ ಪ್ರಾಣವನ್ನು ಈಗಲೇ ಶೀಘ್ರವಾಗಿ ಕೊಡು! ಕೊಡು!! ನೀನು ಕೋಪದಿಂದ ಕೊಡದೆಹೋದರೆ, ವಿಶೇಷವಾಗಿ ಪ್ರಮಥರಲ್ಲಿ ಕೂಡಿಕೊಂಡು ಅಧಿಕ ಬಲಶಾಲಿಯಾಗಿರುವ ಕಲಿದೇವನ (ಪರಮೇಶ್ವರನ) ಮಂಗಳಕರ ಆನೆಯಂತಿರುವವನೂ, ಭೂಮಿಯ ರುದ್ರಮೂರ್ತಿಯೂ, ನಿನ್ನ ವೀರಶೈವಮತವೆಂಬ ಕಮಲಕ್ಕೆ ಸೂರ್ಯನೂ ಆದ ಮಡಿವಳ ಮಾಚಿದೇವನು ಸೈರಿಸುವವನಲ್ಲ.' ೩೫. 'ದೇವ, ಅಲ್ಲಿಯ ಭಕ್ತಸಮೂಹಕ್ಕೆ ಮತ್ತು ಇಲ್ಲಿಯ ಶರಣರಿಗೆ ನೀನು ಹೊರಗಾಗಿದ್ದರೆ, ನಿನಗೆ ಹೊಗುವುದಕ್ಕೆ ಸ್ಥಾನವೆಲ್ಲಿಯದು ? ಮಹಿಮೆಯೆಲ್ಲಿಯದು ? ಬೇಗನೆ ಇವರಿಬ್ಬರ ಪ್ರಾಣವನ್ನು ಕಳಿಸು.' ೩೬. 'ಪರಮೇಶ್ವರನೇ, ಫಲವಿಲ್ಲದ ವೃಕ್ಷವೂ, ಸರೋವರ ವಿಲ್ಲದ ನಂದನವನವೂ, ನೀರಿಲ್ಲದ ಶೋಭಿಸುವ ಕೆರೆಯೂ, ಬಸವಣ್ಣನಿಲ್ಲದ ಭೂಭಾಗವೂ ಮನೋಹರವಾಗಿರುವುದೇ ಹೇಳು?' ೩೭. 'ಕನ್ನೈದಿಲೆಗೆ ಸಖನಾದ ಚಂದ್ರನನ್ನು ಶಿರದಲ್ಲಿ ಧರಿಸಿರುವ ಹೇ ಶಿವನೇ, ಸೂರ್ಯನಕಿರಣಗಳಿಂದ ಕಮಲವೂ, ಚಂದ್ರಕಿರಣಗಳಿಂದ ಕನ್ನೈದಿಲೆಯೂ ಶೋಭೆಗೊಂಡು ಅರಳುವಹಾಗೆ ಉತ್ಸಾಹದಿಂದ ಶೋಭಿಸುವ

ಸಿತಿಕಂಠ ನಿಮ್ಮ ಜಂಗಮು
ತತಿಗೀಪ್ಸಿತ ವಸ್ತುವಿತ್ತು ಪೂಜಿಪರಾರ್ಸ
ನ್ನುತ ಬಸವನಿಲ್ಲದಿರೆ ವಸು
ಮತಿಯೊಳ್ಸರ್ವಜ್ಞದೇವ ನೀನಱಿಯದುದೇ ೩೮

ಪುರಹರ ಕಳುಪೀಗಳೆ ಮೇ
ದರ ಕೇತಯ್ಯಂಗಳೊಡನೆ ಬಸವನನಖಿಳೋ
ರ್ವರೆಯೊಳ್ಭಕ್ತಿಯ ಸೊಬಗಂ
ಪರಿಪೂರ್ಣಂಗೆಯ್ವುದೆಂದವರ್ನುಡಿಯಲೊಡಂ ೩೯

ಆಲಿಸಿ ಶಂಕರಂ ನಗುತೆ ತತ್ಪ್ರಮಥರ್ಕಳ ಮುಂದೆ ನಣ್ಪಿನಿಂ
ಲಾಲಿಸುತಃಂ ವೃಷಾಧಿಪನಮೇದರಕೇತಯನಂ ಕಡಂಗಿ ಸ
ಲ್ಲೀಲೆಯೊಳೆಯ್ದಿಮಿನ್ನಿಳೆಗೆ ನೀವೆನೆ ಕೇಳ್ದು ಬಿಗುರ್ತು ಭಕ್ತಿಯಿಂ
ಶೂಲಿಗಮಾ ಗಣಾವಳಿಗೆ ವಂದಿಸಿ ಕೆಯ್ಮುಗಿವುತ್ತೆ ಸಾದರಂ ೪೦

ಗಣತತಿ ಬಿನ್ನಪಂ ಮಹಿಯ ಭೋಗಮನೆಲ್ಲಮನೊಲ್ದು ಬಲ್ಲೆವಾ
ವಣೆಯುರಮಲ್ಲಿಗೆಯ್ದೆವು ಭವತ್ಪದಪದ್ಮದಗಲ್ಕೆಗಾಱೆವೆಂ
ದೆಣೆವಡೆದಿರ್ವರುಃಂ ನುಡಿಯೆ ಕೇಳ್ದು ಪುರಾಂತಕನೆಂದನಾ ಗಣಾ
ಗ್ರಣಿಯೆನಿಸಿರ್ದ ತದ್ಬಸವನಾನಮಂ ನಡೆನೋಡಿ ನಣ್ಪಿನಿಂ ೪೧

ದಾಸೋಹಂಭಾವಮನುಳಿ
ದಾ ಸೋಹಂಭಾವದೆಡೆಗೆ ಮನಮಿಕ್ಕಿದೆ ನೀಂ

ಭಕ್ತಿಯು ಬಸವಣ್ಣನಿಂದ ಭೂಭಾಗದಲ್ಲಿ ಅರಳುವುದು.' ೩೮. 'ಎಲೈ ನೀಲಕಂಠನೇ, ಭೂಮಿಯಲ್ಲಿ ಶ್ಲಾಘ್ಯವಾದ ಬಸವಣ್ಣನಿಲ್ಲದಿದ್ದರೆ, ನಿಮ್ಮ ಜಂಗಮಸಮೂಹಕ್ಕೆ ಇಷ್ಟಾರ್ಥಗಳನ್ನು ಕೊಟ್ಟು ಪೂಜಿಸುವವರಾರು ? ಸರ್ವವನ್ನೂ ಅರಿತಿರುವ ಎಲೈ ಸ್ವಾಮಿಯೇ, ನೀನು ತಿಳಿಯದೆ ಇರುವುದೇ ಇದು.' ೩೯—೪೦. 'ಪುರಹರನೇ, ಮೇದರಕೇತಯ್ಯನನ್ನೂ ಅದರೊಡನೆಯೇ ಬಸವಣ್ಣನನ್ನೂ ಈಗಲೇ ಕಳಿಸಿಕೊಟ್ಟು ಸಮಸ್ತ ಭೂಭಾಗದಲ್ಲಿ ಭಕ್ತಿಯ ಸೊಗಸನ್ನು ಸಂಪೂರ್ಣ ಗೊಳಿಸುವುದು' ಎಂದು ಪ್ರಮಥರು ನುಡಿದ ಕೂಡಲೇ, ಶಂಕರನು ನಗುತ್ತ ಆ ಪ್ರಮಥರೆಲ್ಲರ ಎದುರಿಗೆ (ಅವರಾಡಿದುದನ್ನೆಲ್ಲ) ಪ್ರೀತಿಯಿಂದ ಕೇಳುತ್ತ ಬಸವೇಶ್ವರ ನನ್ನು, ಮೇದರ ಕೇತಯ್ಯನನ್ನು ಕುರಿತು ಉತ್ಸಾಹದಿಂದ 'ನೀವಿನ್ನು ಭೂಮಿಗೆ ಸಂತೋಷದಿಂದ ಹೋಗಿರಿ,' ಎನ್ನಲಾಗಿ (ಅವರು) ಭಯಪಟ್ಟು ಭಕ್ತಿಯಿಂದ ಶಿವನಿಗೂ ಶಿವನ ಆ ಪ್ರಮಥಗಣಗಳಿಗೂ ನಮಸ್ಕಾರ ಮಾಡಿ ಆದರ ಪೂರ್ವಕವಾಗಿ ಕೈಮುಗಿಯುತ್ತ, ೪೧–೪೨. 'ಹೇ ಪ್ರಮಥ ಸಮೂಹವೇ, ಪ್ರೀತಿಯಿಂದ ಕೂಡಿದ ನಮ್ಮ ಬಿನ್ನಹಗಳು: ನಾವು ಭೂಮಿಯ ಸಮಸ್ತ ಭೋಗದ ಅತಿಶಯವನ್ನು ಬಲ್ಲೆವು. ಅಲ್ಲಿಗೆ ನಾವು (ಪುನಃ) ಹೋಗುವುದಿಲ್ಲ. ನಿನ್ನ ಪಾದ ಪದ್ಮದ ವಿಯೋಗಕ್ಕೆ ನಾವು ಸಮರ್ಥರಲ್ಲ' ಎಂದು ಇಬ್ಬರೂ ಒಂದೇ ಸಮನಾಗಿ ನುಡಿಯಲಾಗಿ, ಶಿವನು ಕೇಳಿ, ಆ ಪ್ರಮಥಗಣಶ್ರೇಷ್ಠ

ಲೇಸನೊಡರ್ಚಿದೆ ಭಲರೆ ಮ
ಹಾಸಾಹಸಿ ಬಸವಭಕ್ತಿಯಿಂತಿರವೇಡಾ ೪೨

ವಿಪುಳ ಗುರುಲಿಂಗಜಂಗಮ
ಸಪರ್ಯೆಯಿಂ ತೋಱಿ ಬೀಱಿ ಭಕ್ತಿಯನೆಲ್ಲ
ರ್ಗುಪದೇಶಿಸಿ ಬರ್ಪುದನುಳಿ
ದುಪಾಯದಿಂದಿತ್ತಲಿರ್ಪೆನೆಂಬುದು ಮತವೇ ೪೩

ವ॥ ಅಂತುಮಲ್ಲದೆಯುಂ—

ಅಳಿ ಮಕರಂದಮಂ ಗಿಳಿ ಲಸತ್ಫಳಮಂ ಪೊಸಮಾವು ಚೈತ್ರನಂ
ಜಳರುಹಮರ್ಕನಂ ಕುವಲಯಂ ಶಶಿಯಂ ನವಿಲಂಬುವಾಹಮಂ
ಬೆಳೆ ಘನವೃಷ್ಟಿಯಂ ಬಯಸುವಂತೆ ಧರಿತ್ರಿಯೊಳೆನ್ನ ಭಕ್ತಸಂ
ಕುಳಮೊಲೆ ನಿನ್ನನೇ ಬಯಸುತಿರ್ಪುದಲ್ತೆ ವೃಷಾಧಿನಾಯಕಾ ೪೪

ಈ ಲೋಕಮುಮಾ[1]ಲೋಕಮು
ಮಾಲೋಕಿಪೊಡೊಂದೆ ಬಸವ ಮದ್ಭಕ್ತಿಯುತ
ರ್ಗಾಲಾಪಿಪುದೇಂ ಭೇದಕ
ಥಾಲವಮುಂ ತೋಱದೆಂದುಮೆನಗಂ ನಿನಗಂ ೪೫

ನೆಂದಿಸಿದ್ದ ಬಸವೇಶ್ವರನ ಮುಖವನ್ನು ದಿಟ್ಟಿಸಿ ನೋಡಿ ಪ್ರೀತಿಯಿಂದ 'ಮಹಾಸಾಹಸಿಯಾದ ಬಸವಣ್ಣ, ದಾಸೋಹಂಭಾವವನ್ನು ಬಿಟ್ಟು ನೀನು ಆ ಪರ ಬ್ರಹ್ಮನೇ ನಾನೆಂಬ (ಸೋಹಂ) ನಂಬಿಕೆಯ ಸ್ಥಾನಕ್ಕೆ ಮನಸ್ಸು ಮಾಡಿದೆ. ಒಳ್ಳೆಯದನ್ನೇ ಬಯಸಿದ್ದೀಯೆ. ಭಲೇ! ಭಕ್ತಿಯೆಂಬುದು ಹೀಗಿರಬೇಡವೇ!' ೪೩. 'ವಿಶೇಷವಾದ ಗುರುಲಿಂಗ ಜಂಗಮರೆಂಬುವರ ಪೂಜೆಯಿಂದ ಭಕ್ತಿಯನ್ನು ಹರಡಿ ತೋರಿಸಿಕೊಟ್ಟು, ಎಲ್ಲರಿಗೂ ಉಪದೇಶ ಮಾಡಿ, ಉಪಾಯದಿಂದ (ಇಲ್ಲಿಗೆ) ಬರುವುದನ್ನು ಬಿಟ್ಟು, ಇಲ್ಲಿಯೇ ಇರುತ್ತೇನೆನ್ನುವುದು ಯೋಗ್ಯವೇ ?' ವ॥ ಅದೂ ಅಲ್ಲದೆ ೪೪. 'ಎಲೈ ವೃಷಾಧಿನಾಯಕನೇ, ದುಂಬಿಯು ಮಕರಂದವನ್ನೂ, ಗಿಳಿಯು ಶ್ರೇಷ್ಠವಾದ ಹಣ್ಣನ್ನೂ, ಹೊಸ ಮಾವು ವಸಂತ ಋತುವನ್ನೂ, ಕಮಲವು ಸೂರ್ಯನನ್ನೂ, ಕನ್ನೈದಿಲೆಯು ಚಂದ್ರನನ್ನೂ, ನವಿಲು ಮೇಘವನ್ನೂ, ಬೆಳೆಯು (ಪೈರು) ದೊಡ್ಡ ಮಳೆಯನ್ನೂ, ಬಯಸುವ ಹಾಗೆ ಭೂಮಂಡಲದಲ್ಲಿ ನನ್ನ ಭಕ್ತರುಗಳು ನಿನ್ನನ್ನೇ ಬಯಸುತ್ತಿರುವರಲ್ಲವೇ ?' ೪೫. 'ಬಸವಣ್ಣ ನನ್ನಲ್ಲಿ ಭಕ್ತಿಯುಳ್ಳವರಿಗೆ ವಿಚಾರ ಮಾಡಿನೋಡಿದರೆ ಈ ಲೋಕವೂ ಆ ಲೋಕವೂ ಒಂದೇ; ಹೇಳುವುದಿನ್ನೇನು ? ನನಗೂ ನಿನಗೂ

1 ಮೂ(ಚ)

ಎನ್ನ ನಿರೂಪಮಂ ತಳೆದು ಪೋದೆ ಗಡಂದು ವೃಷೇಂದ್ರ ಭೂತಳ
ಕ್ಕಿನ್ನುಮೊಱಲ್ದು ಪೋಗಿ ಗುರುಲಿಂಗಚರೋತ್ತಮಭಕ್ತಿಯಂದಮಂ
ಚನ್ನಲರ್ವಂತೆ ನೀಂ ಪಸರಿಸುತ್ತಿಳೆಯೊಳ್ ಬಗೆದಿಲ್ಲಿಗೆಯ್ದೆನು
ತ್ತನ್ನಗಜಾಧಿಪಂ ಬೆಸಸೆ ತತ್ಪದಕೊಲ್ದೆಱಗುತ್ತೆ ಭಕ್ತಿಯಿಂ ೪೬

ಪ್ರಮಥಗಣಪದಸರೋಜ
ಕ್ಕಮರ್ದೆಱಗುತ್ತೊಲ್ದು ಕೇತಿದೇವಸಮೇತಂ
ವಿಮಳಮತಿ ತನ್ನಿರೂಪ
ಕ್ರಮಮಂ ಪದೆದಿಳೆಗೆ ಬಸವರಾಜಂ ಬಂದಂ ೪೭

ವ॥ ಅಂತು ಕೇತಿದೇವಸಮೇತಂ ಕಲ್ಯಾಣಕಟಕಕ್ಕೆೞ್ತಂದು ಚೈತನ್ಯಂಬಡೆದೆೞ್ದು ಶರಣಗಣದೊಡನೊಡ್ಡೋಲಗಂಗೊಟ್ಟಿರ್ದ ಮಾಚಿದೇವಂಗಮಾ ಗಣಸಭೆಗಂ ಸಾಷ್ಟಾಂಗಮೆಱಗಿದಾಗಳ್ ಮಾಚಿದೇವನುತ್ಸವಿಸುತೆೞ್ದು ತಾನುಮಾ ಗಣಸಭೆಗೆ ಸಾಷ್ಟಾಂಗ ಪ್ರಣಾಮಂಗೆಯ್ದು ಕರಾರವಿಂದಂಗಳಂ ಮುಗಿದು—

ಬಂದಂ ನಿಮ್ಮಡಿಯೊಲ್ಮೆಯ
ಕಂದಂ ನಿಜಭಕ್ತಿಮಲ್ಲಿಕಾವೇಷ್ಟಿತಮಾ
ಕಂದಂ ಶಿವಗಣವಿತತಾ
ನಂದಂ ಬಸವಂ ಶಿವಾಂಘ್ರಿನಳಿನಮರಂದಂ ೪೮

ಯಾವಾಗಲೂ ಭಿನ್ನತೆಯನ್ನು ಹೇಳುವಿಕೆಯೇ ತೋರುವುದಿಲ್ಲ'. ೪೬–೪೭. 'ಬಸವಣ್ಣ, ಅಂದು (ಹಿಂದೆ) ಭೂಭಾಗಕ್ಕೆ ನನ್ನ ಅಪ್ಪಣೆಯನ್ನು ಧರಿಸಿ, ಹೋದೆಯಲ್ಲವೇ! ಈಗಲೂ ಪ್ರೀತಿಯಿಂದ ಹೋಗಿ, ಗುರುಲಿಂಗ ಜಂಗಮರ ಶ್ರೇಷ್ಠವಾದ ಭಕ್ತಿಯ ಅಂದವನ್ನು ಮನೋಹರವಾಗಿ ಅರಳುವ ಹಾಗೆ ಭೂಮಿಯಲ್ಲಿ ನೀನು ಹರಡಿ, (ಅನಂತರ) ಇಚ್ಛೆಪಟ್ಟು ಇಲ್ಲಿಗೆ ಬಾ' ಹೀಗೆಂದು ಪರಮೇಶ್ವರನು ಅಪ್ಪಣೆ ಮಾಡಲಾಗಿ, ಆ ಪರಮೇಶ್ವರನ ಪಾದಕ್ಕೆ ಭಕ್ತಿಯಿಂದ ನಮಸ್ಕಾರ ಮಾಡಿ, ಆ ಪರಿಶುದ್ಧ ಬುದ್ಧಿಯುಳ್ಳ ಬಸವಣ್ಣನು ಕೇತಿದೇವ ಸಮೇತನಾಗಿ ಪ್ರೀತಿಯಿಂದ ಶಿವಲೋಕದ ಆ ಪ್ರಮಥ ಗಣ ಸಮೂಹಕ್ಕೆ ನಮಸ್ಕರಿಸುತ್ತ ಆ ಪರಶಿವನ ಆಜ್ಞೆಯನ್ನು ಹೊಂದಿದವನಾಗಿ ಭೂಮಿಗೆ ಬಂದನು. ವ॥ ಈ ರೀತಿ ಬಸವಣ್ಣನು ಕೇತಿದೇವ ಸಮೇತನಾಗಿ ಕಲ್ಯಾಣ ಪಟ್ಟಣಕ್ಕೆ ಬಂದು, (ದೇಹದಲ್ಲಿ) ಪ್ರಾಣದುಂಬಿ ಎದ್ದು, ಶರಣ ಸಮೂಹದೊಡನೆ ಒಡ್ಡೋಲಗವನ್ನು ಕೊಟ್ಟಿದ್ದ ಮಾಚಿದೇವನಿಗೂ, ಶರಣರ ಸಭೆಗೂ, ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದಾಗ ಮಾಚಿದೇವನು ಉತ್ಸಾಹಗೊಂಡೆದ್ದು, ತಾನೂ ಕೂಡ ಆ ಪ್ರಮಥ ಗಣ ಸಭೆಗೆ ನಮಸ್ಕರಿಸಿ ಕರಕಮಲಗಳನ್ನು ಮುಗಿದು ನಿಂತು—೪೮. 'ನಿಮ್ಮೆಲ್ಲರ ಪಾದಗಳ ಪ್ರೀತಿಯ ಶಿಶುವಾದವನೂ, ದೃಢವಾದ ಭಕ್ತಿಯೆಂಬ ಮಲ್ಲಿಗೆಯ ಬಳ್ಳಿಯಿಂದ ಸುತ್ತಲ್ಪಟ್ಟ ಮಾವಿನ ಮರದಂತಿರುವವನೂ, ಪ್ರಮಥ ಸಮೂಹದ ವಿಶೇಷವಾದ ಆನಂದ ರೂಪನೂ, ಪರಶಿವನ ಪಾದ ಕಮಲಕ್ಕೆ ಮಕರಂದಪ್ರಾಯನಾದ

ಶರಣವರೇಣ್ಯರೆ ನಿಮ್ಮಯ
ಚರಣಾಂಬುಜಭೃತ್ಯರಿರ್ವರುಂ ಬಂದರಿವಂ
ದಿರ ಕರದಿಂ ಸೇವೆಯನಾ
ದರದಿಂ ಕೆಯ್ಕೊಂಡು ಸುಖದಿನಿನ್ನಿರವೇಳ್ಕುಂ ೪೯

ಭವದೀಯ ಕೃಪಾಶರಧಿಯೊ
ಳವಗಾಹಂಗೆಯ್ಸುತಿವರನೆನಗೊಳ್ಪಿಂದೊ
ಪ್ಪುವ ನಿಮ್ಮ ಸುಪ್ರಸಾದಮ
ನವಿರತಮೊವುತ್ತೆ ಕೂರ್ತು ಪೊರೆಯಲ್ವೇಳ್ಕುಂ ೫೦

ವ॥ ಎಂದು ಮಗುಳ್ದುಂ ಮಾಚಿದೇವಂ ಸಾಷ್ಟಾಂಗವೆಱಗೆ ಭಕ್ತತತಿಯುಂ ಜಂಗಮ ನಿಕರ ಮುಮಾನಂದಂ ಮಿಗೆ ತೆಗೆದು ಬಿಗಿಯಪ್ಪಿ ಮನ್ನಿಸಿ—

ಅರರೆ ಗಣಾಗ್ರಗಣ್ಯ ಭವದೀಯ ಮಹತ್ವಮನಿಂತುಟೆಂದು ಬಿ
ತ್ತರಿಸಲದಾರ್ಗೆ ಗೋಚರಿಪುದೀ ನರರುಂ ಸುರರುಂ ಭಯಾರ್ತಿವ
ಟ್ಟಿರೆ ಧರೆಯುಂ ನಭಸ್ಸ್ಥಳಮುಮದ್ಭುತ ಕಂಪಮನಾಳೆ ಪೊಯ್ದ್ದ ಡಂ
ಗುರಮನನಂಗಮರ್ದನನಮೇಲೆ ಮಹೀತಳಭಾಳಲೋಚನಾ ೫೧

ಮದಕರಿಯ ಕರದ ಕರ್ಬಂ
ಪದಪಿಂ ಸೆಳೆವಂತೆ ಸೆಳೆದೆ ಹರನೊಳಕೊಂಡ

ಬಸವಣ್ಣನು ಬಂದನು'. ೪೯. 'ಶರಣವರೇಣ್ಯರೇ, ನಿಮ್ಮ ಚರಣ ಕಮಲಗಳ ಭೃತ್ಯರಾದ ಇಬ್ಬರೂ (ಬಸವಣ್ಣ–ಕೇತಯ್ಯಗಳಿಬ್ಬರೂ) ಬಂದರು. ಇವರ ಕೈಯಿಂದ ಸೇವೆಯನ್ನು ಆದರ ಪೂರ್ವಕವಾಗಿ ಸ್ವೀಕರಿಸಿ ಇನ್ನು ಸುಖವಾಗಿ ಇರುವವರಾಗಿರಿ'. ೫೦. 'ಇವರನ್ನು ನಿಮ್ಮ ಕೃಪಾ ಸಮುದ್ರದಲ್ಲಿ ಮುಳುಗಿಸುತ್ತ, ನನಗೆ ಶ್ರೇಷ್ಠವಾಗಿ ಒಪ್ಪುವ ನಿಮ್ಮ ಒಳ್ಳೆಯ ಪ್ರಸಾದವನ್ನು ಸತತವೂ ಕೊಡುತ್ತ ಪ್ರೀತಿಯಿಂದ ರಕ್ಷಿಸ ಬೇಕು'. ವ॥ ಹೀಗೆಂದು ಹೇಳುತ್ತ ಪುನಃ ಮಾಚಿದೇವನು (ಪ್ರಮಥ ಸಮೂಹಕ್ಕೆ) ಸಾಷ್ಟಾಂಗ ನಮಸ್ಕಾರ ಮಾಡಲು, ಭಕ್ತರುಗಳ ಸಮೂಹವೂ, ಜಂಗಮರ ಗುಂಪೂ, ಪರಮಾನಂದ ಆಧಿಕ್ಯದಿಂದ ಅವನನ್ನು ಬರಸೆಳೆದು ಬಿಗಿದು ಅಪ್ಪಿಕೊಂಡು, ಮನ್ನಣೆ ಮಾಡಿ—೫೧. 'ಅರರೇ, ಗಣ ಸಮೂಹಕ್ಕೆ ಅಗ್ರಗಣ್ಯನೆನಿಸಿದ ಮಾಚಿದೇವನೇ, ನಿನ್ನ ಮಹತ್ವವನ್ನು ಇಷ್ಟೇ ಎಂದು ವರ್ಣಿಸುವುದಕ್ಕೆ ಯಾರಿಗೆ ತಿಳಿದೀತು ? ಭೂ ಭಾಗದ ಪರಮೇಶ್ವರನೇ, ಈ ನರರೂ, ಸುರರೂ, ಭಯದಿಂದ ಪೀಡಿತರಾಗಿರಲು, ಭೂಮಿಯೂ ಆಕಾಶವೂ ಅದ್ಭುತವಾದ ಕಂಪನದಿಂದ ಕೂಡಿರಲು, ಮನ್ಮಥ ಧ್ವಂಸಿ ಯಾದ ಶಿವನ ಮೇಲೆ ಡಂಗುರವನ್ನು ಹೊಡೆದುಬಿಟ್ಟೆ'. ೫೨. 'ಉನ್ನತವಾದ ಪ್ರಬಲ ಸಾಮರ್ಥ್ಯ ಪ್ರತಾಪಗಳೇ ಆಭರಣವಾಗಿ ಉಳ್ಳ ಮಾಚಿದೇವನೇ, ಮದೋನ್ಮತ್ತ

ಗ್ಗ[1]ದ ಶರಣರಸುವನಸವಸ
ಮುದಿತಪ್ರಬಳಪ್ರತಾಪವುಹಿಮಾಭರಣಾ ೫೨

ಮೂದಲಿಸಿ ಹರನನಧಟಿಂ
ನಾದಂಬೊಯ್ದಳಿದ ಭಕ್ತರಸುವಂ ಪಡೆದೈ
ಮೇದಿನಿಯೊಳಮಮ ಘನಮಹಿ
ಮೋದಧಿ ನಿನ್ನಳವನಾರೊ ಬಣ್ಣಿಸಲಾರ್ಪರ್ ೫೩

ಆಲೋಕದೊಳೀ ಲೋಕದೊ
ಳಾಲೋಕಿಪೊಡರರೆ ನೀನೆ ಪೆಸರ್ವೆತ್ತೈ ಸ
ತ್ಯಾಲಾಪ ಬಸವನಸುವಂ
ಲೀಲೆಯಿನೀ ತೆಱದೆ ಸೆಳೆದು ತಂದಿತ್ತುದಱಿಂ ೫೪

ಚರಲಿಂಗಕೆ ಹರಣಂ ಬಸ
ವರಸಂ ಬಸವಂಗಮೆಮಗಮಸು ನೀಂ ಗಡ ಮಾ
ಚರಸಾರ್ಯ ಭಕ್ತವದನಾಂ
ಬುರುಹಾಬಳಸೂರ್ಯ ಸೂರಿಜನನುತಶೌರ್ಯಾ ೫೫

ಎಂದಭಿವಂದಿಸುತ್ತೆ ಗಣಸಂತತಿ ಸಂಭ್ರಮಮಾಳ್ದು ನೇತ್ರದಾ
ನಂದಜಲಂ ಪೊನಲ್ವರಿಯೆ ಕೀರ್ತಿಸುತೊಪ್ಪಿರೆ ತದ್ಗಣಾಳಿಗೋ

ವಾದ ಆನೆಯು ಸೊಂಡಿಲಿನಲ್ಲಿರುವ ಕಬ್ಬನ್ನು ಪ್ರೀತಿಯಿಂದ ಸೆಳೆದ ಹಾಗೆ ಹರನೊಡನೆ ಅಂತರ್ಭಾವಗೊಂಡ ಶರಣನ ಪ್ರಾಣವನ್ನು (ನೀನು) ಜಾಗ್ರತೆಯಾಗಿ ಸೆಳೆದೆ.' ೫೩. 'ಘನವಾದ ಮಹಿಮೆಗೆ ಸಮುದ್ರನೆನಿಸಿದ ಮಾಚಿದೇವನೇ, ಹರನನ್ನು ಪರಾಕ್ರಮದಿಂದ ಮೂದಲಿಸಿ, ಡಂಗೂರವನ್ನು ಹೊಡೆದು, ಅಳಿದು ಹೋದ ಭಕ್ತರುಗಳ ಪ್ರಾಣವನ್ನು ಈ ಭೂಮಿಯಲ್ಲಿ ನೀನು ಪಡೆದೆ ಅಮಮ! ನಿನ್ನ ಸಾಮರ್ಥ್ಯವನ್ನು ಬಣ್ಣಿಸುವುದಕ್ಕೆ ಸಮರ್ಥರು ಯಾರೋ!' ೫೪. 'ಎಲೈ ಸತ್ಯ ವಾಕ್ಯವುಳ್ಳವನೇ, ಈ ಭೂಲೋಕದಲ್ಲಿ, ಆ ಕೈಲಾಸದಲ್ಲಿ ವಿಚಾರ ಮಾಡಿ ನೋಡಿದರೆ ಬಸವನ ಪ್ರಾಣವನ್ನು ಲೀಲೆಯಿಂದ ಈ ರೀತಿಯಲ್ಲಿ ಸೆಳೆದು ತಂದು ಕೊಟ್ಟುದರಿಂದ, ಅರರೇ! ನೀನೇ ಖ್ಯಾತಿಯನ್ನು ಹೊಂದಿದವನಾದೆ'. ೫೫. 'ಭಕ್ತರ ಮುಖವೆಂಬ ಕಮಲಗಳಿಗೆ ಸೂರ್ಯನಾಗಿಯೂ ವಿದ್ವಜ್ಜನರಿಂದ ಸ್ತೋತ್ರ ಮಾಡಲ್ಪಡುವ ಪರಾಕ್ರಮವುಳ್ಳವನೂ ಆದ ಮಾಚರಸಾರ್ಯನೇ, ಜಂಗಮಲಿಂಗಕ್ಕೆ ಬಸವಣ್ಣನೇ ಪ್ರಾಣ; ನೀನು ಬಸವಣ್ಣನಿಗೂ ನಮಗೂ ಪ್ರಾಣ; ಅಲ್ಲವೆ?' ೫೬. ಹೀಗೆಂದು ಶಿವಗಣ ಸಮೂಹವು ಅಭಿನಂದಿಸುತ್ತ ಸಂಭ್ರಮಗೊಂಡವರಾಗಿ, ನೇತ್ರದಿಂದ ಸಂತೋಷ ಬಾಷ್ಪಗಳು ಪ್ರವಾಹ ರೂಪವಾಗಿ ಹರಿಯುತ್ತಿರಲು, ಸ್ತೋತ್ರ ಮಾಡುತ್ತ ಒಪ್ಪಿರಲಾಗಿ, ಮಾಚಿದೇವನು ಆ ಶಿವಗಣ

1. ೧೯(ಚ)

ರಂದದೆ ಮಾಚಿದೇವನೆಜಿಗುತ್ತಿತಿ ಭಕ್ತಿಯೊಳಲ್ಲಿ ತತ್ಕೃಪಾ
ಮಂದಸುಧಾತರಂಗಿಣಿಯೊಳಾಳ್ದೊಡನೊಪ್ಪಿದನುತ್ಸವಾನ್ವಿತಂ ೫೬

ಗಣಸಂದೋಹಕ್ಕಮಾ ಮಾಚಯ್ಯನ ಚರಣಕಂಜಾತಕಂ ಭಕ್ತಿಯಿಂದಂ
ಮಣಿವುತ್ತುಂ ಕೀರ್ತಿಸುತ್ತುಂ ಪಡೆವುತವರ ಕಾರುಣ್ಯಮಂ ಬೀಳ್ಕೊಳುತ್ತುಂ
ಪ್ರಣಯಂ ಕೆಯ್ಗಣ್ಮೆ ಭಕ್ತಪ್ರತತಿ ಸಹಿತ ಕೇತಾರ್ಯನೊಲ್ದೆಯ್ದೆ ಪೊಕ್ಕಂ
ಮಣಿಭಿತ್ತಿದ್ಯೋತಭಾಸ್ವನ್ನಿಜಭವನಮನಾನಂದಸಾಂದ್ರಂ ವೃಷೇಂದ್ರಂ ೫೭

ಸಾರಾಕಾರೇ ಸರಸಹೃದಯೇ ಸರ್ವಲೋಕೈಕಮಾತೇ
ಭೂರಿಶ್ರೀರಾಜಿತಪದಯುಗೇ ಭ್ರೂಲತಾಜ್ಞಪ್ತಭೂತೇ
ಪಾರಾವಾರಾಪ್ರಭವಲಲನಾರಾಧಿತೇ ಸತ್ಪವಿತ್ರೇ
ಮಾರಾರಾತಿಪ್ರಿಯೇ ಪೊರೆ ಸಮಂತನ್ನನದ್ರೀಂದ್ರಜಾತೇ ೫೮

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಬಸವಭಕ್ತಪ್ರಾಣಸಖತ್ವಕಥನಂ
ಪಂಚವಿಂಶಾಶ್ವಾಸಂ ಸಮಾಪ್ತಂ
ಅಂತು ಆಶ್ವಾಸ ೨೫ಕ್ಕೆ ಪದಗಣನೆ ೧೮೪೦ಕ್ಕೆ ಮಂಗಳಮಹಾಶ್ರೀ ॥

ಸಮೂಹಕ್ಕೆ ಕ್ರಮವಾಗಿ ಅತ್ಯಂತ ಭಕ್ತಿಯಿಂದ ನಮಸ್ಕಾರ ಮಾಡುತ್ತ, ಸಂತೋಷ ದಿಂದ ಕೂಡಿದವನಾಗಿ, ಆ ಪ್ರಮಥರುಗಳ ಅತ್ಯಧಿಕ ದಯೆಯೆಂಬ ಅಮೃತದ ನದಿಯಲ್ಲಿ ಮುಳುಗಿ ಅವರೊಡನೆ ಶೋಭಿಸುತ್ತಿದ್ದನು. ೫೭. ವಿಶೇಷವಾದ ಆನಂದ ಭರಿತನಾದ ಬಸವೇಶ್ವರನು ಆ ಪ್ರಮಥಗಣ ಸಮೂಹದ, ಮಾಚಿದೇವನ ಪಾದ ಕಮಲಗಳಿಗೆ ಭಕ್ತಿಯಿಂದ ನಮಸ್ಕರಿಸುತ್ತ, ಸ್ತೋತ್ರ ಮಾಡುತ್ತ ಅವರ ಕಾರುಣ್ಯ ವನ್ನು ಪಡೆಯುತ್ತ, ಬೀಳ್ಕೊಳ್ಳುತ್ತ ಮೇರೆಯಿಕ್ಕಿದ ವಿಶ್ವಾಸದಿಂದ, ಭಕ್ತರ ಸಮೂಹವೂ, ಮೇದರಕೇತಿದೇವನೂ ಪ್ರೀತಿಯಿಂದ ಹಿಂಬಾಲಿಸಿ ಬರುತ್ತಿರಲಾಗಿ, ತನ್ನ ರತ್ನನಿರ್ಮಿತ ಗೋಡೆಗಳ ಕಾಂತಿಯಿಂದ ಪ್ರಕಾಶಮಾನವಾದ ಮನೆಯನ್ನು ಹೊಕ್ಕನು. ೫೮. ಸಾರವತ್ತಾದ ಆಕಾರವುಳ್ಳವಳೇ, ಸದ್ಗುಣಪೂರ್ಣವಾದ ಹೃದಯ ವುಳ್ಳವಳೇ, ಸಮಸ್ತ ಲೋಕಗಳ ಏಕೈಕ ಮಾತೆಯೇ, ಹೆಚ್ಚಾದ ಶೋಭೆಯಿಂದ ವಿರಾಜಿಸುವ ಪಾದಗಳುಳ್ಳವಳೇ, ಲತೆಗಳಂತಿರುವ ಹುಬ್ಬಿನ ಹಾರಿಸುವಿಕೆಯಿಂದ ಪಂಚಭೂತಗಳಿಗೆ ಅಪ್ಪಣೆ ಮಾಡುವವಳೇ, ಸಮುದ್ರದಿಂದ ಹುಟ್ಟಿದ ಲಲನೆಯಾದ ಲಕ್ಷ್ಮಿಯಿಂದ ಆರಾಧಿಸಲ್ಪಡುವವಳೇ, ಒಳ್ಳೆಯ ಪವಿತ್ರಳೇ, ಮನ್ಮಥ ವೈರಿಯಾದ ಶಿವನ ವಲ್ಲಭೆಯೇ, ಪರ್ವತೇಶ್ವರನ ಪುತ್ರಿಯೇ—ನನ್ನನ್ನು ಪ್ರೀತಿಯಿಂದ ರಕ್ಷಿಸು.

ಇಪ್ಪತ್ತೈದನೆಯ ಆಶ್ವಾಸವು ಸಮಾಪ್ತವಾಯಿತು.

# ಷಡ್ತ್ರಿಂಶಾಶ್ವಾಸಂ

## [ದಸರಯ್ಯನ ಕಥೆ]

ಶ್ರೀಮದುಮಾಕಬರೀಸುಮ
ದಾಮರಜೋರಾಜಿರಂಜಿವಾಮಾಂಸಕನು
ದ್ದಾಮಗುಣಧಾಮನಘಹರ
ನಾಮಂ ಪೊರೆಗೆಮ್ಮನಾಗಳುಂ ಶಿವಲಿಂಗಂ ೧

ಹರಭಕ್ತಿಪ್ರಮದಾಮುಖೈಕಮುಕುರಂ ಪಂಚೇಷುದೂರಂ ಶುಭಾ
ಕರವೃತ್ತಂ ಗಳಿತೇಷಣಂ ವಿಗತದೋಷಂ ವಿಶ್ವನುತ್ಯಂ ಕೃಪಾ
ಭರಣಂ ಭಕ್ತಜನಾಂತರಂಗನನಘಂ ಗಾಂಭೀರ್ಯವಾರಾಕರಂ
ಪರಿಶುದ್ಧಂ ದಸರಯ್ಯನೆಂಬ ಶರಣಂ ದಾನಾಮರಕ್ಷ್ಮಾರುಹಂ ೨

ಸರ್ವಜೀವದಯಾಪರಂ ಸಕಳಪ್ರಪಂಚವಿವರ್ಜಿತಂ
ನಿರ್ವಿಕಾರನನಾಮಯಂ ನಿಗಮಾಗಮಾರ್ಥವಿಶಾರದಂ
ಗರ್ವದೂರನವಂಚಕಂ ಜಿತಪಾಶನಾತ್ಮಯಶೋಜಿತಾ
ಖರ್ವಪಾರ್ವಣಚಂದ್ರಿಕಂ ಚರಲಿಂಗಭಕ್ತಿಪರಾಯಣಂ ೩

### ದಸರ ದೇವಯ್ಯನ ಕಥೆ

೧. ಮಂಗಳಕರಳಾದ ಪಾರ್ವತಿಯ ಕೇಶಗಳಲ್ಲಿರುವ ಪುಷ್ಪಮಾಲಿಕೆಗಳ ಪರಾಗ ಸಮೂಹದಿಂದ ಪ್ರಕಾಶಮಾನವಾದ ಎಡದೋಳುಳ್ಳವನೂ, ಉತ್ಕೃಷ್ಟವಾದ ಗುಣಗಳಿಗೆ ಮಂದಿರನಾದ, ಪಾಪ ನಾಶಕನೆಂಬ ಹೆಸರುಳ್ಳ, ಶಿವಲಿಂಗನು ನಮ್ಮನ್ನು ಯಾವಾಗಲೂ ರಕ್ಷಿಸಲಿ. ೨–೩. ಶಿವಭಕ್ತಿಯೆಂಬ ಸ್ತ್ರೀಯಳ ಮುಖಕ್ಕೆ ಪ್ರಮುಖ ದರ್ಪಣ ಪ್ರಾಯನೂ, ಮನ್ಮಥನ ವಿಕಾರದೂರನೂ, ಮಂಗಳಕ್ಕೆ ಆಗರವಾದ ಚರಿತ್ರೆಯುಳ್ಳವನೂ, ವಿತ್ತೇಷಣ, ದಾರೇಷಣ, ಪುತ್ರೇಷಣಗಳೆಂಬ ಈಷಣತ್ರಯಗಳಿಂದ ದೂರನೂ, ಪಾಪದಿಂದ ದೂರನೂ, ಪ್ರಪಂಚದ ಜನರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಡುವವನೂ, ಕೃಪೆಯೇ ಆಭರಣವಾದವನೂ, ಭಕ್ತ ಜನರನ್ನು ಅಂತರಂಗದಲ್ಲಿ ಉಳ್ಳವನೂ, ಅನಘನೂ,ಗಂಭೀರತನಕ್ಕೆ ಸಮುದ್ರದೋಪಾದಿಯಲ್ಲಿರುವವನೂ, ಪರಿಶುದ್ಧನೂ, ದಾನದಲ್ಲಿ ಕಲ್ಪವೃಕ್ಷಪ್ರಾಯನೂ ಆದ ದಸರಯ್ಯ ಎಂಬ ಶರಣನು ಸಮಸ್ತ ಪ್ರಾಣಿಗಳಲ್ಲಿ ಕರುಣೆಯಿಂದ ಕೂಡಿದ್ದನು, ಸಮಸ್ತ ಮಾಯಾ ಪ್ರಪಾಚದಿಂದ ದೂರನಾಗಿದ್ದನು, ನಿರ್ವಿಕಾರನೂ, ರೋಗ ರಹಿತನೂ ಆಗಿದ್ದನು. ವೇದಾರ್ಥದಲ್ಲಿ ಬಲ್ಲಿದನೂ, ಗರ್ವ ರಹಿತನೂ, ಕಪಟವಿಲ್ಲದವನೂ ಆಗಿದ್ದನು. (ಸಾಂಸಾರಿಕ) ಬಂಧನಗಳಿಂದ ದೂರನಾಗಿದ್ದನು. ತನ್ನ ಯಶಸ್ಸಿನಿಂದ ಪೌರ್ಣಿಮೆಯ ಚಂದ್ರನ ಬೆಳದಿಂಗಳನ್ನು ಜಯಿಸಿದ್ದನು.

ಘನಸಚ್ಚಿದಾತ್ಮಕಂ ಸ
ಜ್ಜನವಿನುತಂ ಸತ್ಯವಾಣಿ ನಿಜನಿರುಪಮಪಾ
ವನವೃತ್ತನಹಿಂಸಾಧ
ರ್ಮನಿಯುಕ್ತಂ ಪೆರ್ಮೆವೆತ್ತು ಕಂಗೊಳಿಸಿರ್ಪಂ ೪

ಶಮದಮಯಮನಿಯಮದಯೋ
ತ್ತಮ ಶಿವಧರ್ಮಂಗಳೆಸೆಯೆ ಗುರುಚರಲಿಂಗ
ಕ್ರಮಕಮಳಂಗಳನರ್ಚಿಸು
ತಮರ್ದೊಪ್ಪಿದನಮಳ ಸುಗುಣವಿಸರಂ ದಸರಂ ೫

ನಡೆವೆಡೆಯೊಳ್ಪದಹತಿಯಿಂ
ಮಡಿಗುಂ ಕ್ರಿಮಿಸಮಿತಿಯೆಂದು ಬಗೆದಾರಯ್ದು
ತ್ತಡಿಯಿಡುವನೊಯ್ಯನೊಯ್ಯನೆ
ಪೊಡವಿಯೊಳಾ ದಸರನತಿದಯಾರಸಭರಿತಂ ೬

ನೆಗೆದಡ್ಡಂಬಾಱುವ ಕೀ
ಟಗಣಕ್ಕಳಿವಪ್ಪುದೆಂದು ಬೀಸದೆ ತೋಳಂ
ಸುಗುಣನಿಧಿ ನಡೆವುತಖಿಳೋ
ರ್ವಿಗಹಿಂಸಾಧರ್ಮಶಾಲಿ ತಾನೆನೆ ನೆಗಳ್ದಂ ೭

ಜಂಗಮಲಿಂಗ ಭಕ್ತಿಪರಾಯಣನೆನಿಸಿದ್ದನು. ೪. ಶ್ರೇಷ್ಠವಾದ ಸತ್–ಚಿತ್–ಆನಂದಗಳ ಸ್ವರೂಪನೂ, ಸಜ್ಜನರಿಂದ ಶ್ಲಾಘ್ಯನೂ, ಸತ್ಯವಾಣಿಯುಳ್ಳವನೂ, ದೃಢವಾದ, ಅಸದೃಶವಾದ, ಪರಿಶುದ್ಧ ಚರಿತ್ರೆಯುಳ್ಳವನೂ, ಅಹಿಂಸಾಧರ್ಮದಿಂದ ಕೂಡಿದವನೂ–ಎನಿಸಿದ ದಸರಯ್ಯನೆಂಬ ಶರಣನು ಹಿರಿಮೆಯಿಂದ ಕಂಗೊಳಿಸುತ್ತಿದ್ದನು. ೫. ನಿರ್ಮಲವಾದ ಸದ್ಗುಣಗಳ ಸಮೂಹದಿಂದ ಕೂಡಿದ ದಸರಯ್ಯನು ಶಾಂತಿ, ಇಂದ್ರಿಯ ನಿಗ್ರಹ, ಸಂಯಮ, ದಯಾದಿ ಶ್ರೇಷ್ಠ ಶಿವಧರ್ಮ ಮಾರ್ಗದಿಂದ ಶೋಭಿಸುತ್ತ ಗುರುಲಿಂಗ ಜಂಗಮರ ಪಾದಕಮಲಗಳನ್ನು ಅರ್ಚಿಸುತ್ತ ಶೋಭಿಸುತ್ತಿದ್ದನು. ೬. ಅತ್ಯಂತ ದಯಾ ರಸಭರಿತನಾದ ದಸರಯ್ಯನು ನಡೆಯುವಾಗ ಹೆಜ್ಜೆಯಿಡುವಿಕೆಯಿಂದ ಕ್ರಿಮಿಗಳ ಸಮೂಹವು ಸಾಯುತ್ತವೆ, ಎಂದು ಯೋಚಿಸಿ, ಪರೀಕ್ಷೆ ಮಾಡಿ, ಭೂಮಿಯಲ್ಲಿ ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಿದ್ದನು. ೭. ಸದ್ಗುಣಗಳ ನಿಧಿಯಾದ ದಸರಯ್ಯನು (ತನಗೆ) ಅಡ್ಡಲಾಗಿ ಹಾರಿ ಬರುವ ಹುಳಗಳ ಸಮೂಹವು ನಾಶವಾಗುವುದೆಂದು ತೋಳನ್ನು ಬೀಸದ ಹಾಗೆ ನಡೆಯುತ್ತ ಸಮಸ್ತ ಭೂಮಿಯಲ್ಲಿ

ಹರಚರಣಾರ್ಚನಕ್ಕೆ ಪೊಸಪೂದಿಱಿಯಲ್ಕನಕೆಯ್ದಿ ಪೂಗಳಂ
ತುಱಿಪದಿನೀಳ್ದು ಕೊಯ್ಯೆ ಸೆಳೆಗೊಂಬುಡಿದಾಯೆಡೆಯಿಂದೆ ನೆತ್ತರೊ
ತ್ತರಿಸುತೆ ಸೂಸೆ ಝೋರೆನುತೆ ಪೂಗಿಡು ನೊಂದೆನೆನುತ್ತಳಲ್ದು ಸು
ರ್ಕಿರೆ ನಡೆನೋಡಿ ನೊಂದು ಬಿಸುಟಾ ಕುಸುಮಾವಳಿಗೊಯ್ವ ಕಜ್ಜಮಂ ೮

ಮರದಡಿಯೊಳ್ಗೋಮಯದಿಂ
ವಿರಚಿಸಿ ಸಾರಣೆಯನಲ್ಲಿ ಮಱಿಗಟ್ಟುತೆ ಕ
ಮ್ಮಗಲುದುರೆ ಕೊಂಡವಂ ಸ
ಚ್ಚರಿತಂ ಶಿವಪೂಜೆಗೆಯ್ವನೋಜೆಯೊಳನಿಶಂ ೯

ವ॥ ಇಂತು ಶಾಂತಿರಸವಿಸರಂ ಪಸರಂಬೆತ್ತಿರೆ ದಸರಿದೇವಂ ರಸೆಯೊಳ್ಯಸದಿನೆಸೆವುತ್ತುಮಿರೆ ಪರಸಮಯಸ್ಥರಾತನ ನೆಗಳ್ತೆಗಸೂಯಾಪರರಾಗುತೆಲ್ಲರ್ಮಂತಣಂಗೊಂಡು ಕುಳ್ಳಿರ್ದೊಂದು ಕಪಟೋಪಾಯಮನಾಳೋಚಿಸಿ—

ಪರರಂ ತನ್ನಂತೆ ನೋಳ್ಪಂ ಗಡ ಪರರ ಮನಂ ನೋಗುಮೊಂದಾಗಳುಂ ನಿ
ಷ್ಠುರ ವಕ್ರಾಲಾಪಮಂ ತಾಂ ಮಱೆದುಮುಸುರದಿರ್ಪಂ ಗಡಾ ಸರ್ವಜಂತೂ
ತ್ಕರಮೆಂತುಂ ನೋಯದಂತಾಚರಿಪ ಪರಮಶಾಂತಂ ಗಡಾ ವೀರಮಾಹೇ
ಶ್ವರರೊಳ್ಮುಖಂ ಗಡೀತಂ ಪಿಡಿದ ಬ್ರತದ ಸಾಮರ್ಥ್ಯಮಂ ನೋಳ್ಪೆವೀಗಳ್ ೧೦

ತಾನು ಅಹಿಂಸಾಧರ್ಮದಿಂದ ಒಪ್ಪುವವನು, ಎನಿಸಿ ಪ್ರಖ್ಯಾತನಾಗಿದ್ದನು. ೮–೯. ಪರಮೇಶ್ವರನ ಪಾದಪೂಜೆಗೆ ಹೊಸ ಹೂವುಗಳನ್ನು ಎತ್ತಿಕೊಂಡು ಬರುವುದಕ್ಕೋಸುಗ, ತೋಟಕ್ಕೆ ಹೋಗಿ ಹೂವುಗಳನ್ನು ಜಾಗ್ರತೆಯಾಗಿ ಕೈ ಚಾಚಿ ಕೊಯ್ಯುತ್ತಿರುವಾಗ ಸಣ್ಣ ಕೊಂಬೆಯು ಮುರಿದು ಆ ಸ್ಥಳದಿಂದ ಜೋರ್ ಎಂದು ನೆತ್ತರು ಒತ್ತರಿಸಿ ಹೊರ ಬರಲು, ಹೂವಿನ ಗಿಡವು ನೊಂದೆನು ಎನ್ನುತ್ತ ಸಂಕಟಪಟ್ಟು, ಸುಕ್ಕಿಕೊಂಡು ಇರಲು (ಬತ್ತಿಕೊಂಡಿರಲು) ಅದನ್ನು ಚೆನ್ನಾಗಿ ನೋಡಿ, ಸಂಕಟಪಟ್ಟು ಹೂವುಗಳನ್ನೆತ್ತಿ ತರುವ ಕಾರ್ಯವನ್ನೆ ಕೈ ಬಿಟ್ಟು, ಆ ಸಚ್ಚರಿತನು ಮರದ ಕೆಳ ಭಾಗದಲ್ಲಿ ಗೋವಿನ ಸೆಗಣಿಯಿಂದ ನೆಲವನ್ನು ಸಾರಿಸಿ, ಅಲ್ಲಿಯೇ ಮರೆಯನ್ನು ಕಟ್ಟಿ, ಕಂಪಾದ ಹೂವು ಉದುರಲಾಗಿ ಅಂಥ ಹೂವನ್ನು ತೆಗೆದುಕೊಂಡು ಕ್ರಮವಾಗಿ ಸತತವೂ ಪೂಜೆ ಮಾಡುತ್ತಿದ್ದನು. ವ॥ ಈ ರೀತಿ ಶಾಂತಿರಸ ಸಮೂಹವು ವಿಸ್ತಾರ ಹೊಂದುತ್ತಿರಲಾಗಿ ಆ ದಸರಯ್ಯನು ಭೂಮಿಯಲ್ಲಿ ಯಶಸ್ಸಿನಿಂದ ಶೋಭಿಸುತ್ತಿರಲು ಇತರ ಸಮಯದ ಜನರು ಆತನ ಈ ವಿಖ್ಯಾತಿಗೆ ಮಾತ್ಸರ್ಯ ಪಡುವವರಾಗಿ ಎಲ್ಲರೂ ಗುಂಪಾಗಿ ಸೇರಿ, ಒಂದು ಕಪಟದ ಉಪಾಯವನ್ನು ಆಲೋಚನೆ ಮಾಡಿ—೧೦. 'ಪರರನ್ನು ತನ್ನ ಹಾಗೆಯೇ ನೋಡುತ್ತಾನಂತೆ! ಪರರ ಮನಸ್ಸು ನೋಯುವುದು ಎಂದು ಯಾವಾಗಲೂ, ಕಠಿಣವಾಗಿಯೂ, ವಕ್ರವಾಗಿಯೂ ಇರುವ ಮಾತನ್ನು ತಾನು ಮರೆತೂ ಕೂಡ ಮಾತನಾಡದೆ ಇರುವನಂತೆ! ಸಮಸ್ತ ಪ್ರಾಣಿಗಳ ಸಮೂಹವು ನೋಯದಂತೆ ವ್ಯವಹರಿಸುವ ಪರಮ ಶಾಂತನಂತೆ! ವೀರ ಮಾಹೇಶ್ವರರಲ್ಲಿ ಇವನು ಮುಖ್ಯನಂತೆ! ಹೀಗೆ ಇವನು ಅನುಸರಿಸುತ್ತಿರುವ ವ್ರತ ಸಾಮರ್ಥ್ಯವನ್ನು ಈಗ ನೋಡುತ್ತೇವೆ'.

ವ॥ ಎಂದನಿಬರುಮಾಳೋಚನಂಗೆಯ್ದು ಕೆಯ್ಗೆಟ್ಟ ಕಾಳ್ಮಾನಿಸನೊರ್ವನು ಕಾಪಟ್ಯದಿಂ ಕರೆದುತಂದು—

ಶಿರಮಂ ಭದ್ರಿಸಿ ನುಣ್ಣನಾಗೆ ಕೊರಲೊಳ್ರುದ್ರಾಕ್ಷೆಯಂ ತೀವಿ ಮೆಯ್
ಗಿರದುದ್ಧೂಳಿಸಿ ಭಸ್ಮಮಂ ಪಣೆ ಮೊಗಕ್ಕಾಲೇಪನಂಗೆಯ್ದು ಮು
ಪ್ಪುರಿಯಂ ಕಟ್ಟಿ ಕಟೀತಟಕ್ಕೆ ಸುಲಿದೊಳ್ಪಿಂ ಪಲ್ಗಳಂ ಕಾಲ್ಗಳಂ
ಕರದಿಂದಂ ತೊಳೆದೋದು ಕೋವಣಮನಾಂತಂಗೊಲ್ದು ಕೆಯ್ಗೆಯ್ಸುತುಂ ೧೧

ಒಳಗೆ ಮೃದುವಸ್ತ್ರಮಂ ಸಂ
ಗಳಿಸುತೆ ಬಱಿಸೆಜ್ಜೆಯೊಂದನಳವಡಿಸುತ್ತುಂ
ಗಳದೊಳ್ಶೈವಲಾಂಛನಮಂ
ಕೆಳೆಗೊಳಿಸಿದರರರೆ ಚೋದ್ಯಮೆನೆ ಪೌರಜನಂ ೧೨

ವ॥ ಇಂತು ಬಱಿ ಚೋಹಮನಳವಡಿಸಿ ನಲವಾಂತು ನೋಡಿ—

ದಸರಯ್ಯನನೆಱಗಿಸಿ ಕೊಂ
ಡಸವಸದಿಂ ಪೊಡೆವುದವನ ಶಿರಮಂ ನಿನ್ನೀ
ಮಿಸುಗುವ ಮೋಟುಂಗೆಯ್ಯಿಂ
ರಸೆಯಚ್ಚರಿವಡೆಯೆ ಮಲ್ಲ ಪೋಗೆನುತಾಗಳ್ ೧೩

ಬೋಳೈಸಿ ಕಳುಪೆ ಖಳರಾ
ವೇಳೆಯೊಳೆಯ್ತಂದನತುಳ ಸಂಭ್ರಮದಿಂ ಪು

ವ॥ ಎಂದು ಆ ಎಲ್ಲರೂ ಆಲೋಚನೆ ಮಾಡಿ ಕೈ ಮುರಿದ ಒಬ್ಬ ಕಾಡು ಮನುಷ್ಯನನ್ನು ಕಪಟದಿಂದ ಕರೆದುಕೊಂಡು ಬಂದು—೧೧–೧೨. ಅವನ ತಲೆಯನ್ನು ನುಣ್ಣಗೆ ಕೂದಲು ಬೋಳಿಸಿ, ಕೊರಳಿನಲ್ಲಿ ರುದ್ರಾಕ್ಷಿಗಳ ಮಾಲೆಯನ್ನು ಹಾಕಿ, ಮೈಗೆ ತಪ್ಪದೆ ಭಸ್ಮೋದ್ಧೂಳನಗೊಳಿಸಿ, ಹಣೆಗೂ, ಮುಖಕ್ಕೂ ಭಸ್ಮವನ್ನು ಧರಿಸಿ, ನಡುವಿಗೆ ಉಡಿದಾರವನ್ನು ಬಿಗಿದು, ಹಲ್ಲುಗಳನ್ನು ಶುಭ್ರಗೊಳಿಸಿ, ಕಾಲುಗಳನ್ನು ಕೈಯಿಂದ ತಿಕ್ಕಿ ತೊಳೆದು, ಕೌಪೀನವನ್ನು ಒಲಿದು ಕಟ್ಟುತ್ತ, ಒಂದು ಮೃದುವಾದ ವಸ್ತ್ರವನ್ನು ಹೊದಿಸಿ, ಬರಿಯ ಲಿಂಗದ ಕರಡಿಗೆಯನ್ನು (ಲಿಂಗವಿಲ್ಲದ ಕರಡಿಗೆ) ಕಂಠದಲ್ಲಿ ಸಂಬಂಧಗೊಳಿಸಿ, ಪಟ್ಟಣದ ಜನಗಳು ಅಬ್ಬಾ ! ಇದೇನು ವಿಚಿತ್ರ ! ಎನ್ನುವಂತೆ ಶೈವ ಲಾಂಛನವನ್ನು ಅವನಿಗೆ ಉಂಟುಮಾಡಿದರು. ವ॥ ಈ ರೀತಿ ಬರಿಯ ವೇಷವನ್ನು ಅಳವಡಿಸಿ ಸಂತೋಷಗೊಂಡವರಾಗಿ ಅವನನ್ನು ನೋಡುತ್ತ—೧೩–೧೪. ಎಲೈ ಮಲ್ಲನೇ, ದಸರಯ್ಯನಿಂದ ನಮಸ್ಕಾರ ಮಾಡಿಸಿಕೊಂಡು, ಹಿಂದು ಮುಂದು ನೋಡದೆ ಅವನ ತಲೆಯನ್ನು ಈ ನಿನ್ನ ಶೋಭಿಸುವ ಮೋಟುಗೈಯಿಂದ ಲೋಕದ ಜನವೆಲ್ಲ ಅಚ್ಚರಿಪಡುವಂತೆ ಹೊಡಿಯಬೇಕು ಹೋಗು' ಎನ್ನುತ್ತ ಆಗ ಆ ದುಷ್ಟರು ಆತನ ತಲೆಯನ್ನು ಸವರಿ ಕಳಿಸಿದರು. (ಅವನು) ಬಂದು, ಆ ಸಮಯದಲ್ಲಿ ಅತ್ಯಂತ ಸಂಭ್ರಮದಿಂದ ಹೂವು

ಷ್ಪಾಳಿದರಲೆಂದು ಪೋಪ ದ
ಯಾಳುವನಾ ದಸರವಿಭುವನೊಯ್ಯನೆ ಕಂಡಂ ೧೪

ವ॥ ಅಂತು ಕಂಡು ಸಡಗರಂ ವಿೞಗೆ ರಾಜವೀಥಿಯೊಳ್ಬಳಿಸಂದು ನಡೆತರುತ್ತುಂ ನೋಳ್ಪರಂ ನಗೆಗಡಲೊಳೋಲಾಡಿಸಿ—

ನಗುತುಂ ದರ್ರನೆ ತೇಗುತುಂ ತೊನೆವುತುಂ ಪುರ್ಬಿಕ್ಕುತುಂ ಪಾಱುತುಂ
ನೆಗೆವುತ್ತುಂ ಕೆಲೆವುತ್ತೆ ಕೇಕರಿಸುತಡ್ಡಂಬಾಯ್ವುತುಂ ಮಂದಿಯೊ
ಳ್ಪುಗುತುಂ ಮೋಱೆಯನೆತ್ತುತುಂ ಮುಱುಕಿಸುತ್ತಂತಂತೆ ತನ್ನಂಗಮಂ
ವಿೞಗೆ ನೋಡುತ್ತೊಲೆದಾಡಿಸುತ್ತೆ ಮುಡುಪಂ ಪೆಂಪೇಱುತುಂ ಪಾಡುತುಂ ೧೫

ಸೆಡೆದು ಪೆಡಂಮೆಟ್ಟುತೆ ಮುಂ
ಗಡೆಗೊರ್ಗುಡಿಪಂತೆ ಜಗಳಂಬಾಯ್ವುತೆ ಪಿಂ
ಗಡೆಗೊಲೆದು ನಿಲುತೆ ನೋಡು
ತ್ತೆಡವಲಮನಲರ್ಚೆ ಕಣ್ಗಳಿಂ ಪುರ್ಬಿಡುತುಂ ೧೬

ಮಂಡೆಯನಂತಿಂತೊಲೆವುತೆ
ತುಂಡಿಸಿದ ಕರಂಗಳೊಡ್ಡಿ ದಂಡೆಗೊಡುತ್ತುಂ
ದುಂಡಿಸುತಾಡಿಸುತೆ ಕಟೀ
ಮಂಡಲಮಂ ಬೀಗಿ ಬೆಱೆವುತಣೆದಡಿಯಿಡುತುಂ ೧೭

ಗಳ ಸಮೂಹವನ್ನು ತರಲೆಂದು ಹೋಗುತ್ತಿರುವ ದಯಾಳುವಾದ ಆ ದಸರಯ್ಯ ವಿಭುವನ್ನು ಒಮ್ಮೆಲೆ ಕಂಡನು. ವ॥ ಹಾಗೆ (ಆ ದಸರಯ್ಯನನ್ನು) ಕಂಡು, ಹೆಚ್ಚಾದ ಸಡಗರದಿಂದ ರಾಜಬೀದಿಯಲ್ಲಿ ಹತ್ತಿರಕ್ಕೆನಡೆದು ಬರುತ್ತ ನೋಡುವವರನ್ನು ನಗೆ ಗಡಲಲ್ಲಿ ಮುಳುಗುವಂತೆ ಮಾಡುತ್ತ–೧೫–೧೬–೧೭. ನಗುತ್ತ, ಡರ್ರನೇ ತೇಗುತ್ತ, ತೂಗಾಡುತ್ತ, ಹುಬ್ಬು ಹಾರಿಸುತ್ತ, ನೆಗೆಯುತ್ತ ಕೆಲೆಯುತ್ತ (ಗುಟುರು ಹಾಕುತ್ತ), ಕೇಕರಿಸುತ್ತ (ಗಂಟಲಲ್ಲಿ ಸಿಕ್ಕ ಉಗುಳನ್ನು ಉಗುಳುವಂತೆ ಮಾಡುತ್ತ) ಅಡ್ಡಗಟ್ಟಿ ಬರುತ್ತ, ಜನರ ಗುಂಪಿನಲ್ಲಿ ನುಗ್ಗುತ್ತ, ಮುಖವನ್ನು ಮೇಲಕ್ಕೆತ್ತುತ್ತ, ಮುರಿಯುತ್ತ (ಮುಖ ಮುರಿಯುತ್ತ), ಹಾಗೆ ಹಾಗೆಯೇ ತನ್ನ ಅಂಗಾಂಗಗಳನ್ನು ನೋಡಿಕೊಳ್ಳುತ್ತ ಉಟ್ಟಿರುವ ವಸ್ತ್ರವನ್ನು ಒಲೆದಾಡಿಸುತ್ತ, ಹೆಮ್ಮೆಯಿಂದ ಬೀಗುತ್ತ, ಹಾಕುತ್ತ, ಸೆಡೆದು ನಿಲ್ಲುತ್ತ, ಹಿಂದಕ್ಕೆ ಸರಿದು ನಿಲ್ಲುತ್ತ, ಮುಂದುಗಡೆಗೆ ಒಂದುಗೂಡಿಸುವಂತೆ ಟಣ್ಣನೆ ಹಾರುತ್ತ, ಹಿಂದಕ್ಕೆ ಸೆಡೆದು ನಿಲ್ಲುತ್ತ, ಎಡಬಲ ಪಾರ್ಶ್ವಗಳನ್ನು ಕಣ್ಣುಗಳನ್ನರಳಿಸಿ ನೋಡುತ್ತ, ಹುಬ್ಬು ಹಾರಿಸುತ್ತ, ತಲೆಯನ್ನು ಅತ್ತ ಇತ್ತ ತೂಗಾಡಿಸುತ್ತ, ಕತ್ತರಿಸಿ ಹೋದ ಕೈಗಳನ್ನು ಮುಂದೆ ಮಾಡಿ ಚಾಚುತ್ತ, ಚಕ್ರಾಕಾರವಾಗಿ ತಿರುವುತ್ತ, ನಡುವನ್ನು ಅಲ್ಲಾಡಿಸುತ್ತ, ಹರ್ಷಗೊಂಡು ಬೆರೆಯುತ್ತ, ಬಡಿ ಬಡಿದು ಹೆಜ್ಜೆ ಹಾಕುತ್ತ (ನಡೆದು

ತಳರ್ದಿಂತು ದಸರಿದೇವನ
ಬಳಿಸಾರ್ದು ಕಡಂಗಿ ನೋಡಿ ಶರಣಾರ್ಥಿಯೆನ
ಲ್ಕಳವಡದೆ ಪರಸಿದಂ ತೊದ
ಲೆಳಸಿರ್ಪಿನಮಲ್ಪವಾಯು ನಿನಗಕ್ಕೆನುತುಂ ೧೮

ವ॥ ಎಂದವಂ ಕಪಟಚರವೇಷಮಂ ತಳೆದೇಳ್ತಂದೆನೆಂಬ ಲಜ್ಜೆಯಿಂ ತಡಬಡಂಬೋಗಿ ಪರಸಿ—

ಎಲೆ ದಸರಿದೇವ ಕುಶಲಮೆ
ನಲವಿಂದಾವೆಡೆಗೆ ಪೋಪೆ ಕಜ್ಜಮದೇಂ ನಿ
ಶ್ಚಲಮತಿ ನಿನ್ನಯ ಸುಗುಣಾ
ವಲಿಯಂ ಕೇಳ್ದೆಳಸಿ ನೋಡಲೆಯ್ದಿದೆವೀಗಳ್ ೧೯

ನಿಯುತದೊಳೆ ಮಲ್ಲಿನಾಥಾ
ಹ್ವಯಮೆಸೆದಪುದೆಮಗೆ ಸುಪ್ರಸಿದ್ಧಂ ಸರ್ವೋ
ರ್ವಿಯೊಳೆಮಗೆಣೆವರ್ಪರದಾ
ರ್ನಯ ನಿಯಮ ಮಹತ್ವಸತ್ವಸಾರೋನ್ನತಿಯೊಳ್ ೨೦

ಪರ್ವತನಾಥನ ಸುತನಾ
ನುರ್ವರೆಯೊಳ್ಕಿಱಿಯನಲ್ತು ನಿನಗೆಂತುಟೊ ಪೇ
ಳ್ಗರ್ವಂ ನುಡಿಯದೆ ಪೋದಪೆ
ನಿರ್ವಂಚಕ ಭಕ್ತವರ್ಯ ನಿನಗಿದು ಗುಣಮೇ ೨೧

ಬರುತ್ತಿದ್ದನು). ೧೮. ಈ ರೀತಿ ದಸರಯ್ಯನ ಸಮೀಪಕ್ಕೆ ಹೋಗಿ, ಉತ್ಸಾಹಿತನಾಗಿ (ಅವನನ್ನು) ನೋಡಿ, ಶರಣಾರ್ಥಿ ಎಂದೆನ್ನಲಿಕ್ಕೆ ಹೊಂದಿಕೆಯಾಗದೆ (ತೋರದೆ) ಸುಳ್ಳಿನಿಂದ ಕೂಡಿರುವುದಕ್ಕೆ ಬಯಸಿ 'ನಿನಗೆ ಅಲ್ಪಾಯುಷ್ಯವಾಗಲಿ' ಎಂದು ಹರಸಿದನು. ೧೯. 'ಎಲೈ ದಸರಿ ದೇವನೇ ಕುಶಲವೇ ? ಪ್ರೀತಿಯಿಂದ ಯಾವ ಕಡೆಗೆ ಹೋಗುತ್ತಿರುವೆ ? ಅದೇನು ಕೆಲಸ ? ಎಲೈ ಚಾಂಚಲ್ಯವಿಲ್ಲದ ಬುದ್ಧಿಯುಳ್ಳವನೇ, ನಿನ್ನ ಸದ್ಗುಣ ಸಮೂಹವನ್ನು ಕೇಳಿ, ಈಗ ನಿನ್ನನ್ನು ನೋಡಲಿಕ್ಕೆ ಅಪೇಕ್ಷಿಸಿ ಬಂದಿದ್ದೇನೆ.' ೨೦. 'ಈ ಸಮಸ್ತ ಭೂಮಂಡಲದಲ್ಲಿ ನಮಗೆ ನಿಯತವಾಗಿ (ನಿಶ್ಚಯವಾಗಿ) ಮಲ್ಲಿನಾಥನೆಂದೆನ್ನುವ ಹೆಸರು ಶೋಭಿಸುತ್ತಿರುವುದು. ನೀತಿ, ನಿಯಮ, ಮಹಾತ್ಮೆಗಳ ಸತ್ವದಿಂದ ಸಾರಗೊಂಡು ಔನ್ನತ್ಯವನ್ನೂ ಹೊಂದಿ ನಮಗೆ ಸಮಾನರೆನಿಸಿದವರು ಯಾರಿದ್ದಾರೆ ? ೨೧. 'ಪರ್ವತನಾಥನಾದ ಮಲ್ಲಿಕಾರ್ಜುನನ ಮಗನಾದ ನಾನು ಈ ಭೂಭಾಗದಲ್ಲಿ ಚಿಕ್ಕವನೇನಲ್ಲ. ನಿನಗೆ ಎಷ್ಟೊಂದು ಗರ್ವ ! ನುಡಿಯದೆ ಹೋಗುತ್ತಿದ್ದೀಯೆ. ಕೇಳು : ಕಪಟಗಳಲ್ಲಿ ಶ್ರೇಷ್ಠನಾದವನೇ ! ನಿನಗೆ ಇದು ತಕ್ಕದ್ದೇ ?'

ನುಡಿದೊಡೆ ನಿನ್ನ ಮಹತ್ವಂ
ಕಿಡುಗುಮೆ ನಡೆನೋಡೆ ನಿನ್ನ ಪೌರುಷಮಳಿವಂ
ಪಡೆಗುಮೆ ಮಣಿದೊಡೆ ನಿನ್ನಯ
ಮೃಡಭಕ್ತಿಗೆ ಹಾನಿಯಕ್ಕುಮೇ ಬಗೆವಾಗಳ್ ೨೨

ಚರಮೂರ್ತಿಯಾನೆ ನಿನ್ನಂ
ಕರೆವುತಿರೆ ಕೇಳದಂತೆ ತಳರ್ದಪೆ ನಿನಗಾಂ
ಚರಮೂರ್ತಿಯಲ್ಲನೇ ಪೇ
ಳ್ಪರಮಾರ್ಥಮನೇಕೆ ನುಡಿಯೆ ಗುಣಮಣಿಭರಣಾ ೨೩

ಚರಭಕ್ತಿಯುತನಹಿಂಸಾ
ಪರನಧಿಕ ದಯಾಳು ಧಾರ್ಮಿಕಂ ನೀನೆಂದಾ
ದರದಿನಭೀಕ್ಷಿಸಲೆಂದಾ
ನಿರದೆಯ್ತಂದಿರವನಿಂದು ಸಫಳಂಗೆಯ್ದೈ ೨೪

ಎಮ್ಮೊಡನಾಡಿಗಳಿರ್ಪ
ರ್ದಿಮ್ಮಿದರಿದನೆಯ್ದೆ ಕೇಳ್ದೊಡೆಮ್ಮಂ ಬಳಿಯೊಳ್
ಸಮ್ಮನಿಪರೆ ಲಘುಮಾಡಿದೆ
ಕಿಮ್ಮನೆ ನೀನಕಟ ಸರಿಯ ತಾಪಸರೆಡೆಯೊಳ್ ೨೫

ಒಡೆಯರ್ಕಳಿದ್ದೆಡೆಗೆ ಕೇ
ಳ್ಮೃಡಭಕ್ತಂ ಪೋಗುತೆಱಗಿ ತತ್ಕೃಪೆಯುನಣಂ

೨೨. '(ನನ್ನೊಡನೆ) ಮಾತನಾಡಿದರೆ ನಿನ್ನ ಮಹತ್ವವು ಕೆಡುವುದೇನು ? ಚೆನ್ನಾಗಿ ನೋಡಿದರೆ ನಿನ್ನ ಪೌರುಷವು ನಾಶವಾಗುವುದೇ ? ನಮಸ್ಕಾರ ಮಾಡಿದರೆ ನಿನ್ನ ಶಿವ ಭಕ್ತಿಗೆ ಹಾನಿಯುಂಟಾಗುವುದೇ ?' ೨೩. 'ಸದ್ಗುಣವೆಂಬ ರತ್ನವೇ ಆಭರಣವಾಗಿ ಉಳ್ಳವನೇ, ಜಂಗಮನಾದ ನಾನೇ ನಿನ್ನನ್ನು ಕರೆಯುತ್ತಿದ್ದರೆ ಕೇಳಿಸದವನಂತೆ ಹೋಗು ತ್ತಿದ್ದೀಯೆ. ನಿನಗೆ ನಾನು ಜಂಗಮ ಮೂರ್ತಿಯಲ್ಲವೇ ? ಪರಮಾರ್ಥವನ್ನು (ಶ್ರೇಷ್ಠ ಸತ್ಯವನ್ನು) ಮಾತನಾಡು. ಏಕೆ ಮಾತನಾಡುತ್ತಿಲ್ಲ ?' ೨೪. 'ನೀನು ಜಂಗಮ ಭಕ್ತಿಯುತನು : ಹಿಂಸೆ ಮಾಡಬಾರದೆಂಬುದರಲ್ಲಿ ಆಸಕ್ತನಾದವನು ; ವಿಶೇಷ ದಯಾಳುವು ; ಧರ್ಮಿಷ್ಠನು ಎಂದು ನಾನು ಆದರಿಂದ ನೋಡುವುದಕ್ಕೆಂದು ತಪ್ಪದೆ ನಿನ್ನಲ್ಲಿಗೆ ಬಂದ ರೀತಿಯನ್ನು ಈಗ ಫಲಕಾರಿಯಾದುದನ್ನಾಗಿ ಮಾಡಿದಂತಾಯಿತು ! ೨೫. ನಮ್ಮ ಒಡನಾಡಿಗಳು ಬಹು ದೊಡ್ಡವರಿದ್ದಾರೆ. (ಅವರು) ಈ ವೃತ್ತಾಂತವನ್ನು ತಪ್ಪದೆ ಕೇಳಿದರಾದರೆ, ನಮ್ಮನ್ನು ಅವರು ತಮ್ಮ ಬಳಿಯಲ್ಲಿ ಸನ್ಮಾನ ಮಾಡುವರೇ ? ಸುಮ್ಮನೆ ನೀನು ಸರಿಸಮಾನರಾದ ತಪಸ್ವಿಗಳ ಹತ್ತಿರ ನಮ್ಮನ್ನು ಲಘುವಾದರವರನ್ನಾಗಿ ಮಾಡಿದೆ ; ಅಕ್ಕಟ !' ೨೬. 'ಎಲೈ ಒಳ್ಳೆಯ ಬುದ್ಧಿಯುಳ್ಳ ದಸರಯ್ಯನೇ ಕೇಳು: ಒಡೆಯರುಗಳು ಇದ್ದ ಸ್ಥಾನಕ್ಕೆ ಶಿವಭಕ್ತನು (ತಾನೇ) ಹೋಗಿ ನಮಸ್ಕರಿಸಿ ಅವರ

ಪಡೆಯಲ್ವೇಳ್ಕುಂ ನೀನಿ
ರ್ದೆಡೆಗಾನಿರದೆಯ್ದೆ ಸುಮ್ಮನಿರ್ಪುದೆ ಸುಮತೀ ೨೬

ಮದವೊ ಮರುಳ್ತನವೋನಿನ
ಗಿದು ಜಗದೊ[1]ಳ್ಮೋಟ[1]ಮಲ್ಲಿನಾಥನ ದೊರೆವೆ
ತ್ತೂದವಿದ ಪೆರ್ಮೆಯು ಕೇಳ್ದುಂ
ಪದೆದಱಿದುಂ ಮಣಿಯದಿರ್ಪ ನಿನ್ನ ವಿಡಾಯುಂ ೨೭

ವ|| ಎಂದಿಂತು ಬಲಾತ್ಕರಿಸಿ ಗಳಪುವ ಶಿವಲಾಂಛನಧಾರಿಯಾದ ಮೋಟಮಲ್ಲನಿರವಂ ದಸರಯ್ಯಂ ಪಿಂದಿರಿಗಿ ನೋಡಿ—

ದುರುಳನಿವನೆಂದು ಬಗೆದನೆ
ದುರಿತಾತ್ಮಕನೆಂದು ನೆನೆದನೇ ಖಲನೆಂದೋ
ಸರಿಸಿದನೆ ಕುಹಕವೇಷವು
ನಿರದಾಂತ ಮದಾಂಧನೆಂದದೇಂ ನೋಡಿದನೇ ೨೮

ಕರವಿಲ್ಲದ ಮೋಟಂ ತ
ಸ್ಕರಚರಿತಂ ಕಪಟಿಯೆಂದುಪೇಕ್ಷಿಸಿದನೆ ಶಾಂ
ಕರಲಾಂಛನಧರನಂ ಭಾ
ಸುರ ಜಂಗಮಮೆಂದು ಭಕ್ತಿಯಿಂ ಭಾವಿಸಿದಂ ೨೯

ಕೃಪೆಯನ್ನು ನಿಜವಾಗಿ ಪಡೆಯಬೇಕು. ಆರ್ಯನೇ, ನೀನಿದ್ದಲ್ಲಿಗೇ ನಾನು ಬಂದರೂ ಕೂಡ ಹೀಗೆ ಸುಮ್ಮನೆ ಇರುವುದೇ ?' ೨೭, 'ಈ ಭೂಮಿಯಲ್ಲಿ ಮೋಟಮಲ್ಲಿನಾಥನೆಂದು ಪ್ರಸಿದ್ಧಿಯನ್ನು ಹೊಂದಿ, (ನನಗೆ) ಪ್ರಾಪ್ತವಾದ ಹಿರಿಮೆಯನ್ನು ಕೇಳಿಯೂ ಕೂಡ, ಸಂತೋಷದಿಂದ ತಿಳಿದೂ ಕೂಡ, ನಮಸ್ಕರಿಸದೆ ಇರುವ ನಿನ್ನ ಈ ಆಡಂಬರ (ನೋಡಿದರೆ) ನಿನಗೇನು ಇದು ಮದವೋ ಹುಚ್ಚೋ (ತಿಳಿಯದು), ವ|| ಹೀಗೆಂದು ಈ ರೀತಿ ಬಲಾತ್ಕರಿಸಿ ಗಳಪುತ್ತಿರುವ ಶೈವಲಾಂಛನ ಧಾರಿಯಾದ ಆ ಮೋಟಮಲ್ಲನ ಇರುವಿಕೆಯನ್ನು ದಸರಯ್ಯನು ಹಿಂದಿರುಗಿ ನೋಡಿ ೨೮. ಇವನು ದುಷ್ಟನೆಂದು ಯೋಚಿಸಿದನೇ ? ಪಾಪದಿಂದ ಕೂಡಿದ ಆತ್ಮವುಳ್ಳವನೆಂದು ನೆನೆದನೇ ? ದುಷ್ಟನೆಂದು ಹಿಂಜರಿದನೇ ? ಕುಹಕ ವೇಷವನ್ನು ಧರಿಸಿದ ಮದಾಂಧನೆಂದು ಹಿಂದು ಮುಂದೆ ಅದೇನು ನೋಡಿದನೇ ? ೨೯. ಕೈಯಿಲ್ಲದ ಮೋಟನೆಂದು ಕಳ್ಳ ನಡೆವಳಿಕೆಯ ಕಪಟಿಯೆಂದು ಉಪೇಕ್ಷೆ ಮಾಡಿದನೆ ? ಶಿವಲಾಂಛನ ಧಾರಿಯಾದ ಈ ಮೋಟಮಲ್ಲ

1 ಳ್ಮೊಟ್ಟೆ (ಅ)

ವ॥ ಅಂತು ಭಾವಿಸಿ ಭಾವಜಾಂತಕನೆಂದೆ ನಂಬಿ ನಲವೇರ್ಚಿ ವಿಶ್ವಾಸಮೆ ನಿಜಪ್ರಾಣಮಾಗಿ ಭಯಭಕ್ತಿವೆರಸಿ ನಿಂದು—

ನರದೇಹಾನ್ವಿತಚಂದ್ರಚೂಡ ಕರುಣಾವಾರಾಶಿ ತಪ್ಪುಂಟು ಸಾ
ಸಿರಮೆನ್ನೊಳ್ಮದಮತ್ತನೊಳ್ಮಱದಿದಂ ಕಾರುಣ್ಯದಿಂದೆನ್ನನು
ದ್ಧರಿಸೊಲ್ಪಿಂ ಸಡೆನೋಡಿ ನೀಂ ಪೊರೆವುದೆಂದಾತ್ಮಾಂಗಮಂ ಧಾತ್ರಿಯೊ
ಳ್ಪರಪುತ್ತುಂ ಪೊಗಳುತ್ತೆ ಮತ್ತೆ ಮಣಿದಿರ್ದಂ ತತ್ಪದದ್ವಂದ್ವದೊಳ್ ೩೦

ವ॥ ಆಗಳಾ ಮೋಟಮಲ್ಲಿನಾಥನಾಕ್ಷೇಪಂ ಮಿಗೆ ತನಗೆಱಗಿರ್ದ ದಸರಿದೇವನವನತೋತ್ತಮಾಂಗಮಂ ಕೀಣಕ[1]ಲಿತಂಗಳಾದ ತನ್ನ ಕೂನಕೈಗಳಿನಡಸುತಟವಟಿಸಿ ತಿವಿದು—

ಒಡನೊಡನೆ ಬಡಿಬಡಿದು ಪೊಡೆ
ಪೊಡೆದಡಿಗಡಿಗಟ್ಟಹಾಸಮುಂ ನೆಗಳ್ದು ಕರಂ
ಜಡಿದಣ್ಮಿ ಭಕ್ತನಂ ಬ
ರ್ಕುಡಿಗೆಯ್ದಂ ಮೋಟಮಲ್ಲನಪ್ರತಿಮಲ್ಲಂ ೩೧

ಬು[2]ಗುಟೊಗೆಯೆ ಶಿರದೊಳಲ್ಲ
ಲ್ಲಿಗೆ ರಂಧ್ರಂಗಳ್ಪೊದಳ್ದು ನೆತ್ತರ್ಝುಲ್ಲೆಂ
ದುಗೆ ಚಲ್ಲದಿಂದೆ ಮಲ್ಲಂ
ಮಿಗೆ ನಿರ್ದಯಶೀಲನಣ್ಮಿ ಪೊಡೆದಂ ಬಡಿದಂ ೩೨

ನನ್ನು ಪ್ರಕಾಶಮಾನನಾದ ಜಂಗಮನೇ ಎಂದು ಭಕ್ತಿಯಿಂದ ಭಾವಿಸಿದನು. ವ॥ ಆ ರೀತಿ ಭಾವಿಸಿಕೊಂಡು (ಅವನನ್ನು) ಶಿವನೆಂದೇ ನಂಬಿ, ಹೆಚ್ಚಾದ ಸಂತೋಷದಿಂದ ವಿಶ್ವಾಸವೇ ತನ್ನ ಪ್ರಾಣವಾಗಿ ಭಯಭಕ್ತಿಯಿಂದ ಕೂಡಿ ನಿಂತು ೩೦. 'ದಯಾ ಸಮುದ್ರನೇ, ಮನುಷ್ಯಾಕಾರದ ಚಂದ್ರಧರನೇ, ಮದೋನ್ಮತ್ತನಾದ ನನ್ನಲ್ಲಿ ಸಾವಿರ ತಪ್ಪುಗಳುಂಟು, ಇದನ್ನು ಮರೆತು ಕರುಣದಿಂದ ನನ್ನನ್ನು ಉದ್ಧಾರ ಮಾಡು ; ಪ್ರೀತಿ ಯಿಂದ (ನನ್ನನ್ನು) ನೀನು ಚೆನ್ನಾಗಿ ನೋಡಿ ರಕ್ಷಿಸಬೇಕು,' ಎಂದು ತನ್ನ ದೇಹವನ್ನು ಭೂಮಿಯಲ್ಲಿಟ್ಟು (ಸಾಷ್ಟಾಂಗ ನಮಸ್ಕಾರ ಮಾಡಿ), ಹೊಗಳುತ್ತ ಮತ್ತು ಅವನ ಎರಡೂ ಪಾದಗಳಲ್ಲಿ ನಮಸ್ಕರಿಸಿದನು. ವ॥ ಆಗ ಆ ಮೋಟಮಲ್ಲಿನಾಥನೂ, ವಿಶೇಷ ವಾಗಿ ಆಕ್ಷೇಪ ಮಾಡುತ್ತ ತನಗೆ ನಮಸ್ಕರಿಸಿದ್ದ ದಸರ ದೇವನ ತಲೆಯನ್ನು ಜಡ್ಡು ಗಟ್ಟಿ ಗಂಟಿನಿಂದ ಕೂಡಿದವುಗಳಾದ ತನ್ನ ಮೋಟುಗೈಗಳಿಂದ ಒತ್ತಿ ಹಿಡಿದು ಮೋಸ ದಿಂದ ತಿವಿದು ೩೧. ಆ ಅಸದೃಶನಾದ ಮೋಟುಮಲ್ಲನು ಮೇಲಿಂದ ಮೇಲೆ ಭಕ್ತ ನಾದ ದಸರಯ್ಯನನ್ನು ಬಡಿಬಡಿದು ಬಾರಿ ಬಾರಿಗೂ, ಹಾಸ್ಯ ಮಾಡಿ ನಗುತ್ತ, ಭಯ ಗೊಳಿಸಿ, ಪೌರುಷದಿಂದ ಬೆರಗುಗೊಳಿಸಿದನು. ೩೨, (ಆಗ ದಸರಯ್ಯನಿಗೆ) ತಲೆಯಲ್ಲಿ ಬುಗುಟು ಉಂಟಾಯಿತು. ಅಲ್ಲಲ್ಲಿ ಗಾಯಗಳಾಗಿ ವಿಶೇಷವಾಗಿ ರಕ್ತವು ಝುಲ್ ಎಂದು ಸುರಿಯಿತು. ನಿರ್ದಯವೇ ಶೀಲವಾಗಿ ಉಳ್ಳ ಆ ಮೋಟುಮಲ್ಲನು (ಹೀಗೆ) ಚೆಲ್ಲಾಟ

[1] ಕೀ (ಅ, ಚ, ಮು, ಗ)    [2] ಬ(ಅ)

ವ॥ ಅಂತವನಳುರ್ಕೆಯಿಂ ಪೊಡೆಯಲೊಡನೆ —

ಅಗಿದುಃ ಬೆಮರ್ತನೇ ಸುಗಿದು ಕುರ್ಗಿದನೇ ನೆಱೆನೊಂದೆನೆಂದು ಪಿಂ
ದೆಗೆದನೆ ತಪ್ಪು ಸಂದಿಸದೆ ಪೊಯ್ದಪನೀ ಖಲನೆಂದು ಚಿತ್ತದೊ
ಳ್ಬಗೆದನೆ ಪೊಯ್ಯದಿರ್ಬಱಿದೆ ನೀನಕಟೆಂದನೆ ಬಂದು ಕೆಮ್ಮನಿಂ
ತಗಣಿತಮಾವ ಬಾಧೆಗೊಳಗಾದೆನೆನುತ್ತುಮಳಲ್ಕೆಯಾಂತನೇ ೩೩

ಕಿಸುಗಣ್ಣ ನೋಡಿದನೆ ಮಾ
ಮಸಕಂ ಮಸಗಿದನೆ ಸೂಱುಳಿಟ್ಟಣ್ಮಿ ನಿವಾ
ರಿಸಿದನೆ ನಿನಗೇಂ[1] ಮುಳಿಯರೆ
ಸಸಿದಲೆಯನ ಭಕ್ತರೆಂದನೇ ದಸರಯ್ಯಂ ೩೪

ಧೃತಿಗುಂದದೆ ಮತಿ ನಂದದೆ
ರತಿಯೋಡದೆ ಬಲ್ಪು ಬಾಡದಳ್ಕಾಡದೆ ನಿ
ಶ್ಚಿತಚಿತ್ತವೃತ್ತಿ ಭಕ್ತಿ
ಸ್ಥಿತಿ ಜಾಱದೆ ಮಿಱದಾತ್ಮಶೀಲಕ್ರಮಮಂ ೩೫

ಪರಮಶಮ ಭಕ್ತರೂಪಂ
ಕರಮಾಂತುದೊ ದಮೆಯೆ ತಾಳ್ದುದೋ ಪದಪಿಂದಂ
ಪುರುಷಾಕಾರಮೆನೆನೆ ಶಾಂ
ತಿರಸಾಂಕಂ ದಸರಿದೇವನೊಪ್ಪಿದನಾಗಳ್ ೩೬

ದಿಂದ ವಿಶೇಷ ಪರಾಕ್ರಮದಿಂದ ಕೂಡಿ ಹೊಡೆದನು. ವ॥ ಹೀಗೆ ಅವನು ಅಧಿಕವಾಗಿ ಹೊಡೆಯಲಾಗಿ ಕೂಡಲೆ ೩೩. (ದಸರಯ್ಯನು) ಭಯಪಟ್ಟು ಬೆವರಿದನೇ ? ಅಂಜಿ ಕುಗ್ಗಿದನೇ ? ಹೆಚ್ಚಾಗಿ ಸಂಕಟಪಟ್ಟನೆಂದು ಹಿಂದೆಗೆದನೇ ? ಈ ದುಷ್ಟನು ತಪ್ಪಿಲ್ಲದೆ ಹೊಡೆಯುವನೆಂದು ಮನಸ್ಸಿನಲ್ಲಿ ಯೋಚಿಸಿದನೇ ? ಅಯ್ಯೋ ! ನೀನು ಸುಮ್ಮ ಸುಮ್ಮನೆ ಹೊಡೆಯಬೇಡ ಎಂದನೇ ? ಸುಮ್ಮ ಸುಮ್ಮನೆ ಬಂದು ಈ ರೀತಿ, ವಿಶೇಷ ವಾದ ಬಾಧೆಗೊಳಗಾದೆವೆಂದು ಸಂಕಟವನ್ನು ಹೊಂದಿದನೇ ? ೩೪. ದಸರಯ್ಯನು ಕೆಂಪಾದ ಕಣ್ಣಿನಿಂದ ಅವನನ್ನು ನೋಡಿದನೇ? ಮಹಾ ಶೌರ್ಯವನ್ನು ಪ್ರಕಟಿಸಿದನೇ? ಶಪಥ ಮಾಡಿ ಪರಾಕ್ರಮವನ್ನು ಪ್ರಕಟಿಸಿ ನಿವಾರಿಸಿಕೊಂಡನೇ? 'ಶಿವಭಕ್ತರು ನಿನಗೆ (ಈ ರೀತಿ ವ್ಯವಹರಿಸಿದರೆ) ಕೋಪಿಸಿಕೊಳ್ಳುವದಿಲ್ಲವೇನು ?' ಎಂದನೇ ? ೩೬. ಉತ್ಕೃಷ್ಟ ಶಾಂತಿಯೇ ಭಕ್ತನ ಆಕಾರವನ್ನು ಚೆನ್ನಾಗಿ ಹೊಂದಿರುವುದೋ ; ಇಂದ್ರಿಯನಿಗ್ರಹವೇ ಪ್ರೀತಿಯಿಂದ ಪುರುಷಾಕಾರವನ್ನು ಪಡೆದಿರುವುದೋ ಎನ್ನುವ ಹಾಗೆ ಶಾಂತಿಯೇ

[1]ಗಂ(ಅ, ಚ)

ವ॥ ಅಂತೊಪ್ಪುತ್ತುಮಿರ್ದಾ ಮಲ್ಲಿನಾಥಂ ನಿಲ್ಲದೆ ಬಡಿಯೆ ಶಿರಮೆಲ್ಲಂ ಸೀಳ್ದೊಡೆಯೆ ಧೃತಿಗಿಡದೆ ಭಕ್ತವರ್ಯಂ ಕ್ಷಮಾನಿಧಿ ತನ್ನೊಳಿಂತೆಂದಂ—

ಅಪರಾಧಮಿಲ್ಲದೇಂ ಬಡಿ
ದಪನೆ ಮಹಾತ್ಮಂ ಮದೀಯ ಶಿರಮಂ ಶಿಕ್ಷಾ
ವ್ಯಪದೇಶಂ ಭಕ್ತಿಸ್ಥಿತಿ
ಯುಪದೇಶಮಿದಪ್ಪುದಾದೆನಾನತಿಧನ್ಯಂ ೩೭

ಹರಮಿಯನಿಳೆಯೊಳ್ಕೊಳ್ವ
ರ್ಕರದಿಂ ಟೊಣೆದಲ್ತೆ ಕೊಳ್ವರೆನ್ನಯ ಶಿರಮಂ
ಭರದಿಂ ಪೊಡೆದು ಪರೀಕ್ಷಿಸಿ
ಪುರುಳಂ ಕೆಯ್ಕೊಳ್ವನೆನ್ನನೀ ಘನಮಹಿಮಂ ೩೮

ಶಿವಹಸ್ತಮನಂದಿಟ್ಟಂ
ಜವದಿಂ ಪೂರ್ವಾಂಗಮಳಿಯಲೆನ್ನಯ ಶಿರದೊಳ್
ಶಿವಮೂರ್ತಿಯೆನ್ನನೀಗಳ್
ಶಿವಭಕ್ತನನೆಸಗಲೆಂದು ಮೇಣ್ಮರವಿಟ್ಟಂ ೩೯

ವ॥ ಎಂದು ಮತ್ತಮಿರದೆ—

ಲಕ್ಷಣವಾಗಿ ಉಳ್ಳ ದಸರದೇವನು ಆಗ ಶೋಭಿಸುತ್ತಿದ್ದನು. ವ॥ ಆ ರೀತಿ ಶೋಭಿಸುತ್ತಿದ್ದ (ತನ್ನನ್ನು) ಆ ಮಲ್ಲಿನಾಥನೆಂಬ ಕಪಟ ಹೆಸರಿನವನು ಹೊಡೆಯುತ್ತಿರಲು, ತಲೆಯೆಲ್ಲ ಸೀಳಿ, ಒಡೆದು ಹೋಗಲು ಭಕ್ತ ಶ್ರೇಷ್ಠನೂ, ಕ್ಷಮಾ ರಾಶಿಯೂ ಆದ ದಸರಯ್ಯನು ಧೈರ್ಯಗೆಡದೆ ತನ್ನಲ್ಲಿಯೇ ಹೀಗೆಂದುಕೊಂಡನು. ೩೭. '(ಈ) ಮಹಿಮನು ಅಪರಾಧವಿಲ್ಲದೆಯೇ ನನ್ನ ತಲೆಯನ್ನು ಬಡಿಯುತ್ತಿರುವನೇ ? (ಅಲ್ಲ) ಇದು (ನನಗೆ) ಬುದ್ಧಿಯನ್ನು ಕಲಿಸುವ (ಒಂದು) ನೆಪವೂ ಭಕ್ತಿಯ ಉಪದೇಶವೂ ಆಗಿರುವುದು. ನಾನು ಧನ್ಯನಾದೆನು.' ೩೮. 'ಲೋಕದಲ್ಲಿ ಹರವಿಯನ್ನು ಕೊಂಡುಕೊಳ್ಳುವವರು (ಮೊದಲು) ಅದನ್ನು ಕೈಯಿಂದ ಬಾರಿಸಿ (ನೋಡಿ) ಕೊಂಡುಕೊಳ್ಳುವದಿಲ್ಲವೇ ? ಈ ಘನಮಹಿಮನು ನನ್ನ ತಲೆಬುರುಡೆಯನ್ನು ಗಟ್ಟಿಯಾಗಿ ಬಾರಿಸಿ ನೋಡಿ ಸತ್ಯವನ್ನು (ಸ್ಥಿರಾಂಶವನ್ನು) ಪರೀಕ್ಷೆ ಮಾಡಿ ನನ್ನನ್ನು ಅಂಗೀಕರಿಸುವನು.' ೩೯. ಹಿಂದೆ ಗುರುಮೂರ್ತಿಯು ನನ್ನ ಪೂರ್ವದಲ್ಲಿದ್ದ ಶರೀರವು ನಾಶವಾಗಲು (ಅಂದರೆ ಪ್ರಾಕೃತ ಶರೀರವನ್ನು ಕಳೆದು ಮಂತ್ರ ಶರೀರವನ್ನಾಗಿ ಮಾಡಲು) ತನ್ನ ಮಂಗಳಕರವಾದ ಹಸ್ತವನ್ನು (ತಲೆಯ ಮೇಲೆ) ಶೀಘ್ರವಾಗಿ ಇಟ್ಟನು (ಅಂದರೆ ಹಸ್ತಮಸ್ತಕ ಸಂಯೋಗವನ್ನುಂಟು ಮಾಡಿದನು). ಈಗ ನನ್ನನ್ನು ಶಿವಭಕ್ತನನ್ನಾಗಿ ಮಾಡಬೇಕೆಂದು ತಲೆಯ ಮೇಲೆ ಮತ್ತೊಮ್ಮೆ ಹಸ್ತವನ್ನಿಟ್ಟನು.' ವ॥ ಹೀಗೆಂದು ಅನ್ನುತ್ತ ಮತ್ತು ತಪ್ಪದೆ–

ಒಳಗೆ ಮದೀಯ ಮಸ್ತಕಮಣಂ ಕಠಿನಂ ಪೊಡೆದಪ್ಪನಯ್ಯನು
ಜ್ವಳನ್ಮೃದುಪಾಣಿಪದ್ಮಮೆನಿತಕ್ಕಟನೊಂದುದೊ ಲಿಂಗಜಂಗಮಾ
ವಳಿಗೆಱಗಿರ್ದ ಪೆರ್ಮೆ ತನಗುಳ್ಕೊಡೆ ಮಲ್ಲಸದತ್ತಮಾಂಗಮೊ
ಳ್ಪಳವಡೆ ಪುಷ್ಪದಂತೆ ಮೃದುವಕ್ಕೆ ಗಡೀತನ ಪಾಣಿಗನ್ವಿತಂ ೪೦

ಶಿರಮತಿ ಕಠಿನಂ ಪೊಡೆದೊಡೆ
ಕರದ್ವಯಂ ನೋಗುಮೆಂದು ನುಡಿದೊಡೆ ಮನದೊ
ಳ್ಕೊರಗುವನೊ ನಿಜಶಿರೋವ್ಯಥೆ
ಗಿರದೀತಂ ನೆವಮನಿಟ್ಟು ನುಡಿದಪನೆನುತುಂ ೪೧

ನೆನೆದೊಂದುಪಾಯಮಂ ಮಣಿ
ದನುನಯದಿಂ ದೇವ ನಿನ್ನ ಮೃದುಕರಮಿದು ಮ
ದ್ಘನಕಠಿನ ಮಸ್ತಕದ ತಾ
ಡನದಿಂ ನೊಂದಪ್ಪುದೀಗಳೆನ್ನಯ ಮೆಯ್ಯೊಳ್ ೪೨

ಮೃದುವಪ್ಪೆಡೆಯಂ ಪೊಡೆ ನೀ
ನದಱಿಂಬಿನದಕ್ಕೆ ಕೊಱತೆಯಾವುದೊ ನಿನ್ನೀ
ಸದಮಳ ಕರಯುಗಳಂ ನೋ
ಯದು ಗಡ ಮದನುಗ್ರಹಾರ್ಥಮಿಂತಿದೆ ಕಜ್ಜಂ ೪೩

೪೦. 'ನನ್ನ ತಲೆಯ ಒಳಭಾಗವು ಬಹಳ ಕಠಿಣವಾಗಿದೆ. (ಇಂತ ಕಠಿಣವಾದ ತಲೆಯನ್ನು) ಹೊಡೆಯುತ್ತಿರುವ ಈ ಅಯ್ಯನ ಪ್ರಕಾಶಮಾನವಾದ ಮೆತ್ತನೆಯ ಕರಕಮಲಗಳು ಅಕ್ಕಟಾ ! ಅದೆಷ್ಟು ನೋವಾದುವೋ ! ಲಿಂಗಜಂಗಮ ಸಮೂಹಕ್ಕೆ ನಮಸ್ಕಾರ ಮಾಡಿದ್ದ ಹಿರಿಮೆಯು ತನಗೇನಾದರೂ ಇದ್ದರೆ, ಈತನ ಕೈಗಳಿಗೆ ಸಂಬಂಧಿಸಿದ (ಸಿಲುಕಿರುವ) ನನ್ನ ಪ್ರಕಾಶಿಸುವ ತಲೆಯು ಒಳ್ಪಿನಿಂದ ಕೂಡಿ ಹೂವಿನ ಹಾಗೆ ಮೃದುವಾಗಿ ಆಗಲಿ ! ಅಲ್ಲವೆ!! ೪೧–೪೩. (ನನ್ನ) ತಲೆಯಾದರೋ ಅತಿ ಕಠಿಣ ; ಹೊಡೆದರೆ ಎರಡೂ ಕೈಗಳು ನೋಯುತ್ತವೆ ಎಂದು ಹೇಳಿದರೆ, ಮನಸ್ಸಿನಲ್ಲಿ ಮರುಗುವನೋ ಏನೋ ! ಇವನು ತನ್ನ ತಲೆಯ ನೋವಿನ ವ್ಯಥೆಗೆ ತಪ್ಪದೆ ನೆಪವನ್ನು ಇಟ್ಟು (ಹೀಗೆ) ನುಡಿಯುತ್ತಾನೆಯೋ ಏನೋ, ಎಂದುಕೊಂಡಾನೆಂದು ಯೋಚಿಸುತ್ತ ಒಂದು ಉಪಾಯವನ್ನು ಜ್ಞಾಪಿಸಿಕೊಂಡು, ಪ್ರೀತಿಯಿಂದ (ಆ ಮೋಟು ಮಲ್ಲನಿಗೆ) ನಮಸ್ಕರಿಸಿ 'ದೇವ, ನಿನ್ನ ಈ ಕರವು ಮೃದುವಾದದ್ದು ; ನನ್ನ ಈ ದೊಡ್ಡದಾದ ತಲೆಯು ಗಟ್ಟಿಯಾದದ್ದು ; (ಆದ್ದರಿಂದ) ತಲೆಯನ್ನು ಹೊಡೆಯುವುದರಿಂದ (ಇವು) ನೋಯುತ್ತವೆ. ಈಗ ನನ್ನ ಮಯ್ಯಲ್ಲಿ ಮೃದುವಾಗಿರುವ ಸ್ಥಾನಗಳನ್ನು ನೀನು ಹೊಡೆ. ಅದರಿಂದ (ನಿನ್ನ) ವಿನೋದಕ್ಕೆ ಕೊರತೆ ಯಾವುದೋ ! (ಆಗ) ಈ ನಿರ್ಮಲವಾದ ಎರಡು ಕೈಗಳೂ, ನೋಯುವುದಿಲ್ಲವಲ್ಲವೇ ! ನನ್ನನ್ನು ಅನುಗ್ರಹಿಸುವುದಕ್ಕೋಸುಗ ಈ ರೀತಿಯ ಕಾರ್ಯ ಇದೇ'. (ಈ ಕಾರ್ಯದಿಂದ ಈಗ ಅನುಗ್ರಹಿಸು ಎಂದು ಭಾವ)

ಎಂದೊಯ್ಯನೆ ನುಡಿವುತ್ತುಂ
ವಂದಿಸುತುಂ ದೇವ ನಿನ್ನ ಕರಸರಸಿರುಹಂ
ನೊಂದುದಕಟಕಟೆನುತೆ ಬಗೆ
ಗುಂದಿ ಕರಂ ದಸರನವನ ಪೋಟಿತಕರಮಂ ೪೪

ನಿಜಕರದಿಂದೆ ತಾಂ ಪಿಡಿದು ನೋಡಿ ನಿಗುರ್ಚಿ ನಿಗುರ್ಚಿ ನೇಹದಿಂ
ವೃಜಿನವಿದೂರನೊತ್ತಿ ತೆಗೆಯುತ್ತಿರೆ ಚಿತ್ರಮದೆಂತೊ ರಕ್ತನೀ
ರಜನಿಭಪಾಣಿ ತಳ್ತಲರ್ದು ಮೂಡಿ ವಿರಾಜಿತಮಾದುದಂದು ಕಾ
ಯಜರಿಪುವಿಂದೆ ಬಾಣಕರಪಂಕಜಮೊಲ್ದೊಗೆತಂದ ಮಾಳ್ಕೆಯಿಂ ೪೫

ವ॥ ಮತ್ತಂ—

ಮೊರಟದ ಬಂಕಿದೇವವಿಭುವಿಂದೆ ಕೊರಂಟು ತಳಿರ್ತ ಪಾಂಗಿನಿಂ
ಪರಮಗುಣಾಂಕ ಚನ್ನಯನ ಜಿಹ್ವೆಗೆ ಮಂಜುಳ ಭಕ್ತಿಭಾವದಿಂ
ಕರಮೊಗೆದಂತೆ ಶಾಂತ ದಸರಯ್ಯನ ಭಾವದ ಬಲ್ಪಿನಿಂದಮಂ
ಕುರಿಸಿ ನಿಮಿರ್ಕೆವೆತ್ತು ಕರಪಲ್ಲವಮೊಪ್ಪಿದುದಾ ತಪಸ್ವಿಯಾ ೪೬

ದಸರವಿಭುಭಕ್ತಿಚೈತ್ರಂ
ಪಸರಿಸಿ ಸೋಂಕಿಂದೆ ಜಂಗಮಸ್ಥಾಣುವಲಂ

೪೪–೪೫. ಹೀಗೆಂದು ಸಾವಕಾಶವಾಗಿ (ಮೆಲ್ಲನೆ) ನುಡಿಯುತ್ತ, ನಮಸ್ಕಾರ ಮಾಡುತ್ತ, ದೇವ, ನಿನ್ನ ಹಸ್ತ ಕಮಲಗಳು ನೊಂದವು. ಅಕ್ಕಟ ! ಅಕ್ಕಟ !! ಎನ್ನುತ್ತ, ಕುಂದಿದ ಮನಸ್ಸಿನವನಾಗಿ, ದಸರಯ್ಯನು ಅವನ ಆ ಪೋಟು ಕೈಯ್ಯನ್ನು ಚೆನ್ನಾಗಿ (ಆ) ಪಾಪ ವಿದೂರನಾದ ದಸರಯ್ಯನು ತನ್ನ ಕೈಗಳಿಂದ ಹಿಡಿದು, ನೆಟ್ಟಗೆ ಮಾಡಿ ಮಾಡಿ ನೋಡಿ, ಸ್ನೇಹದಿಂದ (ಪ್ರೀತಿಯಿಂದ) ಒತ್ತಿ ತೆಗೆಯುತ್ತಿರಲು (ಆಯಾಸಪರಿಹಾರ ಮಾಡುತ್ತಿರಲು) ಅದೆಂತಹ ಆಶ್ಚರ್ಯವೋ ! ಆಗ ಕೆಂದಾವರೆಗೆ ಸಮಾನವಾದ ಹಸ್ತವು ಸೇರಿಕೊಂಡು, ವಿಕಾಸಗೊಂಡು ಮೂಡಿ, (ಹಿಂದೆ) ಮನ್ಮಥಾರಿಯಾದ ಶಿವನ ಪ್ರೀತಿಯಿಂದ ಬಾಣಾಸುರನ ಹಸ್ತಕಮಲವು ಹುಟ್ಟಿದ ಹಾಗೆ ವಿರಾಜಮಾನವಾಯಿತು. ವ॥ ಮತ್ತು—
೪೬. ಮೊರಟದ ಬಂಕಿದೇವ ಪ್ರಭುವಿನಿಂದ ಕೊರಡು ಚಿಗುರಿದ ರೀತಿಯಿಂದ, ಪರಮ ಗುಣಗಳೇ ಗುರುತಾಗಿ ಉಳ್ಳ ಮಾದರ ಚೆನ್ನಯ್ಯನ ಮನೋಹರ ಭಕ್ತಿ ಭಾವದಿಂದ ಅವನ ನಾಲಿಗೆಗೇ ಕೈಗಳು ಹುಟ್ಟಿದಂತೆ (ಈ ಚೆನ್ನಯ್ಯನ ನಾಲಿಗೆಯೆಂಬ ಕೈಗಳ ಮೂಲಕವಾಗಿಯೇ ಈಶ್ವರನಿಗೆ ಅಂಬಲಿಯ ಪ್ರಸಾದವನ್ನು ಅರ್ಪಿಸಿದ ಕಾರಣ, ಆ ನಾಲಿಗೆಯೇ ಕೈಗಳಾಗಿ ಮಾಡಿದ ಹಾಗೆ) ಶಾಂತಿಯಿಂದ ಕೂಡಿದ ದಸರಯ್ಯನ ಮನಸ್ಸಿನ ಶಕ್ತಿಯ (ಸಾಮರ್ಥ್ಯದಿಂದ) ಮೊಳಕೆಯಾಗಿ ಉದ್ದವಾಗಿ ಬೆಳೆದು ಆ ತಪಸ್ವಿಯ (ಆ ಕಪಟ ತಪಸ್ವಿಯ) ಚಿಗುರಿನಂತಹ ಕೈಗಳು ಶೋಭಿಸಿದವು.
೪೭. ದಸರದೇವನ ಭಕ್ತಿಯೆಂಬ ಚೈತ್ರ ಮಾಸವು ಪ್ರಸಾರಗೊಳ್ಳಲು, (ಅದರ) ಸ್ಪರ್ಶದಿಂದ ಜಂಗಮವೆಂಬ ಪೋಟು ಮರವು ಅತಿಶಯವಾಗಿ ಬೆಳೆದು ಚಿಗುರಿದ

ಪೊಸರೆ ತಳಿರ್ತವೊಲೇಂ ಕಂ
ಗೆಸೆದುವೊ ಲಸದರುಣಪಾಣಿಪಲ್ಲವಯುಗಳಂ ೪೭

ವ ॥ ಮತ್ತಮಾ ದಯಾರಸನಿಧಿಯ ಶಾಂತಿರಸಕಾಸಾರದೊಳುಳ್ಳಲರ್ದ ಕೆಂದಾವರೆಗಳಂತೆಯುಮಾ ಭಕ್ತಿಸರೋನಿಧಿಯ ಭಕ್ತಿಭಾಮಿನೀಕರ್ಣಾವತಂಸಂಗೆಯ್ದು ತಳೆದ ಚಂದಳಿರ್ಗಳಂತೆಯುಮುಳವಿಗಳಿದ ಸೌಂದರ್ಯಮನೊಳಕೊಂಡು ತಳತಳಿಸಿ ಪೊಳೆವ ಬಳ್ಳಿವೆಳಗಿಂ ಪಗಿಲ್ತ ಬೆಳ್ಳುಗುರ್ಗಳೆಂಬ ತರಳ ತಾರಗೆಗಳ್ಗೆ ಸಂಧ್ಯಾರಾಗರುಚಿಯಂ ಪೂರೈಪ ಸೋಂಪಡರ್ದ ಕೆಂಪಂ ತಳೆದು ತೆಜಿಂಬೊಳೆವ ಭಸಿತಾನುಲಿಪ್ತದೀರ್ಘಬಾಹಾಮೃಣಾಳನಾಳದಗ್ರದೊಳಮರ್ದರುಣಸರಸಿರುಹಮೆನಿಸಿ ತತ್ಕರಂಗಳ್ಕರಮೆಸೆದಿರ್ದುವಂತುಮಲ್ಲದೆ—

ಇರುಳಂತೆ ನಖಮಣಿಪ್ರ
ಸ್ಫುರಿತಂ ಪಗಲಂತಿರರುಣರುಚಿಶೋಭಿ ಸುಧಾ
ಕರನಂತೆ ಪರ್ವಶೋಭಾ
ಕರಮಾ ಕರಮಭ್ರದಂತೆ ಲೇಖಾಧಾರಂ ೪೮

ಹಾಗೆ ಪ್ರಕಾಶಿಸುವ ಕೆಂಪಾದ ಚಿಗುರಿನೋಪಾದಿಯಲ್ಲಿರುವ ಕರಯುಗ್ಮಗಳು ಕಣ್ಣಿಗೆ ಅದೇನು ಶೋಭಿಸಿದವೋ ? ವ॥ ಮತ್ತು ಆ ಕೈಗಳು ಕೃಪಾ ಸಮುದ್ರನಾದ ಆ ದಸರಯ್ಯನ ಶಾಂತಿರಸವೆಂಬ ಸರೋವರದಲ್ಲಿ ಚೆನ್ನಾಗಿ ಅರಳಿದ ಕೆಂಪು ತಾವರೆಗಳಂತೆಯೂ, ಶಿವಭಕ್ತಿಗೆ ಸಮುದ್ರ ಸ್ವರೂಪನಾದ ಅವನ ಆ ಶಿವಭಕ್ತಿಯೆಂಬ ಹೆಂಗಸಿನ ಹಸ್ತಕ್ಕೆ ಆಭರಣವನ್ನಾಗಿ ಮಾಡಿ, ಧರಿಸಿದ ಕೆಂಪಾದ ಚಿಗುರುಗಳ ಹಾಗೆಯೂ, ಗಣನಾತೀತವಾದ ಸೌಂದರ್ಯದಿಂದ ಕೂಡಿ, ತಳ ತಳಿಸಿ ಹೊಳೆಯುವ ಬಳ್ಳಿಯ ಹಾಗಿರುವ ಕಾಂತಿಯಿಂದ ಹಬ್ಬಿದ ನೀಳವಾದ ಉಗುರುಗಳೆಂಬ ಚಂಚಲ ನಕ್ಷತ್ರಗಳಿಗೆ ಸಂಧ್ಯಾ ಕಾಲದ ಕೆಂಪಿನ ಕಾಂತಿಯನ್ನು ಪರಿಪೂರ್ತಿಗೊಳಿಸುವ ಸೊಗಸುಗೊಂಡ ಅರುಣ ವರ್ಣವನ್ನು ಹೊಂದಿ, ಪ್ರಕಾಶಿಸುವ ವಿಭೂತಿಯಿಂದ ಬಳಿಯಲ್ಪಟ್ಟ ಉದ್ದವಾದ ಭುಜಗಳೆಂಬ ತಾವರೆಯ ದಂಟಿನ ಕೊನೆಯಲ್ಲಿ ಸೇರುವೆಗೊಂಡ ಕೆಂಪು ತಾವರೆಯೋ ಎಂದೆನಿಸಿ ಚೆನ್ನಾಗಿ ಶೋಭಿಸಿದವು—ಹಾಗೂ ಅಲ್ಲದೆ—೪೮. ಅವನ ಆ ಹಸ್ತವು-ರಾತ್ರಿಯ ಹಾಗೆ—ರತ್ನ ಸದೃಶಗಳಾದ ಉಗುರುಗಳಿಂದ ಪ್ರಕಾಶಮಾನವಾದುವು. [ರಾತ್ರಿಯು—ಸೂರ್ಯನ ಇಲ್ಲದಿರುವಿಕೆಯಿಂದ ಪ್ರಕಾಶಿಸುವುದು (ನ + ಖಮಣಿ)] ; ಹಸ್ತವು—ಹಗಲಿನ ಹಾಗೆ—ಕೆಂಪಾದ ಕಾಂತಿಯಿಂದ ಪ್ರಕಾಶಮಾನವಾದದ್ದು ; (ಹಗಲು—ಸೂರ್ಯನ ಕಾಂತಿಯಿಂದ ಪ್ರಕಾಶಿಸುವುದು); ಕರವು—ಚಂದ್ರನ ಹಾಗೆ—ಪರ್ವ ಎಂದರೆ ಗಿಣ್ಣು ಗಿಣ್ಣುಗಳ ಶೋಭೆಗೆ ಆಗರವಾದದ್ದು ; (ಚಂದ್ರನು—ಪರ್ವ ಎಂದರೆ ಹುಣ್ಣಿಮೆಯ ಕಾಲಗಳಲ್ಲಿ ಕಾಂತಿಗೆ ಆಗರವಾದದ್ದು); ಕರವು—ಆಕಾಶದ ಹಾಗೆ—ರೇಖೆಗಳಿಗೆ ಅಂದರೆ ಹಸ್ತದಲ್ಲಿರುವ ರೇಖೆಗಳಿಗೆ ಆಧಾರಭೂತವಾದದ್ದು ; (ಆಕಾಶವು—ಲೇಖ ಎಂದರೆ ದೇವತೆಗಳಿಗೆ

ಅದು ಪಂಚಾಕ್ಷರದಂತೆಪೋಲ್ಪ್ರಣವವರ್ಣಪ್ರಾಂಚಿತಂ ಭಸ್ಮದಂ
ತುದಿತ ಶ್ರೀಕರಲಕ್ಷಣಪ್ರಕಟಿತಂ ರುದ್ರಾಕ್ಷಿಯಂತಿಷ್ಟಸಂ
ಪದದಾನೋತ್ತಮಭೂಷಣಂ ಗಿರಿಶನೆಂತಂತಬ್ಜರೇಖಾಶ್ರಿತಂ
ಮದನಾರಾತಿಯ ಭಕ್ತನಂತೆ ಸತತಾಶೋಕೋರುರಾಗೋರ್ಜಿತಂ ೪೯

ವ॥ ಮತ್ತಮಾ ಕರಂ ತಾಪಸತಪೋವೃತ್ತಿಯಂತೆ ಸಕಲ ಪುರುಷಾರ್ಥಪ್ರದಮುಂ ಶಿವದೀಕ್ಷೆಯಂತೆ ಪೂರ್ವವರ್ಣನಿವಾರಕಮುಂ ಹರವರಾಭಯಕರದಂತೆ ಸುಪರ್ವ ಶೋಭಾವಹಮುಂ ವೇದಾದಿ ವರ್ಣದಂತೆ ಕಳಾವಿರ್ಭಾವಕರಮುಂ ಶಿವಯೋಗೀಗಣದಂತಾತ್ಮಲಿಂಗಪೂಜೋಚಿತಕರಣಮುಂ ಪಾಶ

ಆಶ್ರಯವಾದದ್ದು) ೪೯. (ಆ ಕಪಟ ವೇಷದ ಜಂಗಮನ ಚಿಗುರಿದ) ಆ ಹಸ್ತವು-ಪಂಚಾಕ್ಷರಿ ಮಂತ್ರದ ಹಾಗೆ-ಪ್ರಣವ ಎಂದರೆ ಪ್ರಕೃಷ್ಟವಾಗಿಯೂ ನೂತನವಾಗಿಯೂ ಇರುವ ಬಣ್ಣದಿಂದ ಪೂಜ್ಯವಾದದ್ದಾಗಿತ್ತು ; (ಪಂಚಾಕ್ಷರಿಯು-ಪ್ರಣವ ವರ್ಣವಾದ ಓಂಕಾರದಿಂದ ಪೂಜ್ಯವಾದದ್ದಾಗಿದೆ); ಹಸ್ತವು-ಭಸ್ಮದ ಹಾಗೆ-ಉದಿತವಾದ ಅಂದರೆ ಉದಯವಾಗುವ ಅಷ್ಟೈಶ್ವರ್ಯ (ಶ್ರೀ) ವನ್ನು ಉಂಟು ಮಾಡುವ (ಕರ), ಧನ ರೇಖೆಯೇ ಮೊದಲಾದ (ಹಸ್ತ ಸಾಮುದ್ರಿಕಾ ಶಾಸ್ತ್ರದ) ಲಕ್ಷಣಗಳಿಂದ ಪ್ರಸಿದ್ಧವಾದದ್ದಾಗಿತ್ತು ; (ಭಸ್ಮವು-ಉದ್ಧಾರ ಕಾರಣವಾದ ಮೋಕ್ಷ ಸಂಪತ್ತನ್ನು ಉಂಟು ಮಾಡುವ ಚಿಹ್ನೆಯಿಂದ ಪ್ರಸಿದ್ಧವಾದದ್ದು); ಹಸ್ತವು-ರುದ್ರಾಕ್ಷಿಯ ಹಾಗೆ-ಇಷ್ಟವಾದ ಸಂಪತ್ತನ್ನು ದಾನ ಮಾಡುವುದೇ ಮೊದಲಾದ ಉತ್ಕೃಷ್ಟವಾದ ಆಭರಣವಾಗಿ ಉಳ್ಳದ್ದು ; (ರುದ್ರಾಕ್ಷಿಯು-ಇಚ್ಛೆಪಟ್ಟ ಸಂಪತ್ತನ್ನು ಕೊಡುವುದರಿಂದ ಶ್ರೇಷ್ಠವಾದ ಆಭರಣವಾಗಿದೆ) ಹಸ್ತವು-ಶಿವನು ಹೇಗೋ ಹಾಗೆ-ಅಬ್ಜ ಎಂದರೆ-ಸಮುದ್ರದಲ್ಲಿ ಹುಟ್ಟುವ ಶಂಖವೇ ಮೊದಲಾದ ಗೆರೆಗಳಿಂದ ಆಶ್ರಯಿಸಲ್ಪಟ್ಟದ್ದು ; [ಶಿವನು-ಅಬ್ಜ ಎಂದರೆ ಚಂದ್ರನ ಒಂದು ಕಲೆಗೆ (ರೇಖೆಗೆ) ಆಶ್ರಯ ಕೊಟ್ಟವನು] ಹಸ್ತವು-ಮದನಾರಾತಿಯಾದ ಶಿವನ ಭಕ್ತನಂತೆ-ನಿರಂತರದಲ್ಲೂ, ಅಶೋಕ ವೃಕ್ಷದ ಹಾಗೆ ಅಧಿಕವಾದ ಕೆಂಪು ಬಣ್ಣ (ರಾಗ) ದಿಂದ ಕೂಡಿದ ತೇಜಸ್ಸುಳ್ಳದ್ದು ; [ಮದನಾರಾತಿಯ ಭಕ್ತನು-ನಿರಂತರದಲ್ಲೂ ಶೋಕ ರಹಿತನಾಗಿ (ಅಶೋಕ) ವಿಷಯಾಭಿಲಾಷೆಗಳಿಂದ ದೂರನಾಗಿ ಊರ್ಜಿತಗೊಂಡಿರುವನು] (ಈ ರೀತಿಯಲ್ಲಿ ಆತನ ಕೈಗಳು ಒಪ್ಪಿದ್ದವು-ಎಂದು ಭಾವ.) ವ॥ ಮತ್ತು ಆ ಕರವು-ತಾಪಸರ ತಪೋ ವ್ಯವಹಾರದ ಹಾಗೆ-ಸಕಲ ಪುರುಷ ಎಂದರೆ ಸಮಸ್ತ ಪುರುಷರಿಗೂ ಅರ್ಥ ಎಂದರೆ ಸಂಪತ್ತನ್ನು ಕೊಡತಕ್ಕಂಥಾದ್ದು ; (ತಾಪಸ ವೃತ್ತಿಯು-ಸಕಲರಿಗೂ ಧರ್ಮಾರ್ಥ ಕಾಮ ಮೋಕ್ಷ ರೂಪವಾದ ಫಲಗಳನ್ನು ಕೊಡತಕ್ಕಂಥಾದ್ದು); ಕರವು-ಶಿವ ದೀಕ್ಷೆಯಂತೆ-ಪೂರ್ವದ ಬಣ್ಣವನ್ನು ಹೋಗಲಾಡಿಸಿಕೊಂಡಂತಹುದು). (ದೀಕ್ಷೆಯು-ಮೊದಲಿನ ವರ್ಣ ಎಂದರೆ ಜಾತಿಯನ್ನು ಹೋಗಲಾಡಿಸುವಂತಹುದು); ಕರವು-ಹರನ ವರದ ಅಭಯ ಕರದಂತೆ-ಅಂದರೆ ಶಿವನ ವರ ಮತ್ತು ಅಭಯ ಇವುಗಳನ್ನುಂಟುಮಾಡುವ ಹಸ್ತದ ಹಾಗೆ-

ಪತಾಸ್ತ್ರದಂತೆ ಗುರುಶಿಷ್ಯ ಸಮೀಹಿತ ಪ್ರದಮುಂ ಕಣ್ಣಪ್ಪದೇವಪಾದುಕೆಯಂತೆ ಶಿವೋತ್ತಮಾಂಗ ಸ್ಪರ್ಶಿಯುಂ ಶಿವನಾಗದೇವ ಕರಾಬ್ಜದಂತೆ ಪರಮಾಮೃತಪ್ರದಾನಮಹಿತಮುಮೆನಿಸಿ—

ಕರಮೆರಡುಮಿಂತು ರಂಜಿಸು
ತಿರೆ ಕೊರಲಾ ಬಱಿಯ ಸೆಜ್ಜೆ ಲಿಂಗಮನಾಳ್ದೊ
ಪ್ಪಿರೆ ಚರವೇಷಮದಳವ
ಟ್ಟಿರೆ ತನಗಾ ಮಲ್ಲಿದೇವನೀಕ್ಷಿಸುತಾಗಳ್ ೫೦

ಬಗೆ ಬೆದಱುತ್ತೆ ಸಂತಸಮನಾಸುತೆ ನೋಡುತೆ ತನ್ನ ಚಾರು ಪಾ
ಣಿಗಳನರಲ್ದೊಱಲ್ದು ಪೊಸ ಸೆಜ್ಜೆಯ ಲಿಂಗಮನಂಟಿ ವೇಳೆ ವೇ
ಳೆಗೆ ಬಗೆದೀಕ್ಷಿಸುತ್ತೆ ದಸರಯ್ಯನ ನಿಟ್ಟಿಸುತಲ್ಲಿ ಲಜ್ಜೆಯಿಂ
ಮಿಗೆ ತಲೆವಾಗಿ ಮಲ್ಲವಿಭುವಂಗುಟದಿಂ ಬರೆವುತ್ತೆ ಧಾತ್ರಿಯಂ ೫೧

ಮುನ್ನೆಗಳ್ದ ತನ್ನ ತಪ್ಪುಗ
ಳನ್ನೆನೆವುತೆ ದಸರನಮಳ ಶಮದಮಗುಣಸಂ

ಒಳ್ಳೆಯ ಹಸ್ತ, ಮೊಳಕೈ, ತೋಳುಗಳ ಭಾಗಗಳಿಂದ ಕೂಡಿದುದು ; [ಅಭಯ ಕರವು–ದೇವತೆ (ಸುಪರ್ವ) ಗಳಿಗೆ ಸದಾ ಶೋಭೆಯನ್ನು ಉಂಟು ಮಾಡುವಂತಹುದು] ಕರವು–ವೇದಾದಿ ವರ್ಣದಂತೆ–ಕಳೆಯ ಆವಿರ್ಭಾವದಿಂದ (ನೂತನ ಕಳೆಯ ಹೊರ ಹೊಮ್ಮುವಿಕೆಯಿಂದ) ಅತಿಶಯಗೊಂಡದ್ದಾಗಿರುವುದು. [ವೇದಾದಿ ವರ್ಣವು–ಷಂಗಡವಾಗಿರುವ ನಾಲ್ಕು ವೇದಗಳಲ್ಲಿನ ಅಕ್ಷರ ವಿದ್ಯೆಯನ್ನು (ತಿಳುವಳಿಕೆಯನ್ನು) ಉಂಟುಮಾಡುವಂಥವುಗಳಾಗಿರುವುವು.]; ಕರವು–ಶಿವಯೋಗಿ ಗಣದಂತೆ–ಇಷ್ಟಲಿಂಗ ವನ್ನಿಟ್ಟುಕೊಂಡು ಪೂಜೆ ಮಾಡಲು ಯೋಗ್ಯವಾದ ಉಪಕರಣವಾಗಿರುವುದು ; [ಯೋಗಿ ಗಣವು–ತಮ್ಮ ಇಷ್ಟಲಿಂಗ ಪೂಜೆಗೆ ಉಚಿತವಾದ ಇಂದ್ರಿಯ ವ್ಯಾಪಾರದಿಂದ (ಅಂದರೆ ಶಮದಮಾದಿ ಇಂದ್ರಿಯ ವ್ಯಾಪಾರ) ಕೂಡಿರುವಂತಹುದು]; ಕರವು–ಪಾಶುಪ ತಾಸ್ತ್ರದಂತೆ–ಗುರುವು ಶಿಷ್ಯನ ಆಸೆಯಾದ ಶಿವನ ಅನುಗ್ರಹವನ್ನು ಕೊಡುವಂತಹುದು; (ಪಾಶುಪತಾಸ್ತ್ರವು–ಶಿಷ್ಯನು ಅಪೇಕ್ಷಿಸಿದ ಜಯ ಲಾಭವನ್ನು ಕೊಡುವಂತಹುದು.) ಕರವು–ಕಣ್ಣಪ್ಪದೇವನ ಕೆರವಿನಂತೆ–ಮಂಗಳಕರವಾದ ಉತ್ತಮಾಂಗ ಅಂದರೆ ತಲೆ ಯನ್ನು ಸ್ಪರ್ಶ ಮಾಡಿದುದು ; (ಕಣ್ಣಪ್ಪದೇವರ ಪಾದುಕೆಯು–ಶಿವನ ಉತ್ತಮಾಂಗದ ಮೇಲೆ ಇಡಲ್ಪಟ್ಟದು.) ಕರವು–ಶಿವನಾಗ ದೇವನ ಕರಕಮಲದಂತೆ–ಶ್ರೇಷ್ಠವಾದ ಸಂಪತ್ತಾಗಿ ಮೃತಪಾಗಿದ್ದ ಕೈಗೆ ಪೂರ್ಣ ಹಸ್ತವಾಗುವ ವರಪ್ರದಾನದಿಂದ ಕೂಡಿ ದುದು ; (ಶಿವನಾಗಮಯ್ಯನ ಕರಕಮಲವು–ಪರಮ ಅಂದರೆ ಶ್ರೇಷ್ಠವಾದ ಹಾಲನ್ನು (ಅಮೃತ) ಸುರಿಸುವುದರ ಮೂಲಕ ಮಹತ್ವವುಳ್ಳದ್ದು ಎನಿಸಿತ್ತು.) ೫೦–೫೨. ಎರಡೂ ಕೈಗಳೂ ಹೀಗೆ (ಆ ಕಪಟ ವೇಷದ ಜಂಗಮನಾದ ಮೋಟ ಮಲ್ಲನಿಗೆ) ವಿರಾಜಿಸುತ್ತಿರಲಾಗಿ, ಕೊರಳ ಆ ಬರಿದಾದ ಕರಡಿಗೆಯಲ್ಲಿ ಶಿವಲಿಂಗವು ತುಂಬಿಕೊಂಡು

ಪನ್ನತೆಯುಂ ಬಗೆವುತೆ ಮಹಿ
ಮೋನ್ನತಿಯುಂ ಭಾವಿಸುತ್ತೆ ತಾಪಸನಿರ್ದಂ ೫೨

ದಸರಯ್ಯಂ ತಚ್ಚರಪದ
ಬಿಸಜಕೆ ಪೊಡಮಡುತೆ ಮತ್ತಮೊತ್ತುತೆ ಕರಸಾ
ರಸಮಂ ಚಿಟುಂಕಿಸುತೆ ಸ
ಲ್ಲಸಿತಾಂಗುಲಿಯುಂ ಕಡಂಗುತೊಪ್ಪಿರೆ ಕೆಲದೊಳ್ ೫೩

ಕರುಣಾರಸಭರಿತೇಕ್ಷಣ
ಶರಣರ್ನಡೆ ನೋಡಿ ಪುಳಕಮಂ ತಾಳ್ದು ಕಳೇ
ವರದೊಳಿದು ಲೇಸು ಲೇಸೆಂ
ದಿರದಾನಂದಿಸುತೆ ದಸರನಂ ಕೀರ್ತಿಸಿದರ್ ೫೪

ನಿರುಪಮಶಾಂತ ನಿರ್ಜಿತಲತಾಂತಕಳಂಬ ಕಳಾನಿಶಾಂತ ಶಾಂ
ಕರಮತಪಾರಿಜಾತ ಶಮಿತೇಂದ್ರಿಯಜಾತ ಸದಾಭಿಜಾತ ಬಂ
ಧುರಗುಣಭೂಷ ಭಕ್ತಹಿತಭಾಷ ಭವಾಮಯಭೇಷಜಾಂಘ್ರಿಪಂ
ಕರುಹ ಕೃಪಾಕಟಾಕ್ಷ ಸಚರಾಚರರಕ್ಷಣ ಸದ್ವಿಚಕ್ಷಣಾ ೫೫

ಶಮ ದಮ ಯಮ ನಿಯಮ ಮಹಿಮ
ಹಿಮಕರಧರಶರಣಚರಣಸರಸಿರುಹಮದ

ಒಪ್ಪಿರಲಾಗಿ, ಅವನಿಗೆ ಆ ಜಂಗಮ ವೇಷವು (ನಿಜವಾಗಿ) ಆಳವಟ್ಟಿತು. ಅವನು ತನ್ನನ್ನೇ ತಾನು ನೋಡಿಕೊಂಡು ಬೆದರಿದ ಮನಸ್ಸಿನವನಾದನು; ಸಂತೋಷ ವುಂಟಾಯಿತು; ತನ್ನ ಮನೋಹರ ಕೈಗಳನ್ನು ನೋಡಿಕೊಂಡು–ಉಬ್ಬಿ ಹೋಗಿ, ನೂತನವಾದ ಲಿಂಗದ ಕರಡಿಗೆಯ ಲಿಂಗವನ್ನು ಮುಟ್ಟಿ, ಪ್ರೀತಿಯಿಂದ ವೇಳೆ ವೇಳೆಗೂ ಇಚ್ಛೆಪಟ್ಟು ನೋಡಿಕೊಳ್ಳುತ್ತ ದಸರಯ್ಯನನ್ನು ಕಂಡು ನಾಚಿ ತಲೆ ತಗ್ಗಿಸಿ ಕಾಲಿನ ಹೆಬ್ಬೆರಳಿನಿಂದ ಭೂಮಿಯನ್ನು ಕೆರೆಯುತ್ತ ಈ ಪೂರ್ವದಲ್ಲಿ ತಾನು ಮಾಡಿದ ತಪ್ಪುಗಳನ್ನೆಲ್ಲ ನೆನೆದುಕೊಂಡು ದಸರಯ್ಯನ ಶ್ರೇಷ್ಠ ಶಮ ದಮೆಯೇ ಮೊದಲಾದ ಗುಣ ಸಂಪನ್ನತೆಯನ್ನು ಚಿಂತಿಸುತ್ತ ಅವನ ಮಹಿಮಾ ವಿಶೇಷವನ್ನು ಯೋಚಿಸುತ್ತಿದ್ದನು. ೫೩–೫೪. ದಸರಯ್ಯನು ಆ ಜಂಗಮನ ಪಾದಕಮಲಕ್ಕೆ ನಮಸ್ಕರಿಸುತ್ತ ಪುನಃ (ಅವನ) ಹಸ್ತ ಕಮಲವನ್ನು ಒತ್ತುತ್ತ ಸೊಗಸಾದ ಬೆರಳುಗಳನ್ನು ಚಿಟುಕುಗೊಳಿಸುತ್ತ (ಮುರಿದು ಚಿಟಿಕ್ ಎನಿಸುತ್ತ) ಉತ್ಸಾಹಗೊಂಡು ಶೋಭಿಸುತ್ತಿದ್ದನು. ಪಕ್ಕದಲ್ಲಿ ಕೃಪಾರಸದಿಂದ ತುಂಬಿ ಹೋದ ಕಣ್ಣುಳ್ಳವರಾಗಿ ದಿಟ್ಟಿಸಿ ನೋಡುತ್ತಿದ್ದ ಶರಣರ ಶರೀರದಲ್ಲಿ ರೋಮಾಂಚನವುಂಟಾಯಿತು. 'ಇದು ಲೇಸಾದದ್ದು, ಲೇಸಾದದ್ದು' ಎನ್ನುತ್ತ ಆನಂದಗೊಳ್ಳುತ್ತ ದಸರಯ್ಯನನ್ನು ಹೊಗಳಿದರು. ೫೫–೫೬. 'ಅಸಮಾನ ಕಾಂತಿಯುಳ್ಳ, ಮನ್ಮಥನನ್ನು ಜಯಿಸಿದ, ವಿದ್ಯೆಗಳಿಗೆ ಮಂದಿರನಾದ, ವೀರಶೈವ ಮತಕ್ಕೆ ಕಲ್ಪವೃಕ್ಷನಾದ, ಇಂದ್ರಿಯಗಳನ್ನು ಶಾಂತಗೊಳಿಸಿದ, ಸರ್ವ ಕಾಲದಲ್ಲೂ

ಭ್ರಮರ ಮೃದುಮಧುರಗಂಭೀ
ರಮನೋಹರವಚನವಿಸರ ದಸರ ದಯಾಬ್ಧೀ ೫೬

ಭವದೀಯ ಮಸ್ತಕದೊಳು
ದ್ಭವಿಸಿದುದು ಮಹೇಶಭಕ್ತಿ ಭಾವಿಸೆ ಭಕ್ತೋ
ತ್ಸವಕರ ನಿನ್ನ ಚರಿತ್ರಂ
ನವಕಮಿದಂ ಬಣ್ಣಿಸಲ್ಕೆ ಬಲ್ಲರುಮೊಳರೇ ೫೭

ಅವಿನೀತಂ ಲಿಂಗಬಾಹ್ಯಂ ಕರವಿರಹಿತನೇಳ್ತಂದು ಮಾಯಾವಿ ಮಿಥ್ಯಾ
ಶಿವಚಿಹ್ನಂಬೆತ್ತು ಕಾಯ್ಪಿಂ ಬಡಿಯೆ ಶಿರಮನಲ್ಲಾಡದಾತಂಗೆ ಪೂರ್ಣೋ
ತ್ಸವದಿಂ [1]ಕೆಯ್ಯೀವು[1]ತುಂ ಸಜ್ಜೆಕೆಯುನಮಳಲಿಂಗಾನ್ವಿತಂಗೆಯ್ದಣಂ ಶಾಂ
ಭವರೂಪಂ ಸಾರ್ಚಿದ್ಯೆ ನಿನ್ನಯ ಬಗೆ ಪೊಸತೀ ಧಾತ್ರಿಯೊಳ್ಭಕ್ತವರ್ಯಾ ೫೮

ಕೃತಕ ತಪಸ್ವಿಯೆಂದು ತಿಳಿದುಂ ಶಿವಲಾಂಛನಮಂ ನಿರೀಕ್ಷಿಸು
ತ್ತತಿಶಯ ಭಕ್ತಿಯಿಂದೆಜಿಗೆ ತಪ್ಪಿನಿತಿಲ್ಲದೆ ಕೂನ ಕೈಗಳಿಂ[2]
ಗತದಯನಾರ್ಪಿನಿಂ ಬಡಿಯೆ ನೆತ್ತಿಯ ನೆತ್ತರ ಧಾರೆ ಸೋರ್ವಿನಂ
ಸಿತಮತಿ ನೋಯದಾತನ ಕರಂ ಕಡು ನೊಂದುದೆನುತ್ತೆ ಸುರ್ಕಿದ್ಯೆ ೫೯

ಸತ್ಕುಲಪ್ರಸೂತರಿಂದ ಕೂಡಿದ, ಸದ್ಗುಣಗಳಿಂದ ಭೂಷಣನಾದ, ಭಕ್ತರಲ್ಲಿ ಹಿತಕರವಾದ ಮಾತುಗಳನ್ನುಳ್ಳ, ಜನನ ಮರಣಾತ್ಮಕವಾದ ಸಂಸಾರವೆಂಬ ರೋಗಕ್ಕೆ ಔಷಧ ರೂಪನಾದ, ಕಮಲದಂತಹ ಪಾದಗಳುಳ್ಳ, ಕೃಪೆಯಿಂದ ಕೂಡಿದ ಕಣ್ಣಿನ ಕೊನೆಯುಳ್ಳ, ಸ್ಥಾವರ ಜಂಗಮಾತ್ಮಕವಾದವುಗಳನ್ನು ರಕ್ಷಿಸುವ, ಶಮೆ (ಶಾಂತಿ), ದಮೆ (ಇಂದ್ರಿಯ ನಿಗ್ರಹ), ಯಮ, ನಿಯಮಾದಿ ಯೋಗಗಳಿಂದ ಪೂಜ್ಯನೆನಿಸಿದ, ಶಿವಶರಣರ ಪಾದಕಮಲಗಳಿಗೆ ಮದಿಸಿದ ಭ್ರಮರ ಸ್ವರೂಪನಾದ, ಕೋಮಲವೂ, ಮಧುರವೂ, ಗಂಭೀರವೂ, ಮನೋಹರವೂ ಆದ ಮಾತುಗಳ ಸಮೂಹದಿಂದ ಕೂಡಿದ ದಸರಯ್ಯ ದೇವ, ಹೇ, ಭಕ್ತರನ್ನು ಉತ್ಸಾಹಗೊಳಿಸುವವನೇ, ವಿಚಾರಿಸಿ ನೋಡಿದರೆ; ನಿನ್ನ ತಲೆಯಲ್ಲಿ ಮಹೇಶ ಭಕ್ತಿಯು ಉದ್ಭವಿಸಿತು ; ನಿನ್ನ ಚರಿತ್ರೆಯು ನೂತನವಾದದ್ದು ; ಇದನ್ನು ಬಣ್ಣಿಸುವುದಕ್ಕೆ ಬಲ್ಲವರು ಇರುವರೇ ?' ೫೮. 'ಭಕ್ತ ಶ್ರೇಷ್ಠನೇ, ನೀತಿ ರಹಿತನೂ, ಭವಿಯೂ, ಕೈಗಳಿಲ್ಲದವನೂ, ಮಾಯಾವಿಯೂ, ಸುಳ್ಳಾದ ಶಿವ ಲಾಂಛನಧಾರಿಯೂ ಬಂದು ಕೋಪದಿಂದ ತಲೆಯನ್ನು ಬಡಿದರೆ ಅಲ್ಲಾಡದಂತೆ ಇದ್ದು ಆತನಿಗೆ ಪೂರ್ಣ ಸಂತೋಷದಿಂದ ಕೈ ಬರುವಂತೆ ಮಾಡಿ, ಕರಡಿಗೆಯಲ್ಲಿ ಶ್ರೇಷ್ಠ ಶಿವಲಿಂಗವಿರುವಂತೆ ಮಾಡಿ ಅಧಿಕವಾದ ಶಿವ ಸಂಬಂಧವಾದ ರೂಪವನ್ನು ಉಂಟುಮಾಡಿದೆ; ಈ ಭೂಮಿಯಲ್ಲಿ ನಿನ್ನ ಈ ರೀತಿಯು ಹೊಸದಾದುದು.' ೫೯–೬೦. 'ಶುಭ್ರ ಮನಸ್ಸಿನ ದಸರಯ್ಯನೇ, ಕೃತಕ ತಪಸ್ವಿಯೆಂದು ತಿಳಿದೂ ಕೂಡ

1 ಕೈಗೆಯ್ವು(ಜ) 2 ಳಂ(ಅ)

ಶಾಂತಾಗ್ರಗಣ್ಯ ನಿನ್ನಯ
ಶಾಂತಿ ಪ್ರಭೆಗೆಯ್ದೆ ಸೋಲ್ತು ಶಶಿಯುಂ ಗಂಗಾ
ಕಾಂತೆಯುಮಾ ಶಿವನ ಜಟಾ
ಕಾಂತಾರಮನೊಡನೆ ಪೊಕ್ಕು ಮೆಯ್ಗರೆದಿರ್ಪರ್ ೬೦

ಅಂದು ವೃಷೇಂದ್ರನಾತ್ಮಗೃಹಕೆಯ್ದಿದ ಚೋರರನೊಲ್ದು ನೋಡಿ ನ
ಣ್ಪಿಂದವರಾಂತ ನುಣ್ಬದನೆಗಾಯ್ಗಳ ಲಿಂಗಮನೊಲ್ದು ಮಾಡುತೊ
ಳ್ಪಿಂದೆ ಚರಾಂಗರಂ ನೆಗಳ್ದನಿಂದು ಕರಂಗಳನಿತ್ತು ಸೆಜ್ಜೆಯೊ
ಳ್ಪಂದಿಸಿ ಲಿಂಗಮಂ ನೆಗಳ್ದೆ ಧೂರ್ತತಪಸ್ವಿಗೆ ಜಂಗಮತ್ವಮಂ ೬೧

ವ॥ ಎಂದು ಕೂರ್ಮೆಯಿಂ ಕೊಂಡಾಡಿ ಮೋಟಕರತಾಡಿತ ತದುತ್ತಮಾಂಗಮನವಲೋಕಿಪಾಗಳೋರೊಂದೆಡೆಯೊಳೊಡೆದು ಸಾಂಖ್ಯನಾಥನ ಬಿಱುಗಲ್ಲ ಹತಿಯಿಂದೊಡೆದ ಶಿವಶಿರದಂತೆಯುಂ ಪೆಱತೊಂದು ತಾಣದೊಳ್ಬುಗುಟುವೆತ್ತು ಪಿಟ್ಟವ್ವೆಯ ಭಕ್ತಿನಿಮಿತ್ತಂ ಚೋಳಂಗೆ ಮೃತ್ತಿಕಾಭಾರಮಂ ಪೊಱಲೊಡನೆ ಬುಗುಟೊಗೆದ ಮೃಗಧರಧರನ ಮಸ್ತಕದಂತೆಯುಂ ಪರಪ್ರದೇಶದೊಳ್ಸುಲಿವೆತ್ತು ಕಣ್ಣಪ್ಪದೇವಪಾದುಕಾಸಂಘರ್ಷಣದಿಂ ಸುಲಿವೆತ್ತ ಹರವರಾಂಗದಂತೆಯುಮಪರಸ್ಥಾನದೊಳ್ಕೆಂಗಲೆ

ಶಿವ ಲಾಂಛನವನ್ನು ಕಂಡು, ಅತಿಶಯ ಭಕ್ತಿಯಿಂದ ನಮಸ್ಕಾರ ಮಾಡಲು ನಿರ್ದಯನಾದ ಮೋಟು ಮಲ್ಲನು ನಿನ್ನಲ್ಲಿ ತಪ್ಪೇನೂ ಇಲ್ಲದಿದ್ದರೂ ಮೋಟುಗೈಗಳಿಂದ ತಲೆಯ ನೆತ್ತರ ಧಾರೆಯು ಸೋರುವ ಹಾಗೆ ಬಡಿಯಲು ನೊಂದುಕೊಳ್ಳದೆ, ನಿನ್ನ ಕೈ ವಿಶೇಷವಾಗಿ ನೊಂದಿತು ಎಂದೆನ್ನುತ್ತ ಸಂಕೋಚಗೊಂಡೆ. ಶಾಂತರಲ್ಲಿ ಅಗ್ರಗಣ್ಯನೇ, ನಿನ್ನ ಹಾಗೆ ಶಾಂತಿಯ ಪ್ರಭೆಗೆ, ಚಂದ್ರನೂ, ಗಂಗಾಮಾತೆಯೂ, ನಿಜವಾಗಿಯೂ ಸೋತು ಶಿವನ ಜಡೆಯೆಂಬ ದೊಡ್ಡ ಕಾಡನ್ನು ಹೊಕ್ಕು ಆ ಕೂಡಲೇ (ಶೀಘ್ರವಾಗಿ) ಅಡಗಿಕೊಂಡಿರುವರು'. ೬೧. 'ಹಿಂದೆ ಬಸವಣ್ಣನವರು ತಮ್ಮ ಮನೆಗೆ ಬಂದ ಕಳ್ಳರನ್ನು ಪ್ರೀತಿಯಿಂದ ಒಲಿದು ನೋಡಿ, ಆ ಕಳ್ಳರು ಧರಿಸಿದ್ದ ನುಣ್ಣನೆಯ ಬದನೇಕಾಯಿಗಳನ್ನು ಲಿಂಗಗಳನ್ನಾಗಿ ಮಾಡುತ್ತ ಅವರನ್ನು ಒಳ್ಪಿನಿಂದ ಜಂಗಮರನ್ನಾಗಿಯೇ ಮಾಡಿದನು. ಈ ದಿನ ಧೂರ್ತನಾದ ಈ ತಪಸ್ವೀ ವೇಷದವನಿಗೆ) ಕೈಗಳನ್ನು ಕೊಟ್ಟು ಕರಡಿಗೆಯಲ್ಲಿ ಲಿಂಗವನ್ನು ಸಂಬಂಧಗೊಳಿಸಿ, ಜಂಗಮತ್ವವನ್ನುಂಟು ಮಾಡಿದೆ'. ವ॥ ಹೀಗೆಂದು ಅತಿ ಸ್ನೇಹದಿಂದ ಕೊಂಡಾಡಿ ಮೋಟುಗೈಯಿಂದ ಹೊಡೆಯಲ್ಪಟ್ಟ ಅವನ ಆ ತಲೆಯನ್ನು ನೋಡುವಾಗ ಒಂದೊಂದು ಕಡೆಯಲ್ಲಿ ಒಡೆದರೆ ಸಾಂಖ್ಯತೊಂಡನ ಬಿರುಗಲ್ಲುಗಳ ಹೊಡೆತದಿಂದ ಒಡೆದು ಹೋದ ಶಿವನ ತಲೆಯ ಹಾಗೆಯೆ ಇತ್ತು. ಮತ್ತೊಂದು ಕಡೆಯಲ್ಲಿ ಬುಗುಟೆದ್ದು, ಪಿಟ್ಟವ್ವೆಯ ಭಕ್ತಿಯ ಕಾರಣದಿಂದ ಚೋಳ ಭೂಪಾಲನ ಮಣ್ಣಿನ ಭಾರವನ್ನು ಹೊರುವ (ಬಿಟ್ಟಿ ಕೆಲಸದ ಸಮಯದಲ್ಲಿ ಶಿವನ ತಲೆಯಲ್ಲಿ ಎದ್ದ ಬುಗುಟಿನ ಹಾಗೆ ಇತ್ತು. ಬೇರೊಂದು ಕಡೆಯಲ್ಲಿ (ಚರ್ಮವು) ಸುಲಿದು ಹೋಗಿ, ಕಣ್ಣಪ್ಪ ದೇವನ ಪಾದರಕ್ಷೆಯ ಶಿಕ್ಕಾಟದಿಂದ ಸುಲಿದು

ಪಡೆದು ಭೋಗನಾಥನ ಪಿಂದುರುಳಲೊಡಂ ಕೆಂಗಲೆ ತಳ್ತ ಶಿವಾರಮಣನ ಶೀರ್ಷದಂತೆಯುಂ ಮನ್ಯ ದೇಶದೊಳುರ್ಬಿ ದಭ್ರಭಕ್ತಂಗೆ ಸಹಾಯಮಾಗಿ ಕರ್ಬು[ವೊ][1]ಱೆಯುಂ ಪೊಱಿಲೊಡನುರ್ಬಿದಭವನ ವಿಭವಂಬಡೆದ ಪೆರ್ದಲೆಯುಂತೆಯುಂ ಕರಮೆಸೆಯೆ ಕಂಡು ಕೌತುಕಂಬಡೆದು—

ಸಲೆ ತಲೆ ಸಾಸಿರಂಬಡೆದನಂ ತಳೆದಗ್ಗದ ರಕ್ಕಸರ್ಕಳಾ
ತಲೆಗಳ ಮಾಲೆಯಂ ಧರಿಸಿ ಪಾಣಿಪಯೋಜದೊಳಬ್ಜಜಾತನೊ
ಳ್ದಲೆಯನಮರ್ಚಿ ದೇವರೊಳಿ ಪೆರ್ದಲೆವೆತ್ತು ವಿರಾಜಿಸಿರ್ಪನಾ
ತಲೆಯದು ಸಾಟಿ ನಿನ್ನ ತಲೆಗನ್ಯರ ಬೀಳ್ದಲೆ ಸಾಟಿಯಕ್ಕುಮೇ ೬೨

ಪರಮ ಜಗತ್ಕಾರಣ ಶಂ
ಕರ ಶಿರಮೊಂದಲ್ಲದುಳಿದ ವಿಧಿಗುಹದಶಕಂ
ಧರಫಣಿವರರ ಶಿರಂಗಳ್
ಸರಿ ಬರ್ಕುಮೆ ನಿನ್ನ ಶಿರದೊಳೆಲೆ ಮಹಿಮಾಬ್ಧೀ ೬೩

ಶರಣಜನಪಾದಜಲಬಂ
ಧುರ ತತ್ಪದನಖರಚಂದ್ರಶೇಖರಮೆನಿಪೀ

ಹೋದ ಶಿವನ ಶಿರಸ್ಸಿನ ಹಾಗೆ ಇತ್ತು. ಬೇರೊಂದು ಕಡೆಯಲ್ಲಿ ಕೆಂಪುಕಲೆ ಕಟ್ಟಿ ಭೋಗನಾಥನ (ಕೆಂಭಾವಿ ಭೋಗಣ್ಣನೆಂಬುವನ), ಹಿಂದೆ ಉರುಳಿಕೊಂಡು ಹೋಗಲಾಗಿ, ಕೂಡಲೆ ಕೆಂಪುಕಲೆಯುಂಟಾದ ಪಾರ್ವತೀ ಪತಿಯು ತಲೆಯು ಹಾಗೆ ಇತ್ತು. (ತಲೆಯು) ಮತ್ತೊಂದು ಪ್ರದೇಶದಲ್ಲಿ ಉಬ್ಬಿಕೊಂಡು ಸಿರಿಯಾಳ ಸೆಟ್ಟಿಗೆ, ಸಹಾಯಕವಾಗಿ ಕಬ್ಬಿನ ಹೊರೆಯನ್ನು ಹೊರಲಾಗಿ, ಆ ಕೂಡಲೆ ಉಬ್ಬಿ ಹೋದ ಶಿವನ ವೈಭವವನ್ನು ಪಡೆದ ದೊಡ್ಡ ತಲೆಯು ಹಾಗೂ ಇತ್ತು. ಹೀಗೆ (ಆ ದಸರಯ್ಯನ ತಲೆಯು) ಮನೋಹರವಾಗಿ ಶೋಭಿಸುತ್ತಿರಲು ಕಂಡು ಕೌತುಕವನ್ನು ಹೊಂದಿ. ೬೨. 'ಸಾವಿರ ಶಿರಸ್ಸುಗಳನ್ನು ಪಡೆದ ಆದಿಶೇಷನನ್ನು ಧರಿಸಿದವನೂ, ಶೂರರಾದ ರಾಕ್ಷಸರುಗಳ ಶಿರಸ್ಸುಗಳ ಮಾಲೆ ಯನ್ನು ಧಾರಣೆ ಮಾಡಿದವನೂ, ಕರಕಮಲದಲ್ಲಿ ಬ್ರಹ್ಮನ ಒಳ್ಳೆಯ ತಲೆಯನ್ನು ಹಿಡಿ ದವನೂ, ಆದ ದೇವತೆಗಳಲ್ಲೆಲ್ಲ ದೊಡ್ಡ ತಲೆಯನ್ನು (ಹಿರಿದಲೆಯೆನಿಸಿ) ಹೊಂದಿ ಪ್ರಕಾಶಿಸುವ ಆ ಪರಶಿವನ ತಲೆಯು ನಿನ್ನ ತಲೆಗೆ ಸಮಾನವೇ ? ಅನ್ಯರ ಬಿದ್ದು ಹೋಗುವ ತಲೆಗೆ (ಸತ್ತುಹೋಗುವವರ ತಲೆಗೆ) ನಿನ್ನ ಈ ತಲೆ ಸಾಟಿಯಾದೀತೆ ?' ೬೩. 'ಎಲೈ ಮಹಿಮಾ ಸಮುದ್ರನೇ, ನಿನ್ನ ತಲೆಯೊಡನೆ, ಪರಮನೂ ಜಗತ್ಕಾರ ಣನೂ ಆದ ಶಂಕರನ ತಲೆಯೂ ಸಮಾನವಲ್ಲ; ಮಿಕ್ಕ ಬ್ರಹ್ಮ, ಷಣ್ಮುಖ, ರಾವಣ, ಆದಿಶೇಷ ಮುಂತಾದವರ ತಲೆಗಳು ಸರಿಬರುವುವೇ ?' ೬೪. 'ಈ ಭೂಮಂಡಲದಲ್ಲಿ ಶರಣ ಜನರ ಪಾದೋದಕದಿಂದ ಬಂಧುರವೆನಿಸಿದುದೂ, ಆ ಶರಣ ಜನರ ಪಾದದ

1 ಪ(ಅ, ಜ, ಚ, ಮು, ಗ, ದ)

ಶಿರಮಿದು ಗಂಗಾಶಶಿಧರ
ಶಿರಕೆಣೆ ತಾನಪ್ಪುದೀ ಮಹೀಮಂಡಲದೊಳ್ ೬೪

ಓದಲ್ಬರ್ಕುಂ ಶಾಸ್ತ್ರಮ
ನೋದಿದುದಂ ಮಗುಳ್ದು ಪೆಱರ್ಗೆ ಬೋಧಿಸಲಕ್ಕುಂ
ಮೇದಿನಿಯೊಳಮಮ ಶಮಸುಖ
ಮೇದುರ ನಿನ್ನಂತೆ ನಡೆದು ತೋರ್ಪರುಮೊಳರೇ ೬೫

ಇದು ಚಿತ್ರಂ ಕ್ಷಮೆಯೆಂಬ
ಗ್ಗದ ಖಡ್ಗದೆ ಕೋಪರಿಪುವನಾರ್ಪಿಂ ಕಡಿದಿ
ಕ್ಕಿದ ನಿನಗಹಿಂಸಕಂ ಸ
ರ್ವ ದಯಾಪರನೆಂಬ ಕೀರ್ತಿ ವಿಶ್ವಂಭರೆಯೊಳ್ ೬೬

ಲಿಂಗದ್ವಯ ಸಮಭಾವಂ
ಮಂಗಳಮಯ ನಿನಗೆ ಸಂದುದೀ ಕೃತ್ರಿಮವೇ
ಷಾಂಗದ ಕುಟಿಲನುಮಂ ನೀಂ
ಜಂಗಮಮೆಂದೊಲ್ದು ಬಗೆದು ನಂಬಿದ ಕತದಿಂ ೬೭

ಬರಿಸಿದೆ ಕಡಿವಡೆದೆರಡುಂ
ಕರಂಗಳಂ ಬಱಿಯ ಸೆಜ್ಜೆಯೊಳ್ ಲಿಂಗಮನೊ

ಉಗುರುಗಳ ಸಾಲೆಂಬ ಚಂದ್ರನನ್ನೇ ಶಿರೋ ಭೂಷಣವೆನಿಸಿದುದೂ ಆಗಿ ಪ್ರಕಾಶಿಸುವ ಈ ತಲೆಯು ತಾನು, ಆ ಗಂಗೆಯನ್ನೂ ಚಂದ್ರನನ್ನೂ ಧರಿಸಿರುವ ಶಿವನ ತಲೆಗೆ ಸಮಾನವೆನಿಸಿದುದಾಗಿದೆ.' ೬೫. 'ಶಾಂತಿ ಸುಖದಿಂದ ಕೂಡಿದ ದಸರಯ್ಯನೇ, ಭೂಮಿಯಲ್ಲಿ ಶಾಸ್ತ್ರವನ್ನು ಓದಲು ಬಂದೀತು. ಓದಿದ ಶಾಸ್ತ್ರವನ್ನು ಪರರಿಗೆ ಬೋಧಿಸಲು ಬಂದೀತು. ನಿನ್ನ ಹಾಗೆ ನಡೆದು (ಶಾಸ್ತ್ರೋಕ್ತ ಅರ್ಥದಂತೆ ನಡೆದು) ತೋರಿಸುವವರು (ಯಾರಾದರೂ) ಇರುವರೇ ?' ೬೬. 'ಈ ಭೂಮಂಡಲದಲ್ಲಿ ಕ್ಷಮೆಯೆಂಬ ಖಡ್ಗದಿಂದ ಕೋಪವೆಂಬ ವೈರಿಯನ್ನು ಶೌರ್ಯದಿಂದ ಕತ್ತರಿಸಿದ ಹಾಕಿದ ನಿನಗೆ ಹಿಂಸೆ ಮಾಡದೆ ಇರುವವನು ಸರ್ವರಲ್ಲೂ ದಯಾಪರನು ಎಂದೆನ್ನುವ ಈ ನಿನ್ನ ಕೀರ್ತಿಯು ಆಶ್ಚರ್ಯಕರವಾದುದು.' ೬೭. 'ಹೇ ಮಂಗಲ ಮಯನೇ, ನೀನು ಈ ಕಪಟ ವೇಷದ ಅವಯವವುಳ್ಳ ಕಪಟಿಯನ್ನು ಜಂಗಮವೆಂದು ಭಾವಿಸಿ, ಪ್ರೀತಿಯಿಂದ ನಂಬಿದ ಕಾರಣದಿಂದ ನಿನಗೆ ಲಿಂಗ ಜಂಗಮವೆರಡರಲ್ಲೂ ಸಮಾನವಾದ ಭಾವನೆಯು (ಲಿಂಗ ಮುಖವೇ ಜಂಗಮವೆಂಬ ವೀರಶೈವ ತತ್ತ್ವದ ಭಾವನೆಯು) ಪ್ರಾಪ್ತವಾಯಿತು.' ೬೮. 'ಭಕ್ತಿರಸವೆಂಬ ಕಮಲಕ್ಕೆ ಸೂರ್ಯನೋಪಾದಿಯಲ್ಲಿರುವ ದಸರಯ್ಯನೇ, ಮೋಟುಗೊಂಡಿದ್ದ ಎರಡೂ ಕೈಗಳನ್ನೂ (ನಿನ್ನ) ಮನಸ್ಸೆಂಬ ಕೈಗಳಿಂದ ಬರುವಂತೆ ಮಾಡಿದೆ; ಬರಿದಾದ

ಲ್ದಿರಿಸಿದೆ ಬಗೆಗೆಯ್ಮದೆ ಭ
ಕ್ತಿರಸಾಂಬುರುಹ[1]ಸರ ದಸರ ನಿನಗೆಣೆಯಾವಂ ೬೮

ದಸರ ಚರಾಚರಪ್ರಸರಪಾಲಕ ಸಾಧುಸರೋಧಿಚಂದ್ರ ಸ
ದ್ವಿಸರ ಮನೋಜ್ಞ ಮಾನ್ಯ ಮಹನೀಯ ಮಹೇಶ್ವರದಿವ್ಯಪಾದಸಾ
ರಸರಸಭೃಂಗ ಮಂಗಳಮಹತ್ವಸಮನ್ವಿತ ಸದ್ಗುಣಾಂಬುಜಾ
ತಸರ ಸರದ್ವಳಕ್ಷರುಚಿಕೀರ್ತಿಸಮಂಚಿತಸರ್ವದಿಕ್ತಟಾ ೬೯

ವ॥ ಎಂದಿತು ಭಕ್ತಜನಂ ನಲಿನಲಿದು ಕೀರ್ತಿಸುತ್ತುಮಿರೆ ಪರಸಮಯಪ್ಪರೆಲ್ಲಂ ಬಿಗುರ್ತು ಬೆಱಗುವಟ್ಟು ನಿರೀಕ್ಷಿಸಿ—

ಬಡಿದೊಡಮಳಲದೆ ಕೊಟ್ಟಂ
ಕಡಿವಡೆದೆರಡುಂ ಕರಂಗಳಂ ಮಲ್ಲಂಗೊ
ಲ್ವಡಿಗೆಱಗಿದೊಡೇನನಿವಂ
ಕುಡುವನೊ ಘನಮಹಿಮನೆಮಗೆ ವರಮಂ ದಸರಂ ೭೦

ವ॥ ಎಂದೆಲ್ಲರೊಂದುಗೂಡಿ ತಚ್ಚರಣಾರವಿಂದಕ್ಕೆ ಸಾಷ್ಟಾಂಗಮೆಱಗಿ ಲಲಾಟಘಟಿತ ಕರಪುಟರಾಗಿ—

ಕರಡಿಗೆ (ಲಿಂಗ ಕರಂಡಕ) ಯಲ್ಲಿ ಲಿಂಗವನ್ನು ಒಲಿದು ಇರುವಂತೆ ಮಾಡಿದೆ. ನಿನಗೆ ಸಮಾನನಾದವನು ಯಾವನಿದ್ದಾನೆ.' ೬೯. ಸ್ಥಾವರ ಜಂಗಮಾತ್ಮಕ ಸಮೂಹವನ್ನು ರಕ್ಷಿಸುವ, ಸತ್ಕುಲ ಪ್ರಸೂತರೆಂಬ ಜನಸಮೂಹಕ್ಕೆ ಚಂದ್ರನಾಗಿರುವ ಸತ್ಪುರುಷರ (ಅಥವಾ ವಿದ್ವಾಂಸರ) ಸಮೂಹದಿಂದ ಮನೋಹರನೆನಿಸಿ ಸನ್ಮಾನಿಸಿಕೊಳ್ಳಲು ಯೋಗ್ಯನಾದ, ದೊಡ್ಡವನೆನಿಸಿದ, ಪರಶಿವನ ಮನೋಹರವಾದ ಪಾದ ಕಮಲದ ಜಲ ವೆಂಬ ಮಕರದಿಂದಕ್ಕೆ ಭೃಂಗರೂಪನಾದ, ಮಂಗಳಕರವಾದ ಮಹಿಮೆಯಿಂದ ಕೂಡಿದ, ಒಳ್ಳೆಯ ಗುಣಗಳೆಂಬ ಕಮಲಗಳಿಗೆ ಸರೋವರ ರೂಪನಾದ, ವಿಸ್ತಾರವಾಗುತ್ತಿರುವ, ಶುಭ್ರವಾದ ಕಾಂತಿಯುಳ್ಳ ಯಶಸ್ಸಿನಿದ ಕೂಡಿರುವ ಸಮಸ್ತ ದಿಕ್ಕುಗಳ ಕೊನೆಗಳುಳ್ಳ ದಸರಯ್ಯನೇ ? ವ॥ ಹೀಗೆಂದೆನ್ನುತ್ತ ಭಕ್ತ ಸಮೂಹವು ನಲಿ ನಲಿದು ನರ್ತಿಸುತ್ತಿರಲು ಪರ ಸಮಯದವರೆಲ್ಲ ಭಯಗೊಂಡು ಬೆರಗಾಗಿ ನೋಡುತ್ತ ೭೦. 'ಘನಮಹಿಮನಾದ ಆ ದಸರಯ್ಯನು–ಹೊಡೆದರೂ, ಸಂಕಟಪಡದೆ ಮಲ್ಲನಿಗೆ ಮುರಿದುಹೋಗಿದ್ದ (ನಾಶವಾಗಿದ್ದ) ಎರಡೂ ಕೈಗಳನ್ನು ಕೊಟ್ಟನು; ಪ್ರೀತಿಯಿಂದ ಪಾದಕ್ಕೆ ನಮಸ್ಕಾರ ಮಾಡಿದರೆ ನಮಗೆ ಏನು ವರವನ್ನು ಕೊಡುವನೋ?' ವ॥ ಎಂದು ಎಲ್ಲರೂ ಕೂಡಿ ಆತನ ಪಾದಕಮಲಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಹಣೆಯ ಮೇಲೆ

+ 1 ನೆ(ಅ), + ಎ(ಚ, ಜ, ದ)

ಖಲರಂ ಕಾಪಟ್ಯಕರ್ಮಾಶ್ರಿತರನಧಮರಂ ದುಷ್ಟರಂ ಧೂರ್ತರಂ ದು
ರ್ಬಲರಂ ದುರ್ನೀತರಂ ದುರ್ದಮರನಧಿಕಪಾಪಾತ್ಮರಂ ವ್ಯರ್ಥಗವಾ
ವಿಲರಂ ಪಾಷಂಡಮಾರ್ಗಸ್ಥಿತರನಪಯಶೋಯುಕ್ತರಂ ಮೋಹಮೂರ್ಛಾ
ಕುಲರಂ ಸರ್ವಾಪರಾಧಾನ್ವಿತರನೊಸೆದು ನೀಂ ಕಾವುದೆಮ್ಮಂ ದಯಾಬ್ಧೀ ೭೧

ಸರ್ವದಯಾಪರ ನಿನ್ನಯ
ಪರ್ವಿದ ಮಹಿಮಾತಿಶಯಮನಱಿವಂ ಜಗದೊಳ
ಕ್ಸರ್ವಜ್ಞನೊರ್ವನಲ್ಲದೆ
ದುರ್ವಾರಮದಾಂಧಮತಿಗಳಾವಱಿದಪೆವೇ ೭೨

ನೆಗಳ್ದಪರಾಧಮಂ ನಿನಗೆ ತಾಂ ಪಡೆದಂ ಗಡ ಪಾಣಿಯುಗ್ಮಮಂ
ಬಗೆಮಿಗೆ ಮಲ್ಲಿನಾಥನವನಿಂ ಮೊದಲಾದಪರಾಧಮೆಮ್ಮದು
ಜ್ಜುಗಿಸಿದೆಮಾವದಂ ಬಗೆವೊಡಂತದಱಿಂ ಪೊರೆ ಮಾಣದೆಮ್ಮ ಪೆಂ
ಪಗಲದ ಕೂರ್ಮೆಯಿಂ ದಸರ ನೀಂ ಸುಜನೋತ್ತಮನಾದ ಕಾರಣಂ ೭೩

ವ॥ ಎಂದು ಸನ್ನುತಿಗೆಯ್ವುತೆಮ್ಮಪರಾಧಸರ್ವಸ್ವಮಂ ಸೈರಿಸಿ ಕರುಣಿಪುದೆಂದು ಮಗುಳ್ದು ಮಣಿದಭಯಂಬಡೆದು ಕೃತಾರ್ಥತೆಯನಾಳ್ದಿಸೆದಿರ್ದರಾ ಪ್ರಸ್ತಾವದೊಳ್—

ಹೊತ್ತುನಿಂತ ಕೈಗಳುಳ್ಳವರಾಗಿ ೭೧. ದಯಾಸಾಗರನೇ, ದುರ್ಜನರೂ, ಕಪಟ ವ್ಯಾಪಾರದಿಂದ ಕೂಡಿದವರೂ, ಅಧಮರೂ, ದುಷ್ಟರೂ, ವಂಚಕರೂ, ಬಲಹೀನರೂ, ವಿನಯರಹಿತರೂ, ದುರ್ಮದವುಳ್ಳವರೂ, ಅಧಿಕ ಪಾಪಾತ್ಮರೂ, ಪ್ರಯೋಜನವಿಲ್ಲದ ವರೂ, ಮೂಢರೂ, ವೇದೋಕ್ತ ಧರ್ಮ ಮಾರ್ಗದೂರರೂ, ಅಪಯಶಸ್ಸಿನಿಂದ ಕೂಡಿದವರೂ, ಮೋಹವೆಂಬ ಮೂರ್ಛೆಯಿಂದ ಆಕುಲಗೊಂಡವರೂ, ಸರ್ವಅಪರಾಧ ಗಳಿಂದ ಕೂಡಿದವರೂ, ಆದ ನಮ್ಮನ್ನು ನೀನು ರಕ್ಷಿಸಬೇಕು.' ೭೨. 'ಹೇ ಸರ್ವ ಜೀವ ದಯಾಪರನೇ, ನಿನ್ನ ಹಬ್ಬಿರುವ ಮಹಿಮೆಯ ಆಧಿಕ್ಯವನ್ನು ಈ ಜಗತ್ತಿನಲ್ಲಿ ಸರ್ವಜ್ಞನೊಬ್ಬನೇ ತಿಳಿದಿರುವನಲ್ಲದೆ, ತಡೆಗಟ್ಟಲಸಾಧ್ಯವಾದ ಗರ್ವದಿಂದ ಕುರುಡರಾದ ಬುದ್ಧಿಯುಳ್ಳ ನಾವು ತಿಳಿಯುತ್ತೇವೆಯೇ ?' ೭೩. 'ಮಲ್ಲಿನಾಥನು ನಿನ್ನ ವಿಷಯ ದಲ್ಲಿ ಅಪರಾಧವನ್ನು ಮಾಡಿಯೂ ತಾನು ಮಿಗೆ ಮೀರಿದ ಎರಡೂ ಕೈಗಳನ್ನೂ ಪಡೆದ ನಲ್ಲವೇ ? ಅವನಿಗಿಂತ ಮೊದಲು ಆದ ಅಪರಾಧವು ನಮ್ಮದು. ಅದನ್ನು ಯೋಚಿಸಿ ದ್ದಾದರೆ ನಾವೂ ಅಪರಾಧ ಮಾಡಿದೆವು. ಆದ್ದರಿಂದ ಹೇ ಸುಜನೋತ್ತಂಸನೇ (ಸತ್ಪು ರುಷ ಶ್ರೇಷ್ಠನೇ) ನಿನ್ನ ಕೃಪಾವಿಶೇಷವು ಅಗಲದಂತೆ ಪ್ರೀತಿಯಿಂದ ನಮ್ಮನ್ನು ತಪ್ಪದೆ ರಕ್ಷಿಸು.' ವ॥ ಹೀಗೆಂದು ಸ್ತೋತ್ರ ಮಾಡಿ, ನಮ್ಮ ಸರ್ವಾಪರಾಧಗಳನ್ನು ಸೈರಿಸಿ ಕರುಣೆದೋರಬೇಕೆಂದು ಪುನಃ ನಮಸ್ಕಾರ ಮಾಡಿ, ಅಭಯವನ್ನು ಪಡೆದು ಕೃತಾರ್ಥ

ಧರೆ ಜಯ ಜೀಯೆನೆ ಶರಣ
ರ್ಪರಮಾನಂದದೊಳೆ ಪರಸೆ ನುತಿಯಿಸುತಿರೆ ಸ
ರ್ವರುಮಲ್ಲಿ ಮಲ್ಲಿನಾಥಂ
ಗೆರಡುಂ ಕೆಯ್ಯಿತ್ತು ಮೆಱೆದನಾ ದಸರಯ್ಯಂ ೭೪

ಬಸವಂ ಕೇಳ್ದು ಮಹತ್ವಸ್ಥಿತಿಯನೊಸಗೆಯಿಂದೆಯ್ದಿ ಸದ್ಭಕ್ತಸಂದೋ
ಹಸಮೇತಂ ಕಂಡು ದಂಡಪ್ರಣತಿಯೆಸಗಿ ಕೊಂಡಾಡುತಾನಂದಬಾಷ್ಪ
ಪ್ರಸರಂ ಕೆಯ್ಗಣ್ಮೆ ತಾಳ್ದು ದಸರನಮಳ ಕಾರುಣ್ಯಮಂ ಬಂದು ಪೊಕ್ಕೊ
ಲ್ದೆಸೆದಂ ಶುದ್ಧಾಂತದೊಳ್ಜಂಗಮಚಯಚರಣಾಂಭೋಜಪೂಜಾವಿತಂದ್ರಂ ೭೫

ದಸರಯ್ಯನಮಳಚರಿತಮ
ನೊಸೆದಾವಂ ಕೇಳ್ವನಾವನೋದುವನಾವಂ
ಪಸರಿಪನವನಗಜೇಶ
ಪ್ರಸಾದದಿಂ ಪಡೆಗುಮಿಷ್ಟಸುಖಸಂಪದಮಂ ೭೬

ಚಿದಂಬರಸ್ವರೂಪೆ ಚಿತ್ತಜನ್ಮವಂದ್ಯೆ ಚಿನ್ಮಯೀ
ಕದಂಬವಾಟಿಕಾನಿವಾಸೆ ಕಾಳಿ ಕಾಲಭಂಜನೇ

ರೆನಿಸಿ ಶೋಭಿಸುತ್ತಿದ್ದರು. ಆ ಸಮಯದಲ್ಲಿ—೭೪. ಲೋಕವೆಲ್ಲ ಜಯ ಜಯ ಎನ್ನುತ್ತಿರಲು, ಶರಣರೆಲ್ಲ ಪರಮಾನಂದದಿಂದ ಆಶೀರ್ವಾದ ಮಾಡುತ್ತಿರಲು, ಸರ್ವರೂ ಸ್ತೋತ್ರ ಮಾಡುತ್ತಿರಲು ಆ ದಸರಯ್ಯನು ಮಲ್ಲಿನಾಥನಿಗೆ ಎರಡೂ ಕೈಗಳನ್ನೂ ಕೊಟ್ಟು ಶೋಭಿಸಿದನು. ೭೫. ಬಸವಣ್ಣನು ಈ ಮಹತ್ವದ ಸುದ್ದಿಯನ್ನು ಕೇಳಿ, ಉತ್ಸವಗೊಂಡು ಸದ್ಭಕ್ತ ಸಮೂಹ ಸಹಿತವಾಗಿ ಹೊರಟುಬಂದು (ದಸರಯ್ಯನನ್ನು) ಕಂಡು, ದೀರ್ಘದಂಡ ನಮಸ್ಕಾರ ಮಾಡಿ, ಕೊಂಡಾಡುತ್ತ, ಆನಂದಬಾಷ್ಪ ಸಮೂಹವು ಅಧಿಕಗೊಂಡು ದಸರಯ್ಯನ ಪರಿಶುದ್ಧವಾದ ಕಾರುಣ್ಯವನ್ನು ಪಡೆದು (ಹಿಂತಿರುಗಿ) ಬಂದು, ತನ್ನ ಅಂತಃಪುರವನ್ನು ಪ್ರವೇಶಿಸಿ, ಪ್ರೀತಿಯಿಂದ ಜಂಗಮ ಸಮುದಾಯದ ಪಾದಪೂಜೆಯಲ್ಲಿ ನಿರತನಾಗಿ ಶೋಭಿಸಿದನು. ೭೬. ದಸರಯ್ಯನ ಪರಿಶುದ್ಧವಾದ ಚರಿತ್ರೆಯನ್ನು ಪ್ರೀತಿಯಿಂದ ಯಾವನು ಕೇಳುವನೋ. ಯಾವನು ಓದುವನೋ, ಯಾವನು ವಿಸ್ತಾರಗೊಳಿಸುವನೋ (ಹರಡುವನೋ), ಅವನು ಪಾರ್ವತೀ ಪತಿಯ ಅನುಗ್ರಹದಿಂದ ಇಷ್ಟ ಸುಖ ಸಂಪತ್ತುಗಳನ್ನು ಪಡೆಯುವನು. ೭೭. ಜ್ಞಾನಾಕಾಶ ಸ್ವರೂಪಿಣಿಯೂ, ಮನ್ಮಥನಿಂದ ನಮಸ್ಕರಿಸಿ ಕೊಳ್ಳುವವಳೂ, ಜ್ಞಾನಾತ್ಮಕಳೂ, ಕದಂಬವೃಕ್ಷ ಸಮೂಹದಲ್ಲಿ ವಾಸಿಸುವವಳೂ, ಕಪ್ಪಾದ ಶರೀರವುಳ್ಳವಳೂ, ಯಮನನ್ನು

ಸದಂಬುಜಾಯತಾಕ್ಷಿ ಚಕ್ರಪಾಣಿ ಶಕ್ರಸೇವಿತೇ
ಮದಂಬೆ ರಕ್ಷಿಸೆನ್ನನಿಂದುಮೌಳಿಪತ್ನಿ ಪಾರ್ವತೀ ೭೭

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ದಸರಿದೇವಕಥಾಭಿವರ್ಣನಂ
ಷಡ್ವಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೨೬ಕ್ಕೆ ಪದಗಣನೆ ೧೯೧೭ಕ್ಕೆ ಮಂಗಳಮಹಾಶ್ರೀ

ಭಂಗಗೊಳಿಸಿದವಳೂ, ಶ್ರೇಷ್ಠ ತಾವರೆಯಂತೆ ದೀರ್ಘನೇತ್ರವುಳ್ಳವಳೂ, ಚಕ್ರಾಯುಧವೇ ಹಸ್ತದಲ್ಲುಳ್ಳವಳೂ, ಇಂದ್ರನಿಂದ ಸೇವಿಸಿಕೊಳ್ಳುವವಳೂ, ನನ್ನ ತಾಯಿಯೂ ಈಶ್ವರ ಪತ್ನಿಯೂ ಆದ ಪಾರ್ವತಿಯೇ, ನನ್ನನ್ನು ರಕ್ಷಿಸು.

ಇಪ್ಪತ್ತಾರನೆಯ ಆಶ್ವಾಸವು ಸಮಾಪ್ತವಾಯಿತು.

# ಸಪ್ತವಿಂಶಾಶ್ವಾಸಂ

## [ಗುರುಭಕ್ತಯ್ಯನ ಕಥೆ]

ಶ್ರೀ ಭೂಧರೇಂದ್ರತನಯಾ
ಶೋಭಾವಹಕಲ್ಪವಲ್ಲರೀಸುರತರು ಮ
ತ್ತೇಭಾಜಿನಾಂಬರಂ ನಾ
ಗಾಭರಣಂ ಪೊರೆಗೆ ಶಿಷ್ಟರಂ ಶಿವಲಿಂಗಂ ೧

ವ॥ ಮತ್ತಮಲ್ಲಿ—

ಗುರುಚರಣಾರುಣಾಂಬುಜಯುಗಸ್ಮರಣಸ್ಥಿರಚಿತ್ತನಾ ಲಸ
ದ್ಗುರುಕರುಣಾಕಟಾಕ್ಷರುಚಿಚಂದ್ರಮರೀಚಿಚಕೋರನಾತ್ಮವಿ
ದ್ಗುರುಪದಪದ್ಮಶೇಖರಶಿರಂ ಗುರುವಾಕ್ಯಸುಧಾಸುಪಾನಜಾ
ತರುಚಿ ಗುರುಪ್ರಸಾದರಸಿಕಂ ಗುರುಲಿಂಗಸದಾಸಮರ್ಚಕಂ ೨

ಗುರುಭಕ್ತಿನವಮರನ್ಮಣಿ
ಗುರುಭಕ್ತಿಸುಧಾಸರೋಧಿ ಗುರುಭಕ್ತಿಸುಖಾ
ಕರಮೂರ್ತಿ ರಂಜಿಸಿರ್ದಂ
ಗುರುಭಕ್ತಿಧುರೀಣನಮಮ ಗುರುಭಕ್ತಾರ್ಯಂ ೩

### ಗುರುಭಕ್ತಯ್ಯನ ಕಥೆ

೧. ಮಂಗಳಕರಳಾದ ಪಾರ್ವತೀದೇವಿಯೆಂಬ ಕಾಂತಿಯುತವಾದ ಕಲ್ಪಲತೆಗೆ ಕಲ್ಪವೃಕ್ಷಪ್ರಾಯನೂ, ಮದೋನ್ಮತ್ತವಾದ ಗಜಾಸುರನ ಚರ್ಮವನ್ನೇ ಬಟ್ಟೆಯನ್ನಾಗಿ ಧರಿಸಿದವನೂ, ನಾಗಾಭರಣನೂ ಆದ ಶಿವಲಿಂಗನು ಸತ್ಪುರುಷರನ್ನು ರಕ್ಷಿಸಲಿ. ವ॥ ಮತ್ತು ಅಲ್ಲಿ. ೨–೩. ಗುರುವಿನ ಪಾದವೆಂಬ ಕೆಂದಾವರೆಗಳೆರಡರ ನೆನೆಯುವಿಕೆಯಲ್ಲಿ ಸ್ಥಿರವಾದ ಮನಸ್ಸುಳ್ಳವನೂ, ಅಂಥ ಪ್ರಕಾಶಮಾನವಾದ ಗುರುವಿನ ಕರುಣೆಯಿಂದ ಕೂಡಿದ ಕಟಾಕ್ಷದ ಕಾಂತಿಯೆಂಬ ಬೆಳದಿಂಗಳಿಗೆ ಚಕೋರಪಕ್ಷಿಯಂತಿರುವವನೂ, ಪರಮಾತ್ಮನನ್ನು ತಿಳಿದ ಗುರುವಿನ ಪಾದ ಕಮಲವೆಂಬ ಶಿರೋಭೂಷಣವನ್ನು ತಲೆಯ ಮೇಲೆ ಧರಿಸಿರುವವನೂ, ಗುರುವಿನ ವಚನವೆಂಬ ಅಮೃತದ ಉತ್ತಮ ಪಾನೀಯದಲ್ಲಿ ಮನೋಹರವಾದ ಅಭಿರುಚಿಯುಳ್ಳವನೂ, ಗುರುವಿನ ಅನುಗ್ರಹವೆಂಬ ರಸಜ್ಞನೂ, ಗುರುಲಿಂಗಗಳನ್ನು ಸದಾ ಅರ್ಚನೆ ಮಾಡುವ, ಗುರುಭಕ್ತಿಗೆ ನೂತನ ಚಿಂತಾಮಣಿಯೆನಿಸಿದವನೂ, ಗುರುಭಕ್ತಿಗೆ ಕ್ಷೀರಸಮುದ್ರ ಪ್ರಾಯನಾದವನೂ. ಗುರುಭಕ್ತಿಯೆಂಬ ಸುಖಕ್ಕೆ ಆಸ್ಪದವಾದ ಶರೀರಿಯೆನಿಸಿದವನೂ, ಗುರುಭಕ್ತಿ ಧುರಂಧರನೂ ಆದ ಗುರುಭಕ್ತಾರ್ಯನೆಂಬುವನು

ಗುರುಕರುಣಮೆ ಹರಣಂ ಗುರು
ಚರಣಮೆ ನಿಜ ಚಿತ್ತ ಹಸ್ತಿಗಾಲಾನಂ ತ
ದ್ಗುರುಭಜನಸುಖಮೆ ಮೋಕ್ಷ
ಸ್ಥಿರಸುಖಮಾಗಿರೆ ಪೊದಳ್ದು ನಲವೇಱಿರ್ದಂ ೪

ಅಧಿಕರಿಸಿ ನಂಬಿ 'ನ ಗುರೋ
ರಧಿಕಮ್' ನಿಪ್ಪಾಗಮೋಕ್ತಿಯುಂ ಗುರುವಿಂ ಬೇ
ಱಧಿಕಮಣಮಿಲ್ಲೆನುತ ಭ
ಕ್ತಿಧುರಂಧರನೊಲ್ದು ಭಜಿಯಿಪು ಗುರುವರನಂ ೫

ಗುರುಚರಣಾಬ್ಜರೇಣು ಭಸಿತಂ ಗುರುನಾಮಮೆ ದಿವ್ಯಮಂತ್ರಮಾ
ಗುರುಭಜನಂ ನಿಜೇಷ್ಟಯಜನಂ ಗುರುಪಾದಮೆ ಸರ್ವಸಂಪದೋ
ತ್ಕರಜನನಸ್ಥಳಂ ಗುರುನಿರೂಪಮೆ ಜೀವನಮಾಗೆ ಸಂತತಂ
ಗುರುಚರಣಾಂಬುಜದ್ವಯಮನರ್ಚಿಸುತುಂ ಗುರುಭಕ್ತನೊಪ್ಪುಗುಂ ೬

ಪರಿಮಳವಾರಿಯಿಂ ಗುರುಪದಾಂಬುಜಮಂ ತೊಳೆದಷ್ಟಗುಣದಿಂ
ಪೊರೆದು ಸುಗಂಧಪುಷ್ಪಚಯಮಂ ಪದೆದೇಱಿಸಿ ಧೂಪದೀಪ ಭಾ
ಸುರಮಧುರಾನ್ನವೀಟಿಕೆಗಳಿಂ ನಲಿದರ್ಚಿಸಿ ಸಾತ್ವಿಕಂ ಪೊದ
ಳ್ದಿರೆ ಪೊಗಳುತ್ತೆ ಕೂರ್ತೆಱಗಿ ಮತ್ತೆಱಗುತ್ತೆ ಮನೋನುರಾಗದಿಂ ೭

ನೆನೆನೆನೆದು ಗುರುಮಹತ್ವಮ
ನನುನಯದಿಂ ನೋಡಿ ತನ್ಮೂರ್ತಿಯನೋ

ಶೋಭಿಸುತ್ತಿದ್ದನು. ೪. ಗುರುಕರಣವೇ ಪ್ರಾಣ; ಗುರುಚರಣವೇ ತನ್ನ ಮನಸ್ಸೆಂಬ ಆನೆಯನ್ನು ಕಟ್ಟುವ ಕಂಬ ಆ ಗುರುವನ್ನು ಭಜನೆ ಮಾಡುವುದರಿಂದಾಗುವ ಸುಖವೇ ಮೋಕ್ಷದ ಶಾಶ್ವತ ಸುಖವಾಗಿರಲಾಗಿ ಖ್ಯಾತಿಯನ್ನು ಹೊಂದಿ ಸಂತೋಷದಿಂದ ಇದ್ದನು. ೫. ಭಕ್ತಿ ಜೀವನವೆಂಬ ಭಾರವನ್ನು ಹೊತ್ತ ಆ ಗುರುಭಕ್ತನು 'ನ ಗುರೋರಧಿಕಂ' ಎಂದರೆ–ಗುರುವಿಗಿಂತ ಹೆಚ್ಚಿನದು ಯಾವುದೂ ಇಲ್ಲವೆಂಬ ಆಗಮ ವಚನವನ್ನು ಅಧಿಕವೆಂದು ಭಾವಿಸಿ, ಗುರುವಿಗಿಂತ ಬೇರೆ ಅಧಿಕವಾದದ್ದು ಸ್ವಲ್ಪವೂ ಇಲ್ಲವೆಂದು ತಿಳಿದು ಸಂತೋಷದಿಂದ ಗುರುವನ್ನು ಸ್ತೋತ್ರ ಮಾಡುತ್ತಿದ್ದನು. ೬. ಗುರುವಿನ ಪಾದಕಮಲದ ಧೂಳಿಯೇ ಭಸ್ಮ, ಗುರುನಾಮವೇ ದಿವ್ಯಮಂತ್ರ; ಗುರು ಭಜನೆಯೇ ತನ್ನ ಇಷ್ಟಲಿಂಗದ ಪೂಜೆ: ಗುರುಪಾದವೇ ಸಮಸ್ತ ಸಂಪತ್ತುಗಳ ಸಮೂಹದ ಜನ್ಮಭೂಮಿ: ಗುರುವಿನ ಆಜ್ಞೆಯೇ ಜೀವನವಾಗಿರಲು ಸತತವೂ ಆ ಗುರುಭಕ್ತನು ಗುರುವಿನ ಪಾದಕಮಲಗಳೆರಡನ್ನೂ ಪೂಜಿಸುತ್ತ ಒಪ್ಪಿದ್ದನು. ೭–೮. ಗುರುವಿನ ಪಾದಕಮಲಗಳನ್ನು ಪರಿಮಳೋದಕದಿಂದ ತೊಳೆದು, ಅಷ್ಟಗಂಧ ಅಂದರೆ ಚಂದನ, ದೇವದಾರು, ಜಂಗಲ್ ಕೋಷ್ಠ, ಕೇಸರಿ, ಕಲ್ಲುಹೂವು, ಜಟಾಮಾಸಿ, ಗೋರೋಚನ, ಅಗಿಲು ಇತ್ಯಾದಿಗಳ ಕೂಟದಿಂದ ಮಾಡಿದ ಗಂಧವನ್ನು ಅನುಲೇಪನ

ಯ್ಯನೆ ಮಣಿದು ಮಣಿದು ತತ್ಕೀ
ರ್ತನಮಂ ಬಗೆದಂದು ನೆಗಳ್ದನಾ ಗುರುಭಕ್ತಂ ೮

ಶಿವಮಯಭಾವ ಶಿಷ್ಯಜನಪಾಶನಿಕೃಂತನ ಶಿಷ್ಟವಂದ್ಯ ಶಾಂ
ಭವಮತಕಲ್ಪಭೂಜ ಶರಣಾಗತರಕ್ಷಕ ಶಾಂತ ಶಾರ್ವರೀ
ಧವರುಚಿಕೀರ್ತಿಭಾಸುರ ಶರಣ್ಯವರೇಣ್ಯ ಶಶಾಂಕಮೌಳಿಭ
ಕ್ತವಿಸರಭಾವನೀಯ ಜಯ ದೇಶಿಕಶೇಖರ ಸದ್ಗುಣಾಕರಾ ೯

ನಿರವದ್ಯಂ ನಿಷ್ಪ್ರಪಂಚಂ ನಿರವಧಿಮಹಿಮಂ ನಿರ್ಗುಣಂ ನಿಷ್ಕಳಂಕಂ
ನಿರಪಾಯಂ ಚಿನ್ಮಯಂ ತಾನೆನಿಪ ಪರಶಿವಂ ನೀನೆ ಕಾರುಣ್ಯದಿಂದಂ
ಗುರುರೂಪಂ ತಾಳ್ದು ತೂಳ್ದೈ ಭವಮನಮಳಲಿಂಗಾಂಗಸಂಯೋಗಮಂ ಬಿ
ತ್ತರಿಸುತ್ತುಂ ಶಿಷ್ಯಪಾಶಪ್ರತತಿಯ ಪಱಿದೈ ಧಾತ್ರಿಯೊಳ್ದೇಶಿಕೇಂದ್ರಾ ೧೦

ಒದವಿರ್ದಾಗಮಮಸ್ತಕಪ್ರತತಿ ಲಕ್ಷ್ಮೀಶಾಜರುಂ ಕಾಣದ
ಗ್ಗದ ಚಿನ್ಮಾತ್ರಮೆನಿಪ್ಪ ದಿವ್ಯನಿಜಲಿಂಗಾಕಾರಮಂ ಕಾಣಿಸು

ಮಾಡಿ, ಪರಿಮಳ ವಿಶಿಷ್ಟವಾದ ಹೂವುಗಳ ಸಮೂಹವನ್ನು ಸಂತೋಷದಿಂದ ಏರಿಸಿ, ಧೂಪ, ದೀಪ. ತಾಂಬೂಲಗಳಿಂದ ನಲಿದು ಪೂಜೆ ಮಾಡಿ, ರೋಮಾಂಚಾದಿ ಸಾತ್ವಿಕ ಭಾವಗಳು ವ್ಯಾಪಕವಾಗಿ ಉಂಟಾಗುತ್ತಿರಲು ಸ್ತೋತ್ರ ಮಾಡುತ್ತ, ಪ್ರೀತಿಸುತ್ತ, ನಮಸ್ಕಾರ ಮಾಡುತ್ತ ಮತ್ತೆ ಮತ್ತೆ ಮನೋನುರಾಗದಿಂದ ನಮಸ್ಕಾರ ಮಾಡುತ್ತ, ಆ ಗುರುಭಕ್ತನು (ಹೀಗೆ) ಗುರುಮಹತ್ವವನ್ನು ನೆನೆ ನೆನೆದು ಅನುರಾಗದಿಂದ ಆ ಗುರು ಮೂರ್ತಿಯನ್ನು ನೋಡಿ, ನೋಡಿ ಮೆಲ್ಲನೆ ಮಣಿ ಮಣಿದು, ಗುರುಸ್ತೋತ್ರವನ್ನು ಮನಸ್ಸಿನಲ್ಲಿ ತಂದುಕೊಂಡು ಶೋಭಿಸಿದ್ದನು. ೯. ಶಿವಭಾವಾಪನ್ನವಾದ ಮನಸ್ಸುಳ್ಳ ಶಿಷ್ಯಜನರ ಭವವೆಂಬ ಹಗ್ಗವನ್ನು ಕತ್ತರಿಸುವ, ಶಿಷ್ಟರಾದ (ಸತ್ಪುರುಷರಾದ) ಜನರಿಂದ ವಂದಿಸಿಕೊಳ್ಳಲ್ಪಡುವ, ವೀರಶೈವ ಮತಕ್ಕೆ ಕಲ್ಪವೃಕ್ಷಪ್ರಾಯನಾದ, ಶರಣಾಗತರಾದ ವರನ್ನು ಸಂರಕ್ಷಿಸುವ, ಶಾಂತನೂ, ರಾತ್ರೀಶ್ವರನೂ ಆದ ಚಂದ್ರನ ಕಾಂತಿಯಂತಿರುವ ಕೀರ್ತಿಯಿಂದ ಪ್ರಕಾಶಮಾನನಾದ; ರಕ್ಷಕರಲ್ಲಿ ಶ್ರೇಷ್ಠವೆನಿಸಿದ, ಚಂದ್ರಮೌಳಿಯ ಭಕ್ತರ ಸಮೂಹದಿಂದ ಧ್ಯಾನಿಸಲ್ಪಡುವುದಕ್ಕೆ ಯೋಗ್ಯನೆನಿಸಿದ, ಸದ್ಗುಣಗಳಿಗೆ ಆನೆಕರನಾದ ಗುರುಶ್ರೇಷ್ಠನೇ, ಜಯ! ೧೦. 'ಹೇ ದೇಶಿಕೇಂದ್ರನೇ, ನಿರ್ದೋಷಿ, ಪ್ರಾಪಂಚಿಕ ವ್ಯಾಪಾರ ಶೂನ್ಯನು ಕೊನೆಯಿಲ್ಲದ ಮಹಿಮನು, ಸತ್ವರಜಸ್ತಮೋಗುಣದೂರನು, ಪಾಪರಹಿತನು, ಅಪಾಯದೂರನು, ಜ್ಞಾನರೂಪನು—ಎನಿಸುವ ಪರಮಶಿವನು ನೀನೇ ಆಗಿದ್ದೀಯೇ, ಕಾರುಣ್ಯದಿಂದ ಲೋಕದಲ್ಲಿ ಗುರುರೂಪ ಧರಿಸಿ, ಜನನ ಮರಣಾತ್ಮಕ ವಾದ ಸಂಸಾರವನ್ನೂ ಓಡಿಸಿದ್ದೀಯೇ. ಶ್ರೇಷ್ಠವಾದ ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಬಿತ್ತರಿಸುತ್ತ ಶಿಷ್ಯರ ಮಾಯಾ ಪಾಶ ಸಮೂಹವನ್ನು ಕಿತ್ತು ಹಾಕಿದೆ.' ೧೧. 'ಪೂರ್ಣದಯಾಸಾಗರನೇ, ಪ್ರಾಪ್ತವಾಗಿರುವ ವೇದ ಶಿರಸ್ಸುಗಳೆನಿಸಿದ ಉಪನಿಷತ್ತುಗಳ ಸಮೂಹವೂ (ಮತ್ತು) ವಿಷ್ಣು, ಬ್ರಹ್ಮರೂ ಕಾಣದೆಯಿರುವ ಶ್ರೇಷ್ಠ

ತ್ತದನುದ್ಯದ್ವಪುರಿಂದ್ರಿಯಾಸುಮುಖಸಮ್ಯಗ್ವ್ಯಾಪ್ತಮಂ ಮಾಡಿ ಪೂ
ರ್ಣದಯಾಸಾಗರ ಸಾರ್ಚಿದೈ ವಿಮಳಜೀವನ್ಮುಕ್ತಿಯಂ ಭಕ್ತರೊಳ್ ೧೧

ವರ ಪಂಚಬ್ರಹ್ಮವೈದುಂ ಕಲೆ ಮಿಸುಪ ಮಹಾಪಂಚಸಾದಾಖ್ಯ ಪಂಚಾ
ಮರವೃಂದಂ ಪಂಚತನ್ಮಾತ್ರೆಗಳಮರ್ದ ಲಸತ್ಪಂಚಭೂತಂ ಪ್ರಪಂಚೋ
ದರಪಂಚೀಭೂತತತ್ವಪ್ರತತಿಯೆನಿಪಿವಂ ತಾಳ್ದು ಪಂಚಾಂತ ಪಂಚಾ
ಕ್ಷರಮಂ ದೇಹೇಂದ್ರಿಯಾಸುಸ್ಥಿತಮನೆಸಗಿದೈ ದೇಶಿಕೇಂದ್ರಾವತಂಸಾ ೧೨

ನಿಯತದಿನಂಗವಿಲ್ಲದ ಸದಾಶಿವನಂ ಶಿವಲಿಂಗಮೂರ್ತಿಯೊ
ಳ್ನಿಯಮಿಸಿ ಸಾರ್ಚಿ ಸರ್ವಗತನಂ ನತಹೃದ್ಗತನಂ ನೆಗಳ್ಚಿ ಛಾ
ರಯ ಜಗದಾತ್ಮನಂ ಮಿಸುಪ ಭಕ್ತನಿಜಾತ್ಮನನೊಲ್ದು ಮಾಡಿ ಚಿ
ನ್ಮಯನನೊಡರ್ಚಿ ಭಕ್ತಮಯನಂ ಪೆಸರ್ವೆತ್ತೆಯುದಾತ್ತವೈಭವಾ ೧೩

ವಾದ ಜ್ಞಾನವೇ ತಾನಾಗಿರುವುದೆನಿಸಿರುವ ದಿವ್ಯ ಶಿವಲಿಂಗಾಕೃತಿಯಾಗಿ ಕಾಣಿಸುತ್ತ, ಆ ಶಿವಲಿಂಗವನ್ನು ಉತ್ಕೃಷ್ಟವಾದ ಶರೀರ, ಇಂದ್ರಿಯಗಳೇ ಆದಿಯಾದವುಗಳ ಮುಖದಲ್ಲಿ ಚೆನ್ನಾಗಿ ವ್ಯಾಪ್ತಿಗೊಳಿಸಿ (ಅಂದರೆ ಸರ್ವಾಂಗಲಿಂಗಮಯವನ್ನಾಗಿ ಮಾಡಿ), ಭಕ್ತರಲ್ಲಿ ಪರಿಶುದ್ಧ ಜೀವನ್ಮುಕ್ತಿಯನ್ನು (ಜೀವಂತವಾಗಿರುವಾಗಲೇ ಮುಕ್ತಿಯನ್ನು) ಉಂಟುಮಾಡಿದ್ದೀಯಲ್ಲವೆ !' ೧೨. 'ದೇಶಿಕೇಂದ್ರರಲ್ಲಿ ಶ್ರೇಷ್ಠನಾದವನೇ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬ ಪಂಚಬ್ರಹ್ಮವು ; ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತಗಳೆಂಬ ಕಲೆಗಳು ; ಶೋಭಿಸುವ ಶ್ರೇಷ್ಠಪಂಚಸಾದಾಖ್ಯಗಳೆನಿಸಿರುವ ಕರ್ತೃಸಾದಾಖ್ಯ, ಕರ್ಮಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯಗಳು ; ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬ ಪಂಚ ಅಮರವೃಂದವು ; ಶಬ್ದ ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರೆಗಳು ; ಪ್ರಕರ್ಷದಿಂದ ಕೂಡಿ ಪ್ರಕಾಶಿಸುವ–ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳೆಂಬ ಪಂಚಮಹಾಭೂತಗಳು ; ಪ್ರಪಂಚವೇ ಗರ್ಭವಾಗಿ ಉಳ್ಳ ಪರವಸ್ತುವಿನಿಂದ ವಿಸ್ತಾರಗೊಳಿಸಲ್ಪಟ್ಟ (ಪಂಚೀಭೂತ), ಚತುರ್ವಿಂಶತಿ (ಇಪ್ಪತ್ತುನಾಲ್ಕು) ತತ್ವಗಳ ಸಮೂಹ ವಿಶಿಷ್ಟನಾಗಿ ಹಿರಿಮೆಯನ್ನು ಹೊಂದಿದ ಪಂಚಾಕ್ಷರೀಮಂತ್ರವನ್ನು, ದೇಹ ಮತ್ತು ಇಂದ್ರಿಯಗಳಲ್ಲಿ ಸುವ್ಯವಸ್ಥಿತಸ್ಥಿತಿಯಲ್ಲಿ ಇರುವಹಾಗೆ ಮಾಡಿದೆಯಲ್ಲವೇ !' ೧೩. 'ಉತ್ಕೃಷ್ಟವಾದ ವೈಭವ ಸಂಪನ್ನ ಗುರುವೇ, ನಿಶ್ಚಯವಾದ ದೇಹವಿಲ್ಲದ ಪರಶಿವನನ್ನು ಶಿವಲಿಂಗಮೂರ್ತಿಯಲ್ಲಿ ನೆಲೆಗೊಳಿಸಿ, ಸರ್ವವ್ಯಾಪಿಯಾದವನನ್ನು ನಮ್ರರಾದವರ ಹೃದಯದಲ್ಲಿ ಹೊಂದಿದವನನ್ನಾಗಿ ಮಾಡುತ್ತ ವಿಚಾರಿಸಲಾಗಿ ಜಗತ್ತೇ ತನ್ನಲ್ಲುಳ್ಳ ಪರಬ್ರಹ್ಮನನ್ನು ಶೋಭಿಸುವ ಭಕ್ತನ ಸ್ವಕೀಯ ಪ್ರಾಣದ ಸ್ವರೂಪವನ್ನಾಗಿಯೇ ಒಂದುಮಾಡಿ. ಅವನನ್ನು ಚಿನ್ಮಯ (ಜ್ಞಾನಮಯ) ನನ್ನಾಗಿಯೂ, ಭಕ್ತಮಯನನ್ನಾಗಿಯೂ ಮಾಡಿ ಪ್ರಸಿದ್ಧಿಯನ್ನು

ಮಾಣದೆ ವಿಶ್ವೇಶ್ವರನಂ
ಪ್ರಾಣೇಶ್ವರನೆನಿಸಿ ನೆಗಳ್ದ ಕರಪಂಕಜದೊ
ಳ್ಕಾಣಿಸಿದೆ ಬೊಮ್ಮಮಂ ನಿ
ಮ್ಮಾಣತಿಯೊಳ್ಸಂದು ಬಾಳ್ವನಗಜಾರಮಣಂ ೧೪

ಅದಱಿಂ ನೀನೇ ಸ್ವತಂತ್ರಂ ನಿರುಪಮಮಹಿಮಂ ಸಚ್ಚಿದಾನಂದರೂಪಂ
ವಿದಿತಂ ತತ್ತ್ವಾದಿಬೀಜಂ ಗುರುವರ 'ಗುರುದೇವಾತ್ಪರಂ ನಾಸ್ತಿ'ಯೆಂಬು
ಕ್ತಿ ದಿಟಂ ನಿನ್ನತ್ತಣಿಂದು ಪರಮಿನಿತುಮಣಂ ತೋಱದೀ ವಿಶ್ವಮೆಲ್ಲಂ
ತ್ವದಧೀನಂ ಲಿಂಗಮುಂ ಜಂಗಮುಮಮಮತುಳಿತಾಚಾರ್ಯನುಂ ನೀನೆ ದೇವಾ ೧೫

ಮದಮಂ ತೂಳ್ದು ಮನೋಜನಂ ತುಳಿದು ಮಾಯಾಮೋಹಮಂ ನೂಂಕಿ ಪೆ
ರ್ಚಿದಹಂಕಾರಮನಿಕ್ಕಿ ದುರ್ವ್ಯಸನಮಂ ನುರ್ಗೊತ್ತಿ ರಾಗಾದಿಯಂ
ಸದೆದಂಗೇಂದ್ರಿಯವೃತ್ತಿಯಂ ಪಱಿದು ಪಂಚಕ್ಲೇಶಮಂ ಕಿಳ್ತು ಚಿ
ತ್ಪದಮಂ ಸಾರ್ಚುಗುಮಲ್ತೆ ನಿನ್ನ ವಚನಂ ಪ್ರತ್ಯಕ್ಷ ಭಾಳೇಕ್ಷಣಾ ೧೬

ಕಡೆಗಣ್ಕಾಮದುಘಂ ಕರಂ ದಿವಿಜಭೂಜಂ ನಿನ್ನ ಚೆಲ್ವಾಳ್ದ ಮೆ
ಲ್ಲಡಿ ಚಿಂತಾಮಣಿ ವಾಣಿ ಸರ್ವಸಃಪದಾರ್ಥಜ್ಯೋತಿಯೊಂದಳ್ಕಱಿಂ

ಪಡೆದವನಾದೆ.' ೧೪. 'ಜಗದೀಶ್ವರನನ್ನು ತಪ್ಪದೆ ಪ್ರಾಣೇಶ್ವರನನ್ನಾಗಿ (ಭಕ್ತನ ಪ್ರಾಣಕ್ಕೆ ಈಶ್ವರನನ್ನಾಗಿ) ಮಾಡಿದೆ. ಕರಕಮಲದಲ್ಲಿ ಪರಬ್ರಹ್ಮ ಸ್ವರೂಪವಾದ ಇಷ್ಟಲಿಂಗವನ್ನು ಕಾಣುವಂತೆ ಮಾಡಿದೆ. (ಆಗ) ಆ ಶಿವನು ನಿಮ್ಮ ಆಜ್ಞೆಯನ್ನನು ಸರಿಸಿ ಬಾಳುವನು. (ಅಲ್ಲವೇ !)' ೧೫. 'ಆದ್ದರಿಂದ (ಗುರುವೇ) ನೀನೇ ಸ್ವತಂತ್ರನು ; ಉಪಮಾತೀತವಾದ ಮಹಿಮೆಯುಳ್ಳವನು ; ಸತ್, ಚಿತ್, ಆನಂದಸ್ವರೂಪನೆನಿಸಿ ಪ್ರಸಿದ್ಧನು ; ತತ್ತ್ವಗಳಿಗೆ ಆದಿಕಾರಣನು ; ಹೇ ಗುರುಶ್ರೇಷ್ಠನೇ; ಗುರುದೇವನಿಗಿಂತಲೂ, ಉತ್ಕೃಷ್ಟವಾದ ಬೇರೊಂದು ವಸ್ತುವು ಇಲ್ಲವೆಂಬ ಮಾತು ಸತ್ಯವಾದುದು; ನಿನಗಿಂತಲೂ ಉತ್ಕೃಷ್ಟವಾದುದು ಸ್ವಲ್ಪವೂ ತೋರುವುದಿಲ್ಲ ; ಹೇ ದೇವ, ಈ ಪ್ರಪಂಚವೆಲ್ಲ ನಿನ್ನ ಅಧೀನ ; ಲಿಂಗವೂ, ಜಂಗಮವೂ, ಅಸದೃಶ ಗುರುವೂ ನೀನೇ ಆಗಿದ್ದೀಯೆ.' ೧೬. 'ಹೇ ಪ್ರತ್ಯಕ್ಷಫಾಲನೇತ್ರನಾದ ಗುರುವೇ, ನಿನ್ನ ಮಾತುಗಳು ಗರ್ವವನ್ನು ಓಡಿಸಿ, ಮನ್ಮಥನನ್ನು ತುಳಿದು, ಅಜ್ಞಾನದಿಂದುಂಟಾದ ಮೋಹವನ್ನು ಆಚೆಗೆ ತಳ್ಳಿ, ಹೆಚ್ಚಾದ ಅಹಂಕಾರವನ್ನು ಮೆಟ್ಟಿಹಾಕಿ, ದುಷ್ಟವ್ಯಸನಗಳನ್ನು ಒತ್ತಿ, ಅನುರಾಗಾದಿಗಳನ್ನು ನಾಶಮಾಡಿ, ಶರೀರೇಂದ್ರಿಯಗಳ ಅಜ್ಞಾನಮಯ ವ್ಯಾಪಾರವನ್ನು ಹರಿದುಹಾಕಿ, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಐದು ತರದ ಕ್ಲೇಶಗಳನ್ನು ಕಿತ್ತುಹಾಕಿ, ಜ್ಞಾನದ ಸ್ಥಾನವನ್ನು ಉಂಟುಮಾಡುವುವಲ್ಲವೆ.' (ನಿನ್ನವಚನಗಳು ಎಂದು ತಾತ್ಪರ್ಯ). ೧೭. 'ನಿನ್ನ ಕಡೆಗಣ್ಣೇ ಕಾಮಧೇನುವು ; ನಿನ್ನ ಹಸ್ತವೇ ಕಲ್ಪವೃಕ್ಷವು ; ನಿನ್ನ ಚೆಲುವಾದ ಮೃದುಪಾದಗಳೇ ಚಿಂತಾಮಣಿ ; ನಿನ್ನ ಸಮಸ್ತ ಮಾತುಗಳೇ ಸಮೀಚೀನವಾದ ಪದಾರ್ಥಗಳ (ಪದ ಮತ್ತು ಅರ್ಥಗಳ) ಜ್ಯೋತಿ ಸ್ವರೂಪಗಳು –

ನುಡಿವರ್ಕಳೀವಿದರಂತದಿರ್ಕೆ ಭವಮಂ ಬೇರ್ಕೆಯ್ಯ ಜೀವತ್ವಮಂ
ಕಿಡಿಪಾನಂದಮನೀವ ಮುಕ್ತಿಗುಡುವಂದಂ ಮೇಣವರ್ಕಿರ್ಕುಮೇ ೧೭

ಅನಿಮಿತ್ತಬಂಧು ಮನುಮುನಿ
ಜನರ್ಕಗೋಚರಮೆನಿಪ್ಪ ಲಿಂಗಮನೆನ್ನೀ
ತನುಮನದೊಳ್ಭಾವದೊಳಾ
ತ್ಮನೊಳಂ ನೆಲೆಗೊಳಿಸಿ ಪೊರೆದೆ ನೀಂ ಘನಮಹಿಮಾ ೧೮

ವ॥ ಎಂದು ಕೂರ್ಮೆಯಿಂ ಕೊಂಡಾಡಿ ದಂಡಪ್ರಣಾಮಂಗೆಯ್ದು ಚರಣಮಂ ಶಿರದೊಳ್ಪೊತ್ತು ಭಯಭಕ್ತಿವೆರಸು ಕಿಂಕರತೆಯುನಪ್ಪುಕೆಯ್ದು ಗುರುಭಕ್ತಂ ಗುರುಕೃಪೆಯುಂ ಪಡೆದು ಜಡಭಾವಮಂ ನೀಗಿ ಮೃಡಭಾವಮಳವಟ್ಟು ಗುರುದಕ್ಷಿಣೆಗೆ 'ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್' ಎಂಬ ವಾಕ್ಯಾನುಸ್ಸಾರದಿಂ ನಿಜಾಂಗವಸ್ತು ಪ್ರಾಣಂಗಳಂ ನಿವೇದಿಸಿ—

ದುರಿತಧ್ವಾಂತಾರ್ಕಬಿಂಬಂ ಭವಜಳಧರಜಂಝಾನಿಲಂ ಮೋಹಧಾತ್ರೀ
ಧರಶಂಬಂ ಶೋಕಕಾಕೋದರಖಗಪತಿ ತಾಪಾಬ್ಧಿಕುಂಭೋದ್ಭವಂ ದು

ಎಂದು ಸಂತೋಷದಿಂದ ತಿಳಿದವರು ನುಡಿಯುತ್ತಿದ್ದಾರೆ. ಅದೊತ್ತಟ್ಟಿಗಿರಲಿ, ಭವ ಪ್ರಪಂಚವನ್ನು ಬೇರೆ ಮಾಡುವ, ಪ್ರಾಣಿತನವನ್ನು ನಾಶಮಾಡತಕ್ಕ, ಆನಂದವನ್ನುಂಟು ಮಾಡುವ, ಮತ್ತು ಪ್ರಾಣಿತನವನ್ನು ನಾಶಮಾಡತಕ್ಕ, ಆನಂದವನ್ನುಂಟುಮಾಡುವ, ಮತ್ತು ಮುಕ್ತಿಯನ್ನುಕೊಡುವ ಸಾಮರ್ಥ್ಯವು ಅವುಗಳಿಗೆ (ಅಂದರೆ ಕಾಮಧೇನು ಕಲ್ಪ ವೃಕ್ಷಾದಿಗಳಿಗೆ) ಉಂಟಾದೀತೇ ?' ೧೮. ಅನಿಮಿತ್ತ ಬಂಧುವಾದ ಘನಮಹಿಮನೇ, ನೀನು ಮನುಮುನಿಗಳೇ ಮೊದಲಾದ ಜನರಿಗೆ, ಕಾಣಿಸದಿರುವವನೆನಿಸುವ ಲಿಂಗವನ್ನು ನನ್ನ ತನುಮನಭಾವಗಳಲ್ಲಿ (ಕ್ರಮವಾಗಿ ಇಷ್ಟಲಿಂಗ; ಪ್ರಾಣಲಿಂಗ; ಭಾವಲಿಂಗ ರೂಪವಾಗಿ) ಮತ್ತು ಆತ್ಮದಲ್ಲಿ (ಮಹಾಲಿಂಗವೆನಿಸಿ) ನೆಲೆಗೊಳಿಸಿ ರಕ್ಷಿಸಿದೆ.' ವ॥ ಹೀಗೆಂದು ಆ ಗುರುಭಕ್ತನು (ತನ್ನ ಗುರುವನ್ನು) ಪ್ರೀತಿಯಿಂದ ಕೊಂಡಾಡಿ, ಸಾಷ್ಟಾಂಗನಮಸ್ಕಾರ ಮಾಡಿ, ಚರಣಗಳನ್ನು ಶಿರದಲ್ಲಿ ಹೊತ್ತು ಭಯದಿಂದ ಭಕ್ತಿಯಿಂದಲೂ ಕೂಡಿ, ಕೈಂಕರ್ಯಭಾವವನ್ನು ಹೊಂದಿದವನಾಗಿ, ಆ ಗುರುವಿನ ಕೃಪಾವಿಶೇಷವನ್ನು ಪಡೆದು, ಜಡಭಾವ (ಅಜ್ಞಾನಭಾವವನ್ನು) ತೊಲಗಿಸಿ, ಶಿವಭಾವವನ್ನು ಅಳವಡಿಸಿಕೊಂಡು, 'ಗುರುದಕ್ಷಿಣೆ ಶರೀರ, ಅರ್ಥ, ಪ್ರಾಣಗಳನ್ನು ಅರ್ಪಿಸಬೇಕು' (ಶರೀರಮರ್ಥಂ ಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್) ಎಂಬ ವಾಕ್ಯಕ್ಕನುಸಾರವಾಗಿ, ತನ್ನ ದೇಹ, ದ್ರವ್ಯ, ಪ್ರಾಣಗಳನ್ನು ನಿವೇದಿಸಿ—೧೯. ಶಕ್ತಿಯಿಂದ ಕೂಡಿದ, ಗುರುವಿನ ಪಾದದಲ್ಲಿಟ್ಟ ಪ್ರಕಾಶಮಾನವಾದ ಭಕ್ತಿಯು (ಶಕ್ತಿವಿಶಿಷ್ಟವಾದ ಶಿವಾದ್ವೈತಭಕ್ತಿಯು) ಪಾಪವೆಂಬ ಕತ್ತಲೆಗೆ ಸೂರ್ಯಮಂಡಲವು ; ಜನನ ಮರಣಾತ್ಮಕವಾದ ಸಂಸಾರವೆಂಬ ಮೋಡಗಳಿಗೆ ಬಿರುಗಾಳಿಯು ; ಅಜ್ಞಾನವೆಂಬ ಪರ್ವತಕ್ಕೆ ವಜ್ರಾಯುಧಪ್ರಾಯವು ; ದುಃಖವೆಂಬ ಸರ್ಪಕ್ಕೆ (ಕಾಕವೆಂಬ ವಿಷವನ್ನು ಹೊಟ್ಟೆಯುಳ್ಳ ಕಾಕೋದರವನಿಸುವ

ಸ್ತ್ರರಮಾಯಾಭೂರುಹಪ್ರಸ್ಫುರಿತಪರಶು ಕಾಮೇಭಕಂಠೀರವಂ ಭೀ
ಕರಕಾಲಾರಣ್ಯದಾವಂ ಗುರುಪದವಿಳಸದ್ಭಕ್ತಿಶಕ್ತಿಪ್ರಯುಕ್ತಂ ೧೯

ಗುರುಪದಭಕ್ತಿ ದೇವತರುಗೀಶ್ವರಸತ್ಕೃಪೆ ಮೂಲಮುಲ್ಲಸ
ಚ್ಚರಚರಣಾರ್ಚನಾಭಿರತಿ ಪಲ್ಲವಮಾಗಮನಿಷ್ಠೆ ಶಾಖೆ ಶಾಂ
ತಿರಸಮರಂದಬೋಧಮಲರನ್ವಿತಮಾಗಿರೆ ಲಿಂಗಸಂಗಸೌ
ಖ್ಯರುಚಿಸುಮೋಕ್ಷದಿವ್ಯಫಲಮಪ್ಪುದು ತಪ್ಪದು ಭೂತಳಾಗ್ರದೊಳ್ ೨೦

ಕಡಿವೊಡೆ ದುರಿತವ್ರಜಮಂ
ಸುಡುವೊಡೆ ಭವವನಮನಭವಚರಣಾಂಬುಜಮಂ
ಪಿಡಿವೊಡೆ ಸಂಪದಮುಕ್ತಿಯ
ಪಡೆವೊಡೆ ಗುರುಭಕ್ತಿ ಮುಖ್ಯ ಕಾರಣಮಲ್ತೇ ೨೧

ಗುರುಭಕ್ತಿ ಸರ್ವರುಜೆಯುಂ
ಪರಿಹರಿಸುಗುಮೀಗುಮೈಹಿಕಾಮುಷ್ಮಿಕಭಾ
ಸುರಸುಖಮನನಿಷ್ಟಮನೊ
ತ್ತರಿಸುಗುಮಭವಾಂಘ್ರಿಭಕ್ತಿಯುಂ ವರ್ಧಿಸುಗುಂ ೨೨

ಭವರೋಗಕ್ಕಿದು ಭೇಷಜ
ಮವಿಕಲಶಿವಪದಸುಸೌಧಕಿದು ಸೋಪಾನಂ

ಸರ್ಪಕ್ಕೆ) ಗರುಡಪ್ರಾಯವು ; ಆಧ್ಯಾತ್ಮಿಕ, ಆಧಿ ಭೌತಿಕ, ಆಧಿ ದೈವಿಕ ರೂಪತಾಪ ತ್ರಯವೆಂಬ ಸಮುದ್ರಕ್ಕೆ ಆಗಸ್ತ್ಯ ಋಷಿ ಸ್ವರೂಪ; ದಾಟಲಶಕ್ಯವಾದ ಮಾಯೆಯೆಂಬ ಮರಗಳ ಗುಂಪಿಗೆ ಹೊಳೆಯುವ ಕೊಡಲಿಯು ; ಮನ್ಮಥನೆಂಬ ಆನೆಗೆ ಸಿಂಹ ಸ್ವರೂಪವು ; ಭಯಂಕರನಾದ ಯಮನೆಂಬ ಕಾಡಿಗೆ ದಾವಾನಳ (ಕಾಡ್ಗಿಚ್ಚು)ವು–(ಆದದ್ದಾಗಿದೆ). ೨೦. ಈ ಭೂತಳಾಗ್ರದಲ್ಲಿ, ಗುರುಪಾದಭಕ್ತಿಯೆಂಬ ಕಲ್ಪವೃಕ್ಷಕ್ಕೆ ಈಶ್ವರನ ಸತ್ಕೃಪೆ ಬುಡ ; ಪ್ರಕಾಶಿಸುವ ಜಂಗಮರ ಪಾದಪೂಜಾಸಕ್ತಿಯು (ಆ ಕಲ್ಪ ವೃಕ್ಷದ) ಚಿಗುರು ; ಶೈವಾಗಮಗಳಲ್ಲಿನ ಶ್ರದ್ಧೆಯೇ ಕೊಂಬೆಗಳು ; ಶಾಂತಿಗುಣವೆಂಬ ಮಕರಂದವುಳ್ಳ ಜ್ಞಾನವೇ ಹೂವುಗಳು—ಹೀಗೆ ಕೂಡಿರಲು, ಶಿವಲಿಂಗ ಯೋಗದಿಂದ (ಶಿವಲಿಂಗಸಂಬಂಧದಿಂದ) ಉಂಟಾದ ಸೌಖ್ಯದ ಸಂತೋಷವೇ, ಶ್ರೇಷ್ಠವಾದ ಮುಕ್ತಿ, ಯೆಂಬ ದಿವ್ಯಫಲವಾಗುವುದು ತಪ್ಪುವುದಿಲ್ಲ. ೨೧. ಪಾಪಸಮೂಹವನ್ನು ಕತ್ತರಿಸ ಬೇಕಾದರೆ, [ಸಂಸಾರವೆಂಬ ಕಾಡನ್ನು ಸುಡಬೇಕಾದರೆ. ಶಿವನ ಪಾದಕಮಲವನ್ನು ಹಿಡಿಯ ಬೇಕಾದರೆ, ಮೋಕ್ಷ ಸಂಪತ್ತನ್ನು ಪಡೆಯಬೇಕಾದರೆ ಗುರುಭಕ್ತಿಯೇ ಮೂಲಕಾರಣ ವಲ್ಲವೇ ? ೨೨. ಗುರುಭಕ್ತಿಯೆಂಬುದು ಎಲ್ಲ ರೋಗಗಳನ್ನು ಪರಿಹರಿಸುವುದು;ಇಹ ಪರ ಲೋಕಗಳೆರಡರಲ್ಲೂಆಗಬೇಕಾದ ಸೌಖ್ಯವನ್ನು ಕೊಡುವುದು ; ಅನಿಷ್ಟವನ್ನು (ಇಷ್ಟವಲ್ಲ ದುದನ್ನು) ಆಚೆಗೆ ನೂಕುವುದು ; ಈಶ್ವರ ಪಾದಸೇವಾಭಕ್ತಿಯುನ್ನು ವರ್ಧಿಸುವುದು. ೨೩. ಈ ಗುರು ಭಕ್ತಿಯೆಂಬುದು ಜನನಮರಣಾತ್ಮಕ ಸಂಸಾರವೆಂಬ ರೋಗಕ್ಕೆ ಔಷಧಿಯು ;

ಪ್ರವಿಮಳ ಪರಮಜ್ಞಾನಾ
ರ್ಣವಕಿದು ಭಾವಿಪೊಡೆ ಪೂರ್ಣಹಿಮಕರಕಿರಣಂ ೨೩

ಗುರುಚರಣಭಕ್ತಿಯಿಲ್ಲದ
ಹರಪೂಜೆ ನಿರರ್ಥಮೆಂಬುದಾಗಮವಚನಂ
ಹರಭಕ್ತಿಗೆ ಚರಭಕ್ತಿಗೆ
ಗುರುಭಕ್ತಿಯೆ ಮೂಲಕಾರಣಂ ಧಾರುಣಿಯೊಳ್ ೨೪

ಗುರುವಿಂಗೊಡಲಂ ಲಿಂಗಕೆ
ಹರಣಮನಾ ಜಂಗಮಕ್ಕೆ ನಿರ್ವಂಚನೆ ಸಂ
ದಿರೆ ಧನಮನಿತ್ತು ಸೇವಿಪ
ವರಭಕ್ತಂ ತತ್ಪ್ರಸಾದಸಿದ್ಧಿಯನಾಳ್ಗುಂ ೨೫

ಹರಮೂರ್ತಿತ್ರಯಮೆನಿಸುವ
ಗುರುಚರಲಿಂಗತ್ರಯಕ್ಕೆ ತನುವಂ ಮನಮಂ
ಹರಣಮನೀಯದೆ ವಂಚಿಸೆ
ಸರಿವುದು ಶಿವಲಿಂಗಧಾರಣವ್ರತಭಾಗ್ಯಂ ೨೬

ಕಪಟಿಗೆ ಕುಟಿಲಂಗಾಶಾ
ಚಪಲಂಗೆ ಖಲಂಗೆ ಮೋಹಶೀಲಂಗೆ ವೃಥಾ
ಕುಪಿತಂಗೆ ಡಂಭಕಂಗತಿ
ಕೃಪಣಂಗೀ ತ್ರಿವಿಧಭಕ್ತಿ ಕೈಸಾರ್ದಪುದೇ ೨೭

ಇದು ವಿಕಾರರಹಿತವಾದ (ನ್ಯೂನತೆಯಿಲ್ಲದ) ಈಶ್ವರನ ಸ್ಥಾನದ ಒಳ್ಳೆಯ ಉಪ್ಪರಿಗೆಯ ಮನೆಯ ಪಾವಟಿಗೆಯು ; ಇದು ವಿಚಾರ ಮಾಡಿನೋಡಿದರೆ ಅತಿನಿರ್ಮಲವಾದ ಜ್ಞಾನವೆಂಬ ಸಮುದ್ರಕ್ಕೆ ಪರಿಪೂರ್ಣ ಚಂದ್ರನ ಕಾಂತಿಯು. ೨೪. ಗುರುಪಾದ ಭಕ್ತಿಯಿಲ್ಲದ ಲಿಂಗಪೂಜೆಯು ನಿರರ್ಥಕವಾದದ್ದು ; ಹೀಗೆಂದು ಆಗಮ ವಚನವುಂಟು. ಲಿಂಗಭಕ್ತಿಗೆ, ಜಂಗಮ ಭಕ್ತಿಗೆ ಗುರುಭಕ್ತಿಯೇ ಈ ಲೋಕದಲ್ಲಿ ಮೂಲಕಾರಣ (ವೆನಿಸಿದೆ.) ೨೫. ಗುರುವಿಗೆ ತನುವನ್ನೂ, ಲಿಂಗಕ್ಕೆ ಪ್ರಾಣವನ್ನೂ, ಆ ಜಂಗಮಕ್ಕೆ ನಿರ್ವಂಚಕವಾದ ಭಾವ (ಕಾಪಟ್ಯ ರಹಿತವಾದ ಭಾವ) ವು ಕೂಡಿಕೊಂಡಿರು ವಂತೆ ಐಶ್ವರ್ಯವನ್ನು ಸಮರ್ಪಿಸಿ ಸೇವಿಸುವ (ಭಕ್ತಿಜೀವನವನ್ನಾಚರಿಸುವ) ಶ್ರೇಷ್ಠ ಭಕ್ತನು ಅ ಗುರುಲಿಂಗ ಜಂಗಮದ, ಪರಮಾನುಗ್ರಹ ಪ್ರಾಪ್ತಿಯನ್ನು ಹೊಂದುವನು. ೨೬. ಶಿವನ ಮೂರ್ತಿ ತ್ರಯವೆನಿಸುವ (ಶಿವನ ಮೂರುಮೂರ್ತಿ ಗಳಾಗಿರುವ) ಗುರು-ಲಿಂಗ-ಜಂಗಮತ್ರಯಕ್ಕೆ (ಕ್ರಮವಾಗಿ) ತನು-ಮನ-ಪ್ರಾಣವನ್ನು ಅರ್ಪಿಸದೆ ವಂಚನೆ ಮಾಡಿದರೆ, ಶಿವಲಿಂಗವನ್ನು ಧರಿಸುವಿಕೆಯೆಂಬ ನಿಯಮ ದಿಂದುಂಟಾಗುವ ಐಶ್ವರ್ಯವು ಜಾರಿ ಹೋಗುವುದು. ೨೭. ಕಪಟಿಗೆ, ಕುಟಿಲನಿಗೆ, ಆಶೆಯಿಂದ ಚಂಚಲಗೊಂಡ ಮನಸ್ಸಿನವನಿಗೆ, ನೀಚನಿಗೆ, ಮೋಹದ ಸ್ವಭಾವವುಳ್ಳವನಿಗೆ, ನಿಷ್ಕಾರಣವಾಗಿ ಕೋಪಗೊಳ್ಳುವವನಿಗೆ, ಡಂಭಾಚಾರವುಳ್ಳವನಿಗೆ, ಅತಿಯಾದ ಜೀನ

[1]ವ॥ ಮಾತ್ರಂ[1]—

ದುರುಳಂಗಾಚಾರಶೂನ್ಯಂಗಧಿಕಮದನಿಯುಕ್ತಂಗೆ ಧೂರ್ತಂಗೆ ದುರ್ಬೋ
ಧರುಚಿಸ್ವಾಂತಂಗೆ ಹಿಂಸಾಕರಣಮತಿಗೆ ವಿಶ್ವಾಸಹೀನಂಗೆ ದುಷ್ಕ
ರ್ಮರತಂಗಜ್ಞಂಗೆ ಸಂದೇಹಿಗೆ ಪರಮತಶೀಲಂಗೆ ಪಾಷಂಡಿಗೆಂದುಂ
ಚರಲಿಂಗಾಚಾರ್ಯಭಕ್ತಿತ್ರಯಮಳವಡದೆಂದೆಂಬರೀಶಾಗಮಜ್ಞರ್ ೨೮

ವಿಮಳಸ್ವಾಂತಂಗೆ ವಿದ್ಯಾವಿನಯನಯಸದಾಚಾರಯುಕ್ತಂಗೆ ಭಕ್ತ್ಯೋ
ತ್ತಮಸಂಸರ್ಗಾಭಿಯುಕ್ತಂಗಭವಪದದಿದೃಕ್ಷಾಪರಂಗನ್ಯ ಮಾರ್ಗ
ಭ್ರಮದೂರಂಗಪ್ರಮತ್ತಂಗಚಳಮತಿಗಹಂಕಾರಮುಕ್ತಂಗೆ ಶೈವಾ
ಗಮಸಿದ್ಧಂ ಭಕ್ತಿಲಿಂಗತ್ರಯದೊಳೊಗೆವುದೀಶಪ್ರಸಾದಾಭಿಜಾತಂ ೨೯

ಕನಸಿನ ಸಿರಿಯವೊಲಳಿವೀ
ತನುಧನಮಂ ಮನಮನಿತ್ತು ಗುರುಚರಲಿಂಗ
ಕ್ಕನುನಯದಿನೆಂದುಮಳಿಯದ
ಘನಶಿವಪದಸಿದ್ಧಿವಡೆಯಲೊಲ್ವನೆ ಜಾಣಂ ೩೦

ನಿಗೆ–ಈ ಗುರುಲಿಂಗ ಜಂಗಮ ಭಕ್ತಿಯು ಪ್ರಾಪ್ತವಾದೀತೇ ? ವ॥ ಮತ್ತು ೨೮. ಶಿವಾಗಮ ಶಾಸ್ತ್ರವನ್ನು ಬಲ್ಲವರು–ದುಷ್ಟನಾದವನಿಗೆ, ಆಚಾರದಿಂದ ದೂರನಾದವನಿಗೆ, ಹೆಚ್ಚಾದ ಗರ್ವದಿಂದ ಕೂಡಿದವನಿಗೆ, ನೀಚನಿಗೆ, ದುಷ್ಟಜ್ಞಾನದಲ್ಲಿ ಪ್ರೀತಿಯುಳ್ಳ ಮನಸ್ಸಿನವನಿಗೆ, ಹಿಂಸೆಗೊಳಿಸುವ ಬುದ್ಧಿಯುಳ್ಳವನಿಗೆ, ವಿಶ್ವಾಸವಿಲ್ಲದವನಿಗೆ, ಕೆಟ್ಟ ಕೆಲಸದಲ್ಲಿ ಆಸಕ್ತಿಯುಳ್ಳವನಿಗೆ, ಮೂಢನಿಗೆ, ಸಂಶಯಾತ್ಮನಿಗೆ, ಶಿವಮತವನ್ನು ಹೊರತುಪಡಿಸಿದ ಮತದ ನಡತೆಯುಳ್ಳವನಿಗೆ, ವೇದಬಾಹಿರನಿಗೆ ಯಾವಾಗಲೂ ಜಂಗಮ, ಲಿಂಗ, ಮತ್ತು ಗುರು–ಇವರುಗಳಲ್ಲಿನ ಭಕ್ತಿತ್ರಯವು ಅಳವಡುವುದಿಲ್ಲ ಎನ್ನುತ್ತಾರೆ. ೨೯. ನಿರ್ಮಲವಾದ ಮನಸ್ಸುಳ್ಳವನಿಗೆ, ವಿದ್ಯೆ, ವಿನಯ, ನಯ, ಸದಾಚಾರ—ಇವುಗಳಿಂದ ಕೂಡಿದವನಿಗೆ, ಈಶ್ವರ ಪಾದವನ್ನು ಕಾಣಬೇಕೆಂಬುದರಲ್ಲಿ ಆಸಕ್ತಿಯುಳ್ಳವನಿಗೆ, ಅನ್ಯಧರ್ಮ ಮಾರ್ಗದ ಭ್ರಮೆಯನ್ನು ದೂರ ಮಾಡಿದವನಿಗೆ, ಧನವನಿತಾದಿ ಮದಗಳಿಂದ ದೂರನಾದವನಿಗೆ, ಸ್ಥಿರ ಚಿತ್ತವುಳ್ಳವನಿಗೆ, ಅಹಂಕಾರದಿಂದ ಮುಕ್ತನಾದವನಿಗೆ, ಶೈವಾಗಮಗಳ ಸಿದ್ಧಿಯನ್ನು ಮಾಡಿಕೊಂಡವನಿಗೆ, ಶಿವಾನುಗ್ರಹ ದಿಂದ ಉತ್ಪನ್ನವಾದ ಗುರುಲಿಂಗ ಜಂಗಮರಲ್ಲಿ ಭಕ್ತಿಯು ಹುಟ್ಟುವುದು. ೩೦. ಕನಸಿನ ಐಶ್ವರ್ಯದಂತೆ ನಾಶವಾಗುವ ಈತನು ಧನ–ಮನಗಳನ್ನು ಗುರು ಮತ್ತು ಜಂಗಮ ಲಿಂಗಕ್ಕೆ ಪ್ರೀತಿಯಿಂದ ಕೊಟ್ಟು ಎಂದೂ ನಾಶವಾಗದ ಶ್ರೇಷ್ಠವಾದ ಶಿವನ ಸ್ಥಾನದ

1 × (ಮು)

ಶತಕೋಟಿವರ್ಷಕೃತಘೋ
ರತರ ತಪೋವೃಂದವೊಂದೆ ದಿನವೆ[2]ಸಪ ಸಮು
ನ್ನತ ಗುರುಚರಹರಭಕ್ತಿಯ
ಚತುರ್ಥಭಾಗಕ್ಕಮಾದೊಡಂ ಪಾಸಟಿಯೇ ೩೧

ವ॥ ಎಂಬ ಶಿವಾಗಮವಾಕ್ಯಮನವಧರಿಸಿ—

ಆದಱಿಂ ಗುರುಭಕ್ತಂ ಗುರು
ಪದಭಕ್ತಿಯನಾಳ್ದು ಮುಖ್ಯಮೆನೆ ಲಿಂಗಕಳಾ
ಸ್ಪದಜಂಗಮಪದಭಕ್ತಿಯ
ನೊದವಿಸುತುಂ ತನುಮನೋಧನಾರ್ಪಣದಿಂದಂ ೩೨

[1]ವ॥ ಮತ್ತಂ[1]—

ಗುರುಸೇವಾರತಿಯೇ ತಪಂ ಗುರುಪದಾಬ್ಜಧ್ಯಾನಮೇ ಧ್ಯಾನಮಾ
ಗುರುನಾಮಸ್ಮೃತಿಯೇ ಜಪಂ ಗುರುಪದಾಧೀನತ್ವಮೇ ಸದ್ವ್ರತಂ
ಗುರುತತ್ವಪ್ರಮೆಯೇ ನಿಜಪ್ರಮೆ ಗುರೂಕ್ತಾಚಾರಮೇ ಶೀಲಮಾ
ಗುರುನಿಷ್ಠಾವಿಧಿಯೇ ವಿಧಾನಮೆನೆ ಕಣ್ಗೊಪ್ಪಿರ್ದನತ್ಯೂರ್ಜಿತಂ ೩೩

ಸಿದ್ಧಿಯನ್ನು ಪಡೆಯುವುದನ್ನು ಪ್ರೀತಿಸುವವನೇ ಜಾಣನು. ೩೧. ನೂರು ಕೋಟಿ ವರ್ಷ ಪರ್ಯಂತ ಮಾಡಿದ ಅತಿ ಭಯಂಕರವಾದ ತಪಸ್ಸಿನ ಸಮುದಾಯವು ಒಂದು ದಿವಸ ಮಾಡುವ ಬಹು ಉನ್ನತವಾದ ಗುರು-ಲಿಂಗ-ಜಂಗಮ ಭಕ್ತಿಯ ಕಾಲುಭಾಗಕ್ಕಾದರೂ ಸರಿಯಾದೀತೇ ? ವ॥ ಹೀಗೆಂಬ ಶಿವಾಗಮ ವಾಕ್ಯವನ್ನು ಕೇಳಿ—೩೨. ಆದರಿಂದ ಆ ಗುರುಭಕ್ತನು ಗುರುವಿನ ಪಾದಭಕ್ತಿಯೇ ಮುಖ್ಯವೆಂದು ಅದನ್ನು ಹೊಂದಿ, ಲಿಂಗಕಲೆಗೆ ಆಸ್ಪದವಾದ ಜಂಗಮಪದ ಭಕ್ತಿಯನ್ನು ತನು-ಮನ-ಧನಗಳ ಸಮರ್ಪಣ ಭಾವದಿಂದ ಆಚರಿಸುತ್ತ (ಇದ್ದನು). ೩೩. (ಭಕ್ತಿಜೀವನದಲ್ಲಿ) ಅತಿ ಊರ್ಜಿತ ಸ್ಥಿತಿಯಲ್ಲಿದ್ದ ಆ ಗುರುಭಕ್ತಾರ್ಯನು–ಗುರುಸೇವೆಯಲ್ಲಿನ ಬಯಕೆಯೇ ತಪಸ್ಸು, ಗುರವಿನ ಪಾದಕಮಲ ಧ್ಯಾನವೇ ಧ್ಯಾನ ; ಗುರುವಿನ ನಾಮ ಸ್ಮರಣೆಯೇ ಜಪ, ಗುರುಪಾದಕ್ಕೆ ವಶನಾಗಿರುವುದೇ ಒಳ್ಳೆಯ ವೀರಶೈವ ವ್ರತ, ಗುರುವಿನ ತತ್ತ್ವದಲ್ಲಿ ಯಥಾರ್ಥ ಜ್ಞಾನವೇ ತನ್ನ ಸ್ಥಿರಬುದ್ಧಿ, ಗುರುವಿನಿಂದ ಉಕ್ತವಾದ ಆಚಾರವೇ ಶೀಲ, ಆ ಗುರುವಿನಲ್ಲಿ ನಿಷ್ಠೆಯಿಂದ ವರ್ತಿಸುವ ವ್ಯವಹಾರವೇ ಕ್ರಿಯೆ-ಎನ್ನುವಂತೆ

---

[2]ವೊ(ಅ) 1 × (ಮು)

ವ॥ ಇಂತು ಜಗಜ್ಜನನುತಚರಿತ್ರಂ ಗುರುಭಕ್ತಿಪ್ರಭಾವದಿನೊಪ್ಪುತ್ತುಮಿರ್ದೊಂದು ದಿನಂ ಗುರುಸಮರ್ಚನೆಗರಲ್ದರಲೆಂದು ಕುಸುಮಕರಂಡಕಮಂ ಕೊಂಡು ಬೆಳಗುಜಾವದೊಳೆಳ್ದು ಜವದಿಂ ನಡೆತರ್ಪಾಗಳಾ ಗುರುಚರಣರಕ್ಷೆಗಳಂ ನಿಜಾಂಘ್ರಿಗಳ್ಸೋಂಕೆ ಕಂಡಳ್ಕಿ ಬಳ್ಕಿ ಮನಂಗುಂದಿ ನೊಂದು—

ಅಕಟಕಟ ಗುರುವರನ ಪಾ
ದುಕೆಯುಂಟಿದುದೆನ್ನ ಬೆಂದ ಕಾಲ್ಬನತರ ಪಾ
ತಕಮಾದುದೆನಗೆ ಪಿಗೆ ದೇ
ಶಿಕಚರಣದ್ರೋಹಿಯೆನ್ನವೋಲ್ಪೆಱನಾವಂ ೩೪

ವ॥ 'ಪಾದುಕಾಸನಶಯ್ಯಾದಿ ಗುರುಣಾ ಯದಧಿಷ್ಠಿತಂ ನ ಸ್ಪೃಶೇದಂಘ್ರಿಣಾ'ಯೆಂಬ ವಚನ ಮುಂಟಪ್ಪುದಱಿಂದಿಂತೆನಗಾದ ದುಷ್ಕೃತಕ್ಕೆ ನಿಷ್ಕೃತಿಯಾವುದೆಂದು ತನ್ನೊಳಾಳೋಚಿಸಿ—

ಕಡಿಕಡಿದೀ ಪದದ್ವಯಮನುದ್ಗತರಕ್ತರಸಾಜ್ಯದಿಂದೆ ಸಂ
ಗಡಿಸಿದ ಮಾಂಸಮೆಂಬ ಪೊಸಪೀಡದೆ ಖಂಡಿಸಿದಸ್ಥಿಯೆಂಬ ಪೆಂ
ಪಡರ್ದ ಸಮಿತ್ಸಮೂಹದೆ ಗುರೂತ್ತಮನಾಮಮೆನಿಪ್ಪ ಮಂತ್ರದಿಂ
ದೊಡನೆ ಹರಪ್ರಕೋಪಶಿಖಿಗಾಹುತಿಗೊಟ್ಟಪೆನೆಂದು ಕೂರ್ಪಿನಿಂ ೩೫

ಕರವಾಳಂ ಜಡಿವುತೆ ತ
ನ್ನೆರಡುಂ ಕಾಲ್ಗಳನಡುರ್ತು ತುಂಡಿಸಿ ರುಧಿರೋ
ತ್ಕರಮೊಚ್ಚು ಪಾಯ್ವುತಿರೆ ಗುರು
ವರಶರಣೆಂದಾರ್ದು ಕೆಲದೊಳಿರಿಸಿದನಾಗಳ್ ೩೬

ವಿದಿತ ಗುರುಭಕ್ತಿದೇವತೆ
ಗಿದು ಬಲಿಗೆದರ್ದರುಣನಳಿನಮೆಂಬುತಿರೆ ತ

ಕಂಗೊಳಿಸುತ್ತಿದ್ದನು. ವ॥ ಈ ರೀತಿ ಲೋಕದಲ್ಲಿರುವ ಜನಗಳಿಂದ ಹೊಗಳಿಸಿಕೊಳ್ಳುವ ಚರಿತ್ರೆಯುಳ್ಳ (ಆ ಗುರುಭಕ್ತನು) ಗುರುವಿನಲ್ಲಿಟ್ಟಿರುವ ಭಕ್ತಿಯ ಪ್ರಭಾವದಿಂದ ಒಪ್ಪುತ್ತಿರಲಾಗಿ ಒಂದು ದಿವಸ, ಗುರುಪಾದ ಪೂಜೆಗೆ ಹೂವುಗಳನ್ನು ತರಬೇಕೆಂದು, ಹೂ ಬುಟ್ಟಿಯನ್ನು ತೆಗೆದುಕೊಂಡು, ನಸುಕಿನಲ್ಲಿ ಎದ್ದು ಶೀಘ್ರವಾಗಿ ನಡೆದು ಬರುತ್ತಿರುವಾಗ ಆ ಗುರುವಿನ ಪಾದರಕ್ಷೆಗಳು (ಮೆಟ್ಟುಗಳು ಅಥವಾ ಆವುಗೆಗಳು) ತನ್ನ ಕಾಲುಗಳಿಗೆ ಸೋಂಕಲಾಗಿ ಕಂಡು ಭಯಪಟ್ಟು, ಬಳುಕಿ, ಉತ್ಸಾಹಹೀನನಾಗಿ ನೊಂದು ಕೊಂಡು—೩೪. ಅಕಟಕಟ ! ನನ್ನ ಈ ಸುಟ್ಟಕಾಲು (ಹಾಳಾದ ಕಾಲು) ಗುರುಶ್ರೇಷ್ಠನ ಪಾದುಕೆಗಳನ್ನು ಸೋಂಕಿತೇ ! ನನಗೆ ಬಹು ಹೆಚ್ಚಾದ ಪಾಪವುಂಟಾಯಿತು. ನನ್ನ ಹಾಗೆ ಗುರುವರ್ಯನ ಪಾದದ್ರೋಹಿಯು ಮತ್ತೊಬ್ಬನಾವನಿದ್ದಾನೆ ? ವ॥ 'ಆಚಾರ್ಯ ನಿಂದ ಆರೋಹಿಸಲ್ಪಟ್ಟ ಯಾವ ಪಾದುಕೆ, ಪೀಠ, ಹಾಸಿಗೆ ಇವೇ ಮೊದಲಾದ ವಸ್ತು ಗಳನ್ನು ಕಾಲಿನಿಂದ ಸೋಂಕಬಾರದು.' ಎಂಬ (ಶಾಸ್ತ್ರದ) ಮಾತು ಇರುವುದಾದ ಕಾರಣ (ಈ ದಿನ) ಈ ರೀತಿಯಲ್ಲಿ ನನಗಾದ ಪಾಪಕ್ಕೆ ಪ್ರಾಯಶ್ಚಿತ್ತವು ಯಾವುದು ? ಎಂದು ತನ್ನಲ್ಲಿಯೇ ಆಲೋಚಿಸಿ—೩೫-೩೭. ಈ ನನ್ನ ಎರಡೂ ಕಾಲುಗಳನ್ನು ಕಡಿಕಡಿದು

2 ಡ(ಮು, ಜ)

ತ್ಪದಯುಗಳಮಮಳಗುರುಚರ
ಣದ ಜಾನಃಬಿಡಿದು ಭಕ್ತನೊಪ್ಪುತ್ತಿರ್ದಂ ೩೭

ವ|| ಆ ಸಮಯದೊಳಮರಗೊಂಡ ಮಲ್ಲಿನಾಥಪಂಡಿತರೆಂಬ ತದ್ಗುರುಗಳ್ ಶಿಷ್ಯನಿಂತೆ[1]ಸಗಿದ ದ್ಭುತವಾರ್ತೆಯುಮನಾಕರ್ಣಿಸಿ ಕರುಣಾತಿರೇಕದಿಂ ಶರಣಗಣಸಮೇತಮಾ ತಾಣಕ್ಕೆ ಗಳಿಲನೆ ಬಿಜಯಂಗೆಯ್ವಿನಂ ಗುರುಭಕ್ತಯ್ಯಂ ಕಟ್ಟಿದಿರೊಳ್ಕಂಡು ನಯವಿನಯ ಸಂಭ್ರಮಂಚೆರಸು ಭಯಭಕ್ತಿಪಾರವಶ್ಯದಿನಿರ್ದಿನಿಸಾನುಂ ಬೇಗದಿನೆಳ್ಚತ್ತು ಸಾಷ್ಟಾಂಗಮೆಱಗಲೇಳಲುಜ್ಜುಗಿಸುತಳವಿಲ್ಲದೆ ತಲ್ಲಣಿಪಾಗಳ್—

ಅರಿದೆಂದು ಶರಣಗಣಮು
ಚ್ಚರಿವಡೆ ತರುಣಾರುಣಾಂಶುವಿಕಸಿತವಿಲಸ
ತ್ತರುಣಾರುಣನಳಿನಯುಗ
ಸ್ಫುರಿತಂ ಪದಯುಗಳ ಮೊಗೆದದೇಂ ರಂಜಿಸಿತೋ ೩೮

ಹೊರಹೊರಟ ರಕ್ತವೆಂಬ ತುಪ್ಪದಿಂದ ಕೂಡಿದ ಮಾಂಸವೆಂಬ ಹೊಸ ಪಿಂಡದಿಂದ ಚೂರಾದ ಮೂಳೆಯೆಂಬ ಶ್ರೇಷ್ಠ ಸಮಿತ್ತುಗಳ ಸಮೂಹದಿಂದ, ಗುರುಶ್ರೇಷ್ಠನ ನಾಮವೆಂಬ ಮಂತ್ರದಿಂದ ಈ ಕೂಡಲೇ ಈಶ್ವರನ ಕೋಪವೆಂಬ ಬೆಂಕಿಗೆ ಆಹುತಿಯನ್ನು ಕೊಡುತ್ತೇನೆಂದು ಉತ್ಕಟಭಾವದಿಂದ ಖಡ್ಗವನ್ನು ಝುಳಪಿಸುತ್ತ ತನ್ನ ಎರಡೂ ಕಾಲುಗಳನ್ನು ಸೇರಿಸಿ ಕತ್ತರಿಸಿ ರಕ್ತಧಾರೆಯು ಹೊರಹೊರಟು ಹರಿಯುತ್ತಿರಲು ಗುರುವರನೇ, ಶರಣು ಎಂದು ಗಟ್ಟಿಯಾಗಿ ಚೀರಿ, ಪಕ್ಕದಲ್ಲಿ ಇರಿಸಿದನು. ಆಗ ಆ ಗುರುಭಕ್ತಾರ್ಯನ ಎರಡೂ ಕಾಲುಗಳು ಇದು ಪ್ರಸಿದ್ಧವಾದ ಗುರುಭಕ್ತಿಯೆಂಬ ದೇವತೆಗೆ ಪೂಜಾರ್ಥವಾಗಿ ಎರಚಿದ ಕೆಂಪುಕಮಲವೋ ಎಂಬಂತಿರಲು ಆ ಭಕ್ತನು ಶ್ರೇಷ್ಠನಾದ ಗುರುವಿನ ಚರಣದ ಧ್ಯಾನವನ್ನು ಹೊಂದಿ ಶೋಭಿಸುತ್ತಿದ್ದನು. ವ|| ಆ ಸಮಯದಲ್ಲಿ ಅಮರಗೊಂಡದ ಮಲ್ಲಿನಾಥ ಪಂಡಿತರೆಂಬ ಆತನ ಗುರುಗಳು ಶಿಷ್ಯನು ಹೀಗೆ ಮಾಡಿದ ಅದ್ಭುತ ವಾರ್ತೆಯನ್ನು ಕೇಳಿ, ಅಧಿಕವಾದ ದಯೆಯಿಂದ ಶರಣ ಸಮೂಹ ಸಹಿತವಾಗಿ ಆ ಗುರು ಭಕ್ತಾರ್ಯನಿದ್ದ ಸ್ಥಳಕ್ಕೆ ವೇಗವಾಗಿ ದಯಮಾಡಿಸಲಾಗಿ, ಗುರುಭಕ್ತಯ್ಯನು ನೇರ ಎದುರಿನಲ್ಲಿ ಗುರುವನ್ನು ಕಂಡು, ನಯ-ವಿನಯ-ಸಂಭ್ರಮಗಳಿಂದ ಕೂಡಿ, ಭಯದಿಂದಲೂ ಭಕ್ತಿಯಿಂದಲೂ ಉಂಟಾದ ಪರವಶ ಭಾವದಿಂದ ಇದ್ದು, ಸ್ವಲ್ಪ ಹೊತ್ತಿನಲ್ಲಿಯೇ ಎಚ್ಚತ್ತು ಸಾಷ್ಟಾಂಗ ಪೂರ್ವಕವಾಗಿ ನಮಸ್ಕಾರ ಮಾಡುವುದಕ್ಕಾಗಿ ಏಳಲು ಪ್ರಯತ್ನಿಸುತ್ತ ಶಕ್ತಿಯಿಲ್ಲದೆ ತಲ್ಲಣಿಸುತ್ತಿರುವಾಗ—೩೮. ಶಿವಶರಣ ಸಮೂಹವು (ಇದು) ಅಸಾಧ್ಯವಾದ ಕಾರ್ಯವೆಂದು ಆಶ್ಚರ್ಯಪಡುತ್ತಿರಲು ಬಾಲ-ಸೂರ್ಯನ ಕಿರಣದಿಂದ ಅರಳಿದ ಪ್ರಕಾಶಮಾನವಾದ ತರುಣಾರುಣ ಕಮಲ ಪುಷ್ಪ ಯುಗಳದ ಹಾಗೆ ಪ್ರಕಾಶಿಸುವ ಆ ಪಾದದ್ವಯವು ಹುಟ್ಟಿ, ಅದೇನು ಶೋಭಿಸಿತೋ !

1 ನೆ (ಜ, ಮು, ಗ)

ಜಡಭವಪರಿಭವಕರನಿ
ರ್ಜಡಭವನಿಜಮೂರ್ತಿಯೆನಿಪ ಗುರುವಿನ ಕೃಪೆಯಿಂ
ದೊಡನೊಗೆದಡಿದಾವರೆಯದು
ಜಡಭವಮಂ ನಗುವವೋಲ್ನಖದ್ಯುತಿ ಮೆಱೆಗುಂ ೩೯

ತಳಿರುಡಿಯೆ ಮೂಡುಗುಂ ಪೊಸ
ತಳಿರಿಳೆಯೊಳ್ಪೂಗಳುಡಿಯೆ ಮೂಡುಗುಮೆ ನಿರಾ
ಕುಳಮಲರಿವನಡಿದಾವರೆ
ಮೊಳೆತುದು ಮುನ್ನುಡಿಯೆ ತನ್ನನಿದು ಚಿತ್ರತರಂ ೪೦

ಅಗಜಾಧಿಪಂಗೆ ದಾನಂ
ಸೊಗಯಿಸುಗುಮೆ ಕುಣಿವ ಭೃಂಗಿಗೊಂದಡಿಯಿತ್ತಂ
ಮಿಗೆ ಗುರುಕುಂಜರನತಿದಾ
ನಗುಣಂ ಭಕ್ತಂಗೆ ಪಾದಯುಗಳಮನಿತ್ತಂ ೪೧

ವ॥ ಎಂದಲ್ಲಿ ಬಲ್ಲರೆಲ್ಲಂ ಸಲ್ಲೀಲೆಯಿಂ ನುತಿಸುತ್ತುಮಿರ್ಪಾಗಳ್—

೩೯. ಜಡವಾದ ಸಂಸಾರವನ್ನು ಪರಾಜಯಗೊಳಿಸುವ ಚೈತನ್ಯಮಯನಾದ ಶಿವನ ನಿಜಮೂರ್ತಿಯೆನಿಸಿದ ಗುರುವಿನ ಕೃಪೆಯಿಂದ ಹುಟ್ಟಿದ (ಗುರುಭಕ್ತಯ್ಯನ) ಅಡಿದಾವರೆಯು ಜಡಭವಮಂ= ಜಲಜವಾದ ಕಮಲವನ್ನು ಮತ್ತು ಜಡವಾದ ಸಂಸಾರವನ್ನು ಕಂಡು ನಗುವುದೋ ಎಂಬಂತೆ ಅದರ ಉಗುರುಕಾಂತಿಯು ಪ್ರಕಾಶಿಸಿತು (ಅಡಿದಾವರೆಯು ಸುಂದರವಾಗಿದ್ದುದರಿಂದ ಕಮಲವನ್ನು ಹಾಸ್ಯ ಮಾಡುವಂತೆ ಇದ್ದಿತು. ಉಗುರಿನ ಕಾಂತಿ ನಗುವಿನಂತೆ ಕಾಣಿಸಿತು. ಗುರು 'ಜಡಭವಪರಿಭವಕರ'ನಾದ್ದರಿಂದ ಅವನ ಕೃಪೆಯಿಂದ ಹುಟ್ಟಿದ ಪಾದ 'ಜಡಭವ'ವನ್ನು ಕಂಡು ನಗುವುದು ಸಹಜ ಎಂದು ಭಾವ) (ರಂ) ೪೦. ಲೋಕದಲ್ಲಿ ಚಿಗುರನ್ನು ಮುರಿಯಲು ಹೊಸ ಚಿಗುರು ಮೂಡುವುದು ; (ಅದರಂತೆ) ಹೂವುಗಳನ್ನು ಹರಿದರೆ (ಬೇರೆ) ಹೂವು ನಿಜವಾಗಿ ಹುಟ್ಟುತ್ತದೆಯೆ ? ಆದರೆ ಇವನ ಪಾದಕಮಲವು ಮತ್ತೆ ಮೊಳೆಯಿತು. ಇದು ಆಶ್ಚರ್ಯಕರವಾದುದು. (ಇಲ್ಲಿ ಹೂವನ್ನು ಹರಿದರೆ ಬೇರೆ ಹೂವು ಹುಟ್ಟಲು ಸಾಧ್ಯವಿಲ್ಲವಾದರೂ, ಈ ಗುರುಭಕ್ತಾರ್ಯನ ಪಾದವೆಂಬ ಹೂವನ್ನು ಹರಿಯಲು ಪುನಃ ಪಾದವೆಂಬ ಹೂವು ಹುಟ್ಟಿದುದೇ ಚಿತ್ರ) ೪೧. ಶಿವನು ಕುಣಿಯುತ್ತಿದ್ದ ಭೃಂಗೀಶ್ವರನಿಗೆ ಒಂದು ಕಾಲನ್ನು ಕೊಟ್ಟನು. ಶಿವನಿಗೆ ದಾನವು ಸೊಗಸುವುದೇ ? ಗುರು ಕುಂಜರನೆನಿಸಿದ ಅಮರಗೊಂಡದ ಮಲ್ಲಿನಾಥ ಗುರುವು ಭಕ್ತನಾದ ಗುರುಭಕ್ತಾರ್ಯನಿಗೆ ಶ್ರೇಷ್ಠವಾದ ಎರಡು ಕಾಲುಗಳನ್ನು ಕೊಟ್ಟನು. (ಇವನು) ಅತ್ಯಂತ ಹೆಚ್ಚಿನ ದಾನಗುಣವುಳ್ಳವನು. ವ॥ ಹೀಗೆಂದು ಎಲ್ಲ ಬುದ್ಧಿವಂತರೂ ವಿಶೇಷೋಲ್ಲಾಸದಿಂದ ಸ್ತೋತ್ರ

ಗುರುಚರಣರಕ್ಷೆಯಂ ನಿಜ
ಶಿರದೊಳ್ಮಿಗೆ ಪೊತ್ತು ಪೊಣ್ಮಿದಾನಂದದೆ ತ
ಚ್ಚರಣನಳಿನಕ್ಕೆ ಮಣಿದಾ
ದರದಿಂ ಪೊಗಳುತ್ತುಮಿರ್ದನಾ ಗುರುಭಕ್ತಂ ೪೨

ವ॥ ಆ ಸಮಯದೊಳ್ಶರಣಗಣಂ ಕಂಡು ಕಣ್ದಂಬಿ ನೋಡಿ ಮುದಂಬಡೆದು—

ಎಲೆ ಗುರುಭಕ್ತ ನಿನ್ನ ಗುರುಭಕ್ತಿ ಸಮುಜ್ವಲವೃತ್ತಿಜಾತನಿ
ಶ್ಚಲಿತಮಹತ್ವಕಿಂತಿದು ವಿಚಿತ್ರಮೆ ದೂರಮಿದಲ್ತು ಮೊನ್ನೆ ಭೂ
ಲಲಿತಜನೌಘಮೆಲ್ಲಱಿಯೆ ನೀಂ ನೆಗಳ್ದದ್ಭುತಕಾರ್ಯಮಂ ಧರಾ
ತಲದೊಳೆ ಕಂಡು ಬಲ್ಲೆವಣಮೆಂತೆನೆ ನಿನ್ನಯ ದೇಶಿಕೋತ್ತಮಂ ೪೩

ಗುರುಪರತಂತ್ರತಾಸ್ಥಿತಿಗೆ ನಿನ್ನಯ ಲಬ್ಧಗುರುಪ್ರಸಾದಭಾ
ಸುರತೆಗಸೂಯೆಗೊಳ್ವ ನಿಜಶಿಷ್ಯಕದಂಬಕೆ ನಿನ್ನನನ್ಯ ಸಾ
ಧ್ಯರುಚಿರಭಕ್ತಿಭಾವದಳವಂ ಮಿಗೆ ಕಾಣಿಸಲೊಲ್ದು ಮೂರ್ತಿಗೊಂ
ಡಿರುತೆ ಸುತಲ್ಪದೊಳ್ ಕೆಳಗೆ ತನ್ನ ಕೆಲಂಬಿಡಿದಿರ್ದ ಶಿಷ್ಯರಂ ೪೪

ಕರೆದಾಗಳ್ಮಂಚದೊಳ್ಕುಳ್ಳಿರಿಮೆನೆ ನಗುತುಂ ಬೆಕ್ಕಸಂಬಟ್ಟು ತಾಮೊ
ರ್ವರನೊರ್ವರ್ನೋಡಿ ಮದ್ದೇಶಿಕನಿರೆ ಕೆಳಗಾವೆಂತು ಕುಳ್ಳಿರ್ಪೆಮೀ ಭಾ
ಸುರಮಂಚಸ್ಥಾನದೊಳ್ದುರ್ಘಟಮತಿಶಯದೋಷಾವಹಂ ತಾನಿದೆಂದೆ
ಲ್ಲರುಮಾ ಮಾತಂ ಸಮುಲ್ಲಂಘಿಸೆ ನಸುನಗುತುಂ ದೇಶಿಕಂ ನೋಡುತಾಗಳ್ ೪೫

ವಿನಯಂಬೆತ್ತಾತ್ಮಪಾದಾಂಬುಜಮನೊಸಗೆಯಿಂ ಪೂಜಿಸುತ್ತಿರ್ದ ನಿನ್ನಂ
ಮನಮೊಲ್ದಾರೋಹಿಸೈ ಮಂಚಮನೆನೆ ಮಣಿದಾರ್ಯಾಜ್ಞೆಯಂ ಪೊತ್ತು ನೀಂ ಭೋಂ
ಕನೆ ಪರ್ಯಂಕಾಗ್ರಮಂ ಸದ್ಗುರುಶರಣೆನುತುಂ ಪತ್ತಿದೈ ಮತ್ತಮಾ ದು
ರ್ಮನರೆಲ್ಲರ್ಕಂಡು ಬದ್ಧಭ್ರುಕುಟಿಘಟಿತರಕ್ತೇಕ್ಷಣರ್ಕಾಯ್ಪಿನಿಂದಂ ೪೬

ಕಡುಗೂರ್ತಂ ಸೊರ್ಕಿನಿಂದಳ್ಕದೆ ನಿಜಗುರು ಸಾನ್ನಿಧ್ಯದೊಳ್ತನ್ನಿರೂಪಂ
ಬಡೆದಂ ಮೋಣಾನೆನುತ್ತುಂ ಕೆಳಗೆ ಪಿರಿಯರಾವಿರ್ಪುದಂ ನೋಡದುರ್ಬು

ಮಾಡುತ್ತಿರುವಾಗ ೪೨. ಆ ಗುರುಭಕ್ತನು ಗುರುವಿನ ಪಾದರಕ್ಷೆಯನ್ನು ತನ್ನ ತಲೆಯ ಮೇಲೆ ಹೊತ್ತು, ವಿಶೇಷಾನಂದದಿಂದ ಆ ಗುರುವಿನ ಚರಣ ಕಮಲಗಳಿಗೆ ನಮಸ್ಕರಿಸಿ, ಆದರಭಾವದಿಂದ ಹೊಗಳುತ್ತಾಇದ್ದನು. ವ॥ ಆ ಸಮಯದಲ್ಲಿ ಶರಣ ಸಮೂಹವು ಕಂಡು ಕಣ್ತುಂಬಾ ನೋಡಿ, ಸಂತೋಷವನ್ನು ಹೊಂದಿ—೪೩–೪೭. 'ಎಲೈ ಗುರು ಭಕ್ತನೇ, ನಿನ್ನ ಗುರುಭಕ್ತಿಯಿಂದ ಕೂಡಿದ ಪ್ರಕಾಶಮಾನವಾದ ಕ್ರಿಯೆಯಿಂದ ಹುಟ್ಟಿದ ನಿಶ್ಚಲ ಮಾಹಾತ್ಮ್ಯೆಗೆ, ಹೀಗಾಗುವುದೇನು ವಿಚಿತ್ರವೇ ? ಇದು ಬಹಳ ಹಿಂದಿನ ವಿಷಯವಲ್ಲ; ಮೊನ್ನೆ ತಾನೆ ಲೋಕದ ಶ್ರೇಷ್ಠ ಜನಸಮೂಹವೆಲ್ಲ ಅರಿಯುವ ಹಾಗೆ ನೀನು ಮಾಡಿದ ಅದ್ಭುತ ಕಾರ್ಯವನ್ನು ವಿಶೇಷವಾಗಿ ಲೋಕದಲ್ಲಿ ಕೇಳಿಬಲ್ಲೆವು. ಹೇಗೆಂದರೆ : ನಿನ್ನ ಗುರುಶ್ರೇಷ್ಠನು–ಗುರುಚರಣಕ್ಕೆ ಅಧೀನನಾಗಿ ನೀನು ನಡೆದು

ತ್ತೊಡನೀ ಮಂಚಾಗ್ರಮಂ ತಾನಡರ್ದನಿದು ವಲಂ ತಕ್ಕುದೇ ಚಿತ್ತಮಂ ನೋ
ಳ್ಪೊಡೆ ದೇವಂ ಪೇಳ್ದೊಡಾವೇನಡರ್ದೆವೆ ಗುರುಪರ್ಯಂಕಮಂ ಭೀತಿಯಿಂದಂ ೪೭

ಸರಸನವಗಂಧಕುಸುಮೋ
ತ್ಕರಮಿರೆಯುಂ ಕನಕದರಲನೊಲ್ದಂತೆ ಮಹೇ
ಶ್ವರನೀ ಧೂರ್ತನನೊಲ್ದಂ
ಗುರುಮಿರೆಯುಂ ಶಿಷ್ಯರಮಳಗುಣಮಣಿಭರಣರ್ ೪೮

ಗುರುಶಿಷ್ಯಮಾರ್ಗವರ್ತನ
ಮಿರದೆ ಕುಮಾರ್ಗದೊಳೆ ನಡೆಯೆ ದೇವತ್ವಮಣಂ

ಕೊಳ್ಳುವ ರೀತಿಗೆ ಮತ್ತು ಗುರುಪ್ರಸಾದದಿಂದ ದೊರಕಿದ ಲೋಕ ಕೀರ್ತಿಗೆ ಹೊಟ್ಟೆ ಕಿಚ್ಚು ಪಡುವಂಥ ಶಿಷ್ಯಜನ ಸಮೂಹಕ್ಕೆ ಇತರರಿಂದ ಸಾಧಿಸಲಸಾಧ್ಯವಾದ ನಿನ್ನ ಈ ಮನೋಹರ ಭಕ್ತಿ ಭಾವವನ್ನು ಚೆನ್ನಾಗಿ ತೋರಿಸಬೇಕೆಂದು, ಸಂತೋಷದಿಂದ ಒಳ್ಳೆಯ ಹಾಸಿಗೆಯ ಮೇಲೆ ಕುಳಿತುಕೊಂಡು ತನ್ನ ಅಕ್ಕಪಕ್ಕದಲ್ಲಿದ್ದ ಶಿಷ್ಯರನ್ನು ಆಗ ಕರೆದು (ಈ) ಮಂಚದ ಮೇಲೆ ಕುಳಿತು ಕೊಳ್ಳಿರಿ' ಎನ್ನಲಾಗಿ, ಅವರೆಲ್ಲ ನಗುತ್ತ ಆಶ್ಚರ್ಯ ಹೊಂದಿದವರಾಗಿ, ಒಬ್ಬರಿಗೊಬ್ಬರು ಮುಖ ನೋಡುತ್ತ 'ನಮ್ಮ ಗುರು ಶ್ರೇಷ್ಠನು ಕೆಳಗೆ ಕುಳಿತಿರಲಾಗಿ (ಕೆಳಗಿರುವ ಹಾಸಿಗೆಯ ಮೇಲೆ ಕುಳಿತಿರಲಾಗಿ) ನಾವು ಈ ಶೋಭಿಸುವ ಮಂಚದ ಮೇಲೆ ಹೇಗೆ ಕುಳಿತುಕೊಳ್ಳಬೇಕು ? ಇದು ಅಸಾಧ್ಯ ವಾದದ್ದು ; ಅತ್ಯಂತ ದೋಷ ಪೂರ್ಣವಾದದ್ದು ; ಎಂದು ಎಲ್ಲರೂ ಆ ಮಾತನ್ನು ಚೆನ್ನಾಗಿ ಉಲ್ಲಂಘನೆ ಮಾಡಿದರು. ದೇಶಿಕನು ಆಗ ನೋಡಿ ನಸುನಗುತ್ತ, ನಮ್ರತೆ ಯಿಂದ ಕೂಡಿ, ತನ್ನ ಪಾದಕಮಲವನ್ನು ಉತ್ಸಾಹದಿಂದ ಪೂಜೆ ಮಾಡುತ್ತಿದ್ದ ನಿನ್ನನ್ನು (ಕರೆದು) ಪ್ರೀತಿಯಿಂದ '(ಈ) ಮಂಚವನ್ನು ಹತ್ತಿ ಕುಳಿತುಕೊಳ್ಳಯ್ಯ', ಎನ್ನಲಾಗಿ ನೀನು (ಗುರುವಿಗೆ) ನಮಸ್ಕರಿಸಿ ದೊಡ್ಡವರ ಆಜ್ಞೆಯನ್ನು ಹೊತ್ತು 'ಸದ್ಗುರುವೇ ಶರಣು' ಎನ್ನುತ್ತ ಒಮ್ಮೆಲೇ ಮಂಚದ ಮೇಲೆ ಹತ್ತಿದೆಯಲ್ಲವೆ ? ಆಗ ಆ ಕೆಟ್ಟ ಮನಸ್ಸಿನ ಎಲ್ಲ ಶಿಷ್ಯರು ಕೋಪದಿಂದ ಹುಬ್ಬುಗಂಟಿಕ್ಕಿದ ಮುಖವುಳ್ಳವರಾಗಿ ಕಣ್ಣು ಕೆಂಪಗೆ ಮಾಡಿ '(ಈ) ಅತಿ ನೀಚನಾದ ಗುರುಭಕ್ತಾಗ್ರ್ಯನು ನಾನು ಗುರುವಿನ ಆಜ್ಞೆ ಯನ್ನು ಹೊಂದಿದ್ದೇನೆಂದುಕೊಂಡು ಗರ್ವಗೊಂಡು (ಸ್ವಲ್ಪವೂ) ಹೆದರದೆ, ದೊಡ್ಡವ ರಾದ ನಾವು ಕೆಳಗಿದ್ದೇವೆಂಬುದನ್ನೂ ನೋಡದೆ, ಉತ್ಸಾಹದಿಂದ ತನ್ನ ಗುರುವಿನ ಎದುರಿಗೇ ಕೂಡಲೇ ಈ ಮಂಚವನ್ನು ಹತ್ತಿಬಿಟ್ಟನು. ಇದು ನಿಜವಾಗಿ ಯೋಗ್ಯ ಕಾರ್ಯವೇ ? ಗುರುದೇವನು (ಇವರ) ಮನಸ್ಸನ್ನು ನೋಡೋಣವೆಂದುಕೊಂಡು ಪರೀಕ್ಷೆ ಮಾಡಲು ಹೇಳಿದಾಗ ನಾವೆಲ್ಲ (ಗುರು) ಭಯದಿಂದ ಗುರುವೇರುವ ಮಂಚವನ್ನು ಹತ್ತಿದೆವೇನು ?' ೪೮–೪೯. 'ಮನೋಹರವಾದ ಹೊಸ ಕಂಪಿನಿಂದ ಕೂಡಿದ ಹೂವು ಗಳಿದ್ದರೂ ಪರಮೇಶ್ವರನು ಉಮ್ಮತ್ತಿಯ ಹೂವನ್ನು ಪ್ರೀತಿಸಿದ ಹಾಗೆ ನಿರ್ಮಲ

ದೊರೆಕೊಳ್ಗುಮೆ ಪೞಿಪಡುಗುಮೆ
ನರಭಾವಂ ವಿಬುಧತತಿಗೆ ವಿಶ್ವಂಭರೆಯೊಳ್ ೪೯

ಪಿರಿಯ ಶಿವಸೋದರರ್ಕಳ್
ಪರಿದಡಱಲ್ಕಳ್ಕಿದಾರ್ಯಪರ್ಯಂಕಮನೀ
ದುರುಳನಿರದಡರ್ದನಿವನಿಂ
ಗುರುಚರಣದ್ರೋಹಿಯಾವನೋ ಪೆಱನಿಳೆಯೊಳ್ ೫೦

ಇವನ ತಲೆಗಡಿದುರುಳ್ಚುವೆ
ವವನಿಯೊಳೆಂದಣ್ಮಿ ಗಳಪುವರ ಕಳಕಳಮಂ
ಪ್ರವಿಮಳಮತಿ ದೇಶಿಕಪುಂ
ಗವನೋ ಹೋಯೆಂದು ನಿಲಿಸಿ ನಸುನಗುತಾಗಳ್ ೫೧

ಇೞಿಯಲ್ವೇೞ್ದಲ್ಲಿ ನಿನ್ನಂ ಜವದಿನಿೞುಪಿ ಮಂಚಾಗ್ರದಿಂ ಮುಂದೆ ಶಂಭೂ
ಜ್ವಳರೂಪಂ ಶೂಲಮೊಂದಂ ನಡಿಸುತೆಲೆ ಗುರುದ್ರೋಹಿಯಂತಿರ್ಕೆ ನಿರ್ವ್ಯಾ
ಕುಳರಾಚಾರ್ಯಾಂಘ್ರಿಭಕ್ತಿ[1]ಪ್ರವಣ[1]ಮತಿಗಳೊಲ್ದೇಱಿರೇ ನೀಮಿದಂ ನಿ
ರ್ಮಳಚಿತ್ತರ್ನೋೞ್ಪೆನಾಂ ನಿಮ್ಮಯ ದೃಢತೆಯನೆಂದಾಡಿದಂ ದೇಶಿಕೇಂದ್ರಂ ೫೨

ಗುಣಗಳೇ ಆಭರಣವಾಗಿ ಉಳ್ಳ ಶಿಷ್ಯರಾದ ನಾವು ಇದ್ದರೂ ಗುರುಗಳು ಈ ಧೂರ್ತನಿಗೇ ಒಲಿದಿದ್ದಾರೆ. ಲೋಕದಲ್ಲಿ ವಿದ್ವಾಂಸರ ಸಮೂಹಕ್ಕೆ ಗುರುಶಿಷ್ಯರ ನಡೆವಳಿಕೆಯ ರೀತಿ ನೀತಿಗಳನ್ನು ತಪ್ಪಿ ದುಷ್ಟ ಮಾರ್ಗದಲ್ಲಿ ನಡೆದರೆ ದೇವತ್ವವು ಸ್ವಲ್ಪವಾದರೂ ಉಂಟಾದೀತೇ ? ಮನುಷ್ಯತ್ವವೆಂಬುದು ನಾಶವಾಗುವುದಿಲ್ಲವೆ ?' ೫೦. 'ದೊಡ್ಡವರಾದ (ನಮ್ಮಂಥ) ಶಿವಭಕ್ತಿಯಲ್ಲಿ ಸಹೋದರರೆನಿಸಿದವರು ಮಂಚವನ್ನು ಹತ್ತಲು ಹಿಂಜರಿದು ಭಯಗೊಂಡವರಾಗಿರುವಾಗ ಗುರುವು ಹತ್ತುವ ಮಂಚವನ್ನು ಈ ದುಷ್ಟನು ಹತ್ತಿ ಕುಳಿತನಲ್ಲವೇ ! ಭೂಮಿಯಲ್ಲಿ ಇವನಿಗಿಂತಲೂ (ಹೆಚ್ಚಾದ) ಇನ್ನೊಬ್ಬ ಗುರುದ್ರೋಹಿ ಯಾವನಿದ್ದಾನೆ ? ೫೧. 'ಇವನ ತಲೆಯನ್ನು ಕಡಿದು ಭೂಮಿಯಲ್ಲಿ ಉರುಳಿಸಿ ಬಿಡುತ್ತೇವೆ.' ಎಂದು ಪೌರುಷದಿಂದ ಕೂಡಿ ಕೂಗುವ ಕೋಲಾಹಲವನ್ನು ಅತಿ ನಿರ್ಮಲ ಮನಸ್ಸಿನ ಗುರುಶ್ರೇಷ್ಠನು ಕೇಳಿ ಓಹೋ ! ಎಂದು ನಿಲ್ಲಿಸಿ ನಸುನಗುತ್ತ– ೫೨. ಈಶ್ವರನಂತೆ ಪ್ರಕಾಶಿಸುವ ಸ್ವರೂಪವುಳ್ಳ ಗುರುದೇವನು ಮಂಚದ ಮೇಲಿನಿಂದ ನಿನ್ನನ್ನು ಇಳಿಯಲಿಕ್ಕೆ ಹೇಳಿ ಶೀಘ್ರವಾಗಿ ಇಳಿಸಿ, ಮುಂಭಾಗದಲ್ಲೊಂದು ಶೂಲದ ಕಂಬವನ್ನು ನಿಲ್ಲಿಸಿ, 'ಎಲೈ ಶಿಷ್ಯರೇ ಗುರುದ್ರೋಹಿಯೆಂಬುದು ಅದು ಹಾಗಿರಲಿ ವ್ಯಾಕುಲವಿಲ್ಲದ ಮನಸ್ಸಿನಿಂದ ಗುರುಪಾದದಲ್ಲಿ ಆಸಕ್ತಿಯುಳ್ಳ ಬುದ್ಧಿಯಿಂದ ನಿರ್ಮಲ ಚಿತ್ತರೆನಿಸಿರುವ ನೀವು ಈ (ಎದುರಿಗಿರುವ) ಶೂಲವನ್ನು ಪ್ರೀತಿಯಿಂದ ಹತ್ತಿರಿ. ನಾನು

1 ಪ್ರಣವ (ಗ, ಮ)

ಎನೆ ಕೇಳ್ದಾಚಾರ್ಯನಂಘ್ರಿದ್ವಯಕೆ ಮಣಿದಿದೇವೇಳ್ವಿರೋವೋವೊ ಮುನ್ನೊ
ರ್ವೆ ನಿತಾಂತಂ ಮುಂಚಮೇಱಲ್ಬೆಸಸಿದಿರಕಟಿಂದೊರ್ವೆ ಶೂಲಾಗ್ರಮಂ ಭೋಂ
ಕನೆ ಪತ್ತಲ್ವೇಳ್ದು ನೀವಾಗ್ರಹಿಸಿದಪಿರಿದಕ್ಕಾರ್ಪೆವೇ ಮಂಚಮೇಱ
ರ್ದನನೀ ಶೂಲಾಗ್ರಮಂ ಪತ್ತೆನುತೆ ಬೆಸಸೆ ತಾಂ ಪತ್ತುಗುಂ ಮಾಣದೀಗಳ್ ೫೩

ವಿದಿತ ಗುರುವಾಕ್ಯಮಂ ಮೀ
ಱದ[1] ಭಕ್ತಂ ಮುನ್ನಮಳ್ಕದಾ ಮಂಚಮನೇ
ಱಿದನಲ್ತೆ ಬಸಿದ ಶೂಲಮ
ನಿದನಿಂದೇಱಲ್ಕೆ ಬೆಸಸೆ ಪೆಱಸಾರ್ದಪನೇ ೫೪

ಖಾ[2]ಣಮನೆ ಕೊಂಡುದಕೆ ಕಡಿ
ಯಾಣಂ ತಾನುಚಿತಮೆಂಬ ಗಾದೆಯ ತೆಱದಿಂ
ಮಾಣದೆ ಮಂಚಮನೇಱಿದ
ಜಾಣಂಗಿದು ಯುಕ್ತಮಲ್ತೆ ಶೂಲಾರೋಹಂ ೫೫

ವ॥ ಎಂದವರ್ನುಡಿದು ಪೆಱಸಾರೆ ಗುರುವರಂ ಗುರುಭಕ್ತನೆನಿಪ ನಿನ್ನನಮಂದಕೃಪಾ ರಸಭರಿತಕಟಾಕ್ಷದಿನಭೀಕ್ಷಿಸಿ ವಾತ್ಸಲ್ಯದಿಂ ಸಾರೆಗರೆದು ನಿಜತಾಂಬೂಲಪ್ರಸಾದಮಂ ಕರುಣಿಸೆ

ನಿಮ್ಮ ಮನಸ್ಸಿನ ದೃಢತೆಯನ್ನು ನೋಡುತ್ತೇನೆ,' ಎಂದು ಹೇಳಿದನು. ೫೩. ಹೀಗೆಂದು ಗುರುವು ಹೇಳಲು ಗುರುವಿನ ಎರಡೂ ಪಾದಗಳಿಗೆ ನಮಸ್ಕರಿಸಿ, 'ಓ ಹೋ ಹೋ ! ಇದೇನು ಹೇಳುತ್ತಿದ್ದೀರಿ. ಈ ಪೂರ್ವದಲ್ಲಿ ಒಮ್ಮೆ ಮಂಚವನ್ನು ಹತ್ತಿರೆಂದು ಅಪ್ಪಣೆ ಮಾಡಿದಿರಿ. ಅಕ್ಕಟಾ ! ಈಗ ಮತ್ತೊಮ್ಮೆ ಈ ಕೂಡಲೇ ಶೂಲದ ತುದಿಗೇರಬೇಕೆಂದು ಆಗ್ರಹ ಮಾಡುತ್ತಿದ್ದೀರಿ. ಇದಕ್ಕೆ ನಾವು ಸಮರ್ಥರಾದೇವೆಯೇ. ಮಂಚವನ್ನು ಹತ್ತಿದವನಿಗೆ ಈಗ ಶೂಲವನ್ನು ಹತ್ತು ಎಂದು ಅಪ್ಪಣೆ ಮಾಡಿದರೆ ಆತನು ತಪ್ಪದೆ ಹತ್ತುವನು,' ೫೪. ಶ್ರೇಷ್ಠವಾದ ಗುರುವಾಕ್ಯವನ್ನು ಮೀರದಂಥ (ಆ) ಭಕ್ತನು ಮೊದಲು ಸ್ವಲ್ಪವೂ ಅಳುಕದೆ ಆ ಮಂಚವನ್ನು ಹತ್ತಿದನಲ್ಲವೇ ? ಈಗ ಮೊನೆಯಾದ ಈ ಶೂಲವನ್ನು ಏರುವುದಕ್ಕೆ ಅಪ್ಪಣೆ ಮಾಡಿದರೆ ಹಿಂದೆಗೆಯುವನೇ ? ೫೫. (ಕುದುರೆಗೆ) 'ಹುಲ್ಲನ್ನು ಕೊಂಡುಕೊಂಡದ್ದಕ್ಕೆ ಕಡಿವಾಣವೂ ತಾನು ಉಚಿತ' ಎಂಬ ಗಾದೆಗನುಗುಣವಾಗಿ ತಪ್ಪದೆ ಮಂಚವನ್ನೇರಿದ ಜಾಣನಿಗೆ ಈ ಶೂಲವನ್ನೇರುವಿಕೆಯು ಯೋಗ್ಯವಲ್ಲವೇ ?' ವ॥ ಹೀಗೆಂದು ಆ (ಇತರ) ಶಿಷ್ಯರೆಲ್ಲ (ಶೂಲವನ್ನೇರಲು) ಹಿಂದೆಗೆಯಲು ಗುರುಶ್ರೇಷ್ಠನು–ಗುರುಭಕ್ತನೆನಿಸಿದ ನಿನ್ನನ್ನು ವಿಶೇಷವಾದ ಕೃಪಾ ರಸಭರಿತ ನೋಟದಿಂದ ನೋಡಿ, ಪ್ರೀತಿಯಿಂದ ಸಮೀಪಕ್ಕೆ ಕರೆದು ತನ್ನ ತಾಂಬೂಲ

---

1 ದೆ (ಅ) 2 ಬಾ (ಚ)

ಕೆಯ್ಕೊಂಡು ಭಕ್ತಿಯಿಂ ಸವಿದಂಗಲೇಪಂಗೆಯ್ದು ಪರಮಾನಂದಂಬಡೆದಿರೆ ಬಸಿದ ನಿಶಿತಶೂಲಮಂ ಕಣ್ಸನ್ನೆಯಿಂ ತೋರ್ಪುದುಮಾಗಳ್—

ಹರ ಹರ ಬಣ್ಣಿಸಲ್ಕಳವೆ ನಿನ್ನಧಟಂ ಪೊಡಮಟ್ಟು ದಿವ್ಯ ಸ
ದ್ಗುರುಪದಪದ್ಮಕದ್ಭುತಮನಾಳೆ ಜನಂ ಪರಮಾನುರಾಗನಿ
ರ್ಭರತೆಯನಪ್ಪುಕೆಯ್ದು ಪರಿತಂದೊಡನೇಱದೆ ಶೂಲಮಂ ಗುಣಾ
ಕರ ಮೊನೆಯುರ್ಚೆ ಮೂಡೆ ನಡುನೆತ್ತಿಯೊಳೆಂತುಟೊ ಭಕ್ತಿವೈಭವಂ ೫೬

ಪರಮಗುರುಭ್ಯೋ ನಮಯೆಂ
ಬ ರವಂ ಸೊಗಯಿಸೆ ಮುಖಾಬ್ಜದೊಳ್ಕಿಱುನಗೆ ತ
ಳ್ತಿರೆ ಮುನ್ನ ಮಂಚಮೇಱದ
ಪರಿಯಿಂದೇಱರ್ದೆ ಶೂಲಮಂ ಗುರುಭಕ್ತಾ ೫೭

ಮನಮದು ಗುರುವಿನೊಳಮರ್ದಿರೆ
ತನುವಂ ನೀಂ ಸ್ಥಾಣುವಿಂಗೆ ಪದೆದರ್ಪಿಸಿದೈ
ತನುಮನದರ್ಪಣಭಾವಮ
ನೆನಸುಂ ಪಲ್ಲಟಿಸಿ ಮೆಱೆದೆ ಪೊಸತೆನೆ ವಿಬುಧರ್ ೫೮

ರೂಪವಾದ ಪ್ರಸಾದವನ್ನು ಕೊಡಲಾಗಿ, ಅದನ್ನು ಸ್ವೀಕರಿಸಿ ಭಕ್ತಿಯಿಂದ ತಿಂದು, ಮೈಗೆ ಸವರಿಕೊಂಡು, ಪರಮಾನಂದಭರಿತನಾಗಿ, ಚೂಪುಗೊಳಿಸಿದ ಹರಿತವಾದ ಶೂಲಾಯುಧವನ್ನು ಕಣ್ಸನ್ನೆ ಮಾಡಿ ಗುರುವು ತೋರಿಸಿದನು. ಆಗ—೫೬. 'ಹರ ಹರ ! ಸದ್ಗುಣ ಸಮೂಹಕ್ಕೆ ಆಗರನೆನಿಸಿದವನೇ, ನಿನ್ನ ಶೌರ್ಯವನ್ನು ವರ್ಣಿಸುವುದಕ್ಕೆ, ಶಕ್ಯವೇ ? ಶ್ರೇಷ್ಠನಾದ ಸದ್ಗುರುವಿನ ಪಾದಕಮಲಗಳಿಗೆ ನಮಸ್ಕರಿಸಿ, ಜನರೆಲ್ಲ ಅಧ್ಭುತಗೊಳ್ಳುವಂತ ಉತ್ಕೃಷ್ಟವಾದ ಪ್ರೇಮಾತಿಶಯವನ್ನು ತಾಳಿದವನಾಗಿ ಓಡಿಬಂದು ಕೂಡಲೇ ನಡುನೆತ್ತಿಯಲ್ಲಿ ಶೂಲದ ಮೊನೆಯು ಹಾಯ್ದು ಹೊರಬರುವಂತೆ ಶೂಲವನ್ನೇರಿದೆ ! ಭಕ್ತಿಯ ವೈಭವವು ಅದು ಎಂಥದೋ !!' ೫೭. "ಗುರು ಭಕ್ತನೇ, ಮೊದಲು ಮಂಚವನ್ನೇರಿದ ರೀತಿಯಲ್ಲೇ 'ಪರಮಗುರುಗಳಿಗೆ ನಮಸ್ಕಾರ ಗಳು' ಎಂಬ ಧ್ವನಿಯು ಸೊಗಸಾಗಿರಲು ಮುಖಕಮಲವು ಕಿರುನಗೆಯಿಂದ ತುಂಬಿರಲು, ಶೂಲವನ್ನು ಏರಿದೆ". ೫೮. ಆ ನಿನ್ನ ಮನಸ್ಸು ಗುರುವಿನಲ್ಲಿ ಸೇರಿರಲು, ಪ್ರೀತಿಯಿಂದ ದೇಹವನ್ನು ಪರಮೇಶ್ವರನಿಗೆ (ಶೂಲವಿರುವ ಪೋಟುಮರಕ್ಕೆ) ಅರ್ಪಿಸಿದೆಯಲ್ಲವೇ ? (ಹೀಗೆ) ತನು ಮನದ ಅರ್ಪಣಾಭಾವವನ್ನು ವ್ಯತ್ಯಾಸಗೊಳಿಸಿ ವಿದ್ವಾಂಸರೆಲ್ಲ ಇದು ನವೀನ ರೀತಿ ಎನ್ನುವಂತೆ ಮೆರೆದೆ'. (ಗುರುವಿಗೆ ದೇಹವನ್ನೂ, ಲಿಂಗಕ್ಕೆ ಮನಸ್ಸನ್ನೂ ಅರ್ಪಿಸಬೇಕಾದುದು ಕ್ರಮ ; ಈಗ ಗುರುವಿಗೆ ಮನಸ್ಸನ್ನೂ, ದೇಹವನ್ನು ಲಿಂಗಕ್ಕೂ

ಪರಮಾನಂದಸುಧಾಬ್ಧಿಯ
ನಿರದುರ್ವಿಪ ಗುರುಕಟಾಕ್ಷ ಕೌಮುದಿ ಕವಿದೊ
ತ್ತರಿಸಿರೆ ಮುಗಿದಂಭೋಜದ
ಪರಿಯಂ ಪರಿಭವಿಸಿ ಮುಗಿದ ಕರಮಿರೆ ನೊಸಲೊಳ್ ೫೯

ಗುರುಚರಣ ಧ್ಯಾನಾಮೃತ
ಸರಸಿಯೊಳವಗಾಹಮಿರೆ ಮನೋಹಂಸಂ ನೋ
ಳ್ಪರ ಬಗೆಯೊಳೊಗೆಯೆ ಕೌತುಕ
ಮರರೆ ನಿಶಾತೋಗ್ರಶೂಲದೊಳ್ಕುಳ್ಳಿರ್ದೈ ೬೦

ಗುರುಪಾದಾಂಭೋಜಧಾಮಂ ಗುರುಚರಣಮಿಳತ್ಪಾಂಶುಭಾಸ್ವಲ್ಲಲಾಮಂ
ಗುರುವಾಕ್ಯಪ್ರಾಣಸೀಮಂ ಗುರುಪದಕಮಳಧ್ಯಾನನಿರ್ಧೂತಕಾಮಂ
ಗುರುವಂಶಾಂಬೋಧಿಸೋಮಂ ಗುರುಪದಯುಗಳೀನಿತ್ಯದತ್ತಪ್ರಣಾಮಂ
ಗುರುತತ್ವಜ್ಞಾನಭೂಮಂ ಗುರುಹಿತಕರಣೋದ್ಯೋಗರಾಗಾಭಿರಾಮಂ ೬೧

ವ ॥ ಎನಿಸಿ ನೆಗಳ್ತೆವೆತ್ತು ಮೆಱೆವ—

ಅರ್ಪಿಸಿದುದೇ ವಿದ್ವಾಂಸರು ನವೀನರೀತಿಯೆನ್ನುವ ವ್ಯತ್ಯಾಸಕಾರ್ಯ) ೫೯–೬೦. 'ಉತ್ಕೃಷ್ಟವಾದ ಸಂತೋಷವೆಂಬ ಕ್ಷೀರ ಸಮುದ್ರವನ್ನು ತಪ್ಪದೆ ಹೆಚ್ಚಿಸುವ ಗುರುವಿನ ಕಡೆಗಣ್ಣಿನ ನೋಟವೆಂಬ ಬೆಳದಿಂಗಳು, ದಟ್ಟವಾಗಿ ಕವಿದಿರಲು, ಮೊಗ್ಗಾದ (ಮುಕುಳಿತ ಗೊಂಡ) ತಾವರೆಹೂವಿನ ರೀತಿಯನ್ನು ತಿರಸ್ಕರಿಸುವಹಾಗೆ ಮುಗಿದಕೈಗಳು ಹಣೆಯ ಮೇಲೆ ಇರಲು, ಮನಸ್ಸೆಂಬ ಹಂಸಪಕ್ಷಿಯು ಗುರುವಿನ ಪಾದಧ್ಯಾನವೆಂಬ ಹಾಲಿನ ಸರೋವರದಲ್ಲಿ ಮುಳುಗಿರಲು, ನೋಡುವವರ ಮನಸ್ಸಿನಲ್ಲಿ ಆಶ್ಚರ್ಯವುಂಟಾಗುವ ಹಾಗೆ, ತೀಕ್ಷ್ಣವಾದ ತುದಿಯುಳ್ಳ ಶೂಲದ ಮೇಲೆ ಕುಳಿತುಕೊಂಡೆ ಅಬ್ಬಬ್ಬಾ !' ೬೧. 'ಗುರುವಿನ ಪಾದಕಮಲ ಪುಷ್ಪದ ಹಾರವನ್ನುಳ್ಳವನೂ, ಗುರುವಿನ ಪಾದ ಕಮಲ ದಲ್ಲಿ ಕೂಡಿರುವಧೂಳಿಯೇ ಪ್ರಕಾಶವಯನವಾದ ಭೂಷಣವಾಗಿ ಉಳ್ಳವನೂ, ಗುರು ವಾಕ್ಯವೇ ಪ್ರಮಾಣವೆಂಬ ನಂಬಿಕೆಯು ಎಲ್ಲೆಕಟ್ಟಾಗಿ ಉಳ್ಳವನೂ, ಗುರುವಿನ ಪಾದ ಕಮಲವನ್ನು ಧ್ಯಾನ ಮಾಡುವುದರಿಂದ ಹೋಗಲಾಡಿಸಿಕೊಂಡ ಕಾಮನೆಗಳ ಸುಖಗಳನ್ನು ಳ್ಳವನೂ, ಗುರುವಿನವಂಶವೆಂಬ ಸಮುದ್ರಕ್ಕೆ ಚಂದ್ರಪ್ರಾಯನಾದವನೂ, ಗುರುವಿನ ಪಾದದ್ವಯಕ್ಕೋಸುಗ ನಿತ್ಯವೂ ಮಾಡುತ್ತಿರುವ ನಮಸ್ಕಾರಗಳಿಂದ ಕೂಡಿದವನೂ, ಗುರುವಿನ ಭಾವವನ್ನು ತಿಳಿಯುವಿಕೆಗೆ ಆಸ್ಪದನಾದವನೂ, ಗುರುವಿಗೆ ಹಿತವಾಗುವಂತೆ ಕಾರ್ಯಮಾಡುವುದರಿಂದ ಮನೋಹರನಾದವನೂ'—ವ॥ 'ಎನಿಸಿಕೊಂಡು ಖ್ಯಾತಿಪೆತ್ತು

ಗುರುಲಿಂಗಾರಂಘ್ರಿಸಮರ್ಚನೈಕಪರನಂ ಲಿಂಗಾಂಗಸಂಯೋಗಬಂ
ಧುರನಂ ಭಾವಜಸರ್ಪಗರ್ವಹರನಂ ಸಾಕಲ್ಯಮಾಂಗಲ್ಯಮಂ
ದಿರನಂ ದುಷ್ಟತಮಃಪ್ರಚಂಡಕರನಂ ಸನ್ಮಾರ್ಗಸಂಚಾರಭಾ
ಸುರನಂ ಭವ್ಯಜನಪ್ರಮೋದಕರನಂ ನಿನ್ನಂ ಭವದ್ದೇಶಿಕಂ ೬೨

ಉದಯಗಿರಿಶೃಂಗದಗ್ರದೊ
ಳುದಯಿಸಿದಿನನಂ ಪರಾಭವಿಸಿ ಘನಶೂಲಾ
ಗ್ರದೊಳೆಸೆವನನಮಳಿನಮಧು
ರದಯಾರಸಭರಿತದೃಷ್ಟಿಯಿಂದೀಕ್ಷಿಸಿದಂ ೬೩

ಪ್ರಾಜ್ಯಗುರುಭಕ್ತಿನಿಜಸಾ
ಮ್ರಾಜ್ಯಕ್ಕಭಿಷೇಕಿಪಂತೆ ವಿಮಳೋದಕದಿಂ
ಪೂಜ್ಯಗುರು ನಿಜಕಟಾಕ್ಷರು
ಚಿಜ್ಯೋತ್ಸ್ನೆಯನೊಲ್ದು ಮೇಲದೇಂ ಬೀಱಿದನೋ ೬೪

ವ॥ ಅಂತು ಕಾರುಣ್ಯರಸಮಂ ಪೊಗೆದು ಸೂಸುವಂತೆ ನಿರೀಕ್ಷಿಸಿ ಬೆಱಗುವಟ್ಟು ಬೆಬ್ಬಳಿಸಿ ನೋಳ್ಪಶೇಷಶಿಷ್ಯರ ಲಜ್ಜಾನತಾನನಮಂ ನೋಡಿ ದೇಶಿಕೇಂದ್ರನಿಂತೆಂದಂ—

ಈತನ ಚರಿತ್ರಮೀತನ
ನೂತನ ಗುರುಭಕ್ತಿ ಸೊಗಯಿಪೀತನ ಸುಗುಣ

ಮೆರೆಯುವ—' ೬೨–೬೩. 'ಗುರು–ಲಿಂಗಗಳ ಪಾದಗಳನ್ನು ಪೂಜಿಸುವುದರಲ್ಲಾ ಸಕ್ತನಾದವನೂ, ಲಿಂಗಾಂಗ ಸಾಮರಸ್ಯದಿಂದ ಮನೋಹರನಾಗಿರುವವನೂ, ಮನ್ಮಥನ ಅಹಂಕಾರವನ್ನು ನಾಶಮಾಡಿದವನೂ, ಸಮಸ್ತಮಂಗಳಗಳಿಗೂ ಗೃಹದೋಪಾದಿ ಯಲ್ಲಿರುವವನೂ, ಸನ್ಮಾರ್ಗದಲ್ಲಿ ನಡೆಯುವುದರಿಂದ ಪ್ರಕಾಶಿಸುವವನೂ ಸಜ್ಜನರು ಗಳಿಗೆ ಸಂತೋಷವನ್ನುಂಟುಮಾಡುವವನೂ ಆದ ನಿನ್ನ ಗುರುಶ್ರೇಷ್ಠನು ಪೂರ್ವಾಚಲದ ಕೋಡುಗಲ್ಲಿನ ತುದಿಯಲ್ಲಿ ಉದಯಗೊಳ್ಳುತ್ತಿರುವ ಸೂರ್ಯನನ್ನು ತಿರಸ್ಕಾರಗೊಳಿಸುವ ರೀತಿಯಲ್ಲಿ ಭಯಂಕರ ಶೂಲದ ತುದಿಯ ಮೇಲೆ ಶೋಭಿಸುವ ನಿನ್ನನ್ನು ನಿರ್ಮಲವಾದ ಕಾರುಣ್ಯರಸದಿಂದ ತುಂಬಿದ ಕಣ್ಣಿನ ಕೊನೆಗಳಿಂದ ನೋಡಿದನು.' ೬೪. 'ಆ ಪೂಜ್ಯನಾದ ನಿನ್ನ ಗುರುವು ಪವಿತ್ರ (ಪ್ರಾಜ್ಯ)ವಾದ ಗುರುಭಕ್ತಿಯೆಂಬ ತನ್ನ ಸಾಮ್ರಾಜ್ಯಕ್ಕೆ ನಿರ್ಮಲಜಲದಿಂದ ಅಭಿಷೇಕ ಮಾಡುವನೋ ಎಂಬಂತೆ, ಶಿಷ್ಯನಾದ ನಿನ್ನ ಮೇಲೆ ಕಡೆಗಣ್ಣೋಟದ ಕಾಂತಿಯೆಂಬ ಬೆಳದಿಂಗಳನ್ನು ಅದೇನು ಪ್ರಸರಿಸಿದನೋ !' ವ॥ ಆ ರೀತಿ ಕಾರುಣ್ಯರಸವನ್ನು ತುಂಬಿ ಸುರಿಯುವಹಾಗೆ ನಿರೀಕ್ಷಿಸಿ, ಆಶ್ಚರ್ಯಗೊಂಡು ಭಯಪಟ್ಟು ನೋಡುತ್ತಿರುವ ಸಮಸ್ತ ಶಿಷ್ಯರುಗಳ ಲಜ್ಜೆ ಯಿಂದ ಬಾಗಿಹೋದ ಮುಖವನ್ನು ಆ ಗುರುಶ್ರೇಷ್ಠನು ನೋಡಿ, ಹೀಗೆ ಹೇಳಿದನು. ೬೫. 'ಈ ಗುರುಭಕ್ತಾರ್ಯನ ಚರಿತ್ರೆ, ಈತನ ನೂತನವಾದ ಗುರುಭಕ್ತಿ, ಈತನ

ವ್ರಾತಮಿವಂಗಲ್ಲದೆ ಮ
ತ್ತೇತೆಱದಿಂ ಬಯಸೆ ಪೆಱರ್ಗದೇನಾದಪುದೋ ೭೫

ಪ್ರದ್ಯೋತನ ಘನರುಚಿಯುಂ
ಖದ್ಯೋತಂ ಫಣಿಪಶಕ್ತಿಯುಮಂನೊಳ್ಳೆ ವಲಂ
ಸದ್ಯೋಗಿಯ ಯೋಗಮುಮಬ
ಳೋದ್ಯೋಗರತಂ ನಿತಾಂತಮೆಳಸಿದೊಡೊಳವೇ ೭೬

ಈತನ ಪೆಂಪುವೆತ್ತ ಗುರುಭಕ್ತಿ ಗುರುವ್ರತನಿಷ್ಠೆಗುಜ್ವಳ
ಖ್ಯಾತಿಗೆ ನೀವಸೂಯೆವಿಡಿದಿರ್ಪಿರನೇಕಪುರಾಣಶಂತ್ರವೇ
ದಾತಿಶಯೇತಿಹಾಸದೆ ಪುರಾತನನೂತನಭಕ್ತರೊಳ್ಪೊದ
ಳ್ದೀ ತೆಱಮಪ್ಪ ಶೌರ್ಯಯುತಭಕ್ತಿಯನಾಲಿಪಿರೇ ಧರಿತ್ರಿಯೊಳ್ ೭೭

ಕಂಡೇಂ ಬಲ್ಲಿರೆ ಮಹಿಮಂಕ
ರಂಡನ ಮತ್ಸುತನ ಪೋಲ್ವ ಚಲವಂತರನು
ದ್ದಂಡತೆಯಿಂ ಗರ್ವಮನೊಳ
ಕೊಂಡಾವೇ ಭಕ್ತರೆಂದು ಬೆಱೆದಪಿರಿಳೆಯೊಳ್ ೭೮

ನಿಮಗೆ ಗುರುಭಕ್ತಭಕ್ತಿ
ಕ್ರಮಮುಮುರ್ವುದೆ ಸುರಮಹೀಜ ಮಹಿಮೆಯುದೆಂತುಂ

ಸೊಗಸುಗೊಂಡ ಸುಗುಣಗಳ ಸಮೂಹ (ಇವೆಲ್ಲ) ಇವನಿಗೇ ಅಲ್ಲದೆ, ಮತ್ತೆ ಇಚ್ಛೆಪಟ್ಟರೆ ಪರರಿಗೆ ಯಾವರೀತಿಯಿಂದಲಾದರೂ ಉಂಟಾದೀತೇ ? ೭೬. ಮಿಂಚಿನ ಹುಳುವು ಸೂರ್ಯನ ದೊಡ್ಡ ಕಾಂತಿಯನ್ನೂ, ನೀರುಹಾವು ಆದಿಶೇಷನ ಸಾಮರ್ಥ್ಯವನ್ನೂ, ದುರ್ಬಲ ಪ್ರಯತ್ನದಲ್ಲಿ ಆಸಕ್ತನಾದವನು (ಅಥವಾ ಸ್ತ್ರೀಲೋಲನಾದವನು) ಶ್ರೇಷ್ಠಯೋಗಿಯ ಯೋಗಮಾರ್ಗವನ್ನೂ ಬಯಸಿದರೆ ನಿಶ್ಚಯವಾಗಿ (ಅವನಿಗೆ) ಉಂಟಾದಾವೇ ?' ೭೭. ಈತನ ಘನತೆಯಿಂದ ಕೂಡಿದ ಅತಿಶಯವಾದ ಗುರುಭಕ್ತಿಯ ವ್ರತದ ನಿಷ್ಠೆಗೆ, ಉಜ್ವಲವಾದ ಖ್ಯಾತಿಗೆ, ನೀವೆಲ್ಲ ಹೊಟ್ಟೆಕಿಚ್ಚು ಪಟ್ಟು, ಇದ್ದೀರಿ. ಲೋಕದಲ್ಲಿ ಅನೇಕ ಪುರಾಣ, ಆಗಮ, ವೇದ ಶ್ರೇಷ್ಠವಾದ ಇತಿಹಾಸಗಳಲ್ಲಿ ಪುರಾತನ ಭಕ್ತರೊಳಗೆ, ಪ್ರಖ್ಯಾತಿಯನ್ನು ಹೊಂದಿ, ಈ ರೀತಿಯಲ್ಲಿರುವ ಸಾಮರ್ಥ್ಯದಿಂದ ಕೂಡಿದ ಭಕ್ತಿಯನ್ನು ಕೇಳಿದ್ದಿರಾ ?' ೭೮. 'ಮಹಿಮೆಯ ಭರಣಿಯಂತಿರುವ, ನನ್ನ ಈ ಗುರುಪುತ್ರನನ್ನು ಹೋಲುವ (ಸರಿಗಟ್ಟುವ) ಛಲವಂತನನ್ನು (ಛಲದಿಂದ ಕೂಡಿದ ಶಿಷ್ಯನನ್ನೂ) ಕಂಡು ಬಲ್ಲಿರಾ ! ಅಹಂಕಾರದಿಂದ ಗರ್ವವನ್ನು ಒಳಗೊಂಡು ಲೋಕದಲ್ಲಿ ನಾವೇ ಭಕ್ತರೆಂದು ಸೆಟೆಯುತ್ತಿದ್ದಿರಿ (ಸೆಡೆಯುತ್ತಿದ್ದೀರಿ).' ೭೯. 'ನಿಮಗೆ ಗುರು ಭಕ್ತಿಯ ರೀತಿಯು ಉಂಟಾದೀತೇ ? ಆ ಕಲ್ಪವೃಕ್ಷದ ಮಹತ್ವವು ಕಾಡುಮರಗಳ ಸಮೂಹಕ್ಕೆ ಹೇಗಾದರೂ ಸಮಾನ

ಪಮನಿಸುಗುಮೆ ಕಾನನಕುಜ
ಪವಿತ್ರಿಗೆ ಬಱಿದೇಕೆ ಭಕ್ತಿಭಾವದ ಬಿಂಕಂ ೬೯

ಮಂಚಮನೇಱಿದ ತೆಱದಿಂ
ದಂಚಿತಮತಿಯುಡರ್ದನರರೆ ಶೂಲಮನಿದು ತಾಂ
ಮಂಚಮದು ಶೂಲಮೆಂಬ ವಿ
ಸಂಚುಂಟೆ ಮದುಕ್ತಿ ಜೀವಮಾದಂಗಿಳೆಯೊಳ್ ೭೦

ಧರಣಿಯೊಳಿವಂಗೆ ಸಂದುದು
'ಗುರುವಚನಮಲಂಘನೀಯಮೆ'ಂಬುಕ್ತಿ ವಲಂ
ಪರಿದೇಱೆನೆ ಶೂಲಮನಾ
ದರದಿಂ ಭರದಿಂದಮೇಱೆ ಮೆಱೆದುದಱಿಂದಂ ೭೧

ಇವನೆಮ್ಮ ಕೃಪಾಪಾತ್ರಂ
ವಿವರಿಸೆ ಮತ್ಕ್ಷಮೆಗೆ ಪಾತ್ರರಪ್ಪಿರಿ ನೀಮೆಂ
ದವರೊಡನೆ ನುಡಿದು ನೋಳ್ಪುದು
ಜವದಿಂ ದೃಷ್ಟಾಂತಮಂ ಬಳಿಕ್ಕೆನುತಾಗಳ್ ೭೨

ವ॥ ಇಂತೆಂದವರ್ಗಮರಗುಂಡ ಮಲ್ಲಿಕಾರ್ಜುನಾರ್ಯಂ ತ್ವ[1]ನ್ಮಹತ್ವಮಂ ನಿರವಿಸಿ ಭವದಭಿಮುಖನಾಗಿ ಕೃಪಾವಲೋಕನದಿನಭೀಕ್ಷಿಸಿ—

ಪಾದೀತೇ ? ವ್ಯರ್ಥವಾದ (ಈ) ಭಕ್ತಿಭಾವದ ಬಿಂಕವು (ನಿಮಗೆ) ಏಕೆ ?' ೭೦. 'ಪೂಜ್ಯವಾದ ಬುದ್ಧಿಯುಳ್ಳ (ಈ) ಗುರು ಭಕ್ತಾರ್ಯನು ಮಂಚವನ್ನೇರಿದ ರೀತಿಯಲ್ಲಿಯೇ ಶೂಲವನ್ನು ಅಬ್ಬಬ್ಬಾ ! ಏರಿ ಬಿಟ್ಟನು ! ಲೋಕದಲ್ಲಿ ನನ್ನವಾಕ್ಯವೇ (ಗುರುವಾಕ್ಯವೇ) ಪ್ರಮಾಣವಾಗಿ ಉಳ್ಳವನಾದವನಿಗೆ ಇದು ಮಂಚ, ಅದು ಶೂಲ ಎಂದೆನ್ನುವ ಭೇದಭಾವವುಂಟೇ ?' ೭೧. 'ಓಡಿಹೋಗಿ ಶೂಲವನ್ನು ಹತ್ತು ಎನ್ನಲು ಆದರ ಪೂರ್ವಕವಾಗಿ ಭರದಿಂದ ಹೋಗಿ (ಶೂಲವನ್ನೂ) ಏರಿ ಮೆರೆದದ್ದರಿಂದ ಧರಣಿಯಲ್ಲಿ 'ಗುರುವಚನವು ಉಲ್ಲಂಘಿಸುವಂತಹುದಲ್ಲ' ಎಂಬ ಮಾತು ಇವನಿಗೇ ನಿಶ್ಚಯವಾಗಿ ಸಂದಿತಲ್ಲವೆ !' ೭೨. 'ಇವನೇ ನಮ್ಮ ಕೃಪೆಗೆ ಪಾತ್ರನು; ವಿವರವಾಗಿ ನೋಡಿದರೆ ನನ್ನ ಕೃಪೆಗೆ ನೀವು ಪಾತ್ರರಲ್ಲದವರಾಗುತ್ತೀರಿ' (ಹೀಗೆಂದು) ಅವರೊಡನೆ ಮಾತನಾಡಿ ಬಳಿಕ ಶೀಘ್ರವಾಗಿ ದೃಷ್ಟಾಂತವನ್ನು ನೋಡಿರಿ ಎನ್ನುತ್ತ, ಆಗ ವ ॥ ಆ ಅಮರಗೊಂಡ ಮಲ್ಲಿಕಾರ್ಜುನಾರ್ಯನು ಹೀಗೆ ಅವರಿಗೆ ತನ್ನ ಮಹಿಮೆಯನ್ನು ಹೇಳಿ ನಿನ್ನ ಕಡೆಗೆ (ಗುರುಭಕ್ತಾರ್ಯನ ಕಡೆಗೆ) ತಿರುಗಿ ಕೃಪಾ ಪೂರ್ಣದೃಷ್ಟಿಯಿಂದ

1 ತ (ದ)

ಎಲೆ ಗುರುಭಕ್ತ ನಿನ್ನ ಗುರುಭಕ್ತಿಮಹಾಪ್ರಮಥೇಂದ್ರರುದ್ರಭ
ಕ್ತಲಲಿತಭಕ್ತಿಪದ್ಧತಿಗೆ ಸಂದುದು ನೀನಿಳಿತರ್ಪುದಿನ್ನೆನು
ತ್ತಲಘುಮೃದೂಕ್ತಿಯಿಂ ಕರೆಯೆ ಸದ್ಗುರು ನೀಂ ನಿಮಿರ್ದೂಱಿ ಕೈಗಳಂ
ಪಲಗೆಯೊಳುದ್ಧಮೆಳ್ದಲುಗೆ ಶೂಲಮುದಗ್ರತರಪ್ರಭಾವದಿಂ ೭೩

ನೆಗೆದಿಳೆಗವತರಿಸಿ ಜನಂ
ಪೊಗಳುತ್ತಿರೆ ಗುರುಪದಾಬ್ಜಕೆಱಗಿದೆ ನಿನ್ನಂ
ತೆಗೆದು ಬಿಗಿಯಪ್ಪಿ ಸಂತಸ
ದೊಗುಮಿಗೆಯಿಂ ನೋಡಿ ದೇಶಿಕಂ ನಲಿದೊಲವಿಂ ೭೪

ವಿಮಳನಿಜಪ್ರಸಾದಸುಧೆಯಿಂ ತಣಿಪುತ್ತೆ ನೆಗಳ್ತೆವೆತ್ತ ಸಂ
ಭ್ರಮಮನಲರ್ಚಿ ರಂಜಿಸಿದೆ ಶೈವಸಹೋದರರೆಲ್ಲ ವಿಸ್ಮಯ
ಸ್ತಿಮಿತ ಕಟಾಕ್ಷರಕ್ಷತಭಪತ್ತನುವಂ ನಡೆನೋಡಿ ಚೋದ್ಯಮುಂ
ದಮರ್ದತಿ ಭೀತಿಯಿಂ ಪೊಗಳೆ ನಿನ್ನಯ ಸದ್ಗುರುಭಕ್ತಿವೈಭವಂ ೭೫

ಅಂದಿಳೆಯಲ್ಲಿ ರಂಜಿಸಿದುದಿಂದುಮನೂನತರಪ್ರಭಾವದೊ
ಳ್ಸಂದುದು ಸರ್ವಲೋಕಮಱಿವುತ್ತಿರೆ ದೇಶಿಕಸತ್ಕೃಪಾಬ್ಧಿ ಪೂ

ನಿರೀಕ್ಷಿಸುತ್ತ ೭೩-೭೪. 'ಎಲೈ ಗುರುಭಕ್ತನೇ, ನೀನು ತೋರಿಸಿದ ಗುರುಭಕ್ತಿಯು ಮಹಾ ಪ್ರಮಥ ಶ್ರೇಷ್ಠರ, ರುದ್ರ ಭಕ್ತರುಗಳ ಮನೋಹರವಾದ ಭಕ್ತಿಯ ಪದ್ಧತಿಗೆ ಸಮಾನ ವಾದದ್ದಾಗಿದೆ. ನೀನು ಇನ್ನು (ಶೂಲದಿಂದ) ಇಳಿದು ಬರಬೇಕು.' ಎನ್ನುತ್ತ ಆ ಸದ್ಗುರುವು ವಿಶೇಷವಾದ ಕೋಮಲಗೊಂಡ ಮಾತುಗಳಿಂದ ಕರೆಯಲಾಗಿ ನೀನು ಕೈ ಗಳನ್ನು ಮುಂದಕ್ಕೆಚಾಚಿ, ಹಲಗೆಯ ಮೇಲೆಊರಿ, ಉದ್ದವಾಗಿಯೇ ಎದ್ದು, ಶೂಲವು ನಡುಗುವಹಾಗೆ ಅತ್ಯುತ್ಕೃಷ್ಟ ಮಹಿಮೆಯಿಂದ ಹಾರಿ, ಭೂಮಿಗಿಳಿದು, ಜನವೆಲ್ಲ ಹೊಗ ಳುತ್ತಿರಲಾಗಿ, ಗುರುವಿನ ಪಾದಕಮಲಗಳಿಗೆ ನಮಸ್ಕರಿಸಿದವನಾದೆ. ಗುರುಶ್ರೇಷ್ಠನು ನಿನ್ನನ್ನು ಎಳೆದುಕೊಂಡು ಬಿಗಿಯಾಗಿ ಹಿಡಿದು ಅಪ್ಪಿಕೊಂಡು, ಸಂತೋಷದ ಆಧಿಕ್ಯ ದಿಂದ ನೋಡಿ, ಅನುರಾಗದಿಂದ ನಲಿದನಲ್ಲವೇ !' ೭೫. 'ನಿರ್ಮಲವಾದ ತನ್ನ ತೀರ್ಥ ಪ್ರಸಾದಗಳಿಂದ ತೃಪ್ತಿಪಡಿಸುತ್ತ ಖ್ಯಾತಿವೆತ್ತ ಸಂಭ್ರಮವನ್ನು ಅರಳಿಸಿ ರಂಜಿಸು ತ್ತಿರಲು, ಶಿವಭಕ್ತಿ ಸಹೋದರರೆಲ್ಲ (ಶಿವಭಕ್ತಿಯ ವಿಷಯದಲ್ಲಿ ಸಹೋದರರೆನಿಸಿದವ ರೆಲ್ಲ) ಆಶ್ಚರ್ಯದಿಂದ ಕೂಡಿದ ನಿಶ್ಚಂಚಲವಾದ ಕಣ್ಣುಗಳಿಂದ (ನಟ್ಟನೋಟದಿಂದ) ಕೂಡಿ, ಗಾಯವೇ ಇಲ್ಲದಿರುವ ನಿನ್ನ ಶರೀರವನ್ನು ಕಂಡು, ಆಶ್ಚರ್ಯದಿಂದಲೂ ಅತ್ಯಂತ ಭೀತಿಯಿಂದಲೂ, ನಿನ್ನ ಸದ್ಗುರು ಭಕ್ತಿಯನ್ನು ಹೊಗಳಿದರಲ್ಲವೇ' ೭೬. ಹಿಂದಿನ ಕಾಲದಲ್ಲಿ ಪ್ರಕಾಶಿಸಿದ್ದು ಈಗಲೂ ಕೂಡ ಅತ್ಯಧಿಕವಾದ ಮಹತ್ವದಿಂದ ಉಂಟಾಯಿತು. ಹೇ ಶಿವಗಣಗಳ ಸಂತೋಷವೆಂಬ ಕಮಲಗಳ ಗುಂಪಿಗೆ ಸೂರ್ಯ ನಂತಿರುವ ಗುರುಭಕ್ತಾರ್ಯನೇ, ನಿನ್ನ ಈ ಗುರುಭಕ್ತಿಯು ಗುರುಶ್ರೇಷ್ಠನಾದ ಅಮರ

ರ್ಣೇಂದುವಿದಲ್ತೆ ನಿನ್ನ ಗುರುಭಕ್ತಿಮಹತ್ವಪರಂಪರೋರ್ಮಿಕಾ
ಬೃಂದಸುಧಾತರಂಗಿಣಿ ಗಣೋತ್ಸವಪದ್ಮವನಪ್ರಭಾಕರಾ ೭೬

ಆರಜಿವರಯ್ಯ ನಿನ್ನಯು
ಸಾರಾಚಾರಪ್ರಸನ್ನ ಗುರುಭಕ್ತಿಯು ವಿ
ಸ್ತಾರಪ್ರಭಾವಮಂ ಕಾ
ಮಾರಾತಿಯುಮಾದೊಡೊರ್ಮೆ ತಾಂ ತಿಳಿದಪನೇ ೭೭

ಗುರುಪಾದಾಂಬುಜಭೃಂಗ ಸದ್ಗುರುಕರಾಂಭೋಜಾತಜಾತಾಂಗ ಸ
ದ್ಗುರುಸೇವಾಪರತಂತ್ರ ಸದ್ಗುರುಕೃಪಾಲಬ್ಧೇಶಸನ್ಮಂತ್ರ ಸ
ದ್ಗುರುನಾಮಾಮೃತತೃಪ್ತ ಸದ್ಗುರುನಿರೂಪವ್ರಾತಸಂಪ್ರಾಪ್ತ ಸ
ದ್ಗುರುಪಾದಾಂಬುನಿಷಿಕ್ತಸಾರ ಗುರುಭಕ್ತಖ್ಯಾತಿವಿಖ್ಯಾಪಿತಾ ೭೮

ಎಂದಿಂತೆಲ್ಲರ್ಕರಂ ಕೀರ್ತಿಸುತಿರೆ ಬಸವಂ ಕೇಳ್ದು ತಾನೆಯ್ದುತುಂ ನ
ಣ್ಪಿಂದಂ ಮೆಯ್ಯಿಕ್ಕಿ ಕೆಯ್ಯಂ ಮುಗಿದೆಲೆ ಗುರುಭಕ್ತಾರ್ಯ ನಿನ್ನನ್ನರಾರ್ಪೆಂ
ಪೊಂದಿರ್ದೀ ಶ್ರೀಗುರುಶ್ರೀಪದಯುಗಳಲಸದ್ಭಕ್ತಿಯೊಳ್ನೋಳ್ಪೊಡೆಂದಾ
ನಂದಂಬೆತ್ತೊಲ್ದು ಕೊಂಡಾಡುತೆ ಸೊಗಯಿಸಿದಂ ವೀರಶೈವಾಬ್ಧಿಚಂದ್ರಂ ೭೯

ಗೊಂಡ ಮಲ್ಲಿಕಾರ್ಜುನಾರ್ಯನ ಶ್ರೇಷ್ಠದಯೆಯೆಂಬ ಸಮುದ್ರಕ್ಕೆ ಚಂದ್ರನಂತೆ (ಅವನ) ಮಹಿಮೆಯ ಪರಂಪರೆಯೆಂಬ ತೆರೆಗಳ ಗುಂಪುಳ್ಳ ಅಮೃತದ ಪ್ರವಾಹವೇ ಅಲ್ಲವೇ ? ೭೭. 'ಅಯ್ಯ, ನಿನ್ನ ಶ್ರೇಷ್ಠವಾದ ಆಚಾರದಿಂದ ಪರಿಶುದ್ಧವಾದ ಗುರುಭಕ್ತಿಯ ಈ ವಿಸ್ತಾರವಾದ ಪ್ರಭಾವವನ್ನು, ಯಾರು ತಿಳಿಯಲು ಶಕ್ಯ ? ಶಿವನಾದರೂ ಅವನು ಒಂದು ಸಲ ತಿಳಿದಾನೇ ?' ೭೮. 'ಗುರುವಿನ ಪಾದ ಕಮಲಕ್ಕೆ ಭೃಂಗಸ್ವರೂಪನೂ, ಶ್ರೇಷ್ಠ ಗುರುವಿನ ಹಸ್ತ ಕಮಲದಿಂದ ಹುಟ್ಟಿದ (ಅನುಗ್ರಹ) ದೇಹವುಳ್ಳವನೂ, ಶ್ರೇಷ್ಠ ಗುರುವಿನ ಸೇವೆಯಲ್ಲಿ ಆಸಕ್ತನಾದವನೂ, ಶ್ರೇಷ್ಠ ಗುರುವಿನ ದಯೆಯಿಂದ ಪಡೆಯಲ್ಪಟ್ಟ ಶಿವಮಂತ್ರವನ್ನುಳ್ಳವನೂ, ಸದ್ಗುರುವಿನ ನಾಮವೆಂಬ ಅಮೃತದಿಂದ ತೃಪ್ತಿಗೊಂಡವನೂ, ಸದ್ಗುರುವಿನ ಆಜ್ಞೆಯ ಸಮೂಹವನ್ನು ಹೊಂದಿದವನೂ, ಒಳ್ಳೆಯ ಗುರುವಿನ ಪಾದೋದಕದಿಂದ ಅಭಿಷೇಕಗೊಂಡವನೂ, ಒಳ್ಳೆಯ ನಡತೆಯಿಂದುಂಟಾದ ಪ್ರಸಿದ್ಧಿಯಿಂದ ಪ್ರಚುರಪಡಿಸಲ್ಪಟ್ಟವನೂ ಆದ ಶ್ರೇಷ್ಠ ಭಕ್ತಿಸಾರವುಳ್ಳ ಗುರುಭಕ್ತನೇ !' ೭೯. ಹೀಗೆನ್ನುತ್ತ ಎಲ್ಲರೂ ವಿಶೇಷವಾಗಿ ಹೊಗಳುತ್ತಿದ್ದರು. (ಇದನ್ನು) ವೀರಶೈವವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ಬಸವಣ್ಣನು ಕೇಳಿ, ಅವನು ಅಲ್ಲಿಗೆ ಬಂದು, ವಿನಯದಿಂದ ನಮಸ್ಕರಿಸಿ, ಕೈ ಜೋಡಿಸಿ 'ಎಲೈ ಗುರು ಭಕ್ತಾರ್ಯನೇ, ವಿಚಾರಿಸಿ ನೋಡಿದರೆ ಘನತೆ ಹೊಂದಿರುವ ಈ ಶ್ರೀ ಗುರುವಿನ ಮಂಗಳಕರವಾದ ಪಾದದ್ವಯಗಳ ಪ್ರಕಾಶಿಸುವ ಭಕ್ತಿಯಲ್ಲಿ ನಿನ್ನಂಥವರಾರಿದ್ದಾರೆ ?' ಎಂದು ಆನಂದಗೊಂಡು ಪ್ರೀತಿಯಿಂದ ಕೊಂಡಾಡುತ್ತ ಸೊಗಸು

ಗುರುಭಕ್ತನಮಳಚರಿತಮ
ನುರುಮುದದಿಂದೋದೆ ಕೇಳೆ ಬಿಡದಪ್ಪುದು ಸ
ದ್ಗುರುಪದಸುಭಕ್ತಿ ಸರ್ವೋ
ತ್ತರಸುಖಸುಜ್ಞಾನಸಂಪದಂ ಶಿವಕೃಪೆಯಿಂ ೮೦

ಮಂಗಳಾಂಗಿ ಮಂಜುಳಾಂಬುಜಾಸ್ಯೆ ವಿಶ್ವವಿಶ್ರುತೇ
ಭೃಂಗವೇಣಿ ಶಂಕರಾಂಕಪೀಠಿಕಾಸಮಾಶ್ರಿತೇ
ತುಂಗದಾನವಾರಿ ವಾರಿಜೋದ್ಭವಾದಿವಂದಿತೇ
ಸಾಂಗವೇದವೇದ್ಯೆ ರಕ್ಷಿಸೆನ್ನನದ್ರಿರಾಟ್ಸುತೇ ೮೧

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಗುರುಭಕ್ತಗುರುಭಕ್ತಿಮಹತ್ವಕಥನಂ

ಸಪ್ತವಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೨೭ಕ್ಕೆ ಪದಗಣನೆ ೧೯೯೮ಕ್ಕೆ ಮಂಗಳಮಹಾ ಶ್ರೀ॥

ಗೊಂಡಿದ್ದನು. ೮೦. ಗುರುಭಕ್ತನ ಈ ಪರಿಶುದ್ಧ ಚರಿತ್ರೆಯನ್ನು ವಿಶೇಷ ಪ್ರೀತಿಯಿಂದ ಓದಿದರೆ, ಕೇಳಿದರೆ, ಶಿವನ ಕೃಪೆಯಿಂದ ಸದ್ಗುರುವಿನ ಪಾದ ಭಕ್ತಿಯೂ, ಸಕಲಕ್ಕೂ ಉತ್ಕೃಷ್ಟವಾದ ಸೌಖ್ಯವನ್ನುಂಟುಮಾಡುವ ಒಳ್ಳೆಯ ಜ್ಞಾನ ಸಂಪತ್ತೂ ತಪ್ಪದೆ ಉಂಟಾಗುವುದು. ೮೧. ಮಂಗಲ ಶರೀರಿಯೇ, ಮನೋಹರ ಕಮಲದಂತಹ ಮುಖವುಳ್ಳವಳೇ, ವಿಶ್ವವಿಖ್ಯಾತಳೇ, ಭೃಂಗದಂತಿರುವ ಜಡೆಯುಳ್ಳವಳೇ, ಶಂಕರನ ತೊಡೆಯೆಂಬ ಪೀಠವೇ ಆಶ್ರಯವಾಗಿ ಉಳ್ಳವಳೇ, ಉನ್ನತರಾದ ವಿಷ್ಣು, ಬ್ರಹ್ಮ ಇವರುಗಳಿಂದ ನಮಸ್ಕರಿಸಿಕೊಳ್ಳುವವಳೇ, ಸಂಪೂರ್ಣವಾದ ವೇದಗಳಿಂದ ತಿಳಿಯಲ್ಪಡುವುದಕ್ಕೆ ಯೋಗ್ಯಳಾದವಳೇ, ಪರ್ವತರಾಜ ಪುತ್ರಿಯೇ ನನ್ನನ್ನು ರಕ್ಷಿಸು.

ಇಪ್ಪತ್ತೇಳನೆಯ ಆಶ್ವಾಸವು ಸಮಾಪ್ತವಾಯಿತು.

# ಅಷ್ಟವಿಂಶಾಶ್ವಾಸಂ

## [ಗುರುಭಕ್ತಾಂಡಾರಿಯ ಕಥೆ]

ಶ್ರೀಗುಹಜನನೀಮಧುರಿಮ
ರಾಗಾಧರರಸರಸಜ್ಞನಮಳಿನಯಮಿಚೇ
ತೋಗತನನುಪಮನಿಗಮಕ
ಳಾಗುರುವೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಆಗಳ್ಗುರುಭಕ್ತಭಕ್ತಿಮಹತ್ವದರ್ಶನಜನಿತಹರ್ಷೋದಯಂ ಚನ್ನಬಸವಂ ಬಸವಂಗೆ ಜಿಗುತೆಮ್ಮ ಪುರಾತನರೊಳಿಂತಪ್ಪ ಗುರುಭಕ್ತಿಧುರಂಧರರೊಳರೆ ಬೆಸಸಿಮೆನೆ ವೃಷೇಂದ್ರಂ ಗಣನಿವಹಮಾನಂದದಿನಾಕರ್ಣಿಸೆ ಪೇಳ್ದನದೆಂತೆನೆ—

ಜಲಧರಚುಂಬಿ ಚಂದ್ರಮಣಿಸಾಲಮುದಂಚಿತ ಭರ್ಮಹರ್ಮ್ಯಸಂ
ಕುಳಮತಿ ಸಂಪದೋಜ್ವಲಗೃಹಾವಳಿ ಸಂತತ ದಿವ್ಯಭೋಗಮಂ
ಜುಲಮನುಜಾಳಿ ಲೋಚನಸಮುತ್ಸವಕಾರಿ ಪುರೋಪವೀಥಿ ನಿ
ಶ್ಚಲರುಚಿ ಬೆಜ್ಜವಾಡಪುರಮೊಪ್ಪುಗುಮುರ್ವಿಗಪೂರ್ವಶೋಭೆಯಿಂ ೨

### ಗುರು ಭಕ್ತಾಂಡಾರಿಯ ಕಥೆ

೧. ಮಂಗಳಕರಳೂ, ಷಣ್ಮುಖ ಮಾತೆಯೂ ಆದ ಪಾರ್ವತಿಯ ಮಾಧುರ್ಯದಿಂದ ಕೂಡಿದ ಕೆಂಪು ಬಣ್ಣದ ಅದರ ರಸದ ರಸಜ್ಞನೂ, ನಿರ್ಮಲರಾದ ಋಷಿ ಜನರ ಮನಸ್ಸಿನ ಕೊನೆಯಲ್ಲಿರುವವನೂ, ಅನುಪಮವಾದ ವೇದ ವಿದ್ಯೆಯ ಉಪದೇಶಕರ್ತನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನು ಈಯಲಿ. ವ ॥ ಆಗ ಗುರುಭಕ್ತನ ಭಕ್ತಿಯ ಮಹತ್ವವನ್ನು ಅರಿತುದರಿಂದ ಉಂಟಾದ ಹರ್ಷದ ಅತಿಶಯದಿಂದ ಚೆನ್ನ ಬಸವಣ್ಣನು ಬಸವಣ್ಣನಿಗೆ ನಮಸ್ಕಾರ ಮಾಡುತ್ತ 'ನಮ್ಮ ಪುರಾತನರಲ್ಲಿ ಇಂತಹ ಗುರುಭಕ್ತಿ ಧುರಂಧರರು ಇರುವರೇ ? ಹೇಳಿರಿ' ಎನ್ನಲು ಬಸವೇಶ್ವರನು ಶಿವಗಣ ಸಮೂಹವೆಲ್ಲ ಆನಂದದಿಂದ ಕೇಳುತ್ತಿರಲು ಹೇಳುತ್ತಿದ್ದನು, ಅದು ಹೇಗೆಂದರೆ : ೨. ಮೇಘ ಮಂಡಲವನ್ನು ಮುಟ್ಟಿದ ಚಂದ್ರಕಾಂತ ಶಿಲಾ ನಿರ್ಮಿತ ಕೋಟೆಯುಳ್ಳ, ಅತ್ಯುತ್ಕೃಷ್ಟವಾದ ಸುವರ್ಣ ನಿರ್ಮಿತ ಉಪ್ಪರಿಗೆಗಳಗುಂಪುಳ್ಳ, ಅತ್ಯಂತ ಹೆಚ್ಚಿನ ಸಂಪತ್ತುಳ್ಳ ಮನೆಗಳ ಸಾಲಿನಿಂದ ಕೂಡಿದ, ಸತತವೂ ಶ್ರೇಷ್ಠ ಸೌಖ್ಯದಿಂದ ಮನೋಹರರಾದ ಜನಸಮೂಹವುಳ್ಳ, ನೋಟಕ್ಕೆ ಅತ್ಯಂತ ಸಂತೋಷಗೊಳಿಸುವ ನಗರದ ಮಧ್ಯಮಾರ್ಗಗಳುಳ್ಳ, ಸ್ಥಿರವಾದ ಕಾಂತಿಯಿಂದ ಕೂಡಿದ 'ಬೆಜ್ಜವಾಡ' ಎಂಬ ಪಟ್ಟಣವು ಭೂ

ವರಪುಣ್ಯಜನೋತ್ಕರಭಾ
ಸ್ವರಮುರುವಿಬುಧೇಂದ್ರಶೋಭಿ ಘನಭೋಗಿಸಮು
ತ್ಕರರುಚಿರಂ ಕಿನ್ನರಪುರ
ಸುರವರಪುರನಾಗಪುರಮನದು ಪೋಲ್ತೆಸೆಗುಂ ೩

ಆ ಪುರಮನಾಳ್ವನನುಪಮ
ರೂಪಂ ಗುರುಭಕ್ತಿತತ್ಪರಂ ನಯವಿನಯಾ
ಲಾಪಂ ವಿಶ್ರುತಕೀರ್ತಿಕ
ಲಾಪಂ ಗುರುಭಕ್ತರಾಜನೆಂಬವನೀಶಂ ೪

ಗುರುಚರಣಸಪರ್ಯಾಪರ
ನುರುತರ ಗುರುನಾಮಜಾಪಕಂ ಗುರುವರಭಾ
ಸುರಕಾರ್ಯಧುರ್ಯನಮಳಿನ
ಗುರುಮೂರ್ತಿಧ್ಯಾನಲೀನಮಾನಸಮಹಿತಂ ೫

ವೀರವ್ರತನಿಧಿ ವಿತತಯ
ಶೋರಂಜಿತನಂಬುರಾಶಿಗಾಂಭೀರ್ಯಗುಣಾ
ಧಾರಂ ಸಾರಾಸಾರವಿ
ಚಾರಪರಂ ಶರಣಗಣಸಮರ್ಚನಲೋಲಂ ೬

ಮಂಡಲದಲ್ಲಿ ಅಪೂರ್ವ ಶೋಭೆಯಿಂದ ಒಪ್ಪುತ್ತಿತ್ತು. ೩. ಪುಣ್ಯವಂತರೂ, ಪರಿಶುದ್ಧರೂ ಆದ ಜನರ ಸಮೂಹವುಳ್ಳ (ಶ್ರೇಷ್ಠರಾದ ಪುಣ್ಯಜನರೆಂದರೆ ಯಕ್ಷರೆಂಬ ಜನರ ಗುಂಪುಳ್ಳ) ಆ ಪಟ್ಟಣವು ಕಿನ್ನರರ ಅಲಕಾವತಿ ಪಟ್ಟಣವನ್ನು ಸರಿಗಟ್ಟಿ, ಉತ್ಕೃಷ್ಟರಾದ ಪಂಡಿತ ಶ್ರೇಷ್ಠರಿಂದ ಪ್ರಕಾಶಿಸುವ (ಉತ್ಕೃಷ್ಟರಾದ ದೇವತಾಸಮಾನರಿಂದ ಪ್ರಕಾಶಿಸುವ) ಅದು ದೇವೇಂದ್ರನ ಅಮರಾವತಿಯನ್ನು ಸರಿಗಟ್ಟಿ, ಶ್ರೇಷ್ಠರಾದ ಭೋಗಿಜನ ಸಮೂಹದಿಂದ ಮನೋಹರವಾದ (ಉತ್ಕೃಷ್ಟ ಸರ್ಪಗಳ ಸಮೂಹದಿಂದ ಮನೋಹರವಾದ) ಅದು ನಾಗಗಳ ಪಟ್ಟಣ ಎಂದರೆ ಪಾತಾಳಲೋಕವನ್ನು ಸರಿಗಟ್ಟಿ ಮೆರೆಯುತ್ತಿತ್ತು. ೪. ಆ ಪಟ್ಟಣವನ್ನು ಅಸದೃಶ ಆಕಾರವುಳ್ಳವನೂ, ಗುರುಭಕ್ತಿ ತತ್ಪರನೂ ನೀತಿ ನಮ್ರತೆಗಳಿಂದ ಕೂಡಿದ ಮಾತುಳ್ಳವನೂ, ಪ್ರಸಿದ್ಧವಾದ ಯಶಸ್ಸೇ ಆಭರಣವಾಗಿ ಉಳ್ಳವನೂ ಆದ ಗುರುಭಕ್ತರಾಜ ಎಂಬ ಭೂಮಿಾಶ್ವರನು ಆಳುತ್ತಿದ್ದನು. ೫. (ಅವನು) ಗುರುವಿನ ಪಾದಪೂಜೆಯಲ್ಲಿ ಆಸಕ್ತನಾದವನು ; ಉತ್ಕೃಷ್ಟವಾದ ಗುರುನಾಮವನ್ನು ಜಪಿಸುವವನು; ಗುರುಶ್ರೇಷ್ಠನ ಸಂಬಂಧವಾದ ಕೆಲಸ ಮಾಡುವುದರಲ್ಲಿ ಸಮರ್ಥನು ; ನಿರ್ಮಲವಾದ ಗುರುಸ್ವರೂಪವನ್ನು ಧ್ಯಾನಿಸುವುದರಲ್ಲಿ ಆಸಕ್ತವಾದ ಮನಸ್ಸಿನಿಂದ ಪೂಜ್ಯನಾದವನು ಎನಿಸಿದ್ದನು. ೬. (ಅವನು) ವೀರಶೈವಮತದ ವ್ರತಕ್ಕೆ ನಿಧಿಯಂತಿದ್ದನು; ವಿಸ್ತಾರವಾದ ಕೀರ್ತಿಯಿಂದ ಪ್ರಕಾಶಿಸುತ್ತಿದ್ದನು ; ಸಮುದ್ರದಂತೆ ಗಾಂಭೀರ್ಯಕ್ಕೆ ಆಶ್ರಯನಾಗಿದ್ದನು; ಒಳ್ಳೆಯದು, ಕೆಟ್ಟದ್ದು ಎಂಬುದನ್ನು ವಿಚಾರ ಮಾಡುವುದರಲ್ಲಿ ಆಸಕ್ತನಾಗಿದ್ದನು. ಶಿವಶರಣರ ಪೂಜೆಯಲ್ಲಿ ಆಸಕ್ತನೆನಿಸಿದ್ದನು.

ಎಂಬ ನೆಗಳ್ತೆಯನಾಳ್ದಳಿ
ಕಾಂಬಕನಂ ಪೂಜೆಗೆಯ್ವುತುಂ ಶಂಭುಕಥಾ
ಡಂಬರಮನಾಲಿಸುತೆ ಸುಗು
ಣಾಂಬುಧಿ ಗುರುಭಕ್ತರಾಜನೊಪ್ಪುತ್ತಿರ್ದಂ ೭

ತೆಂಕಣಗಾಳಿ ತೀಡೆ ಗಿಳಿಗಳ್ನಲಿದಾಡೆ ಮದಾಳಿ ಪಾಡೆ ಮಾ
ವಂಕುರವೇಱೆ ಮಾಧವಿಗೆ ಬೇಱೆ ಮುಗುಳ್ತಲೆದೋಱೆ ಪೂಸರಂ
ಬಿಂಕಮನಾಳೆ ಪದ್ಮತತಿ ತಾಳೆ ವಿಳಾಸಮನೇಳೆ ಕೋಕಿಲಾ
ಸಂಕಲಿತಸ್ವರಂ ಮಿಸುಗೆ ಚಂದುದು ಸನ್ಮಧುಮಾಸಮುರ್ವಿಯೊಳ್ ೮

ಘನಶಿಶಿರೇಂದುವಸ್ತಮಿಸೆ ಕೋಕಿಲಕುಕ್ಕುಟರಾಜಿ ಕೂಗೆ ಮಾ
ವಿನ ಪೊಸ ಚಂದಳಿರ್ಸುಸಿಲ ಸಂಜೆಯದಾಗೆ ಪಳಂಚನಬ್ಜಕಾ
ನನಮಲರ್ದೊಪ್ಪೆ ಕೈರವದ ಸೊಂ[1]ಪಳಿವುತ್ತಿರೆ ಕೂರ್ತರೆಂಬನ
ಚ್ಚಿನ ಪೊಣರ್ವಕ್ಕಿಗ[2]ಳ್ನೆಱೆಯೆ ಮೂಡಿದುದಲ್ತೆ ವಸಂತಭಾಸ್ಕರಂ ೯

ಪೊಸ ಜೊನ್ನಂ ತನ್ನ ಕೀರ್ತಿಪ್ರಭೆ ಪಸರಿಸಿತೆಂಬಂತೆ ಸೊಂಪೇಱೆ ಬಲ್ಚಂ
ಬಿಸಿಲಾತ್ಮೀಯಪ್ರತಾಪಂ ಕವಿದವೊಲೆಸಕಂದೋಱೆ ಪಾಂಥಾರಿವರ್ಗಂ

೭. ಈ ರೀತಿಯ ಪ್ರಸಿದ್ಧಿಯನ್ನು ಹೊಂದಿ, ಸದ್ಗುಣ ಸಮುದ್ರನಾದ ಆ ಗುರು ಭಕ್ತ ರಾಜನು ಲಲಾಟನೇತ್ರನಾದ ಶಿವನನ್ನು ಪೂಜಿಸುತ್ತ ಶಿವನ ಕಥಾತಿಶಯಗಳನ್ನು ಕೇಳುತ್ತ ಒಪ್ಪುತ್ತಿದ್ದನು, ೮. ತೆಂಕಣ ದಿಕ್ಕಿನ ಗಾಳಿಯು ಬೀಸಲು, ಗಿಳಿಗಳು ಸಂತೋಷದಿಂದ ಆಡಲು, ಮದ ವಿಶಿಷ್ಟ ದುಂಬಿಗಳು ಝೇಂಕಾರವನ್ನು ಮಾಡಲು, (ಗಿಡ ಬಳ್ಳಿಗಳಿಗೆ) ಚಿಗುರಿನ ಮೊಳಕೆಗಳು ಬಿಡಲು, ಮಾಧವೀ ಬಳ್ಳಿಗೆ ಹೊಸದಾದ ಮೊಗ್ಗುಗಳು ಏಳುತ್ತಿರಲು, ಮನ್ಮಥನು ಬಿಂಕವನ್ನು ಹೊಂದುತ್ತಿರಲು, ಕಮಲಗಳ ಸಮೂಹವು ವಿಲಾಸಗೊಳ್ಳಲು, ಕೋಗಿಲೆಗಳ ಸ್ವರಗಳು ಎಲ್ಲ ಕಡೆಗೂ ವ್ಯಾಪಿಸಿ ಹೊರಹೊಮ್ಮುತ್ತಿರಲು, ಶ್ರೇಷ್ಠ ವಸಂತ ಋತುವು ಭೂಮಿಯಲ್ಲಿ ಶೋಭಿಸುತ್ತ ಬಂದಿತು. ೯, ಘನವಾದ ಶಿಶಿರ ಋತುವೆಂಬ ಚಂದ್ರನು ಮುಳುಗಲು, ಕೋಗಿಲೆಗಳೆಂಬ ಕೋಳಿಗಳ ಸಾಲು ಕೂಗುತ್ತಿರಲು, ಮಾವಿನ ಆ ಹೊಸ ಕೆಂಪು ಚಿಗುರು ಬೆಳಗಿನ ಸಂಧ್ಯಾ ಕಾಲವಾಗಿರಲು, (ಪ್ರಾತಃ ಕಾಲವಾಗಿರಲು), ಕಮಲಗಳ ವನವು ಪಳಚ್ಚೆಂದು ಅರಳಿಕೊಂಡು ಶೋಭಿಸಲು, ಕನ್ನೈದಿಲೆಗಳ ಅತಿಶಯವು ಅಳಿದುಹೋಗುತ್ತಿರಲು, ಪ್ರೇಮಿಗಳೆಂಬ ಚಕ್ರವಾಕಪಕ್ಷಿಗಳು ಒಂದನ್ನೊಂದು ಸೇರಲಾಗಿ, ವಸಂತಋತುವೆಂಬ ಸೂರ್ಯನು ಮೂಡಿದನಲ್ಲವೇ ? ೧೦. ಸೂರ್ಯ ಚಂದ್ರರಿಗೆ ಅಭಿವೃದ್ಧಿಯನ್ನುಂಟುಮಾಡುವ, (ಆಪ್ತರಾಜರಿಗೆ ಅಭಿವೃದ್ಧಿಯನ್ನುಂಟುಮಾಡುವ), ಭೂಮಿಗೆ ಪರಿಮಳವನ್ನುಂಟುಮಾಡುವ, (ಭೂಮಿಯ ಜನಕ್ಕೆ ಸಂತೋಷವನ್ನುಂಟುಮಾಡುವ) ವಸಂತನೆಂಬ ರಾಜನು ತನ್ನ ಕೀರ್ತಿಯ ಪ್ರಭೆಯು

1 ಪೆಂ(ಅ) 2 ಳ್ನಲಿ(ಮು)

ಯ್ಯನೆ ಸೆಳೆದೀಕ್ಷಣಾಸ್ತ್ರದಿನೆಸಲ್ಕೆಗಳ್ದಂಗಜನೆಂಬ ಲುಬ್ಧಕೇಂ
ದ್ರನ ಪೊಸತೋಡಿಸೊಡ್ಡಣೆಯಿದೆಂದೆನೆ ಸೌಭಗಮಿದೇಂ ಮನೋಜ್ಞಮೋ ೧೩

ತೊಳಗುವ ತೊಂಡೆವಣ್ಣಿದುಟಿಯುಂ ನೀಲ್ದಲರ್ಗಣ್ಗಳ ಪೂರ್ಣಚಂದ್ರನಂ
ಪಳಿದೆಸೆವಾಸ್ಯಬಿಂಬದ ಘನಸ್ತನದಲ್ಪಸುಮಧ್ಯದುನ್ನತೋ
ಜ್ವಳವಿಳಸನ್ನಿತಂಬದ ಸುವರ್ಣದ ಬಾಳೆಯ ಬಿಲ್ಪಿನೊಳ್ಪೆಯುಂ
ತಳೆದೆಸೆವೂರುಮುಂದಳೆದ ಮೆಲ್ಲಡಿಯುಂದಿಮದೇನಳುಂಬಮೋ ೧೪

ತೊಳಪೆಳಮುತ್ತಿನೇಕಸರಮೊಪ್ಪುವ ಕುಂಕುಮದಣ್ಪು ಕೇತಕೀ
ದಳದವತಂಸಮಾಳ್ದೆಸೆವ ಸೋರ್ಮುಡಿ ಮಲ್ಲಿಗೆ ಜೊಲ್ಲೆಯುಂ ಮನಂ
ಗೊಳಿಪ ಸುವರ್ಣಕಾಂಚಿ ಕನಕಾಂಬರಮುಚಿತರತ್ನಭೂಷಣಾ
ವಳಿ ಮೃಗಭೂಲಲಾಮಮೆಸೆವುತ್ತಿರೆ ಕಾಮಿನಿ ಕಣ್ಗೆ ತೋಱಿದಳ್ ೧೫

ಅಳಿಕಳಭಂಗಳೋ ಕುರುಳಬಂಬಲೊ ಪೂರ್ಣಶಶಾಂಕಬಿಂಬಮೋ
ತೊಳಗುವ ವಕ್ತ್ರಮೋ ಮದನವಾಜಿಯೊ ಪೆರ್ಮೊಲೆಯೋ ಮನೋಜನು
ಜ್ವಳರಥಮೋ ಕಟೀತಟಮೊ ಮಾನಗಜೇಂದ್ರಮೊ ಮಂಜುಳೋರುಮಂ
ಡಳಮೊ ವಿರಾಜಿಪಾ ರಮಣಿಯಂಗಮೊ ಕಾಮನ ಚಾತುರಂಗಮೋ ೧೬

ವನ್ನು ಮರೆಯಲ್ಲಿ ಕುಳ್ಳಿರ್ದು ಎಳೆಯ ಹುಡುಗಿಯರ ಹುಬ್ಬೆಂಬ ಬಿಲ್ಲನ್ನು ಮೆಲ್ಲನೆ ಸೆಳೆದು, ನೋಟವೆಂಬ ಬಾಣದಿಂದ ಹೊಡೆಯುವುದಕ್ಕೆ ಪ್ರಯತ್ನಗೊಂಡಿರುವ ಮನ್ಮಥನೆಂಬ ಬೇಡನ ಹೊಸ ಮುತ್ತಿಗೆಯು ಬಲಿದಿದೆಯೋ ಎಂಬಂತೆ ಆ ಉಪ್ಪರಿಗೆಯು ಏನು ಮನೋಹರವಾಗಿತ್ತೋ ! ೧೪. ಪ್ರಕಾಶಿಸುವ ತೊಂಡೆಯ ಹಣ್ಣಿನಂತಿರುವ ತುಟಿ ಉದ್ದವಾದ ಹೂವಿನಂತಿರುವ ಕಣ್ಣುಗಳು, [illegible] ಚಂದ್ರನನ್ನು ನಿಂದಿಸಿ, ಶೋಭಿಸುವ ಮುಖ ಮಂಡಲ, ದಪ್ಪನಾದ ಮೊಲೆ, ಸಣ್ಣದಾದ ಬಳ್ಳಿಯ ನಡು, ದಪ್ಪನಾಗಿಯೂ, ಮನೋಹರವಾಗಿಯೂ ಪ್ರಕಾಶಿಸುವ ಕಟಿಪ್ರದೇಶ, ಸುವರ್ಣದ ಬಾಳೆಯ ಚೆಲ್ವಿನ ಹಿರಿಮೆಯನ್ನು ಹೊಂದಿ ಶೋಭಿಸುವ ತೊಡೆ, ಮೃದುವಾದ ಕಾಲಿನ ಆ ಚೆಲುವು ಏನು ಅಧಿಕವೋ ! ೧೫. ಹೊಳೆಯುವ ಎಳೆಯ ಮುತ್ತಿನ ಏಕಾವಳಿಸರ, ಶೋಭಿಸುವ ಕುಂಕುಮ ಸುಗಂಧಲೇಪನ. ತಾಳೆ ಹೂವಿನ(ಕೇತಕಿ) ಶಿರೋಭೂಷಣವನ್ನು ಹೊಂದಿ ಶೋಭಿಸುವ ಉದ್ದನೆಯ ಮುಡಿ. ಉದ್ದವಾದ ಜಡೆ, ಮಲ್ಲಿಗೆ ಹೂವಿನ ಅಲಂಕಾರದ ತುರುಬು, ಮನೋಹರವಾದ ಬಂಗಾರದ ನಡುಪಟ್ಟಿ. ಹೊಂಬಣ್ಣದ ಸೀರೆ. ಧರಿಸಲ್ಪಟ್ಟ ರತ್ನಾಭರಣ, ಕಸ್ತೂರಿಯ ಹಣೆಬೊಟ್ಟು ಪ್ರಕಾಶಿಸುತ್ತಿರಲು, ಕಾಮಿನಿಯೊಬ್ಬಳು ಕಣ್ಣಿಗೆ ಕಂಡಳು. ೧೬. ದುಂಬಿಮರಿಗಳೋ, ಕೇಶಗಳ ಸಮೂಹವೋ ! ಪೂರ್ಣಚಂದ್ರನ ಬಿಂಬವೋ ಪ್ರಕಾಶಿಸುವ ಮುಖವೋ ! ಮನ್ಮಥನ ಕುದುರೆಯೋ ಪೆರ್ಮೊಲೆಯೋ ! ಮನ್ಮಥನ ಉಜ್ವಲರಥವೋ, ನಡುವೋ ! ಮನ್ಮಥನ ಗಜಶ್ರೇಷ್ಠವೋ, ಮನೋಹರವಾದ ತೊಡೆಗಳೋ ? ಕಾಮನ ಚತುರಂಗಬಲವೋ, ಶೋಭಿ

ವ॥ ಎನಿಸಿ ರಂಜಿಸಿ ತನ್ನನತಿಮಧುರಸರಸತರಳಾಪಾಂಗದಿನಭೀಕ್ಷಿಸುತ್ತುಮಿರ್ಪಾ[1]—

ಪಣ್ಯಾಂಗನೆಯತಿಶಯ ಲಾ
ವಣ್ಯಮನವಳಂಗದಂದಮುಮನಾಕೆಯ ತಾ
ರುಣ್ಯದ ಸೊಬಗಂ ಕಂಡಂ
ಫಣ್ಯಧಿಪಾಭರಣಚರಣಸರಸಿಜಭೃಂಗಂ ೧೭

ವ॥ ಅಂತು ಕಂಡವಳ ರೂಪಾತಿಶಯಕ್ಕೆ ತಲೆದೂಗಿ ಬೆಱಗುವಟ್ಟು—

ಇವಳತನುರಾಜ್ಯಲಕ್ಷ್ಮಿಯೊ
ಯಿವಳಂಗಜರಾಜಮಂತ್ರಶಕ್ತಿಯೊ ಬಗೆವಂ
ದಿವಳಸಮಾಸ್ತ್ರಂ ಸಲೆ ಭಜಿ
ಸುವ ದೇವಿಯೊಯೆಂದು ಮಗುಳ್ದಭೀಕ್ಷಿಸುತಿರ್ದಂ ೧೮

ವ॥ ಆಗಳ್—

ಲಲನಾನೇತ್ರತ್ರಿಭಾಗದ್ಯುತಿತತಿಮದನಂ ಮಲ್ಲಿಕಾಶೋಕನೀಲೋ
ತ್ಪಲವೆಂಬೀ ಮೂಱು ಬಾಣಂಗಳನಸವಸದಿಂದೊರ್ಮೆ ತೊಟ್ಟೆಚ್ಚನಂಬಂ
ತಲದೊರ್ಪ್ಪಂಬೆತ್ತು ಬೇಗಂ ಪರಿದವನೆರ್ದೆಯೊಳ್ನಾಂಟಿ ತತ್ಕಾಲಮಂ ಪಾ
ರ್ದಲರಂಬಂ ಮಾಣದೇಂ ನಾಂಟಿಸಿದನೊ ರಮಣೀಲೋಕರಾಜಂ ಮನೋಜಂ ೧೯

ಸುವ ಆ ವೇಶ್ಯೆಯ (ಹೆಂಗಸಿನ) ಶರೀರವೋ ! ವ॥ ಹೀಗೆನಿಸಿ ಶೋಭಿಸುತ್ತ ತನ್ನನ್ನು ಬಹುಮಧುರವಾಗಿಯೂ, ಮನೋಹರವಾಗಿಯೂ, ಚಂಚಲವಾಗಿಯೂ ಇರುವ ಕಡೆಗಣ್ಣುಗಳಿಂದ ನೋಡುತ್ತಿರುವಾಗ. ೧೭. ಆದಿಶೇಷನನ್ನು ಭೂಷಣವಾಗಿ ಉಳ್ಳ ಶಿವನ ಪಾದ ಕಮಲಕ್ಕೆ ಭ್ರಮರಪ್ರಾಯನಾದ ಗುರುಭಕ್ತ ರಾಜನು ಆ ಸೂಳೆಯ ಅತಿ ಶಯವಾದ ಲಾವಣ್ಯವನ್ನೂ ಅವಳ ಶರೀರದ ಚೆಲುವನ್ನೂ, ಆಕೆಯ ತಾರುಣ್ಯದ ಸೊಗಸನ್ನೂ ಕಂಡು ವ॥ ಆ ರೀತಿ ಕಂಡ ಅವಳ ರೂಪಾತಿಶಯಕ್ಕೆ ತಲೆದೂಗಿ, ಆಶ್ಚರ್ಯ ಪಟ್ಟು ೧೮. ಇವಳೇನು ಮನ್ಮಥನ ರಾಜ್ಯಲಕ್ಷ್ಮಿಯೋ ? ಇವಳು ಅನಂಗನ ಮಂತ್ರಾಭಿಮಾನಿ ದೇವತೆಯೋ ? ಯೋಚಿಸುವಲ್ಲಿ ಇವಳು ಮನ್ಮಥನು ಚೆನ್ನಾಗಿ ಸ್ತೋತ್ರ ಮಾಡುವ ದೇವಿಯೋ ? ಎಂದು ಪುನಃ ದಿಟ್ಟಿಸಿ ನೋಡುತ್ತ ಇದ್ದನು. ವ॥ ಆಗ. ೧೯. ಮನ್ಮಥನು ಮಲ್ಲಿಗೆ, ಅಶೋಕ, ನೀಲೋತ್ಪಲಗಳೆಂಬ ಮೂರೇ ಬಾಣಗಳನ್ನು ಅವಸರದಿಂದ ಒಮ್ಮೆ ಬಿಲ್ಲಿಗೆ ಹೊಡಿ, ಹೊಡೆದನೋ ಎಂಬಂತೆ ಈ ಲಲ ನೆಯ ಕಣ್ಣಿನ ಮೂರು ಭಾಗಗಳಾದ ಮೊದಲು ಕೊನೆಯ, ಮಧ್ಯ ಭಾಗಗಳಲ್ಲಿರುವ (ಕ್ರಮವಾದ) ಬಿಳುಪು, ಕೆಂಪು, ಕಪ್ಪು ಕಾಂತಿಗಳು ಅರಳಿ ಒಪ್ಪವನ್ನು ಹೊಂದಿ ಬೇಗನೆ ಹರಿದು ಹೋಗಿ ಅವನ ಎದೆಯಲ್ಲಿ ನಾಟಿದವು. ಸ್ತ್ರೀ ಜನಗಳಿಗೆ ಅಧಿಪತಿಯಾದ ಮನ್ಮ ಥನು ಅದೇ ಸಮಯವನ್ನು ಕಾಯುತ್ತ ತಪ್ಪದೆ ಹೂವಿನ ಬಾಣಗಳನ್ನು ಅದೇನು ನಾಟಿ

1 + ಗಳ್ (ಅ, ಮು, ಚ)

ಇಸೆ ಬಗೆಯನುರ್ಚಿ ಧೈರ್ಯದ
ಬೆಸುಗೆಯ ಬಿಗುಪಂ ಸಡಿಲ್ಚಿ ಕಾಮಾಗ್ನಿಯ ಬ
ಲ್ಬಿಸುಪಂ ತನುವಿನೊಳೆತ್ತಂ
ಪಸರಿಸಿತದು ಭೂಮಿಪಾಲಚೂಡಾಮಣಿಯಾ ೨೦

ನಡೆಗಿಡೆ ಚಿತ್ತಂ ಧೃತಿಲತೆ
ಕುಡಿಗಿಡೆ ಮನಸಿಜ ವಿಕಾರತತಿಮಾನಸದೊ
ಳ್ತಡೆಗಿಡೆ ಕೈಯಂಕುಶಮದು
ಪಡಲಿಡೆ ಧರಣಿಯೊಳೆ ವಿರಹವಿಹ್ವಳನಾದಂ ೨೧

ವ॥ ಅಂತು ವಿರಹವಿಷಾದವಿಧುರಿತನಾಗಿ ತಾಂ ವಿವೇಕನಿಧಿಯಪ್ಪುದಱಿಂ ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತವಿಸಿಕೊಂಡು ತನ್ನೊಳಿಂತೆಂದಂ—

ಕಾಮಿನಿಯಪಾಂಗರುಚಿಸೌ
ದಾಮಿನಿ ಪಾಱಿಸಿದುದೆನ್ನ ಧೃತಿಹಂಸನನಿ
ನ್ನೇಮಾತೊ ಕಾಮಸಂಬಂ ನಿ
ಕಾಮಂ ನಟ್ಟುರ್ಚಿ ಪಾಯ್ದುದೆನ್ನಯ ಮನಮಂ ೨೨

ವ॥ ಎಂದು ನೊಂದು ಕಜ್ಜದುಜ್ಜವಣೆಯಂ ವಿಚಾರಿಸಿ—

ಸಿದನೋ ! ೨೦. ಆ ಬಾಣವನ್ನು ಪ್ರಯೋಗಿಸಲು ಆ ರಾಜಶ್ರೇಷ್ಠನ ಮನಸ್ಸನ್ನು ಭೇದಿಸಿ, ಧೈರ್ಯದ ಬೆಸುಗೆಯ ತೀಕ್ಷ್ಣತೆಯನ್ನು ಸಡಿಲುಗೊಳಿಸಿ, ದೇಹದ ಎಲ್ಲ ಕಡೆಗೂ ಕಾಮಾಗ್ನಿಯ ಹೆಚ್ಚಾದ ಬಿಸಿಯು ಪ್ರಸರಿಸಿತು. ೨೧. ಚಿತ್ತವು ನಡೆಗೆಟ್ಟಿತು ; ಧೈರ್ಯವೆಂಬ ಬಳ್ಳಿಯು ಕುಡಿಚಾಚುವುದು ನಿಂತಿತು (ಕುಡಿಗೆಟ್ಟಿತು) ; ಮನಸ್ಸಿನಲ್ಲಿ ಮನ್ಮಥ ಸಂಬಂಧವಾದ ವಿಕಾರಗಳ ಸಮೂಹವು ನಿಂತುಕೊಂಡಿತು ; ಕಯ್ಯಲ್ಲಿ ಹಿಡಿದ ಆ ಅಂಕುಶವು (ಜಾರಿ) ಭೂಮಿಯ ಮೇಲೆ ಬಿದ್ದಿತು ; ವಿರಹದಿಂದ ವ್ಯಾಕುಲಗೊಂಡನು. ವ॥ ಈ ರೀತಿ ವಿಯೋಗದಿಂದುಂಟಾದ ಮನಸ್ಸಿನ ಕ್ಲೇಶದಿಂದ ವ್ಯಾಕುಲಗೊಂಡವನಾಗಲು, ತಾನು ವಿವೇಕ ನಿಧಿಯಾದ್ದರಿಂದ ಚಂಚಲಗೊಂಡ ಇಂದ್ರಿಯಗಳನ್ನು ಮೆಲ್ಲನೆ ಸಮಾಧಾನಪಡಿಸಿಕೊಂಡು, ತನ್ನಲ್ಲಿಯೇ ಹೀಗೆಂದುಕೊಂಡನು. ೨೨. ಈ ಕಾಮಿನಿಯ ಕಡೆಗಣ್ಣಿನ ಕಾಂತಿಯೆಂಬ ಮಿಂಚು, ನನ್ನ ಧೈರ್ಯವೆಂಬ ಹಂಸ ಪಕ್ಷಿಯನ್ನು ಹಾರಿಸಿತು. ಹೇಳುವುದಿನ್ನೇನುಂಟೋ ! ಕಾಮನ ಬಾಣವು ಅತ್ಯಂತವಾಗಿ ನನ್ನ ಮನಸ್ಸನ್ನು ಹೊಕ್ಕು ಭೇದಿಸಿ ಹೊರ ಹೊರಟಿತು. ವ॥ ಹೀಗೆಂದು ನೊಂದುಕೊಂಡು ಕಾರ್ಯದ ಮಹತ್ವವನ್ನು

ಸುದತಿಯಿವಳ್ಶಿವನ
ಪದಭಕ್ತೆ ಗಡೀಕೆಯೊಡನೆ ನೆರೆವೊಡದರಿಂ ಸೌ
ಖ್ಯದ ಸವಿಯನೀಶ್ವರಂಗೊ
ಪ್ಪಂದಲರ್ಪಿಸಿ ಕೊಳ್ವೆನೆನಗದಾವುದೊ ದೋಷಂ ೨೩

ಸಂದಿಸಿಯದ್ಯದಾತ್ಮಹಿತಮೆಂದೆನಿತುಂ ಸಲೆ ಮೈಥುನೇ ರತೇ:
ಯೆಂದೆನುತುಂ ಪುರಾತನರ ಶೈವಪುರಾಣಸುವಾಕ್ಯಮುಂಟು ಬೇ
ಱೊಂದೆನಿಸಿರ್ದ ಪಕ್ಷದಿಂದು ಸಲ್ವುದು ಭಕ್ತಿಯುತಂಗೆ ದೋಷಮಾ
ವಂದದಿನಪ್ಪುದೀಕೆಯ ರತಕ್ಕೆ ವಿಚಾರಿಸಿ ನೋಡೆ ನಾಡೆಯುಂ ೨೪

೨೫ ವ॥ ಅದಱಿನೀ ಗಣಿಕಾಂಗನೆಯನನವರತಮನುಭವಿಪೆನೆಂದು ನಿರ್ಧರಿಸಿ ನಿಜಗೃಹಾಗತನವಳ್ಗೆ ತಕ್ಕ ಧನಕನಕವಸನರತ್ನಾಭರಣಾದಿಗಳನಾಪ್ತಹಿತನ ಕೆಯ್ಯೊಳಿತ್ತವಳೊತ್ತೆಗಳುವಲೊಡನವಂ ತಂದು ನೀಡೆ ನ ತ್ತಕಾಱಿನೊತ್ತೆಯನೊಲ್ಲೆನಿತ್ತ ಬಾರದಿರೆಂದು ವಿಡಂಬಿಸಿ ನುಡಿಯೆ ದೂತಂ ನಿಜನಾಥನಿರ್ದೆಡೆಗೆೞ್ತಂದವಳೊತ್ತೆಯನೊಲ್ಲದೊತ್ತರಿಸಿ ಬಿತ್ತರಿಸಿದುದನೆಲ್ಲಮಂ ಸವಿಸ್ತರಂ ಪೇಳೆ ಮೋಹಾತುರಂ ಕೇಳ್ದವಳ ಪೆರ್ಚೆ ಮನೆಯೆಡೆಗೆ ಗುರುಭಕ್ತರಾಜಂ ತಾನೆ ಬಂದು ತನ್ನ ನಿತಂಬಿನಿಯನಭಿನವರಾಗರಸಭರಿತದೃಷ್ಟಿಯಿನವಲೋಕಿಸಿ ಸದೈನ್ಯಮಧುರಾಲಾಪದಿನಿಂತೆಂದಂ—

ನೆನೆದು ೨೩. ಸೂಳೆಯಾದ ಈ ಸ್ತ್ರೀಯು ಶಿವನ ಪಾದಭಕ್ತೆಯಲ್ಲವೇ ? ಇವಳೊಡನೆ ಕೂಡಿ, ಉಂಟಾಗುವ ಸೌಖ್ಯದ ಸವಿಯನ್ನು ಈಶ್ವರನಿಗೆ ಒಪ್ಪ ನಿಶ್ಚಯವಾಗಿ ಅರ್ಪಿಸಿಕೊಳ್ಳುವೆನು. ಇದರಲ್ಲಿ ನನಗೆ ದೋಷವೇನಾದೀತು ! ೨೪. ಯಾವುಯಾವುದು ಆತ್ಮಹಿತವಾದುದೆನಿಸಿ ಒದಗಿಬರುವುದೋ ಅದು ಒಂದು ಪಕ್ಷದಲ್ಲಿ ಮೈಥುನ ಕ್ರಿಯೆಯಲ್ಲಿ ಆಸಕ್ತಿಯುಳ್ಳದ್ದೆನಿಸಿದ್ದಾಗಿದ್ದರೂ. ಭಕ್ತಿಯುತರಿಗೆ ಸಲ್ಲುವುದೆಂದು, ಸ್ಪಷ್ಟವಾಗಿ ಹೇಳಿರುವ ಶೈವ ಪುರಾಣದ ಒಂದು ಒಳ್ಳೆಯ ಮಾತು ಉಂಟು. (ಆದ್ದರಿಂದ) ಇವಳೊಡನೆ ರತಿ ಸಂಬಂಧವಾದ ವ್ಯವಹಾರ ವಿಷಯದಲ್ಲಿ ವಿಚಾರಿಸಿ ನೋಡಿದರೆ ದೋಷವು ಯಾವರೀತಿಯಿಂದ ಉಂಟಾಗಲು ಸಾಧ್ಯ ? ವ॥ ಆದ್ದರಿಂದ ಈ ವೇಶ್ಯಾಸ್ತ್ರೀಯನ್ನು ನಿಜವಾಗಿ ಅನುಭವಿಸುವೆನು, ಎಂದು ನಿರ್ಧಾರಮಾಡಿ, ತನ್ನ ಮನೆಗೆ ಬಂದು, ಆ ವೇಶ್ಯೆಗೆ ತಕ್ಕ ಧನ, ಕನಕ, ವಸ್ತ್ರ, ರತ್ನಾಭರಣಾದಿಗಳನ್ನು ತನ್ನ ಸ್ನೇಹಿತನ ಕೈಯಲ್ಲಿ ಕೊಟ್ಟು ಒತ್ತೆಯ ಹಣವನ್ನು ಕಳಿಸಲಾಗಿ ಕೂಡಲೇ ಅವನು ತಂದುಕೊಡಲು, ಅವಳು ಒತ್ತೆಯ ಹಣವನ್ನು ಒಲ್ಲೆನು ; ಇತ್ತ ಕಡೆಗೆ ಬಾರದಿರು, ಎಂದು ತಿರಸ್ಕರಿಸಿ ನುಡಿಯಲಾಗಿ, ದೂತನು ತನ್ನ ಒಡೆಯನ ಹತ್ತಿರಕ್ಕೆ ಬಂದು ಅವಳು ಒತ್ತೆಯನ್ನು ಒಲ್ಲದೆ ಹಣವನ್ನು ನೂಕಿದುದನ್ನೂ, ಹೇಳಿದುದೆಲ್ಲವನ್ನೂ, ಸವಿಸ್ತಾರವಾಗಿ ಹೇಳಲಾಗಿ, ಗುರುಭಕ್ತ ರಾಜನು ಹೀಗೆ ಅನುರಾಗಾತಿಶಯದಿಂದ ಕೂಡಿದ ಅವನು ಅವಳ ಶಯ್ಯಾಗೃಹದ ಕಡೆಗೆ ತಾನೇ ಬಂದು ಆ ಸುಂದರಿಯನ್ನು ನೂತನ ಅನುರಾಗಾತಿಶಯ ರಸಭರಿತವಾದ ದೃಷ್ಟಿಯಿಂದ ನಿರೀಕ್ಷಿಸಿ, ದೀನತೆಯಿಂದ ಕೂಡಿದ ಮಧುರಮಾತು ;

ದರವರಿಪೊಡೆ ನೀನೆನ್ನೊ
ಳ್ನೆರೆದೀಕ್ಷಿಪುದೊರ್ವೆ ಮತ್ಕಳಾಕೌಶಲಮಂ ೨೮

ಸೊಗಸಂ ಸೂಸಿ ವಿಳಾಸಮಂ ಮೆಱೆದು ನಣ್ಪಂ ನೋಡಿ ಕಾದಲ್ಮೆ ಕೈ
ಮಿಗೆ ಸಾರ್ದೊಳ್ನುಡಿಯಾಡಿ ಕುಂತಳಮನೊಳ್ಪಿಂ ತಿರ್ದಿ ರೋಮೋದ್ಗಮಂ
ನೆಗೆವನ್ನಂ ಬಿಗಿದಪ್ಪಿ ಚುಂಬಿಸಿ ಕಳಾವಿಸ್ತಾರಮಂ ಬೀಱಿ ನಾ
ಣೆಗೆ ನೀಡಾಗದೆ ನಿನ್ನೊಳಿಂದು ನೆರೆಯಲ್ಬೂರ್ತೆಂ ಸರೋಜೇಕ್ಷಣೇ ೨೯

ಸವಿನೋಟಂ ಪೊಸವೇಟಮಂ ನಗೆಯುನಂಗಾವೇಶಮಂ ಜಾಣ್ಮೆವೆ
ತ್ತವಿನೋದೋಕ್ತಿವಿಳಾಸಮುಂ ನೆಗಳ್ದ ಗಾಢಾಲಿಂಗನಂ ಮನ್ಮಥೋ
ತ್ಸವರೋಮಾಂಚಮಂ ಸುಧಾದರದ ಭಾಸ್ವಚ್ಚುಂಬನಂ ದರ್ಪಕ
ದ್ರವಮಂ ಪುಟ್ಟಿಸದಿರ್ದೊಡೇಕೆ ನೆರೆವಾಯಾಸಂ ವಿಟಂಗಂಗನೇ ೩೦

ಕಲೆಯು ಕಾಲವ[1]ಜಾತಿಯುಂ ಪ್ರಕೃತಿಯುಂ ದೇಶೀಯಭಾವಂಗಳಂ
ವಿಲಸದ್ರೀತಿಯನುಚ್ಚನೀಚಸಮರತ್ಯಾಶ್ಲೇಷಬಂಧಂಗಳಂ

ಸಂದೇಹಪಟ್ಟರೆ, ನೀನೊಮ್ಮೆ ನನ್ನಲ್ಲಿ ಕೂಡಿ, ನನ್ನ ಮನ್ಮಥ ಸಂಬಂಧದ ವಿದ್ಯಾ ಪ್ರೌಢಿಮೆಯನ್ನು ಪರೀಕ್ಷಿಸು! ಎಲೈ ೨೯. ಕಮಲ ನೇತ್ರೆಯೆ, ಸೊಗಸನ್ನು ಸುರಿಸುತ್ತಿರುವಂತೆ ಸಂಭ್ರಮವನ್ನು ಪ್ರಕಟಿಸಿ, ಸೊಗಸಾಗಿ ನೋಡಿ, ನಾಯಿಕಾ ನಾಯಕರ ಪ್ರೀತಿಯು ಮೀರೆದಪ್ಪುವಂತೆ ಸಮೀಪಿಸಿ, ಒಳ್ಳೆಯ ಮಾತನಾಡಿ, ಕೂದಲುಗಳನ್ನು ತಿದ್ದಿ ಸರಿಪಡಿಸಿ, ರೋಮಾಂಚನವು ಹುಟ್ಟುವ ಹಾಗೆ ಬಿಗಿದು ಅಪ್ಪಿಕೊಂಡು, ಚುಂಬಿಸಿ, ರತಿಕಲೆಯ ವಿಸ್ತಾರವೇನುಂಟೋ ಅದೆಲ್ಲವನ್ನೂ ಬೀರಿ, ಉಂಟಾಗುವ ನಾಚಿಕೆಗೆ ಅವಕಾಶವೀಯದೆ, ನಿನ್ನಲ್ಲಿ ಇಂದು ಕೂಡುವುದಕ್ಕೆ ಆಸೆ ಪಟ್ಟಿದ್ದೇನೆ. ೩೦. 'ಎಲೈ ಅಂಗನೆಯೇ, ಮನೋಹರ ನೋಟವು ನೂತನವಾದ ಪ್ರೀತಿಯನ್ನೂ, ನಗುವಿಕೆಯು; ಮನ್ಮಥಾವೇಶವನ್ನೂ, ಚಾತುರ್ಯದಿಂದ ಕೂಡಿದ ವಿನೋದದ ನುಡಿಗಳು, ಸಂಭ್ರಮವನ್ನೂ (ನನ್ನ) ಪ್ರಖ್ಯಾತವಾದ ಗಾಢಾಲಿಂಗನವು, ಮನ್ಮಥ ಸಂಬಂಧವಾದ ಸಂತೋಷ ಸಂಜನಿತ ರೋಮಾಂಚನವನ್ನೂ, ಅಮೃತರಸದಿಂದ ಕೂಡಿದ ತುಟಿಯು ಮನೋಹರವಾದ ಚುಂಬನವು ಕಾಮರಸವನ್ನು ಹುಟ್ಟಿಸದೆ ಇದ್ದರೆ, ವಿಟನಾದವನಿಗೆ (ಸ್ತ್ರೀಯಲ್ಲಿ) ಕೂಡುವ ಆಸೆಯೇಕೆ ?' ೩೧. 'ಮನ್ಮಥ ಕಲಾಸ್ಥಾನವನ್ನೂ, ಆಯಾಯ ಸಮಯಗಳು ಆಯಾಯ ಸ್ತ್ರೀ ಜಾತಿಗಳನ್ನು, ಸ್ವಭಾವವನ್ನು, ಆಯಾಯ ದೇಶಾನು'ಗುಣವಾದ ವಿಭಾವಾದಿ ಭಾವಗಳನ್ನೂ, ಶೋಭಿಸುವ ರತಿ ಕ್ರೀಡಾಕ್ರಮವನ್ನೂ ಉಚ್ಚ, ನೀಚ, ಸಮರಸ, ಅತ್ಯಾಶ್ಲೇಷಾದಿ ಬಂಧಗಳನ್ನು (ಅಂದರೆ ಸ್ತ್ರೀಯ ಅಪೇಕ್ಷೆಯಂತೆ ಅಧಿಕ ಕಾಲದವರೆಗೆ ರತಿಕ್ರೀಡೆಯಲ್ಲಿ ತೊಡಗುವುದು ಉಚ್ಚವು; ಸ್ತ್ರೀಯ

1 ವಿ(ಗ), ಸು(ಅ)

ಲಲನಾನೀಕದ ಮನ್ಮಥಾಲಯದ ನಾಡೀಭೇದಮಂ ಪ್ರಾಯಮಂ
ನಲವಿಂದಂ ತಿಳಿದೊಂದಲಾಱದ ಭುಜಂಗಂ ಭಂಗಮಂ ತಾಳ್ವನೇ ೩೧

ಪೊಂಪುಳಿ ಮಗ್ಗುಲಿಕ್ಕದವೊಲಂಗದ ಬಲ್ಬೆಮರಿಂಗದಂತೆ ನೇ
ತ್ರಂ ಪದೆದೆಳ್ಚಱೊಂದದವೊಲುರ್ಬಿದ ಚಂದುಟಿ ಬೀಯದಂತೆ ಸು
ಯ್ಗಂಪೆಲರೋಟಮಂ ಬಿಡದವೋಲ್ತನುಗುಣ್ಮದ ಸೇದೆ ಜಾಱದಂ
ತಿಂಪಡರ್ದನಂಗಜಾತಸುಖಮಂ ನಿನಗೀಯದೊಡಾಂ ಭುಜಂಗನೇ ೩೨

ಅಂಗುಟಮಂಘ್ರಿಯುಂ ಪರಡು ಜಾನು ಕಟೀತಟನಾಭಿ ವಕ್ಷಮು
ತ್ತುಂಗಕುಚಂ ಭುಜಂ ಮಿಸುಪ ಕಕ್ಷೆಗಳೋಷ್ಠಕಪೋಲಮಕ್ಷಿ ಫಾ
ಲಂಗಳುಮುತ್ತಮಾಂಗಮೆನಿಪೀಯೆಡೆಯೊಳ್ಕ್ರಮದಿಂ ದ್ವಿಪಕ್ಷದೊ
ಳ್ಪೊಂಗಿಸುತೂರ್ಧ್ವದೇಶಕಿಳುಪುತ್ತೆಡದೊಳ್ಕಲೆಯುಂ ವಿಳಾಸದಿಂ ೩೩

ಮಿಸುಪಷ್ಟವಿಧಾಲಿಂಗನ
ಮನೂನಮೊಂಭತ್ತುನಾಲ್ಕು ಬಂಧಂಗಳ್ಚುಂ
ಬನಮುಂ ದ್ವಾದಶವಿಧಮುಂ
ಬನಿತಱೊಳುಚಿತಪ್ರಕಾರಮಱಿದೆಸಗುತ್ತುಂ ೩೪

ಪರಿವಿಡಿಯಿನಿಂತು ಬಾಹ್ಯಾಂ
ತರರತಮುಂ ನೆಗಳ್ದಿವಂ ಜಯಂತನೊ ನಳಕೂ

ಅಪೇಕ್ಷೆಯಂತೆ ಅಲ್ಪಕಾಲದ ರತಿಕ್ರೀಡೆಯಲ್ಲಿ ತೊಡಗುವುದು ನೀಚವು ; ಉಭಯಾಪೇಕ್ಷೆಯಂತೆ ಸಮಕಾಲ ಸುರತಕ್ರೀಡೆಯು ಸಮರಸವು ; ಆಲಿಂಗನದ ರೀತಿಯೋ ಅತ್ಯಶ್ಲೇಷವು. ಇಂಥ ಈ ಬಂಧ ರೀತಿಯನ್ನೂ), ಸ್ತ್ರೀ ಸಮೂಹದ ಮನ್ಮಥಾಲಯವೆನಿಸಿರುವ ಯೋನಿಯ ನಾಡೀ ಭೇದಗಳನ್ನೂ ಪ್ರಾಯವನ್ನೂ, ಪ್ರೀತಿಯಿಂದ ತಿಳಿದು ಕೂಡಲು ಶಕ್ತಿಯಿಲ್ಲದ ವಿಟನು ಹಾನಿಯನ್ನು ಹೊಂದಲಿಕ್ಕಿಲ್ಲವೇ ?' ೩೨. '(ಮೈಯಲ್ಲೆದ್ದ) ರೋಮಾಂಚನವು ಕಡಿಮೆಯಾಗದ ಹಾಗೆ ದೇಹದ ವಿಶೇಷವಾದ ಬೆವರು ಆರದ ಹಾಗೆ, ಕಣ್ಣುಗಳು ಪ್ರೀತಿಯಿಂದ ಎಚ್ಚರಗೊಳ್ಳದ ಹಾಗೆ ಉಬ್ಬಿದ ಕೆಂಪಾದ ತುಟಿಗಳ ಉಬ್ಬು ಕಡಿಮೆಯಾಗದ ಹಾಗೆ, ಪರಿಮಳ ವಿಶಿಷ್ಟವಾದ ಉಸುರಿನ ಗಾಳಿಯು ತನ್ನ ಮುನ್ನಿನ ಓಟವನ್ನು ಬಿಡದ ಹಾಗೆ, ಹೊರಹೊಮ್ಮಿದ ದಣಿವು ಜಾರದ ಹಾಗೆ, ಇಂಪಿನಿಂದ ಕೂಡಿದ ಮನ್ಮಥ ಸೌಖ್ಯವನ್ನು ನಿನಗೆ ಕೊಡದಿದ್ದರೆ ನಾನೊಬ್ಬ ವಿಟನೇ !' ೩೩–೩೫. ಹೆಬ್ಬೆರಳು, ಕಾಲು, ಕಾಲಿನ ಪಕ್ಕದಲ್ಲಿರುವ ಗಂಟುಗಳು, ನಡು, ಹೊಕ್ಕಳು, ಎದೆ, ಎತ್ತರವಾದ ಮೊಲೆಗಳು, ಭುಜ, ಶೋಭಿಸುವ ಕಂಕುಳ, ತುಟಿ, ಕೆನ್ನೆ ಕಣ್ಣು. ಹಣೆ, ಕುತ್ತಿಗೆ, ತಲೆ–ಎನಿಸುವ ಈ ಸ್ಥಾನಗಳಲ್ಲಿ ಕ್ರಮವಾಗಿ ಶುಕ್ಲ ಮತ್ತು ಕೃಷ್ಣ ಪಕ್ಷದ್ವಯಗಳಲ್ಲಿ ಕಲಾಸ್ಥಾನಗಳನ್ನು (ರತಿಲೀಲಾ) ವಿಲಾಸದಿಂದ (ದೇಹದ) ಮೇಲ್ಗಡೆಗೆ ಉಕ್ಕಿಸುತ್ತ (ವಿಕಾಸ

ಬರನೊ ಮನಸಿಜನೊಯೆಃನೆ ಸವು
ಸುರತಸುಖಾಬ್ಧಿಯೊಳೆ ನಿನ್ನನಾಳಿಪೆನಬಲೇ ೩೫

ಜಗುಳೆ ನಿಱಿ ಮುಗುಳೆ ಕಣ್ಮಲ
ರೊಗುವಿಗೆಯಿಂ ಕಾಮಶರಧಿ ತುಳ್ಕಾಡೆ ಮನಂ
ಬುಗುವಾಲಿಂಗನಮಾತ್ರದೆ
ನೆಗಳ್ವೆಂ ಮೈಮಱಿಪನಿಂದು ನಿನಗಿಂದುಮುಖೀ ೩೬

ಸ್ಮರನಿಂದು ಧನ್ಯನಾದಂ
ತರುಣಿಮ[1]ಮಿಂದೆನಗೆ ಸಫಲಮಾದಂದು ವಲಮೆಂ

ಗೊಳಿಸುತ್ತ) ಎಡಭಾಗದಲ್ಲಿ ಇಳಿಯುವಂತೆ ಮಾಡುತ್ತ,* ಶೋಭಿಸುವ—ಪುಷ್ಕರ, ವಿವಿಧಕ, ಘೃಷ್ಟಕ, ಪೀಡಿನಕ, ವೃಕ್ಷಾರೋಹಿಣಿ, ಲತಾವೇಷ್ಟನ, ತಿಲತಂಡುಲತೆ, ಕ್ಷೀರ ನೀರಾಯತಗಳೆಂಬ ಎಂಟು ಪ್ರಕಾರದ ಆಲಿಂಗನಗಳು (ಇವೂ ಅಲ್ಲದೆ ವಾರೂಪಗೂಹನ ಜಘನೂಪಗೂಹನ ಸ್ತನಾಶ್ಲೇಷ, ಲೀಲಾಟಕ ಎಂಬ ೯ಒಟ್ಟು ಹನ್ನೆರಡು ವಿಧವಾದ ಆಲಿಂಗನವೆಂದೂ ಹೇಳುವುದುಂಟು), ಅಧಿಕವಾಗಿ ಎಂಬತ್ತನಾಲ್ಕು ವಿಧದ (ರತಿಕ್ರೀಡಾ) ಬಂಧಗಳು (ಆಸನಗಳು), ಹನ್ನೆರಡು ವಿಧಗಳಾದ–ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಿಕ,ತಿರ್ಯಗಾಯತಕ, ಅತಿಧೃಷ್ಟಕ, ಉತ್ತರಸಂಘಟಿತಕ, ಜಿಹ್ವಾಮೋಳನಕ, ಜಿಹ್ವಕ, ಅತಿ ಜಿಹ್ವಾಯೋಗ, ಸೀತ್ಕಾರ, ದಂಶನಕವೆಂದಿರುವ ಚುಂಬನಗಳೆಂಬ ಇಷ್ಟರಲ್ಲಿ ಉಚಿತ ರೀತಿಯಲ್ಲಿ ಅರಿತು ವ್ಯವಹರಿಸುತ್ತ, ಎಲೈ ಅಬಲೆಯೇ, ಈ ರೀತಿ ಕ್ರಮವಾಗಿ ಒಳ ಹೊರಗಣ ರತಿಗಳೆಂಬೆರಡನ್ನೂ, ಎಸಗಿ, ಇವನೇನು ಇಂದ್ರಕುಮಾರನಾದ ಜಯಂತನೋ, ಕುಬೇರ ಪುತ್ರನಾದ ನಳಕೂಬರನೋ, ಮನ್ಮಥನೋ ಎನ್ನುವಂತೆ (ಉಭಯರಿಗೂ) ಸಮವಾದ ರತಿಕ್ರೀಡಾ ಸಮುದ್ರದಲ್ಲಿ ನಿನ್ನನ್ನು ನಾನು ಮುಳುಗಿಸುವೆನು. ೩೬. 'ಎಲೈ ಚಂದ್ರಮುಖಿಯೇ (ಉಟ್ಟ) ನಿರಿಗೆಯ ಗಂಟು ಜಾರಲು, ಹೂವಿನಂತಿರುವ ಕಣ್ಣುಗಳು ಮುಚ್ಚಿಕೊಳ್ಳಲು, ಉತ್ಸಾಹಾಧಿಕ್ಯದಿಂದ ಮದನರಸದ ಸಮುದ್ರವೇ ತುಳುಕಾಡುವಂತೆ, ಮನಸ್ಸಿಗೊಪ್ಪುವ ಆಲಿಂಗನ ಮಾತ್ರದಿಂದ ನಿನಗಿಂದು ಮೈಮರೆಯುವಿಕೆಯನ್ನು ಉಂಟುಮಾಡುತ್ತೇನೆ.' ೩೭. 'ಈ ದಿವಸ ಮನ್ಮಥನೇ ಧನ್ಯನಾದನು. ಈ ದಿವಸ ನನಗೆ ತಾರುಣ್ಯವು ನಿಜವಾಗಿ ಸಫಲವಾಯಿತು, ಎಂದು ನೀನು ಅಧಿಕವಾದ

1 ಯು(ಮು)

*ಶುಕ್ಲಪಕ್ಷದ ಪಾಡ್ಯಮಿ ಮೊದಲಾದ ಹದಿನೈದು ತಿಥಿಗಳಲ್ಲಿ ಸ್ತ್ರೀಯರ ದೇಹದ ಬಲಗಡೆಯ ಈ ಪೂರ್ವದಲ್ಲಿ ಹೇಳಿದ್ದ ಅಂಗುಷ್ಠ ಮೊದಲಾದ ಹದಿನೈದು ಸ್ಥಾನಗಳಲ್ಲಿ ಕ್ರಮವಾಗಿ ಒಂದೊಂದು ತಿಥಿಯಲ್ಲಿ ಒಂದೊಂದು ಸ್ಥಾನಗಳು ಕಳಾಸ್ಥಾನವೆಂದೂ, ಕೃಷ್ಣಪಕ್ಷದ ಪಾಡ್ಯಮಿಯಿಂದ ಹದಿನೈದು ದಿನಗಳು ಎಡಭಾಗದ ಹದಿನೈದು ಸ್ಥಾನಗಳು ತಲೆಯಿಂದ ಕೆಳಕ್ಕೆ ಕ್ರಮವಾಗಿ ಒಂದೊಂದುದಿನದ ಕಳಾಸ್ಥಾನಗಳೆಂದೂ ಹೇಳಲಾಗುತ್ತದೆ.

ದುರುಮುದಮನಾಳೆ ನೀಂ ನವ
ಸುರತೋತ್ಸವಮಿಯದಿರ್ದೊಡಾಂ ವರವಿಟನೇ ೩೭

ನೋಡೆನ್ನ ಪರಿಯನಿಂದೊಡ
ಗೂಡೆನ್ನೊಳ್ಮೋಹನಾಂಗಿಯೆಂದವನೆನೆ ತಾಂ
ನೋಡಿ ನಸುನಗುತೆ ವಿಟಕುಲ
ಚೂಡಾಮಣಿ ಮಝರೆ ಲೇಸನಾಡಿದೆಯೆಂದಳ್ ೩೮

ಪೊಸತೀ ಜಾಣ್ನುಡಿಯೆಲ್ಲಿ ಕಲ್ತೆಯಿದನಿಂದೆನ್ನೊಳ್ಕರಂ ನಿನ್ನ ಬ
ರ್ದೆಸೆವನ್ನಂ ಬಗೆದೋಱಿದೈ ಭಲರೆ ಕಂದರ್ಪಾಗಮಾಭಿಜ್ಞ ನಿ
ನ್ನೆಸಕಂ ಸಾಲ್ಗುಮಿದೇಕೆ ನೀಂ ಜಱುಚುವೈ ಪೋಪೋಗು ಸದ್ಭಕ್ತಿ ನೀ
ತಿ ಸುಶೀಲಂ ಸಮನಲ್ತು ಕೂಡದೆನಗೊಂದಲ್ಲಿನ್ನೊಳುರ್ವೀಪತೀ ೩೯

ಚದುರಂ ನೀನಾದೊಡಿಂತಿಂತುಸುರ್ದ ನುಡಿಗಳಂ ಕೇಳ್ದು ಸಮ್ಮೋಹಮಂ ತಾ
ಳ್ದಿದಳಲ್ಲೀ ಕಾಂತೆಯೆಂದೊಳ್ಪಱಿದು ಕಡೆಗೆ ನೀಂ ಬೇಗ ಜಾಱಲ್ಕೆವೇಡಾ
ವಿದಿತಂ ಭಾವಜ್ಞನಾದಂದಬಲೆಯ ಕಡೆಗಣ್ನೋಟದಿಂ ಕಂಡು ಮೋಹಾ
ಸ್ಪದಭಾವಾಭಾವಮಂ ಜಾಣ್ಮೆಯೊಳೆ ತೊಲಗುವೊಂದಂದಮಂ ಕಾಣವೇಡಾ ೪೦

ಆನಂದವನ್ನು ತಾಳುವಂತೆ ನೂತನವಾದ ಸುರತ ಕ್ರೀಡಾ ಮಹೋತ್ಸವವನ್ನುಂಟು ಮಾಡದೆ ಇದ್ದರೆ ನಾನೊಬ್ಬ ವಿಟನೇ?' ೩೮. ಎಲೈ ಮೋಹನಾಂಗಿಯೇ, ಈ ದಿವಸದ ನನ್ನ ರೀತಿಯನ್ನು ನೋಡು; ನನ್ನೊಡನೆ ಕೂಡು! ಹೀಗೆಂದು ಆತನು ಹೇಳಿದನು. ಆಗ ಆ ಸೂಳೆಯು ಅವನನ್ನು ನೋಡಿ, ನಸುನಗುತ್ತ—'ಎಲೈ ವಿಟಕುಲ ಚೂಡಾಮಣಿಯೇ, ಶಹಭಾಸ್! ಒಳ್ಳೆಯ ಮಾತನಾಡಿದೆ.' ೩೯. 'ಉರ್ವೀಪತಿಯೇ, ಈ ನಿನ್ನ ಜಾಣತನದ ಮಾತು ಹೊಸದು; ಇದನ್ನೆಲ್ಲ ಎಲ್ಲಿ ಕಲಿತೆ?' ಈ ದಿನ ನಿನ್ನ ಜಾಣ್ಮೆಯು ಪ್ರಕಾಶಗೊಳ್ಳುವಂತೆ ನನ್ನಲ್ಲಿ ಪೂರ್ಣವಾಗಿ ನಿನ್ನ ಮನಸ್ಸನ್ನು ತೋರಿಸಿ ಕೊಂಡಿದ್ದೀಯೆ. ಭಲರೇ, ಮದನನ ತಂತ್ರವನ್ನು ತಿಳಿದವನೇ, ನಿನ್ನ ಈ ಪರಾಕ್ರಮವು ಸಾಕು; ಇದೇಕೆ ಹೀಗೆ ನೀನು ಅರಚುವೆಯಯ್ಯಾ! ಹೋಗು ಹೋಗು ಸದ್ಭಕ್ತಿ, ನೀತಿ, ಉತ್ತಮ ಶೀಲ ಸ್ವಭಾವಗಳು ಒಂದುಗೂಡದೆ ನಿನ್ನೊಡನೆ ಸೇರಲು ಸಮವಾಗುವುದಿಲ್ಲ.' ೪೦. 'ನೀನು ಕುಶಲನಾಗಿದ್ದರೆ, ಇಂತಿಂತೆಲ್ಲಾ ಮಾತನಾಡಿದ ನುಡಿಗಳನ್ನು ಕೇಳಿ, ಈ ಸುಂದರಿಯು ಪ್ರೀತಿಯನ್ನು ಹೊಂದುವವಳಲ್ಲವೆಂದು ಒಳ್ಳೆಯ ನೀತಿಯನ್ನನುಸರಿಸಿ ಅರಿತುಕೊಂಡು (ಸಮಾಜೀಪತ್ವವನ್ನನುಸರಿಸಿ) ನೀನು ಆ ಕಡೆಗೆ ಬೇಗ ಹೋಗುವುದು ಬೇಡವೇ! (ತೊಲಗಬೇಡವೆ!) ಶ್ರೇಷ್ಠನಾದ ಸ್ತ್ರೀಯಳ ಇಂಗಿತವನ್ನರಿತವನಾಗಿದ್ದ (ಪರರ ಇಂಗಿತ ತಿಳಿದವನು) ಪಕ್ಷದಲ್ಲಿ ಹೆಂಗಸರ ಕಣ್ನೋಟದಿಂದಲೇ ಪ್ರೀತಿಯನ್ನು ಹೊಂದುವುದು, ಹೊಂದದಿರುವುದು, ಇವನ್ನು ಕಂಡುಕೊಂಡು ಜಾಣ್ಮೆಯಿಂದಲೇ ತೊಲಗಬೇಕೆನ್ನುವ ಒಂದು ರೀತಿಯನ್ನು ತಿಳಿಯುವುದು ಬೇಡವೇ?'

ಒತ್ತೆಯನೊಲ್ಲೆನೆಂದೊಡೆಲೆ ನೀಂ ವಿಟನಾದೊಡದೆಂತು ಬಂದೆ ಪೇ
ಳ್ಮತ್ತೆ ಮದೀಯಮಂದಿರಕೆ ಸದ್ರಸಿಕೋತ್ತಮನಾದೊಡೆಂತು ಮ
ಚ್ಚಿತ್ತದ ನೇಹಮಂ ತಿಳಿಯದಾಡಿದೆ ಕಾಮುಕಳಾಪ್ರಸಂಗಮಂ
ವಿತ್ತದ ಬಲ್ಮೆಯುಳ್ಳೊಡಿಳೆಯೊಳ್ಗಣಿಕಾವಳಿ ಶೂನ್ಯಮಾದುದೇ ೪೧

ಹರಪದಭಕ್ತನಾದೊಡಿನಿತಂಗಜಮೋಹವಿಕಾರಮಾಂಪುದೇ
ಗುರುಭಜನಾರ್ಪಿತಾತ್ಮತನುವಾದೊಡಮೆಂತು ತನೂವಿಮೋಹದೆ
ಳ್ತರಮುಕಟೇಕೆ ಬೆಳ್ತನದ ಪೆರ್ಮೆಯ ಮಾತು ವಿದಗ್ಧಪುಂಗವ
ರ್ಧರಿಯ ಭುಜಂಗರೇಂ ನಗರೆ ನಿನ್ನವಿಚಾರತೆಗಂಡು ಧಾತ್ರಿಯೊಳ್ ೪೨

ಅಱಿತಮದುಳ್ಳೊಡೆ ಕಾಮದ
ಬಱಿಕಳವಳದಳಮನುಳಿದು ಮಾಣ್ಗೆನ್ನೊಳ್ಪಂ
ದಱಕೆಯನೆಲೆ ಗುರುಭಕ್ತಿಯೊ
ಳೆಱಕಂಬಡೆ ಬಂದ ಬಟ್ಟೆವಿಡಿ ತಳರೆಂದಳ್ ೪೩

ವ॥ ಎಂದ ವಾರಾಂಗನೆಯ ಬಿಱುನುಡಿಗಸಹ್ಯಭಾವಂಬಡದೆ ಮಾರ್ಕೊಂಡು—

ಪುರುಷಾಂತರದಿರವಱಿಯದ
ಮರುಳೆ ಮದಾಂಧತೆಯೊಳಿಂತು ಪೋಗೆಂದಪೆ ನೀ

೪೧.'ಎಲೈ (ಅರಸೇ), ನೀನು ವಿಟನಾದರೆ, (ನಾನು) ಒತ್ತೆಯ ಹಣವನ್ನು ಒಲ್ಲೆನೆಂದರೆ ಪುನಃ ಏಕೆ ನನ್ನ ಮನೆಗೆ ಬಂದೆ ? ಹೇಳು. ಒಳ್ಳೆಯ ರಸಜ್ಞರಲ್ಲಿ ಶ್ರೇಷ್ಠನೆನಿಸಿದವನಾಗಿದ್ದರೆ ನನ್ನ ಮನಸ್ಸಿನ ಪ್ರೀತಿಯನ್ನು ತಿಳಿಯದೆ ಮನದ ವಿದ್ಯೆಯ ಪ್ರಸಂಗದ ಮಾತುಗಳನ್ನು ಹೇಗೆ ಆಡಿದೆ ? ಹಣದ ಬಲವು ಇದ್ದರೆ ಲೋಕದಲ್ಲಿ ಸೂಳೆಯರ ಗುಂಪೇ (ಬೇರೆ) ಇಲ್ಲದಂತಾಯಿತೇ ?' ೪೨. 'ಹರನ ಭಕ್ತನಾದರೆ ಇಷ್ಟೊಂದು ಮನ್ಮಥಾವಸ್ಥೆಯಿಂದುಂಟಾದ ವಿಕಾರವನ್ನು (ಮನಸ್ಸು) ಹೊಂದುತ್ತಿತ್ತೇ ? ಗುರುಸೇವೆಗೋಸ್ಕರ ದೇಹವನ್ನು ಸಮರ್ಪಿಸಿದವನಾದರೆ ದೇಹಸಂಬಂಧವಾದ ಅಜ್ಞಾನದ ಆಧಿಕ್ಯವು (ಇರಲು) ಹೇಗೆ ಸಾಧ್ಯ ? ಅಯ್ಯೋ ! ಮೂಢತನದ ಈ ಹೆಮ್ಮೆಯ ಮಾತುಗಳೇಕೆ ? ಲೋಕದಲ್ಲಿ ಪ್ರೌಢರಾದ ವಿದ್ವಾಂಸರಾದ ವಿಟರುಗಳು ನಿನ್ನ ಈ ಅವಿವೇಕವನ್ನು ಕಂಡು ನಗಲಿಕ್ಕಿಲ್ಲವೇ ?' ೪೩. 'ಎಲೈ (ರಾಜನೇ) (ಹರಭಕ್ತಿಯ ಬಗೆಗೆ) ಆ ತಿಳುವಳಿಕೆ ಇದ್ದರೆ, ಕಾಮಕ್ಕೆ ಸಂಬಂಧಿಸಿದ ವ್ಯರ್ಥವಾದ ಪೇಚಾಟದ ಈ ಶಕ್ತಿಯನ್ನು ಬಿಟ್ಟು, ನನ್ನಲ್ಲುಳ್ಳ ನಿನ್ನ ಪ್ರೀತಿಯನ್ನು ತೊಲಗಿಸಿ, ಗುರುಭಕ್ತಿಯಲ್ಲಿ ಬೆಸುಗೆಗೊಳಿಸು, ಬಂದದಾರಿಯನ್ನು ಹಿಡಿದು ಹೊರಡು, ಎಂದಳು. ವ॥ ಹೀಗೆಂದ ಆ ವೇಶ್ಯಾಸ್ತ್ರೀಯ ಬಿರುನುಡಿಗಳಿಗೆ ಅಸಹ್ಯಭಾವವನ್ನು ಹೊಂದದೆ ಪ್ರತಿಯಾಗಿ—೪೪. 'ಬೇರೆ ಬೇರೆ ಪುರುಷರ ರೀತಿಯನ್ನೇ ತಿಳಿಯದ ಎಲೈ ಮರುಳು ಹೆಂಗಸೇ, ಗರ್ವದಿಂದುಂಟಾದ ಗುರುತಿನಿಂದ, ನನ್ನನ್ನು ಅಪೇಕ್ಷಿಸದೆ ಹೀಗೆ

ನರವರಿಸದೆನ್ನನೀಂ ನಿ
ಷ್ಠುರವಕ್ರಾಲಾಪತತಿಗೆ ಕಾರಣಮೇನೋ ೪೪

ವಾರಾಂಗನೆ ನೀಂ ಸುಗುಣ
ಶ್ರೀರಾಜಿತ ರಾಜಪುತ್ರನಾನೆನ್ನಂ ನಿ
ಷ್ಕಾರಣಮೊಲ್ಲದೆ ಪೋಗೆನೆ
ಭೂರಿ ಪಣಾಂಗನೆಯರೆಲ್ಲ ಪಳಿಯರೆ ನಿನ್ನಂ ೪೫

ಸಕಳಕಳಾನಿಧಿರಾಜಂ
ಗಕಟ ಮೊಗಂಗುಡದ ನಿನಗಮಾ ಪದ್ಮಿನಿಗಂ
ಪ್ರಕಟಗುಣಮಿರ್ದೊಡೇಂ ಕಂ
ಟಕನಿವಹಂ ಜಾಡ್ಯಭಾವಮಿದುವೆ ನಿಸರ್ಗಂ ೪೬

ಪಡಪಿಂಗಿನ್ನಾರುಮಂ ನೀಂ ಕರೆಯೆನೆನುತಣಂ ಪೂಣ್ಕೆಗೆಯ್ಯಲ್ಲದಿರ್ದಂ
ದೊಡಲೊಳ್ನಿಷ್ಕಾಮಮಂ ನೀನುಡುತಡಿಯ ಮಹಾದೇವಿಯಂತೆಯ್ದೆ ತಾಳ್ಕೇ
ಣ್ಮೃಡನಿಂ ಗಂಡಂದಮಂ ನೀಂ ಪಡೆ ವರತಿಲಕಾಂಬಾಖ್ಯೆಯೆಂತಂತದಲ್ತೆಂ
ಬೊಡೆ ನೀನಾವೀರ ಚೋಳಾಂಬೆಯವೊಲಭವನೇ ಗಂಡನಾಗಿರ್ಪುದೇಗಳ್ ೪೭

ಅಂತಲ್ಲದೊಡೆಲೆ ನಿನ್ನನ
ದೆಂತುಂ ಬಿಟ್ಟಪೆನೆ ಕೂರ್ತು ವಾರಾಂಗನೆಗೋ
ರಂತವಳೊಲ್ಲದೆ ಪೋಗೆನೆ
ತಾಂ ತಳರ್ದನೆನಿಪ್ಪ ನಗೆಗೆ ಪಕ್ಕಾದಪೆನೇ ೪೮

ಹೋಗು ಎಂದೆನ್ನುತ್ತೀಯೆ. ಈ ನಿಷ್ಠುರವೂ ವಕ್ರವೂ ಆದ ಮಾತುಗಳ ಸಮೂಹಕ್ಕೆ ಕಾರಣವೇನೋ (ತಿಳಿಯದು). ನೀನು ವೇಶ್ಯಾಸ್ತ್ರೀ,ನಾನು ಸದ್ಗುಣ ಮತ್ತು ಐಶ್ವರ್ಯಗಳಿಂದ ಪ್ರಕಾಶಿಸುವ ರಾಜಪುತ್ರನು, ನನ್ನನ್ನು ನಿಷ್ಕಾರಣವಾಗಿ ಒಲ್ಲದೆ ಹೋಗು ಎಂದರೆ, ಬಹು ಸಂಖ್ಯೆಯ ಸೂಳೆಯರೆಲ್ಲ ನಿನ್ನನ್ನು ದೂಷಿಸುವುದಿಲ್ಲವೇ? ೪೬. 'ಸಕಲ ಕಲೆಗಳಿಗೂ ನಿಕ್ಷೇಪನಾದ ರಾಜನಿಗೇ(ಷೋಡಶ ಕಲೆಗಳಿಗೆ ನಿಕ್ಷೇಪನಾದ ಚಂದ್ರನಿಗೆ) ಮುಖವನ್ನು ಕೊಡದಿರುವ ನಿನಗೂ ಆ ಕಮಲಲತೆಗೂ, ಪ್ರಸಿದ್ಧವಾದ ಸದ್ಗುಣವು (ತಂತುವು) ಇದ್ದೊಡೆ ಏನು ? ಅಕ್ಕಟಾ ! ಈ ಕಠಿಣೋಕ್ತಿಗಳ ಸಮೂಹವು (ಈ ಮುಳ್ಳುಗಳ ಗುಂಪು) ಆಲಸ್ಯದಿಂದ ಕೂಡಿದಭಾವವು (ನೀರಿನಲ್ಲಿರುವಿಕೆಯು) ಸ್ವಭಾವ ಸಿದ್ಧವಾದದ್ದು ೪೭. ಛಡ ! ಹಿಂಗು, (ಎಂದು) ನೀನು ಇನ್ನಾರನ್ನೂ ಕರೆಯುವುದಿಲ್ಲವೆಂದು ನಿಜವಾಗಿ ಪ್ರತಿಜ್ಞೆಯನ್ನುಮಾಡು; ಅಲ್ಲದಿದ್ದರೆ ನೀನು ಉಡುತಡಿಯ ಮಹಾದೇವಿಯಕ್ಕನ ಹಾಗೆ ನಿಷ್ಕಾಮ ಭಾವವನ್ನು ಪಡೆ, ಅಥವಾ ಈಶ್ವರನಿಂದ ಗಂಡಿನ ರೀತಿಯನ್ನು ಪಡೆ; ಶ್ರೇಷ್ಠ ತಿಲಕಾಂಬಾ ಎಂಬ ಹೆಸರಿನವಳು ಎಂತೋಅಂತೆ ಆಗು; ಅದಲ್ಲವೆಂದರೆ ನೀನು ಆ ವೀರ ಚೋಳಾಂಬೆಯ ಹಾಗೆ ಶಿವನೇ ಯಾವಾಗಲೂ ಗಂಡನಾಗಿ ಇರುವಂತಿರು.' ೪೮. ಎಲೈ (ವೇಶ್ಯೆಯೇ), ಹಾಗಲ್ಲದಿದ್ದರೆ ನಿನ್ನನ್ನು ಹೇಗೆ ನಾನು ಬಿಟ್ಟೇನು ! ವೇಶ್ಯಾಸ್ತ್ರೀಯಳನ್ನು ಪ್ರೀತಿಸಿ ಈ ರೀತಿ ಅವಳು ಒಲ್ಲದೆ ಹೋಗು ಎಂದರೆ, ನಾನು ಹೊರಟು ಹೋದವನೆಂಬ

ವ॥ ಎಂದವನೆನೆ ಕಾಂತೆ ಕಂಗನೆ ಕನಲ್ದು ಕೆಂಪಡರ್ದ ಕಟಾಕ್ಷದಿನಡರೆ ನೋಡಿ—

ಅರರೆ ಭುಜಂಗರಾಜ ಮದನಾಗಮಸಾರಧುರೀಣ ವಾರಸೌಂ
ದರಿಯೊಳೆ ಬಲ್ಮೆಗೆಯ್ದು ಪೊಸ ನೇಹಮನುರ್ವಿಸಲೊಲ್ವ ಜಾಣ ಭಾ
ಸುರಕುಸುಮೌಘಮಂ ಪೊಸೆದು ಕಂಪನೆ ಕೊಳ್ವ ವಿದಗ್ಧಭಾವಜಾ
ತುರತೆಗೆ ಕೂರ್ತಳಲ್ಲದಳ ಕೂರಿಪ ಬರ್ದನಿದೆಲ್ಲಿ ಕಲ್ತೆಯೋ ೪೯

ಬೆಲೆವೆಣ್ಣಾಂ ನಿನ್ನ ಹಂಗೆಳ್ಳನಿತುಮೆನಗೆ ಮುನ್ನಿಲ್ಲ ಮಲ್ಲಿಂಗದೇವಂ
ಸಲೆ ಕೊಟ್ಟೀ ಕಾಯಿ[1]ಕ ಪ್ರಕ್ರಿಯೆಯೊಳನುದಿನಂ ಬಾಳ್ವೆನನ್ಯಾಯದಿಂ ನಿ
ಶ್ಚಲದರ್ಪಂಬೆತ್ತು ನಿನ್ನಾಣತಿಗೆ ಸಲಿಸಲೆಂದಿರ್ಪೆಯೆನ್ನಂ ನಿರರ್ಥ
ಕ್ಕಲೆ ನಿನ್ನಂ ಬಲ್ಲರೇಂ ಮೆಚ್ಚುವರೆ ನಿನಗಿದೇಂ ತಕ್ಕುದೇ ದುರ್ವಿಮೋಹಂ ೫೦

ವನಜಮನಭ್ರದೊಳ್ತಿಱಿಯಲಕ್ಕುಮೆ ಸಾರಮರೀಚಿಯಲ್ಲಿ ಭೋಂ
ಕನೆ ಜಳಮಂ ತುಳುಂಕಿ ತರಲಕ್ಕುಮೆ ಸೈಕತದಲ್ಲಿ ತೈಲಮಂ
ಘನತರಯತ್ನದಿಂ ತೆಗೆಯಲಕ್ಕುಮೆ ತನ್ನನದೆಂತುಮೊಲ್ಲದು
ಗನೆಯೊಳೆ ಸೌಖ್ಯಮಂ ಪಡೆಯಲಕ್ಕುಮೆ ಪೇಳ್ದಿಟಮಂ ಧರಾಧಿಪಾ ೫೧

ಅಪಹಾಸ್ಯಕ್ಕೆ ಕಾರಣನಾಗುವುದಿಲ್ಲವೇ?' ವ॥ ಹೀಗೆಂದು ಆ ಗುರುಭಕ್ತರಾಜನೆನ್ನಲು, ಆ ಸ್ತ್ರೀಯು ಶೀಘ್ರವಾಗಿ ಕೋಪಿಸಿಕೊಂಡು, ಕೆಂಪಾದ ಕಡೆಗಣ್ಣುಳ್ಳವಳಾಗಿ ನೋಡಿ— ೪೯. 'ಅರರೇ! ಹೇ ಮನ್ಮಥ ತಂತ್ರಸಾರವನ್ನು ತಿಳಿದ ಸಮರ್ಥನೇ, ಸೂಳೆಯರಲ್ಲಿ ಬಲಾತ್ಕಾರ ಮಾಡಿ, ನೂತನವಾದ ಸ್ನೇಹವನ್ನೂ ಹೆಚ್ಚಿಸುವುದಕ್ಕೋಸ್ಕರ ಅಪೇಕ್ಷೆ ಪಡುವ ಜಾಣನೇ, ಹೂಗಳ ಸಮೂಹವನ್ನು ಒಸೆದು ಹಾಕಿ ಅದರ ಪರಿಮಳವನ್ನು ಆಸ್ವಾದನೆ ಮಾಡಬೇಕೆನ್ನುವ ಪ್ರೌಢ ವಿಟರಾಜನೇ, ಕಾಮಾತುರಳಲ್ಲದವಳನ್ನು ಪ್ರೀತಿಯುಂಟಾಗುವಂತೆ ಮಾಡುವ ಈ ಜಾಣ್ಮೆಯನ್ನು ಅದೆಲ್ಲಿ ಕಲಿತೆಯೋ! ೫೦. 'ನಾನು ಸೂಳೆ (ನಿಜ) ಮೊದಲಿನ ನಿನ್ನ ಹಂಗು ಎಳ್ಳಷ್ಟೂ ನನಗಿಲ್ಲ; ನನ್ನ ಇಷ್ಟಲಿಂಗ ಸ್ವಾಮಿಯು ಕೊಟ್ಟ ಈ ಕಾಯಕ ನಿಯಮದೊಳಗೆ ಯಾವಾಗಲೂ ಬಾಳುತ್ತಿದ್ದೇನೆ' ನಿಶ್ಚಲವಾದ ದರ್ಪದಿಂದ ಕೂಡಿ, ನನ್ನನ್ನು ಅನ್ಯಾಯದಿಂದ ನಿಷ್ಪ್ರಯೋಜನವಾದ ನಿನ್ನ ಆಜ್ಞೆಗೆ ಒಳಗುಮಾಡಿಕೊಳ್ಳಬೇಕೆಂದಿದ್ದೀಯೆ. ಎಲೈ, (ರಾಜಾ) ನಿನ್ನನ್ನು ತಿಳಿದವರು ಮೆಚ್ಚುವರೇನು ? ನಿನಗೆ ಈ ಕೆಟ್ಟ ವ್ಯಾಮೋಹವು ತಕ್ಕದ್ದಲ್ಲ.' ೫೧. 'ಭೂಪಾಲನೇ, ಅಂತರಿಕ್ಷದಲ್ಲಿ ಕಮಲದ ಹೂವನ್ನು ತಿರಿದು ತರುವುದಕ್ಕಾದೀತೇ ? ಶ್ರೇಷ್ಠ ಮರೀಚಿಕೆಯಲ್ಲಿ ಬೇಗನೆ ಜಲವನ್ನು ತುಳುಕಿಸಿ ತುಂಬಿತರಲು ಶಕ್ಯವೇ? ಮಳಲ ರಾಶಿಯಲ್ಲಿ ವಿಶೇಷ ಪ್ರಯತ್ನದಿಂದ ಎಣ್ಣೆಯನ್ನು ತೆಗೆಯುವುದಕ್ಕೆ ಆದೀತೆ? ಒಲ್ಲದ ನನ್ನಂಥ ಸ್ತ್ರೀಯಲ್ಲಿ ಸೌಖ್ಯವನ್ನು

[1] ಯ(ಮು)

ಧನಮಂ ತೆತ್ತೊಡಮಿಚ್ಚೆಯುಂ ಸಲಿಸಿ ನಾನಾವಸ್ತುಸಂದೋಹಮಂ
ಮನೆಗೊಲ್ದೆಯ್ದಿಸಿ ರನ್ನಚಿನ್ನದೊಡವಂ ಕೆಯ್ಗೆಯ್ಸಿ ಸಂಪ್ರೀತಿಯುಂ
ಮನದೊಳ್ಮೇಳಿಸಿ ಜಾಣ್ಮೆಯುಂ ಕಲಿಸಿ ಮುನ್ನೇಂ ಕೂಡಿ ಮಚ್ಚಿರ್ದ ಕಾಂ
ತನೊ ನೀನಕ್ಕಟ ಕಿಮ್ಮನೆಂತು ನುಡಿವೈ ದುರ್ವಾರಗರ್ವೋಕ್ತಿಯುಂ[1] ೫೨

ಬರೆದ ಪೊಸ ಚಿತ್ರದಲರೊ
ಳ್ಪರಿಮಳಮಂ ಕೊಳ್ವೆನೆಂಬ ತುಂಬಿಯವೋಲ್ ಸಾ
ರ್ದುರವಣಿಸಿ ನೇಹಮಿಲ್ಲದ
ತರುಣಿಯ ರತಿಗೊಲ್ವ ಮಾನವಂ ಮರುಳಲ್ತೇ ೫೩

ಫುಲ್ಲಶರಕೇಳಿಗೊಲ್ದೊಲ
ವಿಲ್ಲದೊಡಂ ಮೇರೆದಪ್ಪಿ ಮೇಲ್ವಾಯ್ದು ಮನಂ
ನಿಲ್ಲದೆ ಕಾಡುವ ವಿಟರಂ
ಪುಲ್ಲಿಂ ಕಡೆಗಣಿಸಿ ಕಾಣರೇ ಕಾಮಿನಿಯರ್ ೫೪

ಎನಗನುರಾಗಮಿಲ್ಲದುದಱಿಂ ರತಿಸೌಖ್ಯಮದಿಲ್ಲ ನೀನದಂ
ನೆನೆಯದೆ ಬಲ್ಮೆಗೆಯ್ದೊಡಪಕೀರ್ತಿ ಪೊದಳ್ದಪುದೆಯ್ದೆ ಕೇಳ್ದ ಸ
ಜ್ಜನರಿಳಿಕೆಯ್ವರಗ್ಗದ ಭುಜಂಗಸಭಾಂತರದಲ್ಲಿ ಹಾಸ್ಯಮುಂ
ಜನಿಯಿಸುಗುಂ ದುರೀಕ್ಷಣದೆ ದೂಷಣಮಂ ತಳೆಯಲ್ಕೆ ತಕ್ಕುದೇ ೫೫

ಹೊಂದುವುದಕ್ಕಾದೀತೇ?' ೫೨. 'ನೀನು ಪೂರ್ವದಲ್ಲಿ ಹಣವನ್ನು ಸಲ್ಲಿಸಿ ಆ ಕೂಡಲೇ ಇಚ್ಛೆಯನ್ನೂ ನೆರವೇರಿಸಿ, ಪ್ರೀತಿಯಿಂದ ನಾನಾ ರೀತಿಯ ವಸ್ತುಗಳ ಸಮೂಹವನ್ನು ಕಳುಹಿಸಿ, ರತ್ನ ಮತ್ತು ಸುವರ್ಣದ ಆಭರಣಗಳನ್ನು ಸಲ್ಲಿಸಿ ಒಳ್ಳೆಯ ಪ್ರೀತಿಯನ್ನೂ ಮನಸ್ಸಿನಲ್ಲಿ ತುಂಬಿಕೊಂಡು ಮೆಚ್ಚಿಬಂದ ಕಾಂತನೇ? ಅಕ್ಕಟ! ಸುಮ್ಮನೆ ಹೀಗೆ ಸಹಿಸಲ ಸಾಧ್ಯವಾದ ಗರ್ವದ ಮಾತನ್ನು ನುಡಿಯುತ್ತಿರುವೆಯಾ?' ೫೩. 'ಬರೆದಿರುವ ಹೊಸ ಚಿತ್ರದ ಹೂವಿನಲ್ಲಿ ಪರಿಮಳವನ್ನು ಆಸ್ವಾದಿಸುತ್ತೇನೆಂಬ ಭ್ರಮರದ ಹಾಗೆ ಸಮೀಪಕ್ಕೆ ಬಂದು ಬಲಾತ್ಕಾರವಾಗಿ ಪ್ರೀತಿಯಿಲ್ಲದ ಸ್ತ್ರೀಯಲ್ಲಿ ರತಿ ವ್ಯವಹಾರಕ್ಕೆ ಆಶಿಸುವ ಮನುಷ್ಯನು ಹುಚ್ಚನಲ್ಲವೇ?' ೫೪. 'ಮದನ ಕ್ರೀಡೆಗೆ ಇಚ್ಛಿಸಿ, ಪ್ರೀತಿಯಿಲ್ಲದಿರುವವರಲ್ಲಿ ಮೇರೆದಪ್ಪಿ ಮನಸ್ಸುನಿಲ್ಲದೆ ಮೇಲೆ ಬಿದ್ದು, ಕಾಡುತ್ತಿರುವ ವಿಟರುಗಳನ್ನು ಸ್ತ್ರೀಯರುಗಳು ಹುಲ್ಲಿಗಿಂತಲೂ ತಿರಸ್ಕಾರವಾಗಿ ಕಾಣುವುದಿಲ್ಲವೇ?' ೫೫. ನನಗೆ (ನಿನ್ನಲ್ಲಿ) ಅನುರಾಗವಿಲ್ಲದ ಕಾರಣ (ನೀನು ಬಯಸಿರುವ) ಆ ರತಿ ಸುಖವು ಇಲ್ಲ. ನೀನು ಅದನ್ನಪೇಕ್ಷಿಸದೆ (ಹೋಗು) ಬಲಾತ್ಕಾರ ಮಾಡಿದರೆ, ಅಪಕೀರ್ತಿಯು ಹೆಚ್ಚಾಗುವುದು, (ಈ ವಿಚಾರವನ್ನು) ಚೆನ್ನಾಗಿ ಕೇಳಿದ ಸಜ್ಜನರುಗಳು (ನಿನ್ನನ್ನು) ತಿರಸ್ಕರಿಸುತ್ತಾರೆ. ವಿಟಜನರ ಸಮೂಹ ಮಧ್ಯದಲ್ಲಿ ಹಾಸ್ಯಕ್ಕೆ ಗುರಿಯಾಗುವುದೂ. ಈ ಕೆಟ್ಟದಾದ ಸ್ತ್ರೀ ಸಂಬಂಧದ ಇಚ್ಛೆಯಿಂದ ದೂಷಣೆಯನ್ನು ಹೊಂದು

[1] ಯಿಂ(ಅ)

ಅದಱಿಂದೆ ಮಾನನಿಧಿ ಗುರು
ಪದಭಕ್ತಂ ನೀತಿಯುಕ್ತನರಸಂ ನೀನ
ಪ್ಪುದನಱಿದು ನಿನ್ನೊಳಪಯಶ
ಮುದಯಿಸದಂತಾಳ್ವುದಮಳನೀತಿಕ್ರಮಮಂ ೫೬

ಗಂಡನೊ ನೀಂ ಸಲೆ ಪಡಪಿನ
ಮಿಂಡನೊ ಪೊನ್ನಿತ್ತು ಮುನ್ನಮೆನ್ನಂ ನೀನೇಂ
ಕೊಂಡವನೊ ಬಱಿದೆ ನಿನ್ನು
ದ್ದಂಡತೆಯಂ ತೋರ್ಪೆ ನಿನ್ನನಾರ್ಮೆಚ್ಚುವರೋ ೫೭

ದೊರೆತನದ ಬಲ್ಮೆಯೊಲ್ಲದ
ತರುಣಿಯನೊಲಿಸಲ್ಕೆ ಮರ್ದೊ ಮಂತ್ರವೊ ಯಂತ್ರೋ
ದ್ಧರಣವೊ ದೂತಿಯೊ ವಶ್ಯಾಂ
ಕುರತಿಲಕಮೊ ನನ್ನಿವೇಳ್ ಭುಜಂಗಲಲಾಮಾ ೫೮

ವ॥ ಎಂದಿಂತವಳನೇಕವಿಧದಿಂ ವಿಡಂಬಿಸಿ ನುಡಿಯೆ ಗುರುಭಕ್ತರಾಜನದಕ್ಕೆ ತೆಕ್ಕದೆ ಮತ್ತಂ ವಿಮೋಹಿತನಾಗಿರ್ಪುದಂ ಕಂಡು ಪಣ್ಯಾಂಗನೆ ಗಣಿಕಾವಿಡಂಬಮಂ ನುಡಿದಿವಂಗೆ ರತಿಜುಗುಪ್ಸೆದೋರ್ಪೆ ನೆಂದು ನೆನೆದು—

ವುದು ತಕ್ಕದ್ದೇ?' ೫೬. 'ಆದ್ದರಿಂದ ಮಾನ ನಿಧಿಯಾದ ನೀನು ಗುರುವಿನ ಪಾದ ಭಕ್ತನು; ನೀತಿಯಿಂದ ಕೂಡಿದವನು; (ಮೇಲಾಗಿ) ಅರಸನಾಗಿರುವುದರಿಂದ ಅರಿತುಕೊಂಡು ನಿನಗೆ ಅಪ ಯಶಸ್ಸುಬಾರದ ಹಾಗೆ ಶ್ರೇಷ್ಠ ನೀತಿಯ ಕ್ರಮವೇನೆಂಬುದನ್ನು (ತಿಳಿದು) ಹೊಂದು?' ೫೭. 'ನೀನೇನು ಗಂಡನೋ,? ಕೇವಲ ಸುರತದ ಮಿಂಡನೋ? ಮೊದಲೇ ಹಣವನ್ನು ಕೊಟ್ಟು ನನ್ನನ್ನು ಕೊಂಡವನೇನು ? ವ್ಯರ್ಥವಾಗಿ ನೀನು (ನನ್ನ ಮೇಲೆ) ಬಲಾತ್ಕಾರವನ್ನು ತೋರಿಸುತ್ತಿದ್ದೀಯೆ. (ಇಂಥ) ನಿನ್ನನ್ನಾರು ಮೆಚ್ಚುವರು?' ೫೮. ಭುಜಂಗ ಶ್ರೇಷ್ಠನೇ, ದೊರೆತನದ ಶಕ್ತಿಯು ಒಲ್ಲದೆ ಇರುವ ತರುಣಿಯರನ್ನು ಒಲಿಸಿ ಕೊಳ್ಳುವ (ಒಂದು) ಔಷಧವೋ? ಮಂತ್ರವೋ? ಯಂತ್ರದ ಉದ್ಧರಣವೋ ? ಕುಂಟಣ ಗಿತ್ತಿಯೋ? ಸ್ತ್ರೀಯರನ್ನು ವಶೀಕರಣಕ್ಕೋಸುಗ ಹಚ್ಚಿದ ಹಣೆಬೊಟ್ಟೋ ? ಸತ್ಯವಾಗಿ ಹೇಳು.' ವ॥ ಈ ರೀತಿಯಲ್ಲಿ ಆ ವೇಶ್ಯೆಯು ಅನೇಕ ವಿಧವಾಗಿ ಅಪಹಾಸ್ಯಮಾಡಿ ನುಡಿಯಲು ಆ ಗುರುಭಕ್ತರಾಜನು ಅದಕ್ಕೆ ಹಿಂದೆಗೆಯದೆ ಮತ್ತೂ ಮೋಹಗೊಂಡವ ನಾಗಿಯೇ ಇರುವುದನ್ನು ಕಂಡು, ಆ ವೇಶ್ಯೆಯು ಸೂಳೆಯರು ತೋರಿಸುವ ತಿರಸ್ಕಾರದ ಮೂಲಕ ತಿರಸ್ಕರಿಸಿ ತಿಳಿಸಿ ಈತನಿಗೆ ಸುರತ ವಿಷಯದಲ್ಲಿ

ಕಾಮಹರಭಕ್ತ ನಿನಗೀ
ಕಾಮ[1]ವ್ಯಾಮೋಹಮುಚಿತಮೇ ಬಿಡು ಬಿಡು ಮಾ
ಯಾಮಯಮೆನಿಸುವ ಗಣಿಕಾ
ಸ್ತೋಮದೊಳೆಲೆ ತಿಳಿದು ನೋಡು ಪುರುಳಿನಿತುಂಟೇ ೫೯

ಎಲೆ ವಿಟರಾಜ ಕೇಳ್ಗಣಿಕೆಯರ್ಗುಣಹೀನೆಯರರ್ಥಲೋಭಸಂ
ಚಲೆಯರತೀವ ಧೂರ್ತೆಯರಸತ್ಯಸಮೇತೆಯರಂಗಜಾತವಿ
ಹ್ವಲೆಯರಸಾರಮಾನಸೆಯರಸ್ತ ವಿಚಾರೆಯರಾಪ್ತವಂಚನಾ
ಕುಲೆಯರಧರ್ಮಶೀಲೆಯರನಾರುದುಷ್ಟಜನಾನುಕೂಲೆಯರ್ ೬೦

ಕೃತಕಾಲಾಪೆಯರಿಚ್ಛೆಗಾರ್ತಿಯರನಲ್ಪಾಶಾರ್ತೆಯರ್ಪಾಪಸಂ
ಗತೆಯರ್ಕೀಳ್ಗೆಯರುಗ್ರೆಯರ್ಚಪಲೆಯರ್ಗೋಣ್ಕೊಯ್ಕೆಯರ್ದಂಭಸಂ
ಯುತೆಯರ್ಮಾನವಿಹೀನೆಯರ್ಖಲೆಯರನ್ಯಾಯಾಧ್ವಸಂಚಾರೆಯ
ರ್ವಿತತಸ್ನೇಹವಿದೂರೆಯರ್ವಿಗಡೆಯರ್ವಿಧ್ವಸ್ತವಿಶ್ವಾಸೆಯರ್ ೬೧

ಮೊಱೆಗೆಟ್ಟೊಂದುವ ಧೂರ್ತೆಯ
ರಱಿಕೆಯೊಳಸುವಸುವ ಕೊಳ್ವ[2]ರಕ್ಕಸಿಯರ್ಬಳ

ಜುಗುಪ್ಸೆಯು ಉಂಟಾಗುವ ಹಾಗೆ ಮಾಡುತ್ತೇನೆ ಎಂದು ಯೋಚಿಸಿ. ೫೯. 'ಹೇ ಕಾಮಹರನಾದ ಶಿವನ ಭಕ್ತನೇ, ನಿನಗೆ ಈ ಮನ್ಮಥ ಸಂಬಂಧವಾದ ಆಸಕ್ತಿಯು ಉಚಿತವೇ ? ಬಿಡು ಬಿಡು ! ಎಲೈ (ರಾಜಾ), ಮಾಯಾಮಯವೆಂದೆನಿಸುವ ಗಣಿಕೆಯರ ಸಮೂಹದಲ್ಲಿ ಹುರುಳು ಏನಾದರೂ ಉಂಟೆಂಬುದನ್ನು ವಿಚಾರ ಮಾಡಿ ನೋಡು.' ೬೦_೬೨. 'ಎಲೈ ವಿಟವೃತ್ತಿಗಿಳಿದಿರುವ ರಾಜನೇ, ಕೇಳು ; ಸೂಳೆಯರು ಹೀನ ಗುಣದವರು ; ಹಣದಾಸೆಯಿಂದ ಚಂಚಲರಾದವರು ; ಬಹುಮೋಸಗಾರ್ತಿಯರು ; ಸುಳ್ಳಿನಿಂದ ಕೂಡಿದವರು ; ಮನ್ಮಥನಿಂದ ವ್ಯಾಕುಲಗೊಂಡವರು ; ಸಾರ ರಹಿತವಾದ ಮನಸ್ಸಿನವರು ; ವಿಚಾರ ಹೀನೆಯರು, ಹಿತವಾದವರನ್ನು ಮೋಸಗೊಳಿಸುವುದರಲ್ಲಿ ಆಕುಲರಾದವರು ; ಅಧರ್ಮವನ್ನೇ ಶೀಲವಾಗಿ ಉಳ್ಳವರು ; ದುಷ್ಟಜನರಿಗೆ ಸದಾ ಅನುಕೂಲರಾದವರು ; ಕಪಟದ ಮಾತಿನವರು ; ಕಾಮವಿಕಾರವನ್ನುಂಟು ಮಾಡುವವರು ; ವಿಶೇಷ ಆಸೆಯ ಬಾಧೆಗೊಳಗಾದವರು ; ಪಾಪದಿಂದ ಕೂಡಿದವರು ; ನೀಚಸ್ವಭಾವದವರು ; ಕೋಪವುಳ್ಳವರು, ಚಪಲಸ್ವಭಾವದವರು, ಕುತ್ತಿಗೆಯನ್ನು ಕತ್ತರಿಸುವವರು, ಬಾಹ್ಯಾಡಂಬರದಿಂದ ಕೂಡಿದವರು, ಮಾನ ಹೀನವಾದವರು ; ಅಧಮ ಸ್ವಭಾವದವರು ; ಅನ್ಯಾಯದ ಮಾರ್ಗವನ್ನು ತುಳಿಯುವವರು; ಗಾಢವಾದ ಸ್ನೇಹದಿಂದ ದೂರವಾಗಿರುವವರು ; ಸಂಕಟಕಾರಿಣಿಯರು ಪ್ರೇಮವೆಂಬುದನ್ನೇ ನಾಶಮಾಡಿದವರು ; ನಾಚಿಕೆಗೆಟ್ಟು ಕೊಡುವ ಧೂರ್ತೆಯರು ; ತಿಳಿಯಾಗಿ

1 ವಶಾ(ದ) 2 ನೀ (ಅ, ಚ)

ಲ್ಬಿಱುಸಿದ ಬಿಂಕದ ಮಾತಿನ
ನಱುಗುಲಿಗಳ್ವಿಟರ ಮರ್ಮಪಟಕತ್ತರಿಗಳ್ ೬೨

ಅಡಿಮುಡಿ ಸಂಚುವಂಚನೆ ವಿಡಾಯುಮಡರ್ಪು ತೊಡರ್ಪು ತೋಟಿರ
ಟ್ಟಡಿತನವೊಲ್ಮೆ ಬಲ್ಮೆ ಪದಿರಣ್ಮು ಚಮತ್ಕೃತಿ ಗಾಡಿ ಮೋಡಿಯಾ
ಱಡಿ ಪುಸಿ ವಾಸಿ ವೈಶಿಕಮದಿರ್ಪಣಕಂ ಮುಳಿಸೆರ್ಗು ಸೊರ್ಕು ಬ
ರ್ಕುಡಿ ಪುರುಡಂಕೆ ಝುಂಕಣೆ ನುಸುಳ್ಗಣಿಕಾಂಗನೆಯರ್ಗೆ ಶಾಶ್ವತಂ ೬೩

ಧನದಾಶೆಯೊಳೇದಿರ್ದುಂ
ಮನುಷ್ಯ ಧರ್ಮಾಪಹಾರಿ ಗಣಿಕಾನಿವಹಂ
ಜನಿತಾಭಿಮನ್ಯುನರಕೋ
ಪನಿಮಿತ್ತಂ ತಾನೆನಿಪ್ಪುದೇನಚ್ಚರಿಯೋ ೬೪

ಬಲಿದಸ್ಥಿವ್ರಜದಿಂದೆ ಪಂಜರಮನಂತ್ರವ್ರಾತದಿಂ ಕಟ್ಟಿ ಮೇ
ಲೊಲವಿಂ ಮಾಂಸಮನಲ್ಲಿ ಮೆತ್ತಿ ತೊವಲಿಂದಾಚ್ಛಾದನಂಗೆಯ್ದು ದು
ರ್ಮಲಮಂ ತಾನೊಳಗಿಟ್ಟು ತೀವಿ ಬಿದಿ ಮಾಡಿರ್ದೊಂದು ಚೋಹಂ ಗಡೀ
ಲಲನಾದೇಹಮನಾರತಂ ಕಿಸುಕುಳಂ ದುರ್ವಾರದೋಷಾಕುಳಂ ೬೫

ವ್ಯವಹರಿಸಿ) ಹಣವನ್ನೂ, ಪ್ರಾಣವನ್ನೂ ಎಳೆದುಕೊಳ್ಳುವ ರಾಕ್ಷಸಿಯರು ; ಬಲು ಬಿರುಸಿನ, ಗರ್ವದ ಮಾತಿನವರು ; ನಯಮಾಡುವುದರಲ್ಲಿ ಸಮರ್ಥೆಯರು ; ವಿಟರ ಗುಟ್ಟು ಎನ್ನುವ ಬಟ್ಟೆಗೆ ಕತ್ತರಿಯಂತಿರುವವರು. ೬೩. ಗಣಿಕಾಸ್ತ್ರೀಯರು ಕಾಲಿನಿಂದ ತಲೆಯವರೆಗೂ ಸಂಚುಳ್ಳವರು ; ವಂಚನೆ, ಆಡಂಬರ, ಆಶ್ರಯ, ವಿಘ್ನ, ಜಗಳಗಂಟತನ. ಹಟಮಾರಿತನ, ಒಲಿಸಿಕೊಳ್ಳುವಿಕೆ, ಬಲಾತ್ಕಾರ ಮಾಡುವಿಕೆ, ಚಾಕಚಕ್ಯತೆ, ಪರಾಕ್ರಮ, ಚಮತ್ಕಾರ, ಸಂಭ್ರಮ, ಕಣ್ಣುಕಟ್ಟು ವಿದ್ಯೆ, ಸುಲಿಗೆ ಮಾಡುವಿಕೆ, ಸುಳ್ಳು ಹೇಳುವಿಕೆ, ಮಾತಿನ ಕಪಟ, ಚಾಂಚಲ್ಯ, ಅಣಕಿಸುವಿಕೆ, ಕೋಪ, ಎಗ್ಗು, ಸೊಕ್ಕು, ಬೆರಗು, ಸ್ಪರ್ಧೆ, ಹಿಡಿತ (ಅಂಕೆ), ಬೆದರಿಸುವಿಕೆ, ಜಾರಿಕೊಳ್ಳುವಿಕೆ ಇಲ್ಲೆಲ್ಲ (ಅವರ) ಶಾಶ್ವತ ಗುಣಗಳುಳ್ಳವರು. ೬೪. 'ಗಣಿಕೆಯರ ಸಮೂಹವು ಅವರು ಹಣದ ಮೇಲಿನ ಆಸೆಯಿಂದ ಕೂಡಿ ಮನುಷ್ಯ ಧರ್ಮವನ್ನೇ ಅಪಹರಿಸುವರು ; (ಕುಬೇರನ ಮೇಲಣ ಆಸೆಯಿಂದಿದ್ದು, ಕುಬೇರನನ್ನೇ ನಾಶಮಾಡುವವರು); ಹೆಚ್ಚಾದ ದುಃಖವನ್ನು ಹುಟ್ಟಿಸ ತಕ್ಕವರಾಗಿ ನರಕಕ್ಕೆ (ಉತ್ತಮ ಉಪಕರಣರಾದವರು. (ಅಭಿಮನ್ಯುವನ್ನು ಹುಟ್ಟಿಸಿದವರೆನಿಸಿಯೂ ಅರ್ಜುನನ ಕೋಪಕ್ಕೆ ನಿಮಿತ್ತರಾದವರು) ಹೀಗೆನಿಸಿರುವುದು ಅದೇನು ಆಶ್ಚರ್ಯವೋ !' ೬೫. 'ಸತತವೂ ಹೇಯ ವಸ್ತುಗಳಿಂದ ಹೋಗಲಾಡಿಸುವುದಕ್ಕಸಾಧ್ಯವಾದ ದೋಷಗಳಿಂದ ತುಂಬಿದ ಸ್ತ್ರೀಯರ ದೇಹವು–ಬ್ರಹ್ಮನು ಮೂಳೆಗಳ ಸಮೂಹದಿಂದ ಗೂಡೊಂದನ್ನು ಮಾಡಿ, (ಅದನ್ನೂ) ನರಗಳ ಸಮೂಹದಿಂದ ಬಿಗಿದು, ಒಲವಿನಿಂದ ಅಲ್ಲಲ್ಲಿ ಮಾಂಸವನ್ನು ಮೆತ್ತಿ ತೊಗಲಿನಿಂದ ಅದನ್ನು ಮುಚ್ಚಿ, ಒಳ ಭಾಗದಲ್ಲಿ ಅಸಹ್ಯ ಮಲವನ್ನಿಟ್ಟು ತುಂಬಿ, ಮಾಡಿದಂಥ ಒಂದು ಮೋಸದ ಗೊಂಬೆಯಲ್ಲವೇ ?'

ತಲೆ ವಿತತಶ್ಲೇಷ್ಮರಸದ
ನೆಲೆವದನಂ ದೋಷಸದನವೆಂಲ್ವಡಸಿದ ಬಾ
ಯ್ಚಲರಸನಾಭೋಗಿಯು ಬ
ಲ್ಬಿಲಮಧರಂ ರುಧಿರಮಾಂಸ ಪರಿಪಕ್ವಫಲಂ ೬೬

ಕಣ್ಗಳಘವಲ್ಲರಿಯ ಪೊಸ
ಪಣ್ಗಳ್ ಜಾಜಡಸಿ ತೋರ್ಪ ಪುಣ್ಗಳ್ಮಗುಳ್ದಾ
ಪೆಣ್ಗಳ ನಾಸಿಕೆ ಸಿಂ[1]ಬುಳ
ನುಣ್ಗೊಳವಿಯುಪಾಂಗಮಘಸರೋಧಿತರಂಗಂ ೬೭

ಗಳಮದು ದುರುಕ್ತಿದನುಜೆಯ
ಪೊಳಲಪ್ಪುವ ತೋಳ್ಯಮಾಂತರಾಜನ ಬಾಳ್ಕೈ
ದಳಮಧಿಕ ಲೋಭಭೂಜದ
ದಳಮಂಗುಲಿ ಬೊಜಗಮೀಂಗೆ ಮೀಂಗುಲಿ ಪೆಱತೇಂ ೬೮

ಮೊಲೆ ಬಸೆಯ ಮಾಂಸರಾಶಿಯ
ಮಲೆ ಪೊಡೆ ದುರ್ಮಲದ ಕರುಳ್ಗಳೆಡೆಯುರುನಾಭೀ
ವಲಯಂ ಸಲೆ ದುರ್ಗಂಧದ
ನಿಲಯಂ ದುರ್ಜಲದ ಪಳಿನಮುರ್ಬಿದ ಜಘನಂ ೬೯

ಪೊಲಸಿನ ನೆಲೆ ರುಧಿರದ ಕುಳಿ
ವಿಲಿವಿಲಿಸುವ ಪುಳುಗಳೊಗೆವ ಪುತ್ತು ಪುರೀಷಂ
ನೆಲಸಿದ ದರಿ ಕಾಮಾಹಿಯ
ಬಿಲಮಂಗಜಗೃಹಮನಂಗದುರ್ಜಲಕೂಪಂ ೭೦

ತೊಡೆ ಪೇರಡಗಿನ ಕಾಳಿಜ
ದೆಡೆ ಚರಣಂ ದುರಿತಕಾರಣಂ ತಾನೆನಿಪೀ

೬೬. 'ತಲೆಯೆಂಬುದು ಹೆಚ್ಚಾದ ಶ್ಲೇಷ್ಮರಸ (ಸಿಂಬಳ) ದಿಂದ ತುಂಬಿದ ಸ್ಥಾನ ; ಮುಖವು ಪಾಪದ ಮನೆ ; ಮೂಳೆಗಳಿಂದ ತುಂಬಿದ ಬಾಯಿಯು ಚಂಚಲವಾದ ನಾಲಿಗೆಯೆಂಬ ಹಾವಿನ ದೊಡ್ಡ ಬಿಲ ; ತುಟಿಯು ರಕ್ತ ಮಾಂಸಗಳಿಂದ ಪಕ್ವಗೊಂಡ ಹಣ್ಣು, ೬೭–೬೮. 'ಹೆಣ್ಣುಗಳ ಕಣ್ಣುಗಳು ಪಾಪವೆಂಬ ಬಳ್ಳಿಯ ಹೊಸ ಹಣ್ಣುಗಳು ; (ಮತ್ತು) ಆ ಕಣ್ಣಿನ ಜಾರು, ತುಂಬಿಕೊಂಡು ಕಾಣುವ ಹುಣ್ಣುಗಳು ; ಮೂಗು ಸಿಂಬಳು ತುಂಬಿದ ನುಣುಪಾದ ನಾಳಗಳು ; ಕಡೆಗಣ್ನೋಟವು ಪಾಪವೆಂಬ ಸಮುದ್ರದ ತೆರೆ ; ಆ ಕುತ್ತಿಗೆಯು ದುರ್ಭಾಷೆಯೆಂಬ ರಾಕ್ಷಸಿಯ ಪಟ್ಟಣ ; ಅಪ್ಪುವ ತೋಳುಗಳು ಯಮನ ಖಡ್ಗಗಳು, ಕೈಯಕಳವು (ಅಂಗೈ), ಹೆಚ್ಚಾದ ಆಸೆಯೆಂಬ ಮರದ ಎಲೆಗಳು ; ಬೆರಳುಗಳು ವಿಟರುಗಳೆಂಬ ಮೀನುಗಳಿಗೆ ಗಾಳವಲ್ಲದೆ ಮತ್ತೇನು ? ೬೯–೭೧. 'ಮೊಲೆಯು ಕೊಬ್ಬಿದ ಮಾಂಸರಾಶಿಯ ಬೆಟ್ಟ ; ಹೊಟ್ಟೆಯೆಂಬುದು ಕೆಟ್ಟ ಅಮೇಧ್ಯ

[1] ಸುಂ(ಚ)

ಕಡುಪೆರ್ಬಡಿಕೆಯು ಗಣಿಕೆಯು
ರೊಡಲೊಳ್ಪುರುಡುಂಟೆ ತಿಳಿಯೆ ಪೇಳ್ನೃಪತಿಲಕಾ ೭೧

ಜನತಾಪ್ರದಮಾಲೋ
ಕನಮಿಂದ್ರಿಯಮೃಗದ ಬಲೆ ವಿಕಾರದ ನೆಲೆ ಸಂ
ಜನಿತವಿಮೋಹಮರೀಚಿಕೆ
ಯನಿಶಂ ಚಪಲಂ ವಿವೇಕಸರಸಿಜತುಹಿನಂ ೭೨

ಅಣಕದ ನೆಲೆ ಸೋಲಿಪ ಬಿ
ನ್ನಣದಿಂ ನಂಬಿಸುವ ಡೊಂಬಿನೆಡೆ ಪುಸಿ ನುಸುಳೊ
ಡ್ಡಣೆ ಪೊರೆಯುರವಳಿಪಿನ ಸಂ
ದಣಿ ಪಳಿ ಜಗಳಂಗಳಿಕ್ಕೆ ನುಡಿ ಗಣಿಕೆಯುರಾ ೭೩

ಅರಿಷಡ್ವರ್ಗದ ತವರತಿ
ವಿರಸಂ ಮಲಿನಂ ಕೃತಘ್ನಮಸ್ಥಿರಮಶುಭಂ
ದುರಿತನಿಧಾನಂ ಮಾಯಾಂ
ಕುರಬೀಜಂ ವಾರಕಾಮಿನೀಮನಮರಸಾ ೭೪

ವಿರುವ ಕರುಳುಗಳ ಸ್ಥಾನ ; ದೊಡ್ಡ ಹೊಕ್ಕಳು ಪ್ರದೇಶವು ನಿಜವಾಗಿ ದುರ್ಗಂಧದ ಮನೆ; ಉಬ್ಬಿದ ಜಘನವು ಕೆಟ್ಟ ನೀರಿನ (ಮೂತ್ರದ) ಮಳಲು ಗುಡ್ಡೆ ಯೋನಿಯು ; ಹೊಲಸಿನ ನೆಲೆ ; ರಕ್ತದ ಹಳ್ಳ ; ವಿಲಿ ವಿಲಿಗುಟ್ಟುತ್ತಿರುವ ಹುಳುಗಳ ಹೊರ ಹೊಮ್ಮುವ ಹುತ್ತು ; ಕೊಳೆ (ಕಲ್ಮಷ) ತುಂಬಿರುವ ದರಿ ; ಮನ್ಮಥನೆಂಬ ಸರ್ಪದ ಬಿಲ ; ಕೆಟ್ಟುದಾದ ಕಾಮರಸದ ಬಾವಿ ; ತೊಡೆಗಳು ದಪ್ಪನಾದ ಮಾಂಸಖಂಡಗಳ ಮೊತ್ತದ ಸ್ಥಾನ; ಕಾಲುಗಳ ಪಾಪಕ್ಕೆ ಕಾರಣವೆನಿಸುವ ಈ ವಿಶೇಷವಾದ ದೊಡ್ಡಸ್ತ್ರಿಕೆಯು ವೇಶ್ಯಾಂಗನೆಯರ ದೇಹದಲ್ಲಿ ವಿಚಾರಿಸಿ ನೋಡಿದರೆ, (ಏನಾದರೂ) ಹುರುಳುಂಟೆ ಮಹಾರಾಜಾ ? ಹೇಳು.' ೭೨. (ಸ್ತ್ರೀಯರ) ನೋಟವು ಜನರಿಗೆ ಸಂತಾಪವನ್ನುಂಟು ಮಾಡುವುದು ; ಇಂದ್ರಿಯಗಳೆಂಬ ಮೃಗದ ಬಲೆ ; ವಿಕಾರದ ನೆರವು ; ಅಜ್ಞಾನದ ಬಿಸಿಲ್ಗುದುರೆಯನ್ನುಂಟು ಮಾಡುವಂತಹುದು ; ಸದಾ ಚಾಪಲ್ಯಗೊಳಿಸುವಂತಹುದು ; ವಿವೇಕವೆಂಬ ಕಮಲಕ್ಕೆ ಹಿಮಪ್ರಾಯವಾದದ್ದು.' ೭೩. 'ವೇಶ್ಯೆಯರ ಮಾತು–ಅಣಕಿಸುವಿಕೆಯು ನೆಲೆ ; ಸೋಲಿಸುವ (ಮೋಹಗೊಳಿಸುವ) ಬಿನ್ನಾಣದಿಂದನಂಬಿಗೆ ಯನ್ನುಂಟುಮಾಡುವ ಡಂಭಾಚಾರದ ನೆಲೆ ; ಹೇಳಿತಪ್ಪುವುದು, ಸುಳ್ಳು–ಇವುಗಳ ತಡಿಕೆ ; ತಿಳುವಳಿಕೆಯನ್ನೇ ನಾಶಮಾಡುವ ಹೊರೆ ; ದುಷ್ಟವಾದ ಜಗಳವನ್ನುಂಟು ಮಾಡುವ ನೆಲೆಮನೆ.' ೭೪. ಮಹಾರಾಜ, ಸೂಳೆಯುರಮನಸ್ಸು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳ ತವರುಮನೆ, ಬಲುಗುಣ ಹೀನವಾದುದು ; ಕಲ್ಮಷದಿಂದ ಕೂಡಿದ್ದು ; ಮಾಡಿದ ಉಪಕಾರವನ್ನು ಮರೆಯುವಂತಹುದು ; ಅಸ್ಥಿರವಾದದ್ದು ; ಅಮಂಗಳವಾದದ್ದು; ಪಾಪದ ವಾಸಸ್ಥಳವೆನಿಸಿದ್ದು;

ಕುಲಹೀನಂ ಸತ್ಕುಲಜಂ
ಖಲನುತ್ತಮನೆಂಬುದಿಲ್ಲದೊಡವೆರೆವರ್ಚಂ
ಚಲಮತಿಗಳ್ಪಣದಾಶೆಗೆ
ಸಲೆ ಪಣವಿಲ್ಲದನನಂಗನಾದೊಡವೊಲ್ಲರ್ ೭೫

ಕ್ಷಣಮಾತ್ರ ಜನಿತ ರತಿಸುಖ
ಕಣಮಂ ನೆಱೆ ನಚ್ಚಿ ಮೆಚ್ಚಿ ಮೆಯ್ಯುಂ ಮನಮುಂ
ಪಣಮುಂ ತೆತ್ತನುದಿನಮಿಂ
ಗಣಿಕೆಯರೊಡವೆರೆವ ಮನುಜನೇಂ ಗಾವಿಲನೋ ೭೬

ಮಾನದ ಹಾನಿಯೊಂದು ನಿಜದೈನ್ಯದಡರ್ಪೆರಡಾತ್ಮಲಜ್ಜೆಯುಂ
ತಾನುಳಿದಿರ್ಪ ಬನ್ನಮದು ಮೂಱಪಹಾಸ್ಯದಳುರ್ಕೆ ನಾಲ್ಕು ಹೃ
ದ್ಗ್ಲಾನಿಯದೈದು ವಿತ್ತದಳಿವಾಱು ವಿಮುಕ್ತಿಯನೆಯ್ದದಿರ್ಪುದೇ
ಳೀ ನೆಗಳ್ದೇಳಱಾಟದಿನಣಂ ಕಿಡುಗುಂ ಗಣಿಕಾರತಿಪ್ರಿಯಂ ೭೭

ಕ್ಷಣರುಚಿ ಜಲಲಿಪಿ ಮುಗಿಲೊ
ಡ್ಡಣೆಯು ನೆಳಲ್ ಕರಂಮಿಂದ್ರಚಾಪಂ ಸಂಧ್ಯಾ
ರುಣರುಚಿ ಚಿರಮಾದೊಡಮಿಂ
ಗಣಿಕಾಸಂಪ್ರೀತಿಯೊರ್ಮೆ ಚಿರಮಾದಪುದೇ ೭೮

ಅಜ್ಞಾನವೆಂಬ ಮೊಳಕೆಗೆ ಬೀಜರೂಪವಾದದ್ದು ! ೭೫. 'ಚಪಲಬುದ್ಧಿಯುಳ್ಳ ಸೂಳೆಯರು (ಇವನು) ಕುಲಹೀನನು, ಸತ್ಕುಲಪ್ರಸೂತನು, ನೀಚನು, ಉತ್ತಮನು-ಎಂಬ ಭೇದವಿಲ್ಲದೆ ಹಣದ ಆಸೆಯಿಂದ ಒಡಗೂಡುವರು (ರತ್ಯಾಸಕ್ತರಾಗುವರು) ; ಹಣವಿಲ್ಲದವನು ಮನ್ಮಥನಾದರೂ (ಅವನನ್ನು) ಒಲ್ಲರು.' ೭೬. 'ಕ್ಷಣಮಾತ್ರ ಹುಟ್ಟಿದ ರತಿಸುಖದ ಲೇಶವನ್ನು ನೆರೆ ಮೆಚ್ಚಿ, ನಂಬಿ, ಮಯ್ಯನ್ನೂ, ಮನವನ್ನೂ, ಹಣವನ್ನೂ, (ಅವರಿಗೆ) ಅರ್ಪಿಸಿ ಅನು ದಿನವೂ ಗಣಿಕೆಯರನ್ನು ಒಡಗೂಡುವ ಮನುಷ್ಯನು ಏನು ಮೂಢನೋ !' ೭೭. 'ಮಾನಹಾನಿಯೊಂದು; ತನ್ನ ದೈನ್ಯದ ಆಶ್ರಯ ಎರಡು, ನಾಚಿಕೆಯನ್ನು ಬಿಟ್ಟು ಇರುವ ಆ ಕಷ್ಟದ ಬಾಳು ಮೂರು, ಅಪಹಾಸ್ಯದ ಆಧಿಕ್ಯವು ನಾಲ್ಕು, ಮಾನಸಿಕ ಬಳಲಿಕೆ ಐದು, ದುಡ್ಡಿನ ನಾಶವು ಆರು, (ಅವರಿಂದ) ಬಿಡುಗಡೆ ಹೊಂದದಿರುವುದು ಏಳು ಈ ಪ್ರಸಿದ್ಧವಾದ ಏಳರ ಕಾಟದಿಂದ ಅತಿಯಾಗಿ ಸೂಳೆಯರೊಡನೆ ರತಿಕ್ರೀಡೆಯಲ್ಲಿ ಆಸಕ್ತಿಯುಳ್ಳವನು ಕೆಟ್ಟುಹೋಗುವನು. ೭೮. 'ಮಿಂಚು, ನೀರಿನಲ್ಲಿ ಬರೆದ ಬರವಣಿಗೆ, ಮೇಘ ಸಮೂಹದ ನೆಳಲು. ಆಲಿಕಲ್ಲು, ಕಾಮನಬಿಲ್ಲು (ಇಂದ್ರಚಾಪ), ಸಂಧ್ಯಾಕಾಲದಲ್ಲಿರುವ ಕೆಂಪು ಕಾಂತಿ-ಇವುಗಳನ್ನು ದೀರ್ಘಕಾಲದವೆನ್ನಬಹುದು (ಆದರೆ) ವೇಶ್ಯೆಯರ ಪ್ರೀತಿಯೂ ಒಮ್ಮೆಯಾದರೂ ಸ್ಥಿರವೆನಿಸೀತೆ ?' ಮಿಂಚು ಮೊದಲಾದವುಗಳಿಗಿಂತಲೂ ವೇಶ್ಯೆಯರ ಅನುರಾಗ ಕ್ಷಣಿಕ

ಅವಿಚಾರಿತರಮಣೀಯಂ
ಭುವನದೊಳೀ ವಾರವಧುಗಳೊಡನಾಟವಿದಂ
ಸುವಿವೇಕವಾಳ್ದ ನಿಶ್ಚಳ
ಶಿವಭಕ್ತಂ ಬಯಸಲಕ್ಕುಮೇ ಬಗೆವಾಗಳ್ ೭೯

ಶರಣಮನೋಮರಾಳಕೆ ಮನೋಜ್ಞಮೆ ಕಾಂತೆಯರಾಳ್ದ ಕೇಕರ
ಸ್ಫುರಿತತಟಿಲ್ಲಸಲ್ಲತೆ ವಧೂದರಹಾಸಸುಧಾಂಶುರೋಚಿ ಶಂ
ಕರಪದಭಕ್ತಲೋಚನಸರೋಜಕೆ ರೋಚಕಮೇ ಮನೋಜಸಂ
ಹರಭರಿತಾಂಗನಂಗಕೆ ಮನೋಜರತೋತ್ಸವಮೊಪ್ಪಲಾರ್ಕುಮೇ ೮೦

ಭಸಿತವಿಲೇಪನಪ್ರಿಯನದೆಂತು ಮೃಗೋದ್ಭವಪಂಕಮಾಂಪನು
ಲ್ಲಸಿತ ಶಿವಾಕ್ಷಿಜಾತಮಣಿಭೂಷಣನೆಂತು ಮಣಿಪ್ರಜಂಗಳಂ
ಪೊಸತೆನೆ ತಾಳ್ವನೊಲ್ದು ಶಿವಮಂತ್ರಪರಾಯಣನೆಂತು ಕಾಮವಾ
ಗ್ವ್ಯಸನಮನೊಲ್ವನೆಂತು ಶಿವಪೂಜಕನನ್ಯರತಕ್ಕೆ ಕೂರ್ಪನೇ ೮೧

ಪಲವಾಳಾಪದಿನೇಂ ಫಲಂ ನೃಪತಿ ಕೇಳ್ನೀಂ ನೀತಿಯುಕ್ತಂ ನಿರಾ
ಕುಲಚಿತ್ತಂ ಗುರುಭಕ್ತನೀಶಭಜನಾಸಕ್ತಂ ಗಡಿಂತಾದ ದು

ವೆಂದು ಭಾವ) ೭೯. ಲೋಕದಲ್ಲಿ ಈ ವಾರಾಂಗನೆಯರ ಒಡನಾಟವು ವಿಚಾರಮಾಡದೆ ಯಿರುವುದರಿಂದಲೇ ರಮಣೀಯವಲ್ಲದೆ ವಿಚಾರಮಾಡಿ ನೋಡಿದಾಗ ಅದು ಸದ್ವಿವೇಕ ವನ್ನು ಹೊಂದಿದ ನಿಶ್ಚಲವಾದ ಶಿವಭಕ್ತಿಯುಳ್ಳವನು ಬಯಸಲಿಕ್ಕೆ ಆದೀತೇ ?' ೮೦. 'ಶಿವಶರಣರ ಮನಸ್ಸೆಂಬ ಹಂಸಪಕ್ಷಿಗೆ ಕಾಂತಾಜನರುಗಳು ಹೊಂದಿರುವ ನಸುಗೆಂಪಿನ ಕಡೆಗಣ್ಣುಗಳ ಪ್ರಕಾಶಿಸುವ ಬಳ್ಳಿಯಂತಿರುವ ಮಿಂಚು ನೋಟವು ಮನೋಹರವಾ ದದ್ದೇ ? ಶಂಕರನ ಪಾದದಲ್ಲಿ ಭಕ್ತಿಯನ್ನಿಟ್ಟಿರುವವರ ಕಣ್ಣೆಂಬ ಕಮಲಕ್ಕೆ ಆ ಸ್ತ್ರೀಯರ ಮುಗುಳು ನಗೆಯೆಂಬ ಬೆಳದಿಂಗಳು ರುಚಿಸುವಂತಹುದೇ ? ಮನ್ಮಥ ಸಂಹಾರಕನಾದ ಶಿವನಿಂದ ಪರಿಪೂರ್ಣಗೊಂಡ ಶರೀರಗಳಾದ (ಶರಣರ) ಅಂಗಕ್ಕೆ ಮನ್ಮಥ ಕ್ರೀಡೆ ಯಿಂದುಂಟಾಗುವ ಸಂತೋಷವು ಒಪ್ಪಲು ಶಕ್ಯವಾದೀತೇ ?' ೮೧. 'ವಿಭೂತಿಯನ್ನು ಧಾರಣಮಾಡಿಕೊಳ್ಳುವುದರಲ್ಲಾಸಕ್ತನಾದವನು ಅದೆಂತು ಕಸ್ತೂರಿಯ ಕೆಸರನ್ನು ಹಚ್ಚಿ ಕೊಳ್ಳುವನು ? ಈಶ್ವರನ ಕಣ್ಣಿನಿಂದ ಹುಟ್ಟಿದವುಗಳಾದ ರುದ್ರಾಕ್ಷಗಳ ಆಭರಣ ವುಳ್ಳವನು ನೂತನವೋ ಎನ್ನುವಂತೆ ರತ್ನಾಭರಣಗಳನ್ನು ಅದೆಂತು ಧರಿಸುವನು ? ಶಿವ ಮಂತ್ರ ಜಪದಲ್ಲಿ ಆಸಕ್ತನಾದವನು, ಮದನ ವಿಷಯಕವಾದ ಮಾತುಗಳ ದುರಭ್ಯಾಸ ವನ್ನು (ಗೀಳನ್ನು) ಹೇಗೆ ಒಪ್ಪುತ್ತಾನೆ ? ಶಿವನ ಪೂಜೆ ಮಾಡುವವನು ಇತರ ವಿಷಯಕ ವಾದ ರತಿಗೆ (ಇಚ್ಛೆಗೆ) ಹೇಗೆ ಪ್ರೀತಿಗೊಳ್ಳುವನೋ !' ೮೨. 'ಮಹಾರಾಜಾ, ಕೇಳು ಅನೇಕ ಮಾತುಗಳಿಂದ ಫಲವೇನು ? ನೀನು ನೀತಿಯುಕ್ತನೂ, ಕಲಂಕರಹಿತವಾದ ಚಿತ್ತ ವುಳ್ಳವನೂ ಈಶ್ವರ ಭಜನೆಯಲ್ಲಿ ಆಸಕ್ತನೂ ಆದವನಲ್ಲವೇ ! ನಾನು ಈ ಮೊದಲು

ರ್ಮಲಭಾಂಡಪ್ರಮದಾಂಗಸಂಗದಣುಮಾತ್ರಾನಂದಕೊಲ್ದೀಶಭ
ಕ್ತಿಲಸತ್ಸಾರಸುಖಾಬ್ಧಿಯಂ ತೊಱೆದು ದಲ್ಪೇಳಾಗದಿರ್ಸಾಱಿದೆಂ ೮೨

ವ॥ ಎಂದು ಪ್ರೌಢಮತಿ ನಾರಿ ವೇಶ್ಯೋಪಾಲಂಭನಂಗೆಯ್ದಿಂತುಸುರ್ದ ಹಿತೋಕ್ತಿಯ ನವಧರಿಸದವಂ ಮದನಮೋಹಾವೇಶಪಾರವಶ್ಯದಿನಡಸಿ ನೋಡುತ್ತುಮಿರೆ ಕಂಡು ಗಣಿಕೆ ವಿಸ್ಮಯಂ ಬಟ್ಟು—

ತೊಱೆದನಿವಂ ಶಿವಭಕ್ತಿಯೊ
ಳೆಱಕಮನಾತ್ಮೀಯನಯಮನೇವೇಳ್ದೊಡಮೇ
ತೆಱದಿಂ ಪರಿಪಡದೀತನ
ತಱಿಸಂದಂಗಜವಿಕಾರಮೇಗೆಯ್ದಪೆನಾಂ ೮೩

ವ॥ ಎಂದು ಚಿಂತಿಸಿ ಮಗುಳ್ದೊಂದುಪಾಯಮಂ ನೆನೆದು—

ಅತಿಮೂರ್ಖರ ಮನಮಂ ಸ
ನ್ನುತ ಕಥೆವೇಳ್ದಾತ್ಮವಶಮನೆಸಗೆಂಬ ಸಮು
ನ್ನತ ನೀತಿಯೊಳಮಿವಂಗಾಂ
ಕತೆವೇಳ್ದೀಕ್ಷಿಪೆನೆನುತ್ತೆ ನೆನೆದಿಂತೆಂದಳ್ ೮೪

ಎನಿತೆನಿತು ಹಿತಮನಾನೊ
ಲ್ದನುನಯದಿಂ ಪೇಳೆ ಕೇಳ್ದನಲ್ಲೆಲೆ ನೀಂ ಮು

ಹೇಳಿದ ರೀತಿಯಲ್ಲಿ ಕೆಟ್ಟ ಮಲವನ್ನು ತುಂಬಿದ ಮಡಕೆಯಂತಿರುವ ಸ್ತ್ರೀ ದೇಹ ಸಂಬಂಧದಿಂದುಂಟಾಗುವ ಲೇಶಮಾತ್ರದ ಆನಂದಕ್ಕೆ ಇಚ್ಛಿಸಿ, ಈಶ್ವರ ಭಕ್ತಿಯೆಂಬ ಪ್ರಕಾಶಿಸುವ ಶ್ರೇಷ್ಠ ಕ್ಷೀರ ಸಮುದ್ರವನ್ನು ಬಿಟ್ಟು ಮೂಢನಾಗದೆ ಇರು. ನಿನಗೆ ನಿಶ್ಚಯವನ್ನು ಸಾರಿದ್ದೇನೆ.' ವ॥ ಹೀಗೆಂದು ಆ ಪ್ರೌಢ ಬುದ್ಧಿಯ ವೇಶ್ಯಾನಾರಿಯು ಸೂಳೆಯರ (ವ್ಯಕ್ತಿತ್ವ) ವನ್ನು ತಿರಸ್ಕರಿಸಿ ಈ ರೀತಿ ಹೇಳಿದ ಹಿತೋಕ್ತಿಗಳನ್ನು ಆ ರಾಜನು ಮನಸ್ಸಿಗೆ ತಂದುಕೊಳ್ಳದೆ, ಮನ್ಮಥ ಸಂಬಂಧದ ಮೋಹದಿಂದ ಪರವಶನಾಗಿ ದಿಟ್ಟಿಸಿ (ಅವಳನ್ನೇ) ನೋಡುತ್ತಿರಲು ಕಂಡು ಅವಳು ಆಶ್ಚರ್ಯವನ್ನು ಹೊಂದಿ ೮೩. ಈ ರಾಜನು ಶಿವಭಕ್ತಿಯಲ್ಲಿ ವಿಶ್ವಾಸವನ್ನೂ, ತನ್ನ ನೀತಿಯನ್ನೂ ತ್ಯಜಿಸಿದನು. ಏನು ಹೇಳಿದರೂ ಯಾವರೀತಿಯಿಂದಲೂ ಈತನಿಗುಂಟಾದ ಮನ್ಮಥ ಸಂಬಂಧದ ವಿಕಾರವು ನಾಶವಾಗುತ್ತಿಲ್ಲ ; ನಾನೀಗ ಏನು ಮಾಡಲಿ ! ವ॥ ಹೀಗೆಂದು (ಮನಸ್ಸಿನಲ್ಲಿ) ಚಿಂತಿಸಿ ಪುನಃ ಒಂದು ಹಂಚಿಕೆಯನ್ನು ನೆನೆದು ೮೪. 'ಅತ್ಯಂತ ಮೂರ್ಖನಾದವನ ಮನಸ್ಸನ್ನು ಶ್ರೇಷ್ಠವಾದ ಕಥೆಯನ್ನು ಹೇಳಿ ಸ್ವಾಧೀನಪಡಿಸಿಕೋ' ಎಂಬ ಒಂದು ನೀತಿಯುಂಟು. (ಆದ್ದರಿಂದ) ಇವನಿಗೊಂದು ಕಥೆಯನ್ನು ನಾನು ಹೇಳಿ ನೋಡುತ್ತೇನೆಂದು ನೆನೆದು ಹೀಗೆ ಹೇಳಿದಳು ; ೮೫. 'ಎಲೈ ನೃಪಾಲನೆ, ನಾನು ಒಲಿದು ಪ್ರೀತಿಯಿಂದ ಎಷ್ಟೆಷ್ಟೋ ಹಿತವನ್ನು ಹೇಳಿದರೂ ನೀನು ಕೇಳಿದವನಾಗಲಿಲ್ಲ ; ಹಿರಿಯರು

ನ್ನಿನವರ್ಕೇಳ್ದಾಪ್ತಜನದ
ವಿನಯೋಕ್ತಿಯನಧಿಕಸುಖಮನಾಳರೆ ನೃಪತೀ ೮೫

ವ॥ ಅದೆಂತೆನೆ—

ಅಂಬುಜವಕ್ತ್ರೆಕಂಬುಗಳೆ ಕುಂಭಪಯೋಧರೆ ಪದ್ಮಗಂಧಿ ರೋ
ಲಂಬಕಚಾಭಿರಾಮೆ ರಮಣೀಯಮೃದುಸ್ಮಿತೆ ಶಂಬರಾರಿಮೋ
ಹಾಂಬುಧಿಚಾರುಚಂದ್ರಿಕೆ ನಿಜೋರುವಿನಿರ್ಜಿತರಂಭೆ ರಂಭೆ ಕಂ
ಜಾಂಬಕಿ ಜಂಭವೈರಿಹೃದಯೋತ್ಸವಕಾರಿಣಿ ನಾಕಲೋಕದೊಳ್ ೮೬

ಚಳದಳಿಕುಳಪರಿಮಳಮಂ
ಜುಳಸುರಭೂಜಪ್ರಸೂನಕಚಭರೆ ರತ್ನೋ
ಜ್ವಳಭೂಷಣದಿವ್ಯಾಂಬರ
ವಿಳಸಿತೆ ಹರಿಚಂದನಾಂಕಕುಚಯುಗೆ ಮೆಱೆದಳ್ ೮೭

ಅವಳಧರಾಮೃತರಸಮಂ
ಸವಿದಮರ್ದುಣಿಯಾದನರರೆ ಸುರರಾಜಂ ಮೇ
ಣವಳ ಕುಚಗಿರಿಯ ನಿಜನಖ
ಪವಿಯಿಂದಿಱಿದಲ್ತೆ ಗಿರಿವಿಭೇದನನಾದಂ ೮೮

ವ॥ ಎನಿಸಿ ರಂಜಿಪಾ ರಂಭೆಯೊಂದಿನಂ ತನ್ನನೆಳಸಿರ್ದ ದುರಿತಭರಿತಚರಿತನಾದ ವಿಟ ಶ್ವೇತನೆಂಬನಂ ನೋಡಿ ನಗಲೊಡನವಂ ಕಂಡು ವಿಭ್ರಾಂತಚಿತ್ತನಾಗಿ—

ಆಪ್ತ ಜನರ ವಿನಯದಿಂದ ಕೂಡಿದ ಮಾತನ್ನು ಕೇಳಿ ಅಧಿಕ ಸುಖವನ್ನು ಹೊಂದದಿರುವರೇ ?' **ಶ್ವೇತನ ಕಥೆ** ವ॥ ಅದು ಹೇಗೆಂದರೆ– ೮೬–೮೭. ಸ್ವರ್ಗಲೋಕದಲ್ಲಿ ಕಮಲದಂತೆ ಮುಖವುಳ್ಳ, ಶಂಖದಂತೆ ಕುತ್ತಿಗೆಯುಳ್ಳ. ಕಲಶದಂತಿರುವ ಮೊಲೆಗಳುಳ್ಳ, ಕಮಲದ ಪರಿಮಳದಂತೆ ದೇಹ ಪರಿಮಳವುಳ್ಳ. ತುಂಬಿಯ ಹಾಗಿರುವ ಮನೋಹರವಾದ ಮುಂಗುರುಳುಳ್ಳ, ಮನೋಹರವಾದ ಮುಗುಳು ನಗೆಯುಳ್ಳ, ಮನ್ಮಥನ ಅನುರಾಗವೆಂಬ ಸಮುದ್ರಕ್ಕೆ ಮನೋಹರವಾದ ಬೆಳದಿಂಗಳಾಗಿ ಉಳ್ಳ, ತನ್ನ ತೊಡೆಗಳಿಂದ ಬಾಳೆಯ ಕಂಬಗಳನ್ನು ಜಯಿಸಿದವಳೆನಿಸಿದ, ಕಮಲದಂತಹ ಕಣ್ಣುಗಳನ್ನು ಹೊಂದಿದ, ಇಂದ್ರನ ಮನಸ್ಸಿಗೆ ಸಂತೋಷವನ್ನುಂಟು ಮಾಡುವ, ತುರುಬಿನಲ್ಲಿ ಧರಿಸಿದ ಮನೋಹರವಾದ ಕಲ್ಪವೃಕ್ಷದ ಸುಗಂಧ ವಿಶಿಷ್ಟವಾದ ಹೂಗಳಿಂದ ಕೂಡಿ, ಆ ಪರಿಮಳಕ್ಕೆ ಆಸೆಪಟ್ಟು ಚಲಿಸುತ್ತಿರುವ (ಹಾರಾಡುತ್ತಿರುವ) ದುಂಬಿಗಳ ಸಮೂಹವನ್ನುಳ್ಳ, ರತ್ನಗಳ ಪ್ರಕಾಶದಿಂದ ಕೂಡಿದ ಆಭರಣ, ಶ್ರೇಷ್ಠವಾದ ವಸ್ತ್ರಗಳು ಇವುಗಳಿಂದ ಶೋಭಿಸುವ, ಶ್ರೀಗಂಧವೇ ಗುರುತಾಗಿ ಉಳ್ಳ ಕುಚದ್ವಯದ ರಂಭೆಯೆಂಬುವಳು ಮೆರೆಯುತ್ತಿದ್ದಳು. ೮೮. ದೇವೇಂದ್ರನು ಅವಳ ಅಧರಾಮೃತವನ್ನು ಸವಿನೋಡಿ, ಅಮೃತವನ್ನುಣ್ಣುವ ಸ್ವಭಾವವನ್ನು ಪಡೆದನು ; ಅವಳ ಮೊಲೆಗಳೆಂಬ ಬೆಟ್ಟಗಳನ್ನು ತನ್ನ ಉಗುರುಗಳೆಂಬ ವಜ್ರಾಯುಧದಿಂದ ಸೀಳಿ, ಪರ್ವತಗಳನ್ನು ಸೀಳುವವನು, ಆದನಲ್ಲವೇ ? ಅಮಮ !!

ಜನವಿನುತ ಗುಣವಿಭೂಷಣೆ
ವನಜಾನನೆ ರಂಭೆ ಪೇಳಿದೇಂ ಕಾರಣಮೆ
ನ್ನನಭೀಕ್ಷಿಸಿ ನಕ್ಕಪೆಯೆಂ
ದೆನೆ ಬೋಧಿಸಲೆಂದು ದಯೆಯಿನವಳಿಂತೆಂದಳ್ ೮೯

ಎಲೆ ವಿಟ ಪೇಳಲೆನ್ನಳವೆ ನಿನ್ನಯ ದುಷ್ಟಚರಿತ್ರಮಂ ಧರಾ
ತಲದೊಳೆ ಸಂದ ಸರ್ವದುರಿತೌಘನಿಧಾನಮನಾ ಫಣೀಂದ್ರನುಂ
ನಲಿದುಸುರಲ್ಕೆ ಸಾಲ್ದಪನೆ ಮೆಯ್ಪುಱಿದುನ್ಮದಮತ್ತನಾಗಿ ದುಃ
ಖಲರೊಡಗೂಡಿ ವರ್ತಿಸಿದೆ ನೀಂ ಗಡ ನಿಚ್ಚಮಧರ್ಮಮಾರ್ಗದೊಳ್ ೯೦

ಇರುಳುಂ ಪಗಲುಂ ಕಾಮಿನಿ
ಯರ ಸಂಗಮನಲ್ಲದಱಿಯೆ ಶಿವದರ್ಶನಮಂ
ಗುರುಭಜನಮನಭವಾರ್ಚಕ
ಚರಣನಮಸ್ಕೃತಿಯನೊರ್ಮೆಯುಂ ಖಲತಿಲಕಾ ೯೧

ಇಟ್ಟಱಿಯೆ [1]ಪಣೆಗೆ ಭಸಿತಮ[1]
ತೊಟ್ಟಱಿಯೆ ಕೊರಲ್ಗೆ ಮಿಸುಪ ರುದ್ರಾಕ್ಷೆಗಳಂ

೮೯. ಹೀಗೆ ರಂಜಿಸುವ ರಂಭೆಯು ಒಂದು ದಿವಸ ತನ್ನನ್ನು ಇಚ್ಛೈಸಿದ, ಪಾಪದಿಂದ ತುಂಬಿದ ನಡತೆಯುಳ್ಳವನಾದ ಶ್ವೇತನೆಂಬ ವಿಟನನ್ನು ನೋಡಿ, ನಗಲಾಗಿ ಆ ಕೂಡಲೇ ಅವನು ಕಂಡು ಭ್ರಾಂತಿಗೊಂಡ ಚಿತ್ತವುಳ್ಳವನಾಗಿ, ಹೇ ಲೋಕದ ಜನರಿಂದ ಶ್ಲಾಘಿಸಲ್ಪಡುವ ಗುಣಗಳೇ ಆಭರಣವಾಗಿ ಉಳ್ಳವಳೇ, ಕಮಲಮುಖಿಯೇ, ರಂಭೆಯೇ, ನನ್ನನ್ನು ನೋಡಿ ಏನು ಕಾರಣದಿಂದ ನಕ್ಕವಳಾದೆ ?' ಹೇಳು ಎಂದೆನ್ನಲು, ಅವಳು (ಇವನಿಗೆ) ಜ್ಞಾನೋದಯವನ್ನುಂಟುಮಾಡಬೇಕೆಂದು ದಯದಿಂದ ಹೀಗೆ ಹೇಳಿದಳು : ೯೦ 'ಎಲೈ ವಿಟನೇ, ಭೂಮಿಯಲ್ಲಿ ಪ್ರಸಿದ್ಧವೆನಿಸಿರುವ ಸಮಸ್ತ ಪಾಪಗಳಿಗೂ ಆದಿಕಾರಣವೆನಿಸಿರುವ ನಿನ್ನಯ ದುಷ್ಟ ಚರಿತ್ರೆಯನ್ನು ಹೇಳಲು ನನಗೆ ಶಕ್ತಿಯುಂಟೆ ? ಆ ಆದಿಶೇಷನೂ ಕೂಡ ನಲಿದು ಹೇಳುವುದಕ್ಕೆ ಸಮರ್ಥನಾದಾನೇ ? ನೀನು ವಿಶೇಷ ಗರ್ವದಿಂದ ಕೊಬ್ಬಿದವನಾಗಿ, ಮೈಮರೆತು, ನೀಚ ಜನರಿಂದ ಒಡಗೂಡಿ, ನಿತ್ಯವೂ ಅಧರ್ಮಮಾರ್ಗದಲ್ಲಿ ವರ್ತಿಸುವೆಯಲ್ಲವೇ ! ೯೧. 'ಹೇ ನೀಚರಲ್ಲಿ ತಿಲಕಪ್ರಾಯನೇ, ಇರುಳೂ, ಹಗಲೂ ಕಾಮಿನಿಯರ ಆ ಸಂಗವಲ್ಲದೆ ಶಿವನ ದರ್ಶನ, ಗುರುವಿನ ಸ್ತೋತ್ರ, ಪರಮೇಶ್ವರನ ಶರಣರ ಪಾದಗಳಿಗೆ ನಮಸ್ಕರಿಸುವಿಕೆ—ಮೊದಲಾದವುಗಳನ್ನು ಒಮ್ಮೆಯೂ ಮಾಡಿ ತಿಳಿಯೆ.' ೯೨. 'ನೀನು ಹುಟ್ಟಿದಂದಿನಿಂದ ಭಸ್ಮವನ್ನು ಹಣೆಯಲ್ಲಿ ಧರಿಸಿ ತಿಳಿಯೆ ; ಕೊರಳಲ್ಲಿ ಶೋಭಿಸುವ ರುದ್ರಾಕ್ಷಗಳನ್ನು ಧರಿಸಿ ತಿಳಿಯೆ ; ಸತ್ಪಾತ್ರಕ್ಕೆ ಒಂದು

[1] ಭಸಿತಮಳಿಕದ (ಅ, ಚ)

ಕೊಟ್ಟಜ಼ಿಯೆ ಸುಪಾತ್ರಕೆ ನೀಂ
ಪುಟ್ಟಿದ ದಿನದಿಂದವೊಂದು ಕಾಣೆಯುಮನಣಂ ೯೨

ಗುಣಧರ್ಮಾನ್ವಿತ ವೃತ್ತಿಧನ್ವಿಗಳೊಳುದ್ಯದ್ದಾನಮುತ್ತುಂಗವಾ
ರಣದೊಳ್ಸತ್ಪಥವರ್ತನಂ ದಿವಿಜರೊಳ್ನ್ಯಾಯೋಕ್ತಿ ಸಿದ್ಧಾಂತಲ
ಕ್ಷಣದೊಳ್ನಿರ್ಮಳಮಾನಸಸ್ಥಿತಿ ಮರಾಳವ್ರಾತದೊಳ್ಸದ್ಬುಧ
ಪ್ರಣಯಂ ಸೋಮನೊಳಲ್ಲದುಂಟೆ ವಿಟ ನಿನ್ನೊಳ್ ಶ್ವೇತ ಪೇಳ್ನನ್ನಿಯಂ ೯೩

ಒಂದು ದಿನಂ ಪಣಾಂಗನೆಗೆ ಪೂದಿಜ಼ಿದೊಯ್ಯನೆ ಪೊತ್ತು ತರ್ಪ ಪೊ
ಳ್ತೊಂದರಲುರ್ಚಿ ಬೀಳೆ ಶುಚಿಯಲ್ಲದ ಭೂತಳದಲ್ಲಿ ನೋಡಿ ಕಂ
ದಿಂದುಧರಂಗಿದರ್ಪಿತಮೆನುತ್ತಣುಮಾತ್ರಮನೇಕಜನ್ಮದೊ
ಳ್ಸಂದೆಸಗಿರ್ದ ಪುಣ್ಯದೊದವಿಂ ನೆನೆದೇಳಿದವಿರ್ಪ ಕಾಲದೊಳ್ ೯೪

ಸಂಭವಿಸಿದುದಾ ನೆನಪಿಂ
ಜಂಭಾರಿಯ ಪದವಿಯೊಂದು ದಿನವೀ ಇರುಳೊಳ್
ಸಂಭೋಗಮನೆನ್ನೊಳ್ಪಡೆ
ದಂಭೋಜಸಖೋದಯಂಬರಂ ಸುಖವಿರ್ಪೈ ೯೫

ಅಲ್ಲಿಂ ಮೇಲೆ ಕೃತಾಂತನ
ಬಲ್ಲಿದರೆನಿಸಿರ್ದ ದೂತರೆಳೆದೊಯ್ದುದ್ಧಟಂ

ದುಗ್ಗಾಣಿಯನ್ನೂ ನಿಜವಾಗಿ ಕೊಟ್ಟು ತಿಳಿಯೆ.' ೯೩. ಗುಣಧರ್ಮಗಳಿಂದ ಕೂಡಿದ ವರ್ತನೆ (ಗುಣ =ಹೆದೆ, ಧರ್ಮ= ಧನುಸ್ಸು) ಧನುರ್ಧಾರಿಗಳಲ್ಲಿಯೇ ಹೊರತು ನಿನ್ನಲ್ಲಿಲ್ಲ. ದಾನವು (ದಾನಮಾಡುವಿಕೆ–ಮದೋದಕ) ಆನೆಯಲ್ಲಿಯೂ ಸತ್ಪಥವರ್ತನವು (ಸನ್ಮಾರ್ಗವರ್ತನೆ—ಆಕಾಶವರ್ತನೆ) ದೇವತೆಗಳಲ್ಲಿಯೂ ನ್ಯಾಯೋಕ್ತಿಯು (ನ್ಯಾಯವಾದ ವಚನ–ಶಾಸ್ತ್ರೀಯ ನ್ಯಾಯದ ವಚನ) ಸಿದ್ಧಾಂತ ಲಕ್ಷಣವೆಂಬ ಗ್ರಂಥದಲ್ಲಿಯೂ, ನಿರ್ಮಲಮಾನಸ ಸ್ಥಿತಿಯು (ಶುದ್ಧ ಮನಸ್ಸಿನಿಂದ ಇರುವಿಕೆ ಮಾನಸ ಸರೋವರದಲ್ಲಿರುವಿಕೆ) ಹಂಸ ಸಮೂಹದಲ್ಲಿಯೂ ಸದ್ಬುಧ ಪ್ರಣಯವು (ವಿದ್ವತ್ಪ್ರೀತಿ–ಬುಧಗ್ರಹದಲ್ಲಿ ಪ್ರೀತಿ) ಚಂದ್ರನಲ್ಲಿಯೂ ಇದೆಯಲ್ಲದೆ, ನಿನ್ನಲ್ಲುಂಟೆ ? ಎಲೆ ಶ್ವೇತ, ಸತ್ಯವನ್ನು ಹೇಳು (ರಂ) ೯೪–೯೫. ಒಂದು ದಿನ ಸೂಳೆಗಾಗಿ ಹೂವುಗಳನ್ನು ಎತ್ತಿಕೊಂಡು ಶೀಘ್ರವಾಗಿ ಅವನ್ನು ಹೊತ್ತು ತರುವಕಾಲದಲ್ಲಿ ಒಂದು ಹೂವು ಜಾರಿ ಪರಿಶುದ್ಧವಲ್ಲದ ಭೂಮಿಯಲ್ಲಿ ಬೀಳಲಾಗಿ, ನೋಡಿ 'ಈ ಬಿದ್ದ ಹೂವು ಶಿವನಿಗೆ ಅರ್ಪಿತವಾಯಿತು' ಎಂದು ನೀನು ಹೇಳಿದೆ. ಅನೇಕ ಜನ್ಮಗಳಲ್ಲಿ ಹುಟ್ಟಿ ಬಂದು ಮಾಡಿದ ಆ ಪುಣ್ಯದ ಮೊತ್ತದಿಂದ, ಆ ನೆನಪಿನಿಂದ ಒಂದು ದಿನ ಇಂದ್ರನ ಭೋಗವು ನಿನಗೆ ಸಂಭವಿಸಿತು ! ಈ ರಾತ್ರಿ ನನ್ನೊಡನೆ ಸಂಭೋಗವನ್ನು ಪಡೆದು ಸೂರ್ಯನು ಹುಟ್ಟುವರೆಗೂ ಸೌಖ್ಯವಾಗಿರು ಅಷ್ಟೆ!' ೯೬. 'ಎಲೈ ವಿಟನೇ, ಕೇಳು. ಆಮೇಲೆ (ನನ್ನ ಭೋಗಾನಂತರ) ಬಲಶಾಲಿಗಳೆನಿಸಿರುವ ಯಮನದೂತರು

ಪಲ್ಲವ ಕೇಳ್ನರಕಾರ್ಣವ
ದಲ್ಲಿ ಕರಂ ಕೆಡಪಿ ನಿನ್ನ ಬಾಧಿಪರಲ್ತೇ ೯೬

ಇದನಱಿಯದಕಟ ನೀಂ ಪೆ
ರ್ಚಿದ ಮದದಿಂ ಮದನಸುಖಮನೆಳಸುತೆ ಮೇಲ್ವಾ
ಯ್ವುದನೀಕ್ಷಿಸಿ ನಕ್ಕಪೆನೆನೆ
ಚದುರೆಯ ನುಡಿಗೇಳ್ದು ನಗುತೆ ವಿಟನಿಂತೆಂದಂ ೯೭

ಕೇಳೆಲೆ ರಂಭೆ ಭೂತಳದೊಳೀತನೆ ಕಂತುವೆನುತ್ತೆ ಸದ್ವಿಟ
ರ್ಸೂಳೆಯರೆಲ್ಲರುಂ ಪದೆದು ಬಣ್ಣಿಸೆ ಬಾಳ್ದೆನನಂಗಸತ್ಕಳಾ
ಕೇಳಿಯೊಳೀಗಳೀ ದಿವಿಜಲೋಕದೊಳೇಳ್ಗೆಯನಾಳ್ದ ನಿನ್ನೊಳಾಂ
ಮೇಳಿಸಿ ಕೂಡಿ ಮೆಚ್ಚಿಸಿ ಜಸಂಬಡೆದಾಂ ವಿಜಯಂ ದ್ವಿಲೋಕದೊಳ್ ೯೮

ಗಣಿಕಾಮಣಿ ನಾಳೆ ನಭೋ
ಮಣಿಸುತನಿಂ ಬರ್ಪ ನಿರಯಗಿರ[1]ಯಮನೆಂತುಂ
ಗಣಿಪೆನೆ ಬಿಡು ನಗೆಯೊಂ
ದಣಕಮನಿಂದೆನ್ನೊಳೊಲ್ದು ನೆರೆ ಮೃಗನಯನೇ ೯೯

ಸ್ಮರಶಿಖಿ ಸುಟ್ಟಪುದೀಗ
ಳ್ನರಕಾಗ್ನಿಯೆ ನಾಳೆ ಬರ್ಕುಮೆರಡಱೞಿದು ದ

ಶೌರ್ಯದಿಂದ ನಿನ್ನನ್ನೆಳೆದೊಯ್ದು ನರಕವೆಂಬ ಸಮುದ್ರದಲ್ಲಿ ಕೆಡವಿ ಅತಿಯಾಗಿ ಬಾಧೆ ಕೊಡುತ್ತಾರೆ.' ೯೭. 'ಅಕ್ಕಟಾ ! ನೀನು ಇದನ್ನರಿಯದೆ, ಮದದಿಂದ ಮದನ ಸಂಬಂಧವಾದ ಸುಖವನ್ನಪೇಕ್ಷಿಸುತ್ತ ಮುಂದುವರಿಯುತ್ತಿರುವುದನ್ನು ಕಂಡು ನಕ್ಕೆನು' ಎನ್ನಲು ವಿಟನು ಚತುರೆಯಾದ ಅವಳ ಮಾತನ್ನು ಕೇಳಿ, ನಗುತ್ತ ಇಂತೆಂದನು: ೯೮. 'ಎಲೈ ರಂಭೆಯೇ ಕೇಳು : ಭೂಮಿಯಲ್ಲಿ ಇವನೊಬ್ಬನೇ ಮನ್ಮಥನೆಂದು ಶ್ರೇಷ್ಠವಿಟರೂ, ಸೂಳೆಯರೂ, ಎಲ್ಲರೂ ಸಂತೋಷದಿಂದ ಬಣ್ಣಿಸುತ್ತಿರಲಾಗಿ, ಮದನವಿದ್ಯಾ ಕ್ರೀಡೆಯಲ್ಲಿ ಬಾಳಿದ್ದೇನೆ. ಈ ಆ ಸ್ವರ್ಗ ಲೋಕದಲ್ಲಿ ಪ್ರಸಿದ್ಧಿಯನ್ನೂ ಹೊಂದಿರುವ ನಿನ್ನಲ್ಲಿ ಮೇಳಗೊಂಡು ಕೂಡಿ, ಮೆಚ್ಚಿಸಿ, ಯಶಸ್ಸನ್ನು ಪಡೆದ ನಾನು ಭೂಲೋಕ ಸ್ವರ್ಗಲೋಕಗಳೆರಡರಲ್ಲೂ ವಿಜಯಶೀಲನಾಗಿದ್ದೇನೆ.' ೯೯. 'ಗಣಿಕಾರತ್ನವೇ, ನಾಳೆಯ ದಿನ ಸೂರ್ಯಪುತ್ರನಾದ ಯಮನಿಂದ ಬರುವ ನರಕಗಿರಕಗಳನ್ನು ಹೇಗೂ ಗಣನೆಗೆ ತಂದುಕೊಳ್ಳುವೆನೆ ? ನಿನ್ನ ನಗೆಯ ಈ ಒಂದು ಚೇಷ್ಟೆಯನ್ನು ಬಿಟ್ಟುಬಿಡು. ಹೇ ಮೃಗನಯನೇ, ಈಗ ಪ್ರೀತಿಯಿಂದ ನನ್ನಲ್ಲಿ ಕೂಡು.' ೧೦೦. 'ಈಗ (ನನ್ನನ್ನು) ಮನ್ಮಥ ಸಂಬಂಧದ ಅಗ್ನಿಯು ಸುಡುತ್ತಿರುವುದು; ನಾಳೆಯ ದಿನ ನರಕದ ಅಗ್ನಿಯೇ ಬರಲಿ ಈ ಕಾಮಾಗ್ನಿ

[1] ರ(ಚ,ಆ)

ಲ್ಪಿರಿದಲ್ತೆ ನಿನ್ನ ಕೂಟದೆ
ಪರಿಹರಿಪೆನಿದಂ ಬಳಿಕ್ಕೆ ಬಂದುದನಱಿವೆಂ ೧೦೦

ನರಕಾಗ್ನಿಗಳ್ಕಿ ನಿನ್ನೊ
ಳ್ನೆರೆಯದೊಡೀ ಕಾಮವಹ್ನಿ ಸುಟ್ಟಪುದಿದಱಿಂ
ದುರಿಯಲ್ಕಾಱೆಂ ತಪ್ಪದೆ
ತರಳೇಕ್ಷಣೆ ನೆರೆದು ರಕ್ಷಿಸೆನೆ ವಿಟನಾಗಳ್ ೧೦೧

ಇರುಳೆರಡು ಜಾವವಿೂಗ
ಳ್ಸ[1]ರಿದುದು ಬಳಿಕೆರಡು ಜಾವಮಿದಱಿೊಳಗೆನ್ನೊ
ಳ್ನೆರೆದಿರ್ದು ನಾಳೆ ನೀಂ ಘನ
ನಿರಯದೊಳೆಲೆ ಬೀಳ್ವುದಂ ನಿರೀಕ್ಷಿಸಲಾಱೆಂ ೧೦೨

ಅಣುಮಾತ್ರಮ[2]ಪಥ್ಯಮುಸುಂ
ಡಣೆಯುರಮೆಲೆ ದೀರ್ಘರುಜೆಯುನನುಭವಿಪವೊಲೀ
ಕ್ಷಣಿಕಸುಖದನುಭವದೆ ಮೇ
ಲಣ ಚಿರನರಕಾನುಭವಮುನಾಂಪುದೆ ಮರುಳೇ ೧೦೩

ಒಂದರಲರ್ಪಿತಮೆನೆ ನಿನ
ಗಿಂದುಧರಂ ಕೊಟ್ಟನೆನ್ನ ಸುರತಮನೀಗ
ಳ್ಕುಂದದೆ ನೀಂ ಭಜಿಸಿದೊಡೆ
ನ್ನಂದದ ಗಣಿಕಾಳಿ ನಿನ್ನ ತೊಗಳ್ತಾಗಿರರೇ ೧೦೪

ನರಕಾಗ್ನಿಗಳಲ್ಲಿ ಕಾಮಾಗ್ನಿಯೇ ನಿಜವಾಗಿ ಹೆಚ್ಚಾದುದಲ್ಲವೇ! ಈ ಅಗ್ನಿಯನ್ನು ನಿನ್ನಲ್ಲಿ ಕೂಡಿ ಪರಿಹರಿಸುತ್ತೇನೆ. ಆಮೇಲೆ ಬಂದದ್ದನ್ನು ನೋಡಿಕೊಳ್ಳುತ್ತೇನೆ.' ೧೦೧. 'ಎಲೈ ಚಂಚಲ ನೇತ್ರೆಯೇ, ವಿಟನಾದವನು ನರಕಾಗ್ನಿಗೆ ಹೆದರಿ, ನಿನ್ನಂಥವಳಲ್ಲಿ ಕೂಡದಿದ್ದರೆ, ಈ ಕಾಮಾಗ್ನಿಯು ಸುಟ್ಟುಬಿಡುತ್ತದೆ, ಆ ಅಗ್ನಿಯಿಂದ ಸುಡುವುದನ್ನು ತಡೆಯಲಾರೆನು, ತಪ್ಪದೆ ನನ್ನೊಡನೆ ಕೂಡಿ ನನ್ನನ್ನು ಉಳಿಸು.' ಎನ್ನಲು ಆಗ ೧೦೨. 'ಎಲೈ ವಿಟನೇ, ಈಗ ರಾತ್ರಿಯು ಎರಡು ಜಾವವನ್ನು ಕಳೆಯಿತು. ಈಗ ಉಳಿದುದು ಎರಡು ಜಾವ (ಮಾತ್ರ) ; ಈ ಎರಡು ಜಾವ ಕಾಲ ನೀನು ನನ್ನಲ್ಲಿ ನೆರೆದಿದ್ದು ನಾಳೆ ಘೋರ ನರಕದಲ್ಲಿ ಬೀಳುವುದನ್ನು ನಿರೀಕ್ಷಿಸಲಾರೆನು.' ೧೦೩. 'ಎಲೈ ಹುಚ್ಚನೇ, ಅಪಥ್ಯವನ್ನು ಸ್ವಲ್ಪ ಊಟಮಾಡಿ, ಅಧಿಕವಾಗಿ ದೀರ್ಘಕಾಲದವರೆಗೆ ರೋಗವನ್ನು ಅನುಭವಿಸುವಹಾಗೆ, ಈ ಕ್ಷಣಿಕ ಸುಖದ ಅನುಭವದಿಂದ ಮುಂದಾಗುವ ಚಿರಕಾಲದ ನರಕದ ಅನುಭವವನ್ನು ಹೊಂದುವುದೇ ?' ೧೦೪. 'ಒಂದು ಹೂವು (ನೆಲಕ್ಕೆ ಬಿದ್ದಾಗ ಶಿವನಿಗೆ) ಅರ್ಪಿತವೆಂದೆನ್ನಲು ನಿನಗೆ ಶಿವನು ನನ್ನ ಸುರತದ ಸುಖವನ್ನು ಕೊಟ್ಟನು. ಕುಂದಿಲ್ಲದಂತೆ ನೀನು (ಆ ಶಿವನನ್ನು) ಭಜಿಸಿದರೆ, ನನ್ನಂತಹ

[1] ಳ್ಪ (ಮು) [2] ಕು (ಅ)

ವ॥ ಅಂತುಮಲ್ಲದೆಯುಂ—

ಕಾಮಾಂತಕರಿಪುವಲ್ಲದೆ
ಕಾಮಾಂತಕಭಯಮನಳಿಯಲಾರ್ಪವರಾರು
ದ್ದಾಮ ತಮಸ್ತಾಪಂಗಳ
ತಾಮರಸಾರಾತಿಯಲ್ಲದಾರ್ತೊಲಗಿಪರೋ ೧೦೫

ನಂಬೆನ್ನ ನುಡಿಯನೀಗ
ಳ್ಸಾಂಬನ ಮೆಲ್ಲಡಿಯನೊಲ್ದು ಪೂಜಿಸು ಪೆಱತೇಂ
ಬೆಂಬಿಡದೆ ನಿತ್ಯಘನಸೌ
ಖ್ಯಂಬಡೆವಂತೆಸಗಿ ನಿನ್ನ ಬಾಳಿಪನಭವಂ ೧೦೬

ವ॥ ಎಂದು ಪಲವಂದದಿನವನಂ ತಿಳುಪಿ ತಾನೆಂದುದನಪ್ಪುಕೆಯ್ಸಿ ರಂಭೆ ಸಂಭ್ರಮದಿನವನಂ ಭಸ್ಮರುದ್ರಾಕ್ಷೆಗಳಿನಲಂಕರಿಸಿ ಶಿವಮಂದಿರಮಂ ತೋಱುತೊಳಪುಗಿಸಲೊಡನೆ—

ರಂಭೆಯುಪದೇಶದಿರವನ
ವಂ ಭಾವಿಸಿ ನಿಜವಿಕಾರಮಂ ಬಿಸುಟಾಗ
ಳ್ಶಂಭುವನೆ ಭಜಿಸಿದಂ ಕೇ
ಳ್ಕುಂಭಿನಿಯೊಳ್ವಿಟವಿವೇಕಮಿಂತಿರವೇಡಾ ೧೦೭

ತನಗಹಿತಕಾರ್ಯದೊಳ್ರ[1]ತಿ
ಜನಿಯಿಸೆ ಬಿಡಲಾಱದೆಂದು ಹಿತರೊರೆಗಳನೊ

ವೇಶ್ಯಾಂಗನೆಯರು ನಿನ್ನ ದಾಸಿಯರಾಗಿ ಇರಲಾರರೇ' ? ವ॥ ಅದೂ ಅಲ್ಲದೆ—೧೦೫. ಮನ್ಮಥ ಮತ್ತು ಯಮಧರ್ಮರುಗಳಿಂದುಂಟಾದ ಭಯವನ್ನು ನಾಶ ಮಾಡುವುದಕ್ಕೆ ಪರಮೇಶ್ವರನಲ್ಲದೆ ಸಮರ್ಥರಾದವರು ಇನ್ನಾರು ? ಚಂದ್ರನ ಹೊರತು ಉದ್ದಾಮವಾದ ತಮವನ್ನೂ ತಾಪವನ್ನೂ ಕಳೆಯುವರಾರು ?' ೧೦೬. ನನ್ನ ಮಾತುಗಳನ್ನು ಈಗ ನಂಬು ;. ಪರಮೇಶ್ವರನ ಮೃದುಪಾದಗಳನ್ನು ಒಲಿದು ಪೂಜಿಸು ; ಬೇರೆ ಏನು ಬೇಕು ? ತಪ್ಪದೆ ಶಾಶ್ವತವಾದ ಉತ್ಕೃಷ್ಟ ಸೌಖ್ಯವನ್ನು ಪಡೆಯುವಂತೆ ವ್ಯವಹರಿಸು ; ಶಿವನು ನಿನ್ನನ್ನು ಬದುಕಿಸುವನು. ವ॥ ಹೀಗೆಂದು ಹಲವು ರೀತಿಯಿಂದ ಅವನಿಗೆ ತಿಳಿಸಿ, ತಾನು ಹೇಳಿದುದನ್ನು ಸಮ್ಮತಿಸುವಂತೆ ಮಾಡಿ, ಸಂಭ್ರಮದಿಂದ ಅವನನ್ನು ಭಸ್ಮರುದ್ರಾಕ್ಷಿಗಳಿಂದ ಅಲಂಕಾರಗೊಳಿಸಿ, ಶಿವಾಲಯವನ್ನು ತೋರಿಸುತ್ತ ಒಳಗೆಹೊಗಿಸಲಾಗಿ—೧೦೭. 'ಆ ಶ್ವೇತನು ಆಗ ರಂಭೆಯ ಉಪದೇಶದ ರೀತಿಯನ್ನು ಮನಸ್ಸಿನಲ್ಲಿ ಭಾವಿಸಿದವನಾಗಿ, ತನ್ನ (ಮನ್ಮಥ ಸಂಬಂಧದ) ಮನೋವಿಕಾರವನ್ನು ಬಿಸಾಡಿ, ಶಂಭುವನ್ನು ಭಜಿಸಿದನು ; ಕೇಳು. ಭೂಮಿಯಲ್ಲಿ ವಿಕಟನಾದವನ ವಿಚಾರವು ಹೀಗಿರಬೇಡವೇ ?' ೧೦೮. ತನಗೆ ಅಹಿತವಾದ ಕಾರ್ಯದಲ್ಲಿ ಆಸಕ್ತಿಯುಂಟಾದರೆ (ಅದನ್ನು) ಬಿಡಲಿಕ್ಕೆ ಆಗದಿದ್ದ ಕಾಲದಲ್ಲಿ,

[1] ಳ್ಕೃ(ಮು)

ಯ್ಯನೆ ಕೇಳ್ದು ಬಿಡಲ್ವೇಳ್ಕುಂ
ಮನಮೊಲ್ದಲ್ಲದೊಡೆ ಹಾನಿಯುಪ್ಪುದಮೋಘಂ ೧೦೮

ಸುರಗಂಗಾವಾರಿಯಿಂ ಭಾಸುರಸುರಕುಜಪುಷ್ಪೌಘದಿಂ ದಿವ್ಯಸೌರ
ಭ್ಯರಸೋದ್ಯದ್ಗಂಧದಿಂದಕ್ಷತೆಯಿನಧಿಕ ಧೂಪಂಗಳಿಂ ಸಾರದೀಪೋ
ತ್ಕರದಿಂ ಸ್ವರ್ಧೇನುಭಾಸ್ವತ್ಪುಧೆವೆರಸಿದ ನೈವೇದ್ಯದಿಂ ವೀಟಿಯಿಂ ಚಾ
ಮರ ಚಂಚಚ್ಛತ್ರಘಂಟಾದಿಗಳಿನಭವನಂ ಪೂಜಿಸುತ್ತಿರ್ದನಾಗಳ್ ೧೦೯

ವ॥ ಅಂತು ಪೂಜಿಸುತ್ತಾಡಿ ಪಾಡಿ ಪರಮೋತ್ಸವಂ ಮಿಗೆ ಪಂಚಾಕ್ಷರಜಪ ಸ್ತೋತ್ರ ಪಠನ ಪ್ರದಕ್ಷಿಣ ನಮಸ್ಕಾರಂಗಳೆಸಗುತ್ತುಮಿರ್ಪನಮಾಗಳ್—

ಪರೆಯೆ ವಿಟದುರಿತದೊಡನಾ
ನೆರೆದ ತಮಂ ಶ್ವೇತವದನದೊಡನಂಬುರುಹಂ
ಕರಮಲರೆ ತನ್ಮನೋರಾ
ಗರಸಂ ನೆಗೆದಂತೆ ಸಂಜೆಯುದಯಿಸಿತಾಗಳ್ ೧೧೦

ಎನ್ನ ಮಗಂ ಮೃಕಂಡುಭವನಂ ಪಿಡಿದೊಯ್ಯಲೆ ಬಂದು ಭರ್ಗನಿಂ
ಬನ್ನಮನಾಂತನಿಂದು ಪಿಡಿಯಲ್ವಿಟ ಭಕ್ತನನಿಂದು ಬಂದಪಂ

ಆಪ್ತರಾದವರ ಮಾತುಗಳನ್ನು ಚೆನ್ನಾಗಿ ಕೇಳಿ, ಮನಸ್ಸನ್ನು ಒಲಿಸಿಕೊಂಡು (ಅವನ್ನು) ಬಿಡಬೇಕು, ಅಲ್ಲದಿದ್ದರೆ ನಿಜವಾಗಿ ಹಾನಿಯುಂಟಾಗುವುದು. ೧೦೯. ಆಗ ಶ್ವೇತನು ದೇವಗಂಗಾ ನದಿಯ ನೀರಿನಿಂದ, ಪ್ರಕಾಶಿಸುವ ಕಲ್ಪವೃಕ್ಷದ ಹೂವುಗಳ ಸಮೂಹದಿಂದ, ಶ್ರೇಷ್ಠವಾದ ಪರಿಮಳ ವಿಶಿಷ್ಟವಾದ ಉತ್ಕೃಷ್ಟ ಶ್ರೀಗಂಧದಿಂದ, ಅಕ್ಷತೆಗಳಿಂದ, ವಿಶೇಷವಾದ ಧೂಪದಿಂದ, ಪ್ರಕಾಶಿಸುವ ದೀಪಗಳ ಸಮೂಹದಿಂದ, ಕಾಮಧೇನುವಿನ ಶೋಭಿಸುವ ಹಾಲಿನ ನೈವೇದ್ಯದಿಂದ, ತಾಂಬೂಲದಿಂದ, ಚಾಮರ. ಮಿರುಗುವ ಚಾಮರ, ಗಂಟೆಗಳ ಸಮೂಹದಿಂದ ಶಿವನನ್ನು ಪೂಜಿಸುತ್ತಿದ್ದನು, ವ॥ ಆ ರೀತಿ ಅವನು ಪೂಜೆ ಮಾಡುತ್ತ ಆಡಿ, ಹಾಡಿ, ಮಹೋತ್ಸವದಿಂದ ಕೂಡಿ, ಪಂಚಾಕ್ಷರೀ ಸ್ತೋತ್ರ ಪಠಣ, ಪ್ರದಕ್ಷಿಣೆ, ನಮಸ್ಕಾರಗಳನ್ನು ಮಾಡುತ್ತ ಇರುವಷ್ಟರಲ್ಲಿ ಆಗ— ೧೧೦–೧೧೧. ಆ ವಿಟನಾದ ಶ್ವೇತನ ಪಾಪದೊಡನೆ ಅವನಿಗೆ ಉಂಟಾಗಿದ್ದ ಕತ್ತಲೆಯೂ ಅಜ್ಞಾನವೆಂಬ ಕತ್ತಲೆಯೂ ನಾಶವಾಗಲು, ಶ್ವೇತವದನದೊಡನೆ ಕಮಲವೂ ಚೆನ್ನಾಗಿ ಅರಳುತ್ತಿರಲು, ಅವನ ಮನಸ್ಸಿನ ಪ್ರೀತಿಯು ಅರುಣವರ್ಣವು ನೆಗೆಯುವ ಹಾಗೆ, ಪ್ರಾತಃಕಾಲದ ಸಂಧ್ಯೆಯೂ ಉದಯಿಸಿತು. ನನ್ನ ಮಗನು (ನನ್ನ ಮಗನಾದ ಯಮಧರ್ಮನು) ಮೃಕಂಡು ಪುತ್ರನಾದ ಮಾರ್ಕಂಡೇಯನನ್ನು ಹಿಡಿದೊಯ್ಯಲು ಬಂದು ಶಿವನಿಂದ ಭಂಗಗೊಂಡನು. ಈ ದಿವಸ ವಿಟಭಕ್ತನಾದ

ಪನ್ನಗಧಾರಿ ಕೊಲ್ಲದಿರನೀತನನೆಂದು ಜವಂಗೆ ಬುದ್ಧಿಯುಂ
ಚನ್ನಿನೆ ಪೇಳಲೆಯ್ದಿದವೊಲಿಂದ್ರದಿಶಾದ್ರಿಯನರ್ಕನೆಯ್ದಿದಂ ೧೧೧

ವ॥ ಆ ಸಮಯದೊಳ್ಜವಂ ಜವದಿನಾ ಶ್ವೇತನಂ ಪಿಡಿತರ್ಪುದೆಂದು ನಿಜದೂತರ್ಗೆ ಬೆಸಸೆ ಲೊಡನವರ್ಬಂದು ರಂಭಾಲಲನೆಯಂ ಕಂಡಿಂದ್ರಭೋಗದೊಳಿರುಳ್ನಿನ್ನೊಡನಿರ್ದ ಭುಜಂಗನಾವೆಡೆ ಯೊಳಿರ್ದಪನೆಱಿಪೆಂಬುದುಮವಳ ಗೃಹದಾಸಿಯೇಳ್ತಂದು ಲಿಂಗಾಲಯದೊಳಿರ್ದಪನೆಂದು ಪೇಳ್ವ ನಮಾ ಭಟರಾ ದೇಗುಲಕ್ಕೆ ಬಂದು ದೂರಾಂತರಾಳದೊಳ್ನಿಂದು—

ಕಂಡರಖಂಡಖಂಡಪರಶುಸ್ಥಿರಭಕ್ತಿಸಮಗ್ರಭಾಗ್ಯನಂ
ಮಂಡಿತಭೂತಿಭಾಸುರಕಳೇವರನಂ ಗಿರಿಶಾಕ್ಷಿಮಾಲಿಕಾ
ಮಂಡನಮಂಜುಮಸ್ತಕಭುಜಾಂತರನಂ ಶಿವಮಂತ್ರಸತ್ಕಳಾ
ಪಂಡಿತನಂ ತಪೋಧನಪದಂಬಡೆದಾ ವಿಟನಂ ಮಹಾಭಟರ್ ೧೧೨

ವ॥ ಅಂತು ಕಂಡು ಮೃಗೇಂದ್ರನಂ ಕಂಡ ಕಳಭಂಗಳಂತೆ ಮುಂದಣ್ಗಡಿಯಿಡಲಳ್ಕಿ ನಡ ನಡಂ ನಡುಗಿ ಪೆಡಂಮೆಟ್ಟಿ ಮಗುಳ್ದಿಯ್ತ[1]ಂದಾ ಶ್ವೇತಮುನಿಯ ಪರಿಯನೆಲ್ಲಮಂ ನಿಜೇಶ್ವರನಾದ

ಶ್ವೇತನನ್ನು ಹಿಡಿಯಲು ಬರುತ್ತಾನೆ. ಈತನನ್ನು ಪನ್ನಗಧರನಾದ ಶಿವನು ಕೊಲ್ಲದೆ ಇರನು ಎಂದು ಯಮನಿಗೆ ಚೆನ್ನಾಗಿ ಬುದ್ಧಿಯನ್ನು ಹೇಳಲು ಬಂದನೆಂಬಂತೆ ಸೂರ್ಯನು ಪೂರ್ವ ದಿಕ್ಕಿನಲ್ಲಿರುವ ಪರ್ವತವನ್ನು ಹತ್ತಿದನು. ವ॥ ಆ ಸಮಯದಲ್ಲಿ ಯಮನು ಶೀಘ್ರವಾಗಿ ಶ್ವೇತನನ್ನು ಹಿಡಿದುತರಬೇಕೆಂದು, ತನ್ನ ದೂತರಿಗೆ ಅಪ್ಪಣೆ ಮಾಡಲಾಗಿ, ಆ ಕೂಡಲೇ ಅವರು ಬಂದು, ರಂಭಾಲಲನೆಯನ್ನು ಕಂಡು, ಇಂದ್ರಸಮಾನ ಭೋಗದಲ್ಲಿ ಕಳೆದ ರಾತ್ರಿ ನಿನ್ನೊಡನಿದ್ದ ವಿಟನು ಎಲ್ಲಿದ್ದಾನೆ ? ತಿಳಿಸು, ಎನ್ನಲಾಗಿ ಅವಳ ಮನೆಯ ದಾಸಿಯು ಬಂದು ಲಿಂಗಾಲಯದಲ್ಲಿದ್ದಾನೆಂದು ಹೇಳಲಾಗಿ, ಆ ಭಟರು ಆ ಶಿವಾ ಲಯಕ್ಕೆ ಬಂದು, ದೂರಾಂತರದಲ್ಲಿ ನಿಂತುಕೊಂಡು ೧೧೨. ಅಖಂಡವಾದ ಈಶ್ವರ ನಲ್ಲಿಟ್ಟಿರುವ ನಿಶ್ಚಂಚಲ ಭಕ್ತಿಯೆಂಬ ಸಂಪೂರ್ಣ ಭಾಗ್ಯವುಳ್ಳವನೂ, ವಿಭೂತಿಯ ಧಾರಣದಿಂದ ಅಲಂಕಾರಗೊಂಡ ಪ್ರಕಾಶಿಸುವ ದೇಹವುಳ್ಳವನೂ, ರುದ್ರಾಕ್ಷಗಳ ಸರದಿಂದ ಅಲಂಕಾರಗೊಂಡ ಮನೋಹರವಾದ ತಲೆ, ಎದೆಯೇ ಮೊದಲಾದವು ಗಳನ್ನುಳ್ಳವನೂ, ಪಂಚಾಕ್ಷರೀ ಮಂತ್ರವಿದ್ಯೆಯಲ್ಲಿ ಕುಶಲನೂ, ತಪೋಧನರ ಸ್ಥಾನವನ್ನು ಪಡೆದು ಋಷಿಗಳ ಲಕ್ಷಣವನ್ನು ಹೊಂದಿದ್ದ ವಿಟನಾದ ಶ್ವೇತನನ್ನು ಕಂಡರು. ವ॥ ಆ ರೀತಿ ಕಂಡು ಸಿಂಹವನ್ನು ಕಂಡ ಆನೆಗಳ ಹಾಗೆ, ಮುಂದಕ್ಕೆ ಹೆಜ್ಜೆ ಯಿಡಲು ಹೆದರಿ, ಗಡಗಡನಡುಗಿ, ಹಿಂದಕ್ಕೆ ತಿರುಗಿಬಂದು ತಮ್ಮ ಒಡೆಯನಾದ ಯಮಧರ್ಮನಿಗೆ ಆ ಶ್ವೇತಮುನಿಯ ರೀತಿಯನ್ನೆಲ್ಲ ಬಿನ್ನವಿಸಿಕೊಳ್ಳಲು, ಅವನು ಕೇಳಿ,

1 ಯ್ದಿ ತಂ(ಚ)

ದಂಡಪಾಣಿಗೆ ಬಿನ್ನವಿಸಲೊಡನವಂ ಕೇಳ್ದು ಕೋಪಾಟೋಪಮಂ ತಾಳ್ದು ಕಲ್ಪಾಂತಮೇಘದಂತೆ ಘುಡುಘುಡಿಸಿ ಘೂರ್ಮಿಸಿ ತೊಡೆವೊಯ್ದು ಕರಾಳ ಕಾಲದಂಡಮನೆತ್ತಿ ಜಡಿದು—

ಕಡುಪಿಂದಂ ರಂಭೆ ತಾಂ ಬೋಧಿಸೆ ಹರಭಜನೋಪಾಯದಿಂದೆನ್ನ ಗೆಲ್ವಂ
ಗಡ ಪಾಪೌಘಪ್ರಬದ್ಧಂ ಮಝರೆ ಗೆಲದದೇಕಿರ್ಪನಾ ಗೆಲ್ವ ಪಾಂಗಂ
ನಡೆ ನೋಳ್ಪೆಂ ತೋರ್ಪೆನೆನ್ನಾಯುಧದ ಸವಿಯನಾ ಧೂರ್ತನಂ ಕೊಲ್ವೆನೀಗ
ಳ್ಮೃಡನಡ್ಡಂಬಾಯ್ದೊಡಂ ಮೇಣ್ಬಿಡೆನೆನುತಧಟಂ ಪೂಣ್ದನಂತಾ ಕೃತಾಂತಂ ೧೧೩

ವ॥ ಅಂತು ಪೂಣ್ದು ನೀಲಾಚಲಪ್ರತಿಮ ಕಾಲಮಹಿಷಾರೂಢನಾಗಿ ಕಾಲಂ ಭೀಕರಾಕಾರಮಂ ತಾಳ್ದು ಸಿಡಿಲ ಪಡೆಗೆ ಪಡಿಯೆನಿಪ ನಿಜಭಟರ್ವೆರಸಿ—

ಕಡೆಗಣ್ಕೆಂಗಿಡಿಸೂಸೆ ಧೂಮಮಿಳಿತೋಚ್ಛ್ವಾಸಂ ಕರಂ ಪೊಣ್ಮೆ ಗಂ
ಟಿಡೆ ಘುರ್ಬಂಬುದದಲ್ಲಿ ನೀಳ್ದ ಕುಡಿಮಿಂಚೆಂಬಂತೆ ಕೂರ್ದಾಡೆ ತೋ
ರ್ಪಡೆ ಭೀಷ್ಮಾಕೃತಿವೆತ್ತು ಬರ್ಪನಮನಂಗಾರಾತಿ ತದ್ರೌದ್ರಮಂ
ಕಡುಪಿಂದೀಕ್ಷಿಸಿ ಶೂಲಮಂ ಜಡಿದು ಕಾಯ್ಬಿಂದಿಟ್ಟನಾಟೋಪದಿಂ ೧೧೪

ಇಡೆ ಯಮನ ವಕ್ಷಮಂ ನ
ಟ್ಟೊಡನುಚ್ಚಳಿಸಿದುದು ಕೆಡೆದನಿಳೆಯದಿರೆ ಜವಂ

ಕೂಡಲೇ ಕೋಪಾಟೋಪವನ್ನು ಹೊಂದಿ, ಪ್ರಳಯಕಾಲದ ಮೋಡದ ಹಾಗೆ ಘುಡು ಘುಡೆಂದು ಗರ್ಜನೆಮಾಡಿ, ಹೂಂಕಾರಮಾಡಿ, ತೊಡೆಗಳನ್ನು ತಟ್ಟಿಕೊಂಡು ಭಯಂಕರವಾದ ತನ್ನ ದಂಡವನ್ನು ಎತ್ತಿ ಝಳಪಿಸುತ್ತ ೧೧೩. ಪಾಪಗಳ ಸಮೂಹದಿಂದ ಕಟ್ಟಲ್ಪಟ್ಟ ಆ ಶ್ವೇತನು ರಂಭೆಯು ತಾನು ಬೋಧಿಸಲಾಗಿ ಶಿವಭಜನೆಯ ಉಪಾಯದ ಶೌರ್ಯದಿಂದ ನನ್ನನ್ನು ಗೆಲ್ಲುವವನಲ್ಲವೆ! ಭಾಪುರೇ ! ಗೆಲ್ಲದೆಏಕಿದ್ದಾನು!! ಅವನು ಗೆಲ್ಲುವ ರೀತಿಯನ್ನು ನೋಡುತ್ತೇನೆ. ನನ್ನ ಆಯುಧದ ರುಚಿಯನ್ನು ತೋರಿಸುತ್ತೇನೆ. ಈಗಲೇ ಆ ಧೂರ್ತನನ್ನು ಕೊಲ್ಲುತ್ತೇನೆ. ಮತ್ತು ಶಿವನು (ಈ ವಿಷಯದಲ್ಲಿ) ಅಡ್ಡಲಾಗಿ ಬಂದರೂ ಬಿಡುವುದಿಲ್ಲ ಎನ್ನುತ್ತ ಆ ಯಮನು ಈ ರೀತಿ ಶಪಥ ಮಾಡಿದನು. ವ॥ ಯಮನು ಆ ರೀತಿ ಶಪಥ ಮಾಡಿ ನೀಲಾಚಲಪರ್ವತಕ್ಕೆ ಸಮಾನವೆನಿಸಿದ ಕರಿಯ ಕೋಣವನ್ನೇರಿ, ಭಯಂಕರಾಕಾರವನ್ನು ಹೊಂದಿ, ಸಿಡಿಲಿನ ಸೈನ್ಯಕ್ಕೆ ಸಮಾನವೆನಿಸಿದ ತನ್ನ ಶೂರರುಗಳನ್ನು ಕೂಡಿಕೊಂಡು ೧೧೪. ಕಡೆಗಣ್ಣುಗಳು ಕೆಂಪಾದ ಕಿಡಿಗಳನ್ನು ಉಗುಳುತ್ತಿದ್ದವು; ಹೊಗೆಯಿಂದ ಕೂಡಿದ ಉಸಿರು ಚೆನ್ನಾಗಿ ಹೊರ ಹೊರಟು ಬರುತ್ತಿತ್ತು; ಹುಬ್ಬುಗಂಟುಗೊಂಡಿತ್ತು; ಮೋಡದಲ್ಲಿ ಉದ್ದವಾಗಿಯೂ ಡೊಂಕಾಗಿಯೂ ಇರುವ ಮಿಂಚೋ ಎಂಬ ಹಾಗೆ ತೀಕ್ಷ್ಣವಾದ ಕೋರೆದಾಡೆಯು ತೋರುತ್ತಿರಲು ಭಯಂಕರಾಕಾರವೆತ್ತು ಬರುವಷ್ಟರಲ್ಲಿ ಶಿವನು ಆ ಯಮನ ಭಯಂಕರಾಕಾರವನ್ನು ಕಂಡು, ಶೌರ್ಯದಿಂದ ಶೂಲವನ್ನು ಸೆಳೆದು ಕೋಪಾಟೋಪದಿಂದ ಹೊಡೆದನು. ೧೧೫. ಹೀಗೆ ಹೊಡೆಯಲು (ಅದು) ಯಮನ ಎದೆಯನ್ನು ಹೊಕ್ಕು ಕೂಡಲೇ ಆಚೆಗೆ ಹೊರ

ಬಿಡುಗಣ್ಣನ್ನರ್ತಿಗೆಯ್ದು
ಸ್ಱಡಗರದಿಂ ಶ್ವೇತನೀಶನಡಿಗೆಱಗಿರ್ದಂ ೧೧೫

ವ॥ ಅಂತೆಱಗಿ ಸಾತ್ವಿಕಭಕ್ತಿಯಿಂ ಪೊಗಳ್ವ ವಿಟ ಶ್ವೇತನಂ ನೋಡಿ ಕಾರುಣ್ಯಮಂ ನೀಡಿ ಗಣಪದಮನಿತ್ತು ಮನ್ನಿಸಿ ದಿವಿಜರ್ಬಿನ್ನವಿಸೆ ಶಿವಂ ಜವಂಗೆ ಹರಣಮಂ ಕರುಣಿಸಿ ಸಾರೆಗರೆದು—

ಇನಸುತ ಮಱಚಿ ಹ್ನಧರರ
ಮನೆಯುಂ ಮಱದೊರ್ಮೆಯುಂ ನಿರೀಕ್ಷಿಸದಿರ್ನಿ
ನ್ನನುಚರರೊಳಿದಂ ಪೇಳ್ಪೋ
ಗೆನುತುಂ ಪ್ರಾಣಾಪಹರಣಪೂರ್ವಕಮಭಯಮಂ ೧೧೬

ಕಟ್ಟಳೆಗೆಯ್ದವನಂ ನಿಜ
ಪಟ್ಟಣಕೊಲವಿಂದೆ ಕಳುಪಿ ಗಣತತಿಸಹಿತಂ
ನೆಟ್ಟನೆ ಕೈಲಾಸಾಚಲ
ಕಿಟ್ಟಣಿಸಿದ ಮುದದಿನೆಯ್ದಿದಂ ಗಿರಿಜೇಶಂ ೧೧೭

ಸುರಗಣಿಕೆಯ ನುಡಿಗೇಳ್ದೀ
ಶ್ವರನೊಲವಂ ಪಡೆದು ಬಾಳ್ದನಾ ಶ್ವೇತಂ ಸೌಂ
ದರಿಯರ ಹಿತೋಪದೇಶಮ
ನಿರದಾಲಿಸೆ[1] ಕೊಱತೆ ಬರ್ಕುಮೇ ಗುರುಭಕ್ತಾ ೧೧೮

ಹೊರಟಿತು. (ಆಗ) ಭೂಮಿಯು ನಡುಗಿತು; ಯಮನು ನೆಲಕ್ಕೆ ಬಿದ್ದನು. ದೇವತೆಗಳು ಸ್ತೋತ್ರ ಮಾಡಿದರು. ಶ್ವೇತನು ಸಡಗರದಿಂದ ಶಿವನ ಪಾದಗಳಿಗೆ ನಮಸ್ಕರಿಸಿದನು. ವ॥ ಹೀಗೆ ನಮಸ್ಕರಿಸಿ, ರೋಮಾಂಚನ, ಗದ್ಗದ, ಕೈಕಂಪನ, ಸ್ವೇದಾದಿ ಸಾತ್ವಿಕ ಭಾವಗಳಿಂದ ಕೂಡಿ, ಹೊಗಳುತ್ತಿದ್ದ ವಿಟನಾದ ಶ್ವೇತನನ್ನು ಶಿವನು ಕಂಡು, ಕಾರುಣ್ಯವನ್ನುಂಟುಮಾಡಿ, ತನ್ನ ಗಣ ಪದವಿಯನ್ನು ಕೊಟ್ಟು ಮನ್ನಣೆ ಮಾಡಿದನು. ದೇವತೆಗಳು ಬಿನ್ನವಿಸಿಕೊಳ್ಳುತ್ತಿರಲು ಯಮನಿಗೆ ಪ್ರಾಣವನ್ನು ಕರುಣಿಸಿ, ಹತ್ತಿರಕ್ಕೆ ಕರೆದು ೧೧೬–೧೧೭. ಸೂರ್ಯಪುತ್ರನೇ, ಮರೆತು ಒಮ್ಮೆಯಾದರೂ ಕೂಡ ಲಿಂಗ ವಿಭೂತಿ, ಮಂತ್ರ ರುದ್ರಾಕ್ಷಿ ಇತ್ಯಾದಿ ಚಿಹ್ನೆಗಳನ್ನು ಧರಿಸಿರುವವರ ಮನೆಯನ್ನು ನಿರೀಕ್ಷಿಸಬೇಡ. ನಿನ್ನ ಅನುಚರರಲ್ಲಿ ಇದನ್ನು ತಿಳಿಸು; ಹೋಗು'' ಎಂದೆನ್ನುತ್ತ, ಅವನಿಗೆ ಪ್ರಾಣ ತೆಗೆದುಕೊಂಡೇನೆಂಬ (ಭಯದ) ಕಟ್ಟಳೆ ಮಾಡಿ ಅವನ ಪಟ್ಟಣಕ್ಕೆ ಪ್ರೀತಿಯಿಂದ ಕಳುಹಿಸಿ ಪರಮೇಶ್ವರನು ಶಿವಗಣ ಸಮೂಹ ಸಮೇತವಾಗಿ ವಿಶೇಷವಾದ ಪ್ರೀತಿಯಿಂದ ನೆಟ್ಟನೆ ಕೈಲಾಸ ಪರ್ವತಕ್ಕೆ ಹೋದನು. ೧೧೮. 'ಹೇ ಗುರುಭಕ್ತನೇ, ಆ ಶ್ವೇತನು ದೇವತೆಗಳ ಸೂಳೆಯಾದ ರಂಭೆಯ ಮಾತನ್ನು ಕೇಳಿ, ಈಶ್ವರನ ಕಾರುಣ್ಯವನ್ನು ಹೊಂದಿ, ಬಾಳಿದನು. ತಪ್ಪದೆ ಸುಂದರಿಯರ ಹಿತೋಪದೇಶವನ್ನು ಆಲಿಸಿದರೆ

1 ಸಿ(ಜ, ದ, ಚ, ಮು)

ಇಂತೆದಾ ಧಾತ್ರಿಪಂಗಾ ಗಣಿಕೆಯೊರೆವುತುಂ ಶ್ವೇತವೃತ್ತಾಂತಮಂ ಮೇ
ಣ್ಮುಂತೊಂದಾಖ್ಯಾನಮಂ ಪೇಳ್ದಪೆನೆನುತೊಸೆದೊಪ್ಪಿರ್ದಳೆಂದಿಂತು ಭಕ್ತ
ಸ್ವಾಂತಕ್ಕಿಂಬಾಗೆ ಪೇಳುತ್ತೆಸೆದನಮಳ ಕಲ್ಯಾಣಕಲ್ಪದ್ರುಮಂ ದು
ರ್ದಾಂತಧ್ವಾಂತಪ್ರಚಂಡಪ್ರಭನಭಿನವಸದ್ಭಕ್ತಿಸಾಂದ್ರಂ ವೃಷೇಂದ್ರಂ ೧೧೯

ಪಾವನಾಂಗಿ ಪರಮೇಶ್ವರಪತ್ನಿ ಪಂಕಜಲೋಚನವಂದಿತೇ
ಭೂವಿಯಚ್ಚರ ಸಮಂಚಿತಪಾದೆ ಭೂರಿಸುರಾಹಿತಭಂಜನೇ
ಜೀವಿತೇಶಮದಮರ್ದಿನಿ ಮಾನ್ಯೆ ಮಂಗಳೆ ಮಂಜುಳಭಾಷಿಣೀ
ದೇವಿ ದಿವ್ಯಗುಣಮಂಡನೆಯೆನ್ನಂ ಪಾಲಿಸು ಪರ್ವತನಂದನೇ ೧೨೦

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಪಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಪ್ರೌಢಮತಿಕಥಿತಕಥಾವೃತ್ತಾಂತಂ

ಅಷ್ಟವಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೨೮ಕ್ಕೆ ಪದಗಣನೆ ೨೧೧೮ಕ್ಕೆ ಮಂಗಳಮಹಾ ಶ್ರೀ॥

ಕೊರತೆಯುಂಟಾಗುವುದೇ ?' ೧೧೯. ಹೀಗೆಂದು ಆ ವೈಶ್ಯೆಯು ಆ ಗುರುಭಕ್ತ ರಾಜನಿಗೆ ಶ್ವೇತನ ವೃತ್ತಾಂತವನ್ನು ಹೇಳುತ್ತ ಪುನಃ ಮುಂದೆ ಒಂದು ಉಪಕಥೆಯನ್ನು ಹೇಳುವೆನು ಎನ್ನುತ್ತ ಪ್ರೀತಿಯಿಂದ ಒಪ್ಪಿದ್ದಳು. ಹೀಗೆಂದು ಪರಿಶುದ್ಧವಾದ ಕಲ್ಯಾಣ ಪಟ್ಟಣಕ್ಕೆ ಕಲ್ಪವೃಕ್ಷ ಪ್ರಾಯನಾದ ದುಷ್ಟರೆಂಬ ಕತ್ತಲೆಗೆ ಸೂರ್ಯನಾದ, ನೂತನ ಶ್ರೇಷ್ಠ ಭಕ್ತಿಯಿಂದ ಪರಿಪೂರ್ಣನಾದ ಬಸವೇಶ್ವರನು ಭಕ್ತರುಗಳ ಮನಸ್ಸಿಗೆ ಮನೋಹರವಾಗುವ ಹಾಗೆ, ಈ ರೀತಿ ಹೇಳುತ್ತ ಶೋಭಿಸುತ್ತಿದ್ದನು. ೧೨೦. ಪರಿಶುದ್ಧ ದೇಹವುಳ್ಳವಳೇ, ಪರಮೇಶ್ವರನ ಪತ್ನಿಯೇ, ಶ್ರೀ ವಿಷ್ಣುವಿನಿಂದ ನಮಸ್ಕರಿಸಲ್ಪಟ್ಟವಳೇ ಭೂಮಿ ಮತ್ತು ಆಕಾಶ ಚರರಾದ ನರರು, ದೇವತೆಗಳಿಂದ ಪೂಜಿಸಲ್ಪಡುವ ಪಾದವುಳ್ಳವಳೇ, ಬಹಳ ರಾಕ್ಷಸರನ್ನು ನಾಶಪಡಿಸಿದವಳೇ, ಜೀವಿತೇಶ ಮದಮರ್ದನಗೊಳಿಸಿದವಳೇ ಸನ್ಮಾನಯೋಗ್ಯಳೇ, ಮಂಗಳವನ್ನುಂಟುಮಾಡುವವಳೇ, ಮಂಜುಳವಾದ ಮಾತುಳ್ಳವಳೇ, ಶ್ರೇಷ್ಠವಾದ ಗುಣಗಳೇ ಆಭರಣವಾಗಿ ಉಳ್ಳವಳೇ, ದೇವಿಯೇ ನನ್ನನ್ನು ರಕ್ಷಿಸು.

ಇಪ್ಪತ್ತೆಂಟನೆಯ ಆಶ್ವಾಸವು ಸಮಾಪ್ತವಾಯಿತು.

# ಏಕೋನತ್ರಿಂಶದಾಶ್ವಾಸಂ

## ಮಲ್ಹಣನ ಕಥೆ

ಶ್ರೀಮಹಿತಹಿಮಗಿರೀಂದ್ರಸು
ತಾಮಧುರಿಮಸೂಕ್ತಿಪೂರ್ಣಕರ್ಣಂ ದಿವಿಜ
ಸ್ತೋಮಲಲಾಮಂ ಸಕಳಕ
ಳಾಮಂದಿರನೀಗೆ ಸೌಖ್ಯಮಂ ಶಿವಲಿಂಗಂ ೧

ವಿಪುಳೇಂದೂಪಳವಪ್ರಮಪ್ರತಿಮ ಹರ್ಮ್ಯಶ್ರೇಣಿ ಮಾಣಿಕ್ಯತುಂ
ಗಪತಾಕಾಳಿ ಸುವರ್ಣಗೋಪುರಲಸಲ್ಲಿಂಗಾಲಯಾಲಂಕೃತಂ
ಸುಪಣಸ್ತ್ರೀಮಣಿಗೇಹಮಂಟಪಮನೋಜ್ಞಂ ಭಾರತೀಪೀಠನಾ
ಮಪುರಂ ಕಂಗೊಳಿಕುಂ ಸಮಸ್ತಜನತಾಸೌಭಾಗ್ಯಶೋಭಾಕರಂ ೨

ಆ ನಗರದೊಳೆಸೆದಿರ್ಪಂ
ಭೂನುತಗುಣಶಾಲಿ ಶೂಲಿಪದಸೇವಕನ
ನ್ಯೂನರಸವತ್ಕವಿತ್ವನಿ
ಧಾನಂ ಮಲ್ಹಣನೆನಿಪ್ಪನೊರ್ವಂ ಜಸದೊಳ್ ೩

## ಮಲ್ಹಣನ ಕಥೆ

೧. ಮಂಗಳಕರ ಗುಣಗಳಿಂದ ಪೂಜ್ಯಳಾದ ಪಾರ್ವತಿದೇವಿಯ ಇಂಪಾದ ಮಾತುಗಳಿಂದ ತುಂಬಲ್ಪಟ್ಟ ಕಿವಿಗಳುಳ್ಳ, ದೇವತಾ ಸಮೂಹದಲ್ಲಿ ಶ್ರೇಷ್ಠನಾದ, ಸಕಲ ಕಲೆಗಳಿಗೆ ಮಂದಿರನಾದ ಶಿವಲಿಂಗನು ನಮಗೆ ಸೌಖ್ಯವನ್ನು ಕೊಡಲಿ. ೨. ವಿಶಾಲವಾದ ಚಂದ್ರಕಾಂತ ಶಿಲೆಯ ಪ್ರಾಕಾರವುಳ್ಳ, ಅಪ್ರತಿಮವಾದ ಉಪ್ಪರಿಗೆ ಮನೆಗಳ ಸಾಲುಗಳಿಂದಲೂ, ಮಾಣಿಕ್ಯರತ್ನಗಳಿಂದ ಮಾಡಿದ ಎತ್ತರವಾದ ಧ್ವಜಗಳ ಸಾಲುಳ್ಳ, ಚಿನ್ನದ ಗೋಪುರಗಳಿಂದ ಪ್ರಕಾಶಿಸುವ ಶಿವಾಲಯಗಳಿಂದ ಅಲಂಕರಿಸಲ್ಪಟ್ಟ, ಶ್ರೇಷ್ಠರಾದ ಸೂಳೆಯರ ಮನೆಗಳಿಂದ ಮನೋಹರವೆನಿಸಿದ, ಸಕಲಜನ ಸಮುದಾಯದ ಐಶ್ವರ್ಯದ ಶೋಭೆಗಳನ್ನುಂಟುಮಾಡುವ 'ಭಾರತೀಪೀಠ'ವೆಂಬ ಹೆಸರಿನ ಪಟ್ಟಣವು ಕಂಗೊಳಿಸುತ್ತಿತ್ತು. ೩. ಆ ನಗರದಲ್ಲಿ ಭೂಜನರಿಂದ ಶ್ಲಾಘಿಸಲ್ಪಡುವ ಗುಣಶಾಲಿಯೂ, ಈಶ್ವರ ಪದಸೇವಕನೂ, ಕೊರತೆಯಾಗದ ಶೃಂಗಾರವೇ ಮೊದಲಾದ ರಸಭರಿತ ಶ್ರೇಷ್ಠ ಕಾವ್ಯ ನಿರ್ಮಿತಿಗೆ ಆದಿಕಾರಣನೆನಿಸಿದ ಮಲ್ಹಣ ಎಂದೆನಿಸುವ ಓರ್ವನು ಯಶಸ್ಸಿನಿಂದ

ಸಕಲಕಲಾನಿಪುಣಂ ಬುಧ
ನಿಕರಸ್ತುತವಾಣಿಸಾರಸಂಪದನಿಳಯಂ
ಸುಕವಿಶಿರೋಮಣಿ ವಿಳಸಿತ
ಮಕರಧ್ವಜರೂಪನೀಶ್ವರಪ್ರಿಯಭಕ್ತಂ ೪

ಗುಣನಿಧಿಯಾತಂಗೊರ್ವ
ಳ್ಗಣಿಕಾಂಗನೆ ಕೂರ್ತು ರಂಜಿಪಳ್ಯುವತಿಶಿರೋ
ಮಣಿ ಸೊಬಗಿನ ಕಣಿ ಸಲೆ ಮ
ಲ್ಹಣಿಯೆಂಬಳ್ಮರ್ತ್ಯರಂಭೆಯಿವಳೆಂಬಿನೆಗಂ ೫

ಸ್ತನಯುಗ್ಮಂ ಪದ್ಮಕೋಶಂ ನಗೆಮೊಗಮಲರ್ದಂಭೋಜಮಂಭಶ್ಚರಂ ಲೋ
ಚನಮುದ್ಯದ್ವೀಚಿ ಚಂಚತ್ರಿವಲಿ ಸುಳಿ ಲಸನ್ನಾಭಿ ಲಾವಣ್ಯಮೇ ವಾ
ರಿ ನಿತಂಬಂ ಸೈಕತಂ ಕುಂತಳಮಳಿಕುಳಮಿಂಬಾಗೆ ಕಣ್ಗೊಪ್ಪಿದಳ್ಕಾ
ಮಿನಿ ಕಾಸಾರಂಬೊಲಾಡುತ್ತಿರೆ ಸುಕವಿವರಂ ಮಲ್ಹಣಂ ತನ್ನೊಳಾಗಳ್ ೬

ಮರಕತಕಂಕಣರುಚಿ ಭಾ
ಸುಗತರನೇತ್ರತ್ರಿಭಾಗರುಚಿ ತನುರುಚಿಯಾ
ವರಿಸಿರೆ ಕಾಂತೆಯ ಮುಂಗೈ
ಯುರಗಿಳಿಯದು ಪಂಚವರ್ಣಶುಕನೆನೆ ತೋರ್ಕುಂ ೭

ಕೂಡಿ ಶೋಭಿಸುತ್ತಿದ್ದನು. ೪. (ಅವನು) ಸಮಸ್ತಕಲೆಗಳಲ್ಲೂ ನಿಪುಣರಾದ ವಿದ್ವಾಂಸರ ಗುಂಪಿನಿಂದ ಸ್ತೋತ್ರಮಾಡಲ್ಪಟ್ಟ ಮಾತುಳ್ಳವನೂ, ಶ್ರೇಷ್ಠವಾದ ಸಂಪತ್ತುಗಳಿಗೆ ಆಶ್ರಯನಾಗಿಯೂ, ಸತ್ಕವಿ ಶ್ರೇಷ್ಠನೂ, ಪ್ರಕಾಶಮಾನನಾದ ಮನ್ಮಥ ಸದೃಶ ಆಕಾರನೂ, ಆದ ಈಶ್ವರನ ಪ್ರಿಯ ಭಕ್ತನು. ೫. ಸದ್ಗುಣಗಳಿಗೆ ನಿಕ್ಷೇಪನಾದ ಅತನಿಗೆ ಶ್ರೇಷ್ಠ ಯುವತಿಯಾದ, ಸೊಗಸಿನ ಗಣಿಯೆನಿಸಿದ 'ಮಲ್ಹಣಿ' ಎಂಬೋರ್ವ ಗಣಿಕೆಯು ಇರುವಳು. (ಅವಳು) ಭೂಲೋಕದ ರಂಭೆಯೋ ಎಂಬುವಂತೆ (ಅವನೊಡನೆ) ಮೋಹಗೊಂಡು ರಂಜಿಸುತ್ತಿದ್ದಳು. ೬. ಎರಡೂ ಮೊಲೆಗಳೇ ಕಮಲದ ಮೊಗ್ಗು ; ನಗೆಮುಖವು ಅರಳಿದ ಕಮಲ ; ಕಣ್ಣು ಮೀನುಗಳು; ಹೊಳೆಯು ತ್ತಿರುವ ಹೊಟ್ಟೆಯ ಮೇಲಿನ ಮೂರು ಗೆರೆಗಳ ಶ್ರೇಷ್ಠ ತೆರೆಗಳು ; ಶೋಭಿಸುವ ಹೊಕ್ಕುಳು, ಸುಳಿ ; ದೇಹಲಾವಣ್ಯವೇ, ನೀರು ; ಕಟಿಪಶ್ಚಾದ್ಭಾಗವೇ, ಮಳಲಗುಡ್ಡೆ ; ಕೇಶಗಳೇ ದುಂಬಿಗಳ ಸಮೂಹ ; ಉತ್ತಮ ಹಂಸಪಕ್ಷಿ (ಸು + ಕ + ವಿ + ವರ. ಒಳ್ಳೆಯ ನೀರಿನಲ್ಲಿರುವ ಪಕ್ಷಿಗಳಲ್ಲಿ ಶ್ರೇಷ್ಠವಾದ ಹಂಸಪಕ್ಷಿ)ಯೋ ಮಲ್ಹಣ. (ಸತ್ಕವಿಶ್ರೇಷ್ಠನು) ತನ್ನಲ್ಲಿ ಕ್ರೀಡಿಸುತ್ತಿರಲು ಆ ಸುಂದರಿಯು ಆಗ ಕೊಳದ ಹಾಗೆ ಕಣ್ಣಿಗೆ ಶೋಭಿಸು ತ್ತಿದ್ದಳು. ೭. ಪಚ್ಚೆಯ ಕಡಗದ ಕಾಂತಿ, ಪ್ರಕಾಶಮಯ ಕಣ್ಣುಗಳ ಆದಿ, ಅಂತ್ಯದ ಕೆಂಪು, ಮಧ್ಯದ ಕಪ್ಪುಕಾಂತಿ, ದೇಹದ ಹೊಂಬಣ್ಣದ ಕಾಂತಿ–ಇವು ಆವರಿಸಿರಲು ಆ

ವ॥ ಅಂತಸೆವಗಣ್ಯಲಾವಣ್ಯ ತಾರುಣ್ಯ ನೈಪುಣ್ಯವತಿಯೆನಿಪ ಮಲ್ಲಣೆಯುಮಾ ವಿಟತಿಲಕನೆನಿಪ ಮಲ್ಲಣನುಂ ಸಮಾನುರಾಗದಿನಸಮಶರಸಂಭೋಗಸಮಸುಖಸಮಾಶ್ರಿತರಾಗಿರ್ಪನ್ನವಮಾ ಮಲ್ಲಣೆಯ ಜನನಿ—

ಅತಿಚಂಚಲೆಯತಿನಿಷ್ಠುರೆ
ಯತಿಕಪಟೋಪಾಯನಿಪುಣೆಯತಿಲೋಭಸಮ
ನ್ವಿತೆಯತಿಕುಟಿಲವಚೋರು
ಜಿತೆಯತಿಶಯಧೂರ್ತೆಯೆನಿಸಿ ಕರಮೆಸೆದಿರ್ದಳ್ ೮

ಪೊಸನಾರಂ ಕಲ್ಲೊಳೆತ್ತಲ್ಪಿಱಿಯಲಲರನಾಕಾಶದೊಳ್ ಗಾಳಿಯಂ ಖಂ
ಡಿಸಲಂಗಚ್ಛಾಯೆಯಂ ಲಂಘಿಸಲಹಿಪದಮಂ ಲೆಕ್ಕಿಸಲ್ ವ್ಯೋಮಮಂ ಬ
ರ್ಚಿಸಲೀಂಟಲ್ ಜೊನ್ನಮಂ ನುಣ್ಮಣಲಹರವೆಯೊಳ್ಮಂಜುನೀರ್ದುಂಬಲಲ್ಲಾ
ಡಿಸಲುದ್ಯನ್ಮೇರುವಂ ವಾರ್ಶಿಲೆಗಳ ಸರಮಂ ಮಾಡಲಾ ಬರ್ದೆ ಬಲ್ಲಳ್ ೯

ವ॥ ಆ ವೃದ್ಧವೇಶ್ಯೆ ನಿಜತನೂಜೆ ಮೆಚ್ಚಿರ್ದ ಮಲ್ಲಣನೀವ ಧನದ ಪೆರ್ಚುಗೆ ಕೆಲವಾನುಂ ದಿವಸದೊಳ್ಪವಿಲಾಗೆ ನೋಡಿ ಸೈರಿಸಲಾಱದರ್ಥಾತುರತೆಯಿಂದಳಲ್ದು ಮಲ್ಲಣನಿರ್ದೆಡೆಗೆವಂದು ನಿಂದು—

ವನಿತೆ ಮುಂಗೈಯ ಅರಗಿಣಿಯಂತೆ ಶೋಭಿಸುತ್ತಿದ್ದಳು. ವ॥ ಹೀಗೆ ಶೋಭಿಸುವ ಅಗಣಿತ ಲಾವಣ್ಯ, ತಾರುಣ್ಯ, ನೈಪುಣ್ಯವತಿಯೆಂದೆನಿಸುವ ಮಲ್ಲಣೆಯೂ, ವಿಟತಿಲಕನೆನಿಸುವ ಮಲ್ಲಣನೂ, ಸಮಾನ ಅನುರಾಗವುಳ್ಳವರಾಗಿ, ಮನ್ಮಥಭೋಗದಿಂದುಂಟಾಗುವ ಸಮಸುಖವುಳ್ಳವರಾಗಿ ಇರುತ್ತಿರುವಾಗ ಮಲ್ಲಣೆಯ ತಾಯಿಯು— ೮. ಅತಿಚಂಚಲೆ. ಅತಿ ಕಠಿಣ ಹೃದಯವುಳ್ಳವಳು, ಅತ್ಯಂತ ಕಪಟೋಪಾಯಗಳಲ್ಲಿ ನಿಪುಣೆ, ಅತಿ ಆಸೆಯಿಂದ ಕೂಡಿದವಳು, ಅತಿವಕ್ರವಾದ ಮಾತುಗಳಿಂದ ಕೂಡಿದವಳು, ಬಹು ನೀಚ ಸ್ವಭಾವದವಳು ಎಂದೆನಿಸಿ (ಎಲ್ಲವೂ ಅತಿಯೆನಿಸಿ) ಶೋಭಿಸುತ್ತಿದ್ದಳು. ೯. ಆ ಮುದಕಿಯು ಕಲ್ಲಿನಿಂದ ಹೊಸನಾರನ್ನೆತ್ತುವಂಥವಳು ; ಆಕಾಶದಲ್ಲಿ ಹೂವನ್ನೆತ್ತಿ ತರುವವಳು ; ಗಾಳಿಯನ್ನೂ ಕತ್ತರಿಸ ತಕ್ಕವಳು ; ತನ್ನ ದೇಹದ ನೆಳಲನ್ನೂ ಹಾರುವವಳು ; ಹಾವುಗಳ ಕಾಲುಗಳನ್ನೂ ಎಣಿಕೆ ಮಾಡುವಂಥವಳು ; ಆಕಾಶವನ್ನೂ, ತಬ್ಬುವವಳು ; ಬೆಳದಿಂಗಳನ್ನೇ ಕುಡಿಯುವವಳು ; ನುಣ್ಣನೆಯ ಮಳಲಿನ ಪರವಿಯಲ್ಲಿ ಮಂಜಿನ ನೀರನ್ನು ತುಂಬುವವಳು ; ಮೇರುಪರ್ವತವನ್ನೂ ಅಲ್ಲಾಡಿಸುವವಳು ; ಆಣೆಕಲ್ಲುಗಳ ಸರವನ್ನು ಪೋಣಿಸುವಳು–ಎನಿಸಿದ್ದಳು. ವ॥ ಆ ವೃದ್ಧ ವೇಶ್ಯೆಯು– ತನ್ನ ಮಗಳು ಮೆಚ್ಚಿದ ಮಲ್ಲಣನು ಕೊಟ್ಟ ಹಣದ ಮೊತ್ತವು ಕೆಲವಾರು ದಿನಗಳಲ್ಲಿ ಮುಗಿಯಲಾಗಿ, ನೋಡಿ, ಸಹಿಸಲಶಕ್ಯವಾದ ಧನಲೋಭದಿಂದ ಸಂಕಟಗೊಂಡು

ಸ್ಫುರಿತಾಧರಂ ಪ್ರಕಂಪಿತ
ಕರಯುಗಳಂ ಭ್ರುಕುಟಿ ಕೋಪವಿಕೃತಿವಿಶೇಷಾಂ
ಕುರವದನಂ ಗರ್ಘರರವ
ವಿರದಮರ್ದಿರೆ ಬರ್ದೆ ಮುಳಿಸಿನಿಂದಿಂತೆಂದಳ್ ೧೦

ಭಲರೆ ವಿಟರಾಜ ಕವಿಕುಲ
ತಿಲಕ ವದಾನ್ಯರ್ಕಳಾರೊ ನಿನ್ನವೊಲೆ ಧರಾ
ವಲಯದೊಳೆ ನಿನ್ನ ಮೆಚ್ಚಿದ
ಲಲನೆಗೆ ನೀನಮರಭೂರುಹಂ ಕುಡುವೆಡೆಯೊಳ್ ೧೧

ಎಣಿಕೆಗಳುಂಬಮಾದ ವಿಟರೀ ಪೊಳಲೊಳ್ನೆಲಸಿರ್ಕುಮಾವಗಂ
ಪ್ರಣುತವದಾನ್ಯರಂತವರನೊಲ್ಲದೆ ಮತ್ತುನುಜಾತೆ ನಿನ್ನನೇ
ಗುಣಕಟಿಗೊಂಡು ಮೆಚ್ಚಿದಳವಳ್ಗೆಲೆ ನೀಂ ಪಣವೀಯದೋವೊ ಮ
ಲ್ಲಣ ಬಱಿದಿಂತು ಚಾಳಿಪುದು ಸದ್ವಿಟರೀತಿಯೊ ಲುಬ್ಧನೀತಿಯೋ ೧೨

ಬೆಲೆವೆಣ್ಗೆ ನಿಚ್ಚಮುಮ್ಮೆ
ಯ್ವೆಲೆಯೊಯದೆ ಠಕ್ಕುದೋಱಿ ನೆರೆವ ಬೊಜಂಗಂ
ಸಲೆಯವಳ ಜೀವಪವನನ
ನೆಲೆ ಪೀರ್ವ ಭುಜಂಗನಲ್ತೆ ಧರಣೀತಳದೊಳ್ ೧೩

ಸವಿನಗೆಯಿಂದೆ ಮೆಲ್ನುಡಿಯ ಬಿನ್ನಣದಿಂ ತನಿಸೋಂಕಿನಿಂದೆ ಸ
ತ್ಕವಿತೆಯ ಜಾಣ್ಮೆಯಿಂ ಬಗೆಗೆ ಸೋಲಮನುರ್ವಿಸಿ ಗಾಡಿಯಿಂ ಮನೋ

ಮಲ್ಲಣನ ಎದುರಿಗೆ ಬಂದುನಿಂತು—೧೦. ನಡುಗುತ್ತಿರುವ ತುಟಿ, ನಡುಗುವ ಕೈಗಳು ಗಂಟಿಕ್ಕಿದ ಹುಬ್ಬು, ಕೋಪದಿಂದ ವಿಕಾರಗೊಂಡು ವಿಚಿತ್ರಾಕಾರ ಮೊಳೆತಮುಖ ಗುರುಗುರು ಎಂಬ ಧ್ವನಿ ವಿಶೇಷಗಳಿಂದ ತುಂಬಿದವಳಾಗಿ ಆ ಮಲ್ಲಣಯ ತಾಯಿಯು ಹೀಗೆಂದಳು : ೧೧. 'ಕವಿ ಕುಲ ತಿಲಕನಾದ ವಿಟರಾಜನೇ, ಭಲೇ ! ಈ ಲೋಕದಲ್ಲಿ ನಿನ್ನ ಹಾಗೆ ದಾನಶಾಲಿಗಳಾರಿದ್ದಾರೆ ? ನೀನು ಮೆಚ್ಚಿದ ಸುಂದರಿಗೆ (ಅರ್ಥಾದಿ ಗಳನ್ನು) ಕೊಡುವ ವಿಷಯದಲ್ಲಿ ಕಲ್ಪವೃಕ್ಷ ಸಮಾನನು.' ೧೨. 'ಈ ಪಟ್ಟಣದಲ್ಲಿ ಶ್ಲಾಘ್ಯರಾದ ಹೆಚ್ಚು ಹಣವನ್ನು ಕೊಡುವ ವಿಟರುಗಳು ಲೆಕ್ಕವಿಲ್ಲದಷ್ಟು ಜನರಿದ್ದಾರೆ. ನನ್ನ ಮಗಳು ಅವರಾರನ್ನೂ ಆಪೇಕ್ಷಿಸದೆ ನಿನ್ನನ್ನೇ ಮೋಹಿಸಿ, ಮೆಚ್ಚಿದ್ದಾಳೆ. ಎಲೆ ಮಲ್ಲಣ, ಓಹೋ ! ಅವಳಿಗೆ ಹಣವನ್ನು ಕೊಡದೆ ಸುಮ್ಮನೆ ಈ ರೀತಿ ಸೊರಗಿಸು ತ್ತಿರುವುದು ಶ್ರೇಷ್ಠವಿಟರ ನೀತಿಯೋ ? ಜಿಪುಣ ಗುಣವೊ ?' ೧೩. 'ಎಲೈ ಮಲ್ಲಣ ಲೋಕದಲ್ಲಿ ವೇಶ್ಯಾಸ್ತ್ರೀಗೆ, ನಿತ್ಯವೂ ಮೆಯ್ಯುಬೆಲೆಯುನ್ನು ಕೊಡದೆ ಠಕ್ಕು ತೋರಿಸಿ, ಕೊಡುವ ವಿಟನು ಅವಳ ಪ್ರಾಣವಾಯುವನ್ನೇ ಚೆನ್ನಾಗಿ ಹೀರುವ ಸರ್ಪಸಮಾನ ನಲ್ಲವೇ ?' ೧೪. 'ನೀನು ಸವಿ ಸವಿಯಾದ ಮೃದುಮಾತಿನಿಂದ, ಮೈಯಾರದಿಂದ, ದೇಹಸ್ಪರ್ಶದಿಂದ, ಒಳ್ಳೆಯ ಕವಿತೆಯ ಜಾಣತನದಿಂದ, ಅವಳ ಮನಸ್ಸನ್ನು ಸೋಲಿಸಿ,

ಭವಮದಮಂ ನಿಮಿರ್ಚಿ ಪೊಸಲಜ್ಜೆಯನಿಕ್ಕಿ ಪೊದಳ್ದು ಕೂಡಿ ನೀಂ
ಕುವರಿಯನಿಂತು ಮಚ್ಚಿಸಿ ಮರುಳ್ಚಿ ಧನಂಗೊಡದಿರ್ಪುದೊಪ್ಪಮೋ ೧೪

ಪಡೆದುಣ್ಬ ಪೆಣ್ಣನಕ್ಕಟ
ಬಿಡದಿಂತು ಮರುಳ್ಚಿ ಮನೆಯ ಬೀಯಕೆ ಧನಮಂ
ಕುಡಲೊಲ್ಲದಿಂತು ಚಾಳಿಪ
ಜೆಡಂಗನಿದದೆಲ್ಲಿ ಕಲ್ತೆ ಪೇಳ್ ವಿಟತಿಲಕಾ ೧೫

ನಿನ್ನ ವಿಭುತ್ವಮೆನ್ನ ಮನೆಗಪ್ಪುದೆ ಪೆರ್ಚಿದ ಧಾನ್ಯರಾಶಿ ಪೇ
ಳ್ನಿನ್ನ ಕವಿತ್ವಮೆನ್ನ ಸುತೆಗಪ್ಪುದೆ ಕಾಂಚನರತ್ನಭೂಷಣಂ
ನಿನ್ನ ನಯೋಕ್ತಿಯೆನ್ನ ನಿಳಯವ್ಯಯಕಪ್ಪುದೆ ವಿತ್ತಪುಂಜಮೊ
ನಿನ್ನ ಸುಭಕ್ತಿಯೆಳ್ತರಮಿದೇನೆನಗಪ್ಪುದೆ ಸದ್ಗತಿಪ್ರದಂ ೧೬

ಪಲವುಂ ಪರ್ವಂಗಳೆಯ್ದುತ್ತಿರೆ ತನುಭವೆ ತಾಂ ತೊಟ್ಟ ಮಾಣಿಕ್ಯಭೂಷಾ
ವಲಿಯಂ ಸನ್ಮೌಕ್ತಿಕೈಕಾವಳಿಯನಸಮಮಂಜೀರಮಂ ಪ್ರೋಲ್ಲಸನ್ಮೇ
ಖಲೆಯಂ ಬೀಯಕ್ಕೆ ಪೊನ್ನಿಲ್ಲದಿರೆ ವಿಪಣಿಯೊಳ್ಮಾರಿತೇಂ ಮಾಡಳೇ ಕೋ
ಮಲೆ ಸನ್ಮಾಹೇಶ್ವರಾರಾಧನಮನಭವಸಂಪೂಜೆಯಂ ಪೇಳ್ವನೇನಂ ೧೭

ಕೆಲವಲದ ಗಣಿಕೆಯರ್ಶಿವ
ನಿಲಯಕೆ ಮಣಿದೊಡವನಿಟ್ಟು ತಳರ್ವೆಡೆಯೊಳಿವಳ್

ಉಬ್ಬಿಸಿ, ವಿಲಾಸದಿಂದ ಮದನ ಸಂಬಂಧದ ಮದವನ್ನು ಅಧಿಕಗೊಳಿಸಿ, ಹೊಸ ನಾಚಿಕೆಯನ್ನುಂಟುಮಾಡಿ, ಮನವೊಲಿದು ಕೂಡಿ, ಈರೀತಿ ನನ್ನ ಮಗಳನ್ನು ಮರುಳುಗೊಳಿಸಿ ಹಣವನ್ನೇ ಕೊಡದೆ ಇರುವುದು ಯೋಗ್ಯವೇ ?' ೧೫. 'ಎಲೈ ವಿಟಶ್ರೇಷ್ಠನೇ (ವೃತ್ತಿಯಿಂದ) ಸಂಪಾದಿಸಿ, ಉಣ್ಣುವ ಹೆಣ್ಣನ್ನು ಬಿಡದೆ, ಈರೀತಿ ಮರುಳುಗೊಳಿಸಿ ಅಯ್ಯೋ ! ಮನೆಯ ಖರ್ಚಿಗೂ ಹಣವನ್ನೂ ಕೊಡದೆ, ಈರೀತಿ ಪೀಡಿಸುವ ರೀತಿಯನ್ನು ಎಲ್ಲಿ ಅಭ್ಯಾಸ ಮಾಡಿದೆ ?' ೧೬. 'ನಿನ್ನ ಶ್ರೀಮಂತಿಕೆ ನನ್ನ ಮನೆಯ ಧಾನ್ಯದ ರಾಶಿಯಾದೀತೇ ? ಹೇಳು. ನಿನ್ನ ಕವಿತ್ವ ನನ್ನ ಮಗಳ ಬಂಗಾರದ ರತ್ನಾಭರಣವಾದೀತೇ ? ನಿನ್ನ ನಯವಾದ ಮಾತುಗಳು ನನ್ನ ಮನೆಯ ಖರ್ಚಿನ ಹಣದ ರಾಶಿಯಾದೀತೇ ? ನಿನ್ನ ಸದ್ಭಕ್ತಿಯ ಹೆಚ್ಚುಗಾರಿಕೆ ನನಗೆ ಸದ್ಗತಿಯನ್ನು ಕೊಟ್ಟೀತೇ ?' ೧೭. 'ಅನೇಕ ಹಬ್ಬಗಳು ಬರುತ್ತಿರಲು ಖರ್ಚಿಗೆ ಹಣವಿಲ್ಲದಿರಲು ನನ್ನ ಮಗಳು ನೀನು ಕೊಟ್ಟ ಮಾಣಿಕ್ಯರತ್ನಾಭರಣಗಳನ್ನೂ, ಒಳ್ಳೆಯ ಮುತ್ತಿನ ಏಕಾವಳೀ ಸರವನ್ನೂ, ಅನುಪಮವಾದ ಮಂಜೀರವನ್ನೂ, ಶೋಭಿಸುತ್ತಿದ್ದ ನಡುವಿನ ಪಟ್ಟಿಯನ್ನೂ ಅಂಗಡಿಗಳಲ್ಲಿ ಮಾರಾಟಮಾಡಿ, ಶ್ರೇಷ್ಠ ಮಾಹೇಶ್ವರರ ಪೂಜೆಯನ್ನೂ, ಪರಶಿವನ ಪೂಜೆಯನ್ನೂ ಮಾಡಲಿಲ್ಲವೇ ? ಇದಕ್ಕೇನು ಹೇಳುತ್ತೀಯೆ ?' ೧೮. 'ಎಲೈ ವಿಟನೇ, ಅಕ್ಕಪಕ್ಕದ ಸೂಳೆಯರು, ಒಳ್ಳೊಳ್ಳೆ ರತ್ನಾಭರಣಗಳನ್ನು ಧರಿಸಿಕೊಂಡು

ನಲಿದೆಂತು ತಳರ್ವಳವರೊಡ
ನೆಲೆ ತೊಡವಿದಡಕಟ ಬಱಿಯ ವೈಭವದಿಂದಂ ೧೮

ಇತ್ತಿತ್ತು ತಣಿದೆ ನೀಂ ಬಹು
ವಿತ್ತಮನಿದೆ ಸಾಲ್ಗುಮೆಮಗೆ ನಿನ್ನೊಡನಾಟಂ
ಪತ್ತಿದ ನಾಗರಕಾಟಂ
ಸುತ್ತೆಂ ಮಿಳ್ತುವಿನ ಮಾಟಮಲ್ಲದೆ ಪೆಱತೇಂ ೧೯

ನಸುಮುನಿಸಾಂತು ಸೈರಣೆಯ ಗೆಲ್ಲಮನೋದಿನಿಸಿತ್ತು ಸೋಲಮಂ
ಪೊಸಯಿಸಿ ಸೋಲ್ತು ಮೇಣ್ಮುಳಿಯೆ ತಿರ್ದಿ ಕರಾಬ್ಜದೆ ಪೊಯ್ಯೆ ಪೊಂಗಿ ರಾ
ಗಿಸಿ ನೆಲವೇಱಿ ಮೇಲ್ವರಿಯೆ ಮುಂಬರಿದಪ್ಪಿದೊಡಪ್ಪಿ ಮೆಯ್ಯನೊಂ
ದಿಸಿ ನೆರೆವಿಚ್ಚೆಗಾರ್ತನದ ಜಾಣ್ಮೆಯನಿಂತು ನೆಗಳ್ಚಿ ಗಾಡಿಯಿಂ ೨೦

ಕಲೆಯೊಲವಂ ಪರೀಕ್ಷಿಸಿ ನಿರೀಕ್ಷಿಸಿ ಚೆಂದುಟಿಯಂ ಕರ್ದುಂಕಿ ಚ
ಲ್ವಲರ ಮನೋಜರಾಗರಸವಾರ್ಧಿಯೊಳಾರಿಸುತಿಂತು ಕೂಟದಿಂ
ನಲಿದೊಲವಿತ್ತು ಮಚ್ಚಿಸಿ ಮರಳ್ಚಿ ಮದೀಯತನೂಜೆಯಂ ಮಹಾ
ಖಲ ಪಣಮೀಯದನ್ಯಮನಮಾಗದವೋಲ್ನೆಗಳಲ್ಕೆ ತಕ್ಕುದೇ ೨೧

ಮಗಳತಿ ಮುಗ್ಧೆ ಮಾನಿನಿಯಿವಣ್ಪಣಮಂ ಪಡೆದುಣ್ಬ ಕಾಲದೊ
ಳ್ನೆಗಳ್ದಿಲೆ ಮರ್ದುಮಾಯೆಯ ಮರುಳ್ಚಿದೆ ನಿನ್ನಯ ಮರ್ದುಮಾಯೆ ನಿ

ಶಿವಾಲಯಕ್ಕೆ ನಲಿದಾಡಿ ಹೋಗುವ ಕಾಲದಲ್ಲಿ ಅವರೊಡನೆ ಆಭರಣವಿಲ್ಲದೆ ನನ್ನ ಮಗಳು ಬರಿಯ ವೈಭವದಿಂದ ಹೇಗೆ ಹೋದಾಳು ? ಅಯ್ಯೋ !' ೧೯. 'ನೀನು ಬಹಳಷ್ಟು ಹಣವನ್ನು ನಮಗೆ ಕೊಟ್ಟು ಕೊಟ್ಟು ದಣಿದು ಹೋದೆ ! ನಮಗೆ ಇನ್ನು ಮುಂದೆ ನಿನ್ನ ಸಹವಾಸ ಸಾಕು. 'ಸುತ್ತಿದ ನಾಗರಹಾವಿನ ಕಾಟ ಮೃತ್ಯುವಿನಮಾಟ' ವಲ್ಲದೆ ಬೇರೇನು' ೨೦. 'ನಾನು ಸ್ವಲ್ಪ ಕೋಪಗೊಳ್ಳಲು ಅದನ್ನು ಸಹಿಸಿಕೊಂಡು ಗೆದ್ದು, ಆಗ ಸ್ವಲ್ಪ ಹಣವನ್ನು ಕೊಟ್ಟು ಸೋಲುವಂತೆ ಮಾಡುತ್ತೀಯೆ ; ನೀನು ಸೋಲುತ್ತೀಯೆ. ಪುನಃ ಅವಳು ಕೋಪಗೊಂಡರೆ ಅವಳನ್ನು ತಿದ್ದಿಬಿಡುತ್ತೀಯೆ. ಹಸ್ತಕಮಲದಿಂದ ಹೊಡೆದರೆ, ನೀನು ಹೆಚ್ಚಾಗಿ ಅವಳಲ್ಲಿ ಪ್ರೀತಿಯನ್ನು ತೋರಿಸಿ, ಮೇಲೆಬಿದ್ದು ಸಂತೋಷವನ್ನು ಹೊಂದುತ್ತೀಯೆ. ಮುಂದಕ್ಕೆ ಬಂದು ಅಪ್ಪಿದಾಗ ಅವಳೊಡನೆ ಮೈ ಸೇರಿಸಿ ಅಪ್ಪಿಕೊಂಡು ಕೂಡುವ ಮನ್ಮಥ ಕ್ರೀಡೆಯ ಪ್ರೌಢಿಮೆಯನ್ನು ಸಂಭ್ರಮದಿಂದ ಉಂಟುಮಾಡುತ್ತೀಯೆ.' ೨೧–೨೨. 'ಮಹಾನೀಚನೇ, ಹಣವನ್ನೇ ಕೊಡದೆ, ಅವಳ ಕಲೆಯ ಒಲವನ್ನು ಪರೀಕ್ಷೆಮಾಡಿ ನೋಡಿ, ಕೆಂಪಾದ ತುಟಿಗಳನ್ನು ಕಚ್ಚಿ, ಚೆಲುವಾಗುವಂತೆ ಮನ್ಮಥ ಸಂಬಂಧದ ಕ್ರೀಡೆಯ ಅನುರಾಗ ರಸ ಸಮುದ್ರದಲ್ಲಿ ಮುಳುಗಿಸಿ ಹೀಗೆ ಕೂಟಗೊಂಡು ನಲಿನಲಿದು ಪ್ರೀತಿಯನ್ನು ತೋರಿಸಿ ಮೆಚ್ಚಿಸಿ, ಮರುಳುಗೊಳಿಸಿ, ನನ್ನ ಮಗಳನ್ನು ಬೇರೆ ಮಾರ್ಗಕ್ಕೆ ಹೋಗಗೊಡದಂತೆ

ನ್ನೊಗುಮಿಗೆವೆತ್ತ ಸತ್ಕಳೆಯಿವೆಂಬಿವನೆಲ್ಲಮನೆಯ್ದೆ ತೂಳ್ದು ನೀಂ
ನಗೆಗೆಡೆಯಾಗೆ ಕಟ್ಟಿಸಿದಪೆಂ ಮಣಿಮಂಚದ ಕಾಲೊಳೀಕೆಯಾ ೨೨

ಆನಱಿಯದ ಕೌಟಿಲ್ಯಮೆ
ಯಾನಱಿಯದ ಮರ್ದು ಮಾಯೆ ಕಳೆಗಳೆ ಬಿಡು ಕೇ
ಳ್ದೀನಱಿವೆಯಿಲ್ಲಮೋ ಪೇ
ಳೀ ನಗರದೊಳೆನ್ನ ಸೂಳೆತನದ ಬೆಡಂಗಂ ೨೩

ಸುಳಿಸುತ್ತುಂಗಾಱನಂ ಜಕ್ಕುಲಿಸಿ ಕಳೆವ ಬೆಳ್ವಾಳನೊಳ್ಪಿಂದೆ ಬಂದಾ
ಗಳೆ ಕಾಯ್ಪಂ ತೋಱುತುಂ ಪಾಱಿಪ ಪುರುಡಿಗನಂ ಪೂಣ್ದು ಬೇರ್ಕೆಯ್ವ ಲೋಭೋ
ಜ್ವಳನಂ ಱೋಡಾಡಿ ಪೋಗಾಡುವ ವಿಗಡದ ಮಾಯಾವಿಯಂ ಮಾಯೆಯಿಂ ಸೊ
ರ್ಕಳಿವನ್ನಂ ತೂಳ್ವ ಚಾತುರ್ಯದ ಪೊಸಬಗೆಯೆನ್ನೊಳ್ನಿತಾಂತಂ ನಿಸರ್ಗಂ ೨೪

ಬಱಿವಿನ್ನಣಮಂ ತೋಱದೆ
ಪೊಱಮಡು ಪೊಱಮಡು ಮದೀಯ ನಿಳಯಮನೀಗಳ್
ನೆಱೆ ಬೊಜಗತನದಲಂಪಂ
ಮೆಱೆ ಮತ್ತೊರ್ವಳೊಳೆ ಬೆಡು ಬಿಡೆನ್ನಾತ್ಮಜೆಯಂ ೨೫

ವ್ಯವಹರಿಸುವ ರೀತಿಯು ತಕ್ಕದ್ದೇ ನಿನಗೆ ?'' ನನ್ನ ಮಗಳು ಮುಗ್ಧೆ, ಮಾನವಂತೆ, ಇವಳು ವಿಟರಿಂದ ಹಣವನ್ನು ಪಡೆದು ಸುಖಪಡುವ ಕಾಲದಲ್ಲಿ, ಎಲೈ ನೀನು ಅವಳಿಗೆ ಮದ್ದು ಮಾಟಮಾಡಿಸಿಬಿಟ್ಟಿದ್ದೀಯೆ ? ನಿನ್ನ ಈ ಮದ್ದುಮಾಟ ಮಾಯೆಗೀಯೆಗಳು ಶ್ರೇಷ್ಠ ಕಲೆಗಿಲೆಯೆಂಬುವೆಲ್ಲವನ್ನೂ ಓಡಿಸಿ, ನೀನು ಅಪಹಾಸ್ಯಕ್ಕೀಡಾಗುವಂತೆ ನಿನ್ನನ್ನು ಅವಳ ರತ್ನಖಚಿತ ಮಂಚದ ಕಾಲಿಗೆ ಕಟ್ಟಿಸಿಬಿಡುತ್ತೇನೆ.' ೨೩. ಇದೇನು ನಾನು ತಿಳಿಯದ ಕುಟಿಲವಿದ್ಯೆಯೋ ? ನಾನರಿಯದ ಮದ್ದುಮಾಟಗಳ ವಿದ್ಯೆಯೋ ? ಬಿಡು. ನನ್ನ ಸೂಳೆತನದ ಬೆಡಗನ್ನು ಈ ನಗರದಲ್ಲಿ ನೀನು ಕೇಳಿ ತಿಳಿದೇಯಿಲ್ಲವೇ ?' ಹೇಳು. ೨೪. 'ಸುಮ್ಮ ಸುಮ್ಮನೆ ಸುಳಿದಾಡುವವನನ್ನು ಚಕ್ಕಳಗುಳಿಯಾಡಿದಂತೆ ಮಾಡಿ ಓಡಿಸುವ, ಮಂಕುಬೂದಿಯನ್ನೆರಚಬಂದವನನ್ನು ಅವನು ಬಂದೊಡನೆ ಕೋಪವನ್ನು ತೋರಿಸಿ ಓಡಿಸುವ, ಸ್ಪರ್ಧೆಯಿಂದ ಬರುವವನನ್ನು ಶಪಥಮಾಡಿ ಬೇರೆಗೊಳಿಸಿ ಓಡಿಸುವ, ವಿಶೇಷ ಲೋಭಿಯಾದವನು ಬಂದಾಗ ಬೆನ್ನಟ್ಟಿ ಓಡಿಹೋಗುವಂತೆ ಮಾಡುವ, ಮಾಯಾವಿಯಾದವನನ್ನು ಮಾಯೆಯಿಂದಲೇ ಅವನ ಸೊಕ್ಕನ್ನು ಮುರಿದು ಅಟ್ಟುವ ಹೊಸ ರೀತಿಯ ನಡೆವಳಿಕೆ ನನ್ನಲ್ಲಿ ನಿಸರ್ಗದತ್ತವಾದದ್ದು.' ೨೫. ಬರಿಯ ಬೆಡಗಿನ ವ್ಯವಹಾರವನ್ನು ತೋರಿಸದೆ ನನ್ನ ಮನೆಯಿಂದ ಹೊರಹೊರಡು ಮತ್ತೊಬ್ಬ ಳಾವಲ್ಲಿಯೋ ಕೂಡಿಕೊಂಡು ನಿನ್ನ ವಿಟತನದ ಸೊಗಸನ್ನು ತೋರ್ಪಡಿಸಿಕೋ ನನ್ನ

ವ॥ ಎಂದಿಂತು ಪಲ್ದಿಂದು ಗಜಱಿ ಗರ್ಜಿಸಿ ಪುರುಡುದೋಱಿ ಬಾಯ್ಗೆ ಬಂದಂತೆ ಗಳಪಿ ಮಾನನಿಧಿಯಾದ ಮಲ್ಲಣನಂ ಮಲ್ಲಣಿಯ ಮಾತೆ ಮನೆಯಿಂ ಪೊಱಮಡಿಸಿ ಬಿರಯಿಸುವ ಮಗಳನಂತಿಂತು ಸಂತಯಿರಿಸಿ ರಾಜಪುತ್ರನನೊರ್ವನಂ ಕರೆದು ಧನಮಂ ಕೊಂಡವನೊಳತಿ ಪ್ರಬಂಧದಿಂ ನೆರಪಿ ಮುದಂಬಡೆದಿರ್ಪಿನಮಿತ್ತಲ್—

ಕಱಿಗುಂದಿದಾನನಂ ರಸ
ಮಱಿತಧರಂ ಡಿಳ್ಳ[1]ವಾಱಿದೆರ್ದೆ ಬಿಸುಪಿಂದಂ
ಪೊಱಪಾಯ್ವ ಸುಯ್ಗಳುರ್ದಿರೆ
ಕುಱುವಜ್ಜೆಗಳಿಡುತೆ ಮಲ್ಲಣಂ ನಡೆತಂದಂ ೨೬

ವ॥ ಅಂತು ಚಂದ್ರಿಕೆಯಗಲ್ದ ಚಕೋರನಂತೆ, ಕಾದಂಬಿನಿ ಪಿಂಗಿದ ಮಯೂರನಂತೆ ಕಳೆಗುಂದಿ ಕಾಂತೆಯಗಲ್ದುರಿ ಮನದೊಳೊಗೆದು ತನುವನಾವರಿಸೆ ತಲ್ಲಣಂಬೆತ್ತು ಮಲ್ಲಣಂ ಬಂದು ಮದನಕಾರಾಗೃಹಮಂ ಪುಗುವಂತತುಳ ಸುರಭಿರಸಭರಕುಸುಮ ವಿಸರದಳಫಳ ಪರಿಮಿಳಿತ ನಾನಾ ನವೀನ ಭೂಜರಾಜಿರಾಜಿತ ಲತಾವಿತಾನಸಂಕಲಿತ ಶುಕಪಿಕಪ್ರಕರರವಮಧುಕರನಿಕರಝಂಕಾರ

ಮಗಳನ್ನು ಕೈಬಿಡು. ವ॥ ಈ ರೀತಿ ಹಲ್ಲುಕಡಿಕಡಿದು ಗದರಿ ಗರ್ಜನೆಮಾಡಿ ಶಕ್ತಿಮೀರಿ ಬಾಯಿಗೆ ಬಂದಹಾಗೆ, ಬೈದು ಮಾನನಿಧಿಯಾದ ಆ ಮಲ್ಲಣನನ್ನು ಮಲ್ಲಣಿಯ ತಾಯಿಯು ಮನೆಯಿಂದ ಹೊರಹೊರಡಿಸಿ, ವಿರಹಗೊಂಡ ಮಗಳನ್ನು ಹಾಗೂ ಹೀಗೂ ಸಮಾಧಾನಗೊಳಿಸಿ, ರಾಜಪುತ್ರನೊಬ್ಬನನ್ನು ಕರೆದು ಅವನಿಂದ ಹಣವನ್ನು ಪಡೆದು ಅವನಲ್ಲಿ ಅತಿ ಬಲಾತ್ಕಾರದಿಂದ (ಮಗಳನ್ನು) ಕೂಡಿಸಿ ಸಂತೋಷಪಡುತ್ತಿರುವಾಗ—
೨೬. (ಇತ್ತ) ಕಪ್ಪಿಟ್ಟ ಮುಖ, ರಸವೊಣಗಿದ ತುಟಿ, ಧೈರ್ಯಗೆಟ್ಟು ಬಡಿದುಕೊಳ್ಳುವ ಎದೆ, ಉಷ್ಣದಿಂದ ಹೊರ ಹೊಮ್ಮುವ ಬಿಸಿಯುಸಿರು ಇವೆಲ್ಲ ಅಧಿಕವಾಗಿರಲು ಚಿಕ್ಕ ಚಿಕ್ಕ ಹೆಜ್ಜೆ ಹಾಕುತ್ತ ಮಲ್ಲಣನು ಬಂದನು. ವ॥ ಈ ರೀತಿ ಬೆಳದಿಂಗಳನ್ನಗಲಿದ ಚಕೋರ ಪಕ್ಷಿಯಂತೆ, ಮೇಘಪಙ್ಕ್ತಿಯನ್ನಗಲಿದ ನವಿಲಿನಂತೆ ಕಾಂತಿಗುಂದಿ ಕಾಂತೆಯಾದ ಮಲ್ಲಣಿಯನ್ನಗಲಿದ ಉರಿ ಮನಸ್ಸಿನಲ್ಲಿ ಉದ್ಭವಗೊಂಡು ದೇಹವನ್ನೆಲ್ಲ ಆವರಿಸಲಾಗಿ; ತಲ್ಲಣಗೊಂಡ ಮಲ್ಲಣನು ಮನ್ಮಥನಿಂದ ರಚಿತವಾದ ಕಾರಾಗೃಹವನ್ನು ಹೊಗುವ ಹಾಗೆ ಅನುಪಮವಾದ ಸುಗಂಧ ಪರಿಮಳದಿಂದ ಕೂಡಿದ ಹೂವುಗಳ ಸಮೂಹದಿಂದಲೂ, ದಳಗಳಿಂದಲೂ, ಹಣ್ಣುಗಳಿಂದಲೂ, ನಾನಾ ಬಗೆಯ ಗಿಡಗಳ (ಅಲಂಕಾರಾರ್ಥವಾದ ಗಿಡಗಳ) ಸಾಲಿನಿಂದ ಶೋಭಾವಹವಾದ, ಬಳ್ಳಿಗಳ ಗುಂಪಿನಿಂದ ಕೂಡಿದ ಗಿಳಿ, ಕೋಗಿಲೆಗಳ ಧ್ವನಿಯಿಂದಲೂ, ತುಂಬಿಗಳ ಸಮೂಹದ ಝೇಂಕಾರ ದಿಂದಲೂ ಸಂಬಂಧಗೊಂಡಿರುವ, ಸ್ವೇಚ್ಛಾಚಾರಿಣಿಯಾದ ವಸಂತವೆಂಬ ಲಕ್ಷ್ಮಿಯ ಲೀಲೆಯ ಗೃಹವೆನಿಸುವ, ಕ್ರಿಡಾರ್ಥವಾದ ಉಪವನವನ್ನು ಪ್ರವೇಶಿಸಿ ಒಂದು ಮಾವಿನ ಮರದ ಬುಡದಲ್ಲಿರುವ ತಂಪಾದ ನೆಳಲಿನಲ್ಲಿ ಹಾಸಿದ ತಳಿರಿನ ಹಾಸಿಗೆಯ ಮೇಲೆ ಮೆಲ್ಲಗೆ

[1] ಳ್ಳ(ಅ, ಮು)

ಶೃಂಖಲಿತ ವಿಶೃಂಖಲ ವಸಂತಲಕ್ಷ್ಮೀ ವಿಳಾಸನಿವಾಸಮೆನಿಪ ಕೇಳೀವನಮಂ ಪೊಕ್ಕು ಮಾಮರದ ತಳದ ತಣ್ಣೆಳಲ ತಳಿರ್ವಾ[1]ಸೆಯೊಳೊಯ್ಯನೆ ಮೆಯ್ಯಿಕ್ಕಿ ನಿಜಸಖಸಖೀಜನಕೃತಶಿಶಿರೋಪಚಾರಕ್ಕೆ ಪಕ್ಕಾಗಿರ್ದು ಮತ್ತೆ ಮತ್ತೆ ಪೆರ್ಚಿದ ಚಿತ್ತಜಾತಾನಳಸಂತಾಪಮಂ ಕಳೆಯಲಾಱದೆ— .

ಪಾಡುವ ತುಂಬಿಗೆ ಮೆಲ್ಪಿಂ
ತೀಡುವ ತಂಗಾಳಿಗುಲಿವ ಕೋಗಿಲೆಗೆ ಪೊದ
ಳ್ದಾಡುವ ನವಿಲ್ಗೆ ನಿಶೆಯೊ
ಳ್ಮೂಡುವ ಶಶಿಗಳ್ಕಿ ಬಳ್ಕಿ ಸಿಡಿಮಿಡಿಗೊಂಡಂ ೨೭

ವ॥ ಮತ್ತಮಲ್ಲಿ—

ತಳಿರಂ ಮಲ್ಲಣಿಯಂಘ್ರಿಗೆತ್ತು ಮಣಿವಂ ಭೃಂಗಾಳಿಯಂ ಕಂಡು ತ
ನ್ನಳ ನೀಲಾಳಕಮೆಂದು ನೇವರಿಸಲೊಲ್ವಂ ವಲ್ಲಿಯಂ ಕಂಡು ಕೋ
ಮಳೆಯಂಗಂ ನಿಜಮೆಂದು ತಳ್ಕೆಗೆಸಪಂ ಪಂಕೇಜಮಂ ಕಂಡು ನ
ಲ್ಲನ ವಕ್ತ್ರಾಂಬುಜಮೆಂದು ಚುಂಬನಕ್ಕೆ ಪಾಯ್ವಂ ದರ್ಪಕಭ್ರಾಂತಿಯಿಂ ೨೮

ವ॥ ಮತ್ತಮಲ್ಲಿ ಶಶಿಶಿಲಾಸೋಪಾನರುಚಿನಿಚಯಚಂದ್ರಿಕಾವಿಕಸಿತೇಂದೀವರಮನಾವಿಶಾಲ ನೇತ್ರೆಯ ನೇತ್ರಂಗಳೆಂದು ನಿರೀಕ್ಷಿಸಿಯುಮೆಣೆಯಗಲದ ಪೊಣರ್ವಕ್ಕಿಗಳನಾ ತುಂಗಸ್ತನಿಯ ನಿಬಿಡೋತ್ತುಂಗಕುಚಕಲಶಂಗಳೆಂದು ಮನಂದೆತ್ತು ನೋಡಿಯುಂ ಕನಕ ಕಮಳಪರಾಗಪುಂಜಪಿಂಜರಿತಪುಳಿನ ತಳಮನಾ ಘನನಿತಂಬೆಯ ಶಂಬರಾರಿಕುಂಭಿಕುಂಭ ಶುಂಭನ್ನಿತಂಬಬಿಂಬಮೆಂದು ಪರಿಭಾವಿಸಿಯುಂ

ಮಲಗಿಕೊಂಡು ತನಗೆ ಆಪ್ತರಾದ ಸಖಿಯರಿಂದ ಮಾಡಲ್ಪಟ್ಟ ಸಖೀ ಜನರುಗಳಿಂದ ಶೈತ್ಯೋಪಚಾರವನ್ನು ಮಾಡಿಸಿಕೊಂಡು, ಪುನಃ ಪುನಃ ಹೆಚ್ಚುತ್ತಿರುವ ಮನ್ಮಥ ಸಂಬಂಧವಾದ ಅಗ್ನಿಯಿಂದ ಉಂಟಾಗುತ್ತಿರುವ ಪಾಪವನ್ನು ಕಳೆದುಕೊಳ್ಳಲಾರದೆ ೨೭. ಝೇಂಕರಿಸುವ ತುಂಬಿಗಳಿಗೆ, ಮೆಲ್ಲಗೆ ಬೀಸುವ ಮಂದಮಾರುತಕ್ಕೆ. ಧ್ವನಿ ಮಾಡುವ ಕೋಗಿಲೆಗಳಿಗೆ, ಶೋಭಾಮಯವಾಗಿ ಆಡುವ ನವಿಲುಗಳಿಗೆ ರಾತ್ರಿಯ ಸಮಯದಲ್ಲಿ ಮೂಡುವ ಚಂದ್ರನಿಗೆ ಹೆದರಿ ಬಳುಕಿ ವ್ಯಾಕುಲಗೊಂಡನು. ವ॥ ಮತ್ತು ಅಲ್ಲಿ ೨೮. ಮನ್ಮಥ ಸಂಬಂಧವಾದ ಭ್ರಾಂತಿಯಿಂದ ಕೂಡಿದ ಅವನು ಚಿಗುರನ್ನು ಮಲ್ಲಣಿಯ ಕಾಲು ಗಳೆಂದೇ ತಿಳಿದು ನಮಸ್ಕಾರ ಮಾಡುವನು ; ದುಂಬಿಗಳ ಸಾಲನ್ನು ಕಂಡು ತನ್ನವಳಾದ ಮಲ್ಲಣಿಯ ಕಪ್ಪಾದ ಮುಂಗುರುಳೆಂದು ನೇವರಿಸಲು ಪ್ರೀತಿಗೊಳ್ಳುವನು, ಬಳ್ಳಿಗಳನ್ನು ಕಂಡು ಕೋಮಲೆಯಾದ ತನ್ನಕಾಂತೆಯ ನಿಜವಾದ ದೇಹವೆಂದೇ ಬಗೆದು ಆಲಿಂಗಿಸಲು ಪ್ರಯತ್ನಿಸುವನು. ಕಮಲವನ್ನು ಕಂಡು, ತನ್ನ ಪ್ರೀಯೆಯ ಮುಖ ಕಮಲವೆಂದು ಮೇಲೆ ಬೀಳುವನು. ವ॥ ಮತ್ತು ಅಲ್ಲಿ ಚಂದ್ರಕಾಂತ ಶಿಲೆಯ ಸೋಪಾನಗಳ ಕಾಂತಿಯ ಸಮೂಹವೆಂಬ ಬೆಳದಿಂಗಳಿಂದ ಅರಳಿರುವ ಕನ್ನೈದಿಲೆಯ ಹೂವುಗಳನ್ನು ಆ ವಿಶಾಲ ನೇತ್ರೆಯಾದ ಮಲ್ಲಣಿಯ ಕಣ್ಣುಗಳೆಂದೇ ನೋಡುವನು ; ಎಣೆಯಿಲ್ಲದ

---

1 ವಾ(ಮು)

**ನಳನಳಿಸಿ ಕೆಲದೊಳ್ಪೆಳೆದಿರ್ದ ಸುವರ್ಣ ರಂಭಾಸ್ತಂಭಂಗಳನಾ ನುಣ್ದೊಡೆಯ ಬೆಡಂಗಿಯ ನಿಬಿಡೋರುಸ್ತಂಭಂಗಳೆಂದು ನಿಂದು ನಿಟ್ಟಿಸಿಯುಂ ಕಟ್ಟಿದಿರೊಳ್ಬಿರಿದು ಬೀಡೆವರಿದ ದಾಡಿಮದ ಬೀಜರಾಜಿಯನಾ ಕೆಂಬಲ್ಲ ಬಿಂಬಾಧರೆಯ ಕೆಂಬಲ್ಗಳೆಂದವಧರಿಸಿಯುಂ ತರುಣತಮಾಲಲತೆಯನಾ ಲತಾಂಗಿಯ ನುಣ್ಪಡರ್ದ ಬಾಸೆಯೆಂದಾಸೆವಟ್ಟು ಪಂಬಲಿಸಿಯುಂ ಕುಸುಮಪರಿಮಳಮಂ ಪೊತ್ತೆತ್ತಿ ಕುಸಿದು ಬರ್ಪ ಮಂದಾನಿಲನನಾ ಕುಸುಮಗಂಧಿಯ ನಿಶ್ವಾಸಮೆಂದಾಘ್ರಾಣಿಸಿಯುಂ ಮೆಳೆಗಿಳಿಯ ಮೆಲ್ನುಡಿಯನಾ ಮಧುರವಾಣಿಯ ಸವಿನುಡಿಯೆಂದಾಲಿಸಿಯುಂ ಕಲಕಂಠ ಕಲರವಮನಾ ಕಲರವೆಯ ತಾರಸ್ವರಮೆಂದು ಕಿವಿಗೊಟ್ಟು ಸಂಭಾವಿಸಿಯುಂ ಲತಾಗ್ರದೊಳ್ಕುಳ್ಳಿರ್ದ ಮಯೂರಿಯನಾ ಘನಕಚಭರೆಯ ಕಬರೀಭರಮೆಂದನುಭವಿಸಿಯುಂ ಮಿಂತು ಕಂತುವಿಭ್ರಾಂತಿಯಿಂ ಮುಂದುಗೆಟ್ಟು ಮೋಹಿಸಿ ತೊಳಲ್ದು ಬಳಲ್ದು ಕೋಡಿ ಬಾಡಿ ಕಂಗೆಟ್ಟು ಮರವಟ್ಟು ನಂದನದೊಳಿರ್ಮಡಿಸಿದ ವಿರಹದುರಿಪಮಂ ಕಳೆಯಲಾಱದೆ ಕಾಮಾಂಧತೆಯಿಂ ಕಂಗಾಣದೆ ಮಗುಳ್ದು ಮೆಲ್ಲನೆಯ್ತರ್ಪಾಗಳ್—**

ಚಕ್ರವಾಕ ಪಕ್ಷಿಗಳನ್ನು ದಪ್ಪನಾದ ಮೊಲೆಯುಳ್ಳ ಆ ಮಲ್ಹಣಿಯ ದಟ್ಟವಾದ (ಕೂಡಿಕೊಂಡ) ದಪ್ಪನಾದ ಕಲಶದಂತಿರುವ ಮೊಲೆಗಳೆಂದೇ ತಿಳಿದು ಮನಸ್ಸುಗೊಟ್ಟು ದಿಟ್ಟಿಸಿ ನೋಡುವನು ; ಬಂಗಾರದ ಕಮಲಗಳ ಪರಾಗ ಧೂಳಿಯ ಸಮೂಹದಿಂದ ಹೊಂಬಣ್ಣವಾದ ಮಳಲಿನ ದಿಣ್ಣೆಗಳನ್ನು ಆ ದಪ್ಪನಾದ ಕಟಿಪಶ್ಚಾದ್ ಭಾಗವುಳ್ಳ ಮಲ್ಹಣಿಯ ಮನ್ಮಥನ ಮದ್ದಾನೆಯ ಕುಂಭ ಸ್ಥಳದಂತೆ ಶೋಭಿಸುವ ಕಟಿಪಶ್ಚಾದ್ಭಾಗವೆಂದೇ ಭಾವಿಸುವನು ; ಅಕ್ಕಪಕ್ಕದಲ್ಲಿ ನಳನಳಿಸಿ ಬೆಳೆದ ನುಣುಪಾದ ತೊಡೆಯ ಸೌಂದರ್ಯದ ಬಾಳೆಯ ಕಂಬಗಳನ್ನು ಆ ಸುಂದರಿಯಾದ ಮಲ್ಹಣಿಯ ಕೂಡಿದ ತೊಡೆಗಳೆಂದೇ ದಿಟ್ಟಿಸಿ ನೋಡುವನು ; ಎದುರಿನಲ್ಲಿಯೇ ಬಿರಿತು ಬೀಡು ಬಿಟ್ಟು ಕಾಣುವ ದಾಳಿಂಬೆಯ ಬೀಜಗಳ ಸಾಲನ್ನು ಆ ಕೆಂಪಾದ ಹಲ್ಲಿನ ತೊಂಡೆಹಣ್ಣಿನಂಥ ತುಟಿಯ ಮಲ್ಹಣಿಯ ಹಲ್ಲುಗಳೆಂದೇ ನಿಶ್ಚಯಿಸುವನು ; ಚಿಗಿತ ಹೊಂಗೆಯ ಕೊಂಬೆಯನ್ನು ಆ ಬಳ್ಳಿಯಂತಹ ದೇಹವುಳ್ಳ ಮಲ್ಹಣಿಯ ನುಣುಪಾದ ಬಾಸೆಯೆಂದೇ (ಹೊಕ್ಕಳ ಕೆಳಗಿನ ರೋಮರಾಜಿಯೆಂದೇ) ಆಸೆ ಪಟ್ಟು, ಹಂಬಲಗೊಳ್ಳುವನು ; ಪುಷ್ಪ ಸುಗಂಧವನ್ನು ಹೊತ್ತು ಎತ್ತಿಕೊಂಡು ಕುಸಿದು ಬರುತ್ತಿರುವ ಮಂದ ಮಾರುತವನ್ನು ಆ ಕುಸುಮ ಗಂಧಿಯಾದ ಮಲ್ಹಣಿಯ ಉಸಿರೆಂದೇ ಆಘ್ರಾಣಿಸುವನು ; ಗಿಳಿಯ ಮರಿಗಳ ಮಧುರವಾದ ಮಾತುಗಳನ್ನು ಆ ಮಧುರವಾಣಿಯಾದ ಮಲ್ಹಣಿಯ ಮಾತುಗಳೆಂದೇ ಕೇಳುವನು ; ಕೋಗಿಲೆಯ ಅವ್ಯಕ್ತ ಮಧುರವಾದ ಧ್ವನಿಯನ್ನು ಆ ಅವ್ಯಕ್ತ ಮಧುರ ಧ್ವನಿಯುಳ್ಳ ಮಲ್ಹಣಿಯ ತಾರಸ್ವರವೆಂದೇ ಕಿವಿಗೊಟ್ಟು ಕೇಳಿ ಯೋಚಿಸುವನು ; ಬಳ್ಳಿಗಳ ಮೇಲ್ಭಾಗದಲ್ಲಿ ಕುಳಿತುಕೊಂಡಿರುವ ನವಿಲನ್ನು ಆ ಹೆಚ್ಚಾದ ಕೂದಲಿನ ಸಮೂಹದಿಂದ ಕೂಡಿದ ಮಲ್ಹಣಿಯ ಜಡೆಮುಡಿಯೆಂದೇ ಊಹಿಸುವನು ; ಈ ರೀತಿ ಮನ್ಮಥ ಸಂಬಂಧದ ಭ್ರಮೆಯಿಂದ ಮುಂದುಗೆಟ್ಟು ಮಲ್ಹಣಿಯಲ್ಲಿ ಅನುರಾಗಗೊಂಡು ಸಂಕಟಪಟ್ಟು, ಆಯಾಸಗೊಂಡು, ಭಯಪಟ್ಟು, ಬಾಡಿ, ಕಾಂತಿಹೀನವಾಗಿ, ಬೆಂಡಾಗಿ ಆನಂದನದಲ್ಲಿ ಇಮ್ಮಡಿಗೊಂಡ ವಿರಹತಾಪವನ್ನು ಕಳೆದುಕೊಳ್ಳಲು ಸಮರ್ಥನಾಗದೆ ಕಾಮಾಂಧ

ರಮಣೀದಿವ್ಯಾಂಗಚಂಚತ್ಪ್ರಬಳಸುರಭಿಯಂ ಕಾಣ್ಕೆಯೆಂಬಂತೆ ಕೊಂಡಾ
ದಮೆ ತನ್ನಿಶ್ವಾಸಸಂಪ್ರೇಷಿತಸಹಚರನೇಳ್ತರ್ಪವೋಲ್ಬಂದುದುದ್ಯ
ತ್ಪ್ರಮದಾತುಂಗಸ್ತನಾಲಿಂಗಿತಮೃಗಮದಕಾಶ್ಮೀರಕರ್ಪೂರಗಂಧಾಂ
ಧಿಮಮಾದ್ಯದ್ಭೃಂಗಝಂಕಾರರವಮುಖರಿತಂ ವೇಗದೂರಂ ಸಮೀರಂ ೨೯

ವ॥ ಅಂತು ಬಂದ ಮಂದಾನಿಲಂಗೆ ಮೆಯ್ಗೊಟ್ಟು ಮದನದಹನತಾಪತಪ್ತನಾ ಗಂಧವಹಂ ಬಂದ ಬಟ್ಟೆವಿಡಿದೆಯ್ತಂದು ಮಧ್ಯರಾತ್ರಿಯೊಳಾ ಮಲ್ಲಣಿಯ ಮಣಿಮಂದಿರದ ಮುಂದೆ ನಿಂದಿರ್ಪು ದುಮಾಗಳಾ ಮಲ್ಲಣೆ ಜನನಿಯ ನಿರ್ಬಂಧದಿನಾ ರಾಜಪುತ್ರನೊಳ್ವಿಷಮರತಿಯೊಳಿರ್ದು ಶಯ್ಯಾಗೃಹ ಮನೊಯ್ಯನೆ ಪೊಱಮಟ್ಟು ಗಂಡೂಷವಾರಿಯನಾ ಮಲ್ಲಣನ ಮೇಲುಗುಳಲೊಡನವಂ ಪೊಂಪುಳಿ ವೋಗಿ ಕಣ್ದೆಱೆದು ಹಾ ಮಲ್ಲಣಿಯೆಂದು ಕಳವಳಿಸಿ ನುಡಿಯೆ ಕೇಳ್ದಿನ್ನ ಮನದನ್ನನ ದನಿಯಪ್ಪು ದೆಂದು ಬೆದಱಿ ಬೆಬ್ಬಳೆವೋಗಿ ಮಱುಗಿ ಸಾರ್ಕೆಗೆಯ್ದು[1] ನಿರೀಕ್ಷಿಪಾಗಳ್ನಿಜನೇತ್ರರುಚಿಯೊಡನೆ ಮಿಂಚು ಸಂಚಳಿಸೆ ಕಂಡು ಮಲ್ಲಣನೆಂದು ನಿರ್ಧರಿಸಿ ಕೈವಿಡಿದಪ್ಪಿ ವಿನಯೋಕ್ತಿಗಳಿನುಪಚರಿಸಿ ಮನ್ನಿಸಿ ಕೇಳೀ

ನಾಗಿ ಮುಂದುಗೆಟ್ಟು ಪುನಃ ಅಲ್ಲಿಂದ ಮೆಲ್ಲ ಮೆಲ್ಲನೆ ಬರುತ್ತಿರುವಾಗ ೨೯. ಉತ್ಕೃಷ್ಟ ರಾದ ಸುಂದರಿಯರ ದಪ್ಪನೆಯ ಮೊಲೆಗಳ ಮೇಲೆ ಲೇಪಿಸಲ್ಪಟ್ಟ ಕಸ್ತೂರಿ, ಕುಂಕುಮ ಕೇಸರಿ, ಪಚ್ಚಕರ್ಪೂರ, ಇವುಗಳ ಪರಿಮಳದಿಂದ ಮದಗೊಂಡು ಕಣ್ಣುಕುರುಡಾದ ದುಂಬಿಗಳ ಝೇಂಕಾರ ಶಬ್ದದಿಂದ ತುಂಬಿ ಹೋದ, ಮೆಲ್ಲ ಮೆಲ್ಲನೆ ಬೀಸುವ ಮಂದ ಮಾರುತವು ನಿಜವಾಗಿ ಆ ಸ್ತ್ರೀಯರಿಂದ ಕಳುಹಿಸಲ್ಪಟ್ಟ ಭೃತ್ಯನೇ ಬರುತ್ತಿರುವನೊ ಎಂಬಂತೆ, ಸ್ತ್ರೀಯರ ಶ್ರೇಷ್ಠವಾದ ಶರೀರದ ಅಧಿಕವಾಗಿ ಶೋಭಿಸುವ ಪರಿಮಳವಾದ ಕಾಣಿಕೆಯಾಗಿಯೋ ಎಂಬಂತೆ ಹೊತ್ತುಕೊಂಡು ಬಂದಿತು. ವ॥ ಹೀಗೆ ಬೀಸುತ್ತ ಬಂದ ಮಂದ ಮಾರುತಕ್ಕೆ ಮನ್ಮಥಾಗ್ನಿಯ ತಾಪದಿಂದ ಸಂತಾಪಗೊಂಡ ಮಲ್ಲಣನು ಮೈಗೊಟ್ಟು, ಆ ಮಂದ ಮಾರುತವು ಹರಿದು ಬರುತ್ತಿರುವ ಮಾರ್ಗವನ್ನೇ ಅನುಸರಿ ಸುತ್ತ ಬಂದು ಮಧ್ಯರಾತ್ರಿಯಲ್ಲಿ ಆ ಮಲ್ಲಣಿಯ ರತ್ನಮಯವಾದ ಮನೆಯ ಮುಂಭಾಗದಲ್ಲಿ ನಿಂತಿದ್ದನು. ತಾಯಿಯ ನಿರ್ಬಂಧದಿಂದ ರಾಜಪುತ್ರನ ಸಂಗಡ ವಿಷಮ ರತಿ ಸುಖದಲ್ಲಿದ್ದ ಮಲ್ಲಣಿಯು ಆ ಶಯ್ಯಾ ಗೃಹದಿಂದ ಮೆಲ್ಲ ಮೆಲ್ಲನೆ ಹೊರ ಹೊರಟು ಬಾಯಿಂದ ಮುಕ್ಕಳಿಸಿದ ನೀರನ್ನು ಮಲ್ಲಣನ ಮೇಲೆ ಉಗುಳಲು ಅವನು ಆ ಕೂಡಲೇ ರೋಮಾಂಚನಗೊಂಡವನಾಗಿ, ಕಣ್ಣನ್ನು ತೆರೆದು 'ಹಾ! ಮಲ್ಲಣೀ' ಎಂದು ಕಳವಳಗೊಂಡು ನುಡಿಯಲು ಮಲ್ಲಣಿಯು ಕೇಳಿ, 'ನನ್ನ ಮನದನ್ನ ನಾದ ಮಲ್ಲಣನ ಮಾತಾಗಿದೆಯಲ್ಲಾ!' ಎಂದು ಬೆದರಿ, ಬೆರಗುಗೊಂಡು, ಮರುಗಿ ಸಮೀಪಕ್ಕೆ ಬಂದು, ನೋಡುತ್ತಿರುವಾಗ ತನ್ನ ನೇತ್ರ ಕಾಂತಿಯೊಳಗೆ ಮಿಂಚು ಸಂಚಾರ ವಾದ ಹಾಗೆ ಕಂಡು ಮಲ್ಲಣನೆಂದು ನಿರ್ಧರಿಸಿ, ಅವನ ಕೈಹಿಡಿದು ಅಪ್ಪಿಕೊಂಡು, ಮೃದು ವಚನಗಳಾದ ಸಮಾಧಾನಗೊಳಿಸಿ, ಮನ್ನಣೆಗೊಳಿಸಿ ರತಿಕ್ರೀಡಾ ಗೃಹದ

---

[1] ಯ್ದು (ಮು)

ಗೃಹದ ಪಿಂದಣೇಕಾಂತಭವನಕ್ಕೆ ಕರೆದೊಯ್ದಲ್ಲಿ ಚಂಚತ್ಕಾಂಚನಮಂಚಾಗ್ರದ ಮೃದುಳ ಶಯ್ಯಾತಳ ದೊಳವನೊಡನೆ ಕುಳ್ಳಿರ್ದು ಬಳ್ಳಿವರಿವ ನೇಹದಿಂ ಸುಸಿಲನೆಸಗಲುಜ್ಜುಗಿಸೆ ವಿವೇಕನಿಧಿಯಾದ ಮಲ್ಹಣಂ ನೋಡಿ—

ಬೆಲೆಗೊಟ್ಟ ರಮಣನಿರ್ದಪ
ನೆಲೆ ನಿನಗಿಂದಬಲೆ ಮನೆಯೊಳದಱಿಂದವನಂ
ಕೆಲಸಾರ್ಚಿ ನಿನ್ನೊಡನೆ ರತಿ
ಯೊಲವಾಂಪುದು ಕೂಡದೆಂದನೇಂ ಶುಚಿತಮನೋ ೩೦

ಹರಿಸುರಪವಿಧುವಿಧಾತ್ರರ
ಮರುಳ್ಚುತನುಚಿತರತಕ್ಕೆ ಮೆಯ್ಯಾನಿಸಿದ
ತ್ಯುರುಭುಜಬಳಮದನನ ಕರ
ಶರಪಾತಕ್ಕೆ ಸೆಡೆದನಲ್ತು ಮಲ್ಹಣನಾಗಳ್ ೩೧

ವಿರಹಾನಳನಿಂ ತನ್ನಯ
ಹರಣಂ ನಿಂದುರಿವ ಸಮಯದೊಳಗಾದೊಡಮಾ
ತರುಣಿಯನುಚಿತ ರತಿಯನಾ
ದರಿಸಿದನಲ್ಲವನತೀವಶುಚಿ ಶುಭಚರಿತಂ ೩೨

ವ॥ ಆಗಳಾ ಮಲ್ಹಣಿ ತನಗೊದವಿದ ಕಾಮಾತಿರೇಕಮಂನಾ ಮಲ್ಹಣನ ನಯೋಕ್ತಿ ಪದ್ಧತಿ ಯೊಳಳವಡಿಸಿ ವಿಷಾದದಿಂ ಸುಯ್ದು ನಿಜಮಾತೆಯಂ ಬಯ್ದು—

ಹಿಂಭಾಗದಲ್ಲಿರುವ ಏಕಾಂತ ಗೃಹಕ್ಕೆ ಕರೆದುಕೊಂಡು ಹೋಗಿ ಅಲ್ಲಿರುವ ಹೊಳೆಯು ತ್ತಿರುವ ಬಂಗಾರದ ಮಂಚದ ಮೇಲಿರುವ ಮೃದುವಾದ ಹಾಸಿಗೆಯ ಮೇಲೆ ಅವ ನೊಡನೆ ಕುಳಿತುಕೊಂಡು, ಕುಡಿಗೊಳ್ಳುತ್ತಿರುವ ಪ್ರೀತಿಯಿಂದ ಸುರತ ಕ್ರೀಡೆಗೆ ಪ್ರಯತ್ನಿಸುತ್ತಿರಲು ವಿವೇಕ ನಿಧಿಯಾದ ಮಲ್ಹಣನು ಕಂಡು ೩೦. 'ಎಲೈ ಅಬಲೆಯೇ ಈಗ ನಿನಗೆ ಹಣವನ್ನು ಕೊಟ್ಟಿರುವ ರಮಣನು ಮನೆಯಲ್ಲಿ ಇದ್ದಾನೆ. ಆದ್ದರಿಂದ ಅವನನ್ನು ಒಂದು ಕಡೆಗೆ ತಳ್ಳಿ, ನಿನ್ನೊಡನೆ ರತಿಕ್ರೀಡೆಗೆ ಮನಸ್ಸು ಮಾಡುವುದು ಕೂಡದು,' ಎಂದನು ಆಹಾ ! ಆ ಮಲ್ಹಣನು ಏನು ಪರಿಶುದ್ಧನೋ ! ೩೧, ವಿಷ್ಣು, ಇಂದ್ರ, ಚಂದ್ರ, ಬ್ರಹ್ಮರುಗಳನ್ನು ಮರುಳುಗೊಳಿಸಿ, ಅಯೋಗ್ಯವಾದ ರತಿಕ್ರೀಡೆಗೆ ಮೆಯ್ಗೊಡುವಂತೆ ಮಾಡುವ ಅತ್ಯಂತ ಬಾಹುಶಕ್ತಿಯುಳ್ಳ ಮನ್ಮಥನ ಹಸ್ತದಲ್ಲಿರುವ ಬಾಣದ ಹೊಡೆತಕ್ಕೆ ಮಲ್ಹಣನು ಆಗಲೇ ಹೆದರಿದವನಲ್ಲ. ೩೨. ಅತ್ಯಂತ ಶುಭ ಚರಿತ್ರೆಯುಳ್ಳ ಅವನು ತನ್ನ ಪ್ರಾಣವು ವಿರಹಾಗ್ನಿಯಿಂದ ನಿಂತು ಉರಿಯುತ್ತಿರುವ ಸಮಯದಲ್ಲಿಯಾದರೂ, ಆ ಕರುಣೆಯ ಅನುಚಿತವಾದ ರತಿಕೇಳಿಯನ್ನೂ ಆದರಿಸಿ ದವನಲ್ಲ. ವ॥ ಆಗ ಆ ಮಲ್ಹಣೆಯು ತನಗುಂಟಾದ ಕಾಮಾತಿರೇಕವನ್ನು ಆ ಮಲ್ಹಣನ ನೀತಿಯುತವಾದ ಮಾರ್ಗದಲ್ಲಿ ಸೇರಿಸಿ, ವಿಷಾದದಿಂದ ನಿಟ್ಟುಸಿರುಬಿಟ್ಟು ತನ್ನ ತಾಯಿ

ನಳಿನಮರಂದಮಂ ಸವಿವ ತುಂಬಿಗೆ ಸೇವ್ಯಮೆ ಕರ್ದಮಾಂಬು ನಿ
ರ್ಮಳಸುಧೆಗೊಂಬ ಹಂಸೆಗಿನಿದಪ್ಪುದೆಯುಂಬಿಲದಂಬು ಚೂತಸ
ತ್ಫಳಮನೊಜಿಲ್ದು ಪೀರ್ವ ಗಿಳಿಗಿಂಪೆನಿಸಿರ್ಪುದೆಯಿಟ್ಟಿವಣ್ಮಹೋ
ಜ್ವಳ ಗುಣಧಾಮ ನಿನ್ನ ನೆರೆದಳ್ಗೆನಗನ್ಯರತಂ ಮನೋಜ್ಞಮೋ[1] ೩೩

ಮಾತೆಯ ಮಾತಿನ ಮಾಲೆಯ
ಬೂತಾಟದ ಬಲ್ತೊಡಂಕನಳಿದಾಮಿರ್ವ
ರ್ಪ್ರೀತಿ ಮಿಗೆ ಕೂಡಿ ಬಾಳ್ವೊಡ
ಮೇತೆಱದಿಂ ಶಂಭುಕೃಪೆಯೆ ಕಾರಣಮಲ್ತೇ ೩೪

ಇದನಱಿದೀಶ್ವರನಂ ನೀಂ
ಪದಪಿಂ ನುತಿಗೆಯ್ದು ಬೇಗಮರ್ಚಿಪುದೊಲವಿಂ
ಮದನಾರಾತಿ ಮದಿಷ್ಟಮ
ನೊದವಿಸಿ ಮದನಾಸ್ತ್ರಬಾಧೆಯುಂ ಪರಿಹರಿಪಂ ೩೫

ಕನ್ನಡಿಯ ಮೇಲಣುದ್ದಿನ ಕ
ರನ್ನೆಲಕುರುಳ್ವನಿತು ಕಾಲಮಾದೊಡಮೊಲವಿಂ
ಸನ್ನುತ ಸಮಾಧಿವೆತ್ತು ಸ
ಮುನ್ನತಮತಿ ನುತಿಸು ಶಂಕರಂ ನಿನಗೊಲ್ವಂ ೩೬

ಯನ್ನು ಬೈದು ೩೩. 'ಅತ್ಯಂತ ಉಜ್ವಳವಾದ ಸದ್ಗುಣಗಳಿಗೆ ಆಶ್ರಯನಾದ ಮನ್ಮಥನೇ, ಕಮಲದ ಮಕರಂದವನ್ನುಣ್ಣುವ ದುಂಬಿಗೆ ಕೆಸರು ನೀರು ಸೇವಿಸುವುದು ಯೋಗ್ಯವೇ ? ನಿರ್ಮಲವಾದ ಹಾಲನ್ನು ಕುಡಿಯುವ ಹಂಸ ಪಕ್ಷಿಗೆ ಆಕ್ಕಿಯನ್ನು ತೊಳೆದ ನೀರು ರುಚಿಸೀತೆ ? ಒಳ್ಳೆಯ ಮಾವಿನ ಹಣ್ಣಿನ ರಸವನ್ನು ಪ್ರೀತಿಯಿಂದ ಹೀರುವ ಗಿಳಿಗೆ (ಕಹಿಯಾದ) ಇಟ್ಟಿಯ ಹಣ್ಣು ರುಚಿಯಾದೀತೇ ? ನಿನ್ನನ್ನು ನೆರೆದ ನನಗೆ ಇನ್ನೊಬ್ಬನೊಡನೆ ರತಿಕ್ರೀಡೆಯು ಸೊಗಸಾದೀತೇ ?' ೩೪. 'ನಾವೀರ್ವರೂ ನನ್ನ ತಾಯಿಯ ಮಾತುಗಳ ಸಮೂಹದ ಭಂಡತನದ ಬಲವಾದ ಪ್ರತಿಬಂಧಕವನ್ನು ಬದಿಗೊತ್ತಿ ಅತ್ಯಂತ ಪ್ರೀತಿಯಿಂದ ಕೂಡಿ, ಬದುಕಬೇಕಾದರೆ ಯಾವ ರೀತಿಯಿಂದಲಾದರೂ ಶಂಭು ಕೃಪೆಯೇ ಕಾರಣವಲ್ಲವೇ ?' ೩೫. 'ನೀನು ಇದನ್ನು ತಿಳಿದು, ಪ್ರೀತಿಯಿಂದ ಈಶ್ವರನನ್ನು ನೆನೆದು ಆತನನ್ನು ಬೇಗ ಪ್ರೀತಿಯಿಂದ ಮೆಚ್ಚಿಸಬೇಕು. ಮನ್ಮಥ ವೈರಿಯಾದ ಶಿವನು ನನ್ನ ಅಭಿಲಾಷೆಯನ್ನು ನೆರವೇರಿಸಿ, ಮನ್ಮಥನ ಬಾಣದ ಪೀಡೆಯನ್ನು ಪರಿಹರಿಸುವನು.' ೩೬. 'ಅತಿ ಶ್ರೇಷ್ಠಮತಿಯುಳ್ಳವನೇ, ಕನ್ನಡಿಯ ಮೇಲಿನ ಉದ್ದಿನ ಕಾಳು ನೆಲಕ್ಕೆ ಉರುಳಿ ಬೀಳುವಷ್ಟು ಕಾಲವಾದರೂ, ಪ್ರೀತಿಯಿಂದ ಶ್ಲಾಘ್ಯವಾದ ಸಮಾಧಿ ಸ್ಥಿತಿಯನ್ನು ಹೊಂದಿ, ಸ್ತೋತ್ರ ಮಾಡು, ಶಂಕರನು ನಿನಗೆ

[1] ಮೋ(ಮು)

ಅದಱಿಂದೆ ಭುಕ್ತಿ ಮುಕ್ತಿಗ
ಳೊದವುಗುಮೆಮಗೆಂದ ರಮಣಿಯೊರೆಗೇಳ್ದು ಮನಂ
ಮುದವಾಳ್ದಿರೆ ತಾಂ ಮಱುದಿನ
ದುದಯದೊಳವಳೊಡನೆ ಲಿಂಗಗೃಹಕೇಳ್ತಂದಂ ೩೭

ವ॥ ಅಂತೇಳ್ತಂದಾ ಪೊಳಲ ವಿಜಯೇಶ್ವರನೆಂಬ ಲಿಂಗದ ಸಮಕ್ಷದೊಳಾ ಮಲ್ಲಣಂ ನಿಂದು ಮಲ್ಲಣಿಯನಾ ಲಿಂಗದ ಪಿಂಗಡೆ ನಿಲವೇಳ್ವುದುಮಾ ವಿಜಯೇಶ್ವರನ ಪಿಂದೆ ಸೌಂದರ್ಯವತಿ ನಿಂದಿರಲೊಡನಾ ಮನೋರಮೆಯನಮಂದ ರಾಗರಸಭರಿತಕಟಾಕ್ಷದಿ ನವಲೋಕಿಸುತ್ತುಮನಿತಱೊಳಾ ರಮಣಿಯಾಲಿಂಗದ ಮಱೆಯೊಳೊಯ್ಯನೊಯ್ಯನೆ ಮೆಯ್ಗರೆವಾಗಳ್ಪರಿವಿಡಿಯಿನವಳ ಮಂಜುಳಾಕೃತಿಯನನಂತರಂ ಕಚನಿಚಯಮನಲ್ಲಿಂ ಬಳಿಯಿಂ ತುಱುಂಬಿದಲರಪರಿಮಳಕ್ಕೆಳಸಿ ತಿರುಗುವಳಿಯನುಪಲಕ್ಷಿಸಿ ಕಾಂತಾಕಚಪ್ರಚಯ ಪುಷ್ಪಸುಗಂಧಿಗಂಧಲುಬ್ಧ ಭ್ರಮದ್ಭ್ರಮರೋಕ್ತಿಮುಖರಮುಖನಪ್ಪ ನಿತಱೊಳಾಕೆ ಮೆಯ್ಗರೆಯೆ ತತ್ಕಾಂತೆಯೊಳಿಟ್ಟ ಕಟ್ಟಳ್ಕಱಿಂ ಭೋಂಕನಾರಾಧ್ಯತಾನುಸಂಧಾನಂ

ಒಲಿಯುವನು.' ೩೭. 'ಅದರಿಂದ ಭೋಗವೂ, ಮುಕ್ತಿಯೂ ನಮಗೆ ದೊರೆಯುತ್ತವೆ. ಎಂದು ಹೇಳಿದ ಆ ರಮಣಿಯ ಮಲ್ಲಣಿ ಮಾತುಗಳನ್ನು ಕೇಳಿ, ಮನಸ್ಸು ಸಂತೋಷ ಗೊಂಡಿರಲು, ಅವನು ಮರುದಿನವ ಉದಯ ಕಾಲದಲ್ಲಿ ಅವಳೊಡನೆ ಶಿವಾಲಯಕ್ಕೆ ಬಂದು ವ॥ ಈ ರೀತಿ ಆ ಪಟ್ಟಣದಲ್ಲಿರುವ 'ವಿಜಯೇಶ್ವರ' ನೆಂಬ ಹೆಸರಿನ ಶಿವಾ ಲಯಕ್ಕೆ ಬಂದು, ಲಿಂಗದ ಮುಂಭಾಗದಲ್ಲಿ ಮಲ್ಲಣನು ನಿಂತುಕೊಂಡು, ಮಲ್ಲಣಿಯನ್ನು ಲಿಂಗದ ಹಿಂದುಗಡೆಯಲ್ಲಿ ನಿಲ್ಲಲು ತಿಳಿಸಲಾಗಿ, ಆ ಸುಂದರಿಯು ಆ ವಿಜಯೇಶ್ವರ ಲಿಂಗದ ಹಿಂಭಾಗವಲ್ಲಿ ನಿಂತಳು. ಕೂಡಲೇ ಆ ಮನೋರಮೆಯನ್ನು ಅತ್ಯಧಿಕವಾದ ಅನುರಾಗದಿಂದ ತುಂಬಿದ ಕಣ್ಣುಗಳ ಕೊನೆಯಿಂದ ನೋಡತೊಡಗಿದನು, ಅಷ್ಟರಲ್ಲಿ ಆ ರಮಣಿಯು ಲಿಂಗದ ಮರೆಯಲ್ಲಿ ಮೆಲ್ಲ ಮೆಲ್ಲನೆ ಮರೆಗೊಳ್ಳುತ್ತಿರುವ ಕಾಲದಲ್ಲಿ, ಕ್ರಮ ಕ್ರಮವಾಗಿ ಅವಳ ಮನೋಹರಾಕಾರವನ್ನು ಅನಂತರ ತಲೆಗೂದಲು ಸಮೂಹ ವನ್ನು ಅಲ್ಲಿಂದ ಮುಂದೆ ತುಂಬಿಕೊಂಡಿದ್ದ ಹೂಗಳ ಸುಗಂಧಕ್ಕೆ, ಬಯಸಿ ಸುತ್ತುತ್ತಿರುವ ದುಂಬಿಗಳನ್ನೂ, ಗುರಿಮಾಡಿಕೊಂಡು, "ಕಾಂತಾಕಚ ಪ್ರಚಯ ಪುಷ್ಪ ಸುಗಂಧಿಲುಬ್ಧ ಭ್ರಮದ್ಭ್ರಮರೋಕ್ತಿ ಮುಖದ ಮುಖನಪ್ಪ" (ಪ್ರಿಯೆಯೆನಿಸಿದವಳ ಕೇಶ ಸಮೂಹ ದಲ್ಲಿರುವ ಹೂವಿನ ಪರಿಮಳಯುಕ್ತವಾದ ಗಂಧಕ್ಕೆ ಆಸೆಗೊಂಡ ಕಾರಣದಿಂದ ಸುತ್ತುತ್ತಿ ರುವ ಭ್ರಮರಗಳ ಧ್ವನಿಯಿಂದ ಶಬ್ದಾಯ ಮಾನವಾದ ಬಾಯುಳ್ಳವನು) ಎನ್ನುವಷ್ಟ ರಲ್ಲಿ ಅವಳು ಪೂರ್ಣವಾಗಿ ಅಡಗಿಕೊಳ್ಳಲು ಆ ಕಾಂತೆಯಲ್ಲಿಟ್ಟ ಅತ್ಯಂತಾನುರಾಗವನ್ನು ಭೋಂಕನೆ ಪೂಜಾನು ಸಂಧಾನವನ್ನು ಶಿವನಲ್ಲಿ ಮೇಳಗೊಳಿಸಿ, ಚಿತ್ತೈಕಾಗ್ರತೆ ಯಿಂದ ಮೊದಲು ಹೇಳಿದ "ಕಾಂತಾಕಚಪ್ರಚಯ..."ವೆಂಬ ಮಾತಿನ ಅರ್ಥವನ್ನೇ ಅನುಸರಿಸಿ—"ಗಂಧರ್ವ ಯಕ್ಷಸುರಸಿದ್ಧ ಕಿರೀಟ ಕೋಟಿ ಸಂಘಟ್ಟ ಘೃಷ್ಟ ಚರಣಾಯ ನಮಃ ಶಿವಾಯ" (ಗಂಧರ್ವ, ಯಕ್ಷ, ಸುರ, ಸಿದ್ಧ ಇವರುಗಳ ಅನೇಕ ಕಿರೀಟಗಳ

ಏಗೆ ಶಿವನೊಳ್ಮೆಳಿಸಿ ಚಿತ್ತೈಕಾಗ್ರತೆಯಿಂ ಪೂರ್ವೋಕ್ತ ವಾಕ್ಯಾರ್ಥಂಬಿಡಿದು ಗಂಧರ್ವಯಕ್ಷ ಸುರಸಿದ್ಧಕಿರೀಟಕೋಟಿಸಂಘಟ್ಟಘೃಷ್ಟಚರಣಾಯ ನಮಃ ಶಿವಾಯೇತ್ಯಾದಿ ಸರಸತರ ಸದರ್ಥ ಪಟ್‌ತ್ರಿಂಶತ್ಪದ್ಯಂಗಳಿಂ ಕವಿರಾಜಮೌಲಿಮಣಿ ರಾಜಮೌಲಿಮಣಿಯುಂ ಪೊಗಳ್ವಿನಮಲ್ಲಿ—

ಎಳೆವೆಱೆ ದೇವಗಂಗೆ ಮಿಸುಪಗ್ಗದ ಕೆಂಜೆಡೆ ನಾಗಕುಂಡಲಂ
ತೊಳಪ ದಿನೇಶಚಂದ್ರಶಿಖಿನೇತ್ರವಿರಾಜಿತವಕ್ತ್ರಮಂಡಲಂ
ಗಳದ ವಿಷಂ ಗಜಾಜಿನಪಟಂ ಮೃಗಶೂಲವರಾಭಯಂಗಳಂ
ತಳೆದ ಕರಂ ವಿರಾಜಿಸೆ ಶಿವಂ ನಿಜರೂಪನವಂಗೆ ತೋಱಿದಂ ೩೮

ವ|| ಅಂತು ತೋಱಿ ವಿಜಯೇಶ್ವರಂ ನಿಜಪ್ರಸಾದಮಂ ಕರುಣಿಸಿ ಸುರಿವ ಸುರಕುಜ ಸುಮನೋವೃಷ್ಟಿಯೊಳ್ಮೊರೆವ ದಿವ್ಯಾನಕಧ್ವನಿಯೊಳ್ಮಣಿಪುಷ್ಪಕಮಂ ಬರಿಸಿ ಮಲ್ಹಣನಂ ಮಲ್ಹಣಿಯುನಾಕೆಯ ಕೈಗಿಳಿಯುಮನವಳ ಜನನಿಯುಮನದಱೊಳ್ಕುಳ್ಳಿರಿಸಿ ಪಿರಿಯ ಸಂಭ್ರಮದಿಂ ನಿಜಲೋಕಕ್ಕೆ ಕಳುಪಿ ಪರಮ ಸುಖದೊಳಿಸಿರಿದನದು ಕಾರ[1]ಣದಿಂ[1]—

ಸುವಿವೇಕಮಾಳ್ದರಮಣಿಯ
ಸವಿನುಡಿಯಂ ಕೇಳ್ದು ಮಲ್ಹಣಂ ಪಡೆಯನೆ ಪೇ

ಸಮೂಹಗಳಿಂದ ಕೂಡಿ ಪ್ರಕಾಶಮಾನವಾದ ಪಾದಗಳುಳ್ಳ ಶಿವನಿಗೆ ನಮಸ್ಕಾರಗಳು) ಇದೇ ಮೊದಲಾಗುವ ಅತ್ಯಂತ ರಸವಿಶಿಷ್ಟಗಳಾದ ಒಳ್ಳೆಯ ಅರ್ಥವ್ಯಾಪ್ತಿಯುಳ್ಳ ಮೂವತ್ತಾರು ಪದ್ಯಗಳಿಂದ ಕವಿ ಶ್ರೇಷ್ಠರಲ್ಲಿ ಕಿರೀಟ ರತ್ನ ಪ್ರಾಯನಾದ ಮಲ್ಹಣನು ಚಂದ್ರನೇ ತಲೆಯ ರತ್ನವಾಗಿ ಉಳ್ಳ ಪರಮೇಶ್ವರನನ್ನು ಹೊಗಳಿದನು. ಆಗ ಅಲ್ಲಿ ೩೮. ಬಾಲಚಂದ್ರ. ದೇವಾಗಂಗಾನದಿ ಇವುಗಳಿಂದ ಶೋಭಿಸುವ, ಶ್ರೇಷ್ಠವಾದ ಕೆಂಜೆಡೆ, ಸರ್ಪಕುಂಡಲ, ಪ್ರಕಾಶಿಸುವ ಸೂರ್ಯ, ಚಂದ್ರ, ಅಗ್ನಿನೇತ್ರ ಇವುಗಳಿಂದ ಶೋಭಿಸುವ ಮುಖ ಮಂಡಲ, ನೀಲಕಂಠ, ಉಟ್ಟಗಜಚರ್ಮ, ಹಿಡಿದಜಿಂಕೆ, ತ್ರಿಶೂಲ, ಶ್ರೇಷ್ಠ ಅಭಯಹಸ್ತಗಳನ್ನು ಹೊಂದಿದ ಶಿವನು ಅತ್ಯಂತ ವಿರಾಜಮಾನನಾಗಿ ಆ ಮಲ್ಹಣನಿಗೆ ನಿಜರೂಪದೋರಿದನು. ವ|| ಆ ರೀತಿ ನಿಜರೂಪವನ್ನು ತೋರಿಸಿ, ವಿಜಯೇಶ್ವರನು ತನ್ನ ಅನುಗ್ರಹವನ್ನು ಅವನಿಗೆ ಕರುಣಿಸಿ. ಕಲ್ಪವೃಕ್ಷದ ಹೂಮಳೆಯೊಡನೆ, ಶಬ್ದ ಮಾಡುತ್ತಿರುವ ದೇವ ದುಂದುಭಿಯ ಶಬ್ದದೊಡನೆ ರತ್ನ ಖಚಿತವಾದ ಪುಷ್ಪಕ ವಿಮಾನವನ್ನು ಬರಮಾಡಿಕೊಂಡು, ಮಲ್ಹಣ, ಮಲ್ಹಣಿ ಮತ್ತು ಅವಳ ಕೈಯ ಅರಗಿಳಿಯನ್ನು ಅವಳ ತಾಯಿಯನ್ನು ಅದರಲ್ಲಿ ಕುಳ್ಳಿರಿಸಿಕೊಂಡು, ಅತೀವ ಸಂಭ್ರಮದಿಂದ ಕೈಲಾಸಕ್ಕೆ ಕಳುಹಿಸಿ, ಪರಮಸುಖದಲ್ಲಿ ಇರಿಸಿದನು. ಆದ ಕಾರಣದಿಂದ— ೩೯. ಸುವಿವೇಕದಿಂದ ಕೂಡಿದ ಸುಂದರಿಯರ ಸವಿನುಡಿಯನ್ನು ಕೇಳಿ, ಮಲ್ಹಣನು

[1] ಣಂ(ಅ)

ಳ್ಯವಪದಮನಾಪ್ತರಮಣೀ
ನಿವಹದ ನುಡಿಗೇಳ್ದವರ್ಗೆ ಕೊಱತೆಗಳೊಳವೇ ೩೯

ವ॥ ಅದಲ್ಲದೆಯುಮಿನ್ನು ನಿಜಸತಿಯ ಕಟಕಿವಾತಂ ಹಿತೋಕ್ತಿಗೆತ್ತು ನೆಗಳ್ದ ಶರಣನ ಚರಿತ್ರಮಂ ಕೇಳ್ವುದೆಂತೆನೆ—

ಉರಗೇಂದ್ರಪ್ರಮದಾವಿಹಾರಸರಮೆಂಬಂತಿರ್ದಗಾಧಾಂಬು ಸ
ತ್ಪರಿಖಾಚಕ್ರದಿನಭ್ರಚುಂಬಿ ಕನಕಪ್ರಾಕಾರದಿಂ ರತ್ನಗೋ
ಪುರಲಿಂಗಾಲಯಹರ್ಮ್ಯಚಾರುತರಕೇಳೀಗೇಹಸಂದೋಹದಿಂ
ಕರಮೊಪ್ಪಿರ್ದುದು ಪಾಲಗೂರ್ಜರಪುರಂ ಭೂಲೋಕ ಶೋಭಾಕರಂ ೪೦

ಕವಿಗಳ ಕಾವ್ಯಶಿಕ್ಷಕರ ವೀರರ ಧೀರರ ಸತ್ಪುರಾಣಸು
ಶ್ರವಣಧುರೀಣರಾಗಮವಿದರ್ಕಳ ಶಂಭುಪದಾಂಬುಜಾರ್ಚನೋ
ತ್ಸವರ ಕಳಾವಿಚಕ್ಷಣರ ಮಂತ್ರಿಗಳಾಪ್ತರ ರಾಜಪುತ್ರರೊ
ಪ್ಪುವ ಗಜವಾಜಿವಾಹಕರ ಮಂತಣಮೊಪ್ಪುಗುಮಲ್ಲಿ ಸಂತತಂ ೪೧

ಘುಸೃಣಂ ಕತ್ತುರಿ ಕರ್ಪೂರಂ ಮಲಯಜಂ ಪೂಮಾಲೆ ತಾಂಬೂಲಿಕಾ
ವಿಸರಂ ರತ್ನಚಯಂ ನವೀನಮೃದುವಾಸಶ್ರೇಣಿ ದಿವ್ಯೌಷಧಿ

ಶಿವಪರವನ್ನು ಪಡೆಯಲ್ಲಿಲ್ಲವೇ ? ಹೇಳು, ಹಿತರಾದ ಸ್ತ್ರೀಯರ ಗುಂಪಿನ ನುಡಿಯನ್ನು ಕೇಳಿದವರಿಗೆ ಕೊರತೆಯಾಗುವುದುಂಟೆ ? **ಪಾಲ ಗುರ್ಜರನ ಕಥೆ** ವ॥ ಇದಲ್ಲದೆ ಇನ್ನು ತನ್ನ ಸತಿಯ ಮೂದಲಿಕೆಯ ಮಾತುಗಳನ್ನೇ ಹಿತೋಕ್ತಿಗಳೆಂದು ಭಾವಿಸಿದ ಪ್ರಸಿದ್ಧನಾದ ಶರಣನ ಚರಿತ್ರೆಯನ್ನು ಕೇಳು ; ಎಂತೆಂದರೆ :— ೪೦. ನಾಗಕನ್ನಿಕೆಯರು ಕ್ರೀಡಿಸುವ ಸರೋವರವೋ ಎಂಬಂತಿರುವ ಆಳವಾದ ನೀರಿನಿಂದ ತುಂಬಿದ ಅಗಳುಳ್ಳದ್ದೂ, ಆಕಾಶವನ್ನು ಸೋಂಕುತ್ತಿರುವ ಚಿನ್ನದ ಕೋಟೆಯ ಗೋಡೆಗಳುಳ್ಳದ್ದೂ, ರತ್ನಖಚಿತವಾದ ಗೋಪುರಗಳುಳ್ಳ ಶಿವಾಲಯ ಮತ್ತು ಉಪ್ಪರಿಗೆಗಳುಳ್ಳ ಮನೋಹರವಾದ ಕ್ರೀಡಾಗೃಹಗಳ ಸಮೂಹಗಳುಳ್ಳ, ಭೂಲೋಕದಲ್ಲಿ ಶೋಭಾವಹವಾದ 'ಪಾಲಗುರ್ಜರಪುರ' ಎಂಬುದು ವಿಶೇಷವಾಗಿ ಪ್ರಕಾಶಿಸುತ್ತಿತ್ತು. ೪೧. ಅದು ಕವಿಗಳಿಂದಲೂ, ಕಾವ್ಯಪಾಠವನ್ನು ಹೇಳುವವರಿಂದಲೂ, ವೀರಧೀರರಿಂದಲೂ, ಪುರಾಣಶ್ರವಣಮಾಡುವುದರಲ್ಲಿ ಸಮರ್ಥರಾದವರಿಂದಲೂ, ಆಗಮಜ್ಞಾನವನ್ನು ಬಲ್ಲವರಿಂದಲೂ, ಶಿವನ ಪಾದಕಮಲವನ್ನು ಪೂಜೆಮಾಡುವುದರಲ್ಲಿ ಆಸಕ್ತರಾದವರಿಂದಲೂ, ಸಕಲವಿದ್ಯೆಗಳಲ್ಲಿ ಪ್ರೌಢರಾದ ಮಂತ್ರಿ, ಆಪ್ತರು, ರಾಜಪುತ್ರರುಗಳಿಂದಲೂ, ಆನೆ ಕುದರೆಗಳನ್ನೇರುವವರ ಸಮೂಹದಿಂದಲೂ ಸದಾ ಒಪ್ಪಿತ್ತು. ೪೨. ಪೂರ್ವಪಶ್ಚಿಮ, ದಕ್ಷಿಣೋತ್ತರ ಬೀದಿಗಳಿಂದ ಪ್ರಕಾಶಿಸುವ, ಶುಭಕರವಾದ ಧ್ವನಿಯಿಂದ ಮನೋಹರವಾದ ಆ ಪಟ್ಟಣವು–ಕುಂಕುಮಕೇಸರಿ, ಕಸ್ತೂರಿ, ಕರ್ಪೂರ, ಶ್ರೀಗಂಧ, ಪೂಮಾಲೆ, ತಾಂಬೂಲಿಕಾ ಸಮೂಹ, ರತ್ನಸಮೂಹ, ನೂತನ ವಸ್ತ್ರಗಳ

ಪ್ರಸರಂ ತಳ್ತಿಡಿದಿರ್ಪ ಸದ್ವಿಪಣಿಯಿಂ ಸೂರ್ಯೇಂದು ವೀಥೀಸಮು
ಲ್ಲಸಿತಂ ಮಂಗಳತೂರ್ಯರಾಗರುಚಿರಂ ಕಣ್ಗೊಪ್ಪುಗುಂ ತತ್ಪುರಂ ೪೨

ಆ ಪುರದಧಿಪತಿ ವಿಪುಳಧ
ರಾಪತಿಮಣಿಮೌಲಿಕಿರಣಪರಿವೃತಚರಣಂ
ಗೋಪಧ್ವಜಪದಭಜಕನಿ
ಳಾಪಾಲಂ ಪಾಲಗೂರ್ಜರ ಕ್ಷಿತಿನಾಥಂ ೪೩

ಅಗಣಿತ ಜಂಗಮ ಪ್ರಕರಪಾವನಪಾದಸರೋಜಷಟ್ಪದಂ
ಸುಗುಣಕಲಾಪನಾತ್ಮಸಕಳೇಷ್ಟಸುಖಾರ್ಪಣತೋಷಿತೇಶ್ವರಂ
ಜಗದಧಿರಕ್ಷಣಪ್ರಥಿತನಂಚಿತವೃತ್ತನರಾತಿದರ್ಪಪ
ನ್ನಗಖಗರಾಜನಾಜಿವಿಜಯಂ ಶಿವತತ್ವಕಳಾವಿಚಕ್ಷಣಂ ೪೪

ಆ ನೃಪನ ಸುಪ್ರತಾಪನ
ವೀನಾರ್ಕಪ್ರಭೆಯ ಮುಂದೆ ಮಿಂಬುಳುವಿನವೋ
ಲ್ಭಾನುವೆಸೆದಿರ್ಕುಮಲ್ಲದೊ
ಡೇನದು ಖದ್ಯೋತಮೆಂಬ ಪೆಸರಾಂತಪುದೇ ೪೫

ಘನಶೃಂಗಾರವಿಳಾಸಧಾರಿಣೀ ಕಳಾಕಲ್ಲೋಲಮಾಲಾತರಂ
ಗಿಣಿ ಸಾಹಿತ್ಯರಸಪ್ರಕಾಶಿನಿ ಲಸತ್ತಾರುಣ್ಯಸೌಭಾಗ್ಯವಾ

ಶ್ರೇಣಿ, ಶ್ರೇಷ್ಠವಾದ ಔಷಧಿಗಳ ಸಮೂಹ–ಇವೆಲ್ಲವುಗಳಿಂದ ಸೇರಿಸುವ ಶ್ರೇಷ್ಠ ಅಂಗಡಿಗಳ ಬೀದಿಯಿಂದ ಕಣ್ಣಿಗೆ ಒಪ್ಪುವಂತಿತ್ತು. ೪೩–೪೪. ಅನೇಕ ರಾಜರ ರತ್ನಖಚಿತವಾದ ಕಿರೀಟಗಳ ಕಾಂತಿಯಿಂದ ಪ್ರಕಾಶಿಸುವ ಚರಣವುಳ್ಳವನೂ, ವೃಷಭಧ್ವಜನಾದ ಶಿವನ ಪಾದಪೂಜಾಸಕ್ತನಾದ ಆ ಭೂಮಿಯನ್ನು ಸಂರಕ್ಷಿಸುತ್ತ 'ಪಾಲಗುರ್ಜರ'ನೆಂಬ ಹೆಸರಿನ ದೊರೆಯು, ಅಸಂಖ್ಯಾತ ಜಂಗಮಮೂರ್ತಿಗಳ ಸಮೂಹದ ಪರಿಶುದ್ಧವಾದ ಚರಣಕಮಲಗಳಲ್ಲಿ ಭೃಂಗ ಸ್ವರೂಪನಾಗಿ ಶೋಭಿಸುವವನು ; ಸದ್ಗುಣ ಸಮೂಹ ವಿಶಿಷ್ಟನು ; ತನಗೆ ಇಷ್ಟವಾದ ಸಕಲ ಸೌಭಾಗ್ಯವನ್ನು ಈಶ್ವರನಿಗರ್ಪಿಸಿ ಅವನನ್ನು ಸಂತೋಷಗೊಳಿಸಿದ್ದನು. ಜಗತ್ತನ್ನು (ರಾಜ್ಯವನ್ನು) ಸಂರಕ್ಷಿಸುವುದರಲ್ಲಿ ಪ್ರಸಿದ್ಧನು; ಪೂಜ್ಯವಾದ ಚರಿತ್ರೆಯುಳ್ಳವನು ; ಶತ್ರುಗಳ ಅಹಂಕಾರವೆಂಬ ಸರ್ಪಕ್ಕೆ ಗರುಡನು ; ಯುದ್ಧದಲ್ಲಿ ಜಯಶೀಲನು ; ಪರತತ್ತ್ವವಿಚಾರ ವಿದ್ಯೆಯಲ್ಲಿ ಕುಶಲನು–ಎನಿಸಿದ್ದನು. ೪೫. ಆ ಮಹಾರಾಜನ ಶ್ರೇಷ್ಠ ಪರಾಕ್ರಮವೆಂಬ ನೂತನ ಸೂರ್ಯಕಾಂತಿಯ ಮುಂದೆ ಸೂರ್ಯನು ಮಿಂಚುಹುಳುವಿದ್ದಹಾಗೆ ಶೋಭಿಸುತ್ತಿತ್ತು ; ಹಾಗಲ್ಲದಿದ್ದರೆ, ಆ ಸೂರ್ಯಮಂಡಲವು 'ಖದ್ಯೋತ' ಎಂದರೆ ಮಿಂಚಿನಹುಳು ಎಂಬ ಹೆಸರನ್ನು ಹೊಂದುತ್ತಿತ್ತೇ ? (ಖದ್ಯೋತ–ಮಿಂಚುಹುಳು ; ಅಂತರಿಕ್ಷದ ಪ್ರಕಾಶ ; ಸೂರ್ಯ) ೪೬. ಶ್ರೇಷ್ಠವಾದ ಶೃಂಗಾರ ವಿಲಾಸವನ್ನು ಧರಿಸಿದವಳೂ, ವಿದ್ಯೆಯೆಂಬ ತೆರೆಗಳ ಮಾಲೆಯಿಂದ ಕೂಡಿದ ನದಿಯಾದವಳೂ, ಸಾಹಿತ್ಯರಸಗಳನ್ನು ಪ್ರಕಾಶಪಡಿಸುವವಳೂ (ಕಾವ್ಯರಸಾಸ್ವಾದನ

ಹಿನಿ ಸೌಶೀಲ್ಯಪಥಪ್ರಚಾರಿಣಿ ಮಹಾಸೌಂದರ್ಯಮಾಧುರ್ಯಮೋ
ಹಿನಿ ತದ್ಭೂಭುಜಧರ್ಮಗೇಹಿನಿ ಸದಾಕಲ್ಯಾಣಿ ಕಣ್ಗೊಪ್ಪಿದಳ್ ೪೬

ಆ ಕಾಂತೆಯೊಡನೆ ಕಂತುಕ
ಳಾಕೌಶಲಸುಖಮನೊಂದುತಂ ಮೆಱೆದಿರ್ದಂ
ಭೂಕಾಂತಂ ತನಗೊದವಿದ
ನೇಕ ಸುಖಾನೀಕಮಂ ಶಿವಂಗರ್ಪಿಸುತಂ ೪೭

ಆವಾವ ಕೇಳಿಯೊಳೆ ನಿಜ
ಭಾವಂ ಭವಹರನನಪ್ಪಿ ಬಿಡದಿರ್ಪುದಱಿಂ
ಭೂವರನ ಬಿನದಮೆಲ್ಲಮು
ಮಾವರನಡಿದಳಿರ ಪೂಜೆಯೆನೆ ಸಂದಿರ್ಕುಂ ೪೮

ಎರವಿಲ್ಲದ ಪೊರೆಯಿಲ್ಲದ
ನಿರುಪಮ ನಿಜಭಕ್ತಿಯೊಲವನೀಕ್ಷಿಸುತಭವಂ
ನರನಾಥನ ತನುಜೀವನ
ಕರಣಂಗಳೊಳೊಲ್ದು ಬೆರಸಿ ಬೆಚ್ಚಂತಿರ್ಪಂ ೪೯

ವ॥ ಆ ರಾಜೇಂದ್ರನೊರ್ಮೆ ನಿಜಮನೋರಮೆಯೊಡನೆ ಮಣಿಮಯ ಪ್ರಾಸಾದದ ಮೇಲ್ನೆಲೆಯ ಕನಕಪರ್ಯಂಕ ಕಮಳಧವಳಶಯ್ಯಾತಳದೊಳ್ಗಾಡಿಯಿಂ ಕುಳ್ಳಿರ್ದು ಬಿತ್ತರಂ ಮಿಗೆ ನೆತ್ತಮನಾಡುತ್ತುಮಿರ್ದು—

ಪರಿಣತಮತಿಯಾಗಿಯೂ), ಶೋಭಿಸುವ ಕಾರುಣ್ಯವೆಂಬ ಸೌಭಾಗ್ಯದ ಪ್ರವಾಹ ರೂಪಳೂ, ಸುಶೀಲದ ಮಾರ್ಗದಲ್ಲಿ ನಡೆಯುವವಳೂ, ವಿಶೇಷ ಸೌಂದರ್ಯ ಮನೋಹರತೆಗಳಿಂದ ಪ್ರೀತಿಯನ್ನುಂಟುಮಾಡುವವಳೂ. ಸದಾ ಕಲ್ಯಾಣ ಸ್ವರೂಪಿಣಿಯೂ ಆದ ಆ ರಾಜನ ಧರ್ಮಪತ್ನಿಯು ಕಂಗೊಳಿಸುತ್ತಿದ್ದಳು. ೪೭. ಇಂಥ ಹೆಂಡತಿಯೊಡನೆ ರಾಜನು ಮದನವಿದ್ಯಾ ಪ್ರೌಢಿಮೆಯಿಂದುಂಟಾದ ಸೌಖ್ಯವನ್ನು ಪಡೆಯುತ್ತ, ತನಗೊದಗಿದ ಸಕಲಸೌಖ್ಯ ಸಮೂಹವನ್ನು ಶಿವನಿಗೆ ಅರ್ಪಿಸುತ್ತ ಮೆರೆಯುತ್ತಿದ್ದನು. ೪೮. ಯಾವು ಯಾವುದು ಅವನ ಕೇಳಿಯೋ ಅದರಲ್ಲಿ ಅವನ ಮನಸ್ಸು ತಪ್ಪದೆ ಶಿವನನ್ನು ಆಶ್ರಯಿಸಿ ಇದ್ದುದರಿಂದ ಆ ರಾಜನ ಸಮಸ್ತ ವಿನೋದವೂ, ಪಾರ್ವತೀ ಪತಿಯ ಚಿಗುರಿನಂತಿರುವ ಪಾದಪೂಜೆಯೆನ್ನುವಂತೆ ಸಂದಾಯವಾಗುತ್ತಿತ್ತು. ೪೯. ಶಿವನು ಭೇದವಿಲ್ಲದ, ನಿರಾಧಾರವಾದ, ಉಪಮಾತೀತವಾದ, ತನ್ನ ವಿಷಯಕವಾದ ಈ ಪಾಲಗುರ್ಜರ ರಾಜನ ಭಕ್ತಿಯನ್ನು ನೋಡಿ, ಅವನ ದೇಹ, ಜೀವ, ಇಂದ್ರಿಯಗಳಲ್ಲೆಲ್ಲ ಬೆರಸಿ ಬೆಸುಗೆಗೊಂಡಂತೆ ಇದ್ದನು. ವ॥ (ಇಂತಿರುವ) ಆ ರಾಜಶ್ರೇಷ್ಠನು ಒಮ್ಮೆ ತನ್ನ ಹೆಂಡತಿಯೊಡನೆ, ತಮ್ಮ ರತ್ನಖಚಿತವಾದ ಮೇಲುಪ್ಪರಿಗೆ ಮನೆಯ ಮಹಡಿಮೇಲಿರುವ ಸುವರ್ಣನಿರ್ಮಿತ ಮಂಚದ ತಾವರೆಯಂತೆ ಶುಭ್ರವಾದ ಹಾಸಿಗೆಯ ಮೇಲೆ ವಿಲಾಸದಿಂದ ಕುಳಿತುಕೊಂಡು ಲಿಲಾಜಾಲವಾಗಿ ಪಗಡೆಯಾಟವನ್ನು ಆಡು

ಹೃದಯಸರೋಜದೊಳೊಪ್ಪುವ
ಮದನಾರಿಯ ಮಕುಟದಗ್ರದೆಳೆವೆಱೆಗದಿರು
ಣ್ಮೆದುದೆಂಬ ಬಗೆಯನೊದವಿಸೆ
ರದನದ್ಯುತಿ ಪಾಲಗೂರ್ಜರಂ ನಸುನಕ್ಕಂ ೫೦

ಅರಸನ ದರಹಸನಾನನ
ಸರಸಿಜಮಂ ಕಂಡು ನಾಲ್ಕು ದೆಸೆಯುಂ ನೋಡು
ತ್ತರಸಿ ಪರರಾರುಮಿಲ್ಲಿ
ರ್ವರೆಯಾವಿರ್ದಲ್ಲಿ ನಗೆಗೆ ಕಾರಣಮೇನೋ ೫೧

ಇದಕೆ ನೆವಮೊಂದುಮಿಲ್ಲೀ
ಪದದೊಳಿವಂಗೇಕೆ ಬಂದುದೀ ನಗೆಯೆನುತುಂ
ಸುದತಿ ನಸುಲಜ್ಜೆ ಮನದೊಳ
ಗೊದವಿರೆ ಸಂಶಯರಸಕ್ಕೆ ಭಾಜನಮಾದಳ್ ೫೨

ವ॥ ಅಂತು ಲಜ್ಜಾನತಾನನೆ ನೆತ್ತದಾಟಮನುಳಿದು ನೆತ್ತವಲಗೆಯ ಮೇಲೆ ಪಾಸಂಗಿಗಳನೊಯ್ಯನಿರಿಸಿ—

ನೆತ್ತದಾಟಮನಾಡುತಿರ್ದನಿಮಿತ್ತ ಹಾಸ್ಯಮಿದೇಕೆ ಮ
ಚ್ಚಿತ್ತವಲ್ಲಭ ನಿನ್ನ ವಕ್ತ್ರದೊಳುಣ್ಮಿದತ್ತಿದಱಿಂದಮಂ
ಬಿತ್ತರಂ ಮಿಗೆ ಪೇಳ್ದು ಮನ್ಮನಕಾದ ಸಂದೆಗಮಂ ಮಹೀ
ಮತ್ತಕಾಶಿನಿಯಾಣ್ಮ ನೀಂ ಪಱಿದಿಕ್ಕವೇಳ್ಪುದು ಚೆಚ್ಚರಂ ೫೩

ತ್ತಿದ್ದನು. ೫೦. ಆಗ (ತನ್ನ) ಹಲ್ಲಿನ ಕಾಂತಿಯು ತನ್ನ ಹೃದಯವೆಂಬ ಸರೋವರದಲ್ಲಿ ಒಪ್ಪುವ ಪರಮೇಶ್ವರನ ಮಕುಟದ ತುದಿಯಲ್ಲಿರುವ ಬಾಲಚಂದ್ರನ ಕಾಂತಿಯು ಹೊರಹೊಮ್ಮಿತೋ ಎಂಬ ರೀತಿಯನ್ನುಂಟುಮಾಡುತ್ತ ಆ ಪಾಲಗುರ್ಜರ ರಾಜನು ನಕ್ಕನು. ೫೧. ಆಗ ರಾಣಿಯು ಮಹಾರಾಜನ ಮುಗುಳು ನಗೆಯಿಂದ ಕೂಡಿದ ಮುಖಕಮಲವನ್ನು ಕಂಡು, ನಾಲ್ಕು ದಿಕ್ಕುಗಳನ್ನೂ ನೋಡುತ್ತ, 'ಮತ್ತಾರೂ ಇಲ್ಲದೆ ನಾವಿಬ್ಬರೇ ಇರುವ ಸ್ಥಳದಲ್ಲಿ ನಗೆಗೆ ಕಾರಣವೇನು ?' ೫೨. ಯಾವ ಒಂದು ನೆಪವೂ ಇಲ್ಲದೆ ಇರುವ ಈ ಸ್ಥಳದಲ್ಲಿ ಇವನಿಗೆ ನಗೆ ಏಕೆ ಬಂತು ? ಎನ್ನುತ್ತ ಆ ಸುಂದರಿಯು ಮನಸ್ಸಿನಲ್ಲಿ ಸ್ವಲ್ಪ ನಾಚಿದವಳಾಗಿ, ಸಂದೇಹವೆಂಬ ನೀರಿಗೆ ಆಶ್ರಯವಾದ ಪಾತ್ರೆಯಂತಾದಳು. ವ॥ ಹಾಗೆ ಲಜ್ಜೆಯಿಂದ ಬಾಗಿದ ತಲೆಯುಳ್ಳವಳಾಗಿ, ಪಗಡೆಯಾಟವನ್ನು ಬಿಟ್ಟು ಪಗಡೆಯಾಡುವ ಹಲಗೆಯ ಮೇಲೆ ಹಾಸಿನ ಚೀಲಗಳನ್ನು ನಿಧಾನವಾಗಿ ಇಟ್ಟು—೫೩. 'ಭೂಕಾಂತೆಯ ಪತಿಯಾದ ನನ್ನ ಮನೋವಲ್ಲಭನೇ, ಪಗಡೆಯಾಟವನ್ನು ಆಡುವ ನಿನ್ನ ಮುಖದಲ್ಲಿ ನಿಮಿತ್ತವಿಲ್ಲದೆ ನಗೆಯೇಕೆ ಉಂಟಾಯಿತು ? ಇದರ ಕಾರಣವನ್ನು ತಿಳಿಸಿ ನನ್ನ ಮನಸ್ಸಿನಲ್ಲುಂಟಾದ ಸಂಶಯವನ್ನು ಶೀಘ್ರವಾಗಿ ಪರಿಹಾರ

ಅಣುಮಾತ್ರಂ ಬಹಿರಂತರರ್ಪಣವಿಧಾನಂ ಜಾಱಿತೆಂದೆಂಬ ಬಿ
ನ್ನಣದಿಂದಾದುದೊ ನೆತ್ತದಾಟಮಿದಯುಕ್ತಂ ಶಂಭುಭಕ್ತರ್ಗೆ ಲ
ಕ್ಷಣಮಲ್ತೆಂಬುದಱಿಂದೆ ಪೊಣ್ಮಿದುದೊ ಮೇಣೆನ್ನೊಳ್ಸಮಂತರ್ಗನೋ
ರಣದಿಂ ಕಂಡದಱಿಂದೆ ಸಂಜನಿಸಿತೋ ಹಾಸ್ಯಂ ತ್ವದೀಯಾಸ್ಯದೊಳ್ ೫೪

ಮೊಲೆಗಳ ಮೇಲುದೋಸರಿಸಿತೆಂಬುದಱಿಂದೊಗೆದತ್ತೊ ಸಾರ ಮಂ
ಜುಲಸರಸೋಕ್ತಿಯೊಂದಿನಿತಂ ತಪ್ಪಿದೊಡುದ್ಭವಿಸಿತ್ತೊ ಸಾರಿಯುಂ
ನಲಿದಿಡುವಂದು ಪಲ್ಲಟಿಸೆ ಪುಟ್ಟಿದುದೋ ಪೊಸಗೆಲ್ಲಮಾಂಪೆನೀ
ಲಲನೆಯೊಳೆಂಬ ಸಂಭ್ರಮದಿನುಣ್ಮಿದುದೋ ನಗೆ ನಿನ್ನ ವಕ್ತ್ರದೊಳ್ ೫೫

ಒಂದುಂಪಲಗೆಯನಾದೊಡ
ಮಿಂದೀ ವಧು ಗೆಲ್ದುದಿಲ್ಲಮೆಂಬುದಱಿಂದೇ
ಳ್ತಂದುದೊ ರಾತ್ರಿರತಿಯೊಳಾ
ನೆಂದುದು ನೆನಪಾಗೆ ನಿನಗೆ ನಗೆಯೊದವಿದುದೋ ೫೬

ಸ್ಮರಮೋಹಮಿಂಗಳೊಗೆದೊಂ
ದಿರೆ ದರಹಾಸಂ ಪೊದಳ್ದುದೋ ಮಱೆಬೇಡೋ
ಸರಿಸದೆ ಪೇಳೆನ್ನೊಳ್ಳೃ
ದ್ವರ ನಿನಗೆನ್ನಾಣೆ ನಿಜಮನೆನೆ ಕೇಳ್ದರಸಂ ೫೭

ಗೊಳಿಸು.' ೫೪. 'ನಿನ್ನ ಮುಖದಲ್ಲುಂಟಾದ ನಗುವು ಬಾಹ್ಯಾಭ್ಯಂತರದ ಪೂಜಾ ರೀತಿಯು ಸ್ವಲ್ಪ ತಪ್ಪಿತೆಂಬ ಬಿನ್ನಾಣದಿಂದ ಆಯಿತೋ ? ಅಥವಾ ಈ ನೆತ್ತ ದಾಟವು ಶಿವಭಕ್ತರಾದವರಿಗೆ ಸಲ್ಲದ ಲಕ್ಷಣವೆಂಬ ಕಾರಣದಿಂದ ಉಂಟಾಯಿತೋ ? ನನ್ನಲ್ಲಿ ಏನಾದರೂ ಎಗ್ಗತನವನ್ನು ಕಂಡ ಕಾರಣದಿಂದ ಉಂಟಾಯಿತೋ ?' ೫೫. '(ಹೇಕಾಂತನೇ), ನಿನ್ನ ಮುಖದಲ್ಲಿ ನಗೆಯು–(ನನ್ನ) ಮೊಲೆಗಳ ಮೇಲಿನ ಸೆರಗು ಜಾರಿದ ಕಾರಣದಿಂದ ಉಂಟಾಯಿತೋ ? ಸಾರತರ ಮನೋಹರ ಮಾತುಗಳಲ್ಲಿ ಸ್ವಲ್ಪ ತಪ್ಪಾದ ಕಾರಣದಿಂದ ಉದ್ಭವಿಸಿತೋ ? ಸಾರಿಯಮೇಲೆ ಪಗಡೆಯ ಕಾಯನ್ನು ನಲಿದು ಇಡುವಾಗ ಸ್ವಲ್ಪ ಪಲ್ಲಟಗೊಂಡ ಕಾರಣದಿಂದ ಉತ್ಪನ್ನವಾಯಿತೋ ? ಈ ಲಲನೆಯೊಡನೆ ಹೊಸದಾದ ಗೆಲುವನ್ನು ಹೊಂದುತ್ತೇನೆಂಬ ಸಂಭ್ರಮದಿಂದ ಉಂಟಾಯಿತೋ ?' ೫೬. 'ಈ ದಿನದ (ಪಗಡೆಯಾಟದಲ್ಲಿ) ಈ ಸ್ತ್ರೀಯು ಒಂದು ಹಲಗೆಯನ್ನಾದರೂ ಗೆಲ್ಲಲಿಲ್ಲವೆಂಬುದರಿಂದ ಹುಟ್ಟಿತೋ ? ನಿನ್ನೆ ರಾತ್ರಿಯು ಸುರತ ಸಮಯದಲ್ಲಿ ನಾನಾಡಿದ ಮಾತನ್ನು ನೆನಸಿಕೊಂಡ ಕಾರಣದಿಂದ ನಿನಗೆ ನಗೆಯೇನಾದರೂ ಬಂದಿತೋ ?' ೫೭. 'ಈಗ ಮನ್ಮಥನಿಂದುಂಟಾದ ಅನುರಾಗವನ್ನೇನಾದರೂ ಹೊಂದಿಸಲು ಮಂದಹಾಸವು ಹೊರಹೊಮ್ಮಿತೋ ? ವಂಚಿಸಬೇಡ ; ಸಂಕೋಚ ವಿಲ್ಲದೆ–ನನ್ನ ಶ್ರೇಷ್ಠ ಪತಿಯೇ, ನನ್ನಲ್ಲಿ ನಿಜವನ್ನು ಹೇಳು ; ನಿನಗೆ ನನ್ನ ಆಣೆ'

ಮುಗುಳೆ ನಸುನಗುತೆ ಕೇಳೆಲೆ
ಮೃಗನೇತ್ರೆಯೆನುತ್ತೆ ನೆತ್ತದಾಟಮನುಳಿದಾ
ನಗೆ ನೆಗಳ್ದ ಕಾರಣಮನಾ
ಜಗತೀಪತಿಯೊಲ್ದು ಪೇಳಲುದ್ಯತನಾದಂ ೫೮

ವ॥ ಅಂತು ಪೇಳಲುಪಕ್ರಮಿಸಿ—

ಭಾಮಿನಿ ಕೇಳ್ಸೌರಾಷ್ಟ್ರದ
ಸೋಮೇಶನ ಭಕ್ತನಿರ್ಪನೋಹಿಲನವನು
ದ್ದಾಮಚರಿತ್ರಮನೊರೆವೊಡೆ
ಕಾಮಾಂತಕನಾದೊಡಂ ಪೆಱಂ ನೆಱೆದಪನೇ ೫೯

ಹರನ ನಿರೂಪದಿನಿಳೆಗವ
ತರಿಸಿದ ಮಹಿಮಾಂಕನಮಳಗುಣಮಣಿಭರಣಂ
ಕರುಣಾನಿಧಿ ಸೌರಾಷ್ಟ್ರದ
ಪುರಪತಿಯಂ ಸೋಮನಾಥನಂ ಕಂಡನವಂ ೬೦

ತೊರೆದಾನಂದಾಶ್ರುಜಲಂ
ಸುರಿವುತ್ತಿರೆ ನಿಮಿರೆ ಗದ್ಗದಂ ಪುಳಕಮುದು
ಬ್ಬರಿಸೆ ತನು ಬೆಮರೆ ಸಾತ್ವಿಕ
ವರಭಕ್ತಿಯೊಳೀಶನಡಿಯನವನರ್ಚಿಸಿದಂ ೬೧

ಎನ್ನಲು ಅರಸನು ಕೇಳಿ—೫೮. ಆ ರಾಜನು ಪ್ರೀತಿಯಿಂದ ಪುನಃ ನಸುನಗುತ್ತ 'ಎಲೈ ಮೃಗನೇತ್ರೆಯೇ ಕೇಳು' : ಎನ್ನುತ್ತ ಪಗಡೆಯಾಟವನ್ನು ಬಿಟ್ಟು ತನಗೆ ನಗೆಯುಂಟಾದ ಕಾರಣವನ್ನು ಹೇಳಲುದ್ಯುಕ್ತನಾದನು. ವ॥ ಆ ರೀತಿ ಹೇಳಲು ಪ್ರಾರಂಭಿಸಿ— **ಓಹಿಲಯ್ಯನ ಕಥೆ** ೫೯. 'ಸುಂದರೀ, ಕೇಳು. ಸೌರಾಷ್ಟ್ರದೇಶದಲ್ಲಿ ಸೋಮೇಶ್ವರನ ಭಕ್ತನಾದ ಓಹಿಲಯ್ಯನೆಂಬಾತನಿದ್ದಾನೆ. ಅವನ ಉದ್ದಾಮವಾದ ಚರಿತ್ರೆಯನ್ನು ಹೇಳುವುದಕ್ಕೆ ಶಿವನಾದರೂ ಕೂಡ ಇನ್ನೊಬ್ಬನು ಹೇಳಲು ಸಮರ್ಥನಾದಾನೇ ? ೬೦–೬೧. ಪರಮೇಶ್ವರನ ಅಪ್ಪಣೆಯಿಂದ ಭೂಮಿಯಲ್ಲಿ ಅವತಾರ ಮಾಡಿದ, ಆ ಮಹಿಮೆಯೇ ಗುರುತಾಗಿ ಉಳ್ಳವನೂ, ಶ್ರೇಷ್ಠವಾದ ಗುಣಗಳೆಂಬ ರತ್ನಗಳ ಆಭರಣವುಳ್ಳವನೂ, ಕರುಣ ನಿಧಿಯೂ ಆದ ಅವನು ಆ ಸೌರಾಷ್ಟ್ರ ಪುರಾಧಿಪತಿಯಾದ ಸೋಮನಾಥನನ್ನು ಕಂಡು, ಆನಂದ ಬಾಷ್ಪಗಳನ್ನು ಸುರಿಸುತ್ತಿರಲು, ಗದ್ಗದಧ್ವನಿ, ರೋಮಾಂಚನಗಳು ಉಂಟಾಗುತ್ತಿರಲು, ತನುವು ಬೆವರಲು–ಹೀಗೆ ಸಾತ್ವಿಕ ಭಕ್ತಿಯಿಂದ

ವಿಳಸದ್ಭೂತಿವಿಭೂಷಿತಂ ವಿಪುಳರುದ್ರಾಕ್ಷಾನ್ವಿತಂ ಗಾಂಗವಂ
ಗಳಶೀತಾಂಬು ಸಹಸ್ರಕುಂಭದಭಿಷೇಕಂಗೆಯ್ದು ವಿಚ್ಛಿನ್ನಕೋ
ಮಳ ಬಿಲ್ವೀದಳಮಂ ಸಮರ್ಪಿಸಿ ಯಥೇಷ್ಟಂ ತನ್ನ ತೂಕಕ್ಕಮ
ರ್ಗಳಮಂ ಗುರ್ಗುಳಮಂ ಪೊದಳ್ದನಲನೊಳ್ಪಾನಿಟ್ಟು ತದ್ಧೂಪ[1]ಮಂ ೬೨

ಬೀಸುತ್ತುಂ ಮಂಗಳಪ್ರಸ್ಫುರಿತವಿಮಳದೀಪಾರ್ಪಣಂಗೆಯ್ದು ವಿಶ್ವಾ
ವಾಸಂಗಾನಂದದಿಂ ಷಡ್ರಸಯುತಶುಚಿಭಕ್ಷ್ಯಾದಿ ನೈವೇದ್ಯಮಂ ವಿ
ಶ್ವಾಸಂ ಕೆಯ್ಗಣ್ಮೆ ಮಾಡುತ್ತೆಳಸಿ ಬಳಸಿ ಪುಷ್ಪಾಳಿಯಂ ಸೂಸಿ ಪೂರ್ಣೋ
ಲ್ಲಾಸಂ ಕೊಂಡಾಡಿ ಪಾಡುತ್ತೆಱಗಿ ಮಗುಳೆ ಕುಂಬಿಕ್ಕುತಂ ಭಕ್ತಿಯಿಂದಂ ೬೩

ಶ್ರೀಮದಮರಾಮರೇಂದ್ರಪಿ
ತಾಮಹತಾಮರಸನಯನಪೂಜಿತಪದ ಮಾ
ಯಾಮಯಹರ ಖಲಕದಳೀ
ಸಾಮಜ ಸೋಮೇಶಲಿಂಗ ಜಯ ಭವಭಂಗಾ ೬೪

ವರವರದ ಶರದಮಳಹಿಮ
ಕರಕರಧವಳಾಂಗ ಪುಂಗವಧ್ವಜ ಭುಜಗಾ

ಈಶ್ವರನ ಪಾದಗಳ ಅರ್ಚನೆ ಮಾಡಿದನು. ೬೨–೬೩–೬೪. ಪ್ರಕಾಶಮಾನವಾದ ವಿಭೂತಿಯಿಂದ ಅಲಂಕಾರಗೊಂಡು, ವಿಪುಲರುದ್ರಾಕ್ಷಗಳನ್ನು ಧರಿಸಿ ಅವನು ಸಹಸ್ರ ಸಂಖ್ಯೆಯ ಗಂಗಾನದೀ ಶೀತಲ ಜಲದಿಂದ (ಶಿವನಿಗೆ) ಅಭಿಷೇಕಮಾಡಿ, ಪೂರ್ಣದಳ ಗಳುಳ್ಳ ಬಿಲ್ವಪತ್ರೆಯನ್ನು ಸಮರ್ಪಿಸಿ, ತನ್ನ ತೂಕಕ್ಕೆ ಸಮಾನ ಶ್ರೇಷ್ಠವಾದ ಗುಗ್ಗುಳ ವನ್ನು ಶೋಭಿಸುವ ಬೆಂಕಿಗೆ ಹಾಕಿ ಆ ಧೂಪವನ್ನು (ಶಿವನಿಗೆ) ಬೀಸುತ್ತ ಶುಭಕರವಾಗಿ ಪ್ರಕಾಶಿಸುವ ನಿರ್ಮಲದೀಪವನ್ನು ಸಮರ್ಪಿಸಿ, ವಿಶ್ವಾವಾಸನಾದ ಪರಮೇಶ್ವರನಿಗೆ ಮಿತಿಮೀರಿದ ವಿಶ್ವಾಸದಿಂದ ಷಡ್ರಸೋಪೇತವಾದ ಪರಿಶುದ್ಧ ಭಕ್ಷ್ಯಭೋಜ್ಯಾದಿ ಗಳನ್ನು ನೈವೇದ್ಯಮಾಡಿ, ಸಂತೋಷದಿಂದ ಕೂಡಿ ಪ್ರದಕ್ಷಿಣೆಮಾಡಿ, ಪುಷ್ಪಸಮೂಹ ವನ್ನೆರಚಿ, ಪೂರ್ಣೋತ್ಸಾಹದಿಂದ ಕೊಂಡಾಡಿ, ಹಾಡಿ, ನಮಸ್ಕರಿಸಿ ಪುನಃ ಭಕ್ತಿಯಿಂದ ನಮಸ್ಕರಿಸುತ್ತ, ಮಂಗಳಕರರಾದ ದೇವತೆಗಳು, ದೇವೇಂದ್ರ, ಬ್ರಹ್ಮ, ವಿಷ್ಣು ಇವರು ಗಳಿಂದ ಅರ್ಚಿಸಲ್ಪಟ್ಟ ಚರಣವುಳ್ಳ, ಮಾಯೆಯೆಂಬ ರೋಗವನ್ನು ನಾಶಮಾಡುವ, ನೀಚರೆಂಬ ಬಾಳೆಯ ಮರಕ್ಕೆ ಆನೆಯಂತಿರುವ, ಜನನಮರಣಾತ್ಮಕವಾದ ಸಂಸಾರವನ್ನು ನಾಶಮಾಡುವ ಸೋಮೇಶ್ವರಲಿಂಗನಿಗೆ ಜಯ. ೬೫. ಶ್ರೇಷ್ಠವಾದ ವರವನ್ನು ಕೊಡುವ, ಶರತ್ಕಾಲದ ನಿರ್ಮಲವಾದ ಚಂದ್ರನ ಕಿರಣಗಳೋಪಾದಿಯಲ್ಲಿ ಶುಭ್ರವಾದ

1 ಮ (ಮಂ)

ಭರಣ ರಣಧೀರ ಧೀರೋ
ತ್ಕರನುತ ಸೋಮೇಶಲಿಂಗ ಜಯ ಭವಭಂಗಾ ೬೫

ಕುಖಲಾರ್ದನ ಮಖಮರ್ದನ
ಸುಖವರ್ಧನ ಭವ್ಯಭಕ್ತಭಾವಿತಬರ್ಹಿ
ರ್ಮುಖ ಭಾಸ್ವರ ನಿಖಿಲೇಶ್ವರ
ಶಿಖಿಧರ ಸೋಮೇಶಲಿಂಗ ಜಯ ಭವಭಂಗಾ ೬೬

ದಂಡಧರದರ್ಪಖಂಡನ
ಪಂಡಿತಹೃತ್ಪುಂಡರೀಕಮಾರ್ತಾಂಡ ಮಹೋ
ದ್ದಂಡಫಣಿರಾಜಕುಂಡಲ
ಮಂಡಿತ ಸೋಮೇಶಲಿಂಗ ಜಯ ಭವಭಂಗಾ ೬೭

ಕರಿರಾಣ್ಮುಖವರಷಣ್ಮುಖ
ದರಹಸನಮುಖಾವಲೋಕನೋತ್ಸುಕ ವಿಸರ
ದ್ಗರಳಾಶನ ಪುರಶಾಸನ
ಪರತರ ಸೋಮೇಶಲಿಂಗ ಜಯ ಭವಭಂಗಾ ೬೮

ವರಮಂದರಗಿರಿಕಂದರ
ಚರ ಚಾರಣವಿನುತಚರಣ ರಣಧೀರ ಮಹಾ

ಶರೀರವುಳ್ಳ, ವೃಷಭನನ್ನು ಧ್ವಜದಲ್ಲಿ ಉಳ್ಳ, ಹಾವುಗಳ ತೊಡಿಗೆಯುಳ್ಳ, ರಣದಲ್ಲಿ ಧೀರನಾದ, ಧೀರರಾದವರ ಸಮೂಹದಿಂದ ಹೊಗಳಿಸಿಕೊಳ್ಳಲ್ಪಡುವ ಭವಭಂಗನಾದ ಸೋಮೇಶ್ವರಲಿಂಗನೇ, ಜಯ. ೬೬. ಅತ್ಯಂತ ದುಷ್ಟರನ್ನು ಮರ್ದನಗೊಳಿಸಿದ, ದಕ್ಷಯಜ್ಞವನ್ನು ನಾಶಗೊಳಿಸಿದ, ಸೌಖ್ಯವನ್ನು ವರ್ಧನೆಗೊಳಿಸುವ, ಸದ್ಭಕ್ತರಿಂದ ಧ್ಯಾನಿಸಲ್ಪಡುವ, ದೇವತೆಗಳಲ್ಲೆಲ್ಲಾ ಪ್ರಕಾಶಮಾನವಾದ, ಸಮಸ್ತಕ್ಕೂ ಒಡೆಯನಾದ ಅಗ್ನಿಯನ್ನು ಧರಿಸಿರುವ ಸೋಮೇಶ್ವರಲಿಂಗನೇ ಜಯ. ೬೭. ಯಮಧರ್ಮನ ಗರ್ವವನ್ನು ನಾಶಮಾಡುವುದರಲ್ಲಿ ನಿಪುಣರಾದ (ಸದ್ಭಕ್ತರ) ಹೃದಯವೆಂಬ ಬೆಳ್ದಾವರೆಗೆ ಸೂರ್ಯನಂತಿರುವ, ಅತ್ಯಂತ ದೊಡ್ಡವನೆನಿಸಿದ ಆದಿಶೇಷನನ್ನು ಕರ್ಣಕುಂಡಲವನ್ನಾಗಿ ಮಾಡಿ ಧರಿಸಿಕೊಂಡಿರುವ, ಭವಭಂಗನಾದ ಸೋಮೇಶ್ವರಲಿಂಗನೇ ಜಯ. ೬೮. ವಿಘ್ನೇಶ್ವರ, ಶ್ರೇಷ್ಠ ಷಣ್ಮುಖ ಇವರುಗಳ ಮುಗುಳು ನಗೆಯಿಂದ ಕೂಡಿದ ಮುಖವನ್ನು ನೋಡುವುದರಲ್ಲಿ ಕುತೂಹಲವುಳ್ಳ, ವಿಸ್ತಾರವಾದ ಕಾಲಕೂಟವೆಂಬ ವಿಷವನ್ನು ಆಹಾರವಾಗಿ ಉಳ್ಳ, ತ್ರಿಪುರ ಸಂಹಾರ ಮಾಡಿದ ಭವಭಂಗನಾದ ಸೋಮೇಶ್ವರಲಿಂಗನೇ ಜಯ, ೬೯. ಶ್ರೇಷ್ಠವಾದ ಮಂದರಪರ್ವತದ ಕಂದರಗಳಲ್ಲಿ ಚರಿಸುವವನೂ, ಚಾರಣರೆಂಬ ದೇವಯೋಗಿ ವಿಶೇಷದಿಂದ ಸ್ತೋತ್ರಮಾಡಿಸಿಕೊಳ್ಳುವ ಪಾದವುಳ್ಳವನೂ,

ಸುರಭಂಜನ ಸುರರಂಜನ
ಕರ ವರ ಸೋಮೇಶಲಿಂಗ ಜಯ ಭವಭಂಗಾ ೧೯

ಸಿತಕರ ಶತಕರ ಹುತವಹ
ನುತ ನಯನತ್ರಯವಿರಾಜಿತಾನನ ಸುಮನ
ಸ್ತುತಿನತಪದಮುಳಪದತಳ
ಶತದಳ ಸೋಮೇಶಲಿಂಗ ಜಯ ಭವಭಂಗಾ ೨೦

ಕಂದರಶಿತಿಕಂಧರ ವಿಧಿ
ಕಂಧರಕರ ಬಂಧರಹಿತ ಬಂಧುರಗುಣ ಸಂ
ಬಂಧ ಧೃತಸಿಂಧು ಸಂಹೃತ
ಸಿಂಧುರ ಸೋಮೇಶಲಿಂಗ ಜಯ ಭವಭಂಗಾ ೨೧

ವ॥ ಎಂದಮಂದಾನಂದದಿಂ ಕೀರ್ತಿಸಿ ಪೊಡಮಟ್ಟು ಕಡುನೇಹದಿನೋಹಿಲನಗಲಲಾಱದೆ ನಿಚ್ಚಮುಂ ತನ್ನ ತೂಕದ ಮಹಿಷಾಕ್ಷಿ ಗುಗ್ಗುಳಮಂ ಸಮರ್ಪಿಪ ನೇಮಮಂ ಕೆಯ್ಕೊಂಡು ಮಹಾಭಕ್ತಿಯಿಂ ಪೂಜಿಸುತ್ತಿರ್ಪನವಾ ಗುಗ್ಗುಳಕ್ಕೆ ನಿಜದ್ರವ್ಯಮೆಲ್ಲಂ ಸವೆಯಲೊಡಂ ಧೃತಿಗುಂದದೆ ದಕ್ಷಿಣಸಮುದ್ರಪರ್ಯಂತಮನಂತದುಷ್ಟಮೃಗವಿಸರ ವಿಹರಣಸ್ಥಾನಂಗಳೆನಿಪ ಘೋರಾಟವಿಗಳೊಳ್ಪಗಲಿರುಳೆನ್ನದೆ ಕಾಯಕ್ಲೇಶಮಂ ಬಗೆಯದೆ ತೊಳಲ್ದು ಗುಗ್ಗುಳಮೊಗೆವ ತಾಣಮನಲ್ಲಲ್ಲಿ ಪರೀಕ್ಷಿಸಿ

ಯುದ್ಧವೀರರಾದ ರಾಕ್ಷಸರನ್ನು ನಾಶಗೊಳಿಸಿದವನೂ, ದೇವತೆಗಳಿಗೆ ಸಂತೋಷವನ್ನುಂಟುಮಾಡುವವನೂ ಆದ ಭವಭಂಗನೇ, ಸೋಮೇಶ್ವರಲಿಂಗನೇ ಜಯ. ೨೦. ಸೂರ್ಯ, ಅಗ್ನಿ, ಚಂದ್ರರುಗಳೆಂಬ ಶ್ಲಾಘ್ಯವಾದ ಕಣ್ಣುಗಳಿಂದ ಪ್ರಕಾಶಮಾನವಾದ ಮುಖವುಳ್ಳ, ದೇವತಾಸಮೂಹದಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳ, ಭವಭಂಗನಾದ ಸೋಮೇಶ್ವರಲಿಂಗನೇ ಜಯ. ೨೧. ಜಲಸಮೇತವಾದ ಮೇಘದಂತೆ (ಕಂ + ಧರ) ಕಪ್ಪಾದ ಕಂಠವುಳ್ಳ, ಬ್ರಹ್ಮನ ಶಿರಸ್ಸನ್ನು (ಕಪಾಲವಾಗಿ) ಹಿಡಿದಿರುವ. ಮಾಯಾಪಾಶದಿಂದ ದೂರನಾದ, ಬಂಧುರವಾದ ಸರ್ವಜ್ಞತ್ವ, ಸರ್ವವ್ಯಾಪಕತ್ವ, ಸರ್ವಕರ್ತೃತ್ವಾದಿ ಗುಣಸಂಬಂಧವುಳ್ಳ, ಗಂಗೆಯನ್ನು ಧರಿಸಿರುವ, ಗಜಾಸುರ ನಾಶಕನಾದ, ಭವಭಂಗನಾದ ಸೋಮೇಶ್ವರಲಿಂಗನೇ ಜಯ. ವ॥ ಹೀಗೆಂದು ಹೆಚ್ಚಾದ ಸಂತೋಷದಿಂದ ಕೀರ್ತಿಸುತ್ತ ನಮಸ್ಕರಿಸಿ, ಹೊರಹೊರಟು. ಆ ಓಹಿಲನು ಅತ್ಯಂತ ಸ್ನೇಹದಿಂದ ಅಗಲಲಾರದೆ ನಿತ್ಯವೂ ತನ್ನ ತೂಕದ 'ಮಹಿಷಾಕ್ಷಿ' ಎಂಬ ಹೆಸರಿನ ಗುಗ್ಗುಳವನ್ನು (ಅಥವಾ ಮಹಿಷದ ಕಣ್ಣಿನ ಬಣ್ಣದಂತಿರುವ ಗುಗ್ಗುಳವನ್ನು) ಸಮರ್ಪಿಸುವನೇಮವನ್ನು ಹಿಡಿದು, ಮಹಾಭಕ್ತಿಯಿಂದ ಪೂಜಿಸುತ್ತಿರುವಾಗ ಆ ಗುಗ್ಗುಳಕ್ಕಾಗಿ ತಾನು ಹೊಂದಿದ್ದ ಐಶ್ವರ್ಯವೆಲ್ಲ ವ್ಯಯವಾಗಿ ಹೋಯಿತು. ಆಗ ಧೈರ್ಯಗೆಡದೆ, ದಕ್ಷಿಣಸಮುದ್ರಪರ್ಯಂತವಾಗಿ ಹರಡಿರುವ ಅನಂತ ಕ್ರೂರಮೃಗ ಸಮೂಹದ ಸಂಚಾರ ಸ್ಥಾನಗಳಾದ ಘೋರಾರಣ್ಯಗಳಲ್ಲಿ ಹಗಲಿರುಳೆನ್ನದೆ ದೇಹಶ್ರಮವನ್ನು ಲೆಕ್ಕಿಸದೆ ಸಂಕಟಗೊಂಡು, ಸಂಚಾರಮಾಡುತ್ತ ಗುಗ್ಗುಳ ಸಿಕ್ಕುವ ಸ್ಥಳಗಳನ್ನು ಅಲ್ಲಲ್ಲಿ ಪರೀಕ್ಷಿಸುತ್ತ

ತೆಗೆದು ಶೋಧನಂ ಗೆಯ್ದೊದವಿಸಿ ತನ್ನ ತೂಕದ ಪರಿಮಿತದ ಪರಿಮಳಿಪ ಗುಗ್ಗುಳವಮಂ ಕಂಬಿಯೊಳೆರಡುಂ ಕಡೆಯೊಳ್ಪರ್ಚಿಕ್ಕಿ ಪೆಗಲೊಳ್ಪೊತ್ತು ಮಲಯಗಿರಿಗೆಯ್ದಿ ನಱುಗಂಪಿನುಗುಳ್ವ ಚಂದನದ ಸೆಕ್ಕೆಗಳನಾ ಕಂಬಿಯ ಕೆಲಗೆಲದೊಳಳವಡಿಸಿ ಬಿಳಿಯ ವಸ್ತ್ರಮನಿಳಿವಿಟ್ಟು ಮುಸುಂಕಿ ಸುರಭಿಮಯಮಪ್ಪಖಂಡಿತ ಮೃದುಳ ಬಿಲ್ವಪಲ್ಲವಪ್ರಸರವಮಂ ತಿಱಿದು ಕರಂಡಕವಮಂ ತೀವಿ ಕೌಂಕುಳೊಳೊಡರ್ಚಿ ಮುನ್ನಮರ್ಚಿದಾ ಕಂಬಿಯುಂ ತಳೆದು ಸರ್ವಜನಂ ಪೊಗಳೆ ಸಡಗರದಿನೇಳ್ತಂದು ಸೌರಾಷ್ಟ್ರಪತಿಯ ಗುಡಿಯುಂ ಪೊಕ್ಕು ನೋಡುತ್ತುಮಲ್ಲಿಂ ಮುನ್ನಮೆ ಗೌಳತಪಸ್ವಿಗಳ್ಬಂದು ಸುಗಂಧಿ[1] ಚಂದನದಿನುದ್ವರ್ತನಂಗೆಯ್ದು ಬಕ ವಕುಳ ತಿಲಕಚಂಪಕ ಕರವೀರ ಕಲ್ಹಾರ ಕರ್ಣಿಕಾರಾದಿ ಕುಸುಮವಿಸರದಿಂಡೆ ದಂಡೆಗಳ ನಳುಂಬಮಲಂಕರಿಸಿ ರಾಜಿಸುತ್ತುಮಿರ್ದಾ—

ಪರಮಶಿವಲಿಂಗವಮಂ ಕಂ
ಡಿರದೋಲಗಿಸಿರ್ದ ಸಕಳ ವಿನಿಯೋಗದರಂ
ಪರಿಕಿಸದೆ ತನ್ನ ಪೂಜೆಯ
ವಿರಚಿಪ ಸಡಗರದ ತವಕಮಂ ತಳೆದಾಗಳ್ ೭೨

ಕಂಬಿಯನಂಬಿಕಾಧವನ ಮುಂದಿಳುಪುತ್ತೆ ಸುಗಂಧಿವಾರಿಯಿಂ
ತುಂಬಿದ ಕುಂಭದಿಂದಭಿಷವಂಗುಡುತುಂ ನವದಿವ್ಯವಸ್ತ್ರಮಂ

ಗುಗ್ಗುಳವನ್ನು ಹುಡುಕಿ ತೆಗೆದು ಶೋಧನಮಾಡಿ ಒದಗಿಸುತ್ತ, ತನ್ನ ತೂಕದಳತೆಯ ಪರಿಮಳಭರಿತವಾದ ಗುಗ್ಗುಳವನ್ನು ಅಡ್ಡೆಯಲ್ಲಿ ಎರಡೂ ಕಡೆಗಳಲ್ಲಿ ಹಂಚಿಹಾಕಿಕೊಂಡು ಹೊತ್ತು, ಮಲಯಪರ್ವತಕ್ಕೆ ಬಂದು ನರುಗಂಪಿನ ಚಂದನದ ಚೆಕ್ಕೆಗಳನ್ನು ಆ ಕಂಬಿಯ ದಂಡೆದಂಡೆಗಳಲ್ಲಿ ಇಟ್ಟುಕೊಂಡು ಬಿಳಿಯ ಬಟ್ಟೆಯನ್ನು ಇಳಿಬಿಟ್ಟು ಮುಚ್ಚಿ, ಸುಗಂಧಮಯವಾದ ಅಖಂಡವೂ ಮೃದುವಾದ್ದವೂ ಆದ ಬಿಲ್ವ ದಳಗಳನ್ನು ಎತ್ತಿಕೊಂಡು, ಹೂಬುಟ್ಟಿಗಳಲ್ಲಿ ತುಂಬಿಕೊಂಡು ಬಗಲಲ್ಲಿ ಸೇರಿಸಿಕೊಂಡು, ಮೊದಲೇ ತುಂಬಿದ್ದ ಕಂಬಿಯನ್ನು ಹೊತ್ತುಕೊಂಡು ಕಂಡ ಸಮಸ್ತ ಜನವೂ ಹೊಗಳುತ್ತಿರಲು ಸಡಗರದಿಂದ ಬಂದು ಸೌರಾಷ್ಟ್ರ ಸೋಮನಾಥನ ಗುಡಿಯನ್ನು ಪ್ರವೇಶಮಾಡಿ, ನೋಡುತ್ತ–ಅಲ್ಲಿ ತನಗಿಂತ ಪೂರ್ವದಲ್ಲಿ ಗೌಡದೇಶದ ಸಂನ್ಯಾಸಿಗಳು ಬಂದು, ಸುಗಂಧ ವಿಶಿಷ್ಟವಾದ ಚಂದನಾನು ಲೇಪನಮಾಡಿ, ಬಕ, ಬಕುಳ, ತಿಲಕ, ಸಂಪಿಗೆ, ಕರವೀರ, ಕಲ್ಹಾರ, ಕರ್ಣಿಕಾರಗಳೇ ಮೊದಲಾದ ಹೂವುಗಳ ಸಮೂಹದ ಕುಚ್ಚುಗಳಿಂದಲೂ, ಮಾಲೆಗಳಿಂದಲೂ ಅಲಂಕಾರಗೊಂಡು ವಿಶೇಷವಾಗಿ ರಾರಾಜಿಸುತ್ತಿರ್ದ ಆ—
೭೨–೭೩. ಪರಮಶಿವಲಿಂಗವನ್ನು ನೋಡಿ, ತಪ್ಪದೆ ಸೇವೆಮಾಡಿಕೊಂಡಿದ್ದ ಸಮಸ್ತ ಸೇವಕ ವರ್ಗದವರನ್ನೂ ಅವರ ಪೂಜೆಯನ್ನೂ ಲಕ್ಷಿಸದೆ ತನ್ನ ಪೂಜೆಯನ್ನು ಮಾಡುವ ಕುತೂಹಲವನ್ನು ಹೊಂದಿ ಹೊತ್ತುತಂದ ಕಂಬಿಯನ್ನು ಶಿವಲಿಂಗದ ಮುಂದೆ ಇಳುಹಿ, ಪರಿಮಳಯುಕ್ತವಾದ ನೀರಿನಿಂದ ಅಭಿಷೇಕವನ್ನು ಮಾಡಿಸಿ, ತಪ್ಪದೆ ನೂತನವಾದ

1 ಧ(ಅ, ಜ)

ತಾಂ ಬಿಡದರ್ಪಿಸುತ್ತೆ ಮಲಯೋದ್ಭವದಣ್ಪನಮರ್ಚಿ ಬಿಲ್ವದಂ
ದಂಬಡೆದಿರ್ದ ಪಲ್ಲವಮನೇಱಿಸಿ ಸೋಮಧರಂಗೆ ಭಕ್ತಿಯಿಂ ೭೩

ಪರಿಮಳಮೆಣ್ದೆಸೆಗಡರ್ದಾ
ವರಿಸುತ್ತಿರೆ ಧೂಪಮಿತ್ತು ಗುಗ್ಗುಳದಿಂ ಪೇ
ರುರಿಯಾರತಿಯಂ ಬೆಳಗುತೆ
ಹರಹರ ರವದೊಳಗೆ ಘಂಟೆಯಂ ಬಾಜಿಸುತುಂ ೭೪

ವಿಳಸನ್ನೈವೇದ್ಯಮಂ ವೀಟಿಕೆಯನೊಸಗೆಯಿಂದರ್ಪಿಸುತ್ತೊಲ್ದು ಪುಷ್ಪಾಂ
ಜಳಿಗೆಯ್ದೋರಂತುಘೇ ಶಂಕರ ಶಿವ ಶಿವರಾವಂ ಕರಂ ಪೊಣ್ಮೆ ವಕ್ತ್ರೋ
ಜ್ವಳಿತಂ ಸದ್ಭಕ್ತಿಯಿಂದಂ ಮಣಿದು ಕುಣಿದು ಮುಂಡಾಡಿ ಕೊಂಡಾಡಿ ಕೂರ್ಪು
ಗ್ಗಳಿಪನ್ನಂ ಕೆಯ್ಗಳಂ ತಾಂ ಮುಗಿದುಱೆ ನಲವೆತ್ತಿರ್ದನಾ ಭಕ್ತವರ್ಯಂ ೭೫

ವ॥ ಇಂತು ಭಕ್ತಿಪಾರವಶ್ಯದಿಂ ನಿಂದರುಮಂ ನೆರೆದರುಮನಱಿಯದೆ ನಿಚ್ಚಂ ನಿಚ್ಚಮುಂ ಬಿಡದೆ ಪೂಜಿಪೋಹಿಲಯ್ಯನಂ ಕಂಡು ಗೌಳತಪಸ್ವಿಗಳಸೂಯೆಗೊಂಡೆಲ್ಲರ್ನೆರೆದು ಗುಜು ಗುಜಂ ಗೊಳುತ್ತೆ ತಮ್ಮೊಳಿಂತೆಂದರ್—

ಎಲ್ಲಿಂದಂ ಬಂದನಿವಂ
ಖುಲ್ಲಂ ಮನ್ನಗರಿಗಿವನ ಪರಿ ವಿಪರೀತಂ
ಬಲ್ಲಿದರಿರೆಯುಂ ಲೆಕ್ಕಿಸ
ಲೊಲ್ಲಂ ಮುಂಗಾಣನಧಿಕತರಮದಭರಿತಂ ೭೬

ದಿವ್ಯಾಂಬರವನ್ನು ಅರ್ಪಿಸುತ್ತ ಶ್ರೀಗಂಧದ ಲೇಪನಮಾಡಿ, ಬಿಲ್ವಪತ್ರಿಯ ಅಂದವನ್ನುಂಟುಮಾಡಿ, ಉಳಿದ ಚಿಗುರನ್ನು ಆ ಸೋಮಧರನಿಗೆ ಭಕ್ತಿಯಿಂದ ಏರಿಸಿ, ಎಂಟೂ ದಿಕ್ಕಿಗೆ ಪರಿಮಳವು ಹತ್ತಿ ವ್ಯಾಪಿಸುವಂತೆ ಗುಗ್ಗಳದ ಧೂಪವನ್ನು ಇತ್ತು, ಪ್ರಜ್ವಲಿಸುವ ಜ್ವಾಲೆಯುಳ್ಳ ಆರತಿಯನ್ನು ಬೆಳಗಿ, ಹರಹರ ಎಂಬ ಶಬ್ದಮಾಡುತ್ತ ಗಂಟೆಯನ್ನು ಬಾರಿಸುತ್ತಿದ್ದನು. ೭೪. (ಹೀಗೆ) ಆ ಭಕ್ತಶ್ರೇಷ್ಠನು ಮನೋಹರವಾದ ತಾಂಬೂಲ ವೀಟಿಕೆಗಳನ್ನು ಉತ್ಸಾಹದಿಂದ ಅರ್ಪಣೆಮಾಡುತ್ತ ಪ್ರೀತಿಯಿಂದ ಪುಷ್ಪಾಂಜಲಿಯನ್ನು ಸಮರ್ಪಿಸುತ್ತಿದ್ದನು ; ಮನೋಹರವಾಗಿ ಬಾಯಿಂದ ಹೊರಡತಕ್ಕ 'ಉಘೇಶಂಕರ ಶಿವ ಶಿವ' ಎಂಬ ಧ್ವನಿಯು ಅತಿಯಾಗಿ ಹೆಚ್ಚುತ್ತಿತ್ತು ; ಸದ್ಭಕ್ತಿಯಿಂದ ನಮಸ್ಕರಿಸಿ, ಮುದ್ದಾಡಿ, ಕೊಂಡಾಡಿ, ಅಧಿಕವಾದ ಪ್ರೀತಿಯಿಂದ ಕೂಡಿ ಕೈಗಳನ್ನು ಮುಗಿದು, ವಿಶೇಷವಾದ ಆನಂದದಿಂದ ಕೂಡಿದ್ದನು. ವ॥ ಈ ರೀತಿ ಭಕ್ತಿಯ ಪರವಶತೆಯಿಂದ ಕೂಡಿದ ಅವನು ನಿಂತಿರುವವರನ್ನೂ, ನೆರೆದಿರುವವರನ್ನೂ ಲೆಕ್ಕಿಸದೆ ನಿತ್ಯವೂ ತಪ್ಪದೆ ಪೂಜಿಸುತ್ತಿರುವ ಓಹಿಲಯ್ಯನನ್ನು ಕಂಡು ಆ ಗೌಡದೇಶದ ತಪಸ್ವಿಗಳೆಲ್ಲ ಮಾತ್ಸರ್ಯಪಟ್ಟು ಅವರೆಲ್ಲ ಸೇರಿ ತಮ್ಮ ತಮ್ಮಲ್ಲಿ ಗುಜುಗುಜು ಮಾತಾನಾಡುತ್ತ ಇಂತೆಂದರು : ೭೬. ಈ ನೀಚನು ನಮ್ಮ ಪಟ್ಟಣಕ್ಕೆ ಎಲ್ಲಿಂದ ಬಂದನು ? ಇವನ ರೀತಿಯೋ ವಿಪರೀತವಾಗಿದೆ ; ವಿಶೇಷಾಹಂಕಾರ ಭರಿತನಾದ ಇವನು ಬಲಶಾಲಿಗಳನ್ನೂ ಲಕ್ಷಿಸುತ್ತಿಲ್ಲ ; ಇವನು ಮುಂದಾಗುವ ಪರಿಣಾಮವನ್ನು ಅರಿಯನು

ಅಡವಿಯ ಗಿಡುಗಳ ಸೊಪ್ಪಂ
ಕಡಿವಡೆದುಡಿದಿರ್ದ ಪಲವು ಸೆಕ್ಕೆಗಳಂ ಪೆಂ
ಪಿಡಿದೆಸೆವ ಪಗಿನಮುಂ ಪೊ
ತ್ತೊಡನೇಳ್ತಂದರರೆ ಪುಗುವನೀ ದೇಗುಲಮುಂ ೭೭

ತನಗೆನಿತು ಸೊರ್ಕೊ ನೆರೆದಿ
ರ್ದನಿಬರುಮಂ ನೋಡದಳ್ಕದೊತ್ತರಿಸುತೆ ಭೋಂ
ಕನೆ ಪುಗುತೋಹಿಲನಾ ಚೆ
ಲ್ವಿನ ಪೂಜೆಯನಳಿದು ತನ್ನ ಪೂಜೆಯನೆಸಪಂ ೭೮

ಹರಿಮುಖಸುರಕೃತಪೂಜೆಯ
ನರವರಿಸದೆ ಕಳೆದು ಪೂಜಿಸಿದ ಭೃಂಗಿಯ ಸೋ
ದರನೊ ಸೆಲಂದಿಯ ಪೂಜೆಯ
ನಿರದಳಿದರ್ಚಿಸಿದ ಕರಿಯ ನಿಜಸಹಚರನೋ ೭೯

ಅಲರ್ದು ತಮ್ಮಡಿ ಮುನ್ನ ಮಾಡಿದ ಪೂಜೆಯುಂ ಕಡೆನೂಂಕಿ ಕ
ಣ್ಮಲರ ಪೂಜೆಯನಂದು ಮಾಡಿದ ಕಣ್ಣಪಯ್ಯನ ಮಿತ್ರನೋ
ನಲಿದು ಭೂಸುರರೊಲ್ದು ಪೂಜಿಸಿದಚ್ಚಪೂಜೆಯನೊತ್ತಿ ಮಂ
ಜುಲಸಮರ್ಚನೆಯಂ ನಿಮಿರ್ಚಿದ ದಾಸಿದೇವನ ನಂಟನೋ ೮೦

೭೭. ಅರರೇ ! ಇವನು ಅಡವಿಯ ಗಿಡಗಳ ಸೊಪ್ಪನ್ನು ಕತ್ತರಿಸಿಕೊಂಡು ಹಲಪ್ರಕಾರದ ಚೆಕ್ಕೆಗಳನ್ನು ಕತ್ತರಿಸಿಕೊಂಡು ಬಂದು, ಸುಗಂಧಗೊಂಡು ಶೋಭಿಸುವ ಗುಗ್ಗುಳವನ್ನು ಹೊತ್ತು ತಂದು ಈ ದೇವಾಲಯವನ್ನು ಹೊಗುತ್ತಿದ್ದಾನೆ. ೭೮. ಈ ಓಹಿಲನಿಗೆ ಎಷ್ಟೊಂದು ಸೊಕ್ಕುಂಟಾಗಿದೆ ? ಇಲ್ಲಿ ನೆರೆದಿರುವ ಅಷ್ಟೂ ಜನಗಳನ್ನು ನೋಡದೆ, ಹೆದರದೆ, ಬೆದರದೆ, ಅವರೆಲ್ಲರನ್ನೂ ಹಿಂದಕ್ಕೆ ತಳ್ಳಿ, ಶೀಘ್ರವಾಗಿ ದೇವಾಲಯವನ್ನು ಹೊಕ್ಕು ಮೊದಲಿನ ಚೆಲುವಾದ ಪೂಜೆಯನ್ನು ನಾಶಪಡಿಸಿ, ತನ್ನ ಪೂಜೆಯನ್ನು ಮಾಡುತ್ತಿದ್ದಾನೆ. ೭೯. ವಿಷ್ಣುವೇ ಮೊದಲಾದ ದೇವತಾ ಸಮೂಹದವರು ಮಾಡಿದ ಪೂಜೆಯನ್ನೂ ಲೆಕ್ಕಿಸದೆ ಅದನ್ನು ಕಳೆದುಹಾಕುತ್ತಿರುವ ಇವನೇನು ಭೃಂಗೀಶ್ವರನ ಸಹೋದರನೋ ? ಅಥವಾ ಜೇಡರ ಹುಳುವಿನ ಪೂಜೆಯನ್ನು ಬಿಡದೆ ಅಳಿದು ಪೂಜೆ ಮಾಡಿದ ಆನೆಯ ಒಡನಾಡಿಯೋ ? ೮೦. ಪೂರ್ವದಲ್ಲಿ ಸಂತೋಷದಿಂದ ಪೂಜಾರಿಯು ಮಾಡಿದ ಪೂಜೆಯನ್ನು ಒರೆಸಿಹಾಕಿ ಕಣ್ಣೆಂಬ ಹೂವಿನಿಂದ ಪೂಜೆಮಾಡಿದ ಕಣ್ಣಪ್ಪನ ಮಿತ್ರನೋ ? ಪಾರ್ವರು ಸಂತೋಷದಿಂದ ಮಾಡಿದ ನಿರ್ಮಲವಾದ ಪೂಜೆಯನ್ನು ತಳ್ಳಿಹಾಕಿ ಮನೋಹರ ಪೂಜೆಯನ್ನು ಮಾಡಿದ ದೇವರದಾಸಿಮಯ್ಯನ ನಂಟನೋ ?

ಇವನೇಂ ವಿಚಕಿಲಪೂಜೆಯು
ನವಧರಿಸದೆ ನೂಂಕಿ ಕಲ್ಲಪೂಜೆಯುನಗಜಾ
ಧವನೆಳಸೆ ನೆಗಳ್ದ ಸಾಂಖ್ಯನ
ಕುವರನೊ ಮುನ್ನೆಗಳ್ದ ಪೂಜೆಯುಳಿದೆಸಪಾಗಳ್ ೮೧

ವ॥ ಅಂತುಮಲ್ಲದೆಯುಂ—

ದೊರೆವೆತ್ತ ಸಲ್ಗೆಯಿಂ ಶಂ
ಕರ ಗೃಹದೊಳಗಣ್ಗೆ ಪುಗುವೊಡೀತಂ ನಂದೀ
ಶ್ವರನೊ ದಧೀಚಿಯೊ ಭೃಗುವೋ
ವರೋಪಮನ್ಯುವೊ ಶಿವಾಂಶಸಂಭವಮುನಿಯೋ ೮೨

ಶಿವಗೃಹದಂತರಾಳಮುನಣಂ ಪುಗಲಂಜಿ ಮುರಾರಿ ನಿಲ್ವನೊ
ಪ್ಪುವ ಸುಕನಾಸಿಯೊಳ್ಜಲಜಜಂ ಸಮಯಂಬಡೆವನ್ನಮಿರ್ಪನೀ
ಭವನದ ಬಾಹ್ಯದೇಶದೊಳೆ ಕೆಯ್ಮುಗಿದೋದುತೆ ರುದ್ರಸೂ[1]ಕ್ತಮುಂ[1]
ತವೆ ಕಡೆವಾಗಿಲತ್ತ ಸುರಪಂ ನಿಲುತೀಕ್ಷಿಪನೀಶವೇಳೆಯುಂ ೮೩

ಶಿವಭಜನೆಗವಸರಮುನಾ
ರವಿ ಕಾಣದೆ ಪಿಡಿದು ಕಮಳಮಂ ತಿರುಗುವನೊ
ಲ್ದವಿರತಮಿರ್ಪಂ ಶಿರದೊಳ್
ನವೇಂದು ಸಲೆ ಕಾದು ಸಮಯಮಂ ಶಂಕರನಾ ೮೪

೮೧. ಮೊದಲು ಮಾಡಿದ್ದ ಪೂಜೆಯನ್ನು ತೆಗೆದುಹಾಕಿ, ಇವನು ಪೂಜೆ ಮಾಡುವಲ್ಲಿ ಮಲ್ಲಿಗೆಯ ಹೂವಿನ ಪೂಜೆಯನ್ನೂ ಮನಸ್ಸಿಗೆ ತಾರದೆ ನೂಕಿ, ಈಶ್ವರನು ಅಪೇಕ್ಷಿಸಿದ ಕಲ್ಲಿನ ಹೊಡೆತವೆಂಬ ಪೂಜೆಯನ್ನು ಮಾಡಿದ, ಸೌಂಖ್ಯತೊಂಡನ ಕುಮಾರನೋ ? ವ॥ ಅದೂ ಅಲ್ಲದೆ— ೮೨. ಈತನು ವಿಶೇಷವಾದ ಸಲಿಗೆಯಿಂದ ಈ ಶಿವಾಲಯವನ್ನು ಪ್ರವೇಶ ಮಾಡುವುದಕ್ಕೆ ನಂದೀಶ್ವರನೋ ? ದಧೀಚಿಋಷಿಯೋ ? ಭೃಗು ಮಹರ್ಷಿಯೋ ? ಶ್ರೇಷ್ಠನಾದ ಉಪಮನ್ಯುಋಷಿಯೋ ? ಶಿವಾಂಶ ಸಂಭೂತನಾದ ದೂರ್ವಾಸಮುನಿಯೋ ? ೮೩. ವಿಷ್ಣುವೂ ಕೂಡ ಶಿವಗೃಹದ ಒಳಭಾಗವನ್ನು ಪ್ರವೇಶಿಸುವುದಕ್ಕೆ ಹೆದರಿ ದ್ವಾರದ ಮುಂದಿರುವ ಹೊರಾಂಗಣದಲ್ಲಿ ನಿಲ್ಲುತ್ತಾನೆ. ಬ್ರಹ್ಮನು ಅವಕಾಶವನ್ನು ಕೊಡುವವರೆಗೂ ದೇವಾಲಯದ ಹೊರಭಾಗದಲ್ಲೇ ಕೈ ಮುಗಿದು ರುದ್ರಸೂಕ್ತವನ್ನು ಪಠಣಮಾಡುತ್ತ ಇರುತ್ತಾನೆ. ದೇವೇಂದ್ರನು ಕಡೆಯ ಬಾಗಿಲಲ್ಲಿಯೇ ನಿಂತುಕೊಂಡು ಪರಮೇಶ್ವರನ ಸಮಯವನ್ನು ಎದುರು ನೋಡುತ್ತಿರುತ್ತಾನೆ. ೮೪. ಆ ಸೂರ್ಯನು ಪರಮೇಶ್ವರ ಸೇವೆಗೆ ಸಮಯವನ್ನೇ ಕಾಣದೆ, ಕಮಲ ಪುಷ್ಪಗಳನ್ನು ಹಿಡಿದುನಿಂತುಕೊಂಡು ಯಾವಾಗಲೂ ತಿರುಗುತ್ತಿರುತ್ತಾನೆ. ನೂತನ ಚಂದ್ರನು ಶಂಕರನ ಸಮಯವನ್ನು ನಿರೀಕ್ಷಿಸುತ್ತ ಜಡೆಯಲ್ಲೇ ಕುಳಿತುಬಿಟ್ಟಿದ್ದಾನೆ.

1 ಕ್ತಿಯುಂ(ಜ)

ಇಂತಪ್ಪರ್ಗಿಂತುಟೆಂಬಂದಿವನೆನಿಸಱವಂ ಪೋಗು ನೀನೆಂದೊಡಂ ದು
ರ್ದಾಂತಂ ತಾಂ ಪೋಗನೀ ದೇಗುಲಮನೊಳಪುಗಲ್ವೇಡ ನೀನೆಂದೊಡಂ ಗ
ರ್ವಂ ತಳ್ತಾಮೆಂದುದಂ ಲೆಕ್ಕಿಸದೊಳಪುಗುವಂ ಭಿಕ್ಷು[1]ಕಂಗೇಕಿವಂಗೀ
ಪಂತಂ ಮುನ್ನಿರ್ದರೀತಂ ಬರೆ ಪೆಱತೆಗೆವರ್ಪೂಜೆಯುಂ ಮಾಣ್ದು ನಿಚ್ಚಂ ೮೫

ವ॥ ಎಂದು ಕಾಳ್ಗೆಡೆದೀ ಧೂರ್ತ[2]ನ[2]ನೀ ಲಿಂಗಾಲಯಮನೊಳಪುಗದಂತೆ ಮಾಳ್ಪುದೆ ಕಜ್ಜದುಜ್ಜವಣೆಯೆಂದು ಜಡತಪಸ್ವಿಗಳ್ನಿರ್ಧರಿಸಿ ಕವಾಟಬಂಧಂಗೆಯ್ದು ಬಿಯ್ಯಗಮನಿಕ್ಕಿ ಕಾಪಿನಾಳ್ಗಳಂ ನಿಯಾಮಿಸಿ ನಿಚ್ಚಂ ಗುಡಿವುಗುವ ಭಕ್ತನ ಪರಿಯನ್ನಱಿಯಲಕ್ಕುಮೆಂದು ಕೆಯ್ವೊಯ್ದು ಸಕ್ಕಾಡುತುಂ ಪೊಳಲ್ಗೆ ತಳರ್ದರನ್ನೆವರಮಿತ್ತಲ್ ಮಧ್ಯರಾತ್ರಿಯಲ್ಲಿ—

ಎಂದಿನಂತೆವೊಲಲ್ಲಿಗೆಯ್ದಿದನೋಹಿಲಂ ಸಕುತೂಹಲಂ
ನಂದಿವಾಹನವಂಗೆ ಕಳ್ಳನೆ ಬಿರ್ಚಿದಂ ಕದಮಂ ಮಹಾ
ನಂದದಿಂದೊಳಪೊಕ್ಕು ಪೂಜಿಸಿ ಮುನ್ನಿನಂತತಿ ಭಕ್ತಿಯಿಂ
ದಿಂದುಮೌಳಿಯನಂತವಂ ಬೆಳಗಪ್ಪುದುಂ ಬನಕೆಯ್ದಿದಂ ೮೬

ವ॥ ಆಗಳಾ ಕಾಪಿನ ಚರರ್ಶಿವನವಂಗೆ ಪಡಿದೆಱೆದುದುಮನವನ ವೃತ್ತಾಂತಮುಮನಾ ಪೊಳಲೊಳಿರ್ದ ಗೌಳತಪಸ್ವಿಗಳ್ಗೆ ತಳ್ವದವರಱಿಪಲೊಡನೆ ಕೇಳ್ದು ಮುನ್ನಮುನ್ನತ ಭಕ್ತನೆನಿಪ

೮೫. ಇಂಥಿಂಥವರಿಗೇ ಹೀಗೆಂದಿರುವಾಗ ಇವನೆಷ್ಟರವನು? ನೀನು ನಡೆ ಎಂದರೆ ದುಷ್ಟನಾದ ಇವನು ಹೋಗುತ್ತಿಲ್ಲ ; ನೀನು ದೇಗುಲವನ್ನು ಪ್ರವೇಶಿಸಬೇಡವೆಂದರೆ, ಗರ್ವದಿಂದ ನಮ್ಮ ಮಾತನ್ನೇ ಲಕ್ಷ್ಯಕ್ಕೆ ತಾರದೆ ಒಳಗೆ ಹೋಗುತ್ತಿದ್ದಾನೆ. ಭಿಕ್ಷುಕನಾದ ಇವನಿಗೇಕೆ ಈ ಬಿಂಕ ? ಸತತವೂ ಮೊದಲು ಪೂಜೆಗಾಗಿ ಇಲ್ಲಿದ್ದವರು ಈತನು ಬಂದೊಡನೆ ಪೂಜೆಯನ್ನೇ ಬಿಟ್ಟು ಹಿಂದೆಗೆಯುವವರು ವ॥ ಹೀಗೆಂದು ದೂಷಣೆ ಮಾಡಿ, ಈ ಧೂರ್ತನನ್ನು ಶಿವಾಲಯವನ್ನು ಹೊಗದಂತೆ ಮಾಡುವುದೇ ಕಾರ್ಯ ಗೌರವವೆಂದು ಆ ಮೂಢ ತಪಸ್ವಿಗಳು ನಿರ್ಧರಿಸಿ, ಬಾಗಿಲ ಕದಗಳನ್ನು ಮುಚ್ಚಿ, ಬೀಗವನ್ನು ಹಾಕಿ, ಕಾಯುವ ಆಳುಗಳನ್ನು ಗೊತ್ತುಮಾಡಿ, ನಿತ್ಯವೂ ಗುಡಿಯನ್ನು ಹೋಗುವ ಭಕ್ತನ ರೀತಿಯನ್ನು ಇನ್ನು ತಿಳಿಯಬೇಕೆಂದು ಕೈಕೈಕುಟ್ಟಿ ನಕ್ಕಾಡುತ್ತ ಪಟ್ಟಣಕ್ಕೆ ಹೊರಟು ಹೋದರು. ಅಷ್ಟರಲ್ಲಿ ಇತ್ತ ಮಧ್ಯರಾತ್ರಿಯಲ್ಲಿ ೮೬. ಅತ್ಯಂತ ಕುತೂಹಲದಿಂದ ಕೂಡಿ, ಎಂದಿನಂದದಿಂದ ಓಹಿಲದೇವನು ಶಿವಾಲಯಕ್ಕೆ ಬಂದನು. ಆಗ ನಂದಿವಾಹನನಾದ ಶಿವನು ಮೆಲ್ಲನೆ ಕದದ ಬೀಗವನ್ನು ಉಚ್ಚಿ ಕದವನ್ನು ತೆಗೆದನು. ಆಗ ಆಓಹಿಲಯ್ಯನು ಒಳಹೊಕ್ಕು, ಮೊದಲಿನಂತೆ ಅತ್ಯಂತ ಭಕ್ತಿಯಿಂದ ಇಂದು ಮೌಳಿಯನ್ನು ಪೂಜೆಮಾಡಿ, ಬೆಳಗಾಗುವುದರೊಳಗೆ ಕಾಡಿಗೆ ತೆರಳಿದನು. ವ॥ ಆಗ ಆ ದೇವಾಲಯದ ಕಾಪಿನ ಆಳುಗಳು ಶಿವನು ಅವನಿಗೆ (ಓಹಿಲಯ್ಯನಿಗೆ) ಕದವನ್ನೂ ತೆರೆದಿದ್ದನ್ನೂ, ಅವನ ವೃತ್ತಾಂತವನ್ನೂ ಆಪಟ್ಟಣದಲ್ಲಿದ್ದ ಗೌಳ ತಪಸ್ವಿಗಳಿಗೆ ತಡಮಾಡದೆ

1 ಕ್ಷಿ(ಜ, ಮು) 2 × (ಚ, ಜ, ಮು)

ಕಿನ್ನರಯ್ಯಂಗೆ ವರದತ್ರಿಪುರಾಂತಕೇಶ್ವರಂ ಸದಮಳಗುಣಿ ಮುದನೂರ ದಾಸಯ್ಯಂಗಮಾ ರಾಮೇಶ್ವರಂ ತಿರುಮುಡಕಡೆಯೊಳ್ಮೃಡದೃಢಭಕ್ತನೆನಿಪೊಡೆಯ ಪಿಳ್ಳೆರ್ಗಮಾ ಬ್ರಹ್ಮೇಶ್ವರಂ ತ್ರ್ಯಂಬಕನಂ ನಂಬಿ ಭಜಿಪ ನಿಂ[1]ಬಿಗೆ ಸಪ್ತದಿವಸಂಬರಮಾ ಪುರದಂಬಿಕೇಶ್ವರಂ ಕದಂದೆಗೆದೊಳಪುಗಿಸಿದ ವಾರ್ತೆಯುಂ ಕೇಳ್ದು ಬಲ್ಲೆವವಂದಿರೊಳೀತನಾರಂ ಪೋಲ್ವನಿವಂಗೆ ಶಿವಂ ಪಡಿದೆಱೆದನೆಂಬುದು ನನ್ನಿಯಲ್ತು ಕಾನನಚರಂ ಕಪಟೋಪಾಯದಿಂ ದೇಗುಲದ ಬಾಗಿಲಂ ಬಿರ್ಚಿಯೊಳಗಂ ಪೊಕ್ಕು ತನ್ನ ಟವಟದ ಪೂಜೆಯುಂ ಬಿತ್ತರಿಸಿ ತಳರ್ದನಕ್ಕುಮಿೂ ಧೂರ್ತನನೀ ತಾಣದಿಂ ಪೊಱಮಡಿಸಿ ಕಳೆವುದೆ ನಿಶ್ಚಿತ ಕಾರ್ಯ ಮಕ್ಕುಮೆಂದು ನಿರ್ಧರಿಸುತಿವಂಗೆ ಭಿಕ್ಷೆಯನಿಕ್ಕದೊಡೆ ತಾನೆ ಪೊಱಮಟ್ಟು ಪೋಪನೆಂದು ಭಿಕ್ಷಾ[2]ನ್ನಂ ಪುಟ್ಟದಂತೆಸಗಲೊಡನೋಹಿಲಯ್ಯಂ ಧೈರ್ಯಂಗುಂದದೆ—

ದಳಗತಜಲಕಣಕಂದಾ
ನಿಳಫಳಮೂಲಾದನಂಗಳಿಂ ಭಕ್ತಿರಸೋ
ನ್ಮಿಳಿತ ತಪಮಾಂತು ಕರುಣಾ
ನಿಳಯನನರ್ಚಿಸರೆ ಶಿವನನೆಮ್ಮಯ ಭಕ್ತರ್ ೮೭

ಹೋಗಿ ಹೇಳಲು ಅವರು ಕೇಳಿ, ಈ ಪೂರ್ವದಲ್ಲಿ ಶ್ರೇಷ್ಠನಾದ ಕಿನ್ನರಿಯ ಬೊಮ್ಮಯ್ಯನಿಗೆ ವರಪ್ರದಾಯಿಕನಾದ ತ್ರಿಪುರಾಂತಕೇಶ್ವರನೂ, ಪವಿತ್ರ ಗುಣಿಯಾದ ಮುದನೂರಿನ ದೇವರ ದಾಸಮಾರ್ಯನಿಗೆ ಆ ರಾಮೇಶ್ವರನೂ, ತಿರುಮುಡ ಕಡೆಯೊಳಗೆ ಮೃಡ ಭಕ್ತನೆಂದೆನಿಸಿದ ಒಡೆಯ ಪಿಳ್ಳರಿಗೆ ಆ ಬ್ರಹ್ಮೇಶ್ವರನೂ, ತ್ರ್ಯಂಬಕೇಶ್ವರನನ್ನು ನಂಬಿ ಸ್ತೋತ್ರ ಮಾಡುತ್ತಿದ್ದ ನಿಂಬಿಗೆ ಏಳುದಿನಗಳವರೆಗೆ ಆ ಪುರದ ಅಂಬಿಕೇಶ್ವರನೂ, ಕದವನ್ನು ತೆಗೆದು ಒಳಗೆ ಹುಗಿಸಿದ ವಾರ್ತೆಯನ್ನು ಕೇಳಿ ತಿಳಿದಿದ್ದೇವೆ. ಅವರುಗಳ ಹಾಗೆ ಈ ಓಹಿಲಯ್ಯನು ಯಾರನ್ನು ಯಾರನ್ನು ಹೋಲುವನು ? ಇವನಿಗೆ ಶಿವನು ಬಾಗಿಲು ತೆರೆದನೆಂಬುದು ಸತ್ಯವಲ್ಲ. ಆ ಅರಣ್ಯ ಸಂಚಾರಿ ಓಹಿಲಯ್ಯನು ಕಪಟೋಪಾಯದಿಂದ ದೇಗುಲದ ಬಾಗಿಲ ಬೀಗವನ್ನು ಬಿಚ್ಚಿ ಒಳಗೆ ಹೊಕ್ಕು ತನ್ನ ಕಾಟಾಚಾರದ ಪೂಜೆಯನ್ನು ಮುಗಿಸಿ ಹೊರಟು ಹೋಗಿರಬೇಕು. ಈ ಧೂರ್ತನನ್ನು ಈ ಸ್ಥಾನದಿಂದ ಹೊರ ಹೊರಡಿಸಿ ಕಳೆಯುವುದೇ ನಿಶ್ಚಯವಾಗಿ ಮಾಡಬೇಕಾದ ಕಾರ್ಯವೆಂದು ನಿರ್ಧಾರ ಮಾಡುತ್ತ, ಅವನಿಗೆ ಭಿಕ್ಷೆಯನ್ನು ಹಾಕದಿದ್ದರೆ ತಾನೇ ಈ ಊರನ್ನು ಬಿಟ್ಟು ಹೋಗುತ್ತಾನೆ. ಎಂದು (ಆ ಊರಿನಲ್ಲಿ ಅವನಿಗೆ) ಭಿಕ್ಷಾನ್ನವೇ ಹುಟ್ಟದ ಹಾಗೆ ಮಾಡಲು ಓಹಿಲಯ್ಯನು ಧೈರ್ಯಗುಂದದೆ ೮೭. ಎಲೆಗಳ ಮೇಲೆ ಕುಳಿತ ನೀರಿನ ಕಣಗಳು, ಗೆಡ್ಡೆ, ಗೆಣಸು, ಹಣ್ಣು, ಗಾಳಿ ಇವುಗಳನ್ನು ತಿನ್ನುವುದರಿಂದ ಭಕ್ತಿರಸದಿಂದ ಅರಳಿ ಹೋಗಿ ತಪಶ್ಚರ್ಯೆಯನ್ನು ಮಾಡಿ ಕರುಣಾ ನಿಲಯನಾದ ಶಿವನನ್ನು ಅರ್ಚಿಸ

---

1 ನಂ(ಅ) 2 ನ್ನಮಂ(ಚ)

ಪರಮುಕ್ತಿಕಾಂಕ್ಷಿಗಳ್ಬ
ಕ್ತಿರಸಂ ದೊರೆಯದೊಡದೆಂತೊ ಕಳವಳಿಪರ್ದು
ಸ್ತರಸಂಕಟಮೆಯ್ದಿಯುಮಿೂ
ಶ್ವರಭಕ್ತರದೆಂತು ಸೆಡೆದು ವಿಹ್ವಳರಪ್ಪರ್ ೮೮

ಭುಕ್ತಿಗೆಳಸುತ್ತೆ ತಿರುಗುವ
ಭಕ್ತನನಿವನುದರಪೋಷಕಂ ನಿಜಮೆನುತುಂ
ಮುಕ್ತಿಪ್ರದಾನಸತತೋ
ದ್ಯುಕ್ತಂ ಮೃಡನೆಂತು ನಗದೆ ಮಾಣ್ಬನೊ ಜಗದೊಳ್ ೮೯

ತನುಪೆರ್ಚುಗುಮನ್ನದಿನಾ
ತನುವಿಂದಂ ಕಾಮಮುಬ್ಬುಗುಂ ಕಾಮದಿನಾ
ಮನಮದು ವಿಕರಿಪುದಾ ದು
ರ್ಮನದಿಂ ನಿಜಭಕ್ತಿಯಳಿಗುಮವನೀತಳದೊಳ್ ೯೦

ಆ ಪರಮಭಕ್ತಿಯಳಿದೊಡೆ
ಲೋಪಂ ತಗುಳ್ಗುಂ ಸಮಸ್ತ ಸತ್ಕ್ರಿಯೆಗ[1]ದಱಿಂ
ದಾಪತ್ಕರ ಸಂಸಾರಾ
ಕೂಪಾರಾಪಾರವಾರಿಯೊಳ್ನರನಾಳ್ಗುಂ ೯೧

ಲಿಲ್ಲವೇ ? ೮೮. ಉತ್ಕಟವಾದ ಮೋಕ್ಷಾಪೇಕ್ಷಿಗಳು ಅನ್ನ ನೀರುಗಳು ಸಿಗದಿದ್ದರೆ, ಅದು ಹೇಗೆ ವ್ಯಾಕುಲಕ್ಕೊಳಗಾದಾರು ? ದುಸ್ತರವಾದ ಸಂಕಟ ಪ್ರಾಪ್ತವಾದರೂ ಈಶ್ವರನ ಭಕ್ತರು ಭಯದಿಂದ ವಿಹ್ವಲಗೊಳ್ಳುವರೇನು ? ೮೯. ಜಗತ್ತಿನಲ್ಲಿ ಅನ್ನ ವನ್ನಪೇಕ್ಷಿಸಿ ತಿರುಗುವ ಭಕ್ತನನ್ನು ಮೋಕ್ಷವನ್ನು ಕೊಡುವುದರಲ್ಲಿ ಸತತ ಉದ್ಯುಕ್ತನಾದ ಶಿವನನು ಇವನು ಕೇವಲ ಉದರಪೋಷಕನೆಂದು ನಗದೆ ಹೇಗೆ ಬಿಟ್ಟಾನು? ೯೦. ಲೋಕದಲ್ಲಿ ಅನ್ನದಿಂದ, ದೇಹವು ಬೆಳೆಯುವುದು ; ಅಂಥ ದೇಹದಿಂದ ಕಾಮವು ಉಬ್ಬುವುದು ; ಕಾಮದಿಂದ ಆ ಮನಸ್ಸು ವಿಕಾರಗೊಳ್ಳುವುದು ; ಅಂಥ ದುಷ್ಟ ಮನಸ್ಸಿನಿಂದ ನಿಜವಾದ ಭಕ್ತಿಯು ನಾಶಹೊಂದುವುದು. ೯೧. ಅಂತಹ ಶ್ರೇಷ್ಠ ಭಕ್ತಿಯು ನಾಶವಾದರೆ, ಸಕಲ ಸದಾಚಾರಗಳಿಗೂ ಭಂಗವುಂಟಾಗುವುದು ; ಆದರಿಂದ ಮನುಷ್ಯನು ವಿಪತ್ತನ್ನುಂಟುಮಾಡುವ ಜನನ ಮರಣಾತ್ಮಕವಾದ ಸಂಸಾರವೆಂಬ ಪಾದರಹಿತವಾದ

1 ಯ(ಜ)

ತಾನುಳಿಯಲ್ವೇಳ್ಕುಂ ವಿಷ
ಯಾನೀಕಮನಮಳ ಭಕ್ತಿಪರನದು ತನಗೆ
ತ್ತಾನುಂ ದೊರೆಯದೊಡಿದು ಗಿರಿ
ಶಾನುಗ್ರಹಮೆಂಬ ಬಗೆಯನಾನಲ್ವೇಡಾ ೯೨

ವ॥ ಎಂದಂಗದಿಚ್ಛೆಯನಂಗೀಕರಿಸದಭಂಗಧೈರ್ಯನಾಗಿ ಮತ್ತಮಿರದೆ—

ಕಪಟಮನಸ್ಕರಿಂತೆಸಪ ಕೈತವಮೇನನೊಡರ್ಚಲಾರ್ಪುದೀ
ಕುಪರಿಗೆ ಬಳ್ಕೆನಳ್ಕೆನಣಮಿಂದು ಕಪರ್ದಿಯ ಸತ್ಕೃಪಾಮರಾಂ
ಘ್ರಿಪಮಿದು ಸತ್ಫಳಂ ಬಡೆದುದೆನ್ನ ಮನೋರಥಮಿಂದು ಪೂರ್ಣಮಾ
ಯ್ತಪರಿಮಿತಂ ಸುಖಂ ನೆಱೆದುದಾದೆನುಮಾಧವಭಕ್ತಿಭಾಜನಂ ೯೩

ಪೊಡವಿಯೊಳೆ ಕೂರದರ್ಸೀಂ
ತೊಡೆ ಮದುವೆಯ ಕಾರ್ಯಮಳಿದಪುದೆಯೆಂಬವೊಲೀ
ಜಡಮತಿಗಳ್ಮುನಿದೊಡೆ ಮ
ನ್ಮೃಡಭಕ್ತಿಯ ಕಜ್ಜಮೆಂತುಮೇನುಳಿದಪುದೇ ೯೪

ಮುನಿದೇಗೆಯ್ವರೊ ತಮ್ಮಯ
ಮನೆಗೆಯ್ದುವ ಬಾಧೆ ಪಿಂಗಿದುದು ತಿರಿದುಣ್ಬೋ
ದನಮಾತ್ರಂ ಪೋದುದು ಬಳಿ
ಕೆನಗೆನ್ನಯ ಭಕ್ತಿಭಾಗ್ಯಮಂ ಸೆಳೆದಪರೇ ೯೫

(ಅನಂತವಾದ) ನೀರಿನಲ್ಲಿ ಮುಳುಗುವನು. ೯೨. ಅಮಳ ಭಕ್ತಿಮಾರ್ಗದಲ್ಲಿ ಹೋಗುವವನು ವಿಷಯ ಸುಖಗಳ ಸಮೂಹವನ್ನು ಬಿಡಬೇಕು. ಅದು (ಆ ಅನ್ನವು) ತನಗೆ ಯಾವ ರೀತಿಯಿಂದಲೂ ಸಿಗದಿದ್ದರೆ, ಇದೂ ಈಶ್ವರನ ಅನುಗ್ರಹವೇ ಎಂದು ತಿಳಿಯಬೇಡವೇ ? ವ॥ ಹೀಗೆಂದು ದೇಹದ ಮೇಲಿನ ಇಚ್ಛೆಯನ್ನು ಮನಸ್ಸಿಗೆ ತಂದುಕೊಳ್ಳದೆ, ಅಖಂಡ ಧೈರ್ಯವುಳ್ಳವನಾಗಿ ಮತ್ತು ತಪ್ಪದೆ ೯೩. ಕಪಟ ಮನಸ್ಸಿನವರಾದ ಆ ಗೌಡ ತಪಸ್ವಿಗಳು ಮಾಡುವ ಈ ಕಪಟೋದ್ಯೋಗವು ಏನನ್ನು ತಾನೆ. ಮಾಡಲು ಸಮರ್ಥವಾದೀತು? ಈ ಅಹಿತರಾದವರಿಗೆ ನಾನು ಸ್ವಲ್ಪವೂ ಬಳುಕುವುದಿಲ್ಲ. ಅಳುಕುವುದಿಲ್ಲ. ಈ ದಿವಸ ಪರಮೇಶ್ವರ ಸತ್ಕೃಪೆಯೆಂಬ ಕಲ್ಪವೃಕ್ಷವು ಸತ್ಫಲವನ್ನು ಬಿಟ್ಟಂತಾಯಿತು ; ಇಂದು ನನ್ನ ಮನೋರಥವು ಪೂರ್ಣವಾಯಿತು. ಅಪರಿಮಿತವಾದ ಸುಖವು ಪ್ರಾಪ್ತವಾದಂತಾಯಿತು. ಶಿವನ ಭಕ್ತಿಗೆ ಪಾತ್ರನಾದೆನು. ೯೪. ಲೋಕದಲ್ಲಿ ಪ್ರೀತಿಸಿದವರು ಸೀತರೆ ಮದುವೆಯ ಕಾರ್ಯವೇ ನಾಶವಾಗುವುದೇ ? ಎಂಬ ಲೋಕೋಕ್ತಿಯಂತೆ ಈ ಮೂಢಬುದ್ಧಿಯವರು ಕೋಪಿಸಿಕೊಂಡರೆ ನನ್ನ ಶಿವಭಕ್ತಿಯ ಕಾರ್ಯವು ನಿಂತು ಹೋದೀತೇನು ? ೯೫. ಅವರು ಕೋಪಗೊಂಡು ನನ್ನನ್ನು ಮಾಡುವುದೇನು ? ನಾನು ಅವರುಗಳ ಮನೆಗೆ ಹೋಗುವ ಬಾಧೆ ತಪ್ಪಿದಂತಾಯಿತು ; ತಿಂದುಣ್ಣುವ ಅನ್ನ ಮಾತ್ರ ಹೋಯಿತು, ನನ್ನ ಭಕ್ತಿಯೆಂಬ ಐಶ್ವರ್ಯವನ್ನೇನಾದರೂ

ಉದರಾರ್ಥಂ ಭಿಕ್ಷೆಯಂ ಕಾಂಕ್ಷಿಪುದು ಶಿವಪದಧ್ಯಾನಮೇನಪ್ಪುದೇ ತ
ಪ್ಪದೆ ತತ್ತದ್ಗೇಹಗೇಹಪ್ರಗಮನಮಭವಾವಾಸಮಂ ಸುತ್ತಿದಂತ
ಪ್ಪುದೆ ನಿಚ್ಚಂ ಭಿಕ್ಷೆಯಂ ಬೇಡುವುದು ಮೃಡನ ಸದ್ಭಕ್ತಿಯಂ ಬೇಡಿದಂತ
ಪ್ಪುದೆ ನಾನಾನ್ನಂಗಳಂ ಸಂಗ್ರಹಿಪುದಮಳ ಪುಷ್ಪೌಘಪತ್ರಾಳಿಯಂ ದಲ್ ೯೬

ತವೆ ತಿಱಿದು ಸಂಗ್ರಹಂಗೆ
ಯ್ದುವೊಲಪ್ಪುದೆ ಭೋಜನಾಭಿರತಿ ಶಿವಪೂಜೋ
ತ್ಸವರತಿಯಪ್ಪುದೆ ರಸಮಂ
ಸವಿವುದು ಶಿವಭಾವನಾಮೃತಾಸ್ವಾದನಮೇ ೯೭

ಬಯಸಲ್ಪಡದಾವುದು ಶಿವ
ನಿಯಮಿತಮೇಳ್ತರ್ಪುದದನೆ ಸಲೆ ಬಹಿರಂತ
ರ್ನಿಯತಾರ್ಪಣಾವಧಾನದೆ
ನಯದಿಂ ನಿಜಲಿಂಗದೊಡನೆ ಭೋಗಿಪುದುಚಿತಂ ೯೮

ತಲೆಯುರುಳ್ದೊಡಮಸುವಳಿದೊಡ
ಮಲಘುತರ ಪ್ರಾಣಲಿಂಗನಿಷ್ಠಾನಿಧಿ ಸಂ
ಚಲಮತಿಗಳಂತೆ ವಿಷಯಾ
ವಿಲಸುಖಮಂ ಬಗೆದು ಬಯಸಿ ಬೇಳಾದಪನೇ ೯೯

ವ॥ ಎಂದು ವೈರಾಗ್ಯಭಾವಮನವಲಂಬಿಸಿ ಮಂದಸ್ಮಿತಾಸ್ಯಂ ಧೃತಿಗುಂದದೆ—

ಸೆಳೆದುಕೊಂಡರೇನು ? ೯೬–೯೮. ಉದರಪೋಷಣಾರ್ಥವಾಗಿ ಭಿಕ್ಷೆಯನ್ನು ಬೇಡುವುದು ಶಿವ ಪದಧ್ಯಾನವಾದೀತೇನು? ತಪ್ಪದೆ ಆಪರವರ ಮನೆ ಮನೆಗಳನ್ನು ತಿರುಗುವುದು ಶಿವ ದೇವಾಲಯವನ್ನು ಸುತ್ತಿದಂತಾದೀತೇ ? ನಿತ್ಯವೂ ಭಿಕ್ಷೆಯನ್ನು ಬೇಡುವುದು ಈಶ್ವರನ ಸದ್ಭಕ್ತಿಯನ್ನು ಬೇಡಿದಂತಾದೀತೇ ? ಬೇರೆ ಬೇರೆ ಅನ್ನಗಳನ್ನು ಸಂಗ್ರಹಿಸುವುದು ನಿಜವಾಗಿ ಶ್ರೇಷ್ಠ ಪುಷ್ಪಪತ್ರಿಗಳನ್ನು ಹೆಚ್ಚಾಗಿ ಎತ್ತಿ ತಂದು ಸಂಗ್ರಹ ಮಾಡಿದಂತಾದೀತೇ ? ಊಟದಲ್ಲಿನ ಆಸಕ್ತಿಯು ಶಿವ ಪೂಜೆಯ ಉತ್ಸವದಲ್ಲಿನ ಪ್ರೀತಿಯೆನಿಸೀತೇ ? ರುಚಿಯನ್ನಾಸ್ವಾದಿಸುವುದು ಶಿವ ಧ್ಯಾನವೆಂಬ ಅಮೃತವನ್ನು ಕುಡಿದಂತಾದೀತೇ ? ಬಯಸದೆಯೇ ಆವುದು ಈಶ್ವರನಿಂದ ಪ್ರೇರಿತವಾಗಿ ಬರುವುದೋ ಅದನ್ನೇ ಚೆನ್ನಾಗಿ ಒಳ ಹೊರಗೆ ನಿಯಮದಿಂದ ಸಮರ್ಪಣೆ ಮಾಡುವ ಎಚ್ಚರಿಕೆಯಿಂದ ಕೂಡಿ ನೀತಿಯಿಂದ ಇಷ್ಟಲಿಂಗದೊಡನೆ ಉಪಭೋಗ ಮಾಡುವುದು ಉಚಿತವಾದದ್ದು. ೯೯. ತಲೆಯುರುಳಿದರೂ, ಪ್ರಾಣವು ಹೋದರೂ ಅತ್ಯಂತ ಮಹತ್ತರವಾದ ಪ್ರಾಣಲಿಂಗದಲ್ಲಿಡಲ್ಪಟ್ಟ ಶ್ರದ್ಧೆಗೆ ನಿಧಿಯೆನಿಸಿದವನು ಚಪಲ ಬುದ್ಧಿಯುಳ್ಳವರಂತೆ ವಿಷಯ ಸುಖಗಳಿಂದ ಮಲಿನಗೊಂಡ ಸೌಖ್ಯವನ್ನು ಯೋಚಿಸಿ, ಇಚ್ಛಿಸಿ, ಮೂರ್ಖನೆನಿಸನು. ವ॥ ಹೀಗೆಂದು ವೈರಾಗ್ಯ ಭಾವವನ್ನು ಹೊಂದಿದವನಾಗಿ ಮುಗುಳುನಗೆಯಿಂದ ಕೂಡಿದ ಓಹಿಲಯ್ಯನು

ಸೇವಿಸಿದಂಗೆ ಸನ್ಮತಿಯನೀಶ್ವರಭಕ್ತಿಯನಂಗಜೀವ ಚೇ
ತೋವಿಮಳತ್ವಮಂ ಕವಿತೆಯೊಳ್ಪನುಮಾಧಿಪಸುಪ್ರಸಾದ ಸೌ
ಖ್ಯಾವರಣತ್ವಮಂ ಸಕಳಸಿದ್ಧಿಯನೊಲ್ದು ಜರಾಮರತ್ವಮಂ
ಪಾವನಮುಕ್ತಿಯಂ ಪದೆದು ಸಾರ್ಚುಗುಮಿೞ ಜಗದೊಳ್ನಿರಂತರಂ ೧೦೦

ಇದು ಶಿವನಿರ್ಮಾಲ್ಯಂ ದಿಟ
ಮಿದನೊಲ್ದಾಂ ಸೇವಿಸುತ್ತೆ ಪೂಜಿಪೆನನಿಶಂ
ಮದನಾರಾತಿಯ ಸದಮಳ
ಪದಕಮಳಮನೆಂದು ಭಕ್ತನುತ್ಸವಿಸುತ್ತುಂ ೧೦೧

ಇರುಳೊಳ್ಳಿವಂಗೆ ಪೂಜೆಯ
ವಿರಚಿಸಿ ಕಡೆದೆಗೆದ ಕುಸುಮಪತ್ರಾಳಿಯನಾ
ದರದಿಂ ಬೆಳಗಪ್ಪುದುಮಾ
ಶರಣಂ ಸವಿಸವಿದು ಮುದಮನಾಳ್ದೊಪ್ಪಿರ್ದಂ ೧೦೨

**ವ॥ ಆ ಗೌಳತಪಸ್ವಿಗಳಾತನ ಬಗೆಗಂಡು ವಿಸ್ಮಯಮುತ್ತು ಮತ್ತಮಿಂದೀ ದುರುಳನೀ ವುಪಾಯದಿಂ ಬರ್ದುಂಕಿದಪನೀ ನಿರ್ಮಾಲ್ಯಮನೆಲ್ಲಮಂ ದಹಿಸಿ ಮೆಲ್ವೊಡಿಲ್ಲದೊಡೆತಾನೆ ಮೃತಮಾದ ಪನೆಂದು ದುರ್ಜನರ್ನೆನೆ[1]ದಾ ಪತ್ರಪುಷ್ಪಂಗಳಂ ತಮ್ಮ ವಿವೇಕಮುಂ ಸುಡುವಂತೆ ಸುಟ್ಟು ಬೂದಿಯಂ**

ಧೈರ್ಯಗೆಡದೆ– ೧೦೦. ಈ ಲೋಕದಲ್ಲಿ ಸದಾ ಈಶ್ವರ ಪ್ರಸಾದಸೇವನೆ ಮಾಡಿದವನಿಗೆ ಆ ಪ್ರಸಾದವೇ ಸದ್ಬುದ್ಧಿಯನ್ನೂ, ಈಶ್ವರ ಭಕ್ತಿಯನ್ನೂ, ದೇಹ, ಮನ, ಪ್ರಾಣಗಳಲ್ಲಿ ನೈರ್ಮಲ್ಯವನ್ನೂ, ಕವಿತಾಶಕ್ತಿಯನ್ನೂ, ಒಳಿತನ್ನೂ, ಪರಮೇಶ್ವರನ ಅನುಗ್ರಹ ದಿಂದಾದ ಸೌಖ್ಯ, ಸೌಖ್ಯದ ಆವರಣವನ್ನೂ, ಸಕಲಸಿದ್ಧಿಗಳನ್ನೂ, ಮುಪ್ಪು, ಸಾವುಗಳಿಲ್ಲ ದಿರುವಿಕೆಯನ್ನೂ ಪವಿತ್ರವಾದ ಮುಕ್ತಿಯನ್ನೂ ಪ್ರೀತಿಯಿಂದ ಉಂಟುಮಾಡುವುವು. ೧೦೧–೧೦೨. ಈ ಹೂವುಗಳು ಶಿವನಮೇಲೆರಿಸಿದವು ನಿಜ. ಇವನ್ನೇ ಬಲಿದು ನಾನು ಸೇವನೆ ಮಾಡುತ್ತ, ಸತತವೂ ಆ ಪರಶಿವನ ಪವಿತ್ರವಾದ ಪಾದ ಕಮಲವನ್ನು ಪೂಜಿಸು ತ್ತೇನೆಂದು ಭಕ್ತನಾದ ಓಹಿಲಯ್ಯನು ಸಂತೋಷಪಡುತ್ತ, ರಾತ್ರಿಯ ಕಾಲದಲ್ಲಿ ಶಿವ ನನ್ನೂ ಪೂಜೆ ಮಾಡುತ್ತ ಬೆಳಗಾಗಲು ಒಂದು ಪಾರ್ಶ್ವಕ್ಕೆ ತೆಗೆದಿಟ್ಟ ಶಿವನ ಮೇಲೇರಿಸಿದ್ದ ಹೂವು ಪತ್ರಿಗಳನ್ನೇ ಆಹಾರವಾಗಿ ಸ್ವೀಕರಿಸಿ ಸಂತೋಷಗೊಂಡವನಾಗಿ ಶೋಭಿಸುತ್ತಿ ದ್ದನು. ವ॥ ಆಗ ಆ ಗೌಳತಪಸ್ವಿಗಳು ಈ ಓಹಿಲಯ್ಯನ ರೀತಿಯನ್ನು ಕಂಡು, ಆಶ್ಚರ್ಯ ಗೊಂಡು ಪುನಃ ಬಿಡದೆ ಈ ಹುಚ್ಚನು ಹೂ ಪತ್ರಿಗಳನ್ನು ತಿನ್ನುವ ಈ ಉಪಾಯದಿಂದ ಬದುಕುತ್ತಿದ್ದಾನೆ. ಈ ಶಿವನ ಮೇಲೇರಿಸಿರುವ ನಿರ್ಮಾಲ್ಯಗಳನ್ನೆಲ್ಲ ಸುಟ್ಟುಬಿಟ್ಟರೆ ತಿನ್ನಲೇನೂ ಸಿಗದೆ ತಾನಾಗಿಯೇ ಸಾಯುತ್ತಾನೆ. ಎಂದು ಆ ದುರ್ಜನರು ಸೇರಿ ತಮ್ಮ

---

[1] ರಿ (ಚ, ಮು)

ನೆಗಳ್ವಲೊಡನಾ ಮಱುದಿನದುದಯದೊಳಾ ಬೂದಿಯುಂ ವೈರಾಗ್ಯಭಾಗ್ಯಧುರಂಧರನೋಹಿಲಯ್ಯ
ನೊಯ್ಯನಭೀಕ್ಷಿಸಿ ಪರಮಾನಂದಮಂ ತಾಳ್ದು—

ಮೊದಲಿದು ಶಿವನಿರ್ಮಾಲ್ಯಂ
ಪದೆದೀಗಳ್ಭಸಿತಮಾದುದೆನ್ನಯ ಸುಕೃತಾ
ಭ್ಯುದಯಕೆಣೆಯೊಳವೆ ಶಿವಕೃಪೆ
ಯೊದವಿದುದೆನಗಮಮ ಧನ್ಯನಾದೆಂ ಜಗದೊಳ್ ೧೦೩

ನವನೀತಂ ನವಘೃತಮಾ
ದವೊಲಿನಿವಾಲ್ಪಾಯಸಾನ್ನಮಾದಂತೆವೊಲ್ಕೈ
ಕ್ಷವರಸಮದು ಶರ್ಕರೆಯಾ
ದವೊಲೆಳೆಮುತ್ತಾದ ತೆಱದೆ ವಿಮಳಾಂಬುಕಣಂ ೧೦೪

ಕನಕಮಪರಂಜಿಯಾದವೊ
ಲಿನಿಗಾಯ್ತನಿವಣ್ಣಲಾದ ತೆಱದಿಂದೀಗ
ಳ್ಘನ ಶಿವನಿರ್ಮಾಲ್ಯಂ ಪಾ
ವನಭಸಿತಮಿದಾದುದರರೆ ಪುರಹರಕೃಪೆಯಿಂ ೧೦೫

ಅನಿಮಿತ್ತಬಂಧು ಕರುಣಾ
ವನನಿಧಿ ಸೋಮೇಶನೆನಗೆ ದಯೆಗೆಯ್ದಂ ಪಾ
ವನಭಸಿತಭಕ್ಷಣಮನಿದ
ನನವರತಂ ಸವಿದು ತನ್ನನೊಲಿದರ್ಚಿಸುವೆಂ ೧೦೬

ಸತ್ಯಮಯಮಾದ ವೇದಂ
'ಭೂತ್ಯೈ ನ ಪ್ರಮದಿತವ್ಯಮೆಂ'ದುಂ ಭುವನ
ಸ್ತುತ್ಯಂ 'ಶ್ರಿಯಾಯುಷಂ ದಿವಿ'
ನುತ್ಯಸ್ಫುಟಮಂತ್ರದಿಂದೆ ಬೋಧಿಪುದಲ್ತೇ ೧೦೭

ವಿವೇಕವನ್ನೇ ಸುಟ್ಟುಕೊಳ್ಳುವ ಹಾಗೆ ಆ ಪತ್ರಿ ಪುಷ್ಪಗಳನ್ನೆಲ್ಲ ಸುಟ್ಟು ಬೂದಿಯನ್ನು ಮಾಡಲಾಗಿ ಒಡನೆಯೇ ಮರುದಿನ ಉದಯದ ಹೊತ್ತಿಗೆ ಆ ವೈರಾಗ್ಯದುರಂಧರನಾದ ಓಹಿಲಯ್ಯನು ಆ ಬೂದಿಯನ್ನು ಕಂಡು, ಪರಮಾನಂದವನ್ನು ಹೊಂದಿ– ೧೦೩. 'ಈ ಬೂದಿಯು ಮೊದಲು ಶಿವನ ಮೇಲೇರಿಸಿದ್ದ ಪತ್ರಿ ಪುಷ್ಪವಾಗಿತ್ತು. ಈಗಲಾದರೋ ನನ್ನ ಮೇಲಿನ ಪ್ರೀತಿಯಿಂದಲೇ ಭಸ್ಮವಾಗಿದೆ. ನನ್ನ ಪುಣ್ಯದ ಉದಯಕ್ಕೆ ಸಾಟಿಯುಂಟೇ ? ನನಗೆ ಶಿವನ ಕೃಪೆಯುಂಟಾಯಿತು. ಅಮಮ ! ಜಗತ್ತಿನಲ್ಲಿ ನಾನೇ ಕೃತಾರ್ಥನಾದೆನು.' ೧೦೪–೧೦೫. 'ಬೆಣ್ಣೆಯು ಹೊಸ ತುಪ್ಪವಾದಹಾಗೆ, ಮಧುರವಾದಹಾಲು ಪಾಯಸಾನ್ನವಾದಹಾಗೆ ಕಬ್ಬಿನ ರಸವು ಸಕ್ಕರೆಯಾದ ಹಾಗೆ, ನಿರ್ಮಲ ಜಲಕರ್ಣವು ಎಳೆ ಮುತ್ತಾದ ರೀತಿಯಂತೆ, ಬಂಗಾರವು ಅಪರಂಜಿಯಾದ ಹಾಗೆ, ದೋರೆಗಾಯಿಯು ಪಕ್ವ ಫಲವಾದ ಹಾಗೆ—ಈಗ ಶ್ರೇಷ್ಠವಾದ ಈ ಶಿವ ನಿರ್ಮಾಲ್ಯವೇ ಪರಮೇಶ್ವರನ ಕೃಪೆಯಿಂದ ಪವಿತ್ರ ಭಸ್ಮವಾಯಿತು. ಅರರೇ !' ೧೦೬–೧೦೮. ಅನಿಮಿತ್ತ ಬಂಧುವೂ,

ಮಾತೇಂ 'ಸ ಏಷ ಭಸ್ಮ
ಜ್ಯೋತಿ'ಯೆನುತ್ತುಂ ದ್ವಿವಾರಮೀಶಾತ್ಮತೆಯುಂ
ಪ್ರೀತಿ ಮಿಗೆ ಪೇಳ್ಗುಮನಿಶಂ
ಭೂತಾದಿ ಸಮಸ್ತವಸ್ತುಪೂರ್ಣತೆಯೊಳ್ಪಂ ೧೦೮

ತವೆ ಬೋಧಿಸುಗುಂ 'ಸರ್ವಂ
ಹವಾಯಿದಂ ಭಸ್ಮ' ವಚನಮಿಂತಖಿಳ ಬುಧ
ಸ್ತವನೀಯ ನಿಗಮಶಿರದಿಂ
ಪ್ರವಿದಿತಮಾಗಿರ್ಪ ವಿಮಳ ಭಸಿತಮಿದಲ್ತೇ ೧೦೯

ಪದಿನೆಂಟು ಪುರಾಣಂಗ
ಳ್ವಿದಿತ ಸ್ಮೃತಿವೇದಶಾಸ್ತ್ರಮಾಗಮನಿವಹಂ
ಪದೆದೀ ಭಸ್ಮದ ಮಹಿಮೆಯ
ಪದಮಂ ಸಲೆ ಪೊಗಳ್ದು ಪೊಗಳ್ದು ಕಡೆಗಂಡಪವೇ ೧೧೦

ಎಂದೆಂಬ ಪೆಂಪು ತನ್ನೊಳ್
ಸಂದ ಮಹಾಭಸಿತಮೆನಗೆ ಸಿದ್ಧಿಸಿದತ್ತೆ
ನ್ನಿಂದಧಿಕರಾರೊ ಧನ್ಯರೊ
ಳಿಂದೆನ್ನಯ ಪುಟ್ಟು ಸಫಲಮಾದುದು ಪೆಜತೇಂ ೧೧೧

ಕರುಣಾ ಸಮುದ್ರನೂ ಆದ ಸೋಮೇಶ್ವರನು ನನಗೆ ದಯವನ್ನುಂಟು ಮಾಡಿದನು. ಪವಿತ್ರವಾದ ಈ ಭಸ್ಮದ ಈ ಭಕ್ಷ್ಯವನ್ನು ಸತತವೂ ಸೇವನೆ ಮಾಡಿ, ಈ ಸೋಮೇಶ್ವರ ನನ್ನು ಪ್ರೀತಿಯಿಂದ ಪೂಜಿಸುತ್ತೇನೆ. ಸತ್ಯಮಯವಾದ ವೇದವು 'ಭೂತ್ಯೈನ ಪ್ರಮದಿತ ವ್ಯಂ'' (ಭಸ್ಮದಿಂದ ಪ್ರಮದಿತನಾಗಬಾರದು)ಎಂದೂ ಲೋಕದ ಜನರಿಂದ ಸ್ತುತ್ಯವಾದ ''ತ್ರಿಯಾಯುಷಂದಿವಿ'' ಎಂಬುದೇ ಮೊದಲಾದ ಸ್ಪಷ್ಟ ಮಂತ್ರದಿಂದ (ಭಸ್ಮದ ಮಹಿಮೆ) ಹೇಳುವುದಿಲ್ಲವೇ ? ಹೆಚ್ಚಿನ ಮಾತಿನಿಂದೇನು ಪ್ರಯೋಜನ ? ''ಸ ಏಷ ಭಸ್ಮಜ್ಯೋತಿಃ'' (ಈ ಭಸ್ಮವೇ ಪರಂಜ್ಯೋತಿ ಸ್ವರೂಪವಾದದ್ದು) ಎನ್ನುತ್ತ ಎರಡು ಸಲ ಈಶ್ವರ ಸ್ವರೂಪತ್ವವನ್ನೂ ಪೃಥಿವ್ಯಾದಿ ಭೂತಾತ್ಮಕವಾದ ಸಮಸ್ತ ವಸ್ತುಗಳಲ್ಲಿ ತುಂಬಿರುವಿಕೆಯ ಸಮೀಚೀನತೆಯನ್ನೂ ಅತ್ಯಂತ ಪ್ರೀತಿಯಿಂದ ಸದಾ ಹೇಳುತ್ತಿರುವುದು. ೧೦೯. 'ಸರ್ವಂಹವಾಯಿದಂ ಭಸ್ಮ' ಅಂದರೆ ಈ ವಿಭೂತಿಯು ಅಂದರೆ ಸಕಲವಸ್ತು ಸ್ವರೂಪದ್ದಾದುದಲ್ಲವೇ ? ಎಲ್ಲ ವಿದ್ವಾಂಸರಿಂದ ಸ್ತೋತ್ರಮಾಡಲ್ಪಟ್ಟ ಉಪನಿಷತ್ತು ಗಳಿಂದ ಪ್ರಸಿದ್ಧ ಗೊಂಡಿರುವ ಪವಿತ್ರವಾದ ಭಸ್ಮವಲ್ಲವೇ ಇದು ! ೧೧೦-೧೧೧. ಹದಿನೆಂಟುಪುರಾಣಗಳು, ಪ್ರಸಿದ್ಧವಾದ ಸ್ಮೃತಿಗಳು, ವೇದಗಳು, ಶಾಸ್ತ್ರಗಳು, ಆಗಮ ಸಮುದಾಯವು ಪ್ರೀತಿಯಿಂದ ಈ ಭಸ್ಮದ ಮಹಿಮಾಶಕ್ತಿಯನ್ನು ಹೊಗಳಿ ಹೊಗಳಿ ಕೊನೆಗೊಂಡವೇ ? ಹೀಗೆನ್ನುವ ಘನತೆ ನನ್ನಲ್ಲಿಯೇ ಉಂಟಾಗುವಂತೆ ಈ ಮಹಾ ಭಸ್ಮ ನನಗೆ ಸಿದ್ಧಿಸಿತು. ಧನ್ಯತೆ ಪಡೆದವರಲ್ಲ ನನಗಿಂತ ಹೆಚ್ಚಿನವರು ಇನ್ನಾರಿದ್ದಾರೆ ? ಇಂದಿಗೆ

ವ॥ ಎಂದು ಸಮ್ಮದಂಬಡೆದಾ ಭಸಿತಮಂ ಕಣ್ದಣಿಯೆ ನೋಡಿ ಮನಂದಣಿಯೆ ಭಾವಿಸಿ ಮೆಯ್ಯಾರೆ ಪೂಸಿ ಪರಮೋತ್ಸವದಿಂ ಸವಿದುಳಿದುದನೆ ಪಾಸುಗೆಯ್ದು ಪಟ್ಟಿರ್ದು ಪರಮಸುಖ ತರಂಗಿಣಿಯೊಳಿವಗಾಹಂಗೆಯ್ದು—

ಪಿಂಗದೆ ಮದೀಯವೇಷಕೆ
ಸಂಗತಮಾದತ್ತಿದೆನ್ನ ಸರ್ವಾಂಗಂ ಸ
ನ್ಮಂಗಳಮಯಮಾದತ್ತೆನು
ತುಂ ಗುಣನಿಧಿ ನಿಚ್ಚನಿಚ್ಚಮಿಾ ತೆಱದಿಂದಂ ೧೧೨

ಬಿಡದಾಚರಿಸುತ್ತಿರೆ ತ
ಮ್ಮಡಿಗಳದಂ ಕಂಡು ಬೆಕ್ಕಸಂಬಡುತಱಿದೀ
ಪೊಡವಿಯೊಳಿದು ಭಸ್ಮಮನೆಡೆ
ಯಿಡುಗದೆ ಸವಿಸವಿದುಮಳಿಯದಿರ್ದಪನೀಗಳ್ ೧೧೩

ತಿಂದಕಟ ಭೂತಿಯುಂ ಮೃತಿ
ಯೊಂದದೆ ಜೀವಿಪುದು ಮಾಯೆಯಿಂದಮೊ ಬಲ್ಮ
ದ್ದಿಂದಮೊ ಬಲ್ಲವರಾರಿದ
ನೆಂದಲ್ಲಿ ಕೆಲಂಬರಾಗಳಾಳೋಚಿಸುತುಂ ೧೧೪

ಅಂಗಜವಿಕಾರಮಶನದ
ಪಂಗು ಕನಲ್ಕೆಯು ಪೊಡರ್ಪು ನಿದ್ರಾಜಾಡ್ಯಂ
ಲಿಂಗಾರ್ಚನಾಭಿರತಭ
ಕ್ತಂಗೆಂದುಂ ಪೊರ್ದವೆಂಬರಾರ್ಯರ್ಧರೆಯೊಳ್ ೧೧೫

ನನ್ನ ಹುಟ್ಟು ಸಫಲವಾಯಿತು (ನನಗೆ) ಇನ್ನೇನು ಬೇಕು ? ವ॥ ಹೀಗೆಂದು ಅತ್ಯಂತ ಸಂತೋಷ ಗೊಂಡವನಾಗಿ ಆ ಭಸ್ಮವನ್ನು ಕಣ್ಣುದಣಿಯುವಂತೆ ನೋಡಿ, ಮನದಣಿಯುವಂತೆ ನೆನೆದು, ದೇಹಕ್ಕೆಲ್ಲ ಧರಿಸಿ, ಪರಮೋತ್ಸಾಹದಿಂದ ತಿಂದು ಉಳಿದದ್ದನ್ನು ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿದ್ದು ಉತ್ಕೃಷ್ಟವಾದ ಸೌಖ್ಯವೆಂಬ ನದಿಯಲ್ಲಿ ಸ್ನಾನ ಮಾಡಿದವನಾಗಿ– ೧೧೨-೧೧೩. ಈ ಭಸ್ಮಲೇಪನವು ನನ್ನ ವೇಷಕ್ಕೆ ಅನುಗುಣವಾದದ್ದಾಯಿತು. ನನ್ನ ಸರ್ವಾಂಗಗಳೂ ಸನ್ಮಂಗಳಮಯವಾದವು– ಹೀಗೆನ್ನುತ್ತ ಆ ಗುಣನಿಧಿಯು ಪ್ರತಿದಿನವೂ ಈರೀತಿಯಿಂದ ತಪ್ಪದೆ ಆಚರಿಸುತ್ತಿರಲು, ಅದನ್ನು ಪೂಜಾರಿಗಳು ಕಂಡು, ಆಶ್ಚರ್ಯಗೊಳ್ಳುತ್ತ, ಲೋಕದಲ್ಲಿ ಇಂಥ ನಡೆ ಅಸಾಧ್ಯ ! ಈಗ ದಿನದಿನವೂ ಸ್ವಲ್ಪವೂ ತಪ್ಪದಂತೆ ಭಸ್ಮವನ್ನು ತಿಂದು ತಿಂದು (ಇವನು) ಸಾಯದೆ ಇದ್ದಾನಲ್ಲ ! ೧೧೪. ಅಯ್ಯೋ ! ವಿಭೂತಿಯನ್ನು ತಿಂದು ಸಾಯದೆ ಜೀವಿಸುತ್ತಿರುವುದು ಮಾಯೆಯಿಂದಲೋ ? ಬಲವಾದ ಔಷಧದಿಂದಲೋ ? ಇದನ್ನು ತಿಳಿದವರಾರು ? ಎಂದು ಅಲ್ಲಿ ಕೆಲವರು ಆಲೋಚಿಸುತ್ತ (ಇದ್ದರು). ೧೧೫. ಲೋಕದಲ್ಲಿ ಆರ್ಯರಾದವರು ಶಿವಪೂಜೆಯಲ್ಲಿ ಆಸಕ್ತಿಯುಳ್ಳ ಭಕ್ತನಿಗೆ ಮನ್ಮಥ ಸಂಬಂಧವಾದ ಮನಸ್ಸಿನ ವಿಕಾರ, ಅನ್ನದ ಹಂಗು, ಕೋಪದ ಆಧಿಕ್ಯ. ನಿದ್ರೆಯ ಜಾಡ್ಯ–ಇವು ಯಾವಾಗಲೂ

ವ॥ ಅದಱಿನೀ ಲಿಂಗಾರ್ಚಕಭಕ್ತಂಗಿದು ಯುಕ್ತಮೆಂದು ನಿರ್ಧರಸಿರ್ದರನ್ನೆವರಮಲ್ಲಿ —

ತಳರ್ದಾಗಳ್ಕೊಂಡು ತತ್ಕಾನನದೊಳೆ ಮೃದುಬಿಲ್ವೀದಳಂ ಗುಗ್ಗುಳಂ ಸ
ನ್ಮಳಯೋದ್ಭೂಕಾಷ್ಠಮೆಂದೆಂಬಿವನಸವಸದಿಂ ಕಂಬಿಯೊಳ್ತುಂಬಿ ಪೊತ್ತ
ಗ್ಗಳಿಸುತ್ತಾನಂದದಿಂ ಬಿಣ್ಪೊಱೆಗೆ ಸೆಡೆಯದಾಘೋರ ಕಾಂತಾರದೊಳ್ನಿ
ಶ್ಚಳಶಂಭುಧ್ಯಾನಸಾಂದ್ರಂ ಬರುತೆಸೆದನತಂದ್ರಂ ಸಮಂತೋಹಿಲೇಂದ್ರಂ ೧೧೬

ಗಿಡುಗಳ ಸರುವಿನ ನರುವಿನ
ನಿಡುಗಲ್ಗಳ ಬೆಟ್ಟ ಘಟ್ಟದಿಟ್ಟಣದೊಳ್ಮು
ಳ್ಗಡಣದ ಮೆಳೆಗಳ ಪುಲ್ಪೊದ
ಱೆಡೆಯೊಳ್ನಡೆತಂದನೋಹಿಲಂ ಜವದಿಂದಂ ೧೧೭

ಕರಿ ಹರಿ ಪುಲಿ ಪುಲ್ಲೆ ವೃಕಂ
ನರಿ ಶರಭಂ ಸಿಂಹಮುಗ್ರಶಿಖಿ ಫಣಿ ಸಾರ್ತಂ
ದಿರದಾತ್ಮವೈರಮಂ ಮಱೆ
ದುರುಶಾಂತಾತ್ಮಕನನೊಲ್ದು ನೋಡಿದುವಾಗಳ್ ೧೧೮

ಅಸವಸದೊಳೆಯ್ದುತಿರೆ ಕೂ
ರ್ದಸಿಯೊಂದಂಗಾಲೊಳೆಯ್ದೆ ಮೂಡಿದುದಾ ಸಾ
ಹಸಿಯುಳ್ಕದದಕೆ ಮೆಲ್ಲನೆ
ಕುಸಿಕುಸಿದಡಿಯಿಟ್ಟು ನಡೆವುತಿರ್ದಂ ಭಕ್ತಂ ೧೧೯

ಹೊಂದುವುದಿಲ್ಲವೆನ್ನುತ್ತಾರೆ, ವ॥ ಆದ್ದರಿಂದ ಈ ಲಿಂಗಾರ್ಚಕ ಭಕ್ತನಾದ ಓಹಿಲಯ್ಯನಿಗೆ ಇದು ಯುಕ್ತವಾದದ್ದೇ ಸರಿ. ಎಂದು ನಿರ್ಧರಿಸಿದ್ದರು. ಅಷ್ಟರಲ್ಲಿ ಅಲ್ಲಿ—೧೧೬. ನಿಶ್ಚಲವಾದ ಶಂಭುಧ್ಯಾನದಿಂದ ತುಂಬಿದವನೂ, ಆಲಸ್ಯರಹಿತನೂ ಆದ ಆ ಓಹಿಲೇಂದ್ರನು ಅಡವಿಗೆ ಹೊರಟುಹೋಗಿ. ಅಲ್ಲಿ ಮೃದುವಾದ ಬಿಲ್ವಪತ್ರಿ, ಗುಗ್ಗಳ, ಶ್ರೇಷ್ಠವಾದ ಶ್ರೀಗಂಧದ ಚಕ್ಕೆ—ಇವೇ ಮೊದಲಾದುವನ್ನು ಬೇಗಬೇಗನೆ ಕಂಬಿಯಲ್ಲಿ ತುಂಬಿ ಹೊತ್ತುಕೊಂಡು ಆನಂದದಿಂದ ಉಬ್ಬುತ್ತ ದಪ್ಪನಾದ ಹೊರೆಯನ್ನು ಹೊರುವುದಕ್ಕೆ ಹೆದರದೆ. ಹೊತ್ತುಕೊಂಡು ಘೋರಾರಣ್ಯದಲ್ಲಿ ಶೋಭೆಗೊಂಡು ಚೆನ್ನಾಗಿ ಬರುತ್ತಿದ್ದನು. ೧೧೭. ಓಹಿಲನು ಗಿಡಗಳ, ಸದುವಿನ, ಕಂದರಗಳ, ದೊಡ್ಡದೊಡ್ಡ ಕೋಡುಗಲ್ಲುಗಳಿಂದ ಕೂಡಿದ ಬೆಟ್ಟ ಗುಡ್ಡಗಳ ಸಮೂಹ ಮಧ್ಯದ ಮುಳ್ಳಿನ ಸಮೂಹವುಳ್ಳ ಮೆಳೆಗಳು ಹುಲ್ಲಿನ ಹೊದರುಗಳೇ ಮೊದಲಾದ ಸ್ಥಳಗಳಲ್ಲಿ ಹಾಯ್ದು ನಡೆದು ಬರುತ್ತಿದ್ದನು. ೧೧೮. ಆನೆ, ಸಿಂಹ, ಹುಲಿ. ಜಿಂಕೆ, ತೋಳ, ನರಿ, ಶರಭ, ಸಿಂಹ, ಉಗ್ರವಾದ ನವಿಲು, ಸರ್ಪ ಇವುಗಳೆಲ್ಲ ಹರಿದು ಬಂದು ತಮ್ಮ ತಮ್ಮ ಸಹಜ ವಿರೋಧವನ್ನು ಮರೆತು ಅತ್ಯಂತ ಶಾಂತಿ ಸ್ವರೂಪನಾದ ಓಹಿಲಯ್ಯನನ್ನು ನೋಡಿದವು. ೧೧೯. ಭಕ್ತನಾದ ಓಹಿಲಯ್ಯನು ಅವಸರದಿಂದ ನಡೆದು ಬರುತ್ತಿರುವಾಗ ಒಂದು ಚೂಪಾದ ದಸಿಯು ಕಾಲಲ್ಲಿ ನಟ್ಟು ಹೊರಬರಲಾಗಿ, ಆ ಸಾಹಸಿಯು ಅದಕ್ಕೆ ಹೆದರದೆ

ಬಿಡದೋರೆವಜ್ಜೆಯಿಂ ಪಿ
ಮ್ಮಡದಿಂ ಮುಂಬೆರಲ ಬಲ್ಪಿನಿಂ ಪೆಱವೆಡೆಯುಂ
ನಡೆನಡೆದು ಕೂಂ[1]ಟುತ್ತುಂ ಪೊಱ[3]
ಜಡಿವುತ್ತಿರೆ ಪೊತ್ತು ಬಳ್ಕದೇಳ್ತರುತಿರ್ದಂ ೧೨೦

ವ॥ ಅಂತು [2]ಕುಸುಂಗಿ[2] ಕೂಂ[3]ಟುತ್ತುಂ ಬರುತ್ತುಮಿರ್ಪನ್ನೆಗಂ ಭಕ್ತದೇಹಿಕದೇವ ನಿನ್ನಿರಲ್ಬಾರದೆಂದು ಕಾರುಣ್ಯಂದಂದು—

ಅಂದಿಂದ್ರಕೀಲದಲ್ಲಿ ಪು
ಳಿಂದಾಕೃತಿದಾಳ್ದ ಭಾವಮಂ ಭಕ್ತಂಗೊ
ಲ್ದಿಂದುಧರಂ ತೋಱಲ್ಕೇ
ಳ್ತಂದವೊಲೆಯ್ತಂದನಲ್ಲಿ ಶಬರಮಹೇಶಂ ೧೨೧

ತಲೆದಳಿರ್ಗಟ್ಟು ಕೆಂಜೆಡೆ ಜಟಾಫಣಿ ಸುತ್ತಿದ ಬಳ್ಳಿ ಸೂಡಿದು
ಜ್ವಲ ಶಶಿಲೇಖೆ ತಾಳ್ದ ಗಱುವೂಗಱು ಕುಂಜರಕೃತ್ತಿ ನೀಲಮಂ
ಜುಲವಸನಂ ಫಣೀಶ್ವರಫಣಾಮಣಿ ಗುಂಜಿ ಚಮೂರುಚರ್ಮಮು
ರ್ಗಲಕಟಿಪತ್ರಪಾಳಿ ತನಗೊಪ್ಪಿರೆ ತಾಳ್ದು ವಿಳಾಸದೇಳ್ಗೆಯಿಂ ೧೨೨

ಮೆಲ್ಲ ಮೆಲ್ಲಗೆ ಕುಂಟುತ್ತ ಹೆಜ್ಜೆ ಹಾಕಿ ನಡೆದು ಬರುತ್ತಿದ್ದನು. ೧೨೦. ಬಿಡದೆ ಒಂದು ಕಡೆಗೆ ಬಾಗಿದ ಹೆಜ್ಜೆಯಿಂದ ಹಿಮ್ಮಡದ ಮತ್ತು ಹೆಬ್ಬೆಟ್ಟಿನ ಸಾಮರ್ಥ್ಯದಿಂದ ಕ್ರಮವಾಗಿ ನಡೆ ನಡೆದು ಕುಂಟುತ್ತ ಹೊತ್ತ ಹೊರೆ ಜಡೆಯುತ್ತಿದ್ದರೂ, ಹೊತ್ತು ಕೊಂಡು ಅಲ್ಲಾಡದಂತೆ (ಬಳ್ಕಡದಂತೆ) ಬರುತ್ತಿದ್ದನು. ವ॥ ಆ ರೀತಿ ಬಾಗಿಕೊಂಡು ಕುಂಟುತ್ತ ಬರುತ್ತಿರುವಷ್ಟರಲ್ಲಿ ಭಕ್ತದೇಹಿಕ ದೇವನಾದ ಶಿವನು ಇನ್ನು ತಡೆಯಬಾರ ದೆಂದು ದಯೆಗೊಂಡವನಾಗಿ- ೧೨೧. ಶಿವನು ಪೂರ್ವದಲ್ಲಿ ಅರ್ಜುನನಿಗೆ ಪಾಶು ಪತಾಸ್ತ್ರವನ್ನು ಕೊಡುವಾಗ ಬೇಡನ ಆಕಾರವನ್ನು ಧರಿಸಿದಹಾಗೆ ಭಕ್ತನಾದ ಓಹಿಲಯ್ಯ ನಿಗೆ ಒಲಿದು ಶಬರವೇಷ ಧರಿಸಿದ ಶಿವನು ಬಂದನು. ೧೨೨. ಕೆಂಪಾದ ಜಡೆಯೇ ತಲೆಗೆ ಸುತ್ತಿದ ಚಿಗುರಿನ ಗೊಂಚಲಿನ ಕಟ್ಟು, ಜಡೆಯಲ್ಲಿರುವ ಸರ್ಪವೇ ಸುತ್ತಿಕೊಂಡ ಬಳ್ಳಿ, ಧರಿಸಿದ ಉಜ್ವಲವಾದ ಶಶಿರೇಖೆಯೇ ಸಿಕ್ಕಿಸಿಕೊಂಡ ತಾಳೇ ಹೂವಿನ ಗರಿ ; ಆನೆಯ ಚರ್ಮವೇ ಮನೋಹರವಾದ ಕಪ್ಪು ಬಟ್ಟೆ, ಆದಿ ಶೇಷನ ಹೆಡೆಯ ರತ್ನವೇ ಗುಲುಗಂಜಿಯ ಆಭರಣ ; ಜಿಂಕೆಯ ಚರ್ಮವೇ ಅಧಿಕವಾಗಿ ನಡುವಿನಲ್ಲಿ ಬಿಗಿದು ಕೊಂಡಿದ್ದ ಎಲೆಗಳ ಸಾಲು ಇವು ತನಗೆ ಒಪ್ಪುವಂತೆ ಇರಲು ವಿಲಾಸಮಯವಾದ

1 ಕುಱ (ಮು, ಅ) 2 ಕುಸುಂಕಿ (ಮು) 3 ಕುಱ(ಮು, ಅ)

ಪದವಿಲ್ಪಿನಾಕಮಹಿ ಪೆದೆ
ಯೊದವಿದ ಶಿಖಿಯಂಬು ವಿಧಿನಿಷೇಧಂಗಳ್ಮೆ
ಟ್ಟಿದ ಕೆರ್ಪು ನಿಟಿಲಲೋಚನ
ಮದು ನವಗೈರಿಕದ ಬೊಟ್ಟು ತನಗಮರ್ದಿನೆಗಂ ೧೨೩

ಅಡಿವಜ್ಜೆಯನಾಘ್ರಾಣಿಸು
ತೊಡನೇಳ್ತರೆ ವೇದಕುಕ್ಕುರಂಗಳ್ಬಳಿಯೊ
ಳ್ಜಡಜಭವಮೃಗದ ಶಿರಮಂ
ಕೆಡೆಯೆಚ್ಚ ಕಿರಾತರೂಪನಾಳ್ದಿಯ್ತಂದಂ ೧೨೪

ಹರಚಿಹ್ನಂಗಳ್ತೋಱು
ತ್ತಿರೆ ತನ್ನೊಳ್ಮುಗಿಲ ಮಱೆಯ ರವಿಯಂತಾ ಶ್ರೀ
ಗಿರಿಯೊಳ್ಕಿರಾತವೇಷದೆ
ಚರಿಯಿಪ ಮಲ್ಲೇಶನೆಂಬವೋಲ್ಸಾರ್ತಂದಂ ೧೨೫

ಸಲೆ ತೊಂಭತ್ತಬ್ದಮೀಶಸ್ನಪನಮೆಸಗಿ ನದ್ಯಂಬುವಂ ಪೊತ್ತು ಮುಪ್ಪಿಂ
ಬಲಮಾದಂ ಕುಂದೆ ಮುಂ ಬಲ್ಬಲದೆ ಸಲಿಸುತಾ ನೇಮಮಂ ಪೊನ್ನಯಂ ಮೇ
ಣ್ಪೊಲಸದ್ವಾಃಪೂರ್ಣಕುಂಭಂದಳೆದು ನೆಗೆವಿನಂ ಪಳ್ಳಮಂ ನೆರ್ಗೆ ಬೆನ್ನಾ
ಳ್ಪೊಲವಿಂದಾ ಕಂಬಿಯುಂ ರಕ್ಷಿಸಿದ ಶಬರನೆಂಬಂತೆ ಕಣ್ಗೆಡ್ಡಮಾದಂ ೧೨೬

ಹಿರಿಮೆಯನ್ನು ಹೊಂದಿದ್ದನು. ೧೨೩–೧೨೪. ಪಿನಾಕವೆಂಬ ಶಿವನ ಧನುಸ್ಸೇ. ಬೇಟೆಯಾಡುವ ಬಿಲ್ಲು ; ಆದಿ ಶೇಷನೇ ಅದರ ಹೆಡೆ ; ಅಗ್ನಿಯೇ ಬಾಣ; ವಿಧಿನಿಷೇಧಗಳೇ (ಎರಡೂ ಕಾಲುಗಳಲ್ಲಿ) ಮೆಟ್ಟಿದ ಕೆರಗಳು ; ಹಣೆಗಣ್ಣೇ ನೂತನಗೈರಿಕಾ ಧಾತುವಿನ ಹಣೆಬೊಟ್ಟು ಇವು ತನಗೆ ಒಪ್ಪುವ ಹಾಗೆ ವೇದಗಳೆಂಬ ನಾಯಿಗಳು ಅವನ ಕಾಲು ಹೆಜ್ಜೆಗಳನ್ನು ಮೂಸಿ ನೋಡುತ್ತ ಹಿಂದೆ ಹಿಂದೆಯೇ ಬೆನ್ನುಹತ್ತಿ ಬರುತ್ತಿರಲು ಬ್ರಹ್ಮನೆಂಬ ಮೃಗದ ಶಿರವನ್ನು ಕತ್ತರಿಸಿ ಬೀಳುವಹಾಗೆ ಬಾಣ ಪ್ರಯೋಗವನ್ನು ಮಾಡಿದ ಕಿರಾತ ರೂಪವನ್ನು ಹೊಂದಿ (ಶಿವನು) ಓಹಿಲಯ್ಯನ ಸಮೀಪಕ್ಕೆ ಬಂದನು. ೧೨೫. ಮೋಡಗಳ ಮರೆಯಲ್ಲಡಗಿದ ಸೂರ್ಯನ ಹಾಗೆ (ಈ ಬೇಡನಲ್ಲಿ) ಪರಮೇಶ್ವರನ ಚಿಹ್ನೆಗಳು ತೋರುತ್ತಿರಲು ಆ ಶ್ರೀಶೈಲ ಪರ್ವತದಲ್ಲಿ ಸಂಚಾರ ಮಾಡುತ್ತಿರುವ ಶ್ರೀ ಚೆನ್ನಮಲ್ಲಿಕಾರ್ಜುನನೋ ಎನ್ನುವಂತೆ ಬಂದನು. ೧೨೬. ಈ ಪೂರ್ವದಲ್ಲಿ ಅಗ್ಗವಣಿ ಎಂಬುವನು ತೊಂಬತ್ತು ವರ್ಷಗಳವರೆಗೆ ನದಿಯ ನೀರನ್ನು ಹೊತ್ತು, ಶಿವನಿಗೆ ಅಭಿಷೇಕವನ್ನು ಮಾಡುತ್ತ, ವಾರ್ಧಕ್ಯದಿಂದ ಅತ್ಯಂತ ಶಕ್ತಿಗುಂದಿದರೂ ಆ ನೀರನ್ನು ತಂದು ಅಭಿಷೇಕಮಾಡುವ ವ್ರತವನ್ನು ಸಲ್ಲಿಸುತ್ತಿದ್ದಾಗ (ಒಂದು ಸಲ) ನೀರನ್ನು ತುಂಬಿದ ಶೋಭಿಸುವ ಕೊಡವನ್ನು ಹೊತ್ತುಕೊಂಡು (ಎದುರಿಗೆ ಬಂದ) ಒಂದು ಹಳ್ಳವನ್ನು ಹಾರುವಲ್ಲಿ ಬೆನ್ನು ಮುರಿದುಹೋಗಲು, ಪ್ರೀತಿಯಿಂದ ಆ ಹೊತ್ತ ಕಂಬಿಯನ್ನು ಹಾಗೇ ಹಿಡಿದುಕೊಂಡು ರಕ್ಷಿಸಿದ ಶಬರನೋ ಎಂಬಂತೆ ಕಣ್ಣಿಗೆ ಮನೋಹರವಾಗಿ ಕಂಡನು,

ವ॥ ಅಂತೆಸೆವ ಕಿರಾತರುದ್ರನೋಹಿಲಯ್ಯನ ಬೆನ್ನನೆ ಬಂದು—

ಎಲೆ ಎಲೆ ಭಕ್ತ ಪೋಗದಿರು ನಿಲ್ದಪಿ ಮೂಡಿದುದಲ್ತೆ ಪಾದದೊ
ಳ್ಚಲಮಿನಿತೇಕೆ ಪೇಳ್ನಿನಗೆ ನೀಂ ಪಗೆಯಪ್ಪುದೆ ಬೇಡವೋವೊ ಕ
ಲ್ನೆಲದೊಳೆ ಬಿಣ್ಪುವೆತ್ತ ಪೊಱೆಯುಂ ತಳೆದೀ ಬಡವಾದ ದೇಹದಿಂ
ನಲಿದಡಿಗೊಳ್ವೆಯೆಂತಿಳುಪು ಕಂಬಿಯನಿಂಬಿನೊಳೀ ಮಹೀಜದಾ ೧೨೭

ಬಿಱುವಿಸಿಲ ಬೇಗೆಯೊಳ್ಬಿ
ಣ್ಪೊಱೆವೊತ್ತಡಿಯೊಳ್ ಮೂಡೆ ದಸಿ ಕಳೆಯದೆ ನೀ
ನುಱೆ ತಳರ್ವೆಯಿಂತಲ್ಲದೆ
ಪೆಱೆದಲೆಯಂ ನಿನಗೆ ಮೆಚ್ಚನೇ ಬಿಡು ಛಲಮಂ ೧೨೮

ವ॥ ಎಂದಾ ಕಪಟಶಬರಂ ಕಾರುಣ್ಯದಿಂ ಸಾರ್ಗೆಯ್ದಿ ಕಾಲ ದಸಿಯಂ ನೀಂ ಕಿಳ್ತು ಕೊಳ್ಳಲಳ್ಕಿದೊಡಾಂ ಕಿಳ್ತು ಕಳೆದಪೆಂ ಕಾಲಂ ನೀಡೆಂಬುದುಮೋಹಿಲಯ್ಯಂ ಸಾಹಸಾಭರಣಂ ಕೇಳ್ದು—

ಎಲೆ ಶೈವಚಿಹ್ನಧರ ಶಬ
ರಲಲಾಮ ಮದೀಯ ಪದದದಸಿಗೀಳ್ತಪೆನೆಂ
ದಲರ್ದಾಸಿರ್ದ ನಿನ್ನ ನುಡಿದಸಿ
ಯಲೆದುರ್ಚಿದುದೆನ್ನ ಕರ್ಣಕುಹರಮನೀಗಳ್ ೧೨೯

ವ॥ ಈರೀತಿಯಲ್ಲಿ ಶೋಭಿಸುವ ಬೇಡನ ವೇಷವನ್ನು ಧರಿಸಿರುವ ಶಿವನು ಓಹಿಲಯ್ಯನ ಹಿಂದು ಹಿಂದೇ ಬಂದು ೧೨೭. ಎಲೆಲೇ ಭಕ್ತನೇ, ಹೋಗಬೇಡ ನಿಲ್ಲು ; ನಿನ್ನಕಾಲಿನಲ್ಲಿ ದಸಿಯೊಂದು ನಟ್ಟು ಈಚೆಗೆ ಹಾಯ್ದಿರುವುದಲ್ಲವೇ ? ನಿನಗೆ ಇಷ್ಟೊಂದು ಛಲವೇಕೆ ? ಕೇಳು ನಿನಗೆ ನೀನೇ ಶತ್ರುವಾಗಬೇಕೆ ? ಬೇಡ ಓಹೋ ! ಕಲ್ನೆಲವಲ್ಲಿ, ದಪ್ಪನೆಯ ಹೊರೆಯನ್ನು ಹೊತ್ತುಕೊಂಡು, ಈ ಕೃಶವಾದ ದೇಹದಿಂದ ಸಂತೋಷಗೊಂಡು ಹೇಗೆ ನಡೆಯುತ್ತೀಯೆ ? ಈ ಮರದಕೆಳಗೆ ಕಂಬಿಯನ್ನು ಇಳಿಸು ೧೨೮. ವಿಶೇಷವಾದ ಬಿಸಿಲಿನ ತಾಪದಲ್ಲಿ ಭಾರವಾದ ಹೊರೆಯನ್ನು ಹೊತ್ತುಕೊಂಡು ದಸಿಯು ಕಾಲಲ್ಲಿ ನಟ್ಟು ಪಾರುಗೊಂಡಿದ್ದರೂ ಅದನ್ನು ನೀನು ತೆಗೆದು ಹಾಕದೆ ವೇಗವಾಗಿಯೇ ಹೋಗುತ್ತಿದ್ದೀಯೆ. ಹೀಗಲ್ಲದ್ದಿರೆ ನಿನಗೆ ಆಶಿವನು ಮೆಚ್ಚುವುದೇ ಇಲ್ಲವೇನು ? ಸಾಕು ಛಲವನ್ನು ಬಿಡು ವ॥ ಹೀಗೆಂದು ಆ ಕಪಟ ವೇಷದ ಬೇಡನು ಕರುಣದಿಂದ ಸಮೀಪಕ್ಕೆ ಬಂದು, ಕಾಲದಸಿಯನ್ನು ನೀನು ಕಿತ್ತುಕೊಳ್ಳುವುದಕ್ಕೆ ಭಯಪಟ್ಟರೆ ನಾನೇ ಕಿತ್ತು ಕಳೆಯುತ್ತೇನೆ, ಕಾಲನ್ನು ಚಾಚು ಎನ್ನಲಾಗಿ ಆ ಸಾಹಸವೇ ಆಭರಣವಾಗಿ ಉಳ್ಳ ಓಹಿಲಯ್ಯನು ಕೇಳಿ ೧೨೯. ಎಲೈ ಶಿವಲಾಂಛನವನ್ನು ಧರಿಸಿದ ದೊಡ್ಡಬೇಡನೇ, ನನ್ನ ಕಾಲಿನಲ್ಲಿರುವ ದಸಿಯನ್ನು ಕೀಳುವೆನೆಂದು ಉತ್ಸಾಹಗೊಂಡು ಹೇಳುವ ನಿನ್ನ ಮಾತೆಂಬ

ಕಾಲಾರಿಭಕ್ತ ನಿನ್ನಿಂ
ಕಾಲಂ ಮುಟ್ಟಿಸಿದೆನಪ್ಪೊಡೀಶದ್ರೋಹ
ಕ್ಕಾಲಯಮಾಗೆನೆ ಪೇಳಿಂ
ಕಾಲದೊಳೆನ್ನಿರವನಱಿಯದೆಂತುಜ್ಜುಗಿಪೈ ೧೩೦

ಕಂಬಿಯ ಮುಟ್ಟುವ ಶುಚಿಕರ
ದಿಂ ಬಳಿಕಾನೆಂತು ಕೀಳ್ವೆನೀ ಕಾಲ್ದಸಿಯುಂ
ಸಾಂಬನ ಮೊಸಲ ವಸ್ತು ಕ
ದಂಬದ ಕಂಬಿಯನದೆಂತು ನೆಲಕಿಳುಪುವೆನೋ ೧೩೧

ನಡೆದನಿತು ದೂರಮೊಪರಿ
ನಡೆದಪೆನಲ್ಲದೆ ಕಡಂಗಿ ಕಂಬಿಯನಿಳುಪು
ತ್ತೆಡೆವಟ್ಟೆಯೊಳಡಿನಾಂಟಿದ
ನಿಡುದಸಿಯನದೆಂತು ಕೀಳಲುಜ್ಜುಗಿಸುವೆನೋ ೧೩೨

ವ॥ ಎನೆ ಕೇಳ್ದು ಬೆಕ್ಕಸಂಬಟ್ಟು ನಕ್ಕು—

ಹರನಿಳಯಂಬೊಕ್ಕಲ್ಲದೆ
ಧರಣಿಯೊಳೀ ಕಂಬಿಯುಂ ಸಮಂತಿಳುಪದ ಬ
ಲ್ಬಿರಿದಿನ ಭಕ್ತಿಯ ಬಿಂಕಂ
ದೊರೆವೆತ್ತುದು ನಿನ್ನೊಳರರೆ ನಿನಗೆಣೆಯಾವಂ ೧೩೩

ವ॥ ಎಂದು ಪುಳಿಂದಂ ಪೊಗಳ್ದು ನಿನ್ನಂಗಾಲೊಳ್ನಾಡಿದ ದಸಿಯೆನ್ನ ಕಣ್ಬೊಣರೊಳ್ಮೂಡಿದಂತಿರ್ದಪುದಿದಂ ನೋಡಲ್ಕಮಾಱೆನೀಗಳ್ನಿನ್ನ ಬಗೆಯೆಂತಿರ್ದಪುದಂತೆ ಗೆಯ್ದಪೆನೆನ್ನ ಪರಿಯಂ ನೊಂದಿನಿತು ನೋಳ್ಪುದೀಗಳ್—

ದಸಿಯು ನನ್ನ ಕಿವಿಯ ರಂಧ್ರವನ್ನು ಭೇದಿಸಿ ಬಿಟ್ಟಿತು. ೧೨೦. ಎಲೈ ಯಮನ ವೈರಿಯಾದ ಶಿವನಭಕ್ತನೇ, ನಿನ್ನಿಂದ ಕಾಲನ್ನು ಮುಟ್ಟಿಸಿಕೊಂಡೆನಾದರೆ, ನಾನು ಈಶ್ವರದ್ರೋಹಕ್ಕೆ ಕಾರಣ (ಆಲಯ) ನಾಗುವುದಿಲ್ಲವೇ ? ಹೇಳು. ಈ ಕಾಲದಲ್ಲಿ ನನ್ನ ಸ್ಥಿತಿಯನ್ನು ಅರಿಯದೆ ಹೇಗೆ (ಆ ದಸಿಯನ್ನು ತೆಗೆಯಲು) ಪ್ರಯತ್ನ ಪಡುತ್ತೀಯೆ ? ವ॥ ಹೀಗೆಂದು (ಆ ಓಹಿಲಯ್ಯನು) ಹೇಳಲು (ವೇಷಧಾರಿಯಾದ ಶಿವನು) ಅತ್ಯಾಶ್ಚರ್ಯಗೊಂಡು ೧೩೧, ಅರರೇ ! ಪರಮೇಶ್ವರನ ನಿಲಯವನ್ನು ಹೊಕ್ಕಲ್ಲದೆ ಭೂಮಿಯ ಮೇಲೆ ಈ ಕಂಬಿಯನ್ನು ಇಳುಹುವುದಕ್ಕೆ ಸಾಧ್ಯವಿಲ್ಲವೆಂಬ ಮಹಾಪಂಥವುಳ್ಳ ಭಕ್ತಿಯ ಬಿಂಕವು ನಿನ್ನಲ್ಲಿ ಉಂಟಾಗಿರುವುದಲ್ಲವೇ ? ನಿನ್ನ ಸಮಾನನಾವನು ? ವ॥ ಹೀಗೆಂದು ಬೇಡರೂಪದ ಶಿವನು ಹೊಗಳಿ, 'ನಿನ್ನ ಅಂಗಾಲಿನಲ್ಲಿ ನೆಟ್ಟಿರುವ ಈ ದಸಿಯು ನನ್ನ ಕಣ್ಣಗುಡ್ಡೆಯಲ್ಲಿ ನಟ್ಟು ಹೊರಹೊರಟಹಾಗಿದೆ ; ಇದನ್ನು ನೋಡಲಾರೆನು. ಈಗ ನಿನ್ನ ಮನಸ್ಸಿನಂತೆಯೇ ಮಾಡುತ್ತೇನೆ. ನಾನು ಆ ದಸಿಯನ್ನು ಹೊರ

ಕಾಲಂ ಮುಟ್ಟದೆ ಕಿಳ್ತೊಡೆ
ಸಾಲದೆ ಕೂರ್ದಸಿಯನೆಂದು ಭೂಜದೊಳವನಂ
ಲೀಲೆ ವಿಗೆ ನೆರ್ವ[1]ವೇಳ್ದು ದ
ಯಾಲಸದೀಕ್ಷಣದೆ ನೋಡುತುಂ ತತ್ಪದಮಂ ೧೩೪

ಪೊಸತಂಡಸದಿಂ ಕಿಳ್ತಂ
ದಸಿಯುಂ ಜೀರ್ಕೊಳವಿ ಚಿಮ್ಮಿದಂತಿರೆ ಮುನ್ನಂ
ಡಸವು ಸಿತಭಸಿತಮದು ನಿ
ಪ್ಪಸರಂ ಬೆತ್ತೆಚ್ಚು ಪಾಯ್ದುದೇಱಿಂದಾಗಳ್ ೧೩೫

ವ॥ ಅದಂ ಕಂಡು ಪರಿತೋಷಮನಾಳ್ದು ಪುಳಿಂದನಾ ಭಸಿತಧಾರೆ ಪೊಣ್ಮುವರಂಧ್ರಮಂ ಭೋಂಕನೊಂದು ತೇಗಿನೆಳೆದಳಿರಿಂ ಕಟ್ಟಿ ಬಂಧಿಸುತೋಹಿಲಯ್ಯನನುಚಿತೋಕ್ತಿಯಿಂ ಸಂತೈಸಿ ಮನ್ನಿಸಿ—

ನಿನಗೆ ಕರುಣಿಸುವನಕ್ಕೆ ಗ
ಡೆನಸುಂ ಸೋಮೇಶನೆಂದು ಶಬರಂ ನುಡಿದೊ
ಯ್ಯನೆ ಮಾಯುಮಾಗೆ ತದ್ಭ
ಕ್ತನ ಮನದೊಳ್ನೆಗೆದುದರರೆ ಕೌತುಕಮಾಗಳ್ ೧೩೬

ತೆಗೆಯುವ ಕ್ರಮವನ್ನಾದರೂ ಈಗ ನೋಡು. ೧೩೪–೧೩೫. ನಿನ್ನ ಕಾಲನ್ನು ಮುಟ್ಟದಂತೆ ಆ ದಸಿಯನ್ನು ಕಿತ್ತರೆ ಆಗದೇ ?' ಅವನನ್ನು ಒಂದು ಗಿಡದ ಮೇಲೆ, ಒರಗಿ ಕುಳಿತುಕೊಳ್ಳಲಿಕ್ಕೆ ತಿಳಿಸಿ, ಶ್ರೇಷ್ಠ ದಯಾರಸಭರಿತ ದೃಷ್ಟಿಯಿಂದ, ಅವನ ಕಾಲನ್ನು ನೋಡಿ ಆ ದಸಿಯನ್ನು ಹೊಸಚಿಮ್ಮುಟವೊಂದರಿಂದ ಕಿತ್ತೊಡನೆಯೇ ಈ ಪೂರ್ವದಲ್ಲಿ ಆ ಓಹಿಲಯ್ಯನು ಉಂಡಂಥ ಭಸ್ಮವು ಪಿಚಕಾರಿಯು (ನೀರನ್ನು) ಚಿಮ್ಮಿದ ಹಾಗೆ, ಅವಿಚ್ಛಿನ್ನವಾಗಿ ಆ ಗಾಯದಿಂದ ಹೊರಹೊರಟಿತು. ವ॥ ಅದನ್ನು ಕಂಡು ಅತ್ಯಂತ ಸಂತೋಷವನ್ನು ಹೊಂದಿ, ಬೇಡನು ಆ ಭಸ್ಮಧಾರೆಯು ಹೊರಹೊಮ್ಮುವ ರಂಧ್ರವನ್ನು ತೇಗದ ಮರದ ಒಂದು ಚಿಗುರಿನಿಂದ ಕಟ್ಟಿ (ಆ ಸುರಿಯುತ್ತಿದ್ದ) ಭಸ್ಮವನ್ನು ತಡೆದು ಆ ಓಹಿಲಯ್ಯನನ್ನು ಉಚಿತವಾದ ವಚನಗಳಿಂದ ಸಮಾಧಾನಗೊಳಿಸಿ, ಮನ್ನಣೆಗೊಳಿಸಿ ೧೩೬. 'ನಿನಗೆ ಸೌರಾಷ್ಟ್ರ ಸೋಮೇಶ್ವರನು ನಿಜವಾಗಿ ಕರುಣಿಸುವವನಾಗುವನಯ್ಯ!' ಎಂದು ಆ ಬೇಡನ ರೂಪದ ಶಿವನು ನುಡಿದು ಮೆಲ್ಲಗೆ ಅಲ್ಲಿಂದ ಮಾಯವಾದನು. ಆಗ ಆ ಭಕ್ತನಾದ ಓಹಿಲಯ್ಯನ ಮನಸ್ಸಿನಲ್ಲಿ ಅಬ್ಬಬ್ಬಾ ! ಒಂದು ಆಶ್ಚರ್ಯವು

1 ಮ್ಮ (ಅ)

ಸೌರಾಷ್ಟ್ರಪತಿ ಕೃಪಾಕೂ
ಪಾರಂ ನಣ್ಪಿಂದೆ ಬಂದು ಶಬರಾಕೃತಿಯಿಂ
ದೋರಂತಿಂತೆಸಗಿದನೆಂ
ದಾ ರುಚಿರಗುಣಾಂಕನುತ್ಸವಂಬಡೆದಾಗಳ್ ೧೩೭

ಪೊಗಳುತ್ತುಂ ಕೂರ್ಪಿನಿಂದೇಳ್ತರುತೆ ಶಿವಗೃಹಕ್ಕಾ ಕವಾಟಂಗಳಂ ಕೆ
ಯ್ಮಿಗೆ ಕಾಮಧ್ವಂಸಿ ಬೇಗಂ ತೆಗೆಯೆ ಪುಗುತೆ ತಾಂ ತಂದ ತದ್ಭಾರವಂ ಮೆ
ಲ್ಲಗೆ ರಂಗಸ್ಥಾನದೊಳ್ನಿಂದಿಳುಪಿ ವಿಮಳ ಕುಂಭಾಂಬುವಿಂ ಮಜ್ಜನಂಗೆ
ಯ್ದಗಜಾಧೀಶಂಗೆ ಬಿಲ್ವೀಮೃದುಳದಳಮನಂದರ್ಪಿಸುತ್ತೊಲ್ಮೆಯಿಂದಂ ೧೩೮

ಎಂದಿನಂತೆ ಸಾಂಗಮಾಗೆ ಪೂಜೆಗೆಯ್ದು ಭಕ್ತಿಯಿಂ
ಚಂದನೇಂಧನಂಗಳಿಂ ನಿಮಿರ್ಚಿ ಕೆಂಡಮಂ ಮಹಾ
ನಂದದಿಂದೆ ಧೂಪಮಿಕ್ಕಲೆಂದು ಘಂಟೆಯಂ ತರ
ಲ್ಕೆಂದು ಪೋಗೆ ಕಳ್ದರಲ್ಲಿ ಗುಗ್ಗುಳೌಘಮಂ ಖಳರ್ ೧೩೯

ವ॥ ಅಂತಾ ಗೌಳತಪಸ್ವಿಗಳ್ಗುಗ್ಗುಲಮನಪಹರಿಸೆ ಧೂಪಮಿಲ್ಲಾದುದಂ ಕಂಡು ಧೃತಿಗುಂದದೆ ಮನಂ ಕಂದದೆ ಬಗೆವೊಡಿದು ಸೋಮೇಶ್ವರಕೃತಕಮಕ್ಕುಮಾದೊಡೇನೀ ಸಮ[1]ಯಔಚಿತ್ಯ[1]ಕ್ಕಿನ್ನ

ಉಂಟಾಯಿತು. ೧೩೭–೧೩೯. ದಯಾಸಮುದ್ರನಾದ ಸೌರಾಷ್ಟ್ರ ಸೋಮೇಶ್ವರನು, ಪ್ರೀತಿಯಿಂದ ಈ ರೀತಿ ಶಬರನ ಆಕಾರದಲ್ಲಿ ಶೋಭಾಯಮಾನನಾಗಿ ಬಂದು ಈ ರೀತಿ ಮಾಡಿದನೆಂದು ಆ ಮನೋಹರ ಗುಣವಿಶಿಷ್ಟನಾದ ಓಹಿಲಯ್ಯನು ಉತ್ಸಾಹಗೊಂಡು (ಸೌರಾಷ್ಟ್ರೇಶ್ವರನನ್ನು) ಹೊಗಳುತ್ತ, ಪ್ರೀತಿಯಿಂದ ಆ ಶಿವಗೃಹಕ್ಕೆ ಬಂದನು. ಕಾಮಾರಿಯು ಸ್ವತಃ ತನ್ನ ಕೈಗಳಿಂದಲೇ ಬಾಗಿಲು ಕದಗಳನ್ನು ಶೀಘ್ರವಾಗಿ ತೆಗೆದನು. ಶಿವಾಲಯವನ್ನು ಪ್ರವೇಶಿಸಿ. ಹೊತ್ತು ತಂದ ಭಾರವನ್ನು ರಂಗಮಂಟಪದಲ್ಲಿ ನಿಂತು ಇಳಿಸಿ, ಪಾರ್ವತೀ ಪತಿಗೆ ಪರಿಶುದ್ಧ ಜಲದಿಂದ ಅಭಿಷೇಕಮಾಡಿ, ಪ್ರೀತಿಯಿಂದ ಮೃದುವಾದ ಬಿಲ್ವ ದಳಗಳನ್ನೇರಿಸುತ್ತ, ದಿನ ದಿನದಂತೆ ಸಾಂಗವಾಗಿ ಭಕ್ತಿಯಿಂದ ಪೂಜೆಮಾಡಿ, (ತಂದ) ಚಂದನದ ಚೆಕ್ಕೆಗಳಿಂದ (ಚಂದನದ ಕಟ್ಟಿಗೆಗಳಿಂದ) ಕೆಂಡವನ್ನು ಮಾಡಿ, ಮಹಾನಂದ ಭರಿತನಾಗಿ ಧೂಪವನ್ನು ಹಾಕಬೇಕೆಂದು ಗಂಟೆಯನ್ನು ತರುವುದಕ್ಕೆ ಹೋದನು. ಅಷ್ಟರಲ್ಲಿಯೇ ನೀಚರು ಆ ಧೂಪವನ್ನು ಕದ್ದುಕೊಂಡು ಹೋಗಿದ್ದರು. (ಧೂಪ ಹಾಕುತ್ತ ಗಂಟೆಯನ್ನು ಬಾರಿಸುವುದು ಪದ್ಧತಿ. ಗಂಟೆಯನ್ನು ತರುವನಿತರಲ್ಲಿ ಗುಗ್ಗುಳ ಮಾಯವಾಗಿತ್ತೆಂದು ಭಾವ) ವ॥ ಹೀಗೆ ಆ ಗೌಳ ತಪಸ್ವಿಗಳು ಗುಗ್ಗುಳವನ್ನು ಅಪಹರಿಸಲಾಗಿ, ಧೂಪವಿಲ್ಲದಿರುವುದನ್ನು ಕಂಡು, ಧೈರ್ಯಗೆಡದೆ, ಉತ್ಸಾಹಹೀನನಾಗದೆ, ವಿಚಾರಿಸಿ ನೋಡಿದರೆ ಇದು ಈಶ್ವರನಿಂದಲೇ ಮಾಡಿದ ಕಾರ್ಯವಾಗಿರಬೇಕು.

---

1 ಯೋಚಿತ(ಅ)

ತನುವೆ ಗುರ್ಗುಳವೆಂದೋಹಿಲಾರ್ಯಂ ನಿರ್ಧರಿಸಿ ಘಂಟಾಘಣತ್ಕಾರಂಗೆಯ್ವುತೇಳ್ತಂದು ಲಿಂಗಸನ್ನಿಧಿಯೊಳ್ನಿಂದು ಮುಂದಿರ್ದ ಪಿರಿಯ ಧೂಪಪಾತ್ರೆ ಯೊಳ್ತಳತಳಿಸಿ ಘುಳಿಘುಳಿಪನಳನಂ ನೋಳ್ಪಾಗಳ್—

ಧಗಧಗನಿಸ್ವನಂ ನಿಮಿರೆ ಕೆಂಗಿಡಿ ಸೂಸೆ ಪೊದಳ್ದು ಪೊಣ್ಮೆ ಕಾ
ರ್ಬೊಗೆ ತವಿಲಾಗೆ ದಳ್ಳುರಿ ವಿಜೃಂಭಿಸಿ ಪರ್ಬುಗೆವೆತ್ತು ಕೊರ್ಬಿ ವಿಂ
ಚೊಗೆಯೆ ಮಡಲ್ತು ಭೀಮನಿಟಲಸ್ಫುಟವಹ್ನಿಯುಗುರ್ವನಾಳ್ದು ಕೆ
ಯ್ಮಿಗೆ ಬಿಸುಪೆತ್ತಲುಂ ಮಸಗೆ ದಳ್ಳಿಸುತಿರ್ದುದು ಪಾತ್ರಪಾವಕಂ ೧೪೦

ವ॥ ಅಂತು ವಿಲಯಶಿಖಿಯಂತೆ ಬಿಸುಪ ಶಿಖಿಯ ಸೆಕೆಗೆ ಶಿಖಿಲೋಚನಶರಣನಳ್ಕದೆ ಬಳ್ಕದೆ ನಿಶ್ಚಳ ಧೈರ್ಯಾವಷ್ಟಂಭನುಂ ನಿರರ್ಗಳವಮಾನೋನ್ನತನುಂ ನಿರುಪಮ ಶಾಂತಿ ಸಂಪನ್ನನುಂ ನಿರಸ್ತನಿಜತನುವಿಮೋಹನುಮಾಗಿ ಮುಂದಣ್ಗೆ ಪಜ್ಜೆಯಿಟ್ಟು ಕರಾಂಭೋಜಂಗಳಂ ಮುಗಿದು ಗಂಭೀರ ಧ್ವಾನದಿನೆಲೆ ದೇವದೇವ ಸೌರಾಷ್ಟ್ರಸೋಮನಾಥ ಮತ್ತನುಗುರ್ಗುಳಮನಧರಿಸವಧರಿಸೆಂದುದ್ಘೋಷಿಸಿ—

ಮುನ್ನೀವ ಗುರ್ಗುಳದ ಪರಿ
ಯಿನ್ನಬಿಡ ಸುಗಂಧಮೊಯ್ದಿರ್ದೊಡೆ ಕೇಳಿಂ

ಆದರೇನು ?' ಪ್ರಕೃತ ಕಾಲಕ್ಕೆ ಉಚಿತವಾಗಿ ನನ್ನ ಈ ದೇಹವೇ ಗುಗ್ಗುಳ ! ಎಂದು ಓಹಿಲಯ್ಯನು ನಿರ್ಧಾರ ಮಾಡಿ, ಗಂಟೆಯ ಠಣತ್ಕಾರ ಮಾಡುತ್ತ ಬಂದು ಲಿಂಗದೇವನ ಸನ್ನಿಧಿಯಲ್ಲಿ ನಿಂತು, ಮುಂದಿದ್ದ ದೊಡ್ಡ ಧೂಪದ ಪಾತ್ರೆಯಲ್ಲಿ ತಳತಳಗೊಂಡು ಘುಳು ಘುಳಿಸುತ್ತಿರುವ ಬೆಂಕಿಯನ್ನು ಕಂಡನು. ೧೪೦. ಧಗಧಗವೆಂಬ ಧ್ವನಿಯು ಹೊರಹೊಮ್ಮುತ್ತಿತ್ತು : ಕೆಂಗಿಡಿಗಳು ತುಂಬಿ ಹೊರಸೂಸುತ್ತಿದ್ದವು ; ಕಪ್ಪಾದ ಹೊಗೆಯು ಹೆಚ್ಚಾಗಿ ಮೇಲೇಳುತ್ತ ಮುಸುಕಿ ಕೊಂಡಿತು, ದಳ್ಳುರಿಯು ವಿಜೃಂಭಿಸುತ್ತ ಹಬ್ಬಿಕೊಂಡು, ಕೊಬ್ಬಿ, ಪ್ರಕಾಶವು ಹರಡಿಕೊಂಡು ಅಭಿವೃದ್ಧಿಗೊಂಡಿತು. (ಅದು) ಪರಮೇಶ್ವರನ ಹಣೆಗಣ್ಣಿನಿಂದ ಉದ್ಭವಗೊಳ್ಳುವ ಬೆಂಕಿಯ ಅತಿಶಯವನ್ನು ಹೊಂದಿತ್ತು. ಬಿಸಿಯು ಮಿತಿಮೀರಿ ಎಲ್ಲಕಡೆಗೂ ವ್ಯಾಪಿಸಿತು. (ಹೀಗೆ) ಧೂಪದ ಪಾತ್ರೆಯಲ್ಲಿರುವ ಬೆಂಕಿಯು ಎಲ್ಲಕಡೆಗೂ ವ್ಯಾಪಿಸಿತು. ವ॥ ಹೀಗೆ ಪ್ರಳಯಕಾಲದ ಬೆಂಕಿಯ ಹಾಗೇ ಶೋಭಿಸುವ ಬೆಂಕಿಯ ಉಷ್ಣತೆಗೆ ಅಗ್ನಿನೇತ್ರನಾದ ಶಿವನಭಕ್ತನು ಹೆದರದೆ, ಹೊಯ್ದಾಡದೆ ನಿಶ್ಚಲ ಧೈರ್ಯಸ್ಥಿತಿಯವನೂ, ಗೌರವಾತಿಶಯದಿಂದ ಶ್ರೇಷ್ಠನೂ, ಅನುಪಮವಾದ ಶಾಂತಿಯಿಂದ ಕೂಡಿದವನೂ, ತನ್ನ ದೇಹದ ಮೇಲಿನ ಮೋಹವನ್ನು ದೂರಗೊಳಿದವನೂ ಆದವನಾಗಿ, ಮುಂದಕ್ಕೆ ಹೆಜ್ಜೆಯನ್ನು ಇಟ್ಟು, ಕರಕಮಲಗಳನ್ನು ಮುಗಿದು, ಗಂಭೀರಧ್ವನಿಯಿಂದ, 'ಎಲೈ ದೇವದೇವನಾದ ಸೌರಾಷ್ಟ್ರ ಸೋಮೇಶ್ವರನೇ, ನನ್ನ ತನುವೆಂಬ ಗುಗ್ಗುಳವನ್ನು ಅರ್ಪಿಸಿಕೋ ! ಅರ್ಪಿಸಿಕೋ '! ಎಂದು ಗಟ್ಟಿಯಾಗಿ ಕೂಗಿದನು. ೧೪೧. ಹೇ ದೇವ, ಮೊದಲು ನಿನಗೆ ಅರ್ಪಿಸುತ್ತಿದ್ದ ಪರಿಮಳದಿಂದ ಕೂಡಿದ ಗುಗ್ಗುಳದ ರೀತಿಯಿಂದಲೇ ಈಗ ನನ್ನ ಈ ದೇಹವು ಅಧಿಕ

ದೆನ್ನ ತನು ದೇವ ಮದ್ದೃಢ
ಸನ್ನುತ ಸುವ್ರತಕೆ ಭಂಗಮಲ್ಲದೆ ಪೆಱತೇಂ ೧೪೧

ವ॥ ಅಂತುಮಲ್ಲದೆಯುಮೊಂದು ಧೂಪದ ಮಾಚಿದೇವನೆಂಬ* ವೀರವ್ರತಧೀರೋದಾತ್ತ† ಶರಣಂ ನಿಚ್ಚಂ ತ್ರಿಕಾಲಂದಪ್ಪದೊರ್ಪಲ ಗುಗ್ಗುಲಮಂ ಸಮರ್ಪಿಪುದೆ ನೇಮಮಾಗಿರ್ದೊಡೊಂದು ದಿನಂ ಗುಗ್ಗುಳಂ ದೊರಕದಿರೆ ತಳಮಳಗುಗೊಳ್ಳದೆ ನಿಜ ತನು ಖಂಡಂಗಳಂ ಕೊಱೆಕೊಱೆದು ಗುಗ್ಗುಳನಿಭಮೆನಿಸಿ ತಱಿಗೆಂಡದೊಳಿಕ್ಕಿ ಧೂಪಮಂ ಬೀಸಿ ಹರನಂ ಮೆಚ್ಚಿಸಿದನವನ ತನುಖಂಡ ದಂತೆ—

ಪರಿಮಳಮನೊಲ್ದು ಬೀಱದೊ
ಡಿರದಪಗಂಧಂ ಪೊದಳ್ದೊಡಂ ಸರಸತೆಯಾ
ವರಿಸದೊಡೆ ನಡುಗಿದೊಡೆ ತನು
ಹರಣಂ ಬೆರ್ಚಿದೊಡೆ ಖಿನ್ನಮಾದೊಡೆ ವದನಂ ೧೪೨

ಕರಗದೊಡಸ್ಥಿ ಕರ್ಗಿದೊಡೆ ಕಾಯಮಳಲ್ದೊಡೆ ಚಿತ್ತ [1][ಮಾ][1]ಂತ್ರಪಂ
ಜರಮಂದು ಸುರ್ಕಿಮೆತ್ತೊಡೆ ಕಳಲ್ದೊಡೆ ಕಂಬನಿ ದೇಹರಂಧ್ರದಿಂ
ಸುರಿದೊಡೆ ಶೈತ್ಯಸಾರ ಕಫಲೋಹಿತಮಂಗದ ರೋಮರಾಜಿ ಪೇ
ರುರಿ ಕೊಳೆ ಕೌಱುನಾರ್ತೊಡೆ ನಿಜೋನ್ನತ ಧೂಮದ ಕಾಂತಿ ಕೆಟ್ಟೊಡಂ ೧೪೩

ಪಿರಿದುರಿದೊಡಮಿಂಗಳಮದು
ಕರಮೊಲ್ಲದೊಡಮಿತ ಧೂಪಧೂಮಂ ಪರಿದಾ
ವರಿಸದೊಡೆ ನಿನ್ನನೀಕ್ಷಿಸು
ವಿರವಳಿದೊಡೆ ನಿನ್ನ ಭೃತ್ಯನಲ್ಲೆನೆನುತುಂ ೧೪೪

ಸುಗಂಧವನ್ನು ಕೊಡದಿದ್ದರೆ, ನನ್ನ ದೃಢವೂ, ಶ್ಲಾಘ್ಯವೂ ಆದ ವ್ರತಕ್ಕೆ ಭಂಗವಲ್ಲದೆ ಮತ್ತೇನು ?' ವ॥ ಅದೂ ಅಲ್ಲದೆ ಈ ಪೂರ್ವದಲ್ಲಿ ಧೂಪದ ಮಾಚಿದೇವನೆಂಬ* ವೀರಶೈವ ವ್ರತದ, ಧೀರನೂ ಉದಾತ್ತನೂ ಆದ ಶರಣನು,† ಪ್ರತಿನಿತ್ಯವೂ ತ್ರಿಕಾಲ ಗಳಲ್ಲಿ ತಪ್ಪದೆ ಒಂದು ಪಲ ತೂಕದ (ಹತ್ತು ವರಹ ತೂಕ ಅಥವಾ ಮೂರನೂರ ಇಪ್ಪತ್ತು ಗುಂಜಿಯ ತೂಕದ) ಗುಗ್ಗುಳವನ್ನು ಅರ್ಪಿಸುವುದೇ ವ್ರತವುಳ್ಳವನಾಗಿದ್ದನು. ಒಂದು ದಿನ ಆ ಗುಗ್ಗುಳವು ಸಿಗದಿರಲು ಕಳವಳಗೊಳ್ಳದೆ, ತನ್ನ ದೇಹದ ಮಾಂಸವನ್ನೇ ಕತ್ತರಿಸಿ ಕತ್ತರಿಸಿ, ಗುಗ್ಗುಳಕ್ಕೆ ಸಮಾನವಾದದ್ದೆಂಬ ಭಾವನೆಯಿಂದ ನಿಗಿನಿಗಿಸುವ ಕೆಂಡ ದಲ್ಲಿ ಹಾಕಿ, ಉಂಟಾದ ಹೊಗೆಯನ್ನು ಬೀಸಿ, ಶಿವನನ್ನು ಮೆಚ್ಚಿಸಿದನು. ಅವನ ಆ ದೇಹದ ಖಂಡದಂತೆಯೇ—೧೪೨–೧೪೫. ಪರಿಮಳವು ಆಗ ಒಲಿದು ಬೀರದೆ, ದುರ್ಗಂಧವು

* ಇದು ಬಾಚಯ್ಯ, ಬಾಚಿದೇವ–ಇತ್ಯಾದಿ ಇರಬೇಕಾಗಿತ್ತೆಂದು ತೋರುತ್ತದೆ. ಬಹುಶಃ 'ಮಾಚಯ್ಯ' ಎಂದು ತಪ್ಪುಬಿದ್ದಿರಬಹುದು.

† ಧೀರೋದಾತ್ತ:–ಮಹಾಸತ್ವ, ಅತಿಗಂಭೀರತೆ, ಕೃಪಾವಿಶಿಷ್ಟತೆ, ಆತ್ಮಸ್ತುತಿರಹಿತತೆ, ಧೈರ್ಯಶಾಲತ್ವ–ಇವು ಧೀರೋದಾತ್ತನ ಲಕ್ಷಣಗಳು.

1 ಮ (ಅ, ಚ, ಮು, ಗ, ದ)

ಕಡುಪೀದಂ ಪೂಣ್ದು ಭಕ್ತಂ ಕಿಡಿಯುಱುಗುಳ್ವ ತದ್ಧೂಪಪಾತ್ರಾಗ್ನಿಯೊಳ್ ಸ
ನ್ಮೃಡಭಕ್ತವ್ರಾತ ಪಾದಾಂಬುಜಮನೆರ್ದೆಯೊಳೊಲ್ದಾಂತು ಕುಳ್ಳಿರ್ಪುದುಂ ತ
ನ್ನೊಡಲುದ್ಯದ್ಧೂಪ ಧೂಮಪ್ರಬಳಪರಿಮಳಂ ಲಿಂಗಮಂ ಸುತ್ತಿಮುತ್ತು
ತ್ತೊಡನೆತ್ತಂ ಪರ್ಬೆ ಸೋಮೇಶ್ವರ ಹರ ಹರ ಘೋಷಾಸ್ಯನೊಪ್ಪುತ್ತುಮಿರ್ದಂ ೧೪೫

ಪೊಸತೊಂದು ಗಜಾಜಿನಮದು
ಮುಸುಂಕಿದತ್ತಭವನಂಗಮಂ ತಾನೆನೆ ರಂ
ಜಿಸೆ ಧೂಪಧೂಮತತಿ ಮನ
ಮೊಸೆದೀಶನವಂಗೆ ರೂಪುದೋಱಿದನಾಗಳ್ ೧೪೬

ಎಳೆವಱೆ ಬಾಂಬೊಳೆ ಜಡೆಮುಡಿ
ತೊಳಪಕ್ಷಿ ಕರೋಟಿ ತಿಸುಳಮುರಗಾಭರಣಂ
ಮಿಳಿರ್ವ ಫಣಿಕುಂಡಳಂ ಕರಿ
ಕಳಭಾಜಿನಮೆಸೆಯೆ ಮಿಸುಗಿದಂ ಗಿರಿಜೇಶಂ ೧೪೭

ಹೊರ ಹೊರಟರೆ ಮನೋಹರತ್ವವು ಉಂಟಾಗದಿದ್ದರೆ, ತನುಸಡುಗಿ, ಪ್ರಾಣವು ಬಿಚ್ಚಿಹೋಗದಂತಾದರೆ, ಮುಖವು ಖಿನ್ನತೆಯಿಂದ ಕೂಡಿದ್ದಾದರೆ, ಮೂಳೆಯು ಕರಗಿ ಹೋದರೆ, ದೇಹವು ಕರಿಕುಗೊಂಡರೆ, ಚಿತ್ತಕ್ಕೆ ಸಂಕಟವಾದರೆ, ಆ ನರಗಳ ಸಮೂಹವು ಸುಕ್ಕುಗಟ್ಟಿದರೆ, ಕಣ್ಣೀರು ಹರಿಬಿದ್ದರೆ, ದೇಹದ ರಂಧ್ರಗಳಿಂದ ಶೀತದ ಸಾರವೆನಿಸಿದ ಕಫ ಮತ್ತು ರಕ್ತವು ಸುರಿದರೆ, ದೇಹದ ಮೇಲಿರುವ ಕೂದಲುಗಳ ಸಮೂಹವು ಉರಿದುಹೋದರೆ, ಕೌಲುನಾತವು ನಾರಿದರೆ, ತನ್ನ ಶ್ರೇಷ್ಠವಾದ ಧೂಮದ ಕಾಂತಿಕೆಟ್ಟರೆ ಈ ಕೆಂಡವು ಹೆಚ್ಚಾಗಿ ಉರಿಯದಿದ್ದರೆ, (ಧಗಧಗಿಸಿ ಉರಿಯದಿದ್ದರೆ), ಅಧಿಕವಾಗಿ ಧೂಪದ ಧೂಮವು ಮೇಲೇಳದಿದ್ದರೆ (ಸದಾ) ನಿನ್ನನ್ನು ಕಾಣುವ ನನ್ನ ದೃಷ್ಟಿಯ ರೀತಿಯು ನಾಶವಾದರೆ, ನಾನು ನಿನ್ನ ಭೃತ್ಯನೇ ಅಲ್ಲ ಎನ್ನುತ್ತ, ಆ ಭಕ್ತನಾದ ಓಹಿಲಯ್ಯನು ಪ್ರತಿಜ್ಞೆಯನ್ನು ಮಾಡಿ, ಕೆಂಗಿಡಿಗಳನ್ನು ಹೊರಸೂಸುತ್ತಿರುವ ಆ ಧೂಪದ ಪಾತ್ರೆಯಲ್ಲಿ ಶ್ರೇಷ್ಠರಾದ ಶಿವಭಕ್ತರುಗಳ ಪಾದಕಮಲಗಳನ್ನು ಮನಸ್ಸಿನಲ್ಲಿ ನೆನೆಯುತ್ತ ತೀಕ್ಷ್ಣಭಾವನೆಯಿಂದ (ಶೌರ್ಯಸಂಪನ್ನನಾಗಿ) ಕುಳಿತುಕೊಂಡುಬಿಟ್ಟನು. (ಆಗ) ತನ್ನ ದೇಹದ ಸಂಬಂಧದಿಂದುಂಟಾದ ಹೆಚ್ಚಾದ ಸುಗಂಧದಿಂದ ಕೂಡಿದ ಧೂಪದ ಹೊಗೆಯು ಅಧಿಕಗೊಂಡು ಲಿಂಗವನ್ನು ಸುತ್ತಿಮುತ್ತಿ, ಆ ಕೂಡಲೇ ಎಲ್ಲಾ ಕಡೆಗೂ ಹಬ್ಬಿತು. 'ಸೋಮೇಶ್ವರ, ಹರಹರ' ಎಂಬ ಶಬ್ದವು ಮುಖದಿಂದ ಹೊರಹೊಮ್ಮುತ್ತಿರಲು ಶೋಭಿಸುತ್ತಿದ್ದನು. ೧೪೬. ಆಗ ಹೊಸದಾದ ಒಂದು ಆನೆಯ ಚರ್ಮವು ಈಶ್ವರನ ದೇಹವನ್ನು ಮುಸುಕಿರುವುದೋ ಎನ್ನುವಂತೆ ಧೂಪದ ಹೊಗೆಯ ಸಮೂಹದಿಂದ ಮುಸುಕಿದ ಈಶ್ವರನು ಮನಸ್ಸಲ್ಲಿ ಹುಟ್ಟಿದ ಪ್ರೀತಿಯಿಂದ ಒಲಿದು ಅವನಿಗೆ ನಿಜರೂಪ ತೋರಿಸಿದನು. ೧೪೭. ಬಾಲಚಂದ್ರ, ಆಕಾಶಗಂಗೆ, ಜಡೆಮುಡಿ, ಪ್ರಕಾಶಿಸುವ ಅಗ್ನಿ ನೇತ್ರ, ಬ್ರಹ್ಮಕಪಾಲ, ತ್ರಿಶೂಲ, ಹಾವುಗಳ ಆಭರಣ, ಅಲ್ಲಾಡುತ್ತಿರುವ ಹಾವಿನ ಕರ್ಣಕುಂಡಲ, ಮದೋನ್ಮತ್ತವಾದ ಗಜಾಸುರನ ಚರ್ಮದುಡಿಗೆ ಇವು ಶೋಭಿಸುತ್ತಿರಲು

ಸುರಕುಜಸುಮನೋವರ್ಷಂ
ಸುರಿಯೆ ಸುರಾನಕಕದಂಬಮದು ಮೊರೆಯೆ ದಿಶಾ
ವರಹರಿವಿಧಿಗಳ್ಬದೇ
ಳ್ತರೆ ವಿಬುಧರ್ಪೊಗಳೆ ಶಂಕರಂ ಸೊಗಯಿಸಿದಂ ೧೪೮

ವ॥ ಮತ್ತಮಲ್ಲಿ—

ಫಣಿಮಣಿಕಾಂತಿ ಮಿಂಚು ಜೆಡೆ ನೀರ್ಗದಿರದ್ರಿಜೆ ತೊಟ್ಟ ರತ್ನಭೂ
ಷಣದ ಮಯೂಖಮಿಂದ್ರಧನು ತಾಳ್ದ ಗಜಾಜಿನಮಂಬುದಂ ಕರ
ಕ್ವಣದಜಮಸ್ತವೇದರವಮುಬ್ಬರವಂ ತನಗಾಗೆ ಸತ್ಕೃಪೇ
ಕ್ಷಣರುಚಿ ವೃಷ್ಟಿಯಂ ಸುರಿದನಂಬುದಕಾಲದ ಪೋಲ್ಮಹೇಶ್ವರಂ ೧೪೯

ವ॥ ಅಂತು ಕೃಪಾರಸವರ್ಷದಿನಂಗಮನಳುರ್ದ ಶಿಖಿಯಂ ನಂದವೊಯ್ದೋಹಿಲಯ್ಯನಂ ತೆಗೆದಪ್ಪಿ ಬಿಗಿಯಪ್ಪಿ ಮನ್ನಿಸಿ ಪೊಗಳ್ದು ಶೋಭನಾಂಗನಂ ನೆಗಳ್ದು ಪರಶಿವಂ ಪ್ರಮೋದಂಮಿಗೆ—

ಪ್ರಮಥಪತಿಪಟ್ಟಮಂ ಕ
ಟ್ಟಿ ಮಹೋತ್ಸವಮೆಸಗಿ ಶಂಭು ತನ್ನಯ ಸಾರೂ
ಪ್ಯಮನೀವುತೋಹಿಲಯ್ಯನ
ನಮರ್ದೊಳ್ಪಿಂ ರಜತಗಿರಿಗೆ ಕೊಂಡೊಯ್ವೆಡೆಯೊಳ್ ೧೫೦

ವರಘಂಟಾನಾದಮೇಟುಂ ದೆಸೆಯನಳುರೆ ಧೂಪಸ್ಫುರದ್ಧೂಮಮುರ್ವೀ
ಹರಲೋಕಕ್ಕಿಟ್ಟ ನಿಶ್ರೇಣಿಯುವೊಲಿರೆ ಜಯಧ್ವಾನಸಂಸಕ್ತ ಭಕ್ತೋ

ಪಾರ್ವತೀ ಪತಿಯು ಪ್ರಕಾಶಿಸಿದನು. ೧೪೮. ಆಗ ಕಲ್ಪವೃಕ್ಷದ ಪುಷ್ಪಗಳ ಮಳೆ ಸುರಿಯಿತು ; ದೇವದುಂದುಭಿಗಳ ಸಮೂಹವು ಧ್ವನಿಮಾಡಿತು ; ಅಷ್ಟದಿಕ್ಪಾಲಕರು, ವಿಷ್ಣುಬ್ರಹ್ಮರುಗಳು ಪ್ರೀತಿಯಿಂದ ಬಂದರು ; ವಿದ್ವಾಂಸರು ಹೊಗಳುತ್ತಿದ್ದರು–ಹೀಗೆ ಶಂಕರನು ಪ್ರಕಟಗೊಂಡು ಶೋಭಿಸುತ್ತಿದ್ದನು, ವ॥ ಮತ್ತು ಅಲ್ಲಿ—೧೪೯. ಸರ್ಪದ ಹೆಡೆಯಲ್ಲಿರುವ ರತ್ನದ ಕಾಂತಿಯೇ ಮಿಂಚು ; ಜಡೆಯಲ್ಲಿರುವ ಗಂಗೆಯೇ ನೀರಿನ ಕಾಂತಿ ; ಪಾರ್ವತಿಯು ಕೊಟ್ಟ ರತ್ನಖಚಿತವಾದ ಆಭರಣಗಳ ಕಾಂತಿಯೇ ಕಾಮನ ಬಿಲ್ಲು ; ಉಟ್ಟ ಆನೆಯ ಚರ್ಮವೇ ಮೋಡ ; ಕೈಯಲ್ಲಿ ಧ್ವನಿಮಾಡುತ್ತಿರುವ ಬ್ರಹ್ಮನ ಶಿರಸ್ಸಿನಿಂದ ಉಂಟಾಗುತ್ತಿರುವ ವೇದಧ್ವನಿಯೇ ಗುಡುಗು ತನಗುಂಟಾಗಿರಲು ಪರಮೇಶ್ವರನು ಆಗ ಮಳೆಗಾಲದ ಹಾಗೆ ಸತ್ಕೃಪಾಪೂರ್ಣವಾದ ನೋಟದ ಕಾಂತಿಯೆಂಬ ಮಳೆಯನ್ನು ಸುರಿಸಿದನು. ವ॥ ಆ ರೀತಿ ಕೃಪಾರಸಪೂರ್ಣವಾದ ಮಳೆಯನ್ನು ಶಿವನು ಓಹಿಲಯ್ಯನ ದೇಹವನ್ನು ಆವರಿಸಿಕೊಂಡಿರುವ ಬೆಂಕಿಯು ನಂದುವ ಹಾಗೆ ಸುರಿಸಿ, ಓಹಿಲಯ್ಯನನ್ನು ಬರಸೆಳೆದು ಬಿಗಿದು ಅಪ್ಪಿಕೊಂಡು, ಮನ್ನಣೆಮಾಡಿ, ಅವನನ್ನು ಮಂಗಳಕರವಾದ ದೇಹವುಳ್ಳವನನ್ನಾಗಿಮಾಡಿ, ಅಧಿಕ ಸಂತೋಷದಿಂದಕೂಡಿ— ೧೫೦–೧೫೧. (ಆ ಓಹಿಲಯ್ಯನಿಗೆ) ಶಂಭುವು ಪ್ರಮಥ ಶ್ರೇಷ್ಠನ ಪಟ್ಟವನ್ನು ಕಟ್ಟಿದನು. ಅತ್ಯಂತ ಸಂಭ್ರಮವನ್ನುಂಟುಮಾಡಿದನು. ತನ್ನ ಸಮಾನಸ್ವರೂಪವನ್ನು

ತ್ಕರವೊಪ್ಪಂಬೆತ್ತುಘೇಯೆಂದುಲಿಯೆ ಪುರದ ತೂರ್ಯತ್ರಯಂ ಪೊಣ್ಮೆ ಮೇಲ
ಚ್ಚರಿಯುರ್ಮುದಾಡೆ ದೇವಪ್ರತತಿ ಪೊಗಳೆ ತದ್ಭಕ್ತನೆಯ್ದುತ್ತುಮಿರ್ದಂ ೧೫೧

ವ॥ ಆ ಗೌಳತಪಸ್ವಿಗಳಾ ಮಹಾತ್ಮನ ಮಹಿಮೆಗಂಡಳ್ಕಿ ಬಳ್ಕಿ ದೈನ್ಯಂ ಬೆರಸು ಧರಣಿಯೊಳ್ಸೈಗೆಡೆದು ಶರಣ್ಬೊಕ್ಕು ಮಿಕ್ಕು—

ವರಸುಗುಣಹಾರ ಕರುಣಾ
ಕರ ಕಲಿಮಲದೂರ ಸಾರವೈರಾಗ್ಯಪರಿ
ಸ್ಫುರಿತಶಿವಭಕ್ತಿಸುದೃಢಾ
ಚರಿತ ಶಿವಾನಂದಸಾಂದ್ರ ಜಯ ಭವರಹಿತಾ ೧೫೨

ವ॥ ಎಂದು ಮತ್ತೆ ಮತ್ತೆ ಪೊಗಳ್ದೋಹಿಲಯ್ಯನಿನಭಯಂಬಡೆದಿರ್ದರಾ ಪ್ರಸ್ತಾವದೊಳ್—

ಸಡಗರದಿಂ ಪೋದಪನಾ
ಮೃಡಲೋಕಕ್ಕೋಹಿಲಯ್ಯನೆನಗವನಂ ಕಂ

(ಸಾರೂಪ್ಯವನ್ನು) ಕೊಡುತ್ತ ಆ ಓಹಿಲಯ್ಯನನ್ನು ಒಡಗೊಂಡು ಪ್ರೀತಿಯಿಂದ ಕೈಲಾಸಪರ್ವತಕ್ಕೆ ಹೋಗುವ ಕಾಲದಲ್ಲಿ ಶ್ರೇಷ್ಠವಾದ ಗಂಟೆಯ ನಾದವು ಎಂಟೂ ದಿಕ್ಕುಗಳನ್ನು ಆವರಿಸಿತು ; ಹರಡುತ್ತಿರುವ ಧೂಪದ ಹೊಗೆಯು ಪ್ರಳಯಕಾಲದಲ್ಲಿ ಭೂಮಿಯನ್ನೆಲ್ಲ ನಾಶಮಾಡುವ ಶಿವನ ಲೋಕಕ್ಕೆ ಹಾಕಿದ ನಿಚ್ಚಣಿಕೆಯೋ ಎಂಬಂತಾಗಿತ್ತು, ಜಯ ಜಯ ಧ್ವನಿಯಿಂದ ಕೂಡಿದ ಶಿವಭಕ್ತರುಗಳ ಸಮೂಹವು, ಮನೋಹರವಾಗಿ ಉಘೇ, ಉಘೇ. ಎಂದು ಕೂಗುತ್ತಿತ್ತು. ಆ ಸೌರಾಷ್ಟ್ರ ಪಟ್ಟಣದಲ್ಲಿ ನೃತ್ಯ, ಗೀತವಾದ್ಯ (ತೂರ್ಯತ್ರಯ)ಗಳು ಹೊರಹೊಮ್ಮುತ್ತಿದ್ದವು : ಮೇಲೆ ಆಕಾಶದಲ್ಲಿ ಅಪ್ಸರಸ್ತ್ರೀಯರು ಪ್ರೀತಿಗೊಳ್ಳುತ್ತಿದ್ದರು ; ದೇವತಾಸಮೂಹವು ಹೊಗಳುತ್ತಿತ್ತು (—ಹೀಗೆ ಆ ಓಹಿಲಯ್ಯನು ಹೋಗುತ್ತಿದ್ದನು. ವ॥ ಆಗ ಆ ಗೌಳ ತಪಸ್ವಿಗಳು ಆ ಮಹಾತ್ಮನಾದ ಓಹಿಲಯ್ಯನ ಮಹಿಮೆಯನ್ನು ಕಂಡು, ಅಳುಕಿ ಬಳುಕಿದವರಾಗಿ ದೈನ್ಯ ಧ್ವನಿಯಿಂದ ಕೂಡಿ, ನೆಲದಮೇಲೆ ಅಡ್ಡಬಿದ್ದು, ಅತಿಶಯವಾಗಿ ಶರಣು ಹೊಕ್ಕವರಾಗಿ ೧೫೨. ಶ್ರೇಷ್ಠ ಸದ್ಗುಣಗಳ ಹಾರವುಳ್ಳವನೇ, ಕರುಣಾಶಾಲಿಯೇ, ಕಲಿಕಾಲದ ಪಾಪಗಳನ್ನು ದೂರಗೊಳಿಸಿದವನೇ (ಅಥವಾ—ಸಮರ್ಥವಾದ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳನ್ನು ದೂರಗೊಳಿಸಿದವನೇ), ಶ್ರೇಷ್ಠ ವೈರಾಗ್ಯಶಾಲಿಯೇ, ಅದ್ಭುತ ಶಿವಭಕ್ತಿಯನ್ನು ಪ್ರಕಟಗೊಳಿಸಿದವನೇ, ಸ್ಥಿರವಾದ ಚರಿತ್ರೆಯುಳ್ಳವನೇ, ಬ್ರಹಾನಂದ ಪರಿಪೂರ್ಣನೇ, ಭವರಹಿತನಾದವನೇ (ಓಹಿಲಯ್ಯನೇ) ಜಯ ವ॥ ಹೀಗೆಂದು ಪುನಃ ಪುನಃ ಹೊಗಳಿ, ಆ ಓಹಿಲಯ್ಯನಿಂದ ಅಭಯವನ್ನು ಪಡೆದವರಾಗಿದ್ದರು. ಆ ಸಮಯದಲ್ಲಿ—(ಪಾಲಗುರ್ಜರರಾಜನು ತನ್ನ ಹೆಂಡತಿಯನ್ನು ಕುರಿತು) ೧೫೩. 'ಚಂದ್ರಮುಖಿಯೇ. ಹೀಗೆ ಓಹಿಲಯ್ಯನು ಸಡಗರದಿಂದ ಶಿವಲೋಕಕ್ಕೆ

ಡೊಡನೆ ನಗೆ ನೆಗಳ್ದುದೆಂತೆನೆ
ಜಡರುಹರಿಪುವದನೆ ಪೇಳ್ವೆನೆಂದಿಂತೆಂದಂ ೧೫೩

ಘನನಿಷ್ಠಾಭಾವದಿಂ ದುಷ್ಕರತರತಪಮಂ ತಾಳ್ದುಮುಗ್ರವ್ರತಂಗೊಂ
ಡೆನಸುಂ ಸೋಮೇಶನಂ ಮೆಚ್ಚಿಸಿ ಹರ ಹರ ತಾನೊರ್ವನೇ ಪೋದಪಂ ಮ
ರ್ತ್ಯನಿಕಾಯಂ ಪಟ್ಟಣಂಗಳ್ವೆರಸಿ ತಳರದಿಂತೊರ್ವನೇ ಪೋಪ ಕಜ್ಜ
ಕ್ಕಿನಿತೊಂದಾಯಾಸಮೇಕೆಂದೆನುತೆ ಬಗೆದಣಂ ನಕ್ಕೆನಂಭೋಜನೇತ್ರೇ ೧೫೪

ವ॥ ಎಂದು ನಿಜರಮಣಂ ನಗೆಗೆ ಕಾರಣಮನಱುಪೆ ರಮಣಿ ಕೇಳ್ದು ವಿಸ್ಮಯಂದಾಳ್ದು ವಿಯತ್ತಳದೊಳನಿಮಿಷೇಕ್ಷಣದಿನಱಸಿ ನೋಡಿಯುಂ ಕಾಣದರಸನಡಿದಳಿರ್ಗೆಱಗಿ—

ಅವ ಕಡೆಯಾದ ಮುಗಿಲೆಡೆ
ಯಾವ ದಿಶಾಭಾಗಮಾವ ಪವಣೊಳ್ಪೆಕ್ತಂ
ಭೂವರ ತಳರ್ದಪನಱುಪೆಂ
ದಾ ವಿಧುಮುಖಿ ಕೇಳೆ ನಗುತೆ ನೃಪನಿಂತೆಂದಂ ೧೫೫

ಘನಘಂಟಾರುತಿ ಕೇಳಲಾದಪುದದೆತ್ತಂ ಕಾಂತೆ ನೋಡತ್ತ ನೀ
ನೆನೆ ತತ್ಕಾಮಿನಿ ಮೆಲ್ಲನಾಲಿಸಿ ತದೀಯಧ್ವಾನಮಂ ನೇರ್ಪುಗೊಂ

ಹೋದನು. ನನಗೆ ಅವರನ್ನು ಕಂಡು ಕೂಡಲೇ ನಗೆ ಬಂದಿತು–ಹೇಗೆಂದರೆ ಹೇಳುತ್ತೇನೆ ಕೇಳು' : ಎಂದು ಈ ರೀತಿಯಲ್ಲಿ ತಿಳಿಸಿದನು : ೧೫೪. 'ಎಲೈ ಕಮಲ ನೇತ್ರೆಯೇ, ಅತ್ಯಂತ ನಿಷ್ಠೆಯಿಂದ ಕೂಡಿದ ಭಾವನೆಯಿಂದ ಅತ್ಯಂತ ಅಸಾಧ್ಯವಾದ ತಪಸ್ಸನ್ನು ಆಚರಿಸಿಯೂ, ಅಧಿಕವಾದ ಉಗ್ರವ್ರತವನ್ನು ಸ್ವೀಕರಿಸಿ, ಸೋಮೇಶ್ವರನನ್ನು ಮೆಚ್ಚಿಸಿ ತಾನೊರ್ವನೇ ಕೈಲಾಸಕ್ಕೆ ಹೋದನು ! ಹರಹರ !! ಮನುಷ್ಯ ಸಮೂಹ, ಪಟ್ಟಣಗಳು ಸಹಿತವಾಗಿ ಹೋಗದೆ ಈ ರೀತಿ ಒಬ್ಬನೇ ಹೋಗುವ ಕಾರ್ಯಕ್ಕೆ ಇಷ್ಟೊಂದು ಆಯಾಸವೇತಕ್ಕೆ ? ಹೀಗೆಂಬುದಾಗಿ ಯೋಚನೆಮಾಡಿ ಸ್ವಲ್ಪ ನಕ್ಕೆನು.' ವ॥ ಹೀಗೆಂದು ತನ್ನ ಪತಿಯಾದ ಪಾಲಗುರ್ಜರನು ನಗೆಯಾಡುವುದಕ್ಕೆ ಕಾರಣವನ್ನು ಹೇಳಲಾಗಿ, ಹೆಂಡತಿಯು ಕೇಳಿ, ಆಶ್ಚರ್ಯಗೊಂಡವಳಾಗಿ, ಆಕಾಶಮಾರ್ಗದಲ್ಲಿ ಕಣ್ಣು ಮಿಟುಕಿಸದಂತೆ ಹುಡುಕುತ್ತ (ಆ ಓಹಿಲಯ್ಯನನ್ನು) ನೋಡಿ ಕಾಣದೆ ತನ್ನ ಪತಿಯ ಚಿಗುರಿನಂತಿರುವ ಪಾದಗಳಿಗೆ ನಮಸ್ಕರಿಸಿ—೧೫೫. 'ಮಹಾರಾಜಾ, ಯಾವ ಕಡೆಗೆ, ಯಾವ ಮುಗಿಲಿನ ಕಡೆಗೆ, ಯಾವ ದಿಕ್ಕುಗಳತ್ತ, ಯಾವ ಪ್ರಮಾಣ (ಯಾವ ರೀತಿ) ದಲ್ಲಿ ಹೋದನು ? ತಿಳಿಸು' ಎಂದು ಆ ಚಂದ್ರಮುಖಿಯು ಕೇಳಲಾಗಿ ನಗುತ್ತ ಅರಸನು ಹೀಗೆ ಹೇಳಿದನು : ೧೫೬. 'ಕಾಂತೆಯೇ, ಘನವಾದ ಗಂಟೆಯ ಶಬ್ದವು ಯಾವ ಕಡೆಯಿಂದ ಕೇಳಿಬರುತ್ತಿರುವುದೋ ನೀನು ಆಕಡೆಗೆ ನೋಡು.' ಎನ್ನಲು ಆ ಕಾಮಿನಿಯು ಮೆಲ್ಲನೆ ಗಂಟೆ ಧ್ವನಿಯಾಗುತ್ತಿರುವುದನ್ನು ಆಲಿಸುತ್ತ, ಅತ್ತಕಡೆಗೇ ನೇರವಾಗಿ ದಿವ್ಯ

ದನುಸಂಧಾನದೆ ನೋಡಿ ಕಂಡಳಿನತೇಜೋವಿಸ್ಫುರತ್ಪಾವನಾಂ
ಗಗನಭ್ರಾಂತರದೊಳ್ ಶಿವಾಧವದಯಾಸಂಪ್ರ[1]ಕ್ತನಂ ಭಕ್ತನಂ ೧೫೬

ಕಂಡಧಿಕ ಸಂಭ್ರಮಮನೊಳ
ಕೊಂಡಚ್ಚರಿವಟ್ಟು ಕಾಂತೆ ಮೆಯ್ಯಿಕ್ಕಿ ಮಹೀ
ಮಂಡಲದೊಳೋಹಿಲಯ್ಯನ
ಕೊಂಡಾಡುತೆ ತನ್ನ ಗಂಡನೊಡನಿಂತೆಂದಳ್ ೧೫೭

ಭಸಿತಮನೊಲ್ದು ಮೆಲ್ದು ತಪಮಾಂತು ನಿಜಾಂಗತುಲಾರ್ಹಗುಗ್ಗುಳ
ಪ್ರಸರದ ಧೂಪಮಿತ್ತು ಮಗುಳ್ದಂಗಮನಗ್ನಿಯೊಳಿಟ್ಟು ತತ್ಸುಗಂ
ಧಿ[2] ಸರಸಧೂಪಮಂ ಸಲಿಸಿ ಮೆಚ್ಚಿಸಿ ಶಂಭುವನಾ ಗಣಂಗಳೊ
ಲ್ದೊಸಗೆಯುನಾಳ್ದಿದಿರ್ವಡೆಯೆ ಪೋದಪನೀಶ್ವರಲೋಕಕೋಹಿಲಂ ೧೫೮

ನಿಜಕಾಯಸಹಿತಮೀವನಂ
ತೆ ಜಗತ್ರಯದಲ್ಲಿ ವಹ್ನಿಯಂ ಜಯಿಸುತ್ತುಂ
ಭುಜಗಾಭರಣನ ಭಕ್ತ
ವ್ರಜದೊಳ್ಕೈಲಾಸಕಿಂತು ನಡೆದರುಮೊಳರೇ ೧೫೯

ನುಡಿದಂತೆ ನಡೆದು ತೋಱಿದ
ಬೆಡಂಗನೋಹಿಲನಿವಂಗೆ ದೊರೆಯಾರೆನುತುಂ

ಜ್ಞಾನ ಸಂಬಂಧದಿಂದ ನೋಡುತ್ತ, ಆಕಾಶ ಮಧ್ಯದಲ್ಲಿ ಸೂರ್ಯಪ್ರಕಾಶದಂತೆ ಪ್ರಕಾಶಿಸುವ ಪರಿಶುದ್ಧ ದೇಹದಿಂದ ಕೂಡಿದ ಪರಮೇಶ್ವರನ ಕೃಪೆಯೆಂಬ ಜಲದಿಂದ ತೊಯ್ದು ಹೋದ (ಆ ಓಹಿಲಯ್ಯನೆಂಬ) ಭಕ್ತನನ್ನು ನೋಡಿದಳು. ೧೫೭. ಆ ಕಾಂತೆಯು ಹೀಗೆ ಕಂಡು, ಸಂಭ್ರಮವಿಶಿಷ್ಟಳಾಗಿ, ಆಶ್ಚರ್ಯಪಟ್ಟು, ಭೂಮಿಯಲ್ಲಿ ಮೈಯಿಕ್ಕಿ ನಮಸ್ಕರಿಸಿ, ಓಹಿಲಯ್ಯನನ್ನು ಕೊಂಡಾಡುತ್ತ, ತನ್ನ ಗಂಡನೊಡನೆ ಹೀಗೆ ಹೇಳಿದಳು : ೧೫೮–೧೬೦. 'ಓಹಿಲದೇವನು ಭಸ್ಮವನ್ನೇ ತಿಂದು, ತಪಸ್ಸುಮಾಡಿ, ತನ್ನ ದೇಹ ತೂಕಕ್ಕೆ ಸಮಾನವಾದ ತೂಕದ ಗುಗ್ಗುಳದ ಧೂಮವನ್ನು ಶಿವನಿಗೆ ಸಮರ್ಪಣೆಮಾಡಿ, ಪುನಃ ಬೆಂಕಿಯಲ್ಲಿ ತನ್ನ ದೇಹವನ್ನೇ ಸಲ್ಲಿಸಿ, ಅಂಥ ದೇಹವೆಂಬ ಧೂಪದ ಮನೋಹರವಾದ ಪರಿಮಳವನ್ನು ಸಮರ್ಪಣೆಮಾಡಿ, ಶಂಭುವನ್ನು ಮೆಚ್ಚಿಸಿ ಶಿವಗಣಗಳೆಲ್ಲ ಒಲಿದು ಉತ್ಸವವನ್ನು ಹೊಂದಿ ಮುಂದೆ ಮುಂದೆ ನಡೆಯುತ್ತಿರಲು ಈಶ್ವರ ಲೋಕಕ್ಕೆ ಹೋಗುತ್ತಿರುವನು; ಈ ಮೂರೂ ಲೋಕಗಳಲ್ಲಿರುವ ಪರಮೇಶ್ವರನ ಭಕ್ತಸಮೂಹದಲ್ಲಿ ಇವನಂತೆ ಅಗ್ನಿಯನ್ನು ಜಯಿಸಿ ಶರೀರಿಯಾಗಿ

---

1 ಪ್ರೋ (ಅ) 2 ಧ (ಮ)

ನುಡಿಯೆ ನಿಜರಮಣಿಗರಸಂ
ಜಡಮತಿ ಕೇಳೆಂದು ನಗುತೆ ಮಗುಳ್ದಿಂತೆಂದಂ ೧೬೦

ಹರಭಕ್ತರ್ಗಿದು ಗಹನಮೆ
ತರಳೆ ಶಿವೈಕ್ಯರ್ಕಳಿಂದೆ ಶಿಖಿ ಘನಮೆ ಮಹಾ
ಧ್ವರದೊಳ್ ಶಿಖಿಜಿಹ್ವೆಗಳಂ
ಕರಮುಮನೇಂ ಕಡಿದು ಮೆಱೆಯನೇ ಗಣನೊರ್ವಂ ೧೬೧

ಪ್ರಲಯೋಗ್ರಜ್ವಾಲೆಯುಂ ತಾಳನೆ ಗಣವರನೊರ್ವಂ ಲಲಾಟಾಕ್ಷಿಯೊಳ್ಗ
ಲ್ಗಲನೊರ್ವಂ ಬಾಡಬೋಪರ್ಬುಧನನಳಿಕದೊಳ್ತೊಟ್ಟುಗೆಯ್ದಾನನೇ ನಿ
ಶ್ಚಲಚಿತ್ತಂ ದಾಸಿಮಯ್ಯಂ ತಳೆಯನೆ ಪಣೆಗಣ್ಣೊಳ್ಮಹಾವಹ್ನಿಯ ಮಂ
ಜುಲವೃತ್ತಂ ವಾದದೊಳ್ಪಾವಕನ ವಸನದೊಳ್ ಕಟ್ಟನೇ ಪಂಡಿತಾರ್ಯಂ ೧೬೨

ಏಗೆಯ್ದುದಾವರಿಸಿ ಶಿಖಿ
ಯೋಗೀಶ ವ್ಯಾಘ್ರಪಾದಸುತನಂ ಜ್ವಳನಂ
ವಾಗೀಶಂಗೆ ಸರೋವರ
ಮಾಗದೆ ಶಿವಭಕ್ತವಿತತಿಗಂಜುಗುಮನಲಂ ೧೬೩

ವ॥ ಅದಲ್ಲದೆಯುಮುಮಂ ನಿಜಾಂಗಮಂ ಮಹಿಪಾಕ್ಷಿಗುರ್ಗುಳಂಗೆಯ್ದನೆಂದು ಪೊಗಳ್ವೆಯಪ್ಪೊಡೆ—

ಕೈಲಾಸಕ್ಕೆ ಈ ರೀತಿ ಹೋಗತಕ್ಕವರಾದರೂ ಉಂಟೆ ? ಓಹಿಲದೇವನು ನುಡಿದಂತೆ ನಡೆದು, ವೈಭವವನ್ನು ತೋರಿಸಿದನು. ಇವನಿಗೆ ಸಮಾನರಾದವರು ಯಾರು ?' ಎಂದು ನುಡಿಯಲು–ಪಾಲಗುರ್ಜರ ರಾಜನು. 'ಮೂಢಬುದ್ಧಿಯುಳ್ಳವಳೇ ಕೇಳು' ಎಂದು ನಗುತ್ತ, ತನ್ನ ಹೆಂಡತಿಗೆ ಪುನಃ ಹೀಗೆ ಹೇಳಿದನು : ೧೬೧. 'ಎಲೆ ತರಳೆಯೇ ಹರನ ಭಕ್ತರಿಗೆ ಇದೊಂದು ಗಹನ ವಿಚಾರವೇ ? ಶಿವನೊಡನೆ ಸಾಮರಸ್ಯವನ್ನು ಹೊಂದಿರು ವವರಿಗಿಂತಲೂ ಅಗ್ನಿಯೇನು ದೊಡ್ಡವನೇ ? ದಕ್ಷಬ್ರಹ್ಮನ ಮಹಾಯಜ್ಞದಲ್ಲಿ ಒಬ್ಬ ಶಿವಗಣನು ಅಗ್ನಿಯ ನಾಲಿಗೆಯನ್ನೂ, ಹಸ್ತವನ್ನೂ ಕತ್ತರಿಸಿ ಮೆರೆಯಲಿಲ್ಲವೆ ?' ೧೬೨. 'ಒಬ್ಬ ಶಿವಗಣನು ತನ್ನ ಹಣೆಗಣ್ಣಿನಲ್ಲಿ ಪ್ರಳಯಕಾಲದಲ್ಲಿರುವಂತೆ ಭಯಂಕರ ವಾದ ಅಗ್ನಿಯನ್ನು ಧರಿಸಿರಲಿಲ್ಲವೇ ? ಇನ್ನೊಬ್ಬ ಶಿವಗಣನು ಗಲಗಲನೆ ಬಡಬಾಗ್ನಿ ಯನ್ನು ತಿಲಕವನ್ನಾಗಿ ಮಾಡಿ ಹಣೆಯಲ್ಲಿ ಹಚ್ಚಿಕೊಳ್ಳಲಿಲ್ಲವೇ ? ನಿಶ್ಚಲಚಿತ್ತನಾದ ಶಂಕರದಾಸಿಮಯ್ಯನು ತನ್ನ ಹಣೆಗಣ್ಣಿನಲ್ಲಿ ಭಯಂಕರಾಗ್ನಿಯನ್ನೂ ಧರಿಸಲಿಲ್ಲವೇ ? ಮನೋಹರ ಚರಿತ್ರೆಯುಳ್ಳ ಪಂಡಿತಾರಾಧ್ಯನು ಸಿದ್ಧಾಂತವನ್ನು ಸ್ಥಾಪಿಸುವ ಸಮಯ ದಲ್ಲಿ ಅಗ್ನಿಯನ್ನು ಬಟ್ಟೆಯಲ್ಲಿ ಕಟ್ಟಲಿಲ್ಲವೇ ?' ೧೬೩. 'ಋಷಿ ಶ್ರೇಷ್ಠನಾದ ವ್ಯಾಘ್ರ ಪಾದನ ಕುಮಾರನನ್ನು (ಉಪಮನ್ಯುವನ್ನು) ಬೆಂಕಿಯು ಆವರಿಸಿ, ಏನು ಮಾಡಿತು ? ವಾಗೀಶರಿಗೆ ಬೆಂಕಿಯು ಸರೋವರವಾಗಲಿಲ್ಲವೇ ? ಬೆಂಕಿಯು ಶಿವಭಕ್ತರಿಗೆ ಅಂಜು ವುದು.' ವ॥ 'ಅದೂ ಅಲ್ಲದೆ ಆ ಓಹಿಲಯ್ಯನು ತನ್ನ ಶರೀರವನ್ನು ಮಹಿಪಾಕ್ಷಿ

ದಾಸಯನಾತ್ಮಜಾತಕರದಿಂದೆ ತುಡುಂಕಿಸಿ ಪುತ್ತ ಪಾವನು
ಲ್ಲಾಸದೆ ಪೊನ್ನನೇವಳಮನಾಗಿಸನೇ ಕೊಜ[3]ದಿಕ್ಕಿ ಖಂಡಮಂ
ಸಾಸಿಗ ಮಾಚನಗ್ನಿಯೊಳೆ ಗುರ್ಗುಳವಂ ಮಿಗೆ ಮಾಡನೇ ಗಣಾ
ಗ್ರೇಸರರಿಂತುಟಪ್ಪರೊಳರೀ ಧರೆಯೊಳ್ಪಲರುನ್ನತವ್ರತರ್ ೧೬೪

ಮಿಸುಪೆಣ್ಬತ್ತು ಸಹಸ್ರವಾಜಿಗೆ ಲಸದ್ರುದ್ರಾಕ್ಷೆಯಿಂ ಪಕ್ಷರ
ಕ್ಷೆಸಮಂತೊಪ್ಪಿರೆ ಚೇ[1]ರಮಕ್ಷಿತಿಪನಾಕಾಶಕ್ಕೆ ಧೀಂಕಿಟ್ಟು ವಾ
ಜಿಸಮೇತಂ ಸುರರಳ್ಕೆ ನಿರ್ಭರದೆ ಕೈಲಾಸಕ್ಕೆ ದಾಳಿಟ್ಟನಂ
ದು ಸತೀಬಂಧು ಸಖಾಳಿಗೂಡಿ ಶಿವಲೋಕಂಬೊಕ್ಕನಾ ಸೌಂದರಂ ೧೬೫

ಮಗಳಳಿಯನಾತ್ಮವಲ್ಲಭೆ
ನೆಗಳ್ದೊಡವರೆ ಮಾನಕಂಜನೆಯ್ದನೆ ತಾರಾ
ನಗಮಂ ಪರಿಜನಸಹಿತಂ
ಪುಗನೆ ವಲಂ ಮಲಯುರಾಜನೀಶ್ವರಪುರಮಂ ೧೬೬

ಹರನೊಳ್ಪೌರಪ್ರಯುಕ್ತಂ ಪುಗನೆ ಘನತಿರುಜ್ಞಾನಸಂಬಂಧನಿಂತಾ
ದ್ಯರನಂತರ್ಪೋದರುಂಟೀಶ್ವರಪುರಕಿವನೇವಾಳ್ತೆ ತಾನೊರ್ವನೇ ಪೋ

ಯೆಂಬ ಗುಗ್ಗುಳವನ್ನಾಗಿ ಮಾಡಿದನೆಂದು ಹೊಗಳುವೆಯಾದರೆ—' ೧೬೪. 'ದಾಸಯ್ಯನು ತನ್ನ ಮಗನ ಕೈಯಿಂದ ಹುತ್ತದಲ್ಲಿದ್ದ ಹಾವನ್ನು ಹಿಡಿಸಿ, ಉಲ್ಲಾಸದಿಂದ ಚಿನ್ನದ ಮಾಲಿಕೆಯನ್ನಾಗಿ ಮಾಡಲಿಲ್ಲವೇ ? ಸಾಹಸಿಯಾದ ಮಾಚಯ್ಯನು ಅಗ್ನಿಯಲ್ಲಿ ಮಾಂಸವನ್ನು ಕತ್ತರಿಸಿ ಹಾಕಿ, ಗುಗ್ಗುಳವನ್ನಾಗಿ ಮಾಡಲಿಲ್ಲವೇ ? ಈ ಲೋಕದಲ್ಲಿ ಈ ಪ್ರಕಾರವಾಗಿ ಶ್ರೇಷ್ಠವ್ರತವನ್ನು ಆಚರಿಸಿದವರು ಅನೇಕರಿರುವರು.' ೧೬೫. ಚೇರಮರಾಜನು ಶೋಭಿಸುವ ತನ್ನ ಎಂಬತ್ತುಸಾವಿರ ಕುದುರೆಗಳಿಗೆ ಶೋಭಿಸುವ ರುದ್ರಾಕ್ಷಿಗಳು ಚೆನ್ನಾಗಿ ಶೋಭಿಸುತ್ತಿರಲು ಆ ಕುದುರೆ ಸಮೇತವಾಗಿ ಆಕಾಶಕ್ಕೆ ಹಾರಿ ದೇವತೆಗಳೆಲ್ಲ ಭಯಪಡುವಂತೆ ಕೈಲಾಸಕ್ಕೇ ದಾಳಿಯನ್ನಿಕ್ಕಿದನು. ಸೌಂದರ ನಂಬಿಯಣ್ಣನು, ಹಿಂದೆ ಹೆಂಡತಿ, ಬಂಧುಗಳು, ಸ್ನೇಹಿತರು ಸಮೇತವಾಗಿ ಶಿವಲೋಕವನ್ನು ಹೊಕ್ಕನು.' ೧೬೬–೧೬೭. 'ಮಾನಕಂಜರರಾಯನು ಮಗಳೂ, ಅಳಿಯನೂ, ತನ್ನ ಹೆಂಡತಿಯೂ ಜೊತೆಯಲ್ಲೇ ಬರುತ್ತಿರಲು ಕೈಲಾಸಾದ್ರಿಯನ್ನು ಹೊಂದಲಿಲ್ಲವೇ ? ಮಲಯುರಾಜನು ಸೇವಕ ಜನಸಹಿತವಾಗಿ ಈಶ್ವರನ ನಗರವನ್ನು ಚೆನ್ನಾಗಿ ಪ್ರವೇಶ ಮಾಡಲಿಲ್ಲವೇ ? ಎಲೈ ಕಮಲನೇತ್ರೆಯೇ, ಶ್ರೇಷ್ಠನಾದ ತಿರುಜ್ಞಾನ ಸಂಬಂಧನು ಪಟ್ಟಣದ ಜನಗಳು ಸಮೇತವಾಗಿ ಹರನಲ್ಲಿ ಪ್ರವೇಶಿಸಲಿಲ್ಲವೇ ? ಈ ರೀತಿ ಅನಂತ

1 ಚಾ (ಮು)

ಪಿರವಿಂಗೇಕಿಂತುಟೀ ಸಂಭ್ರಮಮಮಮ ಮಹಾಘಂಟೆಯಂ ಬಾಜಿಸುತ್ತುಂ
ಭರದಿಂ ಪೋದಪ್ಪನಂತಲ್ಲದೆ ಮೆಱೆಯದೆ ಪೇಳ್ತನ್ನ ಪೆಂಪಂಬುಜಾಕ್ಷೀ ೧೬೭

ವ॥ ಎಂದರಸನೋಹಿಲಯ್ಯಂಗೆ ಪೆರ್ಮೆಯಂ ತಗುಳ್ಚಿ ನೀಂ ಮಿಗೆ ಪೊಗಳ್ವುದನುಚಿತಮಕ್ಕುಮೆಂದೇಳಿದಂಗೆಯ್ಯೆ ವಲ್ಲಭನ ನುಡಿಯನುಲ್ಲಂಘಿಸಿ ತಿರಸ್ಕರಣಂಗೆಯ್ದುರಸಿಯಿಂತೆಂದಳ್—

ಅವನೆಂದುಂ ಜಿತಕಾಮನುರ್ವಿಪ ವಲಂ ನೀಂ ಕಾಮಿ ಸಂಸಾರಬಂ
ಧವಿಮುಕ್ತಂ ನೆಗಳ್ದಾ ಮಹಾಸುಮತಿ ನೀಂ ಸಂಸಾರಯುಕ್ತಂ ಸದಾ
ಶಿವಪೂಜಾಭಿರತಂ ಗಡಾತನೆಲ ನೀಂ ದ್ಯೂತಾನುರಕ್ತಂ ಗಣ
ಪ್ರವರಂ ಯೋಗಿಯಮಂ ನರಾಧಿಪ ನಿತಾಂತಂ ಭೋಗಿ ನೀಂ ಧಾತ್ರಿಯೊಳ್ ೧೬೮

ಅಕ್ಕಟ ನಿನ್ನಿರವಱಿಯದೆ
ಮುಕ್ಕಣ್ಣನ ಭಕ್ತವರ್ಯನೆನಿಪ್ಪೋಹಿಲನಂ
ಟಿಕ್ಕರಿಗಳೆದಪೆ ನಿನಗೇಂ
ತಕ್ಕುದೆ ಪೇಳ್ನೃಪತಿ ನಿನ್ನನೇನೆಂದಪುದೋ ೧೬೯

ವ॥ ಎಂದಾ ಮಹಾಮಹಿಮನಂ ಲಘುಮಾಡಿ ನುಡಿಯದಿರೆಂದ ನಲ್ಲಳ ನುಡಿಗೆ ನರೇಂದ್ರಂ ಮುಗುಳ್ನಗೆ ನಕ್ಕು—

ಪುರಾತನರು ಈಶ್ವರನ ಪಟ್ಟಣಕ್ಕೆ ಹೋದವರುಂಟು. ಇವನಾವ ಲೆಕ್ಕ ? ತಾನೊಬ್ಬನೇ ಹೀಗೆ ಹೋಗುತ್ತಿರುವ ಇಷ್ಟೊಂದು ಈ ಸಂಭ್ರಮವೇತಕ್ಕೆ ? ಅಮಮ ; ಮಹಾಗಂಟೆಯನ್ನು ಬಾರಿಸುತ್ತ ವೇಗವಾಗಿ ಹೋಗುತ್ತಿದ್ದಾನೆ. ಹಾಗಲ್ಲದೆ ತನ್ನ ಹಿರಿಮೆಯು ಮೆರೆಯುತ್ತಿದ್ದಿಲ್ಲವೇ? ಹೇಳು.' ವ॥ ಎಂದು ಆ ಪಾಲಗುರ್ಜರರಾಜನು ಓಹಿಲಯ್ಯನಿಗೆ ದೊಡ್ಡಸ್ತಿಕೆಯನ್ನುಂಟುಮಾಡುತ್ತ ನೀನು ಅತಿಶಯವಾಗಿ ಹೊಗಳುವುದು ಅನುಚಿತವಾಗುವುದು ಎಂದು ತಿರಸ್ಕರಿಸಿ ನುಡಿಯಲು, ಅವನ ಹೆಂಡತಿಯು ಆ ಗಂಡನ ಮಾತುಗಳನ್ನು ಮಿಕ್ಕಿ ತಿರಸ್ಕಾರಮಾಡಿ, ಹೀಗೆ ಹೇಳಿದಳು ; ೧೬೮–೧೬೯. 'ಹೇ ಉರ್ವೀಪತಿಯೇ, ಭೂಮಿಯಲ್ಲಿ ಆ ಓಹಿಲಯ್ಯನು ಸದಾ ವಿಷಯೇಚ್ಛೆಯನ್ನು ಜಯಿಸಿದವನು, ನೀನಾದರೋ ಸಕಾಮಿ. ಪ್ರಸಿದ್ಧನಾದ ಆ ಸದ್ಬುದ್ಧಿಯ ಓಹಿಲಯ್ಯನು ಸಂಸಾರ ಬಂಧನದಿಂದ ವಿಮುಕ್ತಿಗೊಂಡವನು, ನೀನಾದರೋ ಸಂಸಾರಯುಕ್ತನು. ಅವನು ಸದಾ ಶಿವಪೂಜೆಯಲ್ಲಿ ಆಸಕ್ತನಾದವನಲ್ಲವೇ ? ಎಲೈ ನೀನು ದ್ಯೂತದಲ್ಲಿ (ಪಗಡೆಯಾಟದಲ್ಲಿ) ಆಸೆಯುಳ್ಳವನು. ಶಿವಗಣದಲ್ಲಿ ಶ್ರೇಷ್ಠನೆನಿಸಿದ ಅವನು ಸಂನ್ಯಾಸಿಯು, ಮಹಾರಾಜ, ನೀನಾದರೋ ಭೋಗ ಸುಖಾಪೇಕ್ಷಿ. ಅಕ್ಕಟ, ಹೇ ಮಹಾರಾಜನೇ, ನೀನು ನಿನ್ನರೀತಿಯನ್ನೇ ತಿಳಿಯದೆ ಮುಕ್ಕಣ್ಣನ ಭಕ್ತನೆನಿಸಿದ ಆ ಓಹಿಲಯ್ಯನನ್ನು ತಿರಸ್ಕಾರಮಾಡುತ್ತಿದ್ದೀಯೆ. ಇದು ನಿನಗೆ ಯೋಗ್ಯವಾದುದೇ ? ಹೇಳು. ನಿನ್ನನ್ನು ಏನು ಹೇಳಬೇಕೋ (ತಿಳಿಯದು)' ! ವ॥ ಹೀಗೆ ಹೇಳುತ್ತ 'ಆ ಮಹಾ ಮಹಿಮನಾದ ಓಹಿಲಯ್ಯನನ್ನು ಲಘುಮಾಡಿ ನುಡಿಯಬೇಡ'ವೆಂದು ಹೇಳಿದ ಹೆಂಡತಿಯ ಮಾತಿಗೆ ಆ ಪೌಲ ಗುರ್ಜರ

ಆನೆಂದ ಭಕ್ತಿಮಾರ್ಗನ
ಮೀನೋಕ್ತಿಯ ಪುರುಳನಮಳ ಭಕ್ತರ ಬಗೆಯುಂ
ನೀನಱಿಯದುಲಿವೆ ಕೇಳೆಲೆ
ಮಾನಿನಿ ಹರಶರಣರಳವದೇಂ ಕೇವಳಮೇ ೧೬೦

ಕಾಮಿನಿಯ ಸಂಗಮುಮಿರ್ದಿರೆ
ಕಾಮಿಯೆ ಶರಣಂ ವರಾಂಗಿ ಸೌಂದರನೆಂದುಂ
ಕಾಮಿನಿಯೊಡವೆರದಿರ್ದುಂ
ಕಾಮಿಯೆ ಕಾಮಾರಿ ಕಾಮಿಗೆಂತೊಲ್ದನೊ ಪೇಳ್ ೧೬೧

ಲಲನಾರತಿಯುತ ನಂಬಿಯೊ
ಳಲರ್ದೊಡನಾಡಿದವೊಲಂಗಜಾಂತಕನೆಂದುಂ
ಶಿಲೆಯುಂ ತಱಗೆಲೆಯುಂ ಮೆ
ಲ್ದೊಲವಿಂ ತಪಮಾಂತ ಜತಿಗಳೊಡನಾಡಿದನೇ ೧೬೨

ತ್ರಿವಿಧ ಶಿವಪೂಜೆಗೆಯ್ವೊಡೆ
ಯುವತಿ ಧನಂ ಧಾನ್ಯಮಿಳೆ ದಲಿಲ್ಲದದೇಂ ಸಂ
ಭವಿಪುದೆ ಭೂಪಾಲತ್ವಂ
ಶಿವಭಕ್ತಿಗೆ ಪೊಜಗೆ ಪೇಳ್ ಮೃಗಾಯು ತನಯುನೇ ೧೬೩

ಮಹಾರಾಜನು ಮುಗುಳುನಗೆ ನಗುತ್ತ— ೧೬೦. 'ಎಲೈ ಮಾನಿನಿಯೇ, ನಾನಾಡಿದ ಶಿವಭಕ್ತಿಯ ರಹಸ್ಯದ ತಿರುಳನ್ನೂ ಪರಿಶುದ್ಧ ಭಕ್ತರ ರೀತಿಯನ್ನೂ ನೀನು ಅರ್ಥ ಮಾಡಿಕೊಳ್ಳದೆ ಕೂಗಾಡುತ್ತಿದ್ದೀಯೆ. ಹರಶರಣರಾದವರ ಆ ಶಕ್ತಿಯೇನು ಸಾಮಾನ್ಯ ವೆಂದು ಭಾವಿಸಿರುವೆಯೊ ? ಹೇಳು.' ೧೬೧. 'ಎಲೈ ಶ್ರೇಷ್ಠ ಅವಯವವುಳ್ಳವಳೇ, ಸ್ತ್ರೀಯರ ಸಂಬಂಧವು ಪ್ರಾಪ್ತವಾಗಿದ್ದ ಮಾತ್ರದಿಂದ ಶರಣನು ವಿಷಯೇಚ್ಛೆ ಯುಳ್ಳವನೇನು ? ಸೌಂದರ ನಂಬಿಯು ಸದಾ ಕಾಮಿನಿಯರ ಜೊತೆಯಲ್ಲಿ ಸೇರಿ ಕೊಂಡಿದ್ದನು. ಅವನು ಕಾಮಿಯೇ ? ಕಾಮಾರಿಯಾದ ಶಿವನು ಇಂಥ ಕಾಮವುಳ್ಳವನಿಗೆ ಹೇಗೆ ಒಲಿದನು ?' ೧೬೨. 'ಕಾಮಿನಿಯ ಸಂಗಸುಖದಲ್ಲಿದ್ದ ನಂಬಿಯಣ್ಣನೊಡನೆ, ಆ ಶಿವನು ಒಲಿದು ಒಡನಾಡಿದ ಹಾಗೆ, ಯಾವಾಗಲೂ ಕಲ್ಲನ್ನೂ, ತರಗೆಲೆಗಳನ್ನೂ ತಿಂದು ಪ್ರೀತಿಯಿಂದ ತಪಸ್ಸುಮಾಡಿದ ಯತಿಗಳ ಸಂಗಡ ಒಡನಾಡಿದನೇ ?' ೧೬೩. 'ಹೇ, ಜಿಂಕೆಯಂತೆ ಚಂಚಲವೂ ದೀರ್ಘವೂ ಆದ ನೇತ್ರವುಳ್ಳವಳೇ, ತ್ರಿವಿಧವಾದ ಗುರು ಲಿಂಗ ಜಂಗಮಾತ್ಮಕವಾದ ಇಷ್ಟ ಪ್ರಾಣಭಾವಲಿಂಗಗಳೆಂಬ ಶಿವಪೂಜೆ ಮಾಡಬೇಕಾದರೆ ಸ್ತ್ರೀ, ಧನ, ಧಾನ್ಯ, ಭೂಮಿ, ಇತ್ಯಾದಿ ಆ ಫಲವು ಸಂಭವಿಸುವುದೇ ? ದೊರೆತನವು

ಕರಿಕಾಲ ಚೋಳನಾ ಭೂ
ವರ ಚೋಳಂ ವೀರಚೋಳ ವಿಕ್ರಮ ಚೋಳ
ರ್ಕರವೂರ ಚೋಳನುತ್ತುಂ
ಗರವಾಕರ ಚೋಳನವನಿಪಾಧಿಪ ಚೋಳಂ ೧೭೪

ಇವರಾದಿಯಾದ ಪಲಕೆಲ
ರವನೀಶರ್ಶಿವನೊಳೊಲ್ದು ಬೆರಸಿದರೊಳರೀ
ಭುವನದೊಳೆ ಜೂದು ನಿಂದ್ಯಮೆ
ಶಿವಾರ್ಪಿತಾಖಿಳವಿನೋದರಸಿಕರ್ಗಬಲೇ ೧೭೫

ಧರೆಯೊಳ್ ದ್ಯೂತಾರ್ಜಿತ ದ್ರವ್ಯದೆ ಸಲೆ ಚರಲಿಂಗಾರ್ಚನಂಗೆಯ್ವುತುಂ ಶಂ
ಕರನೇಳ್ತಂದೊರ್ವ ಜೂದಾಡುತೆ ಬಹುಧನಮಂ ಸೋಲ್ತು ತಾನೀಯದಿರ್ದಂ
ದೆರಡುಂ ಕಾಲಂ ಶಿರೋವೇಷ್ಟಿಯೊಳೆ ಬಿಗಿದು ಕಟ್ಟುತ್ತೆ ಕೊಂಡಚ್ಚಪೊನ್ನಂ
ಹರಭಕ್ತರ್ಗಿತ್ತು ಕೂರ್ಪಿಂದೊಲಿಸಿ ಬೆರಸನೇ ಶಂಭುವಂ ಮೂರ್ಖನಾಥಂ ೧೭೬

ಸಲೆ ಜೂದಾಳಿಯೆನುತ್ತುಂ
ಮಲಹರನಾ ಮೂರ್ಖನಾಥನಂ ತೊಱೆದನೆ ಪೇ
ಳ್ಜಲಜಾಕ್ಷಿ ಭಕ್ತರಸನಿ
ಶ್ಚಲನಾವುದನೆಸಪನದೆ ಶಿವಂಗನುಕೂಲಂ ೧೭೭

ಶಿವಪೂಜೆಗೆ ಹೊರಗಾದದ್ದೇನು ? ಹೇಳು.' ೧೭೪–೧೭೫. ಆ ಭೂಪಾಲಕರಾದ ಕರಿಕಾಲಚೋಳ, ವೀರಚೋಳ ವಿಕ್ರಮಚೋಳರೂ, ಉತ್ಕೃಷ್ಟ ಐಶ್ವರ್ಯಕ್ಕೆ ಆಶ್ರಯನಾದ ಚೋಳ, ಭೂಮೀಶ್ವರರಿಗೆಲ್ಲ ಅಧಿಪತಿಯಾದ ಚೋಳನೇ ಮೊದಲಾದ ಹಲ ಕೆಲವು ರಾಜರು ಶಿವನಲ್ಲಿ ಪ್ರೀತಿಯಿಂದ ಬೆರಸಿದ ರಾಜರೂ ಉಂಟು. ಹೇ ಅಬಲೇ, ಈ ಲೋಕದಲ್ಲಿ ಪರಮೇಶ್ವರನಿಗೋಸ್ಕರ ಸಕಲವಿನೋದಾದಿ ಸೌಖ್ಯಗಳನ್ನೂ ಅರ್ಪಿಸಿದವರಿಗೆ ಈ ಜೂಜಾಟವೇನು ನಿಂದ್ಯವಾದದ್ದೇ ? ೧೭೬. ಲೋಕದಲ್ಲಿ ಮೂರ್ಖನಾಥನೆಂಬುವನು ದ್ಯೂತದಾಟದಿಂದ ಸಂಪಾದನೆ ಮಾಡಿದ ಹಣದಿಂದ ಚೆನ್ನಾಗಿ ಜಂಗಮ ಪಾದಪೂಜೆಯನ್ನು ಮಾಡುತ್ತಿರಲು, ಒಂದು ಸಲ ಶಂಕರನೂ ಬಂದು ಅವನೊಡನೆ ಜೂಜಾಡಿ, ಅಪಾರ ಹಣವನ್ನು ಸೋತು, ಆ ಹಣವನ್ನು ಶಿವನು ಕೊಡದಿದ್ದಾಗ ಅವನ ಎರಡು ಕಾಲುಗಳನ್ನೂ, ತಲೆಗೆಸುತ್ತುವ ರುಮಾಲದಿಂದ ಕಟ್ಟಿ, ನೂತನವಾದ ಬಂಗಾರದ ನಾಣ್ಯಗಳನ್ನು ತೆಗೆದುಕೊಂಡು, ಆ ಹಣವನ್ನು ಶಿವಭಕ್ತರಿಗೆ ಕೊಟ್ಟು, ಪ್ರೀತಿಯಿಂದ ಶಂಭುವನ್ನು ಒಲಿಸಿ ಅವನಲ್ಲಿ ಬೆರೆಯಲಿಲ್ಲವೇ'. ೧೭೭. 'ಎಲೈ ಕಮಲನೇತ್ರೆಯೇ, ಶಿವನು ಆ ಮೂರ್ಖನಾಥನನ್ನು ಇವನು ವಿಶೇಷವಾಗಿ ಜೂಜಾಡತಕ್ಕವನೆಂದು ತ್ಯಜಿಸಿದನೇ ? ಹೇಳು. ಭಕ್ತಿಮಾರ್ಗದಿಂದ ಚಲಿಸದಿರುವವನು ಯಾವಕಾರ್ಯವನ್ನೇ ಮಾಡಲಿ ಅದು

ವಿತತ [1]ಶಿವಾನ[1]ರ್ಪಿತಸುಖ
ರತಿ ಸಂಸೃತಿಬಂಧವಬಲೆ ಸಂತತಲಿಂಗಾ
ರ್ಪಿತ ತತ್ಪ್ರಸಾದಸುಖದಭಿ
ರತಿ ಸಂಸೃತಿಬಂಧಮುಕ್ತಿಯೆಂಬುದೆ ಸತ್ಯಂ ೧೭೮

ರಸನೆಯು ನೆಯ್ನುವಕಜ್ಜಳ
ರಸಮಕ್ಷಿಯುನವುದರ್ಜ ಪತ್ತುಗುಮೆ ಪರಿಕಿಪೊಡೀ
ರಸೆಯೊಳ್ಸಂಸೃತಿಬಂಧಂ
ಸಸಿದಲೆಯನ ಶರಣತತಿಯನೇನಂಟುಗುಮೋ ೧೭೯

ತನುಕರಣಮನಃಪ್ರಾಣದಿ
ನನಿಶಂ ಪರಶಿವನನಪ್ಪಿ ಬೆರಸಿದನಬ್ಜಾ
ನನೆ ಸಂಸೃತಿಬದ್ಧನೆ ಸೂ
ರ್ಯನ ಕೈದಾವರೆಯು ತುಹಿನಮೇಂ ಪತ್ತುಗುಮೋ ೧೮೦

ಬಿಸಿಲಾ ಮರೀಚಿಕಾಜಲ
ವಿಸರದೆ ಸಲೆ ನಾಂದು ಕಿಡುಗುಮೇ ಶಿವಶರಣಂ
ಮುಸಗುವ ಮಾಯಾಬಂಧ
ಪ್ರಸರಕ್ಕೊಳಗಾಗಿ ಕಟ್ಟುವಡೆವನೆ ಧರೆಯೊಳ್ ೧೮೧

ಶಿವನಿಗೆ ಹಿತವಾದದ್ದಾಗುವುದು.' ೧೭೮. 'ಎಲೈ ಅಬಲೆಯೇ, ಶಿವನಿಗೆ ಅರ್ಪಿಸದಿರುವ ವಿಶೇಷವಾದ ಸೌಖ್ಯದಲ್ಲಿರುವ ಆಸಕ್ತಿಯು ಸಂಸಾರದ ತೊಡಕೆನಿಸುವುದು. ಸತತವೂ ಲಿಂಗಾರ್ಪಿತ ಮಾಡಿದ ಆ ಭೋಗಭಾಗ್ಯಗಳ ಪ್ರಸಾದ ರೂಪವಾದ ಸೌಖ್ಯದ ಆಸಕ್ತಿಯು ಸಂಸಾರ ಬಂಧನದ ವಿಮುಕ್ತಿಯೆನಿಸುವುದು ಇದು ಸತ್ಯ.' ೧೭೯. 'ತುಪ್ಪವು ನಾಲಿಗೆಯನ್ನೂ, ನೂತನ ಕಾಡಿಗೆಯು ಕಣ್ಣನ್ನೂ ಸೇರಿ, ಅದಕ್ಕೇ ಅಂಟಿಬಿಡುತ್ತದೆಯೇನು ? ಈ ಭೂಮಿಯಲ್ಲಿ ವಿಚಾರಮಾಡಿ ನೋಡಿದರೆ, ಸಂಸಾರ ಸಂಬಂಧದ ಬಂಧನವು ಚಂದ್ರಶೇಖರನ ಶರಣ ಸಮೂಹವನ್ನು ಅಂಟುತ್ತದೆಯೆ ?' ೧೮೦. ಎಲೈ ಕಮಲಮುಖಿಯೇ, ಯಾವಾಗಲೂ, ದೇಹ ಇಂದ್ರಿಯ ಮನಗಳಿಂದ ಶಿವನನ್ನೇ ಆಶ್ರಯಿಸಿ ಅವನನ್ನು ಬೆರಸಿರುವವನು ಸಂಸಾರದಿಂದ ಬಂಧಿಸಲ್ಪಟ್ಟವನೇ ? (ಅಲ್ಲ), ಹಿಮವು (ಮಂಜು) ಸೂರ್ಯನ ಕೈಯಲ್ಲಿ ಹಿಡಿದಿರುವ ಕಮಲವನ್ನು ಹತ್ತೀತೇ ?' ೧೮೧ 'ಭೂಮಿಯಲ್ಲಿ ಬಿಸಿಲು ಆ ಬಿಸಿಲುಗುದುರೆಯಿಂದ ವಿಶೇಷವಾಗಿ ನೆನೆದು (ತೊಯ್ದು) ಆರಿ ಹೋಗುವುದೇನು ? ಶಿವಶರಣನು ಆವರಿಸುವ ಮಾಯಾ ಸಂಬಂಧವಾದ ಸಮೂಹಕ್ಕೆ

---

1 ಶಿವನ (ಚ, ಮು) ಶಿವಾನಾ(ಜ)

ಪರಮಶಿವಭಕ್ತಿರಸಭರ
ಭರಿತಾಂತಃಕರಣಶರಣಸನ್ಮಹಿಮೆಗೆ ಶಾಂ
ಕರಲೋಕಮಿದು ವಿಚಾರಿಸೆ
ನರಲೋಕಮಿದೆಂಬ ಸಂದೆಗಕ್ಕೆಡೆಯುಂಟೇ ೧೮೨

ಇಳೆಯೊಳ್ಗೂಬೆಗೆನಿಸಿರ್ಕುಂ
ಬೆಳಗದು ಘೂಕೇಕ್ಷಣಕ್ಕೆ ಶಿವಭಕ್ತಮಹೋ
ಜ್ವಳಮಾರ್ಗಮಮಾರ್ಗದವೋಲ್
ಖಳಜನಜಡಮತಿಗೆ ತೋರ್ಕುಮೆಲೆ ತರಳಾಕ್ಷೀ ೧೮೩

ಹರಭಕ್ತರ ಪೆರ್ಮೆಯ ಪೊಸ
ಪರಿಯಱಿಯದ ಮರುಳೆ ನಿನಗೆ ಪಲವುಂ ಮಾತೇ
ಕಿರು ಸುಮ್ಮನೆಂದ ರಮಣಂ
ಗರಸಿ ಕರಂ ನಗುತೆ ಚಲ್ಲದಿಂದಿಂತೆಂದಳ್ ೧೮೪

ಬಿಡು ಬಿಡು ನಿನ್ನಯ ಮಾತಿನ
ಬಿಡಂಗನೆಲೆ ರಮಣ ಬಲ್ಲೆನೆಲ್ಲಮನೀಗ
ಳ್ಮೃಡನಗರಿಗೋಹಿಲನವೋ
ಲ್ನಡೆ ನೋಡಿದಪೆಂ ತ್ವದೀಯ ಬಲಮಂ ಛಲಮಂ ೧೮೫

ಅರಿನೃಪರ ಪಡಲ್ವಡಿಸುವ
ಪರಿಯಕ್ಕುಮೊ ನೆತ್ತದಾಟಮಕ್ಕುಮೊ ಮದನ
ಸ್ಫುರಿತಕಳಾನಿಪುಣತೆಯೊಂ
ದಿರವಕ್ಕುಮೊ ಶಿವನ ಭುವನಕೆಯ್ದುವ ಕಜ್ಜಂ ೧೮೬

ಸಿಕ್ಕುಬೀಳುವವನಲ್ಲ.' ೧೮೨. ಈ ಭೂಲೋಕವು ಶ್ರೇಷ್ಠವಾದ ಶಿವಭಕ್ತಿಯಿಂದ ತುಂಬಿದ ಅಂತಃಕರಣವುಳ್ಳ ಶರಣ ಸಮೂಹಕ್ಕೆ ನಿಜವಾಗಿಯೂ ಕೈಲಾಸವೇ ಅಲ್ಲದೆ ಇದು ನರಲೋಕವೆಂಬ ಸಂಶಯಕ್ಕೆ ಎಡೆಯೇ ಇಲ್ಲ.' ೧೮೩. 'ಎಲೈ ಚಂಚಲನೇತ್ರೆಯೇ, ಭೂಮಿಯಲ್ಲಿ ಆ ಗೂಗೆಯ ಕಣ್ಣಿಗೆ ಬೆಳಕೇ ಕತ್ತಲೆಯೆನಿಸಿರುವುದು. ಶಿವಭಕ್ತರ ಪ್ರಕಾಶಮಾನವಾದ ಸನ್ಮಾರ್ಗವು ನೀಚರಾದವರ ಮೂಢ ಬುದ್ಧಿಗೆ ದುರ್ಮಾರ್ಗದ ಹಾಗೆ ಕಾಣುತ್ತದೆ.' ೧೮೪. 'ಹರಭಕ್ತರಾದವರ ಹಿರಿಮೆಯ ನವೀನ ರೀತಿಯೆಂಬುದನ್ನು ತಿಳಿಯದಿರುವ ಎಲೈ ಹುಚ್ಚೀ, ನಿನಗೆ ಅನೇಕ ಮಾತುಗಳೇಕೆ ? ಸುಮ್ಮನಿರು'—ಎಂದ ಗಂಡನಿಗೆ ಆ ಹೆಂಡತಿಯು ಚೆನ್ನಾಗಿ ನಕ್ಕು, ವಿಲಾಸದಿಂದ ಹೀಗೆ ಹೇಳಿದಳು.' ೧೮೫. 'ಎಲೈ ರಮಣ; ಸಾಕು ಬಿಡು ಈ ನಿನ್ನ ಮಾತಿನ ಮೋಡಿಯನ್ನು ನಾನೆಲ್ಲ ಬಲ್ಲೆನು. ಈಗ ಓಹಿಲಯ್ಯನಂತೆ ಶಿವನ ಪಟ್ಟಣಕ್ಕೆ ನೀನು ನಡೆ, ನಿನ್ನ ಸಾಮರ್ಥ್ಯವನ್ನು ನೋಡುತ್ತೇನೆ.' ೧೮೬. 'ಶಿವಲೋಕಕ್ಕೆ ಹೋಗುವ ಕಾರ್ಯವು ಶತ್ರು ರಾಜರನ್ನು ನಾಶಪಡಿಸುವ ರೀತಿಯಾದೀತೇ ? (ಅಥವಾ) ಪಗಡೆಯ ಆಟ

ನಿನಗಭವನಗರಿ ಕೇಳೀ
ವನಮೊ ರಣಾಜಿರಮೊ ರಮ್ಯಮಣಿಹರ್ಮ್ಯಮೊ ಪಾ
ವನಗುರುಚರನಿಳಯಮೊ ನೆ
ಟ್ಟನೆ ತಳರಲ್ ನೃಪತಿ ನಿನ್ನ ಪರಿಜನಸಹಿತಂ ೧೮೭

ಒರ್ವನೆ ಪೋದಪನೆನುತುಂ
ಗರ್ವದಿನೊಹಿಲನ ನಗುವ ಶಿವಭಕ್ತಿಪರಂ
ಸರ್ವಜನಸಹಿತಮೆಲೆ ನೀಂ
ಶರ್ವಾಣೀರಮಣನಗರಿಗೆಂದಡಿಯಿಡುವೈ ೧೮೮

ವ॥ ಎಂದ ರಮಣಿಯ ಕಟಕಿವಾತಂ ಕೇಳ್ದು ಮಂದಸ್ಮಿತಾಸ್ಯನಾಗಿ—

ನೀನೆಂದಂತೆವೊಲೆಲೆ ಕಂ
ಜಾನನೆ ಶಿವನಿಳಯಮೆನಗೆ ಗುರುಚರನಿಳಯಂ
ತಾನಕ್ಕುಮೆಯ್ದಿದಪೆನೆ
ನ್ನೀ ನಿಖಿಳ ಜನಾಳಿವೆರಸು ನೋಡೆನ್ನಳವಂ ೧೮೯

ಕಾದಲೆ ನೀಂ ಕಡುಪಿಂದಂ
ಮೂದಲಿಸುತ್ತೆಂದ ಮಾಳ್ಕೆಯಿಂ ಶಿವಪುರಿಗಾಂ
ಪೋದಪೆನೆಲೆ ಪೋಗದೊಡೆ ನಿ
ಜೋದಿತ ಶಿವಭಕ್ತಿಯುಕ್ತನೆಪ್ಪೆನೆ ಧರೆಯೊಳ್ ೧೯೦

ವ॥ ಎಂದ ಮನದನ್ನನುಕ್ತಿಯುಂ ಮನೋರಮೆ ಮಾರ್ಕೊಂಡು—

ವಾದೀತೇ ? ಮದನ ವಿದ್ಯಾ ಪ್ರೌಢಿಮೆಯ ಒಂದು ರೀತಿಯೆನಿಸೀತೇ ? ೧೮೭. 'ಮಹಾರಾಜಾ, ಪರಿವಾರದ ಜನರೊಡನೆಕೂಡಿ. ನೆಟ್ಟಗೆ ತೆರಳಲಿಕ್ಕೆ ಶಿವನ ನಗರವೇನು ನಿನಗೆ ಉಪವನವೇ ? ಯುದ್ಧ ಭೂಮಿಯೇ, ಮನೋಹರವಾದ ರತ್ನದ ಉಪ್ಪರಿಗೆಯ ಮನೆಯೋ ? ಅಥವಾ ಪಾವನರಾದ ಗುರುಜಂಗಮರ ಮಠವೋ ? ೧೮೮. ಎಲೈ ರಾಜಾ ಓಹಿಲಯ್ಯನು ಒಬ್ಬನೇ ಹೋಗುತ್ತಿದ್ದಾನೆಂದು ಗರ್ವದಿಂದ ಅಪಹಾಸ್ಯ ಮಾಡುವ ಶಿವಭಕ್ತಿಯಲ್ಲಿ ಆಸಕ್ತನಾದ ನೀನು ಸರ್ವಜನ ಸಮೇತವಾಗಿ ಶಿವನ ಪಟ್ಟಣಕ್ಕೆ ಎಂದು ಹೆಜ್ಜೆಯನ್ನಿಕ್ಕುವೆ ?' ವ॥ ಹೀಗೆಂದ ತನ್ನ ರಮಣಿಯ ಮೂದಲಿಕೆಯ ಮಾತನ್ನು ಕೇಳಿ, ಪಾಲಗುರ್ಜರನು ಮುಗುಳುನಗೆಯಿಂದ ಕೂಡಿದ ಮುಖವುಳ್ಳವನಾಗಿ ೧೮೯. 'ಎಲೈ ಕಮಲಮುಖಿಯೇ, ನೀನು ಹೇಳುವಂತೆ ನನಗೆ ಆ ಕೈಲಾಸವು ಗುರು ಜಂಗಮರ ಮಠವೇ ಆಗಿರುವುದು. ನನ್ನ ಈ ಸಮಸ್ತ ಪ್ರಜಾಜನ ಸಮೇತವಾಗಿ ಹೋಗುತ್ತೇನೆ. ನನ್ನ ಶಕ್ತಿಯನ್ನು ನೋಡು' ೧೯೦. 'ಎಲೈ ಪ್ರಿಯೆ, ನೀನು ಕೋಪದಿಂದ ಮೂದಲಿಸುತ್ತ ಹಿಯಾಳಿಸುತ್ತೆಂದ ಮಾತಿನ ರೀತಿಯಿಂದ ನಾನು ಶಿವಪುರಿಗೆ ಹೋಗುತ್ತೇನೆ; ಹೋಗದಿದ್ದರೆ ಈ ಭೂಮಿಯಲ್ಲಿ ನಿಜವಾಗಿ ಶಿವಭಕ್ತಿಯಿಂದ ಕೂಡಿದವನೆಂದೆನಿಸುತ್ತೇನೆಯೇ ? ವ॥ ಹೀಗೆಂದು

ಆವ ದಿನಮಾವ ವೇಳೆಯೊ
ಳಾವಂದದೆ ಪೋಪೆಯೆನೆ ಪೊದಲ್ದೀ ದಿನಮಿಂ
ತೀವೇಳೆಯೊಳೀಯಂದದೆ
ಕೋವಿದೆ ಕೇಳ್ಪೋಪೆನೆಂದನಾ ಚಲದಂಕಂ ೧೯೧

ವ॥ ಎಂದು ದೃಢಪ್ರತಿಜ್ಞಾರೂಢನಾಗಿ ದೌವಾರಿಕರಿಂ ದಂಡನಾಥ ಮಂಡಳಿಕ ಸಚಿವ ಸಾಮಂತ ಪ್ರಮುಖರಂ ಬರಿಸಿ ಪುರದೊಳೆಲ್ಲಂ ಸಾಜಿಲ್ವೇಳ್ದು ಕಡುಪಿಂ ಕೈಲಾಸಪ್ರಸ್ಥಾನ ಭೇರಿಯಂ ಪೊಡೆಯಿಸಲೊಡನೆ—

ಕಡಲೇಳುಂ ಕದಡೆಳ್ದು ತುಳ್ಕೆ ದಿಗಿಭಂಗಳ್ಬಳ್ಕೆ ಭೋಗೀಂದ್ರನು
ರ್ಕುಡುಗುತ್ತುಂ ಪೆಡೆ ತರ್ಗೆ ದಿಗ್ವರರಳುಂಬಂ ಕುರ್ಗೆ ವಿದ್ವಿಟ್ಕುಳಂ
ಕಡುಪಿಂ ಕರ್ಚೆ ತೃಣಂಗಳಂ ರವಿರಥಾಶ್ವಂ ಬೆರ್ಚೆ ತುಂಬಿತ್ತು ಬಂ
ಬಿಡದಂಭೋಜಭವಾಂಡಮಂಡಳವಮನಾ ಗಂಭೀರಭೇರೀರವಂ ೧೯೨

ವ॥ ಆಗಳ್ಪಿರಿದದ್ಭುತಂ ಮಸಗೆ ಸಸಂಭ್ರಮಂ ಸಕಳ ಪರಿಜನಂ ನೆರೆಯೆ ನರೇಂದ್ರಂ ನೈಪಥ್ಯ ಗೃಹಕ್ಕೆಳ್ತಂದು ನಿಜಕಾಂತೆಯಂ ಪುರ್ಬಿಂ ಜರ್ಬಿ ಮಣಿಮಯಾಂದೋಳಮನೇಱಲ್ನಿಯಮಿಸಿ ನಿಜ ತುರಂಗಮಂ ಬೇಗವೇಱಯ್ದು ತಾನಾಳ್ವ ದೇಶಾಂತರಾಳದ ಸಮಸ್ತ ಜನವೊಡವರೆ ಸಡಗರಂಬೆತ್ತು—

ಪತಿಯ ಮಾತಿಗೆ ಆ ಮನೋರಮೆಯು ಪ್ರತಿಯಾಗಿ ೧೯೧. 'ಎಂದು ? ಯಾವ ಹೊತ್ತಿನಲ್ಲಿ ? ಯಾವ ರೀತಿಯಿಂದ ಹೋಗುತ್ತೀಯೆ ?' ಎನ್ನಲು ಆ ಹಟಗಾರನು 'ಎಲ್ಲೈ ಪ್ರೌಢೆಯೇ, ಕೇಳು: ಈ ದಿನವೇ, ಈ ರೀತಿ, ಇದೇ ಕಾಲದಲ್ಲಿ, ಇದೇ ಪ್ರಕಾರ ವಾಗಿ ಹೋಗುತ್ತೇನೆ' ಎಂದನು. ವ॥ ಹೀಗೆನ್ನುತ್ತ ದೃಢ ಪ್ರತಿಜ್ಞೆಯನ್ನು ಮಾಡಿದವ ನಾಗಿ ದ್ವಾರಪಾಲಕ ಮೊದಲ್ಗೊಂಡು, ದಂಡನಾಥ, ಮಾಂಡಳಿಕ, ಸಚಿವ, ಸಾಮಂತ ಪ್ರಮುಖರನ್ನೂ ಬರಮಾಡಿಕೊಂಡು, ಪಟ್ಟಣದಲ್ಲೆಲ್ಲ ಡಂಗುರ ಹೊಡಿಸುವಂತೆ ಹೇಳಿ, ಕೈಲಾಸಕ್ಕೆ ಹೊರಡುವುದರ ಸೂಚನಾರ್ಥವಾಗಿ ನಗಾರಿಯನ್ನು ಹೊಡಿಸಿದನು. ಆಗ ೧೯೨. ಸಪ್ತ ಸಮುದ್ರಗಳೂ ಕದಡಿ ಉಬ್ಬಿಕೊಂಡು ತುಳ್ಕಾಡಿದವು; ದಿಗ್ಗಜಗಳು ಬಳುಕಿದವು; ಆದಿಶೇಷನ ಪರಾಕ್ರಮವು ಭಗ್ನವಾಗಿ ಹೆಡೆಯು ತಗ್ಗಿತು; ಅಷ್ಟದಿಕ್ಪಾಲಕರು ವಿಶೇಷವಾಗಿ ಕುಗ್ಗಿ ಹೋದರು; ಶತ್ರು ಸಮೂಹವು (ಶತ್ರುಗಳಾದ ರಾಕ್ಷಸರ ಸಮೂಹವು) ಶೌರ್ಯಹೀನರಾಗಿ ಬಾಯಲ್ಲಿ ಹುಲ್ಲು ಕಚ್ಚಿದರು; ಸೂರ್ಯನ ರಥಕ್ಕೆ ಹೂಡಿದ ಕುದುರೆಗಳು ಬೆಚ್ಚಿದವು. (ಹೀಗೆ) ಆ ಗಂಭೀರ ಭೇರೀರವವು ಬ್ರಹ್ಮಾಂಡ ಪ್ರದೇಶವನ್ನು ಸಂಪೂರ್ಣ ತುಂಬಿತ್ತು. ವ॥ ಆಗ ಅತ್ಯದ್ಭುತವೆಲ್ಲಲ್ಲೂ ಆವರಿಸುವಂತೆ ಸಮಸ್ತ ಪರಿ ವಾರಜನವೆಲ್ಲ ಸಡಗರದಿಂದ ಗುಂಪುಗೂಡಲಾಗಿ ಅವರೆಲ್ಲರೊಡನೆ ರಾಜನು ಅಲಂಕಾರ ಮಾಡಿಕೊಳ್ಳುವ ಮನೆಗೆ ಬಂದು, ತನ್ನ ಹೆಂಡತಿಗೆ ಹುಬ್ಬಿನ ಸನ್ನೆ ಮಾಡಿ, ರತ್ನನಿರ್ಮಿತ ವಾದ ಪಲ್ಲಕ್ಕಿಯಲ್ಲೇರುವ ಹಾಗೆ ನಿಯಮಗೊಳಿಸಿ, ತನ್ನ ಕುದುರೆಯನ್ನೇರಿ, ತಾನಾಳು

ಬಿಡದೆತ್ತಂ ತೂರ್ಯಘೋಷಂ ಮಸಗೆ ಮಿಸುಗೆ ಮುಕ್ತಾತಪತ್ರಾಳಿ ಚೆಲ್ವಂ
ಪಡೆದುದ್ಯತ್ಕೇತನಂಗಳ್ಮಿಳಿರೆ ತಳರೆ ಸೈನ್ಯಂಚಳಚ್ಚಾಮರಂ ತೋ
ರ್ಪಡೆ ದಿವ್ಯಂ ಪುಷ್ಪವರ್ಷಂ ಸುರಿಯೆ ಮೊರೆಯೆ ತದ್ದುಂದುಭಿಧ್ವಾನಮೊಲ್ದು
ಗ್ಘಡಿಸುತ್ತಂ ವಂದಿವೃಂದಂ ಪೊಗಳೆ ನೆಗಳೆ ಲಾಸ್ಯಂಗಳಂ ವೇಶ್ಯೆಯರ್ಕಳ್ ೧೯೩

ಶರಣರುಘೇ ಜಯ ಜಯ ಬಂ
ಧುರರಾವಂ ಬುಧರ ಹರಹರ ಧ್ವಾನಂ ಸೈ
ವರಿಯೆ ಸಕಳೋರ್ವಿಜನಮು
ಚ್ಚರಿವಡೆ ನಿಜರಮಣಿವೆರಸು ಪೃಥುವೈಭವದಿಂ ೧೯೪

ಧೀಂಕಿಟ್ಟು ಗಗನತಳಕೆ ವಿ
ಶಂಕಂ ನೆರೆಯೂರ್ಗೆ ತಳರ್ವ ತೆಱದಿಂ ತಳರ್ದಂ
ಭೋಂಕನೆ ಕೈಲಾಸಕೆ ಗಣ
ಕಿಂಕರನಾ ಪಾಲಗುರ್ಜರಕ್ಷಿತಿಪಾಲಂ ೧೯೫

ತರುಣೀಸಂಯುಕ್ತನಾಗಳ್ ಶಿವಗಣಕೃಪೆಯಿಂ ಸೌಖ್ಯಮೊಂದಿರ್ದನಾ ಭೂ
ವರವರ್ಯಂ ತನ್ನ ಲೋಕಂಬೆರಸು ಶಶಿಧರಾವಾಸದೊಳ್ಮಾಣದೆಂದಾ

ತ್ತಿದ್ದ ಸಮಸ್ತ ದೇಶ ಮಧ್ಯದಲ್ಲಿರುವ ಜನರೊಡನೆ ಸಡಗರಗೊಂಡು ೧೯೩–೧೯೫. ನೃತ್ಯ, ಗೀತ, ವಾದ್ಯ ಧ್ವನಿಯು ಎತ್ತೆತ್ತಲೂ ತಪ್ಪದೆ ಹರಡಲು, ಮುತ್ತಿನ ಛತ್ರಿಗಳ ಸಾಲು ತುಂಬಿಕೊಂಡಿರಲು, ದೊಡ್ಡ ದೊಡ್ಡ ಧ್ವಜಗಳು ಚೆಲುವಿನಿಂದ ಹಾರಾಡುತ್ತಿರಲು, ಸೈನ್ಯವು ನಡೆಯುತ್ತಿರಲು, ಬೀಸುತ್ತಿರುವ ಚಾಮರಗಳು ಶೋಭೆಗೊಂಡಿರಲು, ದಿವ್ಯವಾದ ಪುಷ್ಪವೃಷ್ಟಿಯು (ದೇವಲೋಕದಿಂದ) ಸುರಿಯುತ್ತಿರಲು, ಆ ದೇವಲೋಕದ ದುಂದುಭಿಯ ಧ್ವನಿಯು ಮೊರೆಯುತ್ತಿರಲು, ಸ್ತುತಿ ಪಾಠಕರ ಸಮೂಹವು ಪ್ರೀತಿಯಿಂದ ಉಗ್ಘಡನೆ ಮಾಡುತ್ತ, ಸ್ತೋತ್ರ ಮಾಡುತ್ತಿರಲು, ವೇಶ್ಯಾಂಗನೆಯರು ನರ್ತನಗಳನ್ನು ಮಾಡುತ್ತಿರಲು, ಶಿವಶರಣರುಗಳ ಉಘೇ! ಜಯ ಜಯ! ಎಂಬ ಮನೋಹರ ಶಬ್ದವೂ, ವಿದ್ವಾಂಸರ ಹರಹರ! ಎಂಬ ಧ್ವನಿಯೂ ಎಲ್ಲ ಕಡೆಗೂ ಹರಡಿಕೊಳ್ಳಲು, ಸಕಲ ಭೂಮಂಡಲದ ಜನವೆಲ್ಲ ಆಶ್ಚರ್ಯಗೊಳ್ಳುವಂತೆ, ತನ್ನ ಹೆಂಡತಿಯೊಡನೆ ಕೂಡಿ, ವಿಶೇಷ ವಿಭವದಿಂದ ಆ ಶಿವಗಣಗಳ ಕಿಂಕರನಾದ ಪಾಲಗುರ್ಜರ ಮಹಾರಾಜನು (ಪಕ್ಕದ) ಮತ್ತೊಂದು ಊರಿಗೆ ಹೋಗುವ ರೀತಿಯಲ್ಲಿ ಭಯರಹಿತನಾಗಿ ಆಕಾಶದ ತಳಕ್ಕೆ ನೆಗೆದು ಆ ಕೂಡಲೇ ಕೈಲಾಸಕ್ಕೆ ಹೊರಟು ಹೋದನು. ೧೯೬. (ಹೀಗೆ) ಆ ರಾಜಶ್ರೇಷ್ಠನಾದ ಪಾಲಗುರ್ಜರ ಮಹಾರಾಜನು ಹೆಂಡತಿಯೊಡನೆ ಕೂಡಿ, ತಾನಾಳುವ ರಾಜ್ಯದ ಸಮಸ್ತ ಪರಿಜನ ಸಮೇತನಾಗಿ ಆಗ ಶಿವಗಣಂಗಳ ಕೃಪೆಯಿಂದ ಪರಮೇಶ್ವರನ ಆವಾಸಸ್ಥಳವಾದ ಕೈಲಾಸದಲ್ಲಿ ತಪ್ಪದೆ ಸೌಖ್ಯವನ್ನು ಹೊಂದಿ ಇದ್ದನು.

ಗುರುಭಕ್ತಂಗೊಲ್ದು ಪೇಳ್ದಳ್ಪಣವಧುವೆನುತುಂ ಭಕ್ತಿಯಿಂ ಪೇಳುತುಂ ಶಂ
ಕರಭಕ್ತಶ್ರೇಣಿಗಾವೋದವನೊದವಿಸಿ ಕಣ್ಗೊಪ್ಪುತಿರ್ದಂ ವೃಷೇಂದ್ರಂ ೧೯೬

ತರುಣಾದಿತ್ಯಪ್ರಕಾಶಾವರಣೆ ವರದೆ ಕಲ್ಯಾಣಿ ಕಾಮಾಕ್ಷಿ ವಿದ್ಯಾ
ಕರಿ ವಿಶ್ವಾಧಾರೆ ಚಂದ್ರಾಭರಣೆ ಚತುರೆ ಚಿತ್ರಾಂಗಿ ಚಿದ್ರೂಪೆ ವೀಣಾ
ಧರವಾಣೀಪಾಣಿಪದ್ಮಾರ್ಚಿತಮಧುಭರಮಂದಾರಮಾಲಾಂಚಿತಶ್ರೀ
ಚರಣಾಂಭೋಜಾತೆಯೆನ್ನಂ ಪೊರೆ ನಿರುಪಮಿತಾಮ್ನಾಯವಾಣೀ ಮೃಡಾನೀ ೧೯೭

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಮಲ್ಹಣ ಪಾಲಗುರ್ಜರಕಥಾಭಿವರ್ಣನಂ

ಏಕೋನತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೨೯ಕ್ಕೆ ಪದಗಣನೆ ೨೩೧೫ಕ್ಕೆ ಮಂಗಳಮಹಾ ಶ್ರೀ॥

ಹೀಗೆಂದು ಆ ವೇಶ್ಯೆಯು ಗುರುಭಕ್ತನಿಗೆ ಪ್ರೀತಿಯಿಂದ ಹೇಳಿದಳು, ಎಂದೆನ್ನುತ್ತ ಬಸವೇಶ್ವರನು ಪರಮೇಶ್ವರನ ಭಕ್ತಸಮೂಹಕ್ಕೆ ಭಕ್ತಿಯಿಂದ ಹೇಳುತ್ತ, ಸಂತೋಷವನ್ನುಂಟು ಮಾಡಿ, ಕಂಗೊಳಿಸುತ್ತಿದ್ದನು. ೧೯೭. ತರುಣ ಸೂರ್ಯನ ಪ್ರಕಾಶದಂತಿರುವ ಆವರಿಸಲ್ಪಟ್ಟವಳೇ, ವರ ಪ್ರದಾನ ಮಾಡುವವಳೇ, ಮಂಗಳ ಸ್ವರೂಪಿಣಿಯೇ, ಇಷ್ಟಾರ್ಥವನ್ನುಂಟು ಮಾಡುವ ದೃಷ್ಟಿಯುಳ್ಳವಳೇ, ಸಕಲ ವಿದ್ಯೆಗಳಿಗೂ ಆಶ್ರಯಳಾದವಳೇ, ಪ್ರಪಂಚಕ್ಕೆ ಆಶ್ರಯದಾತಳೇ, ಚಂದ್ರನನ್ನು ಆಭರಣವಾಗಿ ಉಳ್ಳವಳೇ, ವಿಚಿತ್ರ ಅಂಗವುಳ್ಳವಳೇ, ಜ್ಞಾನ ಸ್ವರೂಪಿಣಿಯೇ, ವೀಣೆಯನ್ನು ಧರಿಸಿರುವ ಸರಸ್ವತಿಯ ಹಸ್ತಕಮಲದಿಂದ ಸಮರ್ಪಿಸಲ್ಪಟ್ಟ, ಮಕರಂದ ವಿಶಿಷ್ಟವಾದ ಕಲ್ಪವೃಕ್ಷದ ಹೂವುಗಳ ಮಾಲೆಯಿಂದ ಪೂಜ್ಯವೆನಿಸಿದ ಮಂಗಳಕರ ಪಾದಕಮಲವುಳ್ಳವಳೇ, ಅಸದೃಶವಾದ ವೇದ ಸ್ವರೂಪದ ಮಾತುಳ್ಳವಳೇ, ಮೃಡಾಣಿಯೇ ನನ್ನನ್ನು ರಕ್ಷಿಸು.

ಇಪ್ಪತ್ತೊಂಬತ್ತನೆಯ ಆಶ್ವಾಸವು ಸಮಾಪ್ತವಾಯಿತು

# ತ್ರಿಂಶಾಶ್ವಾಸಂ

## [ಗುರುಭಕ್ತಾಂಡಾರಿಯ ಕಥೆ]

ಶ್ರೀಕುಧರಜಾತಿಮಧುರಾ
ಲೋಕನವಃಲಯಜವಿಲಿಪ್ತವಕ್ಷಸ್ಸ್ಥಳನ
ಸ್ತೋಕ ಮಹಿಮಾಂಕನಿಂದುಕ
[1]ಲಾಕಂ[1] ಪೊರೆಗೆಮ್ಮನಾ[2]ಗಳುಂ[2] ಶಿವಲಿಂಗಂ ೧

ಒಸಗೆ ಮಿಗೆ ಕೇಳುತಿರೆ ಶರ
ಣಸಮೂಹಂ ಮತ್ತಮಾಗಳುಸುರ್ದಂ ಬಸವಂ
ಮಿಸುಪ ಗುರುಭಕ್ತನೆಸಗಿದ
ಪೊಸಪರಿಯಂ ಭಕ್ತಜನಮನೋವನಚೈತ್ರಂ ೨

ಪ್ರಿಯ ರಮಣಿ ನುಡಿದ ಕಟಕಿಯ
ನಯನಿಧಿ ತಾಂ ಕೇಳ್ದು ಲೇಸುವಡೆದಂ ಗಡ ದು
ರ್ಜಯಪಾಲಗೂರ್ಜರಂ ನಿ
ಶ್ಚಯಮಿಷ್ಟವಧೂಕ್ತಿಗೇಳ್ದವಂಗೆಡರುಂಟೇ ೩

### ಗುರುಭಕ್ತಾಂಡಾರಿಯ ಕಥೆ

೧. ಮಂಗಳಕರಳಾದ ಪರ್ವತ ಪುತ್ರಿಯೆನಿಸಿದ ಪಾರ್ವತಿಯ ಅತ್ಯಂತ ಮಧುರವಾದ ನೋಟವೆಂಬ ಶ್ರೀ ಗಂಧದಿಂದ ಲೇಪನಗೊಂಡ ಎದೆಯುಳ್ಳವನಾಗಿಯೂ, ಅತ್ಯಧಿಕ ಮಹಿಮೆಯೇ ಲಕ್ಷಣವಾಗಿ ಉಳ್ಳವನೂ, ಚಂದ್ರಕಲೆಯನ್ನು ಧರಿಸಿದವನೂ ಆದ ಶಿವ ಲಿಂಗನು ನಮ್ಮನ್ನು ಸದಾ ರಕ್ಷಿಸಲಿ. ೨. ಶರಣ ಸಮುದಾಯವು ಅತ್ಯುತ್ಸಾಹದಿಂದ ಕೇಳುತ್ತಿರಲು ಆಗ ಭಕ್ತ ಜನರ ಮನಸ್ಸೆಂಬ ವನಕ್ಕೆ ವಸಂತ ಪ್ರಾಯನಾದ ಬಸವೇಶ್ವರನು, ಪುನಃ ಗುರುಭಕ್ತನು ಮಾಡಿದ ಹೊಸರೀತಿಯನ್ನು ಹೇಳಿದನು. ೩. ನೀತಿಗೆ ನಿಧಿ ಯುಂತಿದ್ದ, ಜಯಿಸಲಸಾಧ್ಯನಾದ ಪಾಲಗುರ್ಜರ ಮಹಾರಾಜನು ಪ್ರೀತಿಯ ತನ್ನ ರಮಣಿಯು ನುಡಿದ ಮೂದಲಿಕೆಯ ಮಾತುಗಳನ್ನು ಕೇಳಿ, ಸುಖವನ್ನು ಪಡೆದನಲ್ಲವೇ ! ನಿಜವಾಗಿಯೂ ಇಷ್ಟಳಾದ (ಆಪ್ತಳಾದ) ಹೆಂಡತಿಯ ಮಾತನ್ನು ಕೇಳಿದವನಿಗೆ ವಿಘ್ನ

1 ಲಾಂಕು(ಗ, ಮು) 2 ವಗುಂ(ಮು)

ಮೊದಲೊಳತಿ ವಿರಸಮಾದೊಡ
ಮೊದವಿಸುಗುಂ ಲೇಸನಗ್ರದೊಳ್ ಸುದತಿಯರಾ
ಡಿದ ನುಡಿಯುದು ಕಾರಣಮೆ
ನ್ನುದಿತೋಕ್ತಿಯ ಕೇಳ್ವುದೆಂದವಂಗವಳೆಂದಳ್ ೪

ವ॥ ಎಂದ ಪಣವಧೂಟಿಯ ವದನವಿಧುಬಿಂಬದಿನೊಗೆತಂದ ಸರಸ ಚತುರೋಕ್ತಿಚಂದ್ರಿಕೆಯಿಂ ಕಾಮಾಗ್ನಿ ಮತ್ತೆ ಮತ್ತೆ ಮೆಯ್ವೆರ್ಚೆ ಹೃದಯಕುಹರಮನಳುರ್ದು ಘುಳುಘುಳಿಸಿ ಕಾಯ್ಪು ಮಸಗಿ ತನುವೆಲ್ಲಮನಾವರಿಸಿ ತೀವೆ—

ಸೈರಿಸಲಾಱದೆ ಮೇಲ್ವರಿ
ದೋರಂತೆ ತುಡುಂಕಲಾಟಿಪಾತನ ಬಗೆಯಂ
ವಾರಾಂಗನೆ ನಡೆ ನೋಡುತ
ಪಾರಭಯಾಂಬುಧಿಯೊಳಾಳ್ದು ತಳವೆಳಗಾದಳ್ ೫

ತಿಳಿಪಿದೊಡಮಾವ ಪರಿಯಿಂ
ತಿಳಿಯಂ ಕಾಮಾಂಧನಕ್ಕಟೇಗೆಯ್ದಪೆನೆಂ
ದಳವಳಿದು ಕಳವಳಿಸಿ ಮೊ
ಕ್ಕಳಮಳರ್ದಳಲಾಂತು ಸುಯ್ದು ಸಿಡಿಮಿಡಿಗೊಂಡಳ್ ೬

ಮೇಲಱಿಯದೆ ಕಾಮಾತುರ
ನಾಲಿಂಗಿಸಲೆಸಗುತೆನ್ನ ಹರಣದಪಾಯು

ವುಂಟಾಗದು. ೪. ಸುದತಿಯರು ಆಡಿದ ಮಾತುಗಳು ಮೊದಮೊದಲು ಅತಿ ವಿರಸದವುಗಳಾದರೂ, ಕೊನೆಯಲ್ಲಿ ಒಳ್ಳೆಯದನ್ನೇ ಉಂಟುಮಾಡುವುವು. ಆದುದರಿಂದ ನನ್ನ ಉದ್ಧಾರ ಕಾರಣಗಳಾದ ಮಾತನ್ನು ಕೇಳಬೇಕೆಂದು, ಆ ಗುರುಭಕ್ತರಾಜನನ್ನು ಕುರಿತು ಆ ಪ್ರೌಢಮತಿಯೆಂಬ ವೇಶ್ಯೆಯು ಹೇಳಿದಳು. ವ॥ ಹೀಗೆಂದು ಹೇಳಿದ ಆ ಪಣ್ಯಾಂಗನೆಯ ಮುಖವೆಂಬ ಚಂದ್ರ ಮಂಡಲದಿಂದ ಮೂಡಿಬಂದ ಸರಸವಾದ ಚತುರೋಕ್ತಿಗಳೆಂಬ ಬೆಳದಿಂಗಳಿನಿಂದ ಆ ಗುರುಭಕ್ತನ ಕಾಮಾಗ್ನಿಯು ಮತ್ತೆ ಮತ್ತೆ ಅಧಿಕಗೊಳ್ಳಲು, ಹೃದಯವೆಂಬ ರಂಧ್ರಪ್ರದೇಶವನ್ನೆಲ್ಲ ವ್ಯಾಪಿಸಿ, 'ಘುಳು ಘುಳು' ಎಂದು ಕಾಯ್ದು ಅಧಿಕಗೊಂಡು ದೇಹವನ್ನೆಲ್ಲ ವ್ಯಾಪಿಸಿ ತುಂಬಿಕೊಳ್ಳಲಾಗಿ ೫. ಸೈರಿಸಲಾರದೆ ಆ ವೇಶ್ಯೆಯ ಮೇಲೆ ಬಿದ್ದು, ಚೆನ್ನಾಗಿ ಅವಳನ್ನು ಹಿಡಿದುಕೊಳ್ಳುವುದಕ್ಕೆ ಚಲಿಸಾಡುವ ಆತನ ರೀತಿಯನ್ನು ಆ ವೇಶ್ಯೆಯು ದಿಟ್ಟಿಸಿ ನೋಡಿ, ಅಪಾರವಾದ ಭಯವೆಂಬ ಸಮುದ್ರದಲ್ಲಿ ಮುಳುಗಿ ಬೆರಗುಗೊಂಡಳು. ೬. ಯಾವ ರೀತಿಯಿಂದ ತಿಳುವಳಿಕೆಯನ್ನುಂಟು ಮಾಡಿದರೂ, ಈ ಕಾಮಾಂಧನು ಅಕ್ಕಟಾ! ತಿಳಿಯುತ್ತಿಲ್ಲವಲ್ಲಾ! ಏನು ಮಾಡಲಿ? ಎಂದು ಶಕ್ತಿಗುಂದಿದವಳಾಗಿ, ವ್ಯಾಕುಲಗೊಂಡು, ಅಧಿಕವಾಗಿ ಆವರಿಸಿದ ದುಃಖದಿಂದ ಕೂಡಿ, ನಿಟ್ಟುಸಿರುಬಿಟ್ಟು, ಸಿಡಿಮಿಡಿಗೊಂಡಳು. ೭. ಕಾಮಾತುರನಾದವನು ಮುಂದಾಗುವುದನ್ನು ತಿಳಿಯದೆ, ಆಲಿಂಗಿಸಿಕೊಳ್ಳಲು ಪ್ರಯತ್ನ ಪಡುತ್ತ,

ಕ್ಕಾಲಂಬನಮಾದಪನೆಂ
ದಾಲಲನೆ ಮನೋವಿಷಾದದಿಂದಿಂತೆಂದಳ್ ೭

ಎಲೆ ಮೂರ್ಖರರಸ ನಿನಗಾಂ
ಪಲವಂದದಿನುಸುರೆ ಕೇಳ್ದುದಿಲ್ಲಕಟ ನಿರ
ರ್ಗಲವೀಶ್ವರಾಜ್ಞೆಯಿಂ ಗ
ಲ್ಗಲನೇಂ ಬಂದಪುದೊ ಮುಂದೆ ಶೂಲಿಯೆ ಬಲ್ಲಂ ೮

ಎನಿತೆನಿತುಪಾಯದಿಂ ವಂ
ಚನೆಗೆಯ್ದೊಡವೋವೊ ಪೋಗದಿದು ಪೇಳ್ದಪೆನಿಂ
ದೆನಗಿಲ್ಲ ತಪ್ಪು ನಿನ್ನಂ
ಮನವೊಲ್ಲದುದರ್ಕೆ ಕಾರಣಮನೆಲೆ ನೃಪತಿ ೯

ಗುರುಭಕ್ತಂ ಗಡ ನೀನು
ರ್ವರೆಯೊಳಿರುಳ್ಬಂದು ನಿನ್ನ ಗುರುವರನೆನ್ನೊ
ಳ್ನೆರೆದಿರ್ದು ತಳರ್ದನದಱಿಂ
ನರೇಂದ್ರ ನೀನೆಳಸೆ ಸುಸಿಲನಾಂ ಮೆಯ್ದೆಗೆದೆಂ ೧೦

ವ॥ ಎಂಬುದುಮಾ ನುಡಿ ಕೂರಂಬಿನಂತೆ ಕರ್ಣಮಂ ತಾಗೆ ಬಿಸಿಗೆಂಡಮಂ ಮೆಟ್ಟಿದಂತಿರಾಗಿ ಹೃದಯಂ ಪವ್ವನೆ ಪಾಱಿ ಭಯರಸದೊಳ್[1]ಳ್ದು ಹಾಹಾ ದೇಶಿಕೇಂದ್ರ ಕೆಟ್ಟೆಂ ಕೆಟ್ಟೆನೆಂದು ಬಾಯ್ವಿಟ್ಟು ಧರಣೀತಳದೊಳ್ ತೊಪ್ಪನೆ ಬಿಳ್ದು—

ನನ್ನ ಪ್ರಾಣದ ಅಪಾಯಕ್ಕೆ ಇವನು ಕಾರಣನಾದವನಾಗುತ್ತಾನೆಂದು ಆ ಸುಂದರಿಯು ಮನಃ ಕ್ಲೇಶದಿಂದ ಹೀಗೆಂದಳು. ೮. 'ಎಲೈ ಮೂರ್ಖ ಅರಸನೇ, ನಿನಗೆ ನಾನು ಹಲವಾರು ಪ್ರಕಾರದಿಂದ ಹೇಳಿದರೂ ಕೇಳಲಿಲ್ಲ. ಅಕ್ಕಟಾ! ಮುಂದೆ ಈಶ್ವರಾಜ್ಞೆಯಿಂದ ಶೀಘ್ರವಾಗಿ ತಡೆಯಲಶ್ಯಕವಾದದ್ದು ಏನುಂಟಾಗುವುದೋ (ಯಾವ ಕಷ್ಟವುಂಟಾಗುವುದೋ) ಆ ಶಿವನೇ ಬಲ್ಲ.' ೯. 'ಎಲೈ ರಾಜನೇ, ಎಷ್ಟೆಷ್ಟು ಯುಕ್ತಿಯಿಂದ ವಂಚನೆ ಮಾಡಿದರೂ, ಓಹೋ! ಹೋಗದಿರುವ ಈ ನಿನ್ನ ಸಂಬಂಧದಲ್ಲಿ ನನ್ನ ತಪ್ಪೇನೂ ಇಲ್ಲ; ನಿನ್ನನ್ನು ಒಲ್ಲೆನೆನ್ನುವುದಕ್ಕೆ ಈಗ ಕಾರಣವನ್ನು ಹೇಳುತ್ತೇನೆ. ಕೇಳು.' ೧೦. 'ಮಹಾರಾಜಾ, ನೀನು ಈ ಲೋಕದಲ್ಲಿ ಗುರುಭಕ್ತನಲ್ಲವೇ! ನಿನ್ನ ಗುರುಶ್ರೇಷ್ಠನು (ನಿನ್ನೆಯು) ರಾತ್ರಿ ಇಲ್ಲಿಗೆ ಬಂದು ನನ್ನಲ್ಲಿ ಕೂಡಿ ಹೊರಟು ಹೋದನು. ಆದ್ದರಿಂದ ನೀನು ಸುರತ ಸುಖಕ್ಕೆ ಬಯಸಲಾಗಿ ನಾನು ದೇಹವನ್ನು ಹಿಂದೆಗೆದೆನು.' ವ॥ ಹೀಗೆಂದು ಅವಳು ಹೇಳಿದ ಆ ಮಾತು ತೀಕ್ಷ್ಣವಾದ ಬಾಣದಂತೆ ಕಿವಿಯನ್ನು ಪ್ರವೇಶಿಸಲು, ಸುಡುವ ಕೆಂಡವನ್ನು ತುಳಿದಂತಾಗಿ ಹಪ್ಪನೆ ಹಾರಿ; ಭಯ ರಸದಲ್ಲಿ ಮುಳುಗಿದವನಾಗಿ, ಹಾ ಹಾ ಗುರೂತ್ತಮನೇ, ಕೆಟ್ಟೆ ಕೆಟ್ಟೆ! ಎಂದು ಬಾಯಿಬಿಟ್ಟು ಕೂಗಿಕೊಂಡು, ಭೂಮಿಯ ಮೇಲೆದೊಪ್ಪನೆ

1 ೞಾ(ಅ, ಮು)

ನಡುಗುವೆರ್ದೆ ನಾಂಟಿದತಿಭಯು
ಮೊಡನೊಡನುರದೇಳ್ವ ಶೋಕಶಿಖಿ ಬತ್ತಿದ ಬಾ
ಯುಃಗ್ಗಡುಗುಡನೆ ಸುರಿವ ಕಣ್ಬನಿ
ಕಡುವಿಸುಪಾಂತಿಳಿವ ಸುಯ್ಗ್ಗಳಿರೆ ಪಳಯಿಸಿದಂ ೧೧

ದವಶಿಖಿಯುಂ ಮಳ್ಗಿಸಿ ಮೇ
ಘವಹ್ನಿಯುಂ ಪೆರ್ಚುಗೆಯ್ವ ಕಾರ್ಗಾಲದವೋ
ಲವಳ ನುಡಿ ಕಾಮವಹ್ನಿಯ
ತವೆ ಮಳ್ಗಿಸಿ ಶೋಕಶಿಖಿಯನೇನುರ್ವಿಸಿತೋ ೧೨

ಗುರುನಾಥ ಹಾ ಮಹಾಗುರು
ವರ ಹಾ ಗುರುವರೇಣ್ಯ ಹಾ ಹಾ ಘನಮು
ದ್ಗುರುಲಿಂಗ ಹಾಯೆನುತೆ ಕಾ
ಳ್ಪುರಮಾಗೆ ದೃಗಂಬು ಬಿಕ್ಕಿ ಬಿರಿದಳುತಾಗಳ್ ೧೩

ನಡೆತಂದಾ ಪಣಕಾಂತೆಯಂಘ್ರಿಗೆಱಗುತ್ತುಂ ತಾಯೆ ಮೆಯ್ಗೊರ್ಬಿನಿಂ
ತೊಡರ್ದಜ್ಞಾನದೆ ನಿನ್ನನರ್ಥಿಸಿದ ಪಾಪಂ ಪೋಪುದೆಂತಕ್ಕ ನಿ
ನ್ನೊಡನಾಂ ಕಾಮವಿಕಾರದಿಂ ನುಡಿದಘಕ್ಕೇಗೆಯ್ವೆನೀ ನಿನ್ನ ಸಂ
ಗಡಮಾಂ ನಕ್ಕಪರಾಧಮೇತಳಿಗುಮೀ ನಿನ್ನಂಗಮಂ ಮೋಹದಿಂ ೧೪

ನೋಡಿದ ದೋಷಮೆಂತು ಪಱಿಗುಂ ಬೆಸಸಂಬಿಕೆ ನಿನ್ನೊಳಾಂ ಮನಂ
ಮಾಡಿದ ಘೋರದುಷ್ಕೃತಿಗೆ ಯಾವುದೊ ನಿನ್ನನಳ್ಕಿಱಿಂ

ಬಿದ್ದನು; ೧೧. ನಡುಗುತ್ತಿರುವ ಹೃದಯ; ನಾಟಿಕೊಂಡಿರುವ ಅತ್ಯಂತ ಭಯ; ಮೇಲೆ ಮೇಲೆ ಉರಿದೇಳುತ್ತಿರುವ ದುಃಖವೆಂಬ ಅಗ್ನಿ; ಬತ್ತಿ ಹೋದ ಬಾಯಿ; ಗಳಗಳನೆ ಸುರಿಯುತ್ತಿರುವ ಕಣ್ಣೀರು ; ಬಹು ಬಿಸಿಯನ್ನು ಹೊಂದಿರುವ ಉಸಿರು—ಇವುಗಳಿಂದ ಕೂಡಿ, ಪ್ರಲಾಪಮಾಡಿದನು. ೧೨. ಕಾಡುಗಿಚ್ಚನ್ನು ಶಾಂತಗೊಳಿಸಿ ಸಿಡಿಲಿನ ಬೆಂಕಿಯನ್ನು ಅಧಿಕಗೊಳಿಸುವ ಮಳೆಗಾಲದಹಾಗೆ, ಆ ವೇಶ್ಯೆಯ ಮಾತು ಆತನ ಕಾಮವೆಂಬ ಅಗ್ನಿಯನ್ನು ಚೆನ್ನಾಗಿ ಉಪಶಮನಗೊಳಿಸಿ ದುಃಖಾಗ್ನಿಯನ್ನು ಏನು ಅಧಿಕಗೊಳಿಸಿತೋ ! ೧೩–೧೫. ಆಗ 'ಹಾ ! ಗುರುನಾಥಾ ! ಹಾ ! ಹಾ ! ಮಹಾಗುರುವರ ! ಗುರುವರೇಣ್ಯ, ಹಾ ಹಾ ! ಮದ್ಗುರುಲಿಂಗನೇ ಹಾ ! ಎನ್ನುತ್ತ ಕಣ್ಣೀರು ಪ್ರವಾಹವಾಗಿ ಹರಿಯುತ್ತಿರಲು, ಬಿಕ್ಕಿ ಬಿಕ್ಕಿ ಅಳುತ್ತ ಬಂದು ಆ ವೇಶ್ಯೆಯ ಪಾದಕ್ಕೆ ನಮಸ್ಕಾರಮಾಡಿ, 'ತಾಯೇ, ದೇಹಮದದಿಂದುಂಟಾದ ಅಜ್ಞಾನದಿಂದ ನಿನ್ನನ್ನು ಬೇಡಿದ ಪಾಪವು ಹೇಗೆ ಹೋಗುವುದು ? ಅಕ್ಕಾ ! ನಿನ್ನೊಡನೆ ನಾನು ಕಾಮವಿಕಾರದಿಂದ ನುಡಿದ ಪಾಪಕ್ಕೆ ಏನು ಮಾಡಲಿ ? ಈ ನಿನ್ನ ಸಂಗಡ ನಾನು ನಕ್ಕ ಅಪರಾಧವು ಹೇಗೆ ನಾಶಗೊಳ್ಳುವುದು ? ಈ ನಿನ್ನ ಶರೀರವನ್ನು ಮೋಹಗೊಂಡು ನೋಡಿದ ದೋಷವು ಹೇಗೆ ಹರಿಯುವುದು ? ತಾಯಿಯೇ (ಅಂಬಿಕೇ), ಅಪ್ಪಣೆ

ಕೂಡಲೊಡರ್ಚಿದೀ ದುರಿತಮೇತೆಱದಿಂ ತವಿಲಕ್ಕುಮಿಂತು ಱೋ
ಡಾಡುತೆ ನಿನ್ನ ನೋಯಿಸಿದ ಪಾತಕಮೇತು ವಿನಷ್ಟಮಪ್ಪುದೋ ೧೫

ಸ್ಮರಸರ್ಪಗರಳದುರಿಯಿಂ
ದುರಿದೆಂ ವ್ಯಾಮೋಹಮೆಂಬ ಬಱಸಿಡಿಲೆಱಗಿ
ತ್ರಿರದಕ್ಕಟ ಮಾಯಾಭೀ
ಕರತ[1]ರ ರಾಕ್ಷಸಿಯ ಬಾಯ್ಗೆ ಸವಿದುತ್ತಾದೆಂ ೧೬

ಎನಿತೆನಿತು ಹಿತಮ ನೀನೊ
ಲ್ದನುನಯದಿಂ ಪೇಳೆ ಕೇಳದಾಂ ಮರುಳಾದೆಂ
ಜನನಿ ಮಿಗೆ ಮುನ್ನಮೇಂ ತ
ಪ್ಪನವಧಿ ಪಾಪಪ್ರಯುಕ್ತನೋ ಬಗೆವಾಗಳ್ ೧೭

ಸಲೆ ಪೂರ್ವಜನ್ಮದೊಳ್ಗ
ಳ್ಗಲನದ್ವೈತಮನೆ ಪಿಡಿದು ಕಾಲತ್ರಯದೊಳ್
ನಲಿದರ್ಚಿಸದಾದೆನೊ ಮಂ
ಜುಲ ಶಿವನಂ ಷೋಡಶೋಪಚಾರಕ್ರಮದಿಂ ೧೮

ಹರನೆಱೆಯನಾಳ್ದಲಾನೆಂ
ಬಿರವಱಿದಾಚರಿಸದಾದೆನೋ ಫಲಕಾಂಕ್ಷಾ

ಮಾಡು ; ನಿನ್ನಲ್ಲಿ ನಾನು ಮನಸ್ಸು ಮಾಡಿದ ಭಯಂಕರ ಪಾಪಕ್ಕೆ ಪ್ರತಿಕಾರವಾವುದು ? ನಿನ್ನನ್ನು ಪ್ರೀತಿಯಿಂದ ಕೂಡಲು ಪ್ರಯತ್ನಿಸಿದ ಈ ಪಾಪವು ಯಾವ ರೀತಿಯಿಂದ ನಾಶವಾಗುವುದು ? ಈ ರೀತಿ ನಿನ್ನನ್ನು ಪೀಡಿಸಿ ನೋವನ್ನುಂಟುಮಾಡಿದ ಪಾಪವು ಯಾವರೀತಿ ನಷ್ಟಗೊಳ್ಳುವುದು ?' ೧೬. 'ಮನ್ಮಥನೆಂಬ ಸರ್ಪದ ವಿಷದುರಿಯಿಂದ ಉರಿದು ಹೋದೆನು ; ಅಜ್ಞಾನವೆಂಬ ಬರಸಿಡಿಲು ಮೇಲೆರಗಿಬಿತ್ತು ; ಅಕ್ಕಟಾ ! ತಪ್ಪದೆ ಮಾಯೆಯೆಂಬ ಭಯಂಕರ ರಾಕ್ಷಸಿಯ ಬಾಯಿಗೆ ಸವಿಯಾದ ತುತ್ತಾದಂತಾದೆನು !' ೧೭. 'ತಾಯಿಯೇ, ನೀನು ಪ್ರೀತಿಯಿಂದ ಒಲಿದು ಎಷ್ಟೆಷ್ಟು ಹಿತವನ್ನು ಹೇಳಿದರೂ ನಾನು ಕೇಳದೆ, ಹುಚ್ಚನಂತಾದೆನು. ವಿಚಾರಿಸಿ ನೋಡಿದರೆ, ಪೂರ್ವಜನ್ಮದಲ್ಲಿ ನಾನು ಅದೆಂಥ ಅಪಾರವಾದ ಪಾಪದಿಂದ ಕೂಡಿದವನಾಗಿದ್ದೆನೋ !' ೧೮. 'ಪೂರ್ವಜನ್ಮದಲ್ಲಿ ಗಳಗಳನೆ ಅದ್ವೈತಭಾವವನ್ನು ಹೊಂದಿ (ಶಿವಜೀವರಲ್ಲಿ ಅಭೇದಭಾವ ವಿಶಿಷ್ಟನಾಗಿ) ಕಾಲತ್ರಯದಲ್ಲೂ ಮನೋಹರನಾದ ಶಿವನನ್ನು ಷೋಡಶೋಪಚಾರ ಕ್ರಮದಿಂದ ನಲಿದು ಅರ್ಚಿಸದಾದೆನೋ !' ೧೯. 'ನಾನು ಪರಮೇಶ್ವರನೆಂಬ ಒಡೆಯನ ಸೇವಕನ ಸೇವಕನೆಂಬ ನೀತಿಯನ್ನರಿದು, ನಡೆದುಕೊಳ್ಳದೆ ಹೋದೆನೊ?

1 ವ(ಅ)

ತುರನಾಗಿ ಪೂಜೆಗೆಯ್ದೆನೊ
ಪುರವೈರಿಯನನ್ಯಚಿತ್ತದೊಳ್ಭಜಿಸಿದೆನೋ ೧೯

ರಾಜೋಪಚಾರವಂ ನಿ
ರ್ವ್ಯಾಜದೊಳಾನೆಸಗದಾದೆನೋ ಶಂಭುಗೆ ತ
ತ್ಪೂಜೆಯನುಳಿದಾಹಾರವ
ನೋಜೆಯನಳಿದ[1]ಳುಪಿಕೊಂಡೆನೋ ಮೂರ್ಖತೆಯಿಂ ೨೦

ಪರಶಾಸ್ತ್ರಾವಳಿಯೊಳ್ಸದಾ ವಿಹರಣಂಬೆತ್ತಿರ್ದೆನೋ ಸತ್ಯಶಾಂ
ಕರಶಾಸ್ತ್ರಾಳಿಯವಜ್ಞೆಗೆಯ್ದೆನೊ ಬಳಲ್ದೆಯ್ತಂದ ಮಾಹೇಶ್ವರೋ
ತ್ಕರವಂ ಮನ್ನಿಸದಾದೆನೋ ಶರಣರಂ ಕಂಡಾಕ್ಷಣಂ ತನ್ನಮ
ಸ್ಕರಣಂಗೆಯ್ಯದೆ ಪೋದೆನೋ ಪಿರಿಯರಾಜ್ಞಾಲಂಘನಂಗೆಯ್ದೆನೋ ೨೧

ಘನಸದ್ಭಕ್ತಪ್ರತಾನಂ ಕೆಳಗಿರೆ ಪರಿದಗ್ರಾಸನಂಗೊಂಡು ಕುಳ್ಳಿ
ರ್ದೆನೊ ಸೊರ್ಕಿಂ ಜಂಗಮೌಘಂ ಬರೆ ಸಮಯ ನಿಯುಕ್ತೋಪಚಾರಂಗಳಂ ಸ
ಮ್ಮನದೆಂದಾಂ ಮಾಡದೇಂ ಪೋದೆನೊ ಹರಚರಸತ್ಪೂಜೆಯಂ ಶ[2]ಕ್ತಿಯಿರ್ದಂ
ತೆ ನೆಗಳ್ಚಲ್ಸಲ್ಲದೇನಾದೆನೊ ಚರಚಯದೊಳ್ಪೂರ್ವಜಾತ್ಯಾದಿಯೊಳ್ಪಂ ೨೨

ಬಗೆದೆನೊ ಪಙ್ತಿಭೇದಮನೊಡರ್ಚಿದೆನೋ ಚರಲಿಂಗಪಙ್ತಿಯೊಳ್
ಮಿಗೆ ಭವಿಮಾರ್ಗದೊಳ್ನಡೆದೆನೋ ಭವಿಪಾಕಮನುಂಡೆನೋ ಶಿವೈ

ತ್ರಿಪುರ ವೈರಿಯಾದ ಶಿವನನ್ನು ಪ್ರಯೋಜನದ ಆಸೆಯಲ್ಲಿ ಕುತೂಹಲವುಳ್ಳವನಾಗಿ ಪೂಜೆ ಮಾಡಿದೆನೋ ? ಮತ್ತೊಂದುಕಡೆಯಲ್ಲಿದ್ದ (ಅನ್ಯಭಾವನೆಯಿಂದ ಕೂಡಿದ) ಮನಸ್ಸಿನಿಂದ ಭಜಿಸಿದೆನೋ ?' ೨೦. ಶಂಭುವಿಗೆ ನಿಷ್ಕಾಪಟ್ಯದಿಂದ ರಾಜೋಪಚಾರವನ್ನು ಮಾಡದೆ ಹೋದೆನೋ ? ಮೂರ್ಖತನದಿಂದ ಆ ಶಿವನ ಪೂಜೆಯನ್ನು ಬಿಟ್ಟು, ರೀತಿದಪ್ಪಿ ಅವನಿಗರ್ಪಿಸುವ ನೈವೇದ್ಯಕ್ಕೆ ಇಚ್ಛಿಸಿ ಸ್ವೀಕರಿಸಿದೆನೋ ? (ಪ್ರಸಾದಭಾವನೆಯಲ್ಲಿ ಕ್ರಮತಪ್ಪಿದೆನೋ ಎಂದು ಭಾವ) ೨೧-೨೨-೨೩. ಪರಸಮಯದ ಶಾಸ್ತ್ರಸಮೂಹದಲ್ಲಿ ಸದಾ ವ್ಯವಹರಿಸುವವನಾಗಿದ್ದೆನೋ ? ಸತ್ಯವಾದ ಶಂಕರಸಂಬಂಧವಾದ ಶಾಸ್ತ್ರಸಮೂಹವನ್ನು ತಿರಸ್ಕರಿಸಿದೆನೋ ? ಆಯಾಸದಿಂದ ಬಂದ ಮಾಹೇಶ್ವರರುಗಳ ಸಮೂಹವನ್ನು ಮರ್ಯಾದೆಯಿಂದ ಕಾಣದೆ ಹೋದೆನೋ ? ಶರಣರನ್ನು ಕಂಡೊಡನೆಯೇ ಅವರಿಗೆ ನಮಸ್ಕರಿಸದೆ ಹೋದೆನೋ ? ಹಿರಿಯರ ಆಜ್ಞೆಯನ್ನು ಉಲ್ಲಂಘಿಸಿದೆನೋ ? ಶ್ರೇಷ್ಠರಾದ ಶಿವಭಕ್ತ ಸಮೂಹವು ಕೆಳಗಿದ್ದಾಗ ನಾನು ಹರಿದು ಹೋಗಿ ಎತ್ತರವಾದ ಪೀಠವನ್ನೇರಿ ಕುಳಿತೆನೋ ? ಜಂಗಮ ಸಮೂಹವು ಬರಲು ನಾನು ಸೊಕ್ಕಿನಿಂದ ಕಾಲೋಚಿತವಾದ ಉಪಚಾರವನ್ನು

1 ದು(ಚ, ಜ, ಮು, ಗ) 2 ಭ (ಅ)

ಕ್ಯಗಣದೊಳೆಗ್ಗನೇಂ ಪಿಡಿದೆನೋ ಶಿವಭಕ್ತರೊಳೊರ್ವರ್ಗೆ ಸೋಲವುಂ
ನೆಗಳ್ದೆನೊ ಗರ್ವದಿಂ ಜಱಿದೆನೋ ಶಿವತತ್ವಕಳಾಪ್ರಸಂಗಮಂ ೨೩

ಶಿವವಿದ್ಯಾಗುರುಭೇದಬುದ್ಧಿಯನದೇಂ ಕೈಕೊಂಡೆನೋ ಗೌರವಾಂ
ಘ್ರಿವನೇಜಾತದ ಜಾನಮಂ ತೊಱೆದೆನೋ ತತ್ಪಾದಪೂಜಾಮಹೋ
ತ್ಸವಕಾಲಸ್ಯಮನಾಳ್ದೆನೋ ಮಱೆದೆನೋ ತದ್ದೇಶಿಕೇಂದ್ರಾತ್ಮಸಂ
ಭವರಂ ಮನ್ನಿಪುದಂ ಭವಿವ್ರಜದ ಮೇಳಾಪಕ್ಕೆ ಪಕ್ಕಾದೆನೋ ೨೪

ಪರವಾದಿವ್ರಾತಕಾನಳ್ಕಿದೆನೊ ಪರಶಿವಾಚಾರಮಂ ಮಾಣ್ದೆನೋ ಶಾಂ
ಕರಲೀಲಾಸತ್ಕಥಾಕರ್ಣನದೊಳಲಸನಾಗಿರ್ದೆನೋ ಶೈವಧರ್ಮೋ
ದ್ಧರಣರ್ಗಾಂ ವಿಘ್ನಮಂ ಚಿಂತಿಸಿದೆನೊ ವಿಷಯೋದ್ರೇಕದೊಳ್ಸಂದೆನೋ ಭ
ಕ್ತರಹಸ್ಯೋಕ್ತಿಂಗಳಂ ದೂಱಿದೆನೊ ತೊಱೆದೆನೋ ಶೀಲಮಂ ಲೌಲ್ಯದಿಂದಂ ೨೫

ಶಿವನಿಂದಾವಾಕ್ಯಮಂ ಕೇಳ್ದೆನೊ ಪರಧನಮಂ ಕೊಂಡೆನೋ ಮೋಸದಿಂದ
ನ್ಯವಧೂಟೀಸಂಗಮಂ ಮಾಡಿದೆನೊ ಪಳಿದೆನೋ ಶಿಷ್ಟರಂ ಶೀಲಮಂ ಮಾ

ಸಂತೋಷದಿಂದ ಮಾಡದೆ ಹೋದೆನೋ ಏನೋ ? ನನ್ನ ಶಕ್ತಿಗನುಗುಣವಾಗಿ ಲಿಂಗಜಂಗಮ ಪೂಜೆಯನ್ನು ಮಾಡುವುದಕ್ಕೆ ಅರ್ಹನಾಗದೆ ಹೋದೆನೋ ? ಜಂಗಮರ ಗುಂಪಿನಲ್ಲಿ (ಅವರ) ಪೂರ್ವದ ಜಾತಿಗಳ ಸಮೀಚೀನತ್ವವನ್ನು ಯೋಚಿಸಿದೆನೋ ? ಜಂಗಮರ ಪಂಕ್ತಿಯಲ್ಲಿ, ಪಂಕ್ತಿಭೇದವನ್ನು ಮಾಡಿದೆನೋ ? ಲಿಂಗವಿಹೀನರಾದವರ ನಡತೆಯಲ್ಲಿ ವ್ಯವಹರಿಸಿದೆನೋ ? ಲಿಂಗವಿಹೀನರು ಮಾಡಿದ ಅಡಿಗೆಯನ್ನುಂಡೆನೋ ? ಅಜ್ಞಾನದಿಂದ ಶಿವೈಕ್ಯಚಿತ್ತವುಳ್ಳವರ ಗುಂಪಿನಲ್ಲಿ ಮೌಢ್ಯವನ್ನೇನಾದರೂ ಅನುಸರಿಸಿದೆನೋ ? ಒಮ್ಮೆ ಶಿವಭಕ್ತರೇನಾದರೂ ಸೋತುಹೋಗುವಂತೆ ಮಾಡಿದೆನೋ ? ಗರ್ವದಿಂದ ಶಿವತತ್ವವಿದ್ಯಾಪ್ರಸಂಗವನ್ನು ತಿರಸ್ಕರಿಸಿದೆನೋ ? (ಲಿಂಗಾಂಗ ಸಾಮರಸ್ಯ ಬೋಧಕವಾದ ವಿದ್ಯೆಯ ಪ್ರಸ್ತಾಪವನ್ನು ಜರಿದೆನೋ?) ೨೪. ಶೈತ ಸಂಬಂಧವಾಧ ವಿದ್ಯೆಯನ್ನು ಉಪದೇಶಿಸುವ ಗುರುವಿನಲ್ಲಿ ಭೇದಬುದ್ಧಿಯನ್ನೇನಾದರೂ ಕೈಗೊಂಡೆನೋ ? ಗುರುಸಂಬಂಧವಾದ ಪಾದಕಮಲದ ಧ್ಯಾನವನ್ನು ತೊರೆದುಬಿಟ್ಟೆನೋ ? ಆ ಗುರುವಿನ ಪಾದ ಪೂಜೆಯನ್ನು ಮಾಡುವ ಉತ್ಸವದಲ್ಲಿ ಆಲಸ್ಯಭಾವವನ್ನು ಹೊಂದಿದೆನೋ ? ಆ ಗುರುವಿನಿಂದ ಹುಟ್ಟಿದ ಮಕ್ಕಳುಗಳನ್ನು ಮರ್ಯಾದಿಸುವುದನ್ನು ಮರೆತೆನೋ ? ಲಿಂಗಹೀನರ ಗುಂಪಿನ ಸಂಭಾಷಣೆಗೇನಾದರೂ ಸೇರಿದೆನೋ ? ೨೫–೨೬. ನಾನು ಅನ್ಯಮತದವರ ವಾದಕ್ಕೇನಾದರೂ ಹೆದರಿದೆನೋ ? ಪರಶಿವನ ಸಂಬಂಧದ ಆಚಾರವನ್ನು ಬಿಟ್ಟೆನೋ ? ಶಿವನ ಲೀಲಾವಿಷಯಕವಾದ ಕಥೆಗಳನ್ನು ಕೇಳುವುದರಲ್ಲಿ ಆಲಸ್ಯವುಳ್ಳವನಾಗಿ ಇದ್ದೆನೋ ? ನಾನು ಶೈವ ಧರ್ಮೋದ್ಧಾರ ಮಾಡಿದವರಿಗೆ ವಿಘ್ನವನ್ನೇನಾದರೂ ಚಿಂತಿಸಿದೆನೋ ? ವಿಷಯಸುಖಿಗಳ ಅತಿಶಯದಲ್ಲಿ ಸಂದಿದವನಾದೆನೋ ? ಭಕ್ತರುಗಳನ್ನು ಪರಿಹಾಸೋಕ್ತಿಗಳಿಂದ ದೂರಿದೆನೋ ? ಸದಾಚಾರ

ಣ್ದವರೊಳ್ಕೂಡಿರ್ದೆನೋ ಸೂಸಿದೆನೊ ಧರೆಗೆ ಲಿಂಗಪ್ರಸಾದಾಂಶಮಂ ಸಾ
ಧುವಿರೋಧಂ ಗೆಯ್ದೆನೋ ಮಾಡಿದೆನೊ ಕಪಟಮಂ ಮಾಣ್ದೆನೋ ಭಕ್ತಿಯೊಳ್ಪಂ ೨೬

ಪರಿಕಿಪೊಡಿವಱೊಳಗೊಂದುಂ
ದುರಿತಮನೆಸಗದೊಡೆ ಮುನ್ನಮಿಂದೆನಗೀಗ
ಳ್ಗುರುತಲ್ಪಗಮನದೋಷಂ
ದೊರೆಕೊಳ್ಗುಮೆ ಜನನಿ ಮಾಣದೀ ಧಾರುಣಿಯೊಳ್ ೨೭

ವ॥ ಎಂದಿಂತಾಕ್ರಂದನಂಗೆಯ್ದು ಮತ್ತಮಿರದೆ—

ಗುರುವಿನತ್ತಿಗೆ ತಳ್ತ ನಾದಿನಿಯೊರ್ವೞ್ ಸೋಂಕಿದ ಕಾಂತೆ ತ
ದ್ಗುರುವಿನೋದಿಸಿದಾಕೆಯೊತ್ತೆಯನಿತ್ತ ಕಾಮಿನಿ ಮುನ್ನಮೊ
ಲ್ದಿರಿಸಿಕೊಂಡುಳಿದಿರ್ದ ನಾರಿ ಸಹಾನ್ನಭೋಕ್ತೆಯೆನಿಪ್ಪ ಸೌಂ
ದರಿಯರಾ ಗುರುಪತ್ನಿಯೊಳೊತ್ತಣೆಯೆಂಬರಾಗಮಕೋವಿದರ್ ೨೮

ಅದು ಕಾರಣದಿಂ ನೀಂ ಗುರು
ಸುದತಿ ಗಡೆಲೆ ತಾಯೆ ಗುರುವಿನೊಳ್ಕೆರೆದುದಱಿಂ
ಮದನೋದ್ರೇಕದೆ ನಿನಗಳು
ಪಿದೆನೀ ಘನದೋಷಕಾವುದೋ ಪರಿಹಾರಂ ೨೯

ವನ್ನು ಚಾಪಲ್ಯದಿಂದ ಬಿಟ್ಟುಬಿಟ್ಟೆನೋ ? ಪರಶಿವನ ದೂಷಣೆಯನ್ನು ಕಿವಿಯಿಂದ ಕೇಳಿದೆನೊ ? ಮತ್ತೊಬ್ಬರ ಐಶ್ವರ್ಯವನ್ನು ಅಪಹರಿಸಿದೆನೊ ? ಅಜ್ಞಾನದಿಂದ ಅನ್ಯ ಸ್ತ್ರೀ ಸಂಗವನ್ನು ಮಾಡಿದೆನೋ ? ಸತ್ಪುರುಷರನ್ನು ತಿರಸ್ಕರಿಸಿದೆನೋ ? ಸದಾಚಾರ ವನ್ನು ಬಿಟ್ಟವರೊಡನೆ ಕೂಡಿದ್ದೆನೋ ? ಭೂಮಿಗೆ ಲಿಂಗಪ್ರಸಾದ ತೀರ್ಥಗಳನ್ನು ಚೆಲ್ಲಿದೆನೋ ? ಸತ್ಪುರುಷರೊಡನೆ ವೈರವನ್ನು ಮಾಡಿದೆನೋ ? (ಅನ್ಯರಿಗೆ) ಮೋಸ ವನ್ನೇನಾದರೂ ಮಾಡಿದೆನೋ ? ಭಕ್ತಿಯ ಸಮೀಚೀನತ್ವವನ್ನು ಬಿಟ್ಟೆನೋ ? ೨೭. ಜನನಿಯೇ, ವಿಚಾರಮಾಡಿನೋಡಿದರೆ ಇವುಗಳಲ್ಲಿ ಒಂದನ್ನಾದರೂ ಪಾಪವನ್ನು ಮೊದಲು ಮಾಡದಿದ್ದರೆ ನನಗೆ ಈ ಗುರುತಲ್ಪ ಗಮನದ ದೋಷವು ಇಂದು ಈ ಭೂಮಿಯಲ್ಲಿ ಉಂಟಾಗುತ್ತಿತ್ತೇ ? ವ॥ ಹೀಗೆಂದು ಗಟ್ಟಿಯಾಗಿ ಅಳುತ್ತ, ಮತ್ತೂ ಇರದೆ—೨೮. ಆಗಮಜ್ಞಾನವಿಶಾರದರು-ಗುರುವಿನ ಅಣ್ಣನ ಹೆಂಡತಿ, ಸೇರಿದ ಗುರುವಿನ ತಮ್ಮನ ಹೆಂಡತಿ, ಒಮ್ಮೆ ಗುರುವು ಸ್ಪರ್ಶಮಾಡಿದ ಕಾಂತೆ, ಆ ಗುರುವು ವಿನೋದಿಸಿದವಳು, ಗುರುವು ಒತ್ತೆಯ ಹಣವನ್ನು ಕೊಟ್ಟ ಸುಂದರಿ, ಮೊದಲು ಪ್ರೀತಿಸಿ ಇಟ್ಟುಕೊಂಡು ಬಿಡಲ್ಪಟ್ಟ ಹೆಂಗಸು, ಗುರುವಿನೊಡನೆ ಊಟಮಾಡಿದವಳೆಂದೆ ನಿಸಿದ ಸುಂದರಿ-ಇವರೆಲ್ಲ ಆ ಗುರುಪತ್ನಿಗೆ ಸಮಾನರೆಂದೆನ್ನುವರು. ೨೯. ಎಲೆ ತಾಯಿಯೇ, ನೀನು ಗುರುವಿನೊಡನೆ ಕೂಡಿದವಳಾದ ಕಾರಣದಿಂದ ಗುರುಪತ್ನಿಯೇ ಆದೆಯಲ್ಲವೇ ? ಕಾಮಾತಿಶಯದಿಂದ ನಿನಗೆ ಆಸೆಪಟ್ಟೆನು. ಈ ಮಹಾದೋಷಕ್ಕೆ

ಗುರುವಧುಗೆ ಕೂರ್ತ ಪಾಪಕೆ
ಪರಿಹಾರಮನಕ್ಕ ಪೇಳ್ವುದೆನಗೀಗಳೆನು
ತ್ತುಗವಣಿಸಿದಳನೊಳಂಕೊಂ
ಡಿರದವಳಡಿಳಿರೊಳೆಱಗಿ ಕಣ್ಬನಿವೊನಲಿಂ ೩೦

ಲಲನಾಪಾದಾಬ್ಜಮಂ ತಾಂ ತೊಳೆವುತೊರಸುತುಂ ಭಾಳಮಂ ಬಳ್ಕುತುಂ ಸು
ಯ್ದಲಸುತ್ತುಂ ನೋವುತುಂ ಬೇವುತೆ ಪಳಯಿಸುತುಂ ಕಂದುತುಂ ಕುಂದುತುಂ ಪಂ
ಬಲಿಸುತ್ತುಂ ಸುರ್ಕುತುಂ ಕಂಪಿಸುತೆ ಕರಗುತುಂ ಕೋಡುತುಂ ಬಾಡುತುಂ ಕೋ
ಟಲೆಗಿಂಬಾಗುತ್ತೆ ಬೀೞುತ್ತೞಲುತೞುತೆ ಬೇಳಾದನಾ ಭಕ್ತವರ್ಯಂ ೩೧

ವ|| ಮತ್ತಂ—

ಮಱುಗುವನಳವಳಿವಂ ಮೆ
ಯ್ಮಱೆವಂ ಕಳವಳಿಪನಂತೆ ಮೂರ್ಛೆಗೆ ಸಲ್ವಂ
ಮಱುಕಳಿಪ ಶೋಕದಿಂ ಸ್ರೈ
ಗಱೆವಂ ಕಣ್ಬನಿಯನಿಳೆಯೊಳುರುಳ್ವಂ ಪೊರಳ್ವಂ ೩೨

ಬಱುದೊಱೆವೋದುದೆನ್ನಯ ವಿವೇಕಮಡಂಗಿದುದೆನ್ನ ಸೈಪು ಕ
ಟ್ಟೆಱಕದ ದೇಶಿಕೇಂದ್ರಪದಭಕ್ತಿಮಹಾನಿಧಿ ಮಾಯಮಾದುದೆ
ನ್ನಱಿವೊಳಸೋರ್ದುದಿಂಗಿದುದು ಕೀರ್ತಿತರಂಗಿಣಿ ಕೆಟ್ಟೆನಕ್ಕಟೆ
ನ್ನಱಿಕೆಯ ಶೈವಧರ್ಮಮಳಿಪಾಂತುದು ನಿನ್ನಳಿಪಾಂತ ದೂಷಣಂ ೩೩

ಪರಿಹಾರವು ಯಾವುದೋ. ೩೦–೩೧. ಅಕ್ಕ, ಗುರುವಿನ ವಧುವಿಗೆ ಆಶಿಸಿದುದರಿಂದ ಉಂಟಾದ ಪಾಪಕ್ಕೆ ಪರಿಹಾರವನ್ನು ಈಗಲೇ ಎನಗೆ ಹೇಳಬೇಕು, ಎನ್ನುತ್ತ ಉಕ್ಕಿ ಬರುವ ದುಃಖವನ್ನು ಒಳಗೊಂಡವನಾಗಿ ತಪ್ಪದೆ ಅವಳ ತಳಿರಿನಂತಿರುವ ಪಾದಗಳಲ್ಲಿ ನಮಸ್ಕರಿಸಿ, ಕಣ್ಣೀರಿನ ಪ್ರವಾಹದಿಂದ ಆ ಭಕ್ತವರ್ಯನು ಆ ಸ್ತ್ರೀಯಳ ಪಾದಕಮಲವನ್ನು ತೊಳೆಯುತ್ತ, ಹಣೆಯನ್ನೂ ತಿಕ್ಕಿಕೊಳ್ಳುತ್ತ, ತೂಗಾಡುತ್ತ, ನಿಟ್ಟುಸಿರುಬಿಟ್ಟು, ಅಲಸ್ಯಪಡುತ್ತ, ನೊಂದುಕೊಳ್ಳುತ್ತ, ಸಂತಾಪಪಡುತ್ತ, ಪ್ರಲಾಪ ಮಾಡುತ್ತಾ, ಕಾಂತಿಹೀನನಾಗುತ್ತ, ಕುಂದಿಹೋಗುತ್ತ, ಹಂಬಲಿಸುತ್ತ, ಸುಕ್ಕುಗೊಳ್ಳುತ್ತ, ನಡುಗುತ್ತ, ಕರಗಿಹೋಗುತ್ತ, ಭಯುಗೊಳ್ಳುತ್ತ, ರಸಹೀನನಾಗುತ್ತ, ಕೋಟಲೆಗೆ ಗುರಿಯಾಗುತ್ತ, ಬೀಳುತ್ತ, ಖೇದಪಟ್ಟು ಅಳುತ್ತ ಪ್ರಜ್ಞಾಹೀನನಾದನು. ೩೨. ಮರುಗುವನು, ಶಕ್ತಿಹೀನನಾಗುವನು, ಅವಿತುಕೊಳ್ಳುವನು, ವ್ಯಾಕುಲಪಡುವನು, ಹಾಗೆಯೇ ಪರವಶನಾಗುವನು, ಪುನಃ ಪುನಃ ವಿಶೇಷವಾಗುತ್ತಿರುವ ಶೋಕದಿಂದ ಕಣ್ಣೀರನ್ನು ಸುರಿಸುವನು, ಭೂಮಿಯ ಮೇಲೆ ಉರುಳಾಡುವನು. ೩೩. ನಿನ್ನ ವಿಷಯದಲ್ಲಿ ಆಸೆಪಟ್ಟ ಕಾರಣದಿಂದ ನನ್ನ ವಿವೇಕವೆಲ್ಲ ನೀರಿಲ್ಲದ ನದಿಯಂತಾಯಿತು; ನನ್ನ ಪುಣ್ಯವೆಲ್ಲ ಮರೆಯಾಗಿ ಹೋಯಿತು; ಅತ್ಯಂತ ಪ್ರೀತಿಯುಳ್ಳ ಗುರುಶ್ರೇಷ್ಠನ ಪಾದಭಕ್ತಿಯೆಂಬ ದೊಡ್ಡ ನಿಕ್ಷೇಪವು ಮಾಯವಾಯಿತು; ನನ್ನ ತಿಳುವಳಿಕೆಯೆಲ್ಲ ಒಳಕ್ಕೆ ಇಳಿದು ಹೋಯಿತು (ನಾಶವಾಯಿತು); (ನನ್ನ) ಸತ್ಕೀರ್ತಿಯೆಂಬ ನದಿಯು ಬತ್ತಿ ಹೋಯಿತು. ಅಯ್ಯೋ! ಕೆಟ್ಟೆನು. ನನ್ನ ಸುಜ್ಞಾನದಿಂದ

ಗುರುವಧುಗಳುಪಿದ ದೋಷಾ
ಕರನಮೃತಕಳಾಕ್ಷಯಕ್ಕೆ ಪಕ್ಕಾದಂ ದ
ಲ್ಗುರುವಧುಗಳುಪಿದ ದೋಷಾ
ಕರನಾದೆನಗಮೃತಭಾವಮೇಂ ಸಮನಿಕುಮೇ ೩೪

ವ॥ ಎಂದಿಂತು ನೊಂದು ನುಡಿದಳವಿಗಳಿದಳಲಂ ಸೈರಿಸಲಾಱದೆ—

ಉರಿಯಂ ಪೊಕ್ಕಳಿವೆನೊ ಸಾ
ಗರದೊಳಪೊಕ್ಕಾಳ್ದು ಮಡಿವೆನೋ ಕಡಿಕಡಿದೆ
ಳ್ತರದಿಂ ದಿಗ್ಬಲಿಗುಡುವೆನೊ
ಶರೀರಮಂ ಪುಗುವೆನೋ ಪುರಾರಿಯ ಬಸುಱಂ ೩೫

ವ॥ ಎಂದು ಪಲುಂಬಿ ತನ್ನಸುವಂ ವಿಸರ್ಜಿಸಲೆಳಸಿ ಮತ್ತಮಿರದಾ ಮಂದಗಮನೆಯ ಮಂದಿರಕ್ಕೆ ರಾಗದಿಂ ನಡೆಗೊಂಡ ಕಾಲ್ಗಳಂ ಕಡಿಕಂಡಂಗೆಯ್ದು ದೆಸೆದೆಸೆಗೀಡಾಡಲುಮಾ ಸೌಂದರಿಯ ಸೌಂದರ್ಯಮಂ ಸವಲೋಕನಂಗೆಯ್ದ ನಿಜನೇತ್ರಂಗಳನುತ್ಪಾಟನಂಗೆಯ್ದುರಿಯೊಳುರುಪಲುಮಾ ಮೃದುಸ್ಮಿತಮುಖಿಯೊಡನೆ ನಕ್ಕು ನಲಿದ ನಿಜಾಸ್ಯವಿವರದಧರ ರದನಂಗಳಂ ಕೊಯ್ಗೊಯ್ದು ನುರ್ಚುನುಱಿ ಮಾಡಿ ಕಲ್ಲೊಳಿಟ್ಟರೆಯಲುಮಾ ಮಧುರಾಧರೆಯಧರರಸಮಂ ಬಯಸಿ ಪಲವಂ

ಪ್ರಾಪ್ತವಾದ ಶೈವಧರ್ಮವು ಅಳಿವನ್ನು ಹೊಂದಿತು. ೩೪. ಗುರುವಿನ ಪತ್ನಿಯಲ್ಲಿ ಆಸೆ ಮಾಡಿದ ಪಾಪಕ್ಕೆ ಆಸ್ಪದನಾದವನು ಮೋಕ್ಷಕ್ಕೆ ಸಾಧಕವಾದ ವಿದ್ಯೆಯನಾಶಕ್ಕೆ ಕಾರಣನಾಗುವನು (ಗುರುವಾದ ಬೃಹಸ್ಪತಿಯ ಪತ್ನಿಗೆ ಇಚ್ಛಿಸಿದ ಚಂದ್ರನು ಅಮೃತ ಮಯವಾದ ಕಿರಣಗಳ ನಾಶಕ್ಕೆ ಕಾರಣನಾದನು) ಇದು ನಿಶ್ಚಯ ಗುರು ಪತ್ನಿಯನ್ನು ಇಚ್ಛಿಸಿದ ನನಗೆ ಮೋಕ್ಷವು (ಅಮೃತ ಭಾವವು) ಪ್ರಾಪ್ತವಾಗುವುದೇ ? ವ॥ ಎಂದು ಈ ವಿಧದಲ್ಲಿ ನೊಂದುಕೊಂಡು ನುಡಿದು ಲೆಕ್ಕವಿಲ್ಲದ ದುಃಖವನ್ನು ಸೈರಿಸಲಾರದೆ— ೩೫. ಉರಿಯ ಜ್ವಾಲೆಯಲ್ಲಿ ಹೊಕ್ಕು ಸಾಯಲೇ? ಸಾಗರವನ್ನು ಹೊಕ್ಕು ಮುಳುಗಿ ಸಾಯಲೋ ? ಈ ಶರೀರವನ್ನು ಪೂರ್ಣವಾಗಿ ಕಡಿಕಡಿದು ದಿಕ್ಕುಗಳಿಗೆ ಬಲಿ ಕೊಡಲೋ ? ಶಿವನ ಬಸಿರನ್ನೇ ಹೊಗಲೋ ? ವ॥ ಹೀಗೆಂದು ಹಲವಾರು ಪ್ರಕಾರದಿಂದ ಹಲುಬಿ, ತನ್ನ ಪ್ರಾಣವನ್ನೇ ಬಿಡಲು ಇಚ್ಛಿಸಿ, ಪುನಃ ಇರದೆ ಈ ಮಂದಗಮನೆಯ ಮನೆಗೆ ವಿಷಯೇಚ್ಛೆಯಿಂದ ನಡೆದು ಬಂದ ಕಾಲುಗಳನ್ನೇ ಕಡಿದು ಕಂಡಗೊಳಿಸಿ ದಿಕ್ಕು ದಿಕ್ಕಿಗೆ ಬಿಸಾಡುವುದಕ್ಕೂ, ಆ ಸೌಂದರ್ಯಶಾಲಿನಿಯ ಸೌಂದರ್ಯವನ್ನು ನೋಡಿದ ತನ್ನ ನೇತ್ರ ಗಳನ್ನೇ ಕಿತ್ತುಹಾಕಿ ಉರಿಯಲ್ಲಿ ಉರಿಸಿ ಬಿಡುವುದಕ್ಕೂ, ಆ ಮೃದುವಾಗಿ ನಕ್ಕಮುಖ ವುಳ್ಳವಳೊಡನೆ ನಕ್ಕು ನಲಿದ ನನ್ನ ಮುಖದ ಹಲ್ಲುಗಳನ್ನೇ ಕಿತ್ತು ಒಯ್ದು ಚೂರು ಚೂರು ಮಾಡಿ, ಕಲ್ಲಿಗೆ ಹಾಕಿ ಅರೆಯುವುದಕ್ಕೂ, ಆ ಮಧುರವಾದ ಅಧರವುಳ್ಳವಳ ಅಧರ ರಸವನ್ನು ಬಯಸಿ, ಅನೇಕ ಮಾತುಗಳನ್ನು ಹರಟಿದ ನಾಲಿಗೆಯನ್ನು ಕಿತ್ತು ಸೀಳಿ ಸುಡುವ ಹುಂಜಿಗೆ ಹಾಕಿ ಹುರಿಯಿಸುವುದಕ್ಕೂ, ಆ ಲತೆಯಂತಿರುವ ದೇಹವುಳ್ಳವಳ

ಗಳಪಿದ ರಸನೆಯುಂ ಕೀಳ್ದು[1] ಸೀಳ್ದು ಬಿಸಿ ಗಾವಲಿಯೊಳಿಕ್ಕಿ ಪುರಿಯಲುಮಾ ಲತಾಂಗಿಯಂಗಮನಾಲಿಂಗನಂಗೆಯ್ಯಲೆಳಸಿದ ತೋಳ್ಗಳಂ ತುಂಡಿಸಿ ಕಿಱುಕಿಱಿದಾಗಿ ತಱಿದು ತಱಿ[2]ಗೆಂಡದೊಳಿಟ್ಟು ಚುರ್ಚಲುಮಾ ನಿಬಿಡೋತ್ತುಂಗಕುಚಯುಗಳುಮನಪ್ಪಲಳ್ತಿವಟ್ಟ ವಕ್ಷಸ್ಥಳಮನಿಱಿದಿಱಿದು ಖಂಡಂಗಳಂ ತೆಗೆದೊರಳೊಳಿಕ್ಕಿ ಮಿದಿಯಲುಮುಟವಟಿಸಿ ಪಿಡಿಮಿಡಿಗೊಂಡಿಂತಿಂತೆಸಗಿದಲ್ಲದೀ ದೋಷಂ ಪಱಿವಡದೆಂದು ನೆನೆದು ಮಗುಳ್ದು ಮೊಯ್ಯಂ ಮಱೆದು ಬಳಲ್ದು ತೊಳಲ್ದು ಪಲವಂ ಪಲುಂಬುತಲ್ಲಿಂದೆಳ್ದು ಪುರೋಪಕಂಠದುಪವನಕ್ಕೆಯ್ತಂದು ನಿಂದು ವನಾಂತರಾಳದ ತರುನಿಕರಮುಮಂ ಶಕುಂತಸಂತಾನಮುಮನಲ್ಲಲ್ಲಿ ಪರಿವರಿದಭೀಕ್ಷಿಸಿ—

ಎಲೆ ಮಾಕಂದಮೆ ಕಂದಿದೆಂ ನೆಗಳ್ದೆನಾಂ ಶ್ರೀಖಂಡಮೇ ಖಂಡಚಂ
ದ್ರಲಲಾಟಂಗಪರಾಧಮುಂ ಬಸುಱಿ ಕೇಳೆನ್ನೀ ಬಸುರ್ಬೆಂದುದು
ಜ್ವಲ ಶೋಕಾನಳದಿಂದೆ ಬೀರಮಳಿದೆಂ ಜಂಬೀರಮೇ ಮಲ್ಲಿಕಾ
ವಲಿ ಮಲ್ಲೀನವಿವೇಕಮಿಂಗಿದುದು ಬನ್ನಂಬೆತ್ತೆನಾಂ ಬನ್ನಿ ಕೇಳ್ ೩೬

ಕುಂದಮೆ ಮುಕುಂದವಲ್ಲಭ
ನೆಂದೊಲ್ದಪನೆನಗೆ ಪೇಳ ಪಿಚುಮಂದಮೆ ನೀ
ಮುಂದಪ್ಪಿದೆನಸುಗೆಯಸುಗೆ
ನಿಂದುರಿವೊಂದಂದಮಾದುದೀ ದುಷ್ಕೃತದಿಂ ೩೭

ಸಂಪಗೆ ಕೇಳೆನ್ನಯ ಸಾ
ಸಂ ಪಗೆ ಪೂಗೋಲನಿಂದೆ ಮಳ್ಗಿದುದು ಕೃತಾಂ
ತಂ ಪಾಯ್ದುರಿಯದ ಮುನ್ನೆ
ನ್ನಂ ಪಾದರಿ ಮದನವೈರಿಯೆಂತೊಲ್ದಪನೋ ೩೮

ಮಾದಳಮೆ ಎನಗೆ ಮಿಗೆ ಸೊ
ಮ್ಮಾದಳವೊಳಸೋರ್ದುದಕ್ಕಟೇಗೆಯ್ದಪೆನಾಂ

ಆಲಿಂಗನ ಮಾಡುವುದಕ್ಕೆ ಬಯಸಿದ ತೋಳುಗಳನ್ನು ತುಂಡು ಮಾಡಿ, ಚಿಕ್ಕ ಚಿಕ್ಕ ಚೂರುಗಳಾಗಿ ಕತ್ತರಿಸಿ ನಿಗಿ ನಿಗಿಸುವ ಕೆಂಡದಲ್ಲಿ ಹಾಕಿ ಸುಡುವುದಕ್ಕೂ, ಆ ದಟ್ಟವಾಗಿಯೂ ದಪ್ಪವಾಗಿಯೂ ಇರುವ ಸ್ತನಗಳುಳ್ಳ ಪ್ರೌಢೆಯ ಮೊಲೆಗಳೆರಡನ್ನೂ ತಬ್ಬಿಕೊಳ್ಳುವುದಕ್ಕೆ ಆಸೆಪಟ್ಟ, ಎದೆಯನ್ನು ಇರಿದು ಖಂಡಗಳನ್ನು ತೆಗೆದು ಒರಳು ಕಲ್ಲಿನಲ್ಲಿ ಹಾಕಿಕುಟ್ಟುವುದಕ್ಕೂ, ಆತುರಗೊಂಡು ಸಿಡಿಮಿಡಿಗೊಂಡು ಈ ರೀತಿಯಲ್ಲಿ ಮಾಡಿದಲ್ಲದೆ ಈ ನಾನು ಮಾಡಿದ ಪಾಪವು ನಾಶವಾಗುವುದಿಲ್ಲ, ಎಂದು ಯೋಚಿಸುತ್ತ -ಪುನಃ ಮೂರ್ಛೆಗೊಂಡು ಬಳಲಿ ಅನೇಕ ಬಗೆಯಾಗಿ ಹಲುಬುತ್ತ ಅಲ್ಲಿಂದೆದ್ದು ಪಟ್ಟಣದ ಸಮೀಪದಲ್ಲಿರುವ ಉಪವನಕ್ಕೆ ಬಂದುನಿಂತು ಆ ತೋಟದಲ್ಲಿರುವ ಗಿಡಗಳ ಗುಂಪನ್ನೂ, ಪಕ್ಷಿಗಳ ಸಮುದಾಯವನ್ನೂ ಅಲ್ಲಲ್ಲಿ ಹರಿಹರಿದಾಡಿ ನೋಡುತ್ತ.
೩೬–೩೯. ಎಲೈ ಸಿಹಿ ಮಾವಿನಮರವೇ, ನಾನು ಕಾಂತಿಹೀನನಾಗಿದ್ದೇನೆ ; ಎಲೈ

1 ಳ್ತು(ಅ, ಜ) 2 ರೆ (ಮು)

ಕಾದಳಮೆಯೆನ್ನ ಮಾನಸ
ಕಾದಳಲಂ ಪಜಿೀವೆನೆಂದೊ ಶಿವಗಣಕೃಪೆಯಿಂ ೩೯

ಕುರವಕಮೆಯೆನ್ನ ಪುಣ್ಯಾಂ
ಕುರವಕಟ ಮುರುಂಟಿದತ್ತು ಶಿವ ಶಿವ ಘನಕಾ
ಮರುಗಮಿೀತ ಬಾಧೆಯಿಂದಂ
ಮರುಗಮೆ ಮರುಳಾಗಿ ಪೊಲ್ಲದೆಸಗಿದೆನಲ್ತೇ ೪೦

ಆಮಳಕಮೆ ಮದ್ಗುರು ವಿತ
ತಾಮಳ ಕರುಣಾಕಟಾಕ್ಷಮೆಂದಪ್ಪುದೊ ಪೇಳ್
ಶ್ರೀಮುಕ್ತಕ ಗುರುಭಕ್ತಿ
ಶ್ರೀಮುಕ್ತಕನಾಗಿ ಕೆಟ್ಟೆನಕಟಕಟೀಗಳ್ ೪೧

ಶ್ರೀಗಂಧವೇ ಚಂದ್ರನ ಒಂದು ಖಂಡವನ್ನು ಧರಿಸಿದ ಶಿವನಿಗೆ ಅಪರಾಧವನ್ನು ಮಾಡಿದ್ದೇನೆ. ಬಸರಿಯ ಮರವೇ ನನ್ನ ಈ ದೇಹವು (ಬಸಿರ್), ಉಜ್ವಲವಾದ ಶೋಕವೆಂಬ ಬೆಂಕಿಯಿಂದ ಬೆಂದುಹೋಗಿದೆ ; ಎಲೈ ನಿಂಬೆಯ ಮರವೇ, ಶೌರ್ಯಹೀನ ನಾದೆನು ; ಮಲ್ಲಿಗೆ ಬಳ್ಳಿಯ ಸಮೂಹವೇ ನನ್ನಲ್ಲಡಗಿದ ವಿವೇಕವುನಾಶವಾಯಿತು ; ಎಲೈ ಬನ್ನಿಯಮರವೇ ನಾನು ಕಷ್ಟವನ್ನು ಹೊಂದಿದೆನು. ಎಲೈ ಮೊಲ್ಲೆಯೆ (ಕುಂದವೇ). ನನಗೆ ಮುಕುಂದನ ಪತಿಯೆನಿಸಿದ ಶಿವನು ಎಂದು ಒಲಿಯುವನು? ಹೇಳ ಬಾರದೇ! ನಿಂಬೆಯ ಮರವೇ, ನಿಯಮವನ್ನು ಅತಿಕ್ರಮಿಸಿದನು; ಅಶೋಕ ವೃಕ್ಷವೇ, ನಾನು ಮಾಡಿದ ಈ ಪಾಪದಿಂದ ನನ್ನ ಪ್ರಾಣಕ್ಕೆ ಉರಿಯಲ್ಲಿ ನಿಂತು ಸುಟ್ಟು ಹೋಗು ತ್ತಿರುವ ಒಂದು ರೀತಿಯುಂಟಾಯಿತು. ಎಲೈ ಸಂಪಿಗೆಯೇ, ಕೇಳು ನನ್ನ ಸಾಹಸವು ಶತ್ರುವಾದ ಮನ್ಮಥನಿಂದ ನಾಶವಾಯಿತು. ಪಾದರಿಯಮರವೇ, ಯಮನು ನನ್ನ ಮೇಲೆ ಬಿದ್ದು ಕತ್ತರಿಸಿದ ಮೊದಲು ಮನ್ಮಥ ವೈರಿಯಾದ ಶಿವನು ಹೇಗೆ ಒಲಿದಾನು ? ಎಲೈ ಮಾದಾಳಗಿಡವೇ, ನನಗೆ ವಿಶೇಷವಾಗಿ ಉಂಟಾಗಿದ್ದ ಶೌರ್ಯವು ನಾಶವಾಯಿತು, ಅಕ್ಕಟಾ ! ಏನು ಮಾಡಲಿ ! ಎಲೈ ಬಾಳೆಯಮರವೇ, ನನ್ನ ಮನಸ್ಸಿಗಾದ ಅಳಲನ್ನು ಶಿವಗಣಗಳ ಕೃಪೆಯಿಂದ ಎಂದು ಹರಿದುಹಾಕುವೆನೋ ? ೪೦-೪೧. ಎಲೈ ಕುರವಕ ಮರವೇ (ಗೋರಂಟಿಯೇ), ನನ್ನ ಪುಣ್ಯದ ಮೊಳಕೆಯೇ ಮುರಿದುಹೋಯಿತು. ಅಕ್ಕಟ ! ಶಿವ ಶಿವ ! ! ಮರುಗವೇ, ವಿಶೇಷವಾದ ವಿಷಯ ಸುಖದ ಇಚ್ಛೆಯೆಂಬ ರೋಗದಿಂದುಂಟಾದ ಅಮಿತವಾದ ಬಾಧೆಯಿಂದ ಹುಚ್ಚನಾಗಿ ಮಾಡಬಾರದುದನ್ನು ಮಾಡಿದೆನಲ್ಲವೇ ? ನೆಲ್ಲಿಯ ಮರವೇ, ನನ್ನ ಗುರುವಿನ ವಿಸ್ತಾರವಾದ ನಿರ್ಮಳ ಕರುಣಾ ಕಟಾಕ್ಷದ ನೋಟವು ಎಂದು ಉಂಟಾಗುವುದೋ ? ಹೇಳು. ಎಲೈ ಶ್ರೀ ಮುತ್ತುಗದ ಮರವೇ, ಈಗ (ನಾನು) ಗುರುಭಕ್ತಿಯಿಂದ ಬಿಡಲ್ಪಟ್ಟವನೆನಿಸಿ

ಇರವಂತಿಯೆನ್ನ ಚೆಳ್ತನ
ದಿರವಂತಿಂತೆಂಬೊಡಸದಳಂ ಗಡ ಜಗದೊ
ಳ್ಕರವೀರಮೆ ಘನಕರುಣಾ
ಕರವೀರಪ್ರಮಥರೊಲ್ಮೆಯೆನಗೆಂತಕ್ಕುಂ ೪೨

ವರನಾರಿಕೇಳ ಕೇಳ್ಗುರು
ವರನಾರೀಕೇಳಿಗೊಲ್ದ ದುರಿತಾತ್ಮಕನಾಂ
ಸರಳತರು ಪೇಳ್ವುದೆನಗೆಲೆ
ಸರಳತರಂ ಭಕ್ತಿವೃತ್ತಿಯೆಂದಾದಪುದೋ ೪೩

ಜಾತಿಯೆ ಮಾಸಿದುದಿಂದು ನಿ
ಜಾತಿಶಯಂ ಗುರುವಧೂಟಿಗಳುಪಿದ ಕತದಿಂ
ಕೇತಕಿ ಸತ್ಕೃತ್ಯದ ಸಂ
ಕೇತಕಿದರಿಯಾದುದೆನ್ನ ಮಾರವಿಕಾರಂ ೪೪

ಬಕ ಪಾದಪಮೆ ಲಲಾಟಾಂ
ಬಕಪಾದಪಯೋಜದೊಲ್ಮೆಯೆನಗೆಂತಕ್ಕುಂ
ವಕುಳಮೆ ಪಳಿಯದೆ ಪೇಳ್ಕೃಲ
ವಕುಳಮೆ ಗುರುತಲ್ಪಗಮನಿಯೆಂದಿರದೆನ್ನಂ ೪೫

ಪಲಸೆ ಗುರುಪಾದುಕೆಯನಾಂ
ಪ ಲಸನ್ಮಸ್ತಕದೆ ಪಾಪಭಾರವನಾಂತೆಂ
ತಿಲಕಮಹೀಜಮೆ ಪೇಳ್ ಯಮಿ
ತಿಲಕಮುದಾರ್ಯಾಂಘ್ರಿಸೇವೆಗೆಂತಳವಡುವೆಂ ೪೬

ಕೆಟ್ಟಿದ್ದೇನೆ. ಅಕ್ಕಟಕ್ಕಟಾ ! ೪೨–೪೬. ಎಲೈ ಇರವಂತಿಗೆಯೇ, ನನ್ನ ಮೂರ್ಖತನದ ರೀತಿಯನ್ನು ಅಷ್ಟಿಷ್ಟೆಂದು ಹೇಳಲು ಅಸಾಧ್ಯವೆನಿಸಿದೆಯಲ್ಲವೇ ! ಎಲೈ ಕಣಗಿಲವೇ, ಘನಕರುಣೆಯಿಂದ ಕೂಡಿದ ಶರಣರ ಪ್ರೀತಿಯು ನನಗೆ ಹೇಗಾಗುವುದು ? ಶ್ರೇಷ್ಠ ನಾರಿಕೇಳ ವೃಕ್ಷವೇ, ನನ್ನ ಗುರುವಿನ ಶ್ರೇಷ್ಠನಾರಿಯಲ್ಲಿ ಮದನ ಕೇಳಿಗೆ ಮನಸ್ಸು ಮಾಡಿದ ಪಾಪಾತ್ಮನು ನಾನು. ಎಲೈ ಸರಳ ವೃಕ್ಷವೇ (ದೇವದಾರು ವೃಕ್ಷವೇ), ನನಗೆ ಸರಳತರವಾದ ಭಕ್ತಿಯ ನಡೆಯು ಎಂದುಂಟಾಗುವುದೋ ಹೇಳಬೇಕು. ಎಲೈ ಜಾಜಿಯೇ, ಇಂದು ಗುರುಪತ್ನಿಗೆ ದುರಾಸೆಗೊಂಡ ಕಾರಣದಿಂದ ನನ್ನ ಅತಿಶಯವು ಮಾಸಿಹೋಯಿತು. ಕೇದಗಿಯೇ, ಈ ನನ್ನ ಮದನ ವಿಕಾರವು ಪುಣ್ಯಕಾರ್ಯದ ಸಂಕೇತಕ್ಕೆ ವೈರಿಯಾಯಿತು. ಬಕ ವೃಕ್ಷವೇ, ನನಗೆ ಹಣೆಯಲ್ಲಿ ಕಣ್ಣುಳ್ಳವನ ಪಾದಕಮಲದ ಒಲುಮೆ ಹೇಗಾಗುವುದು ? ಬಕುಳವೇ, ಶಿವ ಭಕ್ತರ ಸಮೂಹವು ನನ್ನನ್ನು ತಪ್ಪದೆ ಗುರುಪತ್ನಿಯ ಹಾಸಗೆಯನ್ನು ಮೆಟ್ಟಿದವನೆಂದು ದೂಷಿಸುವುದಿಲ್ಲವೇ ? ಹೇಳು. ಎಲೈ ಹಲಸಿನಮರವೇ, ಗುರುವಿನ ಪಾದರಕ್ಷೆಯನ್ನು

ಪೂಗಣೆಯಂನೆಲೆಗೆವಂದಲೆ
ಪೂಗಮೆ ಸಚ್ಚರಿತಪೂಗಬಾಹಿರನಾದಂ
ನಾಗಲತೆ ಗುರುಕರುಣಮಿ
ನ್ನಾಗಲದೆಂತೆಸಪೆನುಸುರುಪಾಯಮನೀಗಳ್ ೪೭

ಪುನ್ನಾಗಮೆ ಪಜಿಪಟ್ಬುದು
ಪುನ್ನಾಗಸ್ತುತ್ಯಮೆನಿಪ ಮನ್ಮಹಿಮೆ ವಲಂ
ಚನ್ನಂಗಿಯೆ ಪೇಳ್ ತನ್ನ
ಚನ್ನಂಗಿತ್ತಭವನೆಂತು ಕೃಪೆಗೆಯ್ದಪನೋ ೪೮

ತಾಳತಮಾಲಮೆ ಘನಹಿಂ
ತಾಳ ತರುಪ್ರಕರಮೇ ಮನೋಗದಮನಿದಂ
ತಾಳಲ್ಕಾಜಂ ತತದುರಿ
ತಾಳಂಬನನಾದೆನೆಂದು ಬಿಸುಸುಯ್ಯುತ್ತುಂ ೪೯

ಗಿಳಿಯೆ ಧರೆಗಿಳಿದೆನಕ್ಕಟ
ಕಳಕಂಠಮೆ ಕಳವಳಕ್ಕೆ ಪಕ್ಕಾದೆಂ ಕೇ
ಳಳಿಯೆ ಮುದಮಳಿದೆನಿಂದು
ಜ್ವಳಶಿಖಿ ಶಿಖಿನಯನನೊಲ್ಮೆಗಾನೆರ[1]ವಾದೆಂ ೫೦

ಕಳಹಂಸ ಕಳಿದುದೆನ್ನಯ
ತಿಳಿವೆಲೆ ತಿಳಿಗೊಳಮೆ ನಳಿನಮೇ ನಲವಳಿದೆಂ

ಧರಿಸುವ ಪ್ರಕಾಶಿಸುವ ಶಿರಸ್ಸಿನಲ್ಲಿ ಪಾಪದ ಹೊರೆಯನ್ನು ಹೊತ್ತೆನು. ಎಲೈ ತಿಲಕ ವೃಕ್ಷವೇ, ಯತಿಶ್ರೇಷ್ಠನಾದ ನನ್ನ ಗುರುವಿನ ಪಾದಸೇವೆಯನ್ನು ಮಾಡುವುದಕ್ಕೆ ಹೇಗೆ ಯೋಗ್ಯನಾಗುವೆನು ? ಹೇಳು. ಎಲೈ ಅಡಕೆಯ ಮರವೇ. ಮನ್ಮಥನ ಬಾಧೆಗೆ ಕಾರಣನಾಗಿ ಒಳ್ಳೆಯ ಚರಿತ್ರೆಯುಳ್ಳವರ ಸಮೂಹಕ್ಕೆ ಹೊರಗಾದವನಾಗಿದ್ದೇನೆ. ಎಲೈ ಎಲೆಯ ಬಳ್ಳಿಯೇ, ಇನ್ನು ಗುರುಕರುಣವುಂಟಾಗುವುದಕ್ಕೆ ಏನು ಮಾಡಲಿ ? ಈಗ ಉಪಾಯವನ್ನು ಹೇಳು. ಎಲೈ ಪುನ್ನಾಗವೇ (ಸುರ ಹೊನ್ನೆಯೇ), ಪುರುಷ ಶ್ರೇಷ್ಠರಿಂದ ಹೊಗಳಿಸಿಕೊಳ್ಳಲು ಯೋಗ್ಯವಾದದ್ದೆನಿಸುವ ನನ್ನ ಮಹಿಮೆಯು ನಿಶ್ಚಯವಾಗಿಯೂ ನಾಶವಾಯಿತು. ಎಲೈ ಚೆನ್ನಂಗಿಯ ಗಿಡವೇ, ಮಾದಾರ ಚೆನ್ನಯ್ಯನಿಗೆ ತನ್ನನ್ನೇ ಅರ್ಪಿಸಿದ ಶಿವನ ಕೃಪೆಯು ನನಗೆ ಹೇಗಾಗುವುದು ? ಹೇಳು. ಕಾಲವೃಕ್ಷವೇ, ಹೊಂಗೆಯ ಮರವೇ, ಶ್ರೇಷ್ಠ ಹಿಂತಾಳ ಗಿಡಗಳ ಸಮೂಹವೇ, ಈ ನನ್ನ ಮನೋರೋಗವನ್ನು ತಡೆಯುವುದಕ್ಕೆ ಸಮರ್ಥನಾಗಲಾರೆನು. ವಿಸ್ತಾರವಾದ ದುಷ್ಕೃತ್ಯಕ್ಕೆ ಆಶ್ರಯ (ಆಳಂಬನ)ನಾದೆನು–ಎಂದು ಬಿಸಿಯುಸಿರು ಬಿಡುತ್ತ. (ಇದ್ದನು). ೫೦–೫೧. ಎಲೈ ಗಿಳಿಯೇ, ನಾನು ಭೂಮಿಗೆ ಇಳಿಯುವೆನು, ಅಕ್ಕಟಾ !

---

1 ಅ(ದ)

ತಳವಮಳಗುಗೊಳುತೆ ಲಲಿತೋ
ತ್ಪಳಕುಳಮೆ ಬಳಲ್ದೆನಳವಿಗಳಿದಳಲಿಂದಂ ೫೧

ವ॥ ಎಂದವಮಂದಶೋಕೋದ್ರೇಕಂ ಮಿಗೆ ಪಲವಾಡಿ ಪಲುಂಬಿ ಪಳಯಿಸಿ—

ಬನದೊಳೆ ತತ್ಕೃಶೋದರಿಯ ಪೆರ್ಮೊಲೆಯೆಂದು ರಥಾಂಗಮಂ ದಳ
ದ್ವನಜಮನಾಸ್ಯಮೆಂದು ತಳಿರಂ ಕರಮೆಂದು ಲತಾಂಗಮೆಂದು ಚಂ
ದನತರುಶಾಖೆಯಂ ಚಿಕುರಮೆಂದಳಿಮಾಲೆಯನಲ್ಲಿ ನೋಡಲುಂ
ನೆನೆಯಲುಮಳ್ಕಿ ಬಳ್ಕಿ ಮಗುಳ್ದೆಯ್ದಿದನಾ ಪುರದತ್ತ ಧಾತ್ರಿಪಂ ೫೨

ವ॥ ಅಂತೆಯ್ತಂದೊಂದು ಶಿವನಿಳಯಮಿದಿರೊಳಿರೆ ಕಂಡಲ್ಲಿಗೆಯ್ದೆವಂದು—

ಸಾಲದೆ ಸಾಲಮೇಯಿನಿತವಸ್ಥೆ ಕನತ್ಕಲಶಪ್ರಬದ್ಧಲಿಂ
ಗಾಲಯದಗ್ರಗೋಪುರಮೆ ಪಾಪವಿಲೋಪಕೆ ಬುದ್ಧಿವೇಳ್ ಮಹಾ
ಕಾಲಗಣೇಶಕಾಲಭಯಮಂ ಪಱಿ ಮುಂದಣ ನಂದಿ ನಂದಿಸೆ
ನ್ನೀ ಲಯಕಾರಿತಾಪಶಿಖಿಯಂ ಶಿಖಿವಾಹನ ಪಾಲಿಸಳ್ಕಱಿಂ ೫೩

ಎಲೆ ವೀರಭದ್ರ ಭದ್ರಮ
ನಲಸದೆ ನೀಂ ಮಾಡು ದೇವಿ ದೇವೇಶನ ನಿ

ಕೋಗಿಲೆಯೇ, ಕಳವಳದಿಂದ ಕೂಡಿದೆನು. ಎಲೈ ಭ್ರಮರವೇ, ಕೇಳು, (ನಾನು) ಸಂತೋಷಹೀನನಾದೆನು. ಇಂದು ನಾನು ಪ್ರಕಾಶಿಸುವ ಜ್ವಾಲೆಯುಳ್ಳ ಅಗ್ನಿ ನೇತ್ರನಾದ ಶಿವನ ಒಲುಮೆಯಿಂದ ಅಗಲಿದವನಾದೆನು. ಎಲೈ ಕಳಹಂಸಪಕ್ಷಿಯೇ, ತಿಳಿನೀರಿನ ಸರೋವರವೇ, ನನ್ನ ಜ್ಞಾನವೇ ನಷ್ಟವಾಗಿ ಹೋಯಿತು. ಕಮಲವೇ ತಳಮಳ ಗೊಳ್ಳುತ್ತ ಸಂತೋಷವನ್ನು ಅಳಿದುಕೊಂಡೆನು. ಮನೋಹರ ನೈದಿಲೆಗಳ ಸಮೂಹವೇ, ಲೆಕ್ಕವಿಲ್ಲದ ದುಃಖದಿಂದ ಬಳಲಿದೆನು. ವ॥ ಹೀಗೆಂದು ಅತ್ಯಧಿಕವಾದ ಶೋಕದ ಉದ್ರೇಕದಿಂದ ವಿಶೇಷ ರೀತಿಯಿಂದ ಅನೇಕ ಪ್ರಕಾರದ ಮಾತುಗಳನ್ನಾಡುತ್ತ, ಹಲುಬುತ್ತ, ಪ್ರಲಾಪಿಸಿ—೫೨. ಆ ಗುರುಭಕ್ತ ರಾಜನು ಆ ವನದಲ್ಲಿ ಚಕ್ರವಾಕ ಪಕ್ಷಿಯನ್ನು ಆ ಕೃಶೋದರವುಳ್ಳ ಪ್ರೌಢಮತಿಯ ದಪ್ಪನೆಯ ಮೊಲೆಯೆಂದೂ, ಅರಳು ತ್ತಿರುವ ಕಮಲವನ್ನು ಮುಖವೆಂದೂ, ಚಿಗುರನ್ನು ಕೈಯೆಂದೂ, ಶ್ರೀಗಂಧದ ಮರದ ಕೊಂಬೆಯನ್ನು ಬಳ್ಳಿಯಂತಿರುವ ದೇಹವೆಂದೂ, ಭ್ರಮರಗಳ ಸಮೂಹವನ್ನು ಕೇಶ ಗಳೆಂದೂ, ಅಲ್ಲಿ ನೋಡುವುದಕ್ಕೂ ನೆನೆಯುವುದಕ್ಕೂ ಹೆದರಿದವನಾಗಿ, ನಡುಗುತ್ತ ಪುನಃ ಪಟ್ಟಣದ ಕಡೆಗೆ ಹೋದನು. ವ॥ ಆ ರೀತಿ ಪಟ್ಟಣಕ್ಕೆ ಬಂದು, ಎದುರಿ ನಲ್ಲಿಯೇ ಶಿವಾಲಯವಿರಲು ಅದನ್ನು ಕಂಡು, ಅಲ್ಲಿಗೆ ಹೊರಟು ಬಂದು—೫೩–೫೪. ಎಲೈ ಪ್ರಾಕಾರವೇ (ನನಗಾಗಿರುವ) ಈ ಅವಸ್ಥೆ ಸಾಲದೇ? ಹೇ ಹೊಳೆಯುತ್ತಿರುವ ಚಿನ್ನದ ಕಲಶಗಳಿಂದ ಕೂಡಿರುವ ಶಿವಾಲಯದ ಮೇಲಿರುವ ಗೋಪುರವೇ, ನನ್ನ ಈ ಪಾಪದ ನಾಶಕ್ಕೆ ಬುದ್ಧಿಯನ್ನು ಹೇಳಿಕೊಡು; ಹೇ ಮಹಾಕಾಲ ಗಣೇಶನೇ, ಯಮನ

ಶ್ಚಲಭಕ್ತಿಗುಡು ದೃಢವ್ರತ
ದೊಲವಂ ಪ್ರಮಥರ್ಗಳಿತ್ತು ಪಾಲಿಪುದೆನ್ನಂ ೫೪

ಪೂತ ಪುರಾತನಗಣ ವಿ
ಖ್ಯಾತಾಸಂಖ್ಯಾತ ಭಕ್ತಗಣ ರುದ್ರಗಣ
ವ್ರಾತಮೆ ಕೃಪೆಯಿಂ ಮತ್ಕೃತ
ಪಾತಕಮಳಿವಂದಮಂ ನಿರೂಪಿಪುದೀಗಳ್ ೫೫

ಪಲವಂದದಿನೀ ತೆಱದಿಂ
ಪಲುಂಬಿ ಫಲಮೇಂ ಮಹೇಶ್ವರಾ ಶಂಕರ ನಿ
ಶ್ಚಲತೆ ಮಿಗೆ ಮತ್ತನುವನಿದ
ನಲಸದಣಂ ಬಿಟ್ಟು ಶುದ್ಧನಪ್ಪೆನಮೋಘಂ ೫೬

ವ॥ ಎಂದು ದೃಢಪ್ರತಿಜ್ಞನಾಗಿ ತನ್ನಂ ಪರಿಚ್ಛೇದಿಸಲ್ ಸನ್ನದ್ಧನಾಗಿ—

ಎರಡುಂ ಕಣ್ಗಳನಾರ್ದು
ಬ್ಬರಿಸುತ್ತುಂ ಮಿಂಟಿ ಕಳೆದು ಕರವಾಳಿಂದಂ
ಕೊರಲನರಿವೆಡೆಯೊಳಱಸುತೆ
ಪರಿತಂದವನಗ್ರಜಾತಭಕ್ತಂ ಕಂಡಂ ೫೭

ದೆಸೆಯಿಂದಾದ ಭೀತಿಯನ್ನು ಹೋಗಲಾಡಿಸು ; ಹೇ ಮುಂಭಾಗದಲ್ಲಿರುವ ನಂದೀಶನೇ, ನನ್ನ ಈ ನಾಶಕಾರಕವಾದ ಆಧ್ಯಾತ್ಮಿಕ, ಆದಿಭೌತಿಕ, ಆಧಿದೈವಿಕವೇ ಮೊದಲಾದ ತಾಪಗಳೆಂಬ ಬೆಂಕಿಯನ್ನು ಆರಿಸು ; ನವಿಲೇ ವಾಹನವಾಗಿ ಉಳ್ಳ ಷಣ್ಮುಖನೇ, ನನ್ನನ್ನು ಪ್ರೀತಿಯಿಂದ ರಕ್ಷಿಸು ; ಎಲೈವೀರಭದ್ರನೇ, ನೀನು ತಡಮಾಡದೆ, ಮಂಗಳ ವನ್ನುಂಟುಮಾಡು ; ದೇವಿಯೇ (ಪಾರ್ವತಿಯೇ), ದೇವೇಶ್ವರನಾದ ಶಿವನಲ್ಲಿ ನಿಶ್ಚಲ ವಾದ ಭಕ್ತಿಯನ್ನು ಕೊಡು ; ಪ್ರಮಥರುಗಳೇ, (ನನಗೆ) ದೃಢವ್ರತದ ಪ್ರೀತಿಯನ್ನು ಇತ್ತು ರಕ್ಷಿಸಿ. ೫೫. ಪವಿತ್ರವಾದ ಪುರಾತನ ಶಿವಗಣಗಳೇ, ಪ್ರಖ್ಯಾತರಾದ ಅಸಂಖ್ಯಾತರಾದ ಭಕ್ತಸಮೂಹವೇ, ರುದ್ರಗಣಗಳ ಸಮೂಹವೇ, ಕೃಪೆದೋರಿ ಈಗ ನನ್ನಿಂದಾದ ಪಾಪವು ನಾಶವಾಗುವ ರೀತಿಯನ್ನು ಆಜ್ಞಾಪಿಸಬೇಕು. ೫೬. ಮಹೇಶ್ವರನೇ ಶಂಕರನೇ ! ಈ ರೀತಿಯಿಂದ ಅನೇಕ ಪ್ರಕಾರವಾಗಿ ಹಲುಬಿ ಫಲ ವೇನು ? ವಿಶೇಷವಾದ ನಿಶ್ಚಂಚಲ ಮನಸ್ಸಿನಿಂದ ತಡಮಾಡದೆ ಈ ನನ್ನ ದೇಹವನ್ನು ಬಿಟ್ಟು ಅಮೋಘವಾದ ಶುದ್ಧಿಯನ್ನು ಪಡೆಯುತ್ತೇನೆ. ವ॥ ಹೀಗೆಂದು ದೃಢಪ್ರತಿಜ್ಞೆ ಯನ್ನುಮಾಡಿ, ತನ್ನನ್ನು ಕತ್ತರಿಸಿಕೊಳ್ಳುವುದಕ್ಕೆ ಸಿದ್ಧನಾಗಿ—೫೭. ಗಟ್ಟಿಯಾಗಿ ಕೂಗಿ ಕೊಂಡು ತನ್ನ ಎರಡೂ ಕಣ್ಣುಗಳನ್ನು ಉತ್ಸಾಹಗೊಂಡು ಖಡ್ಗದಿಂದ ಮಿಾಟಿ ಕಿತ್ತು, ಕೊರಳನ್ನು ಕತ್ತರಿಸಿಕೊಳ್ಳುವ ಸಮಯದಲ್ಲಿ ಅವನ ಅಣ್ಣನಾದ ಭಕ್ತನು (ಇವನನ್ನು)

ವರಗುಣನಿಧಿ ಗುರುವರಕರ
ಸರಸಿಜಸಂಜಾತನಮಳಚರಿತಂ ಮಹಿಮಾ
ಕರನೀಶಭಕ್ತನವನಾ
ದರದಿಂ ಬಳಿವಂದು ನೋಡಿ ವಿಸ್ಮಯಮುತ್ತಂ ೫೮

ಎಲೆ ಗುರುಭಕ್ತರಾಜ ಗುರುಭಕ್ತಿವಿಲಾಸವಿನೀತಸಾರ ನಿ
ಶ್ಚಲಗುರುಭಕ್ತಿವಾರಿಧಿಸುಧಾಕರ ಸದ್ಗುರುಭಕ್ತಿದಿವ್ಯಮಂ
ಜುಲಮಣಿರೋಹಣಾಚಲ ಮಹಾಗುರುಭಕ್ತಿಸುಧಾಮರಾಳ ನಿ
ರ್ಮಲಗುರುಭಕ್ತಿಭೂಷಣ ಲಸದ್ಗುರುಭಕ್ತಿಸರೋಜಭಾಸ್ಕರಾ ೫೯

ನಿನ್ನ ಮತಿ ನಿನ್ನ ನಿಷ್ಠೆ ಸ
ಮುನ್ನತಮೆನಿಸಿರ್ದ ನಿನ್ನ ಗುರುಭಕ್ತಿ ಸುಖಾ
ಸನ್ನತೆ ಸಮಸ್ತ ಶಿವಗಣ
ಹೃನ್ನಳಿನಕ್ಕರರೆ ಸೆಗಳ್ದುದತಿಶಯ ಮುದಮಂ ೬೦

ಅಪರಾಧಮಿಲ್ಲ ನಿನ್ನೊಳೆ
ಸುಪವಿತ್ರಚರಿತ್ರ ಬಿಡು ಬಿಡೀ ಕಜ್ಜಮನೆಂ
ದುಪಚರಿಸಿ ನಿಲಿಸೆ ತನ್ನಂ
ಘ್ರಿಪಯೋರುಹಕೆಜಗಿ ಮಣಿುಗುವನುಜನನಾಗಳ್ ೬೧

ತೆಗೆದು ಬಿಗಿಯಪ್ಪಿ ಲೋಚನ
ಯುಗದರುಣೋದಕವಿಮಿಶ್ರ ಬಾಷ್ಪಮನೊರಸು

ಹುಡುಕುತ್ತ ಅಲ್ಲಿಗೆ ಬಂದು ಕಂಡನು. ೫೮. ಶ್ರೇಷ್ಠ ಗುಣಗಳ ನಿಧಿಯೂ, ಗುರುಶ್ರೇಷ್ಠನ ಹಸ್ತಕಮಲದಿಂದ ಹುಟ್ಟಿದವನೂ, ಪರಿಶುದ್ಧ ಚರಿತ್ರೆಯುಳ್ಳವನೂ, ಮಹಿಮೆಗಳಿಗೆ ಆಗರನೂ ಆದ ಆ ಈಶಭಕ್ತನು ಆದರದಿಂದ ಹತ್ತಿರಕ್ಕೆ ಬಂದು, ನೋಡಿ, ಆಶ್ಚರ್ಯಗೊಂಡನು. ೫೯–೬೦. ಗುರುಭಕ್ತಿಯೇ ಲೀಲೆಯಾಗಿ ಉಳ್ಳ, ಸಾರವತ್ತಾದ ವಿನಯಭಾವವುಳ್ಳ, ಶಾಶ್ವತವಾದ (ನಿಶ್ಚಲವಾದ) ಗುರುಭಕ್ತಿಯೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲುಳ್ಳ, ಶ್ರೇಷ್ಠವಾದ ಗುರುಭಕ್ತಿಯೆಂಬ ಮನೋಹರ ರತ್ನಗಳಿಗೆ ರೋಹಣಪರ್ವತಪ್ರಾಯನಾದ, ಮಹತ್ತರವಾದ ಗುರುಭಕ್ತಿಯೆಂಬ ಹಾಲಿಗೆ ಹಂಸಪಕ್ಷಿಯಂತಿರುವ, ನಿಷ್ಕಳಂಕವಾದ ಗುರುಭಕ್ತಿಯೇ ಆಭರಣವಾಗಿಉಳ್ಳ, ಪ್ರಕಾಶಿಸುವ ಗುರುಭಕ್ತಿಯೆಂಬ ಕಮಲಕ್ಕೆ ಸೂರ್ಯನೋಪಾದಿಯಲ್ಲಿರುವ ಎಲೈ ಗುರುಭಕ್ತರಾಜನೇ, ನಿನ್ನ ಬುದ್ಧಿ, ನಿನ್ನ ನಿಷ್ಠೆ, ಶ್ರೇಷ್ಠವೆನಿಸಿರುವ ನಿನ್ನ ಗುರುಭಕ್ತಿಯಿಂದುಂಟಾದ ಸುಖದ ಸಾಮೀಪ್ಯ, ಇವು–ಸಮಸ್ತ ಶಿವಗಣಗಳ ಹೃದಯಕಮಲಕ್ಕೆ ಅತ್ಯಂತ ಆನಂದವನ್ನುಂಟುಮಾಡಿದವು. ೬೧–೬೨. ಹೇ ಒಳ್ಳೆಯ ಪವಿತ್ರವಾದ ಚರಿತ್ರೆಯುಳ್ಳವನೇ, ನಿನ್ನಲ್ಲಿ ಅಪರಾಧವಿಲ್ಲ; ಈ ನಿನ್ನ (ಸಾಹಸದ) ಕಾರ್ಯವನ್ನು ಬಿಟ್ಟುಬಿಡು' ಎಂದು ಉಪಚಾರಮಾಡಿ (ಪ್ರಾಣಹರಣಮಾಡಿಕೊಳ್ಳುವ ಅವನ ಕಾರ್ಯ

ತ್ತಗಲದೆ ಕರಪಲ್ಲವದಿಂ
ಸುಗುಣಾಂಕಂ ಗುರುಪದಾಬ್ಜಮಂ ಜಾನಿಸಿದಂ ೬೨

ಅನಿತಱೊಳುಣ್ಮಿದತ್ತು ನಯನದ್ವಯಮಾಯತಮಾಗಿ ದೇಶಿಕೇಂ
ದ್ರನಕರುಣಾಕಟಾಕ್ಷಬಲದಿಂ ಪರಿದದ್ಭುತಮಾಳ್ದು ಭಕ್ತರೊ
ಲ್ದನುನಯದಿಂದುಘೇಯೆನುತೆ ಕೀರ್ತಿಸೆ ಸಂಭ್ರಮದಿಂ ನಿಜಾಲಯ
ಕ್ಕನುಪಮನೆಯ್ದುತಗ್ರಜಯುತಂ ಸುಖದಿಂ ಗುರುಭಕ್ತನೊಪ್ಪಿದಂ ೬೩

ಗುರುಭಕ್ತಕ್ಷ್ಮಾವಧೂವಲ್ಲಭನ ಕಥೆಯನಿಂತೊಲ್ದು ಪೇಳ್ದಾ ಮಹಾಭ
ಕ್ತರ ಚೇತಃಪ್ರೀತಿಯಂ ತಾಂ ಸಲಿಸುತೆಱಗುತಿಂತಪ್ಪರಿನ್ನುಂ ಗುರು ಶ್ರೀ
ಚರಣಾಂಭೋಜಾತಭಕ್ತರ್ಕೆಲರೊಳರೆನುತುಂ ಬಿನ್ನಪಂಗೆಯ್ವುತುಂ ಸಾ
ದರವೊಪ್ಪುತ್ತಿರ್ದನೀಶಾರ್ಪಿತಮತಿ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ ೬೪

ಶತದಳದಳನೇತ್ರೇ ಶಂಕರಸ್ನೇಹಪಾತ್ರೇ
ದಿತಿಸುತರಣಭೀಮೇ ದಿವ್ಯತೇಜೋಭಿರಾಮೇ

ವನ್ನು) ನಿಲ್ಲಿಸಿ, ತನ್ನ ಪಾದಕಮಲಗಳಿಗೆ ನಮಸ್ಕರಿಸಿ ಮರುಗುತ್ತಿರುವ ತಮ್ಮನನ್ನು ಆಗ–ಆ ಸದ್ಗುಣಶಾಲಿಯಾದ ಗುರುಭಕ್ತ ರಾಜನು ಬರಸೆಳೆದು ಗಟ್ಟಿಯಾಗಿ ಅಪ್ಪಿಕೊಂಡು ಎರಡೂ ಕಣ್ಣುಗಳ ರಕ್ತದಿಂದ ಮಿಶ್ರವಾದ ಬಾಷ್ಪಗಳನ್ನು ತನ್ನ ಚಿಗುರಿನಂತಿರುವ ಕೈಗಳಿಂದ ತಪ್ಪದೆ ಒರೆಸುತ್ತ ಗುರುಪಾದ ಕಮಲವನ್ನು ಧ್ಯಾನಿಸಿದನು. ೬೩, ಅಷ್ಟರಲ್ಲಿ ಗುರುಶ್ರೇಷ್ಠನ ಕರುಣಾಕಟಾಕ್ಷದ ಬಲದಿಂದ (ಹೋದ) ಎರಡೂ ಕಣ್ಣುಗಳೂ, ದೀರ್ಘವಾಗಿ ಹುಟ್ಟಿದವು. ಭಕ್ತರುಗಳು ವಿಶೇಷವಾದ ಅದ್ಭುತವನ್ನು ಹೊಂದಿ, ಒಲಿದು ಪ್ರೀತಿಯಿಂದ ಉಘೇ ! ಎಂದು ಕೀರ್ತಿಸಿದರು. ಆ ಸದೃಶನಾದ ಗುರುಭಕ್ತನ ಅಣ್ಣನೊಡನೆಕೂಡಿ, ತಮ್ಮ ಮನೆಯನ್ನು ಸೇರಿ ಸುಖದಿಂದ ಶೋಭಿಸಿದನು, ೬೪. ಶಿವನಲ್ಲಿ ಸಮರ್ಪಿಸಲ್ಪಟ್ಟ ಬುದ್ಧಿಯುಳ್ಳವನೂ, ವೀರಶೈವ ಸಿದ್ಧಾಂತವೆಂಬ ಕ್ಷೀರ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವವನೂ ಬಸವೇಶ್ವರನು ಗುರುಭಕ್ತರಾಜನ ಕಥೆಯನ್ನು ಈರೀತಿ ಒಲುಮೆಯಿಂದ ಹೇಳಿ, ಆ ಮಹಾಶಿವಭಕ್ತರುಗಳ ಮನಸ್ಸಿನ ಇಷ್ಟಾರ್ಥವನ್ನು ಸಲ್ಲಿಸಿ ನಮಸ್ಕರಿಸುತ್ತ, ಇಂತಹ ಗುರುಪಾದಕಮಲದಲ್ಲಿ ಭಕ್ತಿಯುಳ್ಳವರು ಇನ್ನೂ ಕೆಲವರಿದ್ದಾರೆ. ಎಂದು ವಿಜ್ಞಾಪಿಸಿಕೊಂಡು ಪ್ರೀತಿಯಿಂದಕೂಡಿ ಶೋಭಿಸುತ್ತಿದ್ದನು. ೬೫. ಕಮಲದ ಎಸಳಿನಂತಹ ಕಣ್ಣುಳ್ಳವಳೇ, ಈಶ್ವರ ಪ್ರೇಮಕ್ಕೆ ಆಸ್ಪದಳಾದವಳೇ, ರಾಕ್ಷಸರ ಯುದ್ಧದಲ್ಲಿ ಭಯಂಕರಳೆನಿಸಿದವಳೇ, ಶ್ರೇಷ್ಠತೇಜಸ್ಸಿನಿಂದ ಮನೋಹರಳಾದವಳೇ, ವಿಸ್ತಾರಗೊಳಿಸಿದ ಲೋಕಗಳ ಸಮೂಹವುಳ್ಳವಳೇ,

ತತಭುವನಕದಂಬೇ ತತ್ತ್ವಮಾಲಾವಲಂಬೇ
ಪ್ರತಿಹತನತದೈನ್ಯೇ ಪಾಹಿ ಮಾಂ ಶೈಲಕನ್ಯೇ ೬೫

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಗುರುಭಕ್ತರಾಜಗುರುಭಕ್ತಿವರ್ಣನಂ

ತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೦ಕ್ಕೆ ಪದಗಣನೆ ೨೩೮೦ಕ್ಕೆ ಮಂಗಳಮಹಾ ಶ್ರೀ॥

ಇಪ್ಪತ್ತುನಾಲ್ಕು ತತ್ತ್ವಗಳ* ಸಮೂಹಗಳಿಗೆ ಆಶ್ರಯಳಾದವಳೇ, ನಮಸ್ಕರಿಸಿದವರ ದಾರಿದ್ರ್ಯವನ್ನು ನಾಶಮಾಡುವಳೇ, ಗಿರಿರಾಜ ಕನ್ಯೆಯೇ, ನನ್ನನ್ನು ರಕ್ಷಿಸು.

ಮೂವತ್ತನೆಯ ಆಶ್ವಾಸ ಸಮಾಪ್ತವಾಯಿತು.

---

* ೨೪ ತತ್ತ್ವಗಳು : ಜ್ಞಾನೇಂದ್ರಿಯ೫, ಕರ್ಮೇಂದ್ರಿಯ ೫ ; ಮನಸ್ಸು, ೧ ; ಪ್ರಕೃತಿ ಮಹಾನ್, ಮತ್ತು ಅಹಂಕಾರಗಳು–೩ ; ಪಂಚಮಹಾಭೂತಗಳು ೫; ಶಬ್ದಸ್ಪರ್ಶರೂಪ ರಸಗಂಧಗಳೆಂಬ ತನ್ಮಾತ್ರೆಗಳು ೫-ಹೀಗೆ ೨೪ ತತ್ತ್ವಗಳು ಶಕ್ತಿಯಿಂದ ಆವಿರ್ಭಾವಗೊಂಡವಾದ್ದರಿಂದ 'ತತ್ತ್ವಮಾಲಾವಲಂಬೇ' ಎಂಬ ವಿಶೇಷಣ.

# ಏಕತ್ರಿಂಶಾಶ್ವಾಸಂ

## [ವೇಮನಾರಾಧ್ಯರ ಕಥೆ]

ಶ್ರೀಮದಮರೇಂದ್ರಸನ್ನುತ
ಹೈಮವತೀರಮಣನಮಿತಕಲ್ಯಾಣಗುಣ
ಸ್ತೋಮಾಭಿರಾಮನತುಳೋ
ದ್ದಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ ೧

ಅತಿಶಯ ಸೌಭಾಗ್ಯಸಮ
ನ್ವಿತಮೆನಿಸಿ ವಿರಾಜಿಸಿರ್ಪ ಕಲ್ಯಾಣದೊಳು
ನ್ನತ ಶುಭಚರಿತನಿಳಾವಿ
ಶ್ರುತನೆಸೆದಂ ವೇಮನಾರ್ಯನೆಂಬ ಮಹಾತ್ಮಂ ೨

ಅಮಿತಗುಣಾಕರಂ ಪ್ರಮಥಪುಂಗವಪಾದಪಯೋಜಭೃಂಗನ
ಸ್ತಮಿತದರೀಷಣಂ ಸಕಳವೇದಶಿವಾಗಮವೇದಿ ಭಕ್ತಿಸಂ
ಕ್ರಮಿತಸುಮಾನಸಂ ಪ್ರಥಿತಪಾವನರೂಪನಮೇಯವೈಭವಂ
ಶಮಿತನತಾಮಯಂ ಪ್ರಬಳಶೈವಮತಾರ್ಯನಘಾರ್ತಿಭಂಜನಂ ೩

### ವೇಮನಾರಾಧ್ಯರ ಕಥೆ

೧. ಸಂಪದ್ಭರಿತನಾದ ದೇವೇಂದ್ರನಿಂದ ಹೊಗಳಿಸಿಕೊಳ್ಳಲ್ಪಟ್ಟವನೂ, ಪಾರ್ವತೀ ಪತಿಯೂ, ಅಸಂಖ್ಯಾತ ಮಂಗಳಕರಗಳಾದ ಗುಣಗಳ ಸಮೂಹದಿಂದ ಮನೋಹರ ನಾದವನೂ, ಅಸದೃಶನೂ, ಸ್ವತಂತ್ರನೂ ಆದ ಶಿವಲಿಂಗನು ನಮ್ಮನ್ನು ಯಾವಾಗಲೂ ರಕ್ಷಿಸಲಿ. ೨. ಅತ್ಯಂತ ಸೌಭಾಗ್ಯದಿಂದ ಕೂಡಿರುವುದೆಂದೆನಿಸಿ. ಶೋಭಾಮಯವಾಗಿದ್ದ ಕಲ್ಯಾಣನಗರದಲ್ಲಿ ಶ್ರೇಷ್ಠವಾದ ಶುಭ ಚರಿತ್ರೆಯಿಂದ ಇರುವವನೂ ಭೂಮಂಡಲದಲ್ಲಿ ವಿಖ್ಯಾತನೆಂದೆನಿಸಿರುವವನೂ ಆದ ವೇಮನಾರಾಧ್ಯನೆಂಬ ಮಹಾತ್ಮನು ಶೋಭಿಸು ತ್ತಿದ್ದನು. ೩. ಅವನು ಅಗಣಿತವಾದ ಗುಣಸಮೂಹಕ್ಕೆ ಆಗರನೂ, ಪ್ರಮಥ ಶ್ರೇಷ್ಠರ ಪಾದಕಮಲಗಳಲ್ಲಿ ಭೃಂಗದೋಪಾದಿಯಲ್ಲಿರುವವನೂ, ಹೆಂಡತಿ ಮಕ್ಕಳು ಧನಗಳ ಮೇಲಣ ಆಸೆಯನ್ನು ದೂರೀಕರಿಸಿದವನೂ (ದಾರೇಷಣ, ಪುತ್ರೇಷಣ, ವಿತ್ತೇ ಷಣಗಳೆಂಬ ಈಷಣತ್ರಯಗಳನ್ನು ದೂರಮಾಡಿದವನೂ). ಸಕಲವೇದಗಳ ಶಿವಾಗಮ ಗಳು ಇವನ್ನು ತಿಳಿದು ಅವುಗಳಲ್ಲಿ ಉಕ್ತವಾಗಿರುವಂತೆ ಭಕ್ತಿಜೀವನವನ್ನಾಚರಿಸುವ ಶ್ರೇಷ್ಠ ಮನಸ್ಸುಳ್ಳವನೂ, ಪ್ರಸಿದ್ಧವಾದ ಮಂಗಳಕರ ರೂಪವುಳ್ಳವನೂ. ಅಗಣಿತವಾದ ವೈಭವದಿಂದ ಕೂಡಿದವನೂ. ನಮಸ್ಕರಿಸಿದ ಭಕ್ತರುಗಳ ಜನನ ಮರಣಾತ್ಮಕವಾದ ರೋಗವನ್ನು ನಾಶಮಾಡತಕ್ಕವನೂ, ಪ್ರಬಲವಾದ ವೀರಶೈವ ಮತದಲ್ಲಿ ಪೂಜ್ಯನೆನಿಸಿ

ಶರದಿಂದುದ್ಯೋತವಿದ್ಯೋತಿತವಿಶದಯಶಂ ಪಾಶಸಂಹಾರಿ ಪಂಚಾ
ಕ್ಷರಮಂತ್ರಪ್ರಾಣನಾರ್ಯಪ್ರಕರಪರಿನುತಂ ಧರ್ಮಕಾಮಾರ್ಥಮೋಕ್ಷಾ
ಮರಭೂಜಂ ಸಾರವೀರವ್ರತವಿಹಿತಸದಾಚಾರಸಂಪನ್ನನುರ್ವೀ
ಶ್ವರ ಚೋರವ್ಯಾಘ್ರಸರ್ಪಾನಳಮುಖಭಯವಿಧ್ವಂಸಕಂ ಭಸ್ಮನಿಷ್ಠಂ ೪

ತಾಪಸನುತನವನತಜನ
ತಾಪದ್ಘನತಾಪಮೃತ್ಯುಹರನುರುತರವಿ
ದ್ಯಾಪರಿಣತನತಿಸಿತಮತಿ
ಶಾಪಾನುಗ್ರಹಸಮರ್ಥನಚಲಿತಮಹಿಮಂ ೫

ವ|| ಎಂಬ ನೆಗಳ್ತೆಗಡರ್ಪೆನಿಸಿ ರಂಜಿಸುತ್ತುಮಿರ್ದೊಂದು ದಿವಸಮಾ ವೇಮನಾರ್ಯಂ ತತ್ಪುರಬಹಿರ್ವಳಯವಿಳಸದುಪವನ ಸವಿಧವಿವಿಧ ಪರಿಮಳರಸಮಿಳಿತ ಮೃದುಳದಳದರದಳಿತ ಕುಸುಮವಿಸರಮನೋಹರಮೆನಿಪ ಕುಸುಮವನಕ್ಕೆ ಪೂದಿಱಿಯಲೆಳಸಿ ಕರಂಡಕಕರಾಂಬುಜದಿ ನೇಳ್ತಂದೊಳಗಣ್ಗೆ ಪೊಕ್ಕು—

ದವನೂ ಪಾಪ ಬಾಧೆಯನ್ನು ನಾಶಮಾಡಿದವನೂ ಎನಿಸಿದ್ದನು. ೪. ಅವನು ಶರತ್ಕಾಲದ ಚಂದ್ರನ ಕಾಂತಿಯಂತೆ ಪ್ರಕಾಶಿಸುವ ಪರಿಶುದ್ಧ ಯಶಸ್ಸಿನಿಂದ ಕೂಡಿದವನು; (ಸಂಸಾರ ಸಂಬಂಧದ) ಬಂಧನಗಳನ್ನು ಪರಿಹರಿಸಿದವನು ; ಪಂಚಾಕ್ಷರೀ ಮಂತ್ರವೇ ಪ್ರಾಣವಾಗಿ ಉಳ್ಳವನು ; ಪೂಜ್ಯರಾದ ಜನಸಮೂಹದಿಂದ ವಿಶೇಷವಾಗಿ ಶ್ಲಾಘಿಸಲ್ಪಡುವವನು ; ಧರ್ಮಾರ್ಥಕಾಮ ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಕಲ್ಪವೃಕ್ಷಪ್ರಾಯನಾದವನು ; ಸಾರಭೂತವಾದ ವೀರಶೈವ ಧರ್ಮದ ವ್ರತಸಂಬಂಧವಾದ ಒಳ್ಳೆಯ ಆಚಾರಗಳಿಂದ ಕೂಡಿದವನು ; ರಾಜ, ಕಳ್ಳ, ವ್ಯಾಘ್ರ, ಸರ್ಪ, ಬೆಂಕಿ ಮೊದಲಾದವುಗಳ ಭಯವನ್ನು ಧ್ವಂಸಗೊಳಿಸಿಕೊಂಡವನು ; ಭಸ್ಮಧಾರಣೆಯಲ್ಲಿ ನಿಷ್ಠೆಯುಳ್ಳವನು ಎನಿಸಿದ್ದನು. ೫, (ಅವನು) ತಾಪಸರುಗಳಿಂದ ಶ್ಲಾಘಿಸಲ್ಪಡುವ, ನಮಸ್ಕಾರ ಮಾಡುವ ಜನಸಮೂಹದಿಂದ ವಿಪತ್ತುಗಳನ್ನೂ, ಘನವಾದ ತಾಪಗಳನ್ನೂ (ಅಂದರೆ ಆಧ್ಯಾತ್ಮಿಕ, ಅಧಿ ಭೌತಿಕ, ಅಧಿ ದೈವಿಕಗಳೆಂಬ ತಾಪಗಳನ್ನು) ಮತ್ತು ಮೃತ್ಯುವನ್ನೂ ನಾಶಮಾಡುವ ಶ್ರೇಷ್ಠವಾದ ವಿದ್ಯೆಯಲ್ಲಿ ಪರಿಣತನಾದ. ಶಾಪ ಕೊಡುವುದಕ್ಕೂ ಅನುಗ್ರಹಮಾಡುವುದಕ್ಕೂ ಸಮರ್ಥನೆನಿಸಿದ, ದೃಢವಾದ ಮಹಿಮೆಯುಳ್ಳವನೆನಿಸಿದ್ದನು. ವ|| ಹೀಗೆಂಬಪ್ರಸಿದ್ಧಿಗೆ ಪಕ್ಕಾದವನೆನಿಸಿ ಶೋಭಿಸುತ್ತಿದ್ದು ಒಂದು ದಿವಸ ಆ ವೇಮನಾಚಾರ್ಯನು ಆ ಕಲ್ಯಾಣಪಟ್ಟಣದ ಹೊರಭಾಗದಲ್ಲಿರುವ ಮನೋಹರವಾದ ಉಪವನದ ವಿವಿಧ ವೃಕ್ಷಗಳ ಅನೇಕ ಬಗೆಯ ಪರಿಮಳ ಮಕರಂದ ರಸದಿಂದ ತುಂಬಿದವುಗಳೂ, ಮೃದುವಾದ ದಳಗಳಿಂದ ಅರ್ಧ ಅರಳಿದ ಪುಷ್ಪ ಸಮೂಹಗಳಿಂದ ಮನೋಹರವೆಂದೆನಿಸುವ ಪುಷ್ಪವಾಟಿಕೆಗೆ ಹೋಗಿ, ಹೂಪತ್ರಿಕೊಂಡು ಬರಲು ಆಶಿಸಿ, ಕೈಯಲ್ಲಿ ಪುಷ್ಪದ ಬುಟ್ಟಿಯನ್ನು ಹಿಡಿದು ಬಂದು ಆ ತೋಟದೊಳಕ್ಕೆ ಹೊಕ್ಕು

ಸುರಯಿಯು ನಾಗಸಂಪಗೆಯು ಜಾದಿಯುಮೊಲ್ಲೆಯು ಕರ್ಣಿಕಾರದೆ
ಳ್ವರದ ವಸಂತದೂತಿಕೆಯು ಯೂಥಿಯು ಮಲ್ಲಿಗೆಯುಚ್ಚಪೂಗಳಂ
ಸುರು[1]ಚಿರಮಾದ ಬಿಲ್ವದಳಸಂಕುಳಮಂ ತಿಱಿದಲ್ಲಿ ತೀವುತುಂ
ಕರಡಗೆಯಂ ಕಡಂಗಿ ಮಗುಳ್ದಿಯ್ಯುರುತಿರ್ಪೆಡೆವಟ್ಟೆಯೊಳ್ಕರಂ ೬

ಎತ್ತಿದ ಮೇಘಡಂಬರದೆ ಮಿಳ್ಳಿರಿದಾಡುವ ಸಿಂಧದಿಂ[2] ಪೊದ
ಳ್ದತ್ತರದಲ್ಲಿ ಬರ್ಪ ಗಜ ವಾಜಿ ರಥೌಘ ಪದಾತಿ ಬೃಂದದಿಂ
ಬಿತ್ತರಮಾದ ವಾದ್ಯರವದಿಂ ಚಳಚಾಮರ ಪಙ್ತಿಯಿಂ ಬೆಡಂ
ಗೆತ್ತಲುಮುಣ್ಮೆ ನಾಡೆ ಬರುತಿರ್ದನದೊರ್ವನಿಳೇಶ್ವರಾತ್ಮಜಂ ೭

ವ॥ ಅಂತು ವಿವಾಹಶೋಭನಂಬಡೆದು ನೆರೆಯೂರಿಂ ನಲ್ಲಳೊಡನೆ ಪೊನ್ನಂದಣಮನೇಱಿ ತದ್ರಾಜಸುತನೇಳ್ತರುತ್ತುಮಿರ್ದು ಕಟ್ಟಿದಿರೊಳ್ಬರ್ಪ ಶೈವತೇಜೋಮೂರ್ತಿಗಳೆನಿಪ ವೇಮನಾರಾಧ್ಯರಂ ಕಂಡು ಭೋಂಕನೆ ದಂಡಿಗೆಯನಿಳಿದು ಪೊಡಮಡಲೊಡನವಂಗಾಯುಮಲ್ಪಮೆಂದಿದಂ ತಾಂ ತ್ರಿಕಾಲಜ್ಞಾನಿಯಪ್ಪುದಱಿನಱಿದು ಪರಸಲೊಲ್ಲದಾಚಾರ್ಯರ್ದರ್ಯಂ ಸುಮ್ಮನಿರೆ ತನ್ನರೇಂದ್ರಸುತಂ ನೋಡಿ—

೬–೭. ಸುರಗಿ, ನಾಗಸಂಪಿಗೆ, ಜಾಜಿ, ಮೊಲ್ಲೆ, ಬೆಟ್ಟದಾವರೆ, ಶ್ರೇಷ್ಠವಾದ ವಸಂತದೂತಿಕೆ (ಮಾಧವಿ), ಯೂಥಿಕೆ, (ಮಲ್ಲಿಗೆಯಲ್ಲಿನ ಒಂದು ಬಗೆ) ಮಲ್ಲಿಗೆಯ ಹೊಸ ಹೂವುಗಳನ್ನು, ಮನೋಹರವಾದ ಬಿಲ್ವಪತ್ರೆಯ ಸಮೂಹವನ್ನು ಎತ್ತಿಕೊಂಡು, ಬುಟ್ಟಿಯಲ್ಲಿ ತುಂಬಿ ಉತ್ಸಾಹಗೊಂಡವನಾಗಿ ಪ್ರೀತಿಯಿಂದ ಹಿಂದಿರುಗಿ ಬರುತ್ತಿರುವಾಗ ಮಧ್ಯಮಾರ್ಗದಲ್ಲಿ, ಎತ್ತಿ ಹಿಡಿದಿರುವ ಛತ್ರಿಗಳಿಂದ, ಹಾರಾಡುತ್ತಿರುವ ಧ್ವಜಪಟಗಳಿಂದ, ಮನೋಹರವಾಗಿ ಎರಡೂ ಕಡೆಗಳಲ್ಲಿ ಬರುವ ಆನೆ, ಕುದುರೆ, ರಥಗಳ ಕಾಲಾಳುಗಳ ಸಮೂಹದಿಂದ, ವಿಸ್ತಾರವಾದ (ಬಹಳವಾದ) ವಾದ್ಯಗಳ ಸಮೂಹದ ಧ್ವನಿಯಿಂದ, ಬೀಸುತ್ತಿರುವ ಚಾಮರಗಳ ಸಾಲಿನಿಂದ, ಎಲ್ಲಕಡೆಗೂ ಸೊಬಗು ಹೊರಹೊಮ್ಮುತ್ತಿರಲು, ಓರ್ವರಾಜ ಪುತ್ರಶ್ರೇಷ್ಠನು ಬರುತ್ತಿದ್ದನು. ವ॥ ಹೀಗೆ ವಿವಾಹ ಶೋಭನಗಳನ್ನು ಮುಗಿಸಿಕೊಂಡು ಬೇರೂರಿನಿಂದ ತನ್ನ ಹೆಂಡತಿಯೊಡನೆ ಬಂಗಾರದ ಪಲ್ಲಕ್ಕಿಯಲ್ಲಿ ಕುಳಿತು, ಆ ರಾಜಕುಮಾರನು ಬರುತ್ತಿದ್ದನು. ನೇರ ಎದುರಿನಲ್ಲಿಯೇ ಬರುತ್ತಿರುವ ಶಿವ ಸಂಬಂಧವಾದ ತೇಜಸ್ಸಿನ ಮೂರ್ತಿಯೆಂದೆನಿಸುವ ವೇಮನಾರಾಧ್ಯರನ್ನು ಕಂಡು, ಒಮ್ಮಿಂದೊಮ್ಮೆಗೆ ಅವನು ಪಲ್ಲಕ್ಕಿಯಿಂದ ಇಳಿದು, ನಮಸ್ಕಾರ ಮಾಡಿದನು. ಅವನಿಗೆ ಆಯುಷ್ಯವು ಸ್ವಲ್ಪವಿರುವುದೆಂಬುದನ್ನು ಆ ವೇಮನಾರಾಧ್ಯರು ತ್ರಿಕಾಲಜ್ಞಾನಿಯಾದುದರಿಂದ ತಿಳಿದು, ಆಶೀರ್ವಾದಮಾಡುವುದಕ್ಕಲ್ಲದೆ ಆ ಆಚಾರ್ಯ

1 ರ (ಮು) 2 ದುಮಿಂ(ಮು)

ಎಱಗಿದೊಡೆನ್ನಂ ಪರಸದ
ತೆಱನೇಂ ಕಾಣನೊ ಮಹಾತ್ಮನಿನ್ನೊರ್ಮೆ ಪೊದ
ಳ್ದೆಱಗಿ ನಿರೀಕ್ಷಿಪೆನೆನುತುಂ
ತಱಿಸಂದೆಲೆ ದೇವ ಶರಣೆನುತ್ತೆಱಗಲೊಡಂ ೮

ವ॥ ಮತ್ತಮವರ್ಪರಸದುಸಿಕನಿರೆ—

ಪದಕೆಱಗೆ ಪರಕೆಗುಡದು
ನ್ಮದಯುತ ಭಕ್ತಂಗೆ ಮಣಿದನಿ[ನಿ][1]ಯನೆನುತೆ ಮ
ತ್ಸುದತಿ ಪರಿಹಾಸಕಂ ಗೆ
ಯ್ಯದೆ ಮಾಣಳೆನುತ್ತೆ ನಾಣ್ಚಿದಂ ಜನಪಸುತಂ ೯

ವ॥ ಅಂತು ನಾಣ್ಚಿ ತಲೆವಾಗಿ ಸಿಡಿಮಿಡಿಗೊಂಡು ಭಕ್ತಿಭಾವಂ ಜಾಱೆ ಕಾಯ್ಪನೊಳ
ಕೊಂಡು—

ಪಿರಿಯರ್ಮಾನ್ಯರುದಾರವೃತ್ತರನಘರ್ಶೈವಾಗಮಾಚಾರ್ಯಸ
ದ್ಗುರುಗಳ್ನೀಮೆನುತಳ್ತಿವಟ್ಟು ವಿನಯಂಬೆತ್ತೊಲ್ದು ನಿಮ್ಮಂಘ್ರಿಪಂ
ಕರುಹಕ್ಕಾಂ ಪೊಡಮಟ್ಟೊಡಕ್ಕೆ ನಿನಗಾಯುಃಶ್ರೇಯಮೆಂದೆನ್ನ ನೀಂ
ಪರಸಲ್ಸಲ್ಲದೆ ಸುಮ್ಮನಿರ್ದಪಿರಿದೇನಾಚಾರ್ಯರಾಚಾರಮೋ ೧೦

ಶ್ರೇಷ್ಠರು ಸುಮ್ಮನೆ ಇರಲು ಆ ರಾಜಕುಮಾರನು ನೋಡಿ– ೮. ಈ ಮಹಾತ್ಮನು ನಮಸ್ಕಾರಮಾಡಿದರೂ ನನ್ನನ್ನು ಆಶೀರ್ವದಿಸದಿರುವುದಕ್ಕೇನು ಕಾರಣವೋ (ತಿಳಿಯದು) ಪ್ರೀತಿಯಿಂದ ಇನ್ನೊಮ್ಮೆ ನಮಸ್ಕರಿಸಿನೋಡುತ್ತೇನೆ ಎನ್ನುತ್ತ ಸಮೀಪಕ್ಕೆ ಬಂದು, 'ಎಲೈ ದೇವನೇ, ಶರಣು' ಎಂದೆನ್ನುತ್ತ ನಮಸ್ಕಾರಮಾಡಲಾಗಿ ವ॥ ಆಗಲೂ ಕೂಡ ಅವರು ಹರಸದೆ ಸುಮ್ಮನಿರಲಾಗಿ– ೯. 'ನನ್ನ ಪತಿಯು ಪಾದಕ್ಕೆರಗಿದರೆ ಹರಕೆಯನ್ನು ಮಾಡದಿರುವ ವಿಶೇಷ ಗರ್ವದಿಂದ ಕೂಡಿದ ಭಕ್ತನಿಗೆ ನಮಸ್ಕರಿಸಿದನೆಂದು ನನ್ನ ಈ ಸುಂದರ ಪತ್ನಿಯು ಅಪಹಾಸ್ಯಮಾಡದಿರುವುದಿಲ್ಲ'ವೆಂದು ಆ ರಾಜಪುತ್ರನು ನಾಚಿಕೆಪಟ್ಟು ತಲೆಯನ್ನು ಬಗ್ಗಿಸಿದನು. ವ॥ ಆ ರೀತಿ ನಾಚಿ ತಲೆಯನ್ನು ಬಗ್ಗಿಸಿ, ಸಿಡಿಮಿಡಿಗೊಂಡವನಾಗಿ, ಭಕ್ತಿ ಭಾವವನ್ನು ದೂರೀಕರಿಸಿದವನಾಗಿ ಕೋಪಗೊಂಡನು. ೧೦. 'ಹಿರಿಯರೂ, ಸನ್ಮಾನ್ಯರೂ, ಉದಾರವಾದ ಚರಿತ್ರೆಯುಳ್ಳವರೂ, ಪವಿತ್ರರೂ (ಪಾಪದೂರರೂ), ಶಿವಸಂಬಂಧವಾದ ಆಚಾರ ಸಂಪನ್ನರೂ, ಶ್ರೇಷ್ಠಗುರುವರ್ಯರೂ, ನೀವಾಗಿದ್ದೀರೆಂದು ಪ್ರೀತಿಯಿಂದಲೂ ವಿನಯದಿಂದಲೂ ಒಲಿದು ನಿಮ್ಮ ಪಾದಕಮಲಗಳಿಗೆ ನಾನು ನಮಸ್ಕಾರಮಾಡಿದರೆ ನೀವು 'ನಿನಗೆ ಆಯುಷ್ಯವೂ ಶ್ರೇಯಸ್ಸೂ ಉಂಟಾಗಲೆ'ಂದು ಆಶೀರ್ವಾದ ಮಾಡದೆ ಸುಮ್ಮನೇ ಇದ್ದೀರಿ.

1 ನ (ಅ, ಚ, ಜ, ಮ, ಗ, ದ)

ಅಕ್ಕಟ ನಿನ್ನಯ ಸೌಜ
ನ್ಯಕ್ಕಮರ್ದ ಗುಣಕ್ಕೆ ಶೈವತೇಜಕೆ ಸಲೆ ಕೆ
ಯ್ಮಿಕ್ಕ ಶುಭವಿಮಳವೃತ್ತಿಗೆ
ತಕ್ಕುದೆ ಕೊರ್ತೆಱಗೆ ಪರಸಲೊಲ್ಲದ ಬಿಂಕಂ ೧೧

ಶುಕಮಿಡಿದು ಪೂತ ನವಕಿಂ
ಶುಕಕೆಱಗಿದ ತೆಱದಿನೆಱಗಿದೆಂ ನಿಮಗಿಂದಾ
ನಕಟಕಟ ಬಾಹ್ಯರಾಗ
ಪ್ರಕಟನಮಿದು ವಿಫಲಮೆಂಬುದಂ ಮುನ್ನಱಿಯೆಂ ೧೨

ದ್ವಿಜಕುಲಸಂಜಾತರ್ಗಡ
ನಿಜದಿಂ ನೀಮಾರ್ಯಪುರುಷರುಂ ಗಡ ಹರನಂ
ಭಜಿಯಿಪ ಭಕ್ತರ್ಗಡ ಭೂ
ಭುಜನೇಳ್ತಂದೆಱಗೆ ಸುಮ್ಮನಿರ್ಪುದು ಮತಮೇ ೧೩

ಪರಸಿ ನೀಮೆನಗಾಯುವಿತ್ತಪಿರೇ ಮದೋದ್ಧತವೃತ್ತಿಯಿಂ
ಪರಸಲೊಲ್ಲದೊಡಾಯು ತಗ್ಗುಗುಮೇ ವಿರಿಂಚಿ ಲಲಾಟದೊಳ್
ಬರೆದುದಂ ತೊಡೆಯಲ್ಕೆ ಪೆರ್ಚಿಸಲುಂ ಸಮರ್ಥರೆ ನೀಂ ಜಗ
ದ್ಗುರುಗಳೇ ಬಿಡಿಯೆಮ್ಮ ತುಳ್ಳುವ ಮಿಳ್ತು ನಿಮ್ಮಯ ದಾಪಿಯೇ ೧೪

ಆಚಾರ್ಯರ ಆಚಾರವು ಇದೇಯೋ ?' ೧೧. 'ಅಯ್ಯೋ ! ನಿನ್ನ ಈ ಸುಜನತೆಗೆ, ಒಪ್ಪುವ ಸದ್ಗುಣಗಳಿಗೆ, ಶಿವ ಸಂಬಂಧವಾದ ತೇಜಸ್ಸಿಗೆ, ವಿಶೇಷವಾದ ಮಂಗಳವನ್ನುಂಟುಮಾಡುವ ಪವಿತ್ರವೃತ್ತಿಗೆ, ಪ್ರೀತಿಯಿಂದ ನಮಸ್ಕಾರ ಮಾಡಿದರೆ ಆಶೀರ್ವಾದ ಮಾಡದಿರುವ ಈ ಗರ್ವವು ತಕ್ಕದ್ದೇ ?' ೧೨. 'ಅಕ್ಕಟ ! ಗಿಳಿಯು ದಟ್ಟವಾಗಿ ತುಂಬಿ ಹೂಬಿಟ್ಟಿರುವ ನೂತನ ಮುತ್ತುಗದ ಮರಕ್ಕೆ ಎರಗಿದ ರೀತಿಯಲ್ಲಿ ಪ್ರಕಟವಾದ ಈ ಹೊರವೇಷವೆಂಬುದು ಫಲವಿಲ್ಲದ್ದೆಂದು ಮೊದಲು ತಿಳಿಯದೆ ನಿಮಗೀಗ ನಾನು ನಮಸ್ಕರಿಸಿದಂತಾಯಿತು.' ೧೩. 'ದ್ವಿಜಕುಲದಲ್ಲಿ ಹುಟ್ಟಿದವರಂತೆ ! ನಿಜವಾಗಿ ಮಾಯಾರಹಿತರಾದ ಪುರುಷರಂತೆ ! ಪರಮೇಶ್ವರನನ್ನು ಸ್ತೋತ್ರ ಮಾಡುವ ಭಕ್ತರಂತೆ ! ಭೂಮೀಶ್ವರನು ಬಂದು ನಮಸ್ಕಾರ ಮಾಡಿದರೆ ಸುಮ್ಮನಿರುವುದು ಕ್ರಮವೇ ?' ೧೪. 'ಆಶೀರ್ವಾದ ಮಾಡಿ ನೀವೇನು ನನಗೆ ಆಯುಷ್ಯವನ್ನು ಕೊಡಬಲ್ಲಿರಾ ! ಮದದಿಂದ ಗರ್ವಗೊಂಡು ಈ ರೀತಿಯಲ್ಲಿ ಆಶೀರ್ವಾದ ಮಾಡದಿದ್ದರೆ ಆಯುಷ್ಯವೇನು ಕಡಿಮೆಯಾಗುವುದೇ ? ಬ್ರಹ್ಮನು ಹಣೆಯಲ್ಲಿ ಬರೆದುದನ್ನು ಅಳಿಸುವುದಕ್ಕೆ ಮತ್ತು ಹೆಚ್ಚಿಸುವುದಕ್ಕೆ ನೀವೇನು ಸಮರ್ಥರಾದೀರಾ ! ಜಗದ್ಗುರುಗಳೇ ಬಿಡಿ ! ನಮ್ಮನ್ನು

ಪಸೆನಿಂದ ವೇಳೆಯೊಳ್ಸಂ
ತಸದಿಂ ಪಿತರರ್ಕಳಿತ್ತ ನಲವರಕೆಗಳಿಂ
ದಸದಳಮೆ ನಿಮ್ಮ ಪರಕೆಯ
ಮುಸಕಂ ಬಱಿದೇಕೆ ಸಮ್ಮನಂ ನಿಮಗಿಳೆಯೊಳ್ ೧೫

ಪರಸಿದೊಡಳಿವಪ್ಪುದೆಮ್ಮಯ
ಪಿರಿಯುತನಂ ಮಾಣದೆಂದು ಪರಸದೆ ನೀಮಿ
ರ್ಪಿರವಂ ತಿಳಿದೆಂ ನಿಮ್ಮಂ
ತಿರಿಮೆಮ್ಮಂ ಪರಸಲಿಳೆಯೊಳಿಲ್ಲರೆ ವಿಬುಧರ್ ೧೬

ವ॥ ಎಂದ ನೃಪಸುತನ ಸಗರ್ವೋಕ್ತಿಯುಮಾ ಪೇಮನಾರ್ಯನಾಕರ್ಣಿಸಿ—

ಜನಪಸುತ ನಾಳೆ ಮಧ್ಯಂ
ದಿನದೊಳ್ನಿನಗಪ್ಪುದಲ್ತೆ ಮೃತಿಯುದನಱಿದುಂ
ಮನವೊಲ್ದಾಶೀರ್ವಾದಮ
ನೆನಸುಂ ನಿನಗೆಂತು ಮಾಡಲಾಂ ಬಗೆದಪೆಂ ೧೭

ಪರಸಿದೊಡೆ ಬಪ್ಪ ಮರಣಮ
ನೊರಸಲ್ವೇಳ್ಕುಂ ಮಹಾತ್ಮರೆನ್ನದೊ ನಿನ್ನೀ
ದುರಿತ ಬಲಮೆಮ್ಮ ಜಿಹ್ವಾಂ
ಕುರಕ್ಕೆ ಕೇಳ್ಬಾರದಾದುದಾಶೀರ್ವಾದಂ ೧೮

ನುಂಗುವ ಮೃತ್ಯುವು ನಿಮ್ಮ ದಾಸಿಯಲ್ಲ !' ೧೫. 'ಮದುವೆಯ ಹಸೆಯ ಮೇಲಿದ್ದ ಸಮಯದಲ್ಲಿ. ಸಂತೋಷದಿಂದ ತಂದೆತಾಯಿಯರಿತ್ತ ಅಕ್ಕರೆಯ ಹರಕೆಗಳಿಗಿಂತ ಶ್ರೇಷ್ಠವಾದದ್ದೇ ನಿಮ್ಮ ಹರಕೆಯ ಸಾಮರ್ಥ್ಯ? ಸುಮ್ಮನೆ ನಿಮಗೆ ಈ ಭೂಮಿಯಲ್ಲಿ ಸನ್ಮಾನವೇತಕ್ಕೋ'. ೧೬. 'ಆಶೀರ್ವಾದ ಮಾಡಿದರೆ ನಮ್ಮ ದೊಡ್ಡತನವೇ ಅಳಿದು ಹೋಗುತ್ತದೆ' ಆದ್ದರಿಂದ ಹರಸಕೂಡದೆಂದು ಆಶೀರ್ವಾದ ಮಾಡದೆ ನೀವಿದ್ದ ರೀತಿಯು ಅರ್ಥವಾಯಿತು. ನಿಮ್ಮಹಾಗೆ ನಮ್ಮನ್ನು ಆಶೀರ್ವಾದ ಮಾಡಲು ವಿಬುಧರು (ಜ್ಞಾನಿಗಳು) ಭೂಮಿಯ ಮೇಲೆ ಯಾರೂ ಇಲ್ಲವೇ ?' ವ॥ ಹೀಗೆನ್ನುವ ರಾಜಕುಮಾರನ ಗರ್ವದಿಂದ ಕೂಡಿದ ಮಾತನ್ನು ಆ ಪೇಮನಾರ್ಯನು ಕೇಳಿ. ೧೭. 'ಎಲೈ ರಾಜಪುತ್ರನೇ, ನಾಳೆಯದಿನ ಮಧ್ಯಾಹ್ನದ ವೇಳೆಗೆ ನಿನಗೆ ಮರಣವಾಗುವುದಲ್ಲವೇ ! ನಿನಗೆ ಬರುವ ಮೃತ್ಯುವನ್ನು ತಿಳಿದೂ ಕೂಡ ಮನಃ ಪ್ರೀತಿಯಿಂದ ಆಶೀರ್ವಾದವನ್ನು ನಿಶ್ಚಯವಾಗಿ ನಿನಗೆ ಮಾಡಲು ನಾನು ಹೇಗೆ ಮನಸ್ಸು ಮಾಡಲಿ ?' ೧೮. 'ಹರಸಿದರೆ ಬರುವ ಮರಣವನ್ನು ಒರೆಸಿಹಾಕಬೇಕೆಂದು ಲೋಕವು ಅನ್ನುತ್ತಿಲ್ಲವೋ ! (ಆದ್ದರಿಂದ) ಕೇಳು ನಿನ್ನ ಈ ಪಾಪದ ಆಧಿಕ್ಯವು ಆಶೀರ್ವಾದವೇ ನಾಲಗೆಯಿಂದ ಮೊಳಕೆಯೊಡೆಯ

ತಪ್ಪದೆಲೆ ನಾಳೆ ಮೃತಿ ನಿನ
ಗಪ್ಪುದು ಪೋಗೆನೆ ನೃಪಾತ್ಮಜಂ ಕೇಳ್ದು ಮನಂ
ಸೊಪ್ಪು ಸೊವಡಾಗೆ ಕೋಪಮ
ನಪ್ಪುಗೆಗೆಯ್ದೀಕ್ಷಿಸುತ್ತೆ ಮಗುಳ್ದಿಂತೆಂದಂ ೧೯

ಮದನನನಾರ್ದು ಸುಟ್ಟುಳಿಪಿದಂ ತಲೆಗೊಯ್ದು ಸರೋಜಗರ್ಭನಂ
ಮುದಮಲರ್ದೋವಿದಂ ಖಲಜಲಂಧರದೈತ್ಯ ಸುರಾಹಿತರ್ಕಳಂ
ಸದೆದೊಲವಿಂದೆ ರಕ್ಷಿಸಿದನೀಶನವಂ ಪೊಱತಾಗೆ ಮಿಕ್ಕ ಲೋ
ಕದ ಮನುಜರ್ಕಳಿಂ ವಧಿಸಲುಂ ಮಗುಳ್ದಿಂ ಪೊರೆಯಲ್ಸಮರ್ಥರೇ ೨೦

ಮಾರಮದಹರಣಲಾಂಛನ
ಧಾರಣಮಾತ್ರದೆ ಮಹೇಶ್ವರರಪ್ಪಿರೆ ನೀ
ಮಾರಯೆ ನಿಮ್ಮನುಚಿತವಾ
ಗ್ದ್ವ[1]ರದೆ ಬಂದಪ್ಪುದೆ ಮಿಳ್ತು ನಾಳೆನಗೆ ವಲಂ ೨೧

ಬಱಿದೇಕೆ ಬಿಂಕಮೆಸುತುಂ
ಗಱಿಗಟ್ಟಿದ ಕೋಪದಿಂದೆ ಗಳಪುತೆ ಪಲವಂ
ನೆಱೆ ಚುನ್ನವಾಡುತುಂ ನೆಲ
ದೆಱೆಯಂ ನಡೆತಂದು ಪೊಕ್ಕನಾತ್ಮಾಲಯಮಂ ೨೨

ವುದಕ್ಕೆ ಬಾರದಂತೆ ಮಾಡಿತು. ೧೯. 'ಎಲೈ ರಾಜಕುಮಾರನೇ, ನಾಳೆ ನಿನಗೆ ಬರುವ ಮೃತ್ಯುವು ತಪ್ಪುವುದಿಲ್ಲ, ಹೋಗು' ಎನ್ನಲು ರಾಜಕುಮಾರನು ಕೇಳಿ, ಕಲ್ಮಷಗೊಂಡ ಮನಸ್ಸಿನವನಾಗಿ ಕೋಪವನ್ನು ಹೊಂದಿದವನಾಗಿ (ವೇಮನಾರ್ಯರನ್ನು) ನೋಡುತ್ತ ಪುನಃ ಹೀಗೆಂದನು. ೨೦. ಈಶ್ವರನು ಮನ್ಮಥನನ್ನು ಗರ್ಜನೆಮಾಡಿ ಸುಟ್ಟು ಅಳಿಸಿ ಹಾಕಿದನು; ಬ್ರಹ್ಮನ ತಲೆಯನ್ನೇ ಕೊಯ್ದು (ಪುನಃ) ಸಂತೋಷಪರಳಿ ರಕ್ಷಿಸಿದನು, ದುಷ್ಟನಾದ ಜಲಂಧರ ದೈತ್ಯನನ್ನೂ, (ಉಳಿದ) ರಾಕ್ಷಸರುಗಳನ್ನೂ, ಬಡಿದು ಕೊಂದು (ಅನಂತರ) ಪ್ರೀತಿಯಿಂದ ರಕ್ಷಿಸಿದನು. ಅವನನ್ನು ಹೊರತುಪಡಿಸಿ ಮಿಕ್ಕುಳಿದ ಲೋಕದ ಮನುಷ್ಯರು ನಿಜವಾಗಿ ವಧೆಮಾಡಲು, ಪುನಃ ರಕ್ಷಿಸಲು ಸಮರ್ಥರಾದಾರೆಯೇ ? ೨೧. '(ಕೇವಲ) ಮನ್ಮಥನಮದವನ್ನು ನಾಶಗೊಳಿಸಿದ ಶಿವನ ಲಾಂಛನವನ್ನು ಧರಿಸಿದ ಮಾತ್ರಕ್ಕೆ ನೀವೂ ಪರಮೇಶ್ವರರು ಆಗುತ್ತೀರೋ ವಿಚಾರಿಸಿ ನೋಡಿದರೆ ನಿಮ್ಮ ಉಚಿತ ವಲ್ಲದ ಮಾತಿನ ಮೂಲಕ ನಾಳೆ ನನಗೆ ಮೃತ್ಯುವು ನಿಶ್ಚಯವಾಗಿ ಬಂದೀತೇ ?' ೨೨. 'ಸುಮ್ಮನೆ ಏಕೆ ಗರ್ವಪಡುತ್ತೀರಿ ?' ಎನ್ನುತ್ತ ವಿಶೇಷವಾದ ಗರ್ವದಿಂದ ಕೂಗಾಡುತ್ತ ಅನೇಕ ವಿಧದಿಂದ ವಿಶೇಷವಾಗಿ ನಿಂದೆಯ ಮಾತುಗಳನ್ನಾಡುತ್ತ ಆ ಭೂಮಿಶ್ವರನು

---

1 ಗ್ಧಾ(ಚ) ಗ್ದ್ವಾ(ಜ)

ವ॥ ಅಂತು ಪೊಕ್ಕು ನಿಜರಮಣಿವೆರಸು ಪರಿಮಳೋದಕದಿಂ ಮಿಂದು ಪರಮಾನ್ನಮುಂ ಸವಿದು ಕರ್ಪೂರತಾಂಬೂಲಮುಂ ಕೊಂಡು ಮಣಿಮಂದಿರಾಂತರ್ವಿಳಸಿತ ಕನಕಪರ್ಯಂಕ ಮೃದುಳ ತಳ್ಪಸ್ಥಳದೊಳ್ ಸಮರಸರತಸಮರಸಂಜಾತಸುಖಾನುಭವಾನಂತರಂ ಸುಖ ನಿದ್ರೆಗೆಯ್ದಿರ್ದನಾಗಳ್-

ಫಣಿಯೊಂದು ಘೋರವಿಷಭೀ
ಷಣವದನಂ ಪಾಟಲಸ್ಫುಟಂ ಪಟುತೆಯಿನಂ
ದಣಿಯುರವಿಳಿತಂದುದು ಮೇ
ಗಣಸರಪಳಿವಿಡಿದು ತೀವ್ರಚಾಲಿತರಸನಂ ೨೩

ವ॥ ಅಂತುಮಾ ತೂಗುಮಂಚದ ಸರಪಳಿಯು ಬಳಿವಿಡಿದು ಗಲ್ಲಲನಿಳಿದು ನಿದ್ರೆಗೆಯ್ದಿರ್ದ ನೃಪಸುತನ ಕಯ್ಯ ಪಗರಂ ಕರ್ಚಿ ಪೊರಮ ಫಣಿ ಪೊದೆಮಂಗುಳ್ದು ಪೊರಪ್ಪಡಲ್ಕೊಳ್ಳುತ್ತಮಾಂತೆ ಯುಳ್ಳುತ್ತು ಬಿಗುರ್ತು ಬೆಬ್ಬಳಿಸಿ ನಡುಗಿ ಹಾಹಾರವಂ ಮಸಗೆ ಕೆಟ್ಟೆಂ ಕೆಟ್ಟೆನೆಂದಳುತ್ತುಮಿರೆ ನರೇಂದ್ರನನಿತರ್ಕೊಳ್ಳೇಂಕನೆಳ್ದು ತಳಮಳಗೊಂಡು ನೆತ್ತರುಗುವ ಕರಮುಮಂ ಕಡಿದ ಘೋರಫಣಿ ಯುಮಂ ಕಂಡು ಪಮ್ಮನೆ ಪಾಱು ಕೆಡೆದು ಹಮ್ಮೆದಂಬೋಗಿ—

ಹೊರಟು ಬಂದು ತನ್ನ ಮನೆಯನ್ನು ಹೊಕ್ಕನು. ವ॥ ಆ ರೀತಿ ಅರಮನೆಯನ್ನು ಪ್ರವೇಶಿಸಿ ತನ್ನ ಪತ್ನಿಯೊಡನೆ ಸುಗಂಧಮಿಶ್ರವಾದ ನೀರಿನಿಂದ ಸ್ನಾನಮಾಡಿ, ಶ್ರೇಷ್ಠ ವಾದ ಆಹಾರವನ್ನು ಸ್ವೀಕರಿಸಿ, ಕರ್ಪೂರಮಿಶ್ರವಾದ ತಾಂಬೂಲವನ್ನು ಮೆದ್ದು, ರತ್ನ ಖಚಿತವಾದ ಮಂದಿರದ ಒಳಗಡೆಯಲ್ಲಿ ಪ್ರಕಾಶಿಸುವ ಬಂಗಾರದಿಂದ ಮಾಡಿದ ಮಂಚದ ಮೇಲೆ ಹಾಸಿರುವ ಹಾಸಿಗೆಯ ಮೇಲೆ ಸಮಾನಾನುರಾಗದಿಂದ ಕೂಡಿದ ರತಿಕ್ರೀಡೆ ಯೆಂಬ ಯುದ್ಧದಿಂದುಂಟಾದ ಆನಂದದ ಅನುಭವವನ್ನು ಪಡೆದ ನಂತರ ಸುಖನಿದ್ರೆ ಯನ್ನು ಮಾಡುತ್ತಿದ್ದನು. ಆಗ. ೨೩. ಘೋರವಾದ ವಿಷದಿಂದ ಕೂಡಿದ ಭಯಂಕರ ವಾದ ಮುಖವುಳ್ಳದ್ದಾಗಿಯೂ, ಕೆಂಪು ಬಿಳುಪು ಬಣ್ಣದಿಂದ ಕೂಡಿದ ಹೆಡೆಯುಳ್ಳ ದ್ದಾಗಿಯೂ, ವಿಶೇಷ ಸಾಮರ್ಥ್ಯವುಳ್ಳದ್ದಾಗಿಯೂ, ತೀವ್ರವಾಗಿ ಚಲಿಸಾಡುತ್ತಿರುವ ನಾಲಗೆಯುಳ್ಳದ್ದಾಗಿಯೂ ಇರುವ ನಾಗರಹಾವೊಂದು ತೂಗುಮಂಚದ ಮೇಲೆ ಕಟ್ಟಿದ್ದ ಸರಪಳಿಯನ್ನು ಅನುಸರಿಸಿ ಇಳಿದು ಬಂತು. ವ॥ ಹಾಗೆ ಆ ತೂಗುಮಂಚದ ಸರಪಳಿ ಯನ್ನನುಸರಿಸಿ ಗಳಗಳನೆ ಇಳಿದು ನಿದ್ರೆ ಮಾಡುತ್ತಿದ್ದ ರಾಜಕುಮಾರನ ಕೈಯ ಭಾಗ ವನ್ನು (ಪ್ರದೇಶವನ್ನು) ಕಚ್ಚಿ. ಮೊದಲುಮಾಡಿ, ಹಾವು ಹೆಡೆಯನ್ನು ತಿರುಗಿಸಿ ಹೊರಳುವಷ್ಟರಲ್ಲಿ ಆ ರಾಜಕುಮಾರನ ಪತ್ನಿಯು ಎಚ್ಚರಗೊಂಡಳು. ಭಯಗೊಂಡು, ಬೆಚ್ಚಿ ಬಿದ್ದು ನಡುಗುತ್ತ ಹಾಹಾಕಾರವು ತುಂಬುವಂತೆ ಕೆಟ್ಟೆನು ! ಕೆಟ್ಟೆನು ! ಎಂದು ಅಳುತ್ತಿರಲಾಗಿ, ರಾಜಕುಮಾರನು ಅಷ್ಟರಲ್ಲಿ (ಎಚ್ಚರಗೊಂಡು) ಒಮ್ಮೆಂದೊಮ್ಮೆಲೆ ಎದ್ದು ಸಂಕಟಗೊಂಡು, ನೆತ್ತರು ಹರಿಯುತ್ತಿರುವ ಕೈಯನ್ನೂ, ಕಡಿದ ಘೋರವಾದ

ಮದಿದಂ ಮಹಾತ್ಮರಾಡಿದ
ನುಡಿ ತಪ್ಪುಗುಮೇ ನೃಪಾತ್ಮಜಂ ಬರಿಸಿದಳಾ
ಮಡದಿ ಬೊಬ್ಬಿಯಿಡುತೆ ಪೊಸಗಾ
ರುಡರಂ ನುತಶಸ್ತ್ರವೈದ್ಯರಂ ಜೋಗಿಗಳಂ ೨೪

ವ॥ ಅಂತು ಬರಿಸುತವರ್ಗೆ ಬೇಡಿದುದನಿತ್ತಪೆನೆನ್ನ ಪತಿಯಂ ಬದುಂಕಿಪುದೆಂದು ಬಾಯಳಿದಳುತ್ತುಮಿರೆ ಸಾಕೆಂದು ನಿಲಿಸುತ್ತುಮವರ್ಮಂತಣಂಗೊಂಡು ಮಂತ್ರ ತಂತ್ರೌಷಧ ವಿಲೇಪನಾದಿಯಿಂ ನಿರ್ವಿಷಿಯುಂ ಹರಣಂಬಡೆಯಲ್ಕಮಾಱದೆ ಕೆಲಸಾರ್ದರವರೊಳೊರ್ವಂ ವಿಷಹರಣವಿಚಕ್ಷಣನಾ ಫಣಿದಷ್ಟನಂಗಮನಭೀಕ್ಷಿಸುತ್ತುಮಿಂತೆಂದು —

ಪಾಪೆತ್ತಣಿಂದೆ ಬಂದು ಮ
ಹೀವರನಂ ಕರ್ಚಿದತ್ತೊ ಶಿವ ಶಿವ ಕಾಲಂ
ತೀವಿದುದಿವಂಗೆ ದೈವಮ
ನಾವಂ ಮೀಱುವನೆನುತ್ತೆ ಮಗುಳ್ದಿಂತೆಂದಂ ೨೫

ವಿಮಳಂ ಬಾಸುಗಿ ಕಂಬಳಾಶ್ವತರನುನ್ಮತ್ತಂ ಪ್ರಚಂಡಂ ಗುಹಂ
ಸುಮನಂ ತಕ್ಷಕ ಪುಷ್ಪದಂಷ್ಟ್ರಕ ಪುರಾಣಂಗಳ್ಬಳಾಕಂ ಕರಾ
ಳಮುಖೈರಾವತ ನೀಲ ಪುಂಡ್ರಕಮಹಿರ್ವಕ್ತ್ರಾಹಿ ಕರ್ಕೋಟಕಂ
ಕುಮುದಂ ವಾಮನ ಮುದ್ಗಲಾರ್ಯಕ ಕಳಿಂಗಂ ಶಂಖಪಾಲಂ ಶಲಂ ೨೬

ಕಾಲೀಯಂ ಸಂವರ್ತಕ
ಕಾಲಿಕ ಧೃತರಾಷ್ಟ್ರ ಕುಥರ ಮಣಿನಾಗಂಗಳ್

ಸರ್ಪವನ್ನೂ ಕಂಡು ನೆಲಕ್ಕೆ ಬಿದ್ದು ಎಚ್ಚರದಪ್ಪಿದನು. ೨೪. ರಾಜಕುಮಾರನು ಸತ್ತನು ; ಮಹಾತ್ಮರಾಡಿದ ನುಡಿಯು ತಪ್ಪುತ್ತದೆಯೋ ? (ಆಗ) ಆ ರಾಜಕುಮಾರನ ಮಡದಿಯು ಬೊಬ್ಬಿಡುತ್ತ ನೂತನ ಗಾರುಡ ವಿದ್ಯೆಯನ್ನರಿತವರನ್ನೂ, ಶ್ಲಾಘ್ಯರಾದ ಶಸ್ತ್ರ ವೈದ್ಯರನ್ನೂ ಯೋಗಿಗಳನ್ನೂ ಕರೆಸಿದಳು. ವ॥ ಈ ರೀತಿ ಬರಮಾಡಿಕೊಂಡು ಅವರಿಗೆ 'ಬೇಡಿದುದನ್ನು ಕೊಡುತ್ತೇನೆ ; ನನ್ನ ಗಂಡನನ್ನು ಬದುಕಿಸಬೇಕು,' ಎಂದು ಬಾಯಿತೆರೆದು ಅಳುತ್ತಿರಲಾಗಿ, (ಬಂದ ಅವರು) 'ಅಳಬೇಡ ಸಾಕು' ಎಂದು (ಹೇಳಿ) ಅಳುವನ್ನು ನಿಲ್ಲಿಸುತ್ತ, ಅವರೆಲ್ಲ ಒಟ್ಟಾಗಿ ಸೇರಿ, ಮಂತ್ರ, ತಂತ್ರ, ಔಷಧ, ಲೇಪನ–ಇತ್ಯಾದಿ (ಅನೇಕ ಬಗೆಯ ಚಿಕಿತ್ಸೆಯನ್ನು) ಮಾಡಿಯೂ, ಪ್ರಾಣವನ್ನು ಪಡೆಯುವುದಕ್ಕಾಗದೆ, ಹಿಂದಕ್ಕೆ ಸರಿದರು, ಅವರಲ್ಲಿ ಒಬ್ಬ ವಿಷವನ್ನು ಹರಣಮಾಡುವುದರಲ್ಲಿ ಬಲ್ಲಿದನಾದವನು. ಆ ಹಾವು ಕಡಿದ ರಾಜಕುಮಾರನ ದೇಹವನ್ನು ನೋಡುತ್ತ ಹೀಗೆ ಹೇಳಿದನು. ೨೫. 'ಆಯುಷ್ಯಮುಗಿದ ಈ ಭೂಮೀಶ್ವರನನ್ನು ಹಾವು ಯಾವ ಕಡೆಯಿಂದ ಬಂದು ಕಚ್ಚಿತೋ ಶಿವಶಿವ ! ದೈವವನ್ನು ಮೀರುವವನಾರು ?' ಎನ್ನುತ್ತ ಪುನಃ ಹೀಗೆ ಹೇಳಿದನು. ೨೬–೨೯. ಪರಿಶುದ್ಧವಾದ ವಾಸುಕಿ, ಕಂಬಳಾಶ್ವತರ, ಉನ್ಮತ್ತ, ಪ್ರಚಂಡ. ಗುಹ, ಸುಮನ, ತಕ್ಷಕ, ಪುಷ್ಪದಂಷ್ಟ್ರಕ, ಪುರಾಣಗಳು, ಬಲಾಕ,

ಜಾಲಿ ಪತಂಗ ವಿಭಾಕರ
ಕೌಲಿಕ ನಖಶಿಖಿ ಮಹೋದರಾಜಿತಕಂಗಳ್ ೨೭

ಪಿಂಜರಿ ಕಂಧರಕೋಟಿ ಧ
ನಂಜಯ ಪಾಂಡುರ ಕಶಾಲಿ ಪಿಂಡಾಂಶುಕ ಚಿ
ತ್ರಾಂಜನ ಕುಹರ ಬಲಾಢ್ಯ ಮ
ಣಿಂಜಯ ಸಮುದಂಗಳಾದಿಯಾದಹಿನಿವಹಂ ೨೮

ಸಾಸಿರವಿಭೇದಮವರೊ
ಳ್ಸಾಸರಯಾಮಾಷ್ಟಕಕ್ಕೆ ಪತಿಗಳೆನಿಸಿ ಬ
ಲ್ಸಾಸದುರಂಗಗಳೆಂಟೊಳ
ವಾ ಸಮಯದೆ ಪಿಡಿದು ಕರ್ಚುಗುಂ ಮಾನವರಂ ೨೯

ವ॥ ಅವಱ ವಿಷಕ್ಕೆ ಮಂತ್ರತಂತ್ರ ಗಾರುಡಂಗಳಿಂ ಪರಿಹಾರಮೊಳವು ಮೇಣ್ ಗಜನುಂ ದುರ್ಮುಖನುಂ ಮಿತ್ರಾರಿಯುಂ ರೇಣುಕನುಂ ಜಿನ[1]ಕನುಂ ಸರ್ಗಕನುಂ ದುರ್ಧರನುಂ ಕುಳಿಕನುಂ ದಂಡಪಾದಕನುಮೆಂಬ ಫಣಿಗಳ್ಮೊದಲಾದ ನಾಗಂಗಳ್ ಲಕ್ಷಸಂಖ್ಯೆಯೊಳವವಱ ಗರಳಂ ಕಾಲಮೃತ್ಯು ನುಂಗದೊಡೆ ನರನಂ ಗಾರುಡಕ್ರಿಯಾಮಂತ್ರೌಷಧಾದಿಯಿಂ ಪರಿಹರಿಸಲ್ಪಡುಗುಮಲ್ಲಿ ಕಾಲಮುಂ ಯುಗಮುಮಂ ನಟ್ಟ ಪಲ್ಗಳಿನಿತೆಂಬುದಂ ತಿಳಿದು ಘೋರ ಗರಳಾಸ್ಯಂಗಳೆನಿಪಷ್ಟಕುಲಫಣಿಗಳಂಶಭವೋರ

ಕರಾಳಮುಖ, ಐರಾವತ, ನೀಲ ಪುಂಡ್ರಕ, ಹವಿರ್ಪಕ್ರಾಹಿ, ಕರ್ಕೋಟಕ, ಕುಮುದ, ವಾಮನ, ಮುದ್ಗಲಾರ್ಯಕ, ಕಳಿಂಗ, ಶಂಖಪಾಲ, ಶಲ, ಕಾಲೀಯ, ಸುವರ್ತಕ, ಕಾಲಿಕ ಧೃತರಾಷ್ಟ್ರ, ಕುಧರ, ಮಣಿನಾಗಗಳು, ಜಾಲ, ಪತಂಗ, ವಿಭಾಕರ, ಕೌಲಿಕ, ನಖಶಿಖಿ, ಮಹೋದರ, ಅಜಿತಕಗಳು, ಪಿಂಜರಿ, ಕಂಧರಕೋಟಿ, ಧನಂಜಯ, ಪಾಂಡುರ, ಕಶಾಲಿ, ಪಿಂಡಾಂಶುಕ, ಚಿತ್ರಾಂಜನ, ಕುಹರ, ಬಲಾಢ್ಯ, ಮಣಿಂಜಯ, ಸಮುದಗಳೇ ಮೊದಲಾದ ಹಾವುಗಳ ಭೇದವು ಸಾವಿರ ಪ್ರಕಾರದವು. ಅವುಗಳಲ್ಲಿ ಅತ್ಯಂತ ಸಾಹಸದ ಎಂಟು ಹಾವುಗಳು ಒಡೆಯರೆನಿಸಿವೆ. ಅವು ದಿನದ ಎಂಟನೆಯ ಜಾವದ ಸಮಯಕ್ಕೇ ಮಾನವರನ್ನು ಹಿಡಿದು ಕಚ್ಚುತ್ತವೆ. ವ॥ ಅವುಗಳ ವಿಷಕ್ಕೆ ಮಂತ್ರ ತಂತ್ರ, ಗಾರುಡ ಮಂತ್ರವೇ ಮೊದಲಾದವುಗಳಿಂದ ಪರಿಹಾರವು ಉಂಟು. ಮತ್ತು ಗಜ, ದುರ್ಮುಖ, ಮಿತ್ರಾರಿ, ರೇಣುಕ, ಜಿನಕ, ಸರ್ಗಕ, ದುರ್ಧರ, ಕುಳಿಕ, ದಂಡಪಾದಕವೆಂದೆನಿಸುವ ಫಣಿಗಳೇ ಮೊದಲಾದವು ಲಕ್ಷ ಸಂಖ್ಯೆಯವು. ಅವುಗಳ ವಿಷವು ಕಾಲಮೃತ್ಯುವು ಒಯ್ಯದಿದ್ದರೆ (ನುಂಗದಿದ್ದರೆ) (ಅಂಥ) ಮನುಷ್ಯನನ್ನು ಗಾರುಡಕ್ರಿಯೆ. ಮಂತ್ರ, ಔಷಧಗಳೇ ಮೊದಲಾದವುಗಳಿಂದ ಪರಿಹರಿಸುವುದಕ್ಕೆ ಸಾಧ್ಯವಿದೆ. ಅಲ್ಲಿ ಕಡಿದ ಕಾಲ, ಯುಗ, ನಟ್ಟ ಹಲ್ಲುಗಳೆಷ್ಟು ? ಎಂಬುದನ್ನು ತಿಳಿದುಕೊಳ್ಳಬೇಕು. ಘೋರ ವಿಷದಿಂದ ಕೂಡಿದ

———

1 ನು(ಮು)

ಗಂಗಳಗಿಯೆ ಗಾರುಡಮಂತ್ರ ಸಂಸ್ಕಾರದಿನಾ ಮಾನವಂಗಾವೇಶಂ ದುಂಬಿ ನುಡಿಯಿಸಲಕ್ಕುಮವಂಗ ಕಾಲಮೃತ್ಯು ತಗಳ್ದಂದೊಂದು ಪಲ್ನಾಂಟಿ ಶಿರದೊಳ್ ಶಿಖಿಯ ಸೆಕೆಯಿನುದಕಾಭಿಷೇಕದಿನಾವಿಷ ಮಿಳಿಗುಮೆರಡುಪಲ್ನಾಂಟಿ ಸಾಂತರ ಗಾರುಡಮಂತ್ರವಿಧಿಯಿನಾಗರಳಮಳಿಗುಂ ಮೂಱುಪಲ್ನಾಂಟಿ ದಿವ್ಯೌಷಧ ಪ್ರಯೋಗದಿನಾ ಹಾಲಾಹಲಂ ಕಿಡುಗುಮಾವಂದದಿನಾದೊಡಂ ಪಲ್ನಾಲ್ಕು ನಾಂಟಿ ಘೋರತರಕ್ಷ್ವೇಳಮಾವಾತಂಗಮಾದೊಡಮಸಾಧ್ಯಮಕ್ಕುಮೆಂದಾ ನರೇಂದ್ರಸುತನ ಕರದ ಫಣಿದಂತ ಕ್ಷಣಮನಭೀಕ್ಷಿಸಿ —

ಇದು ಕರ್ಕೋಟಕ ಫಣಿಕ
ಚ್ಚಿದುದುಱೆ[3] ನಟ್ಟುರ್ಚಿ ನಾಂಟಿದುದು ನಾಲ್ಕುಂ ಪ
ಲ್ಲಿದಱ ವಿಷಮಂ ಮಹಾವಿಷ
ಷದಕಂಧರಶಂಭುವಾದೊಡಂ ಪರಿದಪನೇ ೩೦

ವ॥ ಎಂದಾ ಜೋಗಿ ಕೆಲಂದೊಲಗಲೊಡನಾ ಸಮಯದೊಳಂತಃಪುರದ ಕಾಂತಜನಮುರಸ್ಥಳತಾಡನಂ ಬೆರಸು ಹಾಹಾರವಂ ಮಸಗೆ ಗೋಳಿಡುತ್ತಳುತ್ತುಮಿರೆ ಮತ್ತಮಲ್ಲಿ—

ಪರಿಜನಮುಂ ಪುರಜನಮುಂ
ನೆರೆದಾಪ್ತರುಮಿಷ್ಟಮಿತ್ರರುಂ ಕಣ್ಬನಿ ಕಾ
ಳ್ಪುದಮಾಗಿ ಸುರಿಯೆ ಶೋಕಾ
ತುರತೆಯನೊಳಕೊಂಡಳುತ್ತುಮಿರೆ ಬಳಿಕಾಗಳ್ ೩೧

ಮುಖಗಳುಳ್ಳವೆನಿಸುವ ಎಂಟು ಪ್ರಕಾರದ ಕುಲದ ಹಾವುಗಳ ಅಂಶದಿಂದ ಹುಟ್ಟಿದ ಹಾವುಗಳು ಕಚ್ಚಿದರೆ ಗಾರುಡ ಮಂತ್ರ ಸಂಸ್ಕಾರದಿಂದ ಆ ಮನುಷ್ಯನಿಗೆ ಆವೇಶವು ತುಂಬಿ ನುಡಿಸುವುದಕ್ಕೆ ಆಗುವುದು. ಅವಧಿಗೆ ಅಕಾಲಮೃತ್ಯುವು ಉಂಟಾಗದಿದ್ದರೆ, ಒಂದು ಹಲ್ಲುನಟ್ಟಿದ್ದರೆ, ತಲೆಯ ಮೇಲುಭಾಗದಲ್ಲಿ ಬೆಂಕಿಯ ಶಾಖದಿಂದ, ನೀರಿನ ಅಭಿಷೇಕದಿಂದ ಆ ವಿಷವು ಇಳಿಯುವುದು. ಎರಡು ಹಲ್ಲುಗಳು ನಾಟಿದ್ದರೆ, ಬಹುಸಾರ ವತ್ತಾದ ಗಾರುಡಮಂತ್ರ ವಿಧಿಯಿಂದ ಆ ಹಾವಿನ ಸಂಬಂಧವ ವಿಷವು ಅಳಿಯುವುದು. ಮೂರು ಹಲ್ಲುಗಳು ನಾಟಿದರೆ, ದಿವ್ಯವಾದ ಔಷಧ ಪ್ರಯೋಗದಿಂದ ಆ ಹಾಲಾಹಲ (ವಿಷವು) ಪರಿಹಾರವಾಗುವುದು. ನಾಲ್ಕು ಹಲ್ಲುಗಳು ನಟ್ಟಿದ್ದರೆ, ಯಾವರೀತಿಯಿಂದಲೂ ಘೋರತರವಾದ ಆ ವಿಷವನ್ನು ಹೋಗಲಾಡಿಸಲು ಯಾವಾತನಿಗಾದರೂ, ಅಸಾಧ್ಯ ವಾದುದಾಗುವುದು. ಎಂದು ಆ ರಾಜಕುಮಾರನ ಕಯ್ಯಲ್ಲಿನ ಹಾವಿನ ಹಲ್ಲುಗಳ ಗುರುತು ಗಳನ್ನು ನೋಡುತ್ತ ೩೦. ಇದು ಕಾರ್ಕೋಟಕನೆಂಬ ಹಾವು ಕಚ್ಚಿದ ಗಾಯ, ನಾಲ್ಕು ಹಲ್ಲುಗಳೂ ಚೆನ್ನಾಗಿ ನಟ್ಟು ಪಾರಾಗಿ ಹೊರ ಬಂದಿವೆ. ಈ ಹಾವಿನ ವಿಷವನ್ನು ಮಹಾಕಾಲಕೂಟ ವಿಷವನ್ನು ಕಂಠದಲ್ಲಿ ಧರಿಸಿರುವ ಶಿವನಾದರೂ ಪರಿಹಾರಮಾಡಿಯಾನೇ ? ವ॥ ಹೀಗೆಂದು ಆ ಜೋಗಿಯು ಪಕ್ಕಕ್ಕೆ ಸರಿಯಲು ಆ ಸಮಯದಲ್ಲಿ ಅಂತಃಪುರದ ಸ್ತ್ರೀ ಸಮೂಹದವರು ಎದೆ ಎದೆ ಬಡಿದುಕೊಳ್ಳುವವ ರಾಗಿ, ಹಾಹಾಕಾರವು ಎಲ್ಲ ಕಡೆಗೂ ಹರಡುತ್ತಿರಲು, ಗೋಳಾಡುತ್ತ, ಅಳುತ್ತ, ಇರಲಾಗಿ ಮತ್ತು ಅಲ್ಲಿ ೩೧–೩೨. ಆಗ ಸೇವಕ ವರ್ಗದ ಜನಗಳೂ, ಪಟ್ಟಣದ

ಅಳಿದ ನಿಜೇಶನಂ ರಮಣಿ ನೋಡಿ ನಿಜೋದರದಲ್ಲಿ ಬಾಸುಳಂ
ಬಳಯಿಸೆ ಕೋಮಲಾಂಗುಲಿಗಳೋವದೆ ಮೋದಿಕೊಳುತ್ತೆ ಕಾಂತ ಹಾ
ವಿಳಸಿತರೂಪ ಹಾ ವಿನಯಮಂದಿರ ಹಾಯೆನುತುಂ ದೃಗಂಬು ಪಾ
ಯ್ದಿಳೆಯೊಳ್ಪ್ರನಲ್ವರಿಯೆ ಬಿಳ್ದಳುತಾರ್ತತೆಯಿಂ ಪಲುಂಬಿದಳ್ ೩೨

ಪಳಯಿಸಿದಳ್ಮಿಗೆ ಮಱುಗಿದ
ಳೊಳಗಾಱಿದಳೋಪ ಕೆಟ್ಟೆನಕಟೆನುತುಂ ಬಾ
ಯುಳಿದತ್ತಳ್ಕಳವಳಿಸಿದ
ಳಿಳೆಯೊಳ್ಕೆಡೆದುರುಳ್ದು ಪೊರಳ್ದು ತಳವೆಳಗಾದಳ್ ೩೩

ವ॥ ಅಂತಳವಿಗಳಿದಳಲನೊಳಕೊಂಡಾಕ್ರಂದನಂಗೆಯ್ದು ಗದ್ಗದೋದ್ಗಳಿತ ಶಿಥಿಲಾಕ್ಷರಂ ನಾಲಗೆಯೊಳ್ಪೊರಳ್ದುರುಳೆ ಮೊದಲ ದಿನದೊಳಾ ವೇಮನಾಚಾರ್ಯರ್ಹರಸಲೊಲ್ಲದೆಂದುದು ಮನೆಲ್ಲಮಂ ಬಿತ್ತರಿಸಲೊಡನಾ ನೃಪನಂದನನಾಪ್ತಬಂಧುಗಳುಮವನ ತಂದೆತಾಯ್ಗಳುಂ ಕೇಳ್ದ ಳದಿರೆಂದವಳಂ ಸಂತೈಸುತಿಂತೆಂದರ್—

ಪರಮಾರಾಧ್ಯಪ್ರಪ[1]ನ್ನಪ್ರಕರವಿಪದಘಧ್ವಂಸಕರ್ಸತ್ಕೃಪಾಭಾ
ಸುರಚಿತ್ತರ್ವೇಮನಾರ್ಯರ್ಕರುಣಿಪಮನಿದನೊಯ್ದಿಂದು ಮುಂದಿಕ್ಕುತಾಮೆ

ಜನರುಗಳೂ, ಆಪ್ತರಾದವರೂ, ಇಷ್ಟಮಿತ್ರರೂ ಸೇರಿ, ಕಣ್ಣೀರ ಹನಿಗಳು ಪ್ರವಾಹ ವಾಗಿ ಹರಿಯುವಂತೆ ಶೋಕಾಧಿಕ್ಯವನ್ನು ಹೊಂದಿ, ಅಳುತ್ತಿರಲು ; ಆಗ ಸತ್ತು ಹೋದ ಪತಿಯನ್ನು ಆ ಹೆಂಡತಿಯು ನೋಡಿ, ಹೊಟ್ಟೆಯ ಮೇಲೆ ಬಾಸುಂಡೆ ಗಳು ಬೆಳೆದೇಳುತ್ತಿರಲು, ಕೋಮಲವಾದ ಬೆರಳುಗಳನ್ನು ಸಂಕಟದಿಂದ ಮುರಿದು ಕೊಳ್ಳುತ್ತ, 'ಹಾ ! ಕಾಂತನೇ ಶೋಭಿಸುವ ರೂಪವುಳ್ಳವನೇ, ಹಾ ! ವಿನಯಕ್ಕೆ ಮಂದಿರವಾದವನೇ, ಹಾ !' ಎನ್ನುತ್ತ ಕಣ್ಣೀರುಗಳು ಉಕ್ಕಿಹೋಗಿ ಭೂಮಿಯಲ್ಲಿ ಪ್ರವಾಹವಾಗಿ ಹರಿಯುತ್ತಿರಲು, ನೆಲಕ್ಕೆ ಬಿದ್ದು ದೈನ್ಯಭಾವದಿಂದ ಅತ್ತಳು. ೩೩. (ಅವಳು) ಪ್ರಲಾಪಿಸಿದಳು ; ವಿಶೇಷವಾಗಿ ಸಂಕಟಕ್ಕೊಳಗಾದಳು ; ಎದೆಯೊಣಗಿಸಿ ಕೊಂಡಳು. 'ಪ್ರಿಯನೇ, ಕೆಟ್ಟೆನು.' ಎನ್ನುತ್ತ ಬಾಯಿ ತೆರೆದು ಅತ್ತಳು ; ಕಳವಳ ಗೊಂಡಳು ; ಭೂಮಿಯ ಮೇಲೆ ಬಿದ್ದು ಉರುಳಾಡಿ, ಹೊರಳಾಡಿ, ಸಂಕಟಪಟ್ಟಳು. ವ॥ ಆ ರೀತಿ ಗಣನಾತೀತವಾಗಿ ದುಃಖವನ್ನು ಹೊಂದಿ ಬೋರಾಡಿ ಅತ್ತು, ಗದ್ಗದ ದಿಂದ ಹೊರಹೊರಟ ತಡೆತಡೆದು ಬರುವ ಅಕ್ಷರಗಳು ನಾಲಿಗೆಯ ಮೇಲೆ ಹೊರಳಾಡಿ ಉರುಳುತ್ತಿರಲು, ಪ್ರಥಮ ದಿನವೇ ಆ ವೇಮನಾಚಾರ್ಯರು ಆಶೀರ್ವಾದ ಮಾಡಲು ಮನಸ್ಸುಮಾಡದೆ, ಹೇಳಿದುದನ್ನೆಲ್ಲ ವಿಶದವಾಗಿ ಹೇಳಲಾಗಿ, ಆ ರಾಜಕುಮಾರನ ಆಪ್ತ ಬಂಧುಗಳೂ, ಅವನ ತಂದೆತಾಯಿಗಳೂ, ಕೇಳಿ, ಅಳಬೇಡವೆಂದು ಅವಳನ್ನು ಸಮಾಧಾನ ಗೊಳಿಸಿ, ಹೀಗೆ ಹೇಳಿದರು : ೩೪. 'ಪರಮ ಆರಾಧ್ಯರೂ, ಶರಣಾಗತರಾದ ಜನರುಗಳ

1 ಪ(ದ)

ಲ್ಲರುಮುದ್ಯದ್ಭಕ್ತಿಯಿಂ ದೀನತೆವೆರಸು ಶರಣ್ಬೊಕ್ಕೊಡೀ ಸತ್ತ ರಾಯಂ
ಗಿರದೀವಪ್ರಾಣಮಂ ಮಾಣದೆ ಮೆಱೆವಿನಮಾತ್ಮೀಯಶೈವಪ್ರಭಾವಂ ೩೪

ವ॥ ಎಂದುಸಿರ್ದಿದೆ ಕಜ್ಜಮೆಂದು ನಿರ್ಧರಿಸಿ—

ಜವದಿಂದೇಳ್ತಂದು ತಾವೆಲ್ಲರುಮವರ ಪದಾಂಭೋಜದೊಳ್ಬಿಳ್ದು ಭೀತಿ
ಪ್ರವಣರ್ವೆಯ್ಯಿಕ್ಕಿ ಕೆಯ್ಯಂ ಮುಗಿದವಧರಿಸತ್ವೇಳ್ಕುಮಾಚಾರ್ಯವಂಶಾ
ರ್ಣವರಾಕಾಚಂದ್ರ ನೀಂ ಬಿನ್ನಪಮನಿದನಿವಂ ನಿಮ್ಮ ಭೃತ್ಯಂ ಮಹಾಮೃ
ತ್ಯುವಿನುಗ್ರಾಸ್ಯಾಂತರಂಬೊಕ್ಕಳಿದನಕಟ ಘೋರಾಹಿದಂತಾತಿದಷ್ಟಂ ೩೫

ಅಡಿಗೆಱಗೆ ಪರಕೆಯಂ ಕುಡ
ದೊಡೆಯರ್ನಿರವಿಸಿದ ತೆಱದೆ ಫಣಿದಷ್ಟನಿವಂ
ಮಡಿದಂ ಪಡುಗಡೆಯುದಯಿಸಿ
ದೊಡಮರ್ಕಂ ದೇವ ನಿಮ್ಮ ನುಡಿ ತಪ್ಪುಗುಮೇ ೩೬

ನಿಜಶಿಷ್ಯರಳಿಕದೊಳ್ಜಲ
ಜಜನುಲ್ಲಿಖಿಸಿರ್ದ ಲಿಪಿಯನೊರಸುವೆ ಗಡ ನೀ
ನಜನಿಂತು ನೆಗಳ್ದ ಜನಪಾ
ಲಜಮೃತಿಯಂ ಪಱಿವುದಱಿದೆ ನಿಮಗತಿಮಹಿಮಾ ೩೭

ಆಪತ್ತುಗಳನ್ನೂ, ಪಾಪಗಳನ್ನೂ ನಾಶಮಾಡತಕ್ಕವರೂ, ಒಳ್ಳೆಯ ಕೃಪಾವಿಶೇಷ ಪೂರ್ಣವಾದ ಪ್ರಕಾಶಿಸುವ ಚಿತ್ತವುಳ್ಳವರೂ, ಆದ ಮೇಮನಾಚಾರ್ಯರಲ್ಲಿಗೆ ಈ ಹೆಣವನ್ನು ಒಯ್ದು ಮುಂದೆ ಇಟ್ಟು, ನಾವೆಲ್ಲರೂ ಅತ್ಯಧಿಕ ಭಕ್ತಿಯಿಂದಲೂ ದೈನ್ಯಭಾವದಿಂದಲೂ ಕೂಡಿ, ಶರಣುಹೊಕ್ಕರೆ, ಈ ಸತ್ತ ರಾಜನಿಗೆ ತಮ್ಮ ವೀರಶೈವ ಪ್ರಭಾವ ಕಾರಣದಿಂದ ತಪ್ಪದೆ ಪ್ರಾಣವನ್ನು ಲೋಕಪ್ರಸಿದ್ಧವಾಗುವಂತೆ ಕೊಡುವರು. ವ॥ ಹೀಗೆ ಮಾತನಾಡಿ ಈಗ ಇದೇ ಯೋಗ್ಯಕಾರ್ಯವೆಂದು ನಿರ್ಧರಮಾಡಿಕೊಂಡು—೩೫. ವೇಗವಾಗಿ ಮೇಮನಾಚಾರ್ಯರ ಹತ್ತಿರಕ್ಕೆ ಅವರೆಲ್ಲರೂ ಹೊರಟುಬಂದು, ಅವರ ಪಾದಕಮಲಗಳ ಮೇಲೆ ಬಿದ್ದು ಭಯತತ್ಪರರಾದ ಅವರೆಲ್ಲ ನಮಸ್ಕರಿಸಿ, ಕೈಮುಗಿದು 'ಆಚಾರ್ಯವಂಶವೆಂಬ ಸಮುದ್ರಕ್ಕೆ ಚಂದ್ರಪ್ರಾಯನಾದವನೇ, ನೀನು ನಮ್ಮ ಈ ಬಿನ್ನಪವನ್ನು ಲಾಲಿಸಬೇಕು. ಈತನು ನಿಮ್ಮ ಸೇವಕನು. ಘೋರವಾದ ಹಾವಿನ ಕಡಿತದಿಂದ ಭಯಂಕರವಾದ ಮೃತ್ಯುವಿನ ಉಗ್ರವಾದ ಬಾಯಿಗೆ ಬಿದ್ದು, ಅಕ್ಕಟಾ ! ಸತ್ತು ಹೋದನು. ೩೬. (ನಿನ್ನೆಯ ದಿನ ನಿಮ್ಮ) ಪಾದಗಳಿಗೆ ನಮಸ್ಕರಿಸಲು ಹರಕೆಯನ್ನು ಕೊಡದಿರುವ ಒಡೆಯರಾದ ತಾವು ಅಪ್ಪಣೆ ಕೊಡಿಸಿದ ರೀತಿಯಲ್ಲಿ ಹಾವು ಕಡಿದು ಇವನು ಸತ್ತನು, ದೇವ, ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಹುಟ್ಟಿದರೂ ಹುಟ್ಟಬಹುದು ನಿಮ್ಮ ಮಾತು ಸುಳ್ಳಾಗುವುದೇ ? ೩೭. 'ಅತಿಮಹಿಮಾ ಪೂರ್ಣನಾದವನೇ, ನೀನು ನಿನ್ನ ಶಿಷ್ಯರ ಹಣೆಯಲ್ಲಿ ಬ್ರಹ್ಮನು (ಜಲಜಭವಂ) ಬರೆದ ಬರೆಹವನ್ನು ಒರೆಸಿಹಾಕುವವನಲ್ಲವೇ ! ಬ್ರಹ್ಮನು ಈ ರೀತಿಗೆ ಗುರಿಮಾಡಿದ ರಾಜಪುತ್ರನ ಮರಣವನ್ನು

ಕಾಲಹರ ಗರಳಕಂಠ
ವ್ಯಾಲಾಭರಣೈಕರೂಪ ಪಾಲಿಪುದೀಗ
ಳ್ಕಾಲನ ಪೊಳಲ್ಗೆ ಪಟುಫಣಿ
ಹಾಲಾಹಲವಡಸೆ ತಳರ್ದ ಭೂಭುಜನಸುವಂ ೩೮

ಅಮಿತಗುಣಶಾಲಿ ಲೀಲಾ
ಶಮಿತೇಂದ್ರಿಯವರ್ಗ ಭರ್ಗಮಾರ್ಗಗ ವಿದ್ಯಾ
ಸಮುದಯ ಮುದಮಯಮಾನಸ
ವಿಮದ ಸ್ತುತ ವೇಮನಾರ್ಯ ಜಯ ಗಣವರ್ಯಾ ೩೯

ವಿತರಣಧೀರ ವಿಶ್ರುತವಿಚಾರ ವಿನಿರ್ಜಿತಮಾರ ಲಿಂಗಸಂ
ಗತನಿಜಕಾಯ ನಿರ್ಗಳದಪಾಯ ನಿರಾಕೃತಮಾಯ ಮಂಗಳಾ
ಯತನಸುವೃತ್ತ ಮಾನ್ಯ ಸಮುದಾತ್ತ ಮಹೇಶ್ವರಚಿತ್ತ ಪಾವನೋ
ನ್ನತಗುಣಧಾಮ ಪಾಲಿಪುದು ವೇಮಗುರೂತ್ತಮ ತಾಮಸಾತ್ಮರಂ ೪೦

ಗುರುಕುಲಚಕ್ರವರ್ತಿ ವಿಶದೋಜ್ವಳಕೀರ್ತಿ ನಿಜಾನತಾರ್ತಿಸಂ
ಹರ ಹರದಿವ್ಯರೂಪ ಶಿವತತ್ವಕಳಾಪ ದುರಂತಪಾಪಕಂ

ಪರಿಹರಿಸುವುದು ನಿಮಗೆ ಅತಿಶಯವಾದದ್ದೇ ?' ೩೮. ಕಾಲಹರನೂ, ನೀಲಕಂಠನೂ, ಹಾವುಗಳೇ ಆಭರಣವಾಗುಳ್ಳವನೂ ಆದ ಶಿವನಲ್ಲಿ ಐಕ್ಯತಾಭಾವವನ್ನು ಹೊಂದಿರುವವನೇ, ಈಗ ಯಮನಪಟ್ಟಣಕ್ಕೆ ಸಮರ್ಥವಾದ ಹಾವಿನ ವಿಷವೇರಿ ಸತ್ತು ಹೊರಟು ಹೋದ ಈ ರಾಜಪುತ್ರನನ್ನು ರಕ್ಷಿಸಬೇಕು. ೩೯. ಅಪರಿಮಿತ ಸದ್ಗುಣಗಳುಳ್ಳವನೇ, ಆತ್ಮಲೀಲೆಯಿಂದ ನಿಗ್ರಹಿಸಲ್ಪಟ್ಟ ಸಮಸ್ತ ಇಂದ್ರಿಯ ವರ್ಗಗಳನ್ನುಳ್ಳವನೇ, ಪರಶಿವನ ವಿಷಯಕ ಸದ್ಭಕ್ತಿಯಲ್ಲಿ ಚರಿಸುವವನೇ, ವೀರಶೈವ ಧರ್ಮಮಾರ್ಗಕ್ಕನುಗುಣವಾದ ವಿದ್ಯೆಗಳ ಸಮೂಹವನ್ನು ಹೊಂದಿದವನೇ, ಆನಂದಮಯವಾದ ಮನಸ್ಸುಳ್ಳವನೇ, ಮದವಿರಹಿತರಾದವರಿಂದ ಸ್ತೋತ್ರಮಾಡಿಸಿಕೊಳ್ಳುವವನೇ, ಶಿವಗಣಶ್ರೇಷ್ಠನೇ, ವೇಮನಾರ್ಯ, ಜಯ. ೪೦. ದಾನಗುಣದಲ್ಲಿ ಧೀರನೂ, ಪ್ರಸಿದ್ಧವಾದ ತಾತ್ತ್ವಿಕ ವಿಚಾರವನ್ನುಳ್ಳವನೂ, ಮನ್ಮಥ ಸಂಬಂಧದ ಮನೋವಿಕಾರವನ್ನು ಗೆದ್ದವನೂ, ಲಿಂಗದಿಂದ ಸಂಗತವಾದ ದೇಹವುಳ್ಳವನೂ (ಇಷ್ಟಲಿಂಗವನ್ನು ದೇಹದ ಮೇಲೆ ಧರಿಸಿದವನೂ). ಅಪಾಯದಿಂದ ದೂರನಾದವನೂ, ಮಾಯೆಯನ್ನು ತಿರಸ್ಕರಿಸಿದವನೂ, ಮಂಗಳಗಳಿಗೆ ಆಶ್ರಯವಾದ ಸಚ್ಚರಿತ್ರೆಯುಳ್ಳವನೂ, (ಸರ್ವಜನರ) ಮನ್ನಣೆಗೆ ಪಾತ್ರನೂ, ಉದಾರನೂ, ಪರಮೇಶ್ವರನಲ್ಲಿಟ್ಟ ಚಿತ್ತವುಳ್ಳವನೂ, ಪಾವನವೂ, ಉನ್ನತವೂ ಆದ ಗುಣಗಳಿಗೆ ಸ್ಥಾನನಾದವನೂ ಆದ ಹೇ, ವೇಮನಾರಾಧ್ಯ ಗುರುಶ್ರೇಷ್ಠನೇ, ತಮೋಗುಣದ ಆತ್ಮವುಳ್ಳಪರಾಧ ನಮ್ಮನ್ನು ರಕ್ಷಿಸಬೇಕು. ೪೧. ಗುರು ಸಮೂಹಕ್ಕೆಲ್ಲ ಚಕ್ರವರ್ತಿಯಂತಿರುವ, ವಿಶದವಾಗಿ ಪ್ರಕಾಶಮಾನವಾದ ಯಶಸ್ಸನ್ನುಳ್ಳ

ಜನಹರಿಣೇಂದ್ರ ಸದ್ವನಧಿಚಂದ್ರ ಸದಾಶಿವಭಕ್ತಿಸಾಂದ್ರ ನೀಂ
ಪೊರೆವುದು ವೇಮನಾರ್ಯ ಬಿಡದೆಮ್ಮನಪಾರ್ಯಸುಕಾರ್ಯಕೌಶಲಾ ೪೧

ಶರಣಾಗತಜನವಜ್ರಪಂ
ಜರರೆಂಬೀ ಬಿರಿದು ನಿಮಗೆ ಶಾಶ್ವತಮದಱಿಂ
ಕರುಣಾಕರ ನಿಮ್ಮಂಘ್ರಿಗೆ
ಶರಣಾಗತರಾದೆವೆಮ್ಮ ಪೊರೆ ಮಹಿಮಾಬ್ಧೀ ೪೨

ಈಯುಗದೊಳಳಿದ ನರರ್ಗಸು
ವೀಯಲುಮಂತಕನ ಬಾಧೆಯುಂ ಪಱಿದೊಲವಿಂ
ಕಾಯಲುಮೆಲೆ ನೀವಲ್ಲದೆ
ಮಾಯಾಂತಕ ಪೇಳ್ಸಮರ್ಥರಾರ್ಪೆಱರಿಳೆಯೊಳ್ ೪೩

ಮೊದಲೊಳ್ ನಿಮಗಿವನೊಲ್ದೆಱ
ಗದೊಡಿವನದು ತಪ್ಪು ಗಡ ವಿಚಾರಿಪೊಡೀತಂ
ಮೊದಲೆಱಗಿದನಿವನೊಳ್ತ
ಪ್ಪುದಱಿಸುಗುಮೆ ದೇವದೇವ ನೀವಱಿಯದುದೇ ೪೪

ವನೂ, ನಮಸ್ಕರಿಸಿದವರ ಸಂಕಟಗಳನ್ನು ಪರಿಹಾರಮಾಡುವವನೂ, ಹರನ ದಿವ್ಯವಾದ ಆಕಾರವುಳ್ಳವನೂ. ಶಿವಸಂಬಂಧವಾದ ತತ್ತ್ವಸಮೂಹ ವಿಶಿಷ್ಟನಾದವನೂ, ಕೊನೆಯೇ ಇಲ್ಲದ ಪಾಪಗಳೆಂಬ ಆನೆಗಳಿಗೆ ಸಿಂಹಪ್ರಾಯನಾದವನೂ, ಸತ್ಪುರುಷರೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವವನೂ, ಸತತವೂ ಶಿವನಲ್ಲಿಟ್ಟ ಅತಿಶಯ ಭಕ್ತಿಭಾವವುಳ್ಳವನೂ, ಇತರರಿಂದ ಕಡೆಯಲಸಾಧ್ಯವಾದ ಸತ್ಕಾರ್ಯಗಳಲ್ಲಿ ಕೌಶಲ್ಯವುಳ್ಳವನೂ ಆದ ಹೇ. ವೇಮನಾರ್ಯನೇ ನೀನು (ನಮ್ಮನ್ನು) ರಕ್ಷಿಸಬೇಕು. ೪೨. ಶರಣಾಗತರಾದ ಜನರಿಗೆ ವಜ್ರಪಂಜರದಂತಿರುವವರು ಎಂಬ ಈ ಬಿರುದು ನಿಮಗೆ ಶಾಶ್ವತವಾದದ್ದು, ಆದ್ದರಿಂದ ಹೇ ಕರುಣಾಕರನೇ, ಮಹಿಮೆಗೆ ಸಮುದ್ರದಂತಿರುವವನೇ, ನಿಮ್ಮ ಪಾದಗಳಿಗೆ ಶರಣಾಗತರಾಗಿದ್ದೇವೆ. ನಮ್ಮನ್ನು ರಕ್ಷಿಸು. ೪೩. ಈ ಯುಗದಲ್ಲಿ ಸತ್ತ ಮನುಷ್ಯರಿಗೆ ಪ್ರಾಣವನ್ನು ಕೊಡುವುದಕ್ಕೂ, ಯಮನ ಬಾಧೆಯನ್ನು ಪರಿಹರಿಸಿ ಪ್ರೀತಿಯಿಂದ ಕಾಯುವುದಕ್ಕೂ, ಎಲೈ ಮಾಯೆಗೆ ಅಂತಕಸ್ವರೂಪನಾದ ದೇವನೇ, ನೀವಲ್ಲದೆ ಬೇರೆ ಸಮರ್ಥರು ಈ ಭೂಮಿಯಲ್ಲಿ ಇನ್ನಾರು ? ಹೇಳು. ೪೪. ಮೊದಲು ಇವನು ನಮಸ್ಕಾರವನ್ನೇ ಮಾಡದಿದ್ದರೆ ಇವನದು ತಪ್ಪಾಗುತ್ತಿತ್ತಲ್ಲವೇ ! ವಿಚಾರಿಸಿ ನೋಡಿದರೆ ಈತನು (ನಿಮ್ಮನ್ನು ಕಂಡಕೂಡಲೇ) ಮೊದಲೇ ನಮಸ್ಕಾರ ಮಾಡಿದ್ದಾನೆ. ದೇವ, ಇವನಲ್ಲಿ ತಪ್ಪು ಹೇಗೆ ಉಂಟಾದೀತು. (ಇದೆಲ್ಲಾ) ನಿಮಗೆ

ಹರಮತಕೆ ಕೀರ್ತಿ ನಿಮ್ಮಯ
ಚರಿತಕ್ಕೆ ನೆಗಳ್ತೆಯೆಮಗೆ ಪರಮಾನಂದಂ
ತರುಣಿಗೆ ಮುತ್ತೈದೆತನಂ
ಧರಣಿಗೆ ಮುದಮಲರ್ದ ತೆಱದೆ ಪೊರೆ ಕರುಣಾಬ್ಧೀ ೪೫

ಅನಿಮಿತ್ತಬಂಧು ನಿಮ್ಮಯ
ವಿನುತ ಕೃಪಾಪಾಂಗಸಾರಸಂಜೀವನದಿಂ
ಘನವಿಷಮವಿಷಧರದ ವಿಷ
ಮನಿದಂ ಕಳೆದಸುವನಿತ್ತು ಪೊರೆ ಗುರುತಿಲಕಾ ೪೬

ಮುಸುಟಿಯ ಚೌಡರಾಯನಡಿಗೊಲ್ದೆಱಗಿರ್ದ ಲತಾಂಗಿಗೆಯ್ದೆ ಸಂ
ತಸದೊಳೆ ದೀರ್ಘಮಾಯು ನಿನಗೆಂದು ಮೊದಲ್ಪರಸುತ್ತೆ ಮೇಣವ
ಳ್ಗಸು ಪೆಱಪಿಂಗೆ ಜೀವನಮನಿತ್ತು ವಿರಾಜಿಸನೇ ಧರಿತ್ರಿಯೊ
ಳ್ಕುಸುಮಶರಾರಿಭಕ್ತತತಿಗಿಂತಿದು ಚೋದ್ಯಮೆ ಮೇಮ ಧೀಮಣೀ ೪೭

ಪನ್ನಗಧರಸನ್ನಿಭ ಪಟು
ಪನ್ನಗದಪ್ಪಂಗೆ ಪರಣಿಯಿವುದು ಭಜಕಾ
ಪನ್ನಗಪವಿನಿಭ ಗುಣಸಂ
ಪನ್ನಗಣಪ್ರವರ ಮೇಮ ವಿಬುಧಲಲಾಮಾ ೪೮

ಗೊತ್ತಿಲ್ಲದುದೇ ? ೪೫. ಶಿವಸಂಬಂಧವಾದ ಮತದ ಕೀರ್ತಿಸ್ವರೂಪನೇ, ನಿಮ್ಮ ಚರಿತ್ರೆಯ ವಿಖ್ಯಾತಿಯು ನಮಗೆ ಪರಮಾನಂದವುಂಟುಮಾಡುವಂತಹದು. ಈ ತರುಣಿಗೆ ಮುತ್ತೈದೆತನವೂ ಭೂಮಿಗೆ ಸಂತೋಷವೂ, ಅರಳುವ ರೀತಿಯಲ್ಲಿ ಹೇ ಕರುಣಾ ಸಮುದ್ರನೇ ರಕ್ಷಿಸು. ೪೬. ಹೇ ಗುರುಶ್ರೇಷ್ಠನೇ, ಅನಿಮಿತ್ತ ಬಂಧುವೇ. ನಿಮ್ಮ ಶ್ಲಾಘ್ಯವೂ, ಕೃಪಾವಿಶಿಷ್ಟವೂ ಆದ ಕಡೆಗಣ್ಣಿನ ನೋಟವೆಂಬ ಸಾರವತ್ತಾದ ಸಂಜೀವನ ಶಕ್ತಿಯಿಂದ ಅಧಿಕವಾದ ಭಯಂಕರ ಹಾವಿನ (ವಿಷಧರ) ಈ ವಿಷವನ್ನು ಕಳೆದು (ಇವನಿಗೆ) ಪ್ರಾಣದಾನ ಮಾಡಿ ಸಂರಕ್ಷಿಸು. ೪೭. ಹೇ, ಮೇಮಧೀಮಣಿಯೇ, (ಈ ಪೂರ್ವದಲ್ಲಿ) ಮುಸುಟಿಯ ಚೌಡಯ್ಯ ರಾಯನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದ ಲತಾಂಗಿಗೆ (ಸ್ತ್ರೀಯಳಿಗೆ) ಸಂತೋಷದಿಂದ (ಅವರು) 'ನಿನಗೆ ದೀರ್ಘಾಯುಷ್ಯ ವುಂಟಾಗಲಿ,' ಎಂದು ಮೊದಲು ಆಶೀರ್ವಾದ ಮಾಡಿದರು. ಆಮೇಲೆ ಅವಳ ಪ್ರಾಣವು ಹಾರಿ ಹೋಗಲಾಗಿ, ಅವಳಿಗೆ ಪ್ರಾಣದಾನ ಮಾಡಿ ಭೂಮಂಡಲದಲ್ಲಿ ಪ್ರಕಾಶಮಾನ ನಾಗಲಿಲ್ಲವೇ ? ಪರಮೇಶ್ವರನ ಭಕ್ತಸಮೂಹಕ್ಕೆ ಇದೇನು ಆಶ್ಚರ್ಯದ ಕಾರ್ಯವೇ ? ೪೮. ಹೇ ಮೇಮನಾರಾಧ್ಯ, ವಿದ್ವಾಂಸರಲ್ಲಿ ಶ್ರೇಷ್ಠನಾದವನೇ, ಪರಶಿವ ಸ್ವರೂಪನೇ, ನಿನ್ನನ್ನು ಭಜಿಸುವಂಥ ಜನರ ಆಪತ್ತುಗಳೆಂಬ ಪರ್ವತಗಳಿಗೆ ವಜ್ರಾಯುಧ ಪ್ರಾಯ ನಾದವನೇ, ಸದ್ಗುಣಗಳಿಂದ ಕೂಡಿದ ಶಿವಗಣ ಶ್ರೇಷ್ಠನೇ, ಸಮರ್ಥವಾದ ಹಾವಿನಿಂದ

ಶರಣಾಗತ ರಕ್ಷಾಕರ
ಬಿರಿದಾಂಕ ಭವತ್ಪದಾಬ್ಜಮಂ ಮಱೆವೊಕ್ಕಾ
ಮಿರೆ ಪೊರೆಯದಭಯಮುಮಂ ಕುಡ
ದಿರೆ ನಿಮ್ಮಯ ಬಿರಿದು ಬಿಂಕಮೇನಪ್ಪುದೊ ಪೇಳ್ ೪೯

ಗತಿಯುಂ ಮತಿಯುಂ ಹಿತನುಂ
ಪಿತನುಂ ನೀಮೆಮಗೆ ದೇವ ಪೊರೆ ಪೊರೆಯದೊಡು
ನ್ನತಧೀರ ನಿಮ್ಮ ವೀರ
ವ್ರತಕ್ಕೆ ಕುಂದಪ್ಪುದಲ್ತೆ ವಿಶ್ವಂಭರೆಯೊಳ್ ೫೦

ವ॥ ಎಂದವಂದಿರಡಿಗಡಿಗೆ ಮಣಿವುತುಂ ಪಲವಂದದಿಂ ನುತಿಯಿಸುತುಂ ಪ್ರಾಣ ದಾನವಂ ಪ್ರಾರ್ಥಿಸುತುಂ ನಿಜಕೃಪಾಕಟಾಕ್ಷಸಾಮರ್ಥ್ಯಮಂ ಬಯಸುತುಂ ಬಾಯಳಿದು ಬೇಡಿಕೊಳುತ್ತು ಮಿರ್ಪಾ ಸಮಯದಲ್ಲಿ—

ಅಪ್ರತಿಮಪ್ರತಾಪನಿಧಿ ಶಂಭುನಿಭಂ ಶಿವನಾಮಧಾಮ ಮೇ
ಮಪ್ರಭು ನೋಡಿ ತನ್ನ ಕರುಣಾಮೃತಪೂರ್ಣಕಟಾಕ್ಷದಿಂ ಶಿವೈ
ಕ್ಯಪ್ರಸರಪ್ರಭಾವದಿರವಂ ಪರಿಭಾವಿಸಿ ಸಾರವೀರಶೈ
ವಪ್ರಥೆ ಕುಂದುಗುಂ ಮಱೆಗೆವಂದರನೋವದೊಡಿಂದು ಚಿಚ್ಚರಂ ೫೧

ಕಡಿಯಲ್ಪಟ್ಟ ಈ ರಾಜಪುತ್ರನಿಗೆ ಪ್ರಾಣವನ್ನು ಕೊಡಬೇಕು. ೪೯. ಶರಣಾಗತ ರಾದವರನ್ನು ರಕ್ಷಣೆಮಾಡುವವನೆಂಬ ಬಿರುದನ್ನು ಹೊಂದಿದವನೇ, ನಿನ್ನ ಪಾದಕಮಲ ವನ್ನು ಮರೆಹೊಕ್ಕು ನಾವೆಲ್ಲ ಇರಲಾಗಿ, ರಕ್ಷಿಸದಿದ್ದರೆ, ಅಭಯವನ್ನು ಕೊಡದಿದ್ದರೆ, ನಿಮ್ಮ ಆ ಬಿರುದೂ ಆ ದೊಡ್ಡತನವೂ ಏನಾದೀತು ? ಹೇಳು. ೫೦. ಹೇ ದೇವ, ನಮಗೆ, ಸದ್ಗತಿಯೂ, ಬುದ್ಧಿಯೂ, ಹಿತವೂ, ತಂದೆಯೂ, ನೀನೇ ಆಗಿದ್ದಿಯೆ, (ಆದ್ದ ರಿಂದ ನಮ್ಮನ್ನು.) ರಕ್ಷಿಸಬೇಕು, ರಕ್ಷಿಸದಿದ್ದರೆ ಹೇ ಉನ್ನತ ಧೀರನೆನಿಸಿರುವ ಮೇಮನಾ ರಾಧ್ಯನೇ. ನಿಮ್ಮ ವೀರಶೈವವೆಂಬ ವ್ರತಕ್ಕೆ ಈ ಭೂಮಂಡಲದಲ್ಲಿ ಕುಂದು ಉಂಟಾಗು ವುದಲ್ಲವೇ ? ವ॥ ಹೀಗೆ ಹಲವಾರು ಪ್ರಕಾರದಿಂದ ಅವರೆಲ್ಲರೂ ಅನ್ನುತ್ತ ಪಾದ ಗಳಿಗೆ ನಮಸ್ಕಾರಮಾಡುತ್ತಲೂ, ಅನೇಕ ಪ್ರಕಾರವಾಗಿ ಸ್ತೋತ್ರಮಾಡುತ್ತಲೂ, ಪ್ರಾಣದಾನವನ್ನು ಮಾಡೆಂದು ಪ್ರಾರ್ಥಿಸುತ್ತಲೂ, ಅವನ ಕೃಪಾ ಕಟಾಕ್ಷದ ಸಾಮರ್ಥ್ಯ ವನ್ನು ಇಚ್ಛಿಸುತ್ತಲೂ, ಬಾಯಿಬಿಟ್ಟು ಬೇಡಿಕೊಳ್ಳುತ್ತ ಇರುವ ಆ ಸಮಯದಲ್ಲಿ— ೫೧. ಅನುಪಮವಾದ ಪ್ರತಾಪಕ್ಕೆ ನಿಧಿಯೆನಿಸಿದವನೂ, ಶಂಭು ಸಮಾನನೂ, ಶಿವ ನಾಮ ಸ್ತೋತ್ರಕ್ಕೆ ಆ ಗರವಾದವನೂ ಆದ ಮೇಮನಾರಾಧ್ಯ ಪ್ರಭುವು ನೋಡಿ, ತನ್ನ ಕರುಣೆಯೆಂಬ ಅಮೃತದಿಂದ ತುಂಬಿರುವ ಕಡೆಗಣ್ಣುಗಳ ನೋಟದಿಂದ, ಲಿಂಗಾಂಗ ಸಾಮರಸ್ಯದಿಂದ ಕೂಡಿದ ಶಿವಶರಣರ ಸಮೂಹದ ಪ್ರಭಾವದ ರೀತಿಯನ್ನು ಮನಸ್ಸಿ ನಲ್ಲಿ ತಂದುಕೊಂಡು, ಬೆನ್ನು ಬಿದ್ದವರನ್ನು ಶೀಘ್ರವಾಗಿ ಈಗ ರಕ್ಷಿಸದಿದ್ದರೆ, ಸಾರತರ

ಮೂದಲಿಸಿ ನುಡಿಯೆ ಪಿಂದ
ಣ್ಗಾದೊಡೆಮಗೆ ಕೊಱತೆಯಲ್ತೆ ನಿಜಭಕ್ತಿಯ ಮ
ರ್ಯಾದಿತವಚನಕೆ ಜಗುಳ್ದಾಂ
ಪೋದೊಡೆ ನಿಜಭಕ್ತಬಂಧು ನಗದೇಕಿರ್ಪರ್ ೫೨

ಎಱೆಯನ ದಂಡು ಮೇಲ್ವರಿಯೆ ಪಿಂದೆಗೆದೋಡುವುದೊಂದು ಬೀರಮೋ
ಕೊಱತೆಯನಾತ್ಮಭಕ್ತಮತಪದ್ಧತಿಗಾಗಿಪುದೊಂದು ಶೀಲಮೋ
ನೆಱೆಯಸುವೀವುದೆಂದು ಮಱೆವೊಕ್ಕುಡುಪೇಕ್ಷಿಪುದೊಂದು ಶಕ್ತಿಯೋ
ಮೆಱೆವಭವಾಂಘ್ರಿಭಕ್ತತತಿಯೊಲ್ವುದೆ ಮೂದಲೆಗಳ್ಕಿದಾತನಂ ೫೩

ವ॥ ಎಂದು ದೃಢಪ್ರತಿಜ್ಞೆಯನಪ್ಪುಕೆಯ್ದು ಲಿಂಗಜಂಗಮಜದಭಕ್ತರಂ ಭಕ್ತಿಯಿಂ ಬಿಜಯಂಗೆಯ್ಸಿತಂದು—

ಮಣಿಮಣಿದು ಮಣಿಮಯಾಸನದಲ್ಲಿ ಕುಳ್ಳಿರಿಸಿ
ಗಣನಿವಹಮಂ ಭಕ್ತಿಭರದಿಂದೆ ಸಡಗರಿಸಿ
ವಿಮಳೋದಕದಿನವರ ಪಾದತಳಮಂ ಕರ್ಚಿ
ಕಮನೀಯ ತತ್ಪಾದಸಲಿಲಮಂ ನಲವೆರ್ಚಿ
ಪೊಸಕಳಶದೊಳ್ತೀವಿ ಗಣಸಭಾಮಧ್ಯದೊಳ್
ಮಿಸುಗುವಂತದನಿರಿಸುತವರ ಸಾನ್ನಿಧ್ಯದೊಳ್
ಲೇಸೆನಿಪ ಸುರಭಿ ಕುಸುಮದೆ ಸುರಭಿತಂ ಮಾಡಿ

ವಾದ ವೀರಶೈವ ಧರ್ಮದ ಪ್ರಭೆಗೆ ಕುಂದಕವುಂಟಾಗುವುದೂ. ೫೨. ತಿರಸ್ಕರಿಸಿ ಮಾತನಾಡಿದರೆ, ಹಿಂದೆಗೆದರೆ, ನನ್ನ ಶಿವಭಕ್ತಿಯ ಮರ್ಯಾದ ಪ್ರಸಿದ್ಧವಾದ ಮಾತಿಗೆ (ಪಂಥಕ್ಕೆ) ಹೆದರಿ (ಹಿಂಜರಿದು) ಹೋದರೆ. ಕುಂದಕವೆಲ್ಲವೇ ? ನನ್ನ ಇತರ ಭಕ್ತ ಬಂಧುಗಳು ನಗದೆ ಇಕಿದ್ದಾರು ? ೫೩. ವೈರಿಯಾದವನ ದಂಡು ಮೇಲೆಬಿದ್ದಾಗ ಹಿಂದಕ್ಕೆ ತಿರುಗಿ ಓಡಿಹೋಗುವುದೊಂದು ಶೌರ್ಯದ ನಡೆವಳಿಕೆಯೋ ? ಶಿವಭಕ್ತಿಯ ಧರ್ಮಪದ್ಧತಿಯಿಂದ ನಡೆಯುವವರಿಗೆ ಕೊರತೆಯನ್ನುಂಟುಮಾಡುವುದು ಅದೊಂದು ಶೀಲವೇ ? ಎಲ್ಲರೂ ಸೇರಿ ಪ್ರಾಣದಾನಮಾಡಬೇಕೆಂದು ಮರೆಹೊಕ್ಕಾಗ ಅವರನ್ನು ತಿರಸ್ಕರಿಸುವುದು ಅದೊಂದು ಶಕ್ತಿಯೋ ? ಮೂದಲಿಕೆಗೆ ಹೆದರಿದಾತನನ್ನು ಪ್ರಸಿದ್ಧವಾದ ಈಶ್ವರನ ಭಕ್ತ ಸಮೂಹವು ಒಪ್ಪುವುದೇ ? ವ॥ ಹೀಗೆಂದು ದೃಢವಾದ ಪ್ರತಿಜ್ಞೆ ಮಾಡಿ, ಲಿಂಗ ಜಂಗಮಭಕ್ತರುಗಳನ್ನು ಭಕ್ತಿಯಿಂದ ಬರಮಾಡಿಕೊಂಡವನಾಗಿ "ಲಲಿತ ರಗಳೆ" (ಆ ಲಿಂಗ ಜಂಗಮ ಭಕ್ತರಿಗೆ) ನಮಸ್ಕಾರ ಮಾಡಿ ಮಾಡಿ, ರತ್ನನಿರ್ಮಿತ ಆಸನಗಳ ಮೇಲೆ ಕುಳ್ಳಿರಿಸಿ, ಸಂಭ್ರಮಗೊಂಡು ಆ ಶಿವಗಣ ಸಮೂಹದಲ್ಲಿ ಅತಿಶಯವಾದ ಭಕ್ತಿಯನ್ನಿಟ್ಟು, ಪರಿಶುದ್ಧ ಜಲದಿಂದ ಅವರ ಪಾದಗಳನ್ನು ತೊಳೆದನು. ಮನೋಹರವಾದ ಆ ಪಾದಜಲವನ್ನು ಅತಿಸಯ ಸಂತೋಷದಿಂದ ಹೊಸ ಕಳಸಗಳಲ್ಲಿ ತುಂಬಿಕೊಂಡು ಅದನ್ನು ಶಿವಗಣಗಳ ಸಭಾ ಮಧ್ಯದ ಅವರ ಸನ್ನಿಧಿಯಲ್ಲೇ ಇಟ್ಟನು,

ಬಾಸಣಿಸಿ ಸಪ್ಪುರದಿಂ ಮೃಡನಡಿಗಳಂ ಪಾಡಿ
ಮಗುಳ್ದು ಶಿವಗಣಸಭೆಯನಾನಂದದಿಂ ನೋಡಿ
ಪೊಗಳ್ದು ಪೂಮಾಲೆಗಳನವರ ಮುಡಿಯೊಳ್ಪೂಡಿ
ಪರಿಮಳಕದಂಬದಿಂದನುಲೇಪನಂಗೊಳಿಸಿ
ಸುರುಚಿರಾಭರಣನಿಕುರುಂಬದಿನಲಂಕರಿಸಿ
ಸಾರತರಧೂಪಧೂಮಾಮೋದಮಂ ನೀಡಿ
ನೀರಾಜನಾದಿಯುಂ ಬೆಳಗಿ ಮಿಗೆ ಕೊಂಡಾಡಿ
ಸರ್ಪಿರಮೃತಾಕ್ತಮಧುರೋಪಹಾರಮನಿತ್ತು
ಕರ್ಪೂರವೀಟಿಕ ವಿಭೂತಿಗೊಡುತೊಲವೆತ್ತು
ಪಟುಪಟಹದಿಂಡಿಮದ ಶಂಖದ ರವಂ ನೆಗಳೆ
ಚಟುಲಕಹಳಾರವದೊಡನೆ ವಂದಿಗಳ್ಪೊಗಳೆ
ಆಡೆ ನರ್ತಕಿಯರೀಕ್ಷಿಪರಕ್ಷಿ ಮೋಲ್ವರಿಯೆ
ಕೂಡೆ ನಾನಾವಾದ್ಯನಾದಮದು ಸೈವರಿಸೆ
ನೆಗಳ್ದುಘೇ ಜಯ ಜಯಧ್ವಾನಮೊತ್ತಂ ಮಸಗೆ
ಸುಗುಣನಿಧಿ ನಿಂದು ನಿಜಭಕ್ತಿಭಾವಂ ಮಿಸುಗೆ
ಕುಸುಮಾಂಜಲಿಯನೆಸಗಿ ಬಲವಂದು ಮಗುಳ್ದೆಳ್ದು

ಉತ್ತಮ ಸುಗಂಧ ವಿಶಿಷ್ಟವಾದ ಹೂವುಗಳಿಂದ ಸುಗಂಧಮಯವಾದುದನ್ನಾಗಿಮಾಡಿ (ಹೂವುಗಳನ್ನು ಏರಿಸಿ), ಮೇಲೆ ತೆಳುವಾದ ಬಟ್ಟೆಯನ್ನು ಮುಚ್ಚಿದನು. ಪರಮೇಶ್ವರನ ಪಾದಗಳನ್ನು ಭಜಿಸಿ ಪುನಃ ಆನಂದದಿಂದ ಆ ಶಿವಭಕ್ತಗಣಗಳ ಸಭೆಯನ್ನು ನೋಡಿ ಹೊಗಳಿ, ಹೂಮಾಲೆಗಳನ್ನು ಅವರ ತಲೆಯಲ್ಲಿ ಧರಿಸಿದನು. ಪರಿಮಳ ಸಮೂಹವನ್ನು ಅವರಿಗೆ ಅನುಲೇಪನ ಮಾಡಿದನು. ಮನೋಹರವಾದ ಆಭರಣಗಳ ಸಮೂಹದಿಂದ ಅಲಂಕಾರ ಗೊಳಿಸಿದನು. ಸಾರವತ್ತಾದ ಸುಗಂಧವನ್ನು ಬೀರುವ ಧೂಪವನ್ನು ಹಾಕಿ ಧೂಮದ ಸೊಗಸನ್ನು ನೀಡಿದನು. ಕರ್ಪೂರದ ಆರತಿಯೇ ಮೊದಲಾದುವನ್ನು ಬೆಳಗಿ ವಿಶೇಷವಾಗಿ ಕೊಂಡಾಡಿದನು. ತುಪ್ಪ ಹಾಲುಗಳಿಂದ ಕೂಡಿದ ಮಧುರವಾದ ಉಪಹಾರವನ್ನು ಕೊಟ್ಟನು. ಪಚ್ಚಕರ್ಪೂರ ಮಿಶ್ರವಾದ ತಾಂಬೂಲವನ್ನು ವಿಭೂತಿಯನ್ನು ಕೊಟ್ಟು ಸಂತೋಷಗೊಳಿಸಿದನು. ಆಗ ವಿಶೇಷ ಧ್ವನಿಮಾಡುವ ನಗಾರಿ, ಢಕ್ಕೆಗಳ ಶಂಖ ಧ್ವನಿಯು ಹರಡಿತು. ಗಟ್ಟಿಯಾಗಿ ಧ್ವನಿಮಾಡುವ ಕಹಳೆಯ ಧ್ವನಿಯೊಡನೆಯೇ ನಂದಿಗಳು (ಬಿರುದನ್ನು ಉಗ್ಘಡಿಸುವವರು) ಹೊಗಳಿದರು. ನೋಡುವ ಕಣ್ಣುಗಳು ಆನಂದಗೊಳ್ಳುವಹಾಗೆ ನರ್ತಕಿಯರು ನೃತ್ಯಮಾಡಿದರು. ಅನೇಕ ವಿಧವಾದ ವಾದ್ಯ ಧ್ವನಿಗಳು ಮೇಳಗೊಂಡು ವ್ಯಾಪಿಸಿದವು. ವಿಖ್ಯಾತವಾಗಿ ಜಯ ಜಯ ಎಂಬ ಧ್ವನಿಯು ಎಲ್ಲ ಕಡೆಗೂ ಹರಡಿತು. ಆಗ ಆ ಸದ್ಗುಣಗಳ ನಿಧಿಯೆನಿಸುವ ಪೇಮನಾರಾಧ್ಯನು ಹೊರ ಹೊಮ್ಮುತ್ತಿರುವ ತನ್ನ ಭಕ್ತಿಭಾವದಿಂದ (ಆ ಶಿವಶರಣ ಸಮೂಹಕ್ಕೆ) ಬೊಗಸೆಯಲ್ಲಿ ಪುಷ್ಪಗಳನ್ನು ಹಿಡಿದು ಎರಚಿ ಪ್ರದಕ್ಷಿಣೆ ಮಾಡಿದನು. ಪುನಃ ಎದ್ದು ಆ ಶೋಭಿಸುವ

ನಿಸುವ ಶರಣವ್ರಜದ ಬೆಸನ ಶಿರದೊಳ್ತಾಳ್ದ
ವಿತತಮಹಿಮಾಕರಂ ನತಜನದಯಾಕರಂ
ಭವಭಯವಿಭಂಜನಂ ಶಿವಸಮಯರಂಜನಂ
ಶರಣಪದಸೇವಕಂ ಪರಮಶಿವಭಾವಕಂ
ಯಮಭಯನಿವಾರಣಂ ಸ್ವಮತಶುಭಕಾರಣಂ
ಕಲಿಮಲವಿದಾರಣಂ ಖಲಸಮಯದಾರುಣಂ
ವಿಗಹಿತದುರೀಷಣಂ ವರಗುಣವಿಭೂಷಣಂ
ಸೋಮಧರಬಂಧುರಂ ವೇಮಗುರುಸಿಂಧುರಂ
ರಾಜಿತಗುಣಾಕರಂ ಭಾಜಿತದಿವಾಕರಂ
ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ

ವ॥ ಅಂತು ಶಿವಗಣಸಪರ್ಯೆಯಂ ನೆಗಳ್ದು ತದನುಜ್ಞೆಯುಂ ಕೈಕೊಂಡಾ ನರೇಂದ್ರನ ಕಳೇವರಮಂ ತರ್ಪುದೆಂದು ಬೆಸಸೆ ತನ್ಮಿತ್ರಜನಂ ಜವದಿಂ ಪೋಗಿ ನಿಂದು ನಿರೀಕ್ಷಿಪಾಗಳ್—

ಬೆಳೆತ ಮೊಗಂ ಬೆಳರ್ತ ನಸುದೇಲ್ದ[1] ವಿಲೋಚನಮಾಲಿ ಕುಗ್ಗಿ ಜೋ
ಲ್ದೊಲಗಿದ ಮಸ್ತಕಂ ಕೆದರ್ದ ಮೀಸೆ ಸಡಿಲ್ದ ತುರುಂಬು ಸೈತಃಗೆ

ಸಮಸ್ತ ಶಿವಗಣದ ಅಪ್ಪಣೆಯನ್ನು ತಲೆಯಲ್ಲಿ ಧರಿಸಿದವನಾದನು. ವಿಸ್ತಾರಗೊಂಡ (ಪ್ರಖ್ಯಾತವಾದ) ಮಹಿಮಾಕರನೂ, ನಮಸ್ಕರಿಸುವ ಜನರಲ್ಲಿ ದಯೆಯನ್ನುಂಟು ಮಾಡುವವನೂ, ಶರಣಜನರ ಪಾದಸೇವಕನೂ, ಪವಿತ್ರವಾದ ಮಂಗಳಕರ ಭಾವನಾ ವಿಶಿಷ್ಟನೂ, ಮೃತ್ಯುಭಯವನ್ನು ನಿವಾರಿಸಿದವನೂ. ತನ್ನ ವೀರಶೈವ ಮತದ ಶುಭಕ್ಕೆ ಕಾರಣನೂ, ಕಲಿಕಾಲದ ಪಾಪವನ್ನು ಕತ್ತರಿಸಿಹಾಕಿದವನೂ, ದುಷ್ಟಮತಗಳಿಗೆ ದಾರುಣ ನೆನಿಸಿದವನೂ, ದುಷ್ಟ ಈಷಣತ್ರಯ (ದಾರೇಷಣ, ಪುತ್ರೇಷಣ, ವಿತ್ತೇಷಣ) ದೂರನೂ, ಶ್ರೇಷ್ಠವಾದ ಗುಣಗಳಿಂದ ಅಲಂಕಾರಗೊಂಡವನೂ. ಶಿವನಲ್ಲಿಟ್ಟ ಭಕ್ತಿ ಯಿಂದ ಬಂಧುರನೆನಿಸಿದವನೂ, ಸದ್ಗುಣ ಸಮೂಹಗಳಿಗೆ ಆಕರನೆನಿಸಿದವನೂ, ಸೂರ್ಯ ನನ್ನು ಜಯಿಸಿದ ಕಾಂತಿಯುಳ್ಳವನೂ ಆದ ವೇಮನಾರಾಧ್ಯನೆಂಬ ಆಚಾರ್ಯಶ್ರೇಷ್ಠನು ರಾರಾಜಿಸುತ್ತ ಒಲುಮೆಯಿಂದಲೂ. ನಲ್ಮೆಯಿಂದಲೂ ಹೀಗೆ (ಆ ಲಿಂಗ ಜಂಗಮ ಭಕ್ತರುಗಳನ್ನು) ಪೂಜಿಸಿದನು. ವ॥ ಆ ರೀತಿ ಶಿವಗಣ ಸಮೂಹದ ಸೇವೆಯನ್ನು ಮಾಡಿ ಮುಗಿಸಿ ಅವರ ಅಪ್ಪಣೆಯನ್ನು ಸ್ವೀಕಾರಮಾಡಿ, 'ಆ ರಾಜೇಂದ್ರನ ದೇಹವನ್ನು (ಇಲ್ಲಿಗೆ) ತನ್ನಿರೆಂದು ಅಪ್ಪಣೆ ಮಾಡಲು ಅವನ ಮಿತ್ರ ಜನಸಮೂಹವು ಶೀಘ್ರವಾಗಿ ಹೋಗಿ, ನಿಂತು ನೋಡುತ್ತಿರಲಾಗಿ— ೯೨. ಸುರುಟಿಕೊಂಡಿರುವ ಮುಖ, ಬೆಳ್ಳ ಗಾದ ಸ್ವಲ್ಪತೆರೆದ ಕಣ್ಣುಗುಡ್ಡೆ, ಕುಗ್ಗಿ ಜೋಲು ಬಿದ್ದ ತಲೆ. ಕೆದರಿಹೋದ ಮೀಸೆ ಸಡಿಲುಗೊಂಡ ತುರುಬು, ಸೊಟ್ಟಾಗಿ ಬಿದ್ದಿರುವ ಕುತ್ತಿಗೆ, ಉಬ್ಬಿದ ಮೂಗು. ಹಸುರು

1 ಲ್ವ(ಜ)

ಟ್ಟೊಱಗಿದ ಕಂಧರಂ ನಿಮಿರ್ದ ಮೂಗು ಪಸುರ್ಪು ಪಗಿಲ್ತಪಲ್ಗಳಿ
ರ್ಪಱತ ರದಚ್ಛದಂ ತೆಱೆದ ಬಾಯ್ಮಿಗೆ ಸೂಸುವ ಲಾಳೆಯೊಳ್ತರಂ ೫೪

ವ॥ ವೃತ್ತಂ—

ಬಿಗಿದ ನರಂಗಳುಬ್ಬರಿಪ ಬಲ್ಬಸಿಱಿಂಗಿದ ಸುಯ್ಯೊತ್ತಡಂಕಿ ಡೊಂ
ಕೊಗೆದ ಕರಾಂಘ್ರಿಗಳ್ತೆಱೆದ ರಂಧ್ರವುಡಂಗಿದ ಕಾಯಕಾಂತಿ ಕೆ
ಯ್ಮಿಗೆ ಪೊಸನೆತ್ತರಾಱಿದ ತೊವಲ್ಪೊಲಸುಣ್ಬರೆ ಬಾತು ನಾತಮುಂ
ನೆಗಳ್ವ ತದಂಗಕಾರ್ದೆಱಗಿ ಝುಂಮ್ಮೆನುತೋಡುವ ಮಕ್ಷಿಕಾ[1]ಕಾಳಿಗಳ್ ೫೫

ಕಡು ಪೆರ್ಬಡಿಕೆಯ ನಾತಂ
ತೊಡರ್ದಿರೆ ಭೀಕರಮೆನಿಪ್ಪ ಪೆಣನಂ ಕಾಣು
ತ್ತೊಡನೊಡನೆ ಮುಚ್ಚಿ ಮೂಗಂ
ಪಿಡಿದುಗುಳುತ್ತೆಲ್ಲರಲ್ಲಿ ಪೇಸುತ್ತಾಗಳ್ ೫೬

ಮನವೊಲ್ಲದೆ ಸಲ್ಲದೆ ಮೆ
ಲ್ಲನೆ ಪೆಣನಂ ಕಟ್ಟಿ ಪೊತ್ತು ತಂದಾ ವೇಮಾ
ರ್ಯನ ಮಠದ ಬಹಿರ್ದೇಶದೊ
ಳನುವಿಂದಿಳಿಪುತ್ತೆ ಪೊಕ್ಕರಾ ಗಣಸಭೆಯಂ ೫೭

ಬಣ್ಣದಿಂದ ವ್ಯಾಪಿಸಿದ ಹಲ್ಲುಗಳು ರಸವಿಹೀನವಾದ ಹಲ್ಲಿನ ಕಾಂತಿ (ಒಣಗಿ ಕಾಂತಿಗೆಟ್ಟ ಹಲ್ಲು), ಬಿಟ್ಟ ಬಾಯಿ, ಹೆಚ್ಚಾಗಿ ಹೊರಸೂಸಿದ ಲೋಳೆಯ ಆಧಿಕ್ಯ (ಇವುಗಳಿಂದ ಆ ಹೆಣವು ಕೂಡಿತ್ತು) ವ॥ ವೃತ್ತ ೫೫–೫೭. ಬಿಗಿದು ಹೋದ ನರಗಳು ; ಉಬ್ಬ ಹೋದ ದಪ್ಪನೆಯ ಹೊಟ್ಟೆ ; ಇಂಗಿ ಹೋದ ಉಸಿರು ; ತೊಪಕಾಗಿ ಡೊಂಕುಗೊಂಡ ಕೈಬೆರಳು ; ತೆರೆದುಕೊಂಡ ನವದ್ವಾರಗಳು ; ಕಾಂತಿಯಡಗಿದ ದೇಹ ; ಸಂಪೂರ್ಣವಾಗಿ ಆರಿ ಹೋದ ಹೊಸನೆತ್ತರುಳ್ಳ ಚರ್ಮ; ಬಾತುಕೊಂಡು ಹೊಲಸು ಹೊರ ಹೊರಟು ದುರ್ಗಂಧವುಂಟಾದ ಆ ದೇಹಕ್ಕೆ ಝುಂಮ್ಮೆಂದು ಹಾರಾಡುತ್ತ ಮುಸುಕಿರುವ ನೊಣಗಳು, ಅತ್ಯಂತ ಅಸಹ್ಯವನ್ನುಂಟುಮಾಡುವ ನಾತವು ಕೂಡಿಕೊಂಡು, ಭಯಂಕರವಾದ ಹೆಣವನ್ನು ನೋಡುತ್ತ ಒಡನೆಯೇ ಅದನ್ನು ಮುಚ್ಚಿ ಮೂಗು ಹಿಡಿದುಕೊಂಡು, ಎಲ್ಲರೂ ಹೇಸಿ ಉಗುಳುತ್ತ ಮನಸ್ಸಿಲ್ಲದ ಮನಸ್ಸಿನಿಂದ ಸಾವಕಾಶವಾಗಿ ಆ ಹೆಣವನ್ನು ಕಟ್ಟಿದರು. (ಹೀಗೆ ಕಟ್ಟಿ) ಹೊತ್ತುಕೊಂಡು ಬಂದು, ಆ ವೇಮನಾರಾಧ್ಯರ ಮಠದ ಹೊರಭಾಗದಲ್ಲಿ ಅನುವು ಮಾಡಿಕೊಂಡು ಇಳಿಸಿ, ಆ ಶಿವಗಣಗಳ ಸಭೆಯನ್ನು ಹೊಕ್ಕರು

1 ಕ್ಷು (ಅ, ಗ, ಚ, ಜ, ಮ)

ವ॥ ಅಂತು ಪೊಕ್ಕು ಮೆಯ್ಯಿಕ್ಕಿ ಶವಮುಂ ತಂದೆವವಧರಿಸೆಂದವಂದಿರ್ಬಿನ್ನವಿಸೆ ವೇಮನಾರ್ಯರ್ಕೇಳ್ದು ಸಡಗರುಂದಾಳ್ದು ಚರಚರಣಸಲಿಲದಿನಾ ನರೇಂದ್ರನ ಕಳೇವರಮನಿನಿತುಂ ದುರ್ಗಂಧಮಿಲ್ಲದಂತೆ ನರೇಂದ್ರನನುಚರರಿಂ ತೊಳೆಯಿಸುತನಂತರವೊಳಗಣ್ಗೆ ತರಿಸಿ—

ಹರಭಕ್ತರ ಪಾವನತರ
ಕರದತ್ತವಿಭೂತಿಯುಂ ತದೀಯ ಪದಾಂಭೋ
ಜರಜೋವಿಮಿಶ್ರಿತಂಗೆ
ಯ್ದಿರದವರಪದಾಂಬುವಿಂದೆ ಕಲಸುತ್ತಾಗಳ್ ೫೮

ಘನತರಭಕ್ತಿನಿಷ್ಠೆ ಯಿಗೆ ತನ್ನೃಪನಂಗದೊಳೊಲ್ದು ಪೂಸಿ ಲೇ
ಪನಮನೊಡರ್ಚೆ ಭಾಳದೊಳುರಃಸ್ಥಳದೊಳ್ಭುಜದೊಳ್ತ್ರಿಪುಂಡ್ರಮುಂ
ಮನದೊಲವಿಂದೆ ಬಿತ್ತರಿಸಿ ಭಕ್ತಪದಾರ್ಪಿತಪುಷ್ಪಮಾಲೆಯುಂ
ತನುಗಮರ್ವಂತೆ ವೇಮವಿಭು ಸುತ್ತಿ ಗಣಾಭಿಮುಖಂ ಪ್ರಮೋದದಿಂ ೫೯

ಗಣಸಭೆಗೆ ನೆಗಳ್ದು ದಂಡ
ಪ್ರಣಾಮಮುಂ ಪ್ರಮಥರುದ್ರಗಣಭಕ್ತಮಹಾ
ಗಣದಂಘ್ರಿಕಮಳಮಂತಾ
ಳ್ದಣಿಯುರವಾತ್ಮೀಯ ಮಾನಸದೊಳೊಲವಿಂದಂ ೬೦

ವ॥ ಆ ರೀತಿ ಹೊಕ್ಕು ಅಡ್ಡಬಿದ್ದು ನಮಸ್ಕರಿಸಿ, 'ಹೆಣವನ್ನು ತಂದಿದ್ದೇನೆ ಚಿತ್ತೈಸಬೇಕು' ಎಂದು ಅವರೆಲ್ಲರೂ ಬಿನ್ನವಿಸಿಕೊಳ್ಳಲು, ಆ ವೇಮನಾರಾಧ್ಯರು ಕೇಳಿ, ಸಂಭ್ರಮಗೊಂಡವರಾಗಿ, ಜಂಗಮರ ಪಾದೋದಕದಿಂದ ಆ ನರೇಂದ್ರನ ಮೃತದೇಹವನ್ನು ಸ್ವಲ್ಪವೂ ದುರ್ಗಂಧವಿಲ್ಲದಂತೆ ರಾಜಭಟರುಗಳಿಂದಲೇ ತೊಳೆಸಿ, ತದನಂತರ (ಮಠದ) ಒಳಭಾಗಕ್ಕೆ ತರಿಸಿದರು. ೫೮-೬೦. ಶಿವನ ಭಕ್ತರಾದ ಜಂಗಮರ ಪವಿತ್ರತರವಾದ ಕೈಯಿಂದ ಕೊಡಲ್ಪಟ್ಟ ವಿಭೂತಿಯನ್ನು ಅವರ ಪಾದಕಮಲಗಳ ಧೂಳಿಯೊಡನೆ ಮಿಶ್ರಣಗೊಳಿಸಿ, ಅವರ ಪಾದೋದಕದಲ್ಲಿ ಕಲೆಸಿ, ವಿಶೇಷವಾದ ಘನತರ ಭಕ್ತಿಯ ನಿಷ್ಠೆಯಿಂದ ಆ ನೃಪನ ಶರೀರದಲ್ಲಿ ಪ್ರೀತಿಯಿಂದ ಬಳಿದು ಲೇಪನಗೊಳಿಸಿದರು. ಹಣೆಯಲ್ಲಿ, ಎದೆಯ ಮೇಲೆ, ಭುಜಗಳಿಗೆ, ಆ ವಿಭೂತಿಯನ್ನು ಮನಸ್ಸಂತೋಷದಿಂದ ಧರಿಸಿದನು. ಭಕ್ತರ ಪಾದಗಳ ಮೇಲೇರಿಸಿದ ಹೂವಿನ ಮಾಲೆಯನ್ನು ತನುವಿಗೆ ಭವ್ಯವಾಗುವ ಹಾಗೆ ಸುತ್ತಿ (ಅಥವಾ ಉಚಿತವಾಗುವಂತೆ ಸುತ್ತಿ), ವೇಮನಾರಾಧ್ಯನು ಶಿವಗಣದ ಕಡೆಗೆ ಮುಖ ತಿರುಗಿಸಿನಿಂತನು. ಸಂತೋಷದಿಂದ ಆ ಗಣಸಭೆಗೆ ದೀರ್ಘದಂಡ ಪ್ರಣಾಮಮಾಡಿದನು. ಪ್ರಮಥಗಣಗಳ, ರುದ್ರಗಣಗಳ, ಭಕ್ತಮಹಾಗಣಂಗಳ ಪಾದ

ಪರಮಾನಂದಪ್ರಜಪ್ತ ಪ್ರಣವಸಹಿತ ಪಂಚಾಕ್ಷರೋದ್ಯತ್ಕಳಾವಿ
ಸ್ಫುರಿತಾಂಗಂ ಭಕ್ತಹಸ್ತಾರ್ಪಿತ ಭಸಿತಲಸದ್ರೇಣುವಂ ಪಾಣಿಯಿಂ ಭೂ
ವರನಾಸ್ಯಸ್ಥಾನದೊಳ್ತಾಂ ತಳಿದಮಳ ಕೃಪಾಪಾಂಗದಿಂ ನೋಡಿ ಭದ್ರಾ
ಕರನೇಳೇಳೆಂಬುದುಂ ಸಂಭ್ರಮದೆ ಬಳಿಯೊಳೇನೆಂಬೆನಾಶ್ಚರ್ಯದುರ್ಬಂ ೬೧

ಹರಣಂ ತೀವಿದುದಾಗಳೆ
ಶರೀರದೊಳ್ಪುಳಿಲನೆ[1]ಳ್ದು ನರಪತಿಸುತನಾ
ಗುರು ವೇಮನಾರ್ಯರಂಘ್ರಿಗೆ
ಶರಣೆಂದತಿ ಭಕ್ತಿಯಿಂದೆ ಮೆಯ್ಯಿಕ್ಕಿರ್ದಂ ೬೨

ವ॥ ಅಂತು ಸಾಷ್ಟಾಂಗವೆಱಗಿ ಸನ್ನುತಿಗೆಯ್ದು —

ಕಾಲಾಂತಕಸ್ವರೂಪ ಕ
ರಾಲಾನನಕಾಲಭಯಮನರ್ದಿಸುತೆನ್ನಂ
ಪಾಲಿಪುದೆಂದಂ ತನ್ನರ
ಪಾಲಸುತಂ ಕಾಲಮೃತ್ಯುಭಯಚಕಿತಮನಂ ೬೩

ಕಮಲಗಳನ್ನು ತನ್ನ ಹೃದಯದಲ್ಲಿ ಪ್ರೀತಿಯಿಂದ ಹೊಂದಿದವನಾದನು. ೬೧-೬೨. ಪರಮಾನಂದ ಭರಿತನಾದ (ಆ ವೇಮನಾರಾಧ್ಯನು) ಜಪಿಸಿದ ಓಂಕಾರ ಸಹಿತವಾದ ಷಡಕ್ಷರ ಮಂತ್ರ (ಓಂ ನಮಃ ಶಿವಾಯ ಎಂಬ ಮಂತ್ರ) ದಿಂದುಂಟಾದ ಪ್ರಕಾಶಮಾನ ವಾದ ಅಂಗಳವುಳ್ಳವನಾದನು. ಭಕ್ತರುಗಳ ಹಸ್ತದಿಂದ ಕೊಡಲ್ಪಟ್ಟ ಭಸ್ಮದ ಪವಿತ್ರ ಧೂಳಿಯನ್ನು ಕೈಯಿಂದ ಆ ಭೂಪಾಲನ ಮುಖದ ಮೇಲೆ ತಳಿದನು. ಕೃಪೆಯಿಂದ ಕೂಡಿದ ಕಡೆಗಣ್ಣುಗಳ ನೋಟವನ್ನು ಬೀರಿದನು. 'ಮಂಗಳಕರನೇ (ಶರಣರಪಾದರೇಣು ಭಸ್ಮರೇಣುಗಳಿಂದ ಮಂಗಳಗೊಂಡ ದೇಹವುಳ್ಳವನೇ) ಏಳೇಳು ಎಂದು ಸಂಭ್ರಮದಿಂದ ಹೇಳಲಾಗಿ ಆ ಬಳಿಕ ಉಂಟಾದ ಆಶ್ಚರ್ಯದ ಅತಿಶಯವೇನೆಂದು ಹೇಳಲಿ ! ಆ ರಾಜ ಕುಮಾರನು ದೇಹದಲ್ಲಿ ಪ್ರಾಣವು ತುಂಬಿ ಒಮ್ಮಿಂದೊಮ್ಮೆಲೆ ಎದ್ದು, ವೇಮನಾರ್ಯರ ಪಾದಗಳಿಗೆ ಶರಣು ಎನ್ನುತ್ತ ಅತ್ಯಂತ ಭಕ್ತಿಯಿಂದ ಅಡ್ಡಬಿದ್ದನು– ವ॥ ಆ ರೀತಿ ಸಾಷ್ಟಾಂಗ ನಮಸ್ಕಾರಮಾಡಿ, ಸ್ತೋತ್ರಮಾಡುತ್ತ ೬೩. 'ಯಮನಿಗೆ ಯಮನೆನಿಸಿದ ಶಿವಸ್ವರೂಪನೇ, ಭಯಂಕರ ಮುಖದ ಯಮನಿಂದುಂಟಾದ (ಮರಣ) ಭಯವನ್ನು ಹೋಗಲಾಡಿಸುತ್ತ ನನ್ನನ್ನು ಪಾಲಿಸಬೇಕು' ಎಂದು ಯಮನ ಮೃತ್ಯುವಿನ ಭಯದಿಂದ

1 ನೇ(ಮು)

ವ॥ ಎಂದವನತ್ಯಂತದೈನ್ಯಂ ಬಿಗೆ ಬೇಡೆ ಕಾರುಣ್ಯದಿನಾ ವೇಮನಾರ್ಯರವಂಗಮವನಂಗನೆಗಮ ವನ ಬಾಂಧವರ್ಗಂ ಶಿವದೀಕ್ಷೆಯಿತ್ತು ಪುನೀತರಂ ಮಾಡೆ ಗಣಸಭೆಗಮವರೆಲ್ಲರವನತರಾಗಿ ರಾಗಿಸಿ—

ಧರಣೀಭಾಗಕ್ಕಿದೊಂದಚ್ಚರಿಯೆನೆ ಪಟುಹಾಲಾಹಲಜ್ವಾಲಿ ಕೀಲಾ
ಕರ ಕಾಲವ್ಯಾಲ ದಂತಾಹತಮೃತನೃಪಜಾತಾಂಗದೊಳ್ಪ್ರಾಣಮಂ ಸಾ
ದರವಿಂತ್ತುವೃತೆಮ್ಮೆಲ್ಲರ ಭವಹರಣಂಗೆಯ್ದನೀ ದೇವನೀ ಶಂ
ಕರರೂಪಂ ಮಾಣದೀ ಶಾಂಭವವಿಮಳಕಳಾಧುರ್ಯನೀ ವೇಮನಾರ್ಯಂ ೬೪

ಫಣಿವಿಷದಿನಳಿದ ಜನಪನ
ಪೆಣಕ್ಕೆ ಜೀವನಮನಿನಜನಂ ಸದೆದಿತ್ತಂ
ಪ್ರಣುತಗುಣನಿವನ ಶಕ್ತಿಯ
ನೆಣಿಪೊಡೆ ಪೊಡೆಯಲರ ಬೊಮ್ಮರುಂ ನೆಱೆವಪರೇ ೬೫

ವ॥ ಎಂದವರ್ನಚ್ಚಿ ನಲಿದು ಪೊಗಳುತ್ತುವಿರೆ ಶರಣಗಣಮಾ ಪ್ರಸ್ತಾವದೊಳ್—

ಪ್ರಮಥೇಂದ್ರಾಂಘ್ರಿಸದಾಕೃತಪ್ರಣಮನಂ ತಳ್ತಿರ್ದ ವಿದ್ಯಾಪರಿ
ಶ್ರಮನಂ ಶಾಂಭವಶರ್ಮಧರ್ಮರಮನಂ ನಿರ್ಧೂತ ನಿಶ್ಶೇಷ ದು
ರ್ದಮನಂ ದಂಡಿತದರ್ಪದೃಪ್ತಯಮನಂ ವಿಜ್ಞಾತ ಶೈವಾಗಮ
ಕ್ರಮನಂ ವೇಮನ ಪಂಡಿತಾರ್ಯತಮನಂ ಕೊಂಡಾಡಿ ಸಂಪ್ರೀತಿಯಿಂ ೬೬

ಗಾಬರಿಗೊಂಡ ಮನಸ್ಸಿನ ಆ ರಾಜಪುತ್ರನು ಎಂದನು. ವ॥ ಹೀಗೆಂದು ಆ ರಾಜ ಕುಮಾರನು ಅತ್ಯಂತ ದೀನಭಾವದಿಂದ ಕೂಡಿ ಬೇಡಿಕೊಳ್ಳಲು, ಕಾರುಣ್ಯದಿಂದ ಆ ವೇಮನಾರ್ಯನು ಅವನಿಗೂ ಅವನ ಹೆಂಡತಿಗೂ, ಅವನ ಬಂಧು ಬಾಂಧವರಿಗೂ ಶಿವ ದೀಕ್ಷೆಯನ್ನಿತ್ತು ಪುನೀತರನ್ನಾಗಿ ಮಾಡಲು ಅವರೆಲ್ಲರೂ ಶಿವಗಣಗಳ ಸಭೆಗೆ ಪ್ರೀತಿ ಯಿಂದ ನಮಸ್ಕಾರ ಮಾಡಿದವರಾಗಿ– ೬೪. ಈ ದೇವತಾ ಸ್ವರೂಪನೂ, ಶಂಕರನ ಸ್ವರೂಪನೂ, ಶಿವಸಂಬಂಧವಾದ ನಿರ್ಮಲ ವಿದ್ಯೆಯಲ್ಲಿ ಸಮರ್ಥನಾದವನೂ ಆದ ವೇಮನಾರ್ಯನು–ಭೂಮಂಡಲಕ್ಕೆ ಇದು ಒಂದು ಅಚ್ಚರ್ಯ ! ಎನ್ನುವ ರೀತಿಯಲ್ಲಿ, ಸಮರ್ಥವಾದ ಹಾಲಾಹಲಕ್ಕೆ ಸಮಾನವಾದ ವಿಷದ ಅಗ್ನಿಗೆ ಆಗರವೆನಿಸಿದ ಯಮ ಸ್ವರೂಪದ ಹಾವಿನ ಹಲ್ಲಿನಿಂದ ಕಡಿಯಲ್ಪಟ್ಟು ಮೃತನಾದ ರಾಜಕುಮಾರನ ದೇಹದಲ್ಲಿ ಪ್ರಾಣವನ್ನು ತಪ್ಪದೆ ಉಂಟುಮಾಡಿ, ಸಂರಕ್ಷಿಸುತ್ತ ನಮ್ಮೆಲ್ಲರ ಭವ ವನ್ನು ದೂರಮಾಡಿದನು (ಎಂದು ಎಲ್ಲರೂ ಹೊಗಳಿದರು.) ೬೫. ಹಾವಿನ ವಿಷ ದಿಂದ ಸತ್ತುಹೋದ ರಾಜನ ಹೆಣಕ್ಕೆ ಜೀವವನ್ನು ಯಮನನ್ನು ಕೊಂಡು ದಾನಮಾಡಿ ದನು. ಶ್ಲಾಘ್ಯವಾದ ಗುಣಗಳುಳ್ಳ ಇವನ ಶಕ್ತಿಯನ್ನೆಣಿಸಲು, ವಿಷ್ಣು ಬ್ರಹ್ಮರಾದರೂ ಸಮರ್ಥರಾಗುವರೇ ? (ಪೊಡಯೆಲರ–ನಾಭಿಯಲ್ಲಿ ಹೂವುಳ್ಳವನು-ವಿಷ್ಣು) ವ॥ ಎಂದು ಅವರೆಲ್ಲ ವಿಶ್ವಾಸದಿಂದ ನಲಿದಾಡಿ ಹೊಗಳುತ್ತಿರಲು, ಶರಣ ಸಮೂಹವು ಆ ಸಮಯದಲ್ಲಿ– ೬೬–೬೭. ಪ್ರಮಥ ಗಣಂಗಳ ಪಾದಗಳಿಗೆ ಸತತ ನಮಸ್ಕಾರ ಮಾಡ

ತೆಗೆದು ಬಿಗಿದಪ್ಪಿ ನಲಿನಲಿ
ದೊಗುವಿಗೆಯಿಂ ನೋಡಿ ಪಾಡಿ ಮುಂಡಾಡಿ ಮನಂ
ಬುಗುವಳ್ಕಱಿಂದೆ ಮನ್ನಿಸಿ
ನೆಗಳ್ದ ಕೃಪಾವಾರಿನಿಧಿಯೊಳೋಲಾಡಿಸುತುಂ ೬೭

ವಿತತಾತ್ಮೀಯ ಪ್ರಸಾದಾಮೃತಮನೊಸಗೆಯಿಂದೀಯೆ ಕೆಯ್ಕೊಂಡಿಳಾಸ
ನ್ನುತನೊಪ್ಪಿರ್ಪನ್ನವಾ ವಾರ್ತೆಯನಱಿದೊಲವಿಂ ಬಂದು ಕಂಡಂಘ್ರಿಪದ್ಮಾ
ನತಿಗೆಯ್ದಾನಂದದಿಂದಂ ಪೊಗಳ್ದವರ ಕೃಪಾಪಾತ್ರನಾಗುತ್ತೆ ವಿಶ್ವೋ -
ನ್ನತನಿರ್ದಂ ತದ್ಗಣಾಸ್ಥಾನದ ನಡುವೆ ಮೃಡಸ್ವಾಂತಪದ್ಮಾಧಿರೂಢಂ ೬೮

ವೇಮಾರ್ಯರ ಕಥೆಯನಿದಂ
ಪ್ರೇಮಂ ಕೆಯ್ಮಿಕ್ಕು ಪಠಿಯಿಪಾಲಿಪ ಸುಜನ
ರ್ಭೀಮಾಮಯಾಪಮೃತ್ಯುವ
ನೀ ಮಹಿಯೊಳ್ಪಱಿದು ಪೂರ್ಣಸುಖಮಂ ಪಡೆವರ್ ೬೯

ತಕ್ಕವನೂ, ಶಿವತತ್ತ್ವ ವಿದ್ಯೆಗಳ ಪರಿಶ್ರಮವನ್ನು ಪಡೆದಿರುವವನೂ, ಶಂಭು ಸಂಬಂಧ ವಾದ ವೀರಶೈವ ಧರ್ಮದ ಆಶ್ರಯದಲ್ಲಿ ಸಂತೋಷಗೊಳ್ಳುವವನೂ, ನಿಶ್ಶೇಷವಾಗಿ ಹೋಗಲಾಡಿಸಿದ ದುಷ್ಟ ಜನರನ್ನುಳ್ಳವನೂ, ದರ್ಪದಿಂದ ಗರ್ವವನ್ನು ಹೊಂದಿದ ಯಮನನ್ನು ದಂಡಿಸಿದವನೂ, ಶಿವನಿಂದ ಹೇಳಲಾದ ಶಿವಾಗಮಗಳನ್ನು ತಿಳಿದವನೂ, ಆದ ಪಂಡಿತ ಶ್ರೇಷ್ಠ ವೇಮನಾರಾಧ್ಯನನ್ನು ಅತಿ ಪ್ರೀತಿಯಿಂದ ಕೊಂಡಾಡುತ್ತ ಬರ ಸೆಳೆದು ಬಿಗಿಯಾಗಿ ಆಲಿಂಗಿಸಿಕೊಂಡು, ನಲಿನಲಿದು ತುಂಬಿ ಹೊರಸೂಸಿದ ಆನಂದದಿಂದ ನೋಡಿದರು. ಸ್ತೋತ್ರಮಾಡಿ, ಮೈಮೇಲೆ ಕೈಯಾಡಿಸುತ್ತ ಪರಿಪೂರ್ಣ ಪ್ರೀತಿಯಿಂದ ತುಂಬಿ ಮನ್ನಣೆ ಮಾಡಿ, ಪ್ರಖ್ಯಾತವಾದ ತಮ್ಮ ಕೃಪೆಯೆಂಬ ಸಮುದ್ರದಲ್ಲಿ ತೇಲಾಡಿ ಸಿದರು. ೬೮. ಅಧಿಕವಾದ ತಮ್ಮ ಪ್ರಸಾದಾಮೃತವನ್ನು ಸಂಭ್ರಮದಿಂದ ಕೊಡಲು ಅದನ್ನು ಸ್ವೀಕಾರಮಾಡಿ ಆ ಭೂಜನರಿಂದ ಸ್ತೋತ್ರ ಮಾಡಿಸಿಕೊಳ್ಳುವ ವೇಮನಾರಾ ಧ್ಯನು ಶೋಭಿಸುತ್ತಿರುವಷ್ಟರಲ್ಲಿ ಆ ಸುದ್ದಿಯನ್ನು ಕೇಳಿ ಸಂತೋಷದಿಂದ ವಿಶ್ವದಲ್ಲೆಲ್ಲ ಉನ್ನತನೆಂದೆನಿಸುವವನೂ, ಪರಮೇಶ್ವರನ ಹೃದಯ ಕಮಲದಲ್ಲಿ ವಾಸಿಸುವವನೂ ಆದ ಬಸವೇಶ್ವರನು ಬಂದು ಅವನ ಪಾದಕಮಲಗಳಲ್ಲಿ ನಮಸ್ಕಾರಮಾಡಿ, ಆನಂದ ದಿಂದ ಹೊಗಳಿ ಅವರ ಕೃಪೆಗೆ ಪಾತ್ರನಾಗುತ್ತ ಇರುತ್ತಿದ್ದನು. ೬೯. ವೇಮನಾರ್ಯರ ಈ ಕಥೆಯನ್ನು ಅತಿಶಯ ಪ್ರೇಮದಿಂದ ಪಠಣ ಮಾಡುವವನೂ, ಆಲಿಸುವವನೂ, ಸಜ್ಜನರುಗಳು ಭಯಂಕರವಾದ ರೋಗ ಮತ್ತು ಅಪಮೃತ್ಯುಗಳನ್ನು ಈ ಭೂಮಿಯಲ್ಲಿ

ಇಂದು ಕುಂದ ಹಿಮ ಹೀರ ಸುಧಾಭಯಾಶೋಯುತೇ
ಸ್ಕಂದಮಾತೆ ಹರಿಧಾತೃಸುರೇಂದ್ರಪರಿಸ್ತುತೇ
ಮಂದರಾದ್ರಿಮಣಿಮಂದಿರಮಧ್ಯವಿರಾಜಿತೇ
ಚಂದವೊಂದೆ ಪೊರೆಯೆನ್ನನಪರ್ಣೆ ಕೃಪಾನ್ವಿತೇ ೭೦

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ವೇಮನಾರಾಧ್ಯಕಥಾವಿವರಣಂ

ಏಕತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೧ಕ್ಕೆ ಪದಗಣನೆ ೨೪೫೦ಕ್ಕೆ ಮಂಗಳಮಹಾ ಶ್ರೀ॥

ನಾಶಮಾಡಿ ಪೂರ್ಣ ಸುಖವನ್ನು ಪಡೆಯುವರು. ೭೦. ಚಂದ್ರ, ಮೊಲ್ಲೆಯ ಹೂವು, ಪಚ್ಚ ಕರ್ಪೂರ, ವಜ್ರ, ಅಮೃತ ಇವುಗಳ ಕಾಂತಿಯುಳ್ಳ ಯಶಸ್ಸಿನಿಂದ ಕೂಡಿದವಳೂ, ಷಣ್ಮುಖನ ತಾಯಿಯೂ, ವಿಷ್ಣು ಬ್ರಹ್ಮ ದೇವೇಂದ್ರಾದಿಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವಳೂ, ಮಂದರ ಪರ್ವತದ ರತ್ನನಿರ್ಮಿತ ಮಂದಿರದ ಮಧ್ಯದಲ್ಲಿ ವಾಸಿಸುವವಳೂ, ಆದ ಹೇ ಕೃಪೆಯಿಂದ ಕೂಡಿದ ಪಾರ್ವತಿಯೇ ಚಂದವಾಗಿ ನನ್ನನ್ನು ರಕ್ಷಿಸು.

ಮೂವತ್ತೊಂದನೆಯ ಆಶ್ವಾಸವು ಸಮಾಪ್ತವಾಯಿತು

# ದ್ವಾತ್ರಿಂಶಾಶ್ವಾಸಂ

## [ಚಿಕ್ಕ ಮಾದಣ್ಣನ ಕಥೆ]

ಶ್ರೀಶಿಖರಿಜಾಕುಚಾಂಬುಜ
ಕೋಶಾರ್ಪಿತಪಾಣಿಪಲ್ಲವಂ ಶಿಖಿರವಿರಾ
ತ್ರೀಶನಯನತ್ರಯಂ ಜಗ
ದೀಶಂ ಪೊರೆಗೆಮ್ಮನಾವಗಂ ಶಿವಲಿಂಗಂ ೧

ಕ್ಷೋಣಿಯೊಳೆ ಕಂಗೊಳಿಪ ಕ
ಲ್ಯಾಣ ಪುರಾಂತರದೊಳಲ್ಲಿ ಮತ್ತಂ ಲಿಂಗ
ಪ್ರಾಣಕಳಾನಿಧಿಯೊಪ್ಪುವ
ನೇಣಾಂಕಧರಸ್ವರೂಪನನುಪಮ ಮಹಿಮಂ ೨

ಧರೆಯಲ್ಲಿ ಶತಾಯುರ್ವೈ
ಪುರುಷ ಶ್ರುತಿವಾಕ್ಯಮಂ ವಿಭಂಗಿಸಿ ತ[1]ನ್ನಾ
ದರಸಂ ಸಪ್ತಶತಂ ವ
ತ್ಸರಮುಮಿರ್ದಿರೆ ತನಗೆ ಬಾಳ್ದನತಿ ವೈಭವದಿಂ ೩

ಮುಳಿದುದ್ಯನ್ಮೃತ್ಯುದಂಷ್ಟ್ರಾಂಕುರಮುನಧಟನಿಂ ಕಿಳ್ತು ಕಾಲೋಗ್ರದಂತು
ಗಳನಾದಂ ಪೊಯ್ದುದುರ್ಚುತ್ತವಧಿವಿಧಿಗಳಂ ಮೆಟ್ಟಿ ಪಂಕೇಜಗರ್ಭೋ

### ಚಿಕ್ಕ ಮಾದಣ್ಣನ ಕಥೆ

೧. ಮಂಗಳಕರಳಾದ ಪಾರ್ವತೀದೇವಿಯ ಮೊಲೆಗಳೆಂಬ ಕಮಲದ ಮೊಗ್ಗುಗಳ ಮೇಲೆ ಇಡಲ್ಪಟ್ಟ ಚಿಗುರಿನಂತಹ ಕೈಗಳುಳ್ಳವನೂ, ಅಗ್ನಿ, ಸೂರ್ಯ, ಚಂದ್ರರೆಂಬ ಮೂರು ಕಣ್ಣುಳ್ಳವನೂ, ಜಗತ್ತಿನ ಒಡೆಯನೂ ಆದ ಶಿವಲಿಂಗನು ಯಾವಾಗಲೂ ನಮ್ಮನ್ನು ರಕ್ಷಿಸಲಿ. ೨–೩. ಭೂಮಂಡಲದಲ್ಲಿ ಶೋಭಿಸುವ ಕಲ್ಯಾಣ ಪಟ್ಟಣ ಮಧ್ಯದಲ್ಲಿ ಮತ್ತೊಬ್ಬ ಅಂಗ ಲಿಂಗಗಳ ಸಾಮರಸ್ಯಜ್ಞಾನವೆಂಬ ವಿದ್ಯೆಯ ನಿಧಿಯೂ, ಶ್ರೇಷ್ಠನಾದ ಪರಮೇಶ್ವರ ಸ್ವರೂಪನೂ, ಅನುಪಮವಾದ ಮಹಿಮೆಗೆ ಆಧಾರನಾದವನೂ ಆದ ಸಕಲೇಶ ಮಾದರಸನೆಂಬುವವನು, 'ಭೂಮಿಯಲ್ಲಿ ಮನುಷ್ಯನು ನೂರು ವರ್ಷಗಳವರೆಗೆ ಜೀವಿಸುವನು' ಎಂದೆನ್ನುವ ವೇದವಾಕ್ಯವನ್ನೂ ಭಂಗಗೊಳಿಸಿ (ಅಲ್ಲವೆನಿಸಿ), ತನಗೆ ಏಳುನೂರುವರ್ಷಗಳ ಆಯುಷ್ಯವನ್ನುಳ್ಳವನಾಗಿ ಅತ್ಯಂತ ವೈಭವದಿಂದ ಜೀವಿಸಿದ್ದನು. ೪. ಕೋಪದಿಂದ ಅತ್ಯಧಿಕವೆನಿಸುವ ಮೃತ್ಯುವಿನ

---

1 ಸ(ಚ)

ಜ್ವಳಗರ್ವಧ್ವಂಸನಂಗೆಯ್ದುಳಿಯೊಳೊದರೆ ಮಾರಾರಿ ಮಾಯಾರಿಯೆಂಬ
ಗರ್ಗಳ ಚಂಚತ್ಕಾಹಳೀ ಸಂಕುಳಮೆಸೆದನವಂ ಮಾದಿರಾಜಾಭಿಧೇಯಂ ೪

ಸಾಂಗವೆನೆ ರಚಿಸುತುಂ ಶಿವ
ಲಿಂಗದ ಜಂಗಮದ ಪಾದಪೂಜೆಯನಮಳೋ
ತ್ತುಂಗತರ ಭಕ್ತಿಯಿಂದೆ ಬೆ
ಡಂಗಮರೆ ಹರಂಗೆ ಬೀಣೆಯಂ ಕೇಳಿಸುತುಂ ೫

ಇರುಳೆಲ್ಲಂ ನಾದಾಮೃತ
ಶರಧಿಯೊಳೋಲಾಡಿಸುತ್ತೆ ಶಿವನಂ ಶರಣೋ
ತ್ಕರಸಂಗದೆ ಚಿರಸುಖಿಯಾ
ಗಿರುತಿರ್ದಂ ಸುಜನವನಜವನದಿನನಾಥಂ ೬

ಆತನ ಶಿಷ್ಯನೊರ್ವನಕಳಂಕಗುಣಾಂಕನನೂನಭಕ್ತಿವಿ
ಖ್ಯಾತವಿಲಾಸನಾತ್ಮಸತಿಯುಂ ಸುತನುಂ ಸಹಿತಂ ಗುರೂತ್ತಮ
ಪ್ರೀತಿಯಿನಂಘ್ರಿಪೂಜೆಗಳನೊಲ್ದು ನಿಮಿರ್ಚುತೆ ನಿಚ್ಚಮುಂ ಸುವೃ
ತ್ತಾತುಳ ಚಿಕ್ಕಮಾದನೆನಿಸಿರ್ದ ವಿದಗ್ಧವರೇಣ್ಯನೊಪ್ಪಿದಂ ೭

ಕೋರೆ ದಾಡೆಯ ಮೂತಿಯನ್ನು ಪರಾಕ್ರಮದಿಂದ ಕಿತ್ತುಹಾಕಿದವನೂ, ಯಮನ ಭಯಂಕರವಾದ ಹಲ್ಲುಗಳನ್ನು ಚೆನ್ನಾಗಿ ಹೊಡೆದು ಕಿತ್ತುಹಾಕಿ, ಬದುಕುವ ಕಾಲ ನಿಯಮವನ್ನೇ ಮೆಟ್ಟಿಹಾಕಿ, ವಿಷ್ಣುವಿನ ಉಜ್ವಲವಾದ ಗರ್ವವನ್ನು ನಾಶಗೊಳಿಸಿ, 'ಮನ್ಮಥನನ್ನು ನಾಶಗೊಳಿಸಿದವನು, ಮಾಯೆಯನ್ನು ದೂರಗೊಳಿಸಿದವನೆಂದು' ಹೊಳೆಯುವ ಕಹಳೆಗಳ ಸಮೂಹವು ಕೂಗುತ್ತಿರಲು, ಆ ಮಾದಿರಾಜನೆಂಬ ಹೆಸರಿನವನು ಶೋಭಿಸುತ್ತಿದ್ದನು. ೫. ಅವನು ಯಥಾಸಾಂಗವಾಗಿ ಶಿವಲಿಂಗದ ಜಂಗಮದ ಪಾದ ಪೂಜೆಯನ್ನು ಪವಿತ್ರವಾದ ಅತಿ ಎತ್ತರವುಟ್ಟದ ಭಕ್ತಿಭಾವದಿಂದ ಆಚರಿಸುತ್ತಿದ್ದನು. ಬೆಡಗಿನಿಂದ ಕೂಡಿದ ವೀಣಾವಾದನವನ್ನು ಶಿವನಿಗೆ ಕೇಳಿಸುತ್ತ ಇದ್ದನು. ೬. ಸಜ್ಜನರೆಂಬ ಕಮಲಗಳ ವನಕ್ಕೆ ಸೂರ್ಯನಂತಿರುವ ಆ ಮಾದಿರಾಜನು ರಾತ್ರಿಯೆಲ್ಲವೂ (ತನ್ನ ವೀಣೆಯ) ನಾದವೆಂಬ ಅಮೃತ ಸಮುದ್ರದಲ್ಲಿ ಶಿವನನ್ನು ನಲಿದಾಡುವಂತೆ ಮಾಡುತ್ತ, ಶ್ರೇಷ್ಠ ಶರಣರ ಸಮೂಹದ ಸಹವಾಸದೊಡನೆ ಶಾಶ್ವತ ಸುಖಿಯೆನಿಸಿ ಇರುತ್ತಿದ್ದನು. ೭. (ಇಂಥ) ಆ ಸಕಲೇಶ ಮಾದಿರಾಜನಿಗೆ ಒಬ್ಬ ಚಿಕ್ಕ ಮಾದಣ್ಣನೆಂಬ ಹೆಸರಿನ ಶಿಷ್ಯನು ಇದ್ದನು. ಅವನು ಕಲಂಕರಹಿತವಾದ ಸದ್ಗುಣಗಳೇ ಲಕ್ಷಣವಾಗಿ ಉಳ್ಳವನೆನಿಸಿ, ತನ್ನ ಹೆಂಡತಿ ಮತ್ತು ಮಗ ಸಹಿತವಾಗಿ, ಗುರುಶ್ರೇಷ್ಠನಾದ ಮಾದರಸನ ಪಾದ ಪೂಜೆಯನ್ನು ಒಲಿದು ಪ್ರೀತಿಯಿಂದ ನಿತ್ಯವೂ ಮಾಡುತ್ತ, ಅಸಮಾನವಾದ ಒಳ್ಳೆಯ ಚರಿತೆಯುಳ್ಳವನೂ, ಪಂಡಿತ ಶ್ರೇಷ್ಠನೂ ಎನಿಸಿ (ಆ

ಗುರುಮಾದಿರಾಜಪಾದಾಂ
ಬುರುಹಮೆ ಗತಿಯೆಂದು ಸೇವಿಸುತೆ ಸಲೆ ನಿಜಮಂ
ದಿರ ಕೃತ್ಯಕೇನುಮಂ ಭಾ
ಸುರಮತಿ ಚಿಂತಿಸದೆ ಸಂತಮಿರ್ದಂ ಭಕ್ತಂ ೮

ವ॥ ಅಂತು ಪಲಕೆಲವತ್ಸರಂ ಬಾಳುತ್ತುಮಿರ್ದೊಂದುದಿನದಿರುಳೊಳಿರ್ದಿರ್ದಂತಿರಸು ಗಳೆವಿನಂ ತದ್ರಮಣಿ ಕಂಡು ಚರಪಾದೋದಕದಿಂ ತೊಳೆದೊರಸಿ ಸರ್ವಾಂಗದೊಳ್ಭಸಿತೋದ್ಧೂಳನಂ ಗೆಯ್ದು ರುದ್ರಾಕ್ಷೆಗಳಿನಲಂಕರಿಸುತ್ತುಮಾ ಕಳೇವರಮನೊಂದು ಕಂಭದೊಳ್ನಿರ್ವಿಸಿ ನೆರೆಪೊರೆಯವರಾರುಮಱಿಯದಂತದಂ ನಿಕ್ಷೇಪಿಸಲೊಂದು ಗೊಪೆಯ ನವಳಗುಳ್ವನಿತಱೊಳೆ ಖನನನಿರ್ಭರಧ್ವನಿಗೆ ಪಟ್ಟಿರ್ದ ತರುಣಂ ನಿದ್ರೆತಿಳಿದೆಳ್ದಗುಳತ್ತುಮಿರ್ಪ ಮಾತೆಯಿರವಂ ಕಂಡು ಕೌತುಕಂಬಟ್ಟು—

ಎಲೆ ಜನನಿ ಲಿಂಗಪೂಜಾ
ರ್ಥಲಸದ್ವೇದಿಯನದೇಕೆ ನೀನಗುಳ್ದಪೆ ಗ
ಲ್ಗಲನಯ್ಯನ ಪೂಜೆಗೆ ಪೊಸ
ಸಲಿಲಂಗೊಳಲೆಂದೊಱಂತೆಯುಂ ನೆಗಳ್ದಪೆಯೋ ೯

ಅಯ್ಯನೇಕೆ ಚರಬೃಂದದೋಲಗ
ಕ್ಕೊಯ್ಯನೆಂದಿನವೊಲಿಂದು ಪೋಗದೀ

ಕಲ್ಯಾಣದಲ್ಲಿ) ಶೋಭಿಸುತ್ತಿದ್ದನು. ೮. ಆ ಭಕ್ತನಾದ ಚಿಕ್ಕ ಮಾದಣ್ಣನು ಗುರುವಾದ ಮಾದಿರಾಜನ ಪಾದಕಮಲವೇ ಗತಿಯೆಂದು ನಂಬಿ, ಸೇವೆ ಮಾಡುತ್ತ, ತನ್ನ ಮನೆತನದ ಕೆಲಸಗಳೇನೆಂಬುದನ್ನೂ ಮನಸ್ಸಿಗೆ ತಂದುಕೊಳ್ಳದೆ, ಪ್ರಕಾಶಮಾನವಾದ ಬುದ್ಧಿಯುಳ್ಳ ಅವನು ಸಂತೋಷದಿಂದ ಇದ್ದನು. ವ॥ ಈರೀತಿ ಅನೇಕ ವರ್ಷಗಳ ವರೆಗೆ ಬಾಳುತ್ತಿದ್ದು ಒಂದು ದಿವಸ ರಾತ್ರಿ ಇದ್ದಕ್ಕಿದ್ದಹಾಗೆ ಪ್ರಾಣವು ಹೋಗಲಾಗಿ, ಆತನ ಹೆಂಡತಿಯು ಕಂಡು, (ಆ ಹೆಣವನ್ನು) ಜಂಗಮ ಪಾದೋದಕದಿಂದ ತೊಳೆದು ಒರೆಸಿ, ಸಮಸ್ತ ದೇಹಕ್ಕೂ ಭಸ್ಮವನ್ನು ಉದ್ಧೂಳನಗೊಳಿಸಿ (ಭಸ್ಮದಿಂದ ಆಚ್ಛಾದನಗೊಳಿಸಿ), ರುದ್ರಾಕ್ಷ ಮಾಲೆಗಳಿಂದ ಅಲಂಕಾರಗೊಳಿಸಿ, ಆ ಹೆಣವನ್ನು ಒಂದು ಕಂಬದ ಆಸರೆಗೆ ಕುಳ್ಳಿರಿಸಿ, ನೆರೆ ಹೊರೆಯುವರಾರಿಗೂ ಗೊತ್ತಾಗದ ಹಾಗೆ ಅದನ್ನು ಹುಗಿಯಬೇಕೆಂದು, ಒಂದು ಕುಣಿಯನ್ನು ತೆಗೆಯುವುದಕ್ಕೋಸುಗ ತೊಡಗಿದಳು. (ಆಗ) ಭೂಮಿಯ ಅಗೆತದ ವಿಶೇಷವಾದ ಸಪ್ಪಳಕ್ಕೆ ಮಲಗಿಕೊಂಡಿದ್ದ ಬಾಲಕನು (ಮಗನು) ನಿದ್ರೆಯಿಂದ ಎಚ್ಚರಗೊಂಡು ನೆಲವನ್ನಗೆಯುತ್ತಿದ್ದ ತಾಯಿಯ ರೀತಿಯನ್ನು ಕಂಡು, ಆಶ್ಚರ್ಯಪಟ್ಟವನಾಗಿ—೯. 'ಎಲೈ ತಾಯಿಯೇ, ಲಿಂಗಪೂಜಾರ್ಥವಾಗಿರುವ ಈ ಶ್ರೇಷ್ಠ ಜಗುಲಿಯನ್ನೇಕೆ ನೀನು ತೋಡುತ್ತಿದ್ದೀಯೆ ? ಅಪ್ಪನ ಲಿಂಗಪೂಜೆಗೆ ಬೇಗನೆ ಹೊಸ ನೀರನ್ನು ಪಡೆಯಬೇಕೆಂದು ಒಂದು ಒರತೆಯನ್ನು ತೆಗೆಯುತ್ತಿರುವೆಯೇನು ?' ೧೦. 'ಅಯ್ಯನು ಜಂಗಮ ಸಮೂಹದ ಸಭೆಗೆ ಪ್ರತಿದಿನದಂತೆ ಈ ದಿವಸ ಬೇಗನೆ

ರಮ್ಯಮಾದ ಮನೆಗಂಬದೊತ್ತಿನೊಳ್
ಸುಯ್ಯುಡಂಗಿದವನಂತಿರಿರ್ದಪಂ ೧೦

ಎಂದುಂ ಮುಳಿಯಂ ನಿನ್ನೊಡ
ನಿಂದು ಕರಂ ಮುಳಿದು ಸುಮ್ಮನಿರ್ದಪನಕ್ಕುಂ
ತಂದೆ ನಿಜದಿಂದೆ ಮುಳಿಸಿಂ
ಗೊಂದಿದ ಕಾರಣಮದಾವುದಱಿಪೆನಗೀಗಳ್ ೧೧

ಸಾಂಗಸಿಜಶೀಲಮಂ ಸಿ
ರ್ಕಂಗೊಳಿಸಿದೆಯೋ ಗೃಹಕ್ಕೆ ಪದೆದೇಳ್ತರೆ ನೀಂ
ಜಂಗಮತತಿ ಸಮಯೋಚಿತ
ದಿಂಗಿತಪೂಜೆಯನೊಡರ್ಚದೇಂ ಪೋದೆಯೊ ಪೇಳ್ ೧೨

ಸಾರಣೆಯಲ್ಲಿ ಜಂತುತತಿ ನೊಂದುದೊ ಸೋದಿಸಿದಂಬುವಿಂದೆ ಸಂ
ಪೂರಿತಮಾದುದಿಲ್ಲವೊ ಕನತ್ಕಲಶಂ ಕಡೆಗೆಯ್ದ ಸೂತ್ರಮೋ
ನೋರೆಯನಾಳ್ದುದೋ ಪಳೆಯಗಂಧಮನಿಟ್ಟೆಯೊ ಮಾಸಿ ಭಿನ್ನಮಾ
ದೋರಣಮಲ್ಲದಕ್ಷತೆಯನಿತ್ತೆಯೊ ಪಜ್ಜಳಿಪಂತೆ ನಲ್ಮೆಯಿಂ ೧೩

ಬೆಳಗದೆ ಶಿವೋಪಕರಣಾ
ವಳಿಯಂ ಸಾರ್ಚಿದೆಯೊ ತೊಟ್ಟುಗಳೆದೋವದೆ ಪೂ

ಹೋಗದೆ, ಈ ಮನೋಹರವಾದ ಮನೆಯ ಕಂಬಕ್ಕೆ ಏಕೆ ಉಸುರು ಹಿಂಗಿದವರ ಹಾಗೆ ಕುಳಿತುಬಿಟ್ಟಿದ್ದಾನೆ ?' ೧೧. 'ಎಂದೂ ಕೋಪಗೊಳ್ಳದ (ತಂದೆಯು) ಈ ದಿವಸ ನಿನ್ನೊಡನೆ ಅಧಿಕವಾಗಿ ಕೋಪಗೊಂಡು ಸುಮ್ಮನಿದ್ದಾನೆಂದು ಕಾಣುತ್ತದೆ. ತಂದೆಯು ನಿಜವಾಗಿ ಕೋಪದಿಂದ ಕೂಡಿದ ಕಾರಣವೇನೆಂಬುದನ್ನು ಈಗ ನನಗೆ ಹೇಳು'. ೧೨. 'ಯಥಾ ಸಾಂಗವಾದ ಅವನ (ಆ ತಂದೆಯ) ಆಚಾರವನ್ನು ಏನಾದರೂ ತೊಡಕುಗೊಳಿಸಿದೆಯೋ (ತೊಂದರೆ ಗೊಳಿಸಿದೆಯೋ), ಜಂಗಮ ಸಮೂಹವು ಪ್ರೀತಿಯಿಂದ ಮನೆಗೆ ಬಂದರೆ, ನೀನು ಅವರ ಕಾಲಕ್ಕೆ ಉಚಿತವೆನಿಸುವ ಲಿಂಗಪೂಜಾ ಕಾರ್ಯವನ್ನು ಮಾಡಿಸದೆ ಹೋದೆಯೋ' ೧೩–೧೪. 'ಸಾರಣೆ ಮಾಡುವಾಗ ಕ್ರಿಮಿಗಳ ಸಮೂಹವೇನಾದರೂ ನೊಂದಿತೋ ? ಅಭಿಷೇಕಾರ್ಥವಾದ ನೀರಿನ ಕಲಶವು ಶೋಧಿಸಿ ಶುದ್ಧಪಡಿಸಿದ ನೀರಿನಿಂದ ತುಂಬಿದುದಾಗಿರಲಿಲ್ಲವೋ ? ಮೇಲೆ ಕಟ್ಟಿದ ಅದರ ದಾರವೇನಾದರೂ ಓರೆಯಾಗಿತ್ತೋ ? ಹಳೆಯದಾದ ಗಂಧವನ್ನು (ಪೂಜೆಗೆ) ಇಟ್ಟಿದ್ದೆಯೋ ? ಮಾಸಿಹೋದವೂ, ಗೊನೆ ಮುರಿದಂಥವೂ ಮನೋಹರವಲ್ಲ ದಂಥವೂ ಆದ ಅಕ್ಷತೆಗಳನ್ನು ಕೊಟ್ಟಿದ್ದೆಯೋ ? ಪ್ರಜ್ವಲಿಸುವಹಾಗೆ ಪ್ರೀತಿಯಿಂದ ಬೆಳಗದೆ ಇರುವ ಶಿವಪೂಜಾಸಾಮಗ್ರಿಗಳ ಸಮೂಹವನ್ನು ಜೋಡಿಸಿದ್ದೆಯೋ ?

ಗಳನರ್ಪಿಸಿದೆಯೊ ಪೊಸಗು
ಗ್ಗುಳರಸದಿಂದಗ್ನಿ ನಾಂದಿ ಪೊಗೆ ತಗ್ಗಿದುದೋ ೧೪

ಸಾರಪ್ರಭೆ ಮಸುಳ್ದುದೊ ಪೇ
ಳ್ನೀರಾಜನವೋಜೆದಪ್ಪಿ ಮನಮಿತ್ತೆಯೋ ಪೇ
ಳೋರಂತೆ ಗಡಣಿಸಿರ್ದುಪ
ಹಾರಕ್ಕಿದಿರಿಟ್ಟ ಸೊಡರ ಕಳೆ ಕುಂದಿದುದೋ ೧೫

ಲಿಂಗಾರ್ಪಿತ ಶೇಷದೊಳಭ
ವಂಗರ್ಪಿತವಾಗದುದನೆ ಬೆರಸಿದೆಯೊ ಮಹಾ
ಲಿಂಗ ತ್ರಿವಿಧೋದಕಮಂ
ಪಿಂಗದೆ ನೀನೊಂದುಗೆಯ್ದೆಯೋ ಮಱಪಿಂದಂ ೧೬

ಅಸಮಾಕ್ಷನಡಿಗಳಂ ಜಾ
ನಿಸುವಾಗಳ್ಮಾತನಾಡಿಸಿದೆಯೊ ನಿತಾಂತಂ
ಬೆಸಕೆಯ್ವೊಡಲಸಿದೆಯೊ ನೀ
ನುಸುರಲ್ಲದೊಡಯ್ಯನಿಂತು ಮುನಿವನೆ ಜನನೀ ೧೭

ತಾಯೆ ಬಿಡು ನೆಲನನಗುಳ್ವುದ
ನೋಯಾರದೆ ನೀನುಮಾನುಮಿಪನಂಘ್ರಿಲಸ
ತ್ತೋಯರುಹಕೆಱಗೆ ತಿಳಿದಪ
ನೀಯುವಸರದಲ್ಲಿ ನೋಳ್ಪೊಡಿಂತಿದೆ ಕಜ್ಜಂ ೧೮

ಬಾರೆಂದು ಕರೆವುತುಂ ಕರ
ನೀರಜದಿಂ ಜನನಿಯುಟ್ಟ ಚೇಲಾಂಚಲಮಂ

ತೊಟ್ಟು ಕಳಚಿ ಹಳೆಯುವಾದ ಹೂವುಗಳನ್ನು ಪ್ರೀತಿದಪ್ಪಿ ಅರ್ಪಿಸಿದ್ದೆಯೋ ? ಹೊಸದಾದ ಗುಗ್ಗುಳ ಹಾಕುವುದರಿಂದ ಬೆಂಕಿಯೆಲ್ಲ ಆರಿ ಆ ಗುಗ್ಗುಳದ ಹೊಗೆ ತಗ್ಗಿ ಹೋಯಿತೋ ? ೧೫–೧೬–೧೭. 'ಕ್ರಮತಪ್ಪಿ ಇಟ್ಟ ನೀರಾಜನ (ಮಂಗಳಾರತಿ)ದ ಶ್ರೇಷ್ಠವಾದ ಕಾಂತಿಯು ಮಂಕಾಗಿತ್ತೋ ? ಕ್ರಮವಾಗಿ ಜೋಡಿಸಿಟ್ಟ ಉಪಾಹಾರಕ್ಕೆ ಮನಸ್ಸು ಮಾಡಿದೆಯೋ ? (ಮುಂಭಾಗದಲ್ಲಿ) ಮುಡಿಸಿಟ್ಟ ದೀಪಗಳು ಕಾಂತಿಗುಂದಿದ್ದವೋ ? ಶಿವಲಿಂಗಕ್ಕೆ ಅರ್ಪಿಸಲ್ಪಟ್ಟ ಪ್ರಸಾದದೊಡನೆ ಪರಮಾತ್ಮನಿಗೆ ಅರ್ಪಿಸಲಿಕ್ಕೆ ಯೋಗ್ಯವಲ್ಲದುದನ್ನೇನಾದರೂ ಬೆರೆಸಿದ್ದೆಯೋ ? ಮಹಾಲಿಂಗದ ತ್ರಿವಿಧದುದಕವಾದ ಗುರು ಲಿಂಗ ಜಂಗಮ ಪಾದೋದಕವನ್ನು (ಬೇರೆಬೇರೆಯಾಗಿಡದೆ) ನೀನು ಮರೆತು ಒಂದುಗೂಡಿಸಿಬಿಟ್ಟೆಯೋ ? ಪರಮಾತ್ಮನ ಪಾದಧ್ಯಾನದ ಸಮಯದಲ್ಲಿ ಮಾತನಾಡಿಸಿ ಬಿಟ್ಟೆಯೋ ? (ಏನನ್ನಾದರೂ) ಅಪ್ಪಣೆ ಮಾಡಿದಾಗ ವಿಶೇಷ ಆಲಸ್ಯ ತೋರಿಸಿದೆಯೋ? ಅಲ್ಲದಿದ್ದರೆ ತಂದೆಯು ಹೀಗೆ ಕೋಪಗೊಳ್ಳುವನೇ ಜನನೀ, ನೀನು ಹೇಳು'. ೧೮–೨೦. 'ಅಮ್ಮಾ ಈ ನೆಲವನ್ನಗೆಯುವುದನ್ನು ಬಿಡು ; ನಾನೂ ನೀನೂ ಚೆಂದವಾಗಿ

ಭೀರುಮತಿ ಪಿಡಿದು ಸೆಳೆಯೆ ಕು
ಮಾರಂ ನಡೆನೋಡಿ ಮಾತೆ ನಸುನಗುತಾಗಳ್ ೧೯

ಎಲೆ ಮಗನೆ ಕಲ್ತ ನುಡಿಗಳ
ನಲಸದೆ ಪಲವಂದದಿಂದೆ ನುಡಿವುದನುಳಿ[1] ಕಾ
ದಲನ ಮುಳಿಸಿಲ್ಲಿ ಕೂಪದ
ಜಲದಿಂ ತಿಳಿದಪ್ಪುದದಱಿನಗುಳ್ದಪೆನೀಗಳ್ ೨೦

ಎಳೆಯನೆನಿಸಿರ್ದ ನಿನಗೀ
ಮುಳಿಸಿನ ಮಾತೇಕೆ ಪೋಗಿ ಪವಡಿಸು ಮುಳಿಸಂ
ತಿಳಿಪಿದಪೆನೀಯೊಱಂತೆಯ
ಸಳಿಳಮನೊಸೆದಿತ್ತು ಮೆಲ್ಲನನುನಯದಿಂದಂ ೨೧

ವ॥ ಎನೆ ನಿಜಜನನಿಗಸದಳಮಾದ ಜನಕನ ಬಲ್ಮುಳಿಸೆನಗೆ ತಿಳಿಪಲೆಂತಾನುಮಳವಲ್ಲೆಂದು ಗುರು ಮಾದಿರಾಜನಿನಲ್ಲದಿಂತಿದು ತಿಳಿವಡದೆಂದು ನೆನೆದು ತರುಣನಾ ಪರ್ಬಿದ ಮರ್ಬಿನೊಳೊರ್ವನೆ

ಹೋಗಿ ಇವನ ಪಾದಕಮಲಗಳಲ್ಲಿ ನಮಸ್ಕಾರಮಾಡಿದರೆ (ಬಹುಶಃ) ಕೋಪವನ್ನು ಬಿಡಬಹುದು; ವಿಚಾರಿಸಿ ನೋಡಿದರೆ ಈ ಅವಸರದಲ್ಲಿ ಇದೇ ಯೋಗ್ಯವಾದ ಕಾರ್ಯ ಬಾ' ಎಂದು ಹೆದರಿದ ಆ ಕುಮಾರನು ತನ್ನ ಕರ ಕಮಲದಿಂದ ತಾಯಿಯುಟ್ಟ ಸೀರೆಯ ನಿರಿಗೆಗಳನ್ನು ಹಿಡಿದು ಎಳೆಯಲು ದಿಟ್ಟಿಸಿ ಮಗನ ಮುಖವನ್ನು ನೋಡಿದ ತಾಯಿಯು ಆಗ ನಸುನಗುತ್ತ, 'ಎಲೈ ಮಗನೇ ಕಲಿತ ಅಂದವಾದ ಅನೇಕ ನುಡಿಗಳನ್ನು ಅಲಸದೆ ಮಾತನಾಡುವುದನ್ನು ಬಿಡು. ಇಲ್ಲಿ ಬಾವಿಯನ್ನು ತೋಡಿ ಅದರನೀರಿನಿಂದ ನನ್ನ ಪತಿಯ ಕೋಪವು ಇಳಿಯುವಂತೆ ಮಾಡುತ್ತೇನೆ. ಆದ್ದರಿಂದ ನೆಲವನ್ನು ಈಗ ಇಲ್ಲಿ ತೋಡುತ್ತಿದ್ದೇನೆ.' ೨೧. 'ಎಳೆಯನಾದ ನಿನಗೆ ಈ ಕೋಪದ ಗೊಡವೆಯೇಕೆ ? ಹೋಗಿ ಮಲಗಿಕೋ. ಈ ಒರತೆಯ ನೀರನ್ನು ಪ್ರೀತಿಯಿಂದ (ನಿನ್ನ ತಂದೆಗೆ) ಕೊಟ್ಟು, ನಯವಾದ ಮಾತುಗಳನ್ನು ಮೆಲ್ಲನೆ ಮಾತನಾಡಿ ಸಿಟ್ಟನ್ನು ತಿಳಿಗೊಳಿಸುತ್ತೇನೆ.' ವ॥ ಎಂದು ತಾಯಿಯು ಹೇಳಲು, ಆ ಕುಮಾರನು ನನ್ನ ತಾಯಿಗೆ ಅಸಮಾನವಾದ ರೀತಿಯಲ್ಲಿ ನನ್ನ ತಂದೆಗುಂಟಾದ ಅಧಿಕವಾದ ಕೋಪವನ್ನು ಸಮಾಧಾನ ಮಾಡುವುದು ಯಾವರೀತಿಯಿಂದಲೂ ಶಕ್ತಿಯಿಲ್ಲದವನಾಗಿದ್ದೇನೆ. ಗುರುವಾದ ಸಕಳೇಶ ಮಾದರಸನಲ್ಲದೆ ಇಂತುಂಟಾಗಿರುವ ಕೋಪವು ಇಳಿಯುವುದಿಲ್ಲವೆಂದು ಯೋಚಿಸಿ, ಆ ಕುಮಾರನು ದಟ್ಟವಾದ ಕತ್ತಲೆಯಲ್ಲಿ ಒಬ್ಬನೇ ತನ್ನ ಮನೆಯಬಾಗಿಲ ಕದವನ್ನು ಗಿರ್ರೆಂದು ತೆಗೆದು ಹೊರಟು ಬಂದು ಸಕಲೇಶಮಾದರಸರ ಮನೆಯನ್ನು ಪ್ರವೇಶಿಸಿದನು. (ಅಲ್ಲಿ ಆ

1 ಡಿ(ದ)

ನಿಜಗೃಹಕವಾಟವಮಂ ಗ[1]ಜ್ಜನೆ ತೆಗೆದೇಳ್ತಂದು ಸಕಲೇಶದೇವನರಮನೆಯಂ ಪೊಕ್ಕು ಸರಸಮಧುರತರ ವೀಣಾರಣಿತರಾಗರಸಸುಧಾಸಾಗರದೊಳೀಶ್ವರನನವಗಾಹಂಗೆಯ್ಯುತ್ತುಮಿರ್ದಾ—

ಸಕಳೇಷ್ಟದಾನಿಯೆನಿಸುವ
ಸಕಳೇಶ್ವರ ಮಾದಿರಾಜನಂ ಕಂಡೊಲವಿಂ
ಸುಕುಮಾರ ಮಾನಸಾಂಬುಜ
ಸುಕುಮಾರಂ ಪಾದಪದ್ಮಕವನತನಾದಂ ೨೨

ವ॥ ಅಂತೆಱಗಿ ಕರಾಂಬುಜಂಗಳಂ ಮುಗಿದುಮ್ಮಳಿಸುತಿಂತೆಂದಂ—

ಅವಧರಿಸಯ್ಯ ಬಿನ್ನಪಮನೆಮ್ಮಯ ತಂದೆ ನಿಮಿತ್ತಮಿಲ್ಲದಿಂ
ದವಿರಳಮಾದ ಪೆರ್ಮುಳಿಸನಾಳ್ದು ವಿಭೂತಿಯನೆಯ್ದೆ ಪೂಸಿ ತ
ನ್ನವಯವದಲ್ಲಿ ನಿಮ್ಮಡಿಗಳಿತ್ತ ನವಾಂಬರಮಂ ಮುಸುಂಕಿ ಕೊಂ
ಡವಿಚಲಿತಾಂಗನಾಗಿರುತುಮಿರ್ದಪನೊಯ್ಯನೆ ನೆರ್ಮಿ ಕಂಭಮಂ ೨೩

ನುಡಿಯಂ ನೋಡಂ ಮಿಸುಕಂ
ಕಡುಮುಳಿಸಂ ತಾಳ್ದು ಮೂರ್ತಿಗೊಂಡಿರ್ದಪನಾ
ಮೃಡಪೂಜೆಯ ವೇದಿಕೆಯುಂ
ಬಿಡದಗುಳ್ದಪಳೆನ್ನ ಜನನಿಯೊರ್ವಳೆ ಗೃಹದೊಳ್ ೨೪

ಮಾದರಸರು) ರಸವತ್ತಾದ ಧ್ವನಿಯನ್ನುಂಟುಮಾಡುವ ಅತ್ಯಂತ ಮನೋಹರವಾದ ವೀಣಾಧ್ವನಿಯ ರಾಗದಿಂದುಂಟಾದ ಸಂಗೀತ ರಸವೆಂಬ ಕ್ಷೀರಸಮುದ್ರದಲ್ಲಿ ಈಶ್ವರನನ್ನು ಮುಳುಗಿಸುತ್ತಲಿದ್ದನು. ೨೨. ಸಕಲ ಇಷ್ಟಾರ್ಥಗಳನ್ನುಂಟುಮಾಡುವ ದಾನಿಯೆಂದೆನಿಸುವ ಸಕಳೇಶ್ವರ ಮಾದಿರಾಜನನ್ನು ಕಂಡು, ಪಾದಪದ್ಮಗಳಿಗೆ ಕೋಮಲವಾದ ಮನಸ್ಸೆಂಬ ಕಮಲದಿಂದ ಕೂಡಿದ ಚೆಲುವಾದ ಅಂಗವುಳ್ಳ ಬಾಲಕನು ಪ್ರೀತಿಯಿಂದ ನಮಸ್ಕಾರ ಮಾಡಿದನು. ವ॥ ಈ ರೀತಿ ನಮಸ್ಕಾರಮಾಡಿ, ಕರಕಮಲಗಳನ್ನು ಮುಗಿದು, ದುಃಖದಿಂದ ಹೀಗೆಂದನು : ೨೩. 'ಅಯ್ಯಾ, ನನ್ನ ಬಿನ್ನಹಗಳನ್ನು ಕೇಳು : ನನ್ನ ತಂದೆಯು ಈ ದಿನ ಯಾವ ಕಾರಣವೂ ಇಲ್ಲದೆ ತೆರಪಿಲ್ಲದ ತೀವ್ರಕೋಪವನ್ನು ಹೊಂದಿದ್ದಾನೆ. ಮೈಗೆಲ್ಲ ಚೆನ್ನಾಗಿ ವಿಭೂತಿಯನ್ನು ಧರಿಸಿಕೊಂಡಿದ್ದಾನೆ. ನೀವು ಕೊಟ್ಟ ನೂತನ ವಸ್ತ್ರವನ್ನು ಮೈಮೇಲೆ ಹೊದ್ದು ಮುಸುಕು ಹಾಕಿಕೊಂಡಿದ್ದಾನೆ. ಅಲುಗಾಡದ ಹಾಗೆ ಮೆಲ್ಲಗೆ ಕಂಬಕ್ಕೆ ಆತುಕೊಂಡು ಕುಳಿತುಬಿಟ್ಟಿದ್ದಾನೆ.' ೨೪. ಮಾತನಾಡುತ್ತಿಲ್ಲ, ನೋಡುತ್ತಿಲ್ಲ ; ಮಿಸುಗಾಡುತ್ತಿಲ್ಲ ; ಅತ್ಯಧಿಕ ಕೋಪವನ್ನು ಹೊಂದಿ ಕುಳಿತುಕೊಂಡು ಬಿಟ್ಟಿದ್ದಾನೆ. ಮನೆಯಲ್ಲಿ ಶಿವಪೂಜೆಯ ಗದ್ದುಗೆಯನ್ನು ನನ್ನ ತಾಯಿಯೊಬ್ಬಳೇ

---

1 ತ(ಚ)

ಜನಕನಡಿಗೆಱಗಿ ನಯದಿಂ
ಮುನಿಸಂ ಕಳೆಯೆಂದೊಡಗುಳ್ದೊಱಂತೆಯು ಜಲವಿ
ತ್ತನುನಯದೆ ತಿಳಿಪಿದಪೆನೆಲೆ
ತನುಭವ ನೀಂ ಪೋಗು ಪವಡಿಸೆಂದಸವಸದಿಂ ೨೫

ಪಿಡಿದ ಸೆಱಂಗಂ ಕರದಿಂ
ಬಿಡಿಸಿಕೊಳುತ್ತೆನ್ನ ಮಾತೆ ತೊಲಗೆಂದೆನ್ನಂ
ಜಡಿದೊಡಿದನೆಲ್ಲಮಂ ನಿ
ಮ್ಮಡಿಗಱಿಪಲ್ಬಂದೆನಯ್ಯ ದೇಶಿಕತಿಲಕಾ ೨೬

ಇನಕರದಿಂ ಮರ್ಬಳಿವಂ
ತೆ ನಿತಾಂತಂ ನಿಮ್ಮ ಪದದ ಸಂದರ್ಶನದಿಂ
ಜನಕನ ಮುಳಿಸಳಿವಪ್ಪುದೆ ಇ
ಯ್ಯನೆ ಬಿಜಯಂಗೆಯ್ದು ದೇವ ಪೊರೆಯಲ್ವೇಳ್ಕುಂ ೨೭

ಎಂದುಂ ಮುಳಿಸಿಲ್ಲೆಮ್ಮಯ
ತಂದೆಗೆ ಮುಳಿದಿರ್ಪನೀಗಳೇಕೆಂದಱಿಯೆಂ
ಮುಂದೆಱಗಿ ನುಡಿಯಿಸಿದೊಡೇ
ನೆಂದುಂ ತಾಂ ನುಡಿಯನೆನ್ನೊಳೇವೇಳ್ವೆನೋ ೨೮

ತಪ್ಪದೆ ಅಗೆಯುತ್ತಿದ್ದಾಳೆ.' ೨೫. '(ತಾಯಿಗೆ ನಾನು) ತಂದೆಯ ಪಾದಗಳಿಗೆ ನಮಸ್ಕಾರಮಾಡಿ ವಿನಯದೋರಿ ಸಿಟ್ಟನ್ನು ಕಳೆಯೆಂದು ಹೇಳಿದರೆ ಅವಳು—ಮಗನೇ ನೀನು ಹೋಗಿ ಮಲಗಿಕೋ. ನಾನು ಒರತೆಯನ್ನು ತೋಡಿ, (ಅದರಲ್ಲಿ ಬಂದ) ನೀರನ್ನು ಕೊಟ್ಟು ಪ್ರೀತಿಯಿಂದ (ನಿನ್ನ ತಂದೆಯ) ಸಿಟ್ಟನ್ನು ಕಳೆಯುತ್ತೇನೆಂದು ಆತುರದಿಂದ ತೋಡುತ್ತಿದ್ದಾಳೆ.' ೨೬. ಹೇ ದೇಶಿಕ ಶ್ರೇಷ್ಠನೇ, (ನಾನು) ಹಿಡಿದ ನನ್ನ ತಾಯಿಯ ಸೆರಗನ್ನು ಕೈಯಿಂದ ಬಿಡಿಸಿಕೊಳ್ಳುತ್ತ ಅವಳು (ಆಚೆ) ತೊಲಗು ಎಂದು ಗದರಿಸಿದಳು. ಇದನ್ನೆಲ್ಲ ನಾನು ನಿಮ್ಮ ಪಾದಗಳಲ್ಲಿ ಬಿನ್ನವಿಸಿಕೊಳ್ಳಲು ಅಯ್ಯಾ ಬಂದಿದ್ದೇನೆ.' ೨೭. 'ದೇವ, ಸೂರ್ಯನ ಕಿರಣಗಳಿಂದ ಕತ್ತಲೆಯು ಪೂರ್ಣವಾಗಿ ನಾಶವಾಗುವ ಹಾಗೆ, ನಿಮ್ಮ ಪಾದದ ಸಂದರ್ಶನದಿಂದ (ನನ್ನ) ತಂದೆಯ ಕೋಪವೆಲ್ಲ ಒಮ್ಮೆಲೇ ನಾಶ ವಾಗುವುದೆಂದು ಇಲ್ಲಿಗೆ ಬಂದೆನು. (ನೀವು ಅಲ್ಲಿಗೆ) ದಯಮಾಡಿಸಿ ರಕ್ಷಿಸಬೇಕು.' ೨೮. 'ನನ್ನ ತಂದೆಗೆ ಎಂದೂ ಕೋಪವಿರಲಿಲ್ಲ. ಈಗೇಕೆ ಕೋಪಗೊಂಡಿರುವ ನೆಂಬುದನ್ನು ತಿಳಿಯೆನು. ಅವನ ಮುಂದೆ ನಮಸ್ಕರಿಸಿ, ಮಾತನಾಡಿಸಿದರೂ ನನ್ನೊಡನೆ ಏನೊಂದನ್ನೂ ಅವನು ಮಾತನಾಡುತ್ತಿಲ್ಲ. (ಅವನ್ನು) ಏನೆಂದು ಹೇಳುವೆನೋ !

ಜನಕಂ ಪ್ರಣಯದಿನೆನ್ನಯ
ಜನನಿಯೊಳೆ ಪೊದಳ್ದು ಮುನಿವೊಡಂ ಮುನಿ[1]ಗೆವು[1] ಎ
ಳ್ಳನಿತುಂ ತಪ್ಪಿಲ್ಲದೆ ಸು
ಮ್ಮನೆ ತಾನೆನ್ನೊಡನೆ ಮುನಿದಪುದು ಚಿತ್ರತರಂ ೨೯

ಅರಿದರಿದಾತನ ನೇಹದ
ಪರಿಯೆನ್ನೊಳ್ದೇವ ಪೇಳ್ವೊಡಸದಳಮಖಿಳೋ
ರ್ವರೆಯೊಳಿದು ಪೊಸತು ನಿಮ್ಮಯ
ಚರಣಾಬ್ಜಮೆ ಬಲ್ಲುದದ[2]ನದೇವಣ್ಣಿಪೆನೋ ೩೦

ಆಳವಿಯೊಳೆನ್ನನೀಕ್ಷಿಪುದುಮಾಗಳೆ ಪೊಂಪುಳಿದಾಳೆ ಮೆಯ್ವೊದ
ಳ್ದಿಳಿಯೆ ಸುಖಾಶ್ರು ಬಾರೆಲೆ ತನೂಭವ ಬಾರೆಲೆ ತಂದೆ ಬಾರ ಮಂ
ಜುಳಗುಣ ಬಾಲಲಿಂಗವಿಭು ಬಾರೆನುತುಂ ಬಿಗಿಯಪ್ಪಿಕೊಂಡು ಕೋ
ಮಳಭುಜದಿಂದೆ ಮೆಯ್ದಡವಿ ಮುದ್ದಿಸಿ ನೋಡಿ ಮನೋನುರಾಗದಿಂ ೩೧

ತೆಗೆದುತ್ಸಂಗದೊಳಿಟ್ಟು ಚಂಡಿಕೆಯನೊಳ್ಪಿಂ ಕಟ್ಟಿ ಸಂಪ್ರೀತಿ ಕೆ
ಯ್ಮಿಗೆ ಪೂಮಾಲೆಯ ಸುತ್ತಿ ಭಾಳತಳದೊಳ್ಭಸ್ಮತ್ರಿಪುಂಡ್ರಾಂಕಮಂ

(ಹೇಳಲು ಗೊತ್ತಾಗುತ್ತಿಲ್ಲ ಎಂದು ಭಾವ)' ೨೯. 'ನನ್ನ ತಂದೆಯು ವಿಶ್ವಾಸದಿಂದ ನಮ್ಮಮ್ಮನೊಡನೆ ಹೆಚ್ಚಾಗಿ ಕೋಪ ಮಾಡಿದರೂ ಮಾಡಿಕೊಳ್ಳಲಿ ! ಸ್ವಲ್ಪವೂ ತಪ್ಪಿಲ್ಲದೆ ಸುಮ್ಮನೆ ಅವನು ನನ್ನೊಡನೆ ಕೋಪಗೊಂಡನು. ಇದು (ನನಗೆ) ವಿಚಿತ್ರ ವೆನಿಸಿದೆ.' ೩೦. 'ದೇವ, ನನ್ನ ಮೇಲೆ ನನ್ನ ತಂದೆಯ ಸ್ನೇಹದ ರೀತಿಯು ಅಸಾಧ್ಯ ! ಅಸಾಧ್ಯ ! ಹೇಳುವುದಕ್ಕೆ ಅಸಾಧ್ಯವಾದದ್ದು. (ಅವನು ನನ್ನಲ್ಲಿ ತೋರಿಸುತ್ತಿದ್ದ ಪ್ರೀತಿ) ಅಖಿಳ ಭೂಮಂಡಲದಲ್ಲಿಯೇ ಹೊಸದು. ಅದು ನಿಮ್ಮ ಪಾದಕಮಲಕ್ಕೇ ಗೊತ್ತು ; ಅದನ್ನು ಏನೆಂದು ವರ್ಣಿಸುವೆನೋ ! ೩೧–೩೨. ವಿಶ್ವಾಸದಿಂದ (ಆಳವಿಯೊಳ್) ನನ್ನನ್ನು ನೋಡುವನು. ಆ ಕ್ಷಣವೇ ಮೈ ರೋಮಾಂಚನಗೊಳ್ಳು ವನು ; ಹೊರಹೊಮ್ಮಿ ಕಣ್ಣೀರುಗಳು (ಆನಂದಬಾಷ್ಪಗಳು) ಇಳಿಯುತ್ತಿರಲು, ಬಾರೆಲೆ ಮಗನೇ, ಬಾರೆಲೆ ನನ್ನ ತಂದೆಯೇ, ಬಾರ ಮನೋಹರವಾದ ಗುಣದ ಬಾಲಲಿಂಗ ವಿಭುವೇ, ಬಾರಪ್ಪಾ ! ಎನ್ನುತ್ತ ಬಿಗಿಯಾಗಿ ಅಪ್ಪಿಕೊಂಡು, ಕೋಮಲವಾದ ತನ್ನ ಭುಜಗಳಿಂದ ಮೈದಡವಿ, ಮುದ್ದುಮಾಡಿ ನೋಡಿ, ಮನಃಸಂಪ್ರೀತಿಯಿಂದ ಎಳೆದು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ನನ್ನ ಚಂಡಿಕೆಯನ್ನು ಚೆನ್ನಾಗಿ ಕಟ್ಟುವನು. ಮೀರೆದಪ್ಪಿದ ವಿಶೇಷ ಪ್ರೀತಿಯಿಂದ ಹೂಮಾಲೆಯನ್ನು ಆ ಶಿಖೆಗೆ ಕಟ್ಟುವನು. ಹಣೆಯ ಮೇಲೆ ಭಸ್ಮದ ಮೂರು ಬೆರಳಿನ ಚಿಹ್ನೆಯನ್ನು ಅಳವಡಿಸುವನು. ಎರಡೂ

1 ಯಿಗೆ(ದ) 2 ವ(ಜ)

ನೆಗಳ್ದಕ್ಷಿದ್ವಯಕೆಚ್ಚು ಕಜ್ಜಳಮನೆನ್ನೀ ಕರ್ಣದೊಳ್ಪೂದೊಡಂ
ಬೆಗಳಂ ಸಾರ್ಚಿ ನಿರೀಕ್ಷಿಸುತ್ತೆ ನಲಿವಂ ಮುಂಡಾಡುವಂ ಮುದ್ದಿಪಂ ೩೨

ಕೊನೆವೆರಲಿಂದಳ್ಳೆಯನೊ
ಯ್ಯನೆ ಜಕ್ಕುಲಿಸುತ್ತೆ ನಗಿಪನಂಗನೆ ನೋಡೆಂ
ದೆನುತುಂ ಜರ್ಬುತೆ ಪುರ್ಬಿಂ
ದಿನಿಯಳ್ಗಱುಪುತ್ತೆ ಬಿನದಿಪಂ ನಸುನಗುತುಂ ೩೩

ಅಡಿಗಡಿಗಪ್ಪಿಕೊಳ್ವನನುರಾಗದಿನೋದಿಪನೀಶಮಂತ್ರಮಂ
ಮೃಡ ಶಿವ ಶಂಭು ಶಂಕರ ಹರಾಭವ ಭರ್ಗ ಭವಾದಿನಾಮಮಂ
ನುಡಿ ನುಡಿಯೆಂದು ತಾಂ ಕಲಿಪನಾಲಿಪನೊಳ್ನುಸಲೊಡ್ಡಿ ಜೈಗುಡು
ತ್ತೊಡನೊಡನುರ್ಬಿ ಮೇಣ್ಪಿಡಿದು ಗಲ್ಲಮನೊಲ್ದಲುಗುತ್ತೆ ರಾಗಿಪಂ ೩೪

ವ॥ ಮತ್ತಂ—

ಬಸವನ ಬಂಟನೋ ಸುತನೊ ಕಿನ್ನರದೇವನ ಕೂರ್ಪ ಲೆಂಕನೋ
ಮುಸುಟಿಯ ಚೌಡರಾಜನ ಹಲಾಯುಧನಾಳೊ ತೆಲುಂಗ ಜೊಮ್ಮನಾ
ಳ್ವೆಸದ ಬೆಡಂಗನೋ ಮುಸಣದೇವನ ದಾಸನೊ ದಾಸಿಮಯ್ಯನೊ
ಲ್ದೆಸಕದ ಭೃತ್ಯನೋ ದಸರಿದೇವನ ಚಾರನೊ ಮಾಚಿದೇವನಾ ೩೫

ಪಳೆಯನೊ ಸೇದಿರಾಜನಸಿಯಂ ಪಿಡಿವಾತನೊ ಪಂಡಿತಾರ್ಯನಂ
ಜ್ವಳಪದಪದ್ಮಸೇವಕನೊ ವೇಮರಸಾರ್ಯರ ಶಿಷ್ಯನೋ ವಿಶ್ವಂ
ಖಳಮತಿ ಬಂಕನಂಕದವನೋ ಸಿರಿಯಾಳ್ವನ ಸೂನುವಿಂಗೆ ನ
ಲ್ಗೆಳೆಯನೊ ಸೌಂದರಾಧಿಪನ ದೂತನೊ ಚನ್ನಯನಾತ್ಮಜಾತನೋ ೩೬

ಕಣ್ಣುಗಳಿಗೆ ಕಾಡಿಗೆಯನ್ನು ಬಳಿಯುವನು. ಕಿವಿಗಳಲ್ಲಿ ಹೂವಿನ ಗೊಂಡೆಗಳನ್ನು ಅಳವಡಿಸುವನು. ನೋಡಿ ನಲಿದಾಡುವನು. ಮೈಮೇಲೆ ಕೈಯಾಡಿಸಿ ಮುದ್ದಿಸುವನು. ೩೩–೩೪. ಬೆರಳಿನ ತುದಿಯಿಂದ ಪಕ್ಕೆಗಳಲ್ಲಿ ಮೆಲ್ಲನೆ ಚಕ್ಕಳುಗುಳಿಯಾಡಿಸಿ, ನಗಿಸುವನು. 'ಅಂಗನೆಯೇ, ನೋಡು' ಎಂದು ಹುಬ್ಬಿನ ಸನ್ನೆಯಿಂದ ತನ್ನ ಇನಿಯಳಿಗೆ (ನಮ್ಮ ಅಮ್ಮನಿಗೆ) ಸೂಚಿಸುತ್ತ, ವಿನೋದಗೊಳಿಸುವನು ; ನಸುನಗುತ್ತ ಕ್ಷಣಕ್ಷಣಕ್ಕೂ ಅಪ್ಪಿಕೊಳ್ಳುವನು. ಈಶ್ವರ ಸಂಬಂಧದ (ನಮಃಶಿವಾಯ) ಮಂತ್ರವನ್ನು ವಾತ್ಸಲ್ಯದಿಂದ ಹೇಳಿಕೊಡುವನು. ಮೃಡ, ಶಿವ, ಶಂಭು, ಶಂಕರ, ಹರ, ಅಭವ, ಭರ್ಗ, ಭವ–ಇತ್ಯಾದಿ ಶಿವನಾಮವನ್ನು ಹೇಳುಹೇಳೆಂದು ತಾನೇ ಕಲಿಸಿಕೊಡುವನು. ನಾನು ನುಡಿದುದನ್ನು ಕೇಳುವನು. ತನ್ನ ನುಣ್ಣನೆಯ ಹಣೆಯನ್ನು ಮುಂದಕ್ಕೆ ಚಾಚಿ, ಜೈ ಜೈಯೆಂದು ಜೈಗುಡುತ್ತ ಆ ಕೂಡಲೆ ಉತ್ಸಾಹಗೊಂಡು, ಗಲ್ಲವನ್ನು ಹಿಡಿದು ಅಲುಗಾಡಿಸುತ್ತ, ಅನುರಾಗ ತೋರಿಸುವನು. ವ॥ ಮತ್ತು ೩೫–೩೬. (ಅಪ್ಪಾ ! ನೀನು) ಬಸವಣ್ಣನ ಬಂಟನೋ ? ಕಿನ್ನರಯ್ಯನ ಮಗನೋ ? ಮುಸುಟಿಯ ಚೌಡರಾಯನ ಪ್ರೀತಿಯ ಭೃತ್ಯನೋ ? ಹಲಾಯುಧನ ಆಳೋ ? ತೆಲುಂಗು ಜೊಮ್ಮಯ್ಯನ ಅಪ್ಪಣೆಯ

ಚೇರಮುನಶ್ವರಕ್ಷಕನೊ ಗೊಲ್ಲಳನೊಳ್ದುಉುಗಾವನೋ ಬಹಿ
ರ್ದ್ವಾರಮುನೊಲ್ದು ಕಾವ ಚರನೋ ಗಣನಾಥನ ಬಂಡಿ[1]ಕಾಜಿನೋ
ಬೀರದ ಬಿಬ್ಬ ಬಾಚಯುನ ಹೊನ್ನಯುನಗ್ಗದ ಕಂಬಿಕಾಜಿನೋ
ಮಾರಯುನಂಗಣಕ್ಕೆ ಚಳೆಯುಂಗುಡುವಾತನೊ ಚೋಳರಾಜನಾ ೩೭

ಪಡಿಯುಜಿನೋ ಪಗಲ್ತೊಣೆಯುರಾಳತಿಗೆಯ್ವನೊ ಕಕ್ಕಯುಂಗಿವಂ
ಪಡಿಗಮುನಾಂಪನೋ ಮಳಯುರಾಜನ ಸತ್ತಿಗೆದಾಳ್ವನೋ ಬೆಡಂ
ಗಿಡಿದಿರಿವತ್ತನರ್ಭಕನೊ ಚನ್ನವೃಷಾಂಕನ ಸುಪ್ರಸಾದಿಯೋ
ನಿಡುಗುಡಿಮಾರನಂಗಣರಜಂದೆಗೆವಾತನೊ ಸಿದ್ಧರಾಮುನಾ ೩೮

ಮೇರೆಗೆ ನಡೆಯುವ ವಿಲಾಸವುಳ್ಳವನೋ ? ಮುಸಣಿದೇವನ ದಾಸನೋ ? ಜೇಡರ ದಾಸಿಮಯ್ಯನ ಒಳ್ಳೆಯ ಆಜ್ಞಾಧಾರಕನಾದ ಆಳೋ ? ದಸರಿದೇವನ ಚಾಕರಿ ಮಾಡುವವನೋ ? ಆ ಮಾಚಿದೇವನ ಹಳಬನೋ (ಹೆಳವನೋ)† ಸೇದಿರಾಜನ ಖಡ್ಗವನ್ನು ಹಿಡಿಯುವವನೋ ? ಪಂಡಿತಾರಾಧ್ಯನ ಉಜ್ವಳವಾದ ಪಾದಕಮಲಗಳ ಸೇವಕನೋ ? ವೇಮನಾರಾಧ್ಯರ ಶಿಷ್ಯನೋ ? ಸ್ವತಂತ್ರ ಮತಿಯುಳ್ಳ ಬಂಕಯ್ಯನ ಬಿರುದನ್ನು ಹೊಗಳುವವನೋ ? ಶಿರಿಯಾಳಸೆಟ್ಟಿಯ ಮಗನ ಪ್ರೀತಿಯ ಸ್ನೇಹಿತನೋ ? ಸುಂದರ ನಂಬಿಯಣ್ಣನ ದೂತನೋ ? ಮಾದಾರ ಚನ್ನಯ್ಯನ ಔರಸಪುತ್ರನೋ ? ಚೇರಮರಾಯನ ಕುದುರೆ ಕಾಯುವವನೋ ? ಗೊಲ್ಲಾಳಯ್ಯನೊಡನೆ ಪ್ರೀತಿಯಿಂದ ಹಸುವನ್ನು ಕಾಯುವವನೋ ? ಗಣನಾಥನ ಹೊರಬಾಗಿಲನ್ನು ಪ್ರೀತಿಯಿಂದ ಕಾಯುವ ಭೃತ್ಯನೋ ? ವೀರವೃತ್ತಿಯ ಬಿಬ್ಬಿ ಬಾಚಯ್ಯನ ಬಂಡಿಯನ್ನು ಹೊಡೆಯುವವನೋ ? ಹೊನ್ನಯ್ಯನ ಶ್ರೇಷ್ಠವಾದ ಕಂಬಿ (ಅಡ್ಡೆ) ಯನ್ನು ಹೊರುವವನೋ ? ಮಾರಯ್ಯನ ಅಂಗಳಕ್ಕೆ ನೀರನ್ನು ಚಿಮುಕಿಸುವವನೋ ? ಕರಿಕಾಲ ಚೋಳಮಹಾರಾಜನ ಬಾಗಿಲು ಕಾಯುವವ (ಪ್ರತೀಹಾರಿ) ನೋ ? ಪಗಲ್ತೊಣೆಯರ ಅಪ್ಪಣೆಯನ್ನು ಪರಿಪಾಲಿಸುವವನೋ ? ಕಕ್ಕಯ್ಯನಿಗೆ ಇವನು ಪೀಕದಾನಿ (ತಾಂಬೂಲವನ್ನು ಉಗುಳುವ ಪಾತ್ರೆ) ಯನ್ನು ಹಿಡಿಯುವವನೋ ? ಮಲಯರಾಜನ ಛತ್ರಿಯನ್ನು ಹಿಡಿಯುವವನೋ ? ಬೆಡಗಿನವನಾದ ಇರಿವತ್ತನ ಶಿಶುವೋ ? ಚೆನ್ನಬಸವೇಶ್ವರನ ಶ್ರೇಷ್ಠ ಪ್ರಸಾದಿಯೋ ? ನಿಡುಗುಡಿ ಮಾರಯ್ಯನ ಅಂಗಳದ ಧೂಳನ್ನು ಗುಡಿಸುವಾತನೋ ? ಸಿದ್ಧರಾಮೇಶ್ವರನನ್ನು ಸೇವಿಸುವ ಆ ಗುಡ್ಡನೋ ? ಸುರಗಿಯ ಚೌಡಯ್ಯನ ಭೃತ್ಯನೋ ? ಖ್ಯಾತಿವೆತ್ತ

1 ದಿ(ಜ, ದ)

†ಹಳಬ ಅಥವಾ ಹೆಳವ (ಹೆಳಬ) ಎಂಬುದೊಂದು ಜನಾಂಗ. ಇವರು ಕೆಲವು ಮನೆತನಗಳ ಹಿಂದಿನ ಚರಿತ್ರೆಯನ್ನೆಲ್ಲ ಸಂಗ್ರಹಿಸಿಕೊಳ್ಳುತ್ತ ಬಂದು ಮುಂದಿನ ಸಂತತಿಯವರಿಗೆ ಆಗಾಗ ಬಂದು ಹೊಗಳಿ ಹೇಳುತ್ತಾರೆ. ಇಲ್ಲಿ 'ಪಳೆಯ' ಎಂದು ಇವರಿಗೇ ಹೇಳಿರಬಹುದೆಂದು ತೋರುತ್ತದೆ.

ಸೇವಿಪ ಗುಡ್ಡನೋ ಸುರಗಿ ಚೌಂಡನ ಕಿಂಕರನೋ ಪೊದಳ್ದ ಕೆಂ
ಬಾವಿಯ ಭೋಗನಾಗರದ ಸಿಂಬಕನೋ ಕಲಿಕಾಮನಂಘ್ರಿರ
ಕ್ಷಾವಹನಕ್ರಿಯಾನ್ವಿತನೊ ಮಾದರಸಾರ್ಯರ ಮೊಮ್ಮನೋ ಮಹಾ
ದೇವಿಯ ಚಿಕ್ಕಮಾದಣನ ಕಂದನೊ ನೀನೆನುತೆನ್ನನಳ್ಕಱಿಂ ೩೯

ಕರೆಕರೆದು ಲಲ್ಲೆಗೆಯ್ದಾ
ದರಿಸುತೆ ಪೇರುರದೊಳಪ್ಪುವಂ ಸಡಗರಿಪಂ
ಕರತಳತಾಳಮನೊತ್ತುತೆ
ಪಿರಿದುತ್ಸವದಿಂದೆ ಕುಣಿಯಿಪಂ ಪಿತನೆನ್ನಂ ೪೦

ಪೆಗಲೇಱಿಸಿಕೊಂಡೆನ್ನಂ
ಮಿಗೆ ನಿಮ್ಮೋಲಗಕೆ ಬರ್ಪನತಿ ಸಂಭ್ರಮದಿಂ
ದಗಲದನುದಿನಮುಮಿಂತಿಂ
ತಗಣಿತ ಸಂಪ್ರೀತಿವೆತ್ತು ಮನ್ನಿಪನೆನ್ನಂ ೪೧

ಇಂದೆನ್ನೊಳ್ಮುನಿದುಸುರಂ
ತಂದೆ ಮಹಾಮಹಿಮ ನೀವೆ ಬಲ್ಲಿರಿದಂ ಮೇ
ಣೊಂದುಂ ತಪ್ಪೆನ್ನೊಳ್ಸಲೆ
ಸಂದಿಸದಾನಾಡೆನನ್ಯ ಶಿಶುಗಳೊಳೆಂದುಂ ೪೨

ಶರಣರಡಿಗಂಡು ವಂದಿಸ
ದಿರೆನಭವಾನರ್ಚಿತಕ್ಕೆ ಬಾಯ್ದೆಱೆಯೆಂ ಶಂ
ಕರಪೂಜೆಗೆಯ್ವ ಸಮಯದೆ
ಕರೆಯೆಂ ಕಂಡುದನೆ ಬಯಸಿ ಬೇಡೆನಜಸ್ರಂ ೪೩

ಕೆಂಭಾವಿ ಭೋಗಣ್ಣನ ಪ್ರೀತಿಯ ಆಳೋ ? ಕಲಿ ಕಾಮದೇವನ (ಪಾದದ) ಕೆರಗಳನ್ನು ಹೊರುವ ಕಾರ್ಯದಲ್ಲಿ ನಿಯಮಿತನಾದವನೋ ? ಮಾದರಸಾರ್ಯನ ಮೊಮ್ಮಗನೋ ? ಮಹಾದೇವಿಯ (ಚಿಕ್ಕಮಾದಣ್ಣನ ಹೆಂಡತಿ) ಚಿಕ್ಕಮಾದಣ್ಣನ ಮಗನೋ ಎನ್ನುತ್ತ ನನ್ನನ್ನು ಪ್ರೀತಿಯಿಂದ—೪೦. ಕರೆಕರೆದು ಲಲ್ಲೆಮಾಡಿ (ಮುದ್ದುಮಾಡಿ), ಆದರ ತೋರಿಸುತ್ತ ಅಗಲವಾದ ಎದೆಯಿಂದ ಅಪ್ಪಿಕೊಳ್ಳುವನು ; ಸಂಭ್ರಮಗೊಳ್ಳುವನು ; ಕೈ ಚಪ್ಪಾಳೆಯ ತಾಳಗಳನ್ನು ಕುಟ್ಟುತ್ತ ಎನ್ನ ತಂದೆಯು ನನ್ನನ್ನು ಅತ್ಯಂತ ಉತ್ಸಾಹ ದಿಂದ ಕುಣಿಸುವನು. ೪೧. ಪ್ರತಿದಿನವೂ ತಪ್ಪದಂತೆ ನನ್ನನ್ನು ತನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಅತ್ಯಂತ ಸಂಭ್ರಮದಿಂದ ನಿಮ್ಮ ಓಲಗಕ್ಕೆ ಬರುವನು. ಓ ಹೀಗೆ ಹೀಗೆ ಲೆಕ್ಕವಿಲ್ಲದ ವಿಶೇಷ ಪ್ರೀತಿಯಿಂದ ನನ್ನನ್ನು ಮನ್ನಣೆ ಮಾಡುವನು. ೪೨. ಈ ದಿನ ನನ್ನೊಡನೆ ಕೋಪಗೊಂಡು (ನನ್ನ) ತಂದೆಯು ಮಾತನ್ನೇ ಆಡುತ್ತಿಲ್ಲ; ಇದನ್ನು ಮಹಾ ಮಹಿಮರಾದ ನೀವೇ ಬಲ್ಲಿರಿ. ಮತ್ತು ಒಂದು ತಪ್ಪು ನನ್ನಿಂದ ಉಂಟಾಗಿಲ್ಲ; ಬೇರೆ ಮಕ್ಕಳ ಹಾಗೆ ನಾನು ಮಾತನಾಡುವವನಲ್ಲ. ೪೩. ಸತತವೂ ಶರಣರುಗಳ ಪಾದ ವನ್ನು ಕಂಡು ನಮಸ್ಕರಿಸದೆ ಇರುವುದಿಲ್ಲ; ಈಶ್ವರನ ಎಡೆಗೆ ಬಾಯಿ ತೆರೆಯುವುದಿಲ್ಲ; ಶಂಕರನ ಪೂಜೆ ಮಾಡುವ ಸಮಯದಲ್ಲಿ ಕರೆಯುವುದಿಲ್ಲ (ಮಾತನಾಡಿಸುವುದಿಲ್ಲ);

ಪೊಲ್ಲದುಮನೆಸಗೆನಯ್ಯನ
ಸೊಲ್ಲಂ ಸಲೆ ಮೀಱೆನನ್ಯರೊಸಗೆಯು ಗೃಹಕಾಂ
ನಿಲ್ಲದೆ ಪೋಗೆಂ ಸಮಯಕೆ
ಸಲ್ಲದರೊಳ್ನುಡಿಯೆನೀಶ[1]ಮನುವಂ[1] ಮಱೆಯೆಂ ೪೪

ಇಂತಾನಿರ್ಪಂದವಂ ತಾನಱಿಯನೆ ಮುಳಿದಂ ನಿರ್ನೆರಂ ತಾತನೆನ್ನೊ
ಳ್ಸಂತಾಪಂಗೊಂಡು ಪೋಣಾಂ ತಿಳಿಪೆ ತಿಳಿಯನೇನೆಂದಪೆಂ ಸತ್ಕೃಪಾರ್ದ್ರ
ಸ್ವಾಂತರ್ನೀಮೆಯ್ದಿ ಬೇಗಂ ತಿಳಿಪೆ ತಿಳಿದಪಂ ಬಲ್ಲೆನಾನೆಲ್ಲಮಂ ದು
ಶ್ಚಿಂತಾಕಾಂತಾರದಾವಾನಳ ಗುರುವರ ನೀಂ ಬಂದು ರಕ್ಷಿಪ್ಪುದೆಮ್ಮಂ ೪೫

ಎಂದಿಂತು ಮುದ್ದುನುಡಿಗ
ಳ್ಸಂದಣಿಸಿರೆ ದೇವ ಬನ್ನಿಮೆಂದಡಿಗಡಿಗಾ
ಕ್ರಂದಿಸುತೆಱಗುತೆ ಕರೆವುತೆ
ಕುಂದದೆ ದೈನ್ಯೋಕ್ತಿವೆರಸಿ ಪೊರಳುತ್ತಡಿಯೊಳ್ ೪೬

ಕರಕರಿಪ ತರುಣನಿರವಂ
ಕರುಣಾನಿಧಿ ನೋಡಿ ದಶನದೀಧಿತಿ ಮೊಗದೊ
ಳ್ಪರಕಲಿಸೆ ನಗುತೆ ಸಕಳೇ
ಶ್ವರದೇವಂ ಬೀಣೆದೆಗೆದು ಕಿಲಕಿಳುಪುತ್ತುಂ ೪೭

ಕಂಡದ್ದನ್ನೆಲ್ಲ ಅಪೇಕ್ಷಿಸಿ ಬೇಡುವುದಿಲ್ಲ. ೪೪. ಕೆಟ್ಟ ಕೆಲಸವನ್ನೆಂದೂ ಮಾಡುವುದಿಲ್ಲ; ನನ್ನ ತಂದೆಯ ಮಾತನ್ನು ಎಂದೂ ಮೀರುವುದಿಲ್ಲ; ಬೇರೆಯವರ (ಶಿವಭಕ್ತಿಯಿಲ್ಲದವರ) ಮನೆಯಲ್ಲುಂಟಾಗುವ ಉತ್ಸವಗಳಿಗೆ ಹೋಗುವುದಿಲ್ಲ; ನನ್ನ ವೀರಶೈವ ಸಮಯಕ್ಕೆ ಸಲ್ಲದವರೊಡನೆ ನುಡಿಯುವುದಿಲ್ಲ ; ಈಶ್ವರ ಮಂತ್ರವನ್ನು ಮರೆಯುವುದಿಲ್ಲ. ೪೫. ತಾತನೇ. ಹೀಗೆ ನಾನಿರುವ ರೀತಿಯನ್ನು ತಾನು (ನಮ್ಮ ತಂದೆಯು) ತಿಳಿದಿಲ್ಲವೇ ? ಕಾರಣವಿಲ್ಲದೆ ನನ್ನೊಡನೆ ಕೋಪಗೊಂಡಿದ್ದಾನೆ. ಸಂಕಟಗೊಂಡು ನಾನು ಹೋಗಿ (ಅವರ ಕೋಪವನ್ನು) ತಿಳಿಗೊಳಿಸಿದರೂ ತಿಳಿಗೊಳ್ಳುತ್ತಿಲ್ಲ. ಇದಕ್ಕೇನೆನ್ನಲಿ! ಶ್ರೇಷ್ಠ ದಯಾರಸದಿಂದ ಆರ್ದ್ರಗೊಂಡ ಮನಸ್ಸುಳ್ಳವರಾದ ನೀವು ಬೇಗ ಬಂದು ತಿಳಿಗೊಳಿಸಿದರೆ ಕೋಪ ಬಿಡುವನು; ಅದನ್ನೆಲ್ಲ ನಾನು ಬಲ್ಲೆನು, ಆದ್ದರಿಂದ ಕೆಟ್ಟ ಚಿಂತೆಗಳೆಂಬ ಅರಣ್ಯಕ್ಕೆ ದಾವಾನಳ ಸ್ವರೂಪನಾದ ಗುರುಶ್ರೇಷ್ಠನೇ, ನೀನು ಬಂದು ನಮ್ಮನ್ನು ರಕ್ಷಿಸು. ೪೬–೪೭. ಹೀಗೆಂದು ಮುದ್ದಾದ ಮಾತುಗಳಿಂದ ಕೂಡಿ 'ದೇವ, ಬನ್ನಿ'ರೆಂದು ಹೆಜ್ಜೆ ಹೆಜ್ಜೆಗೂ ಅಳುತ್ತ, ನಮಸ್ಕರಿಸುತ್ತ, ಕರೆಯುತ್ತ, ಪಾದಗಳಲ್ಲಿ ಹೊರಳುತ್ತ, 'ದೈನ್ಯದಿಂದ ಕೂಡಿದ ಮಾತುಗಳಿಂದ ಕುಂದಿಲ್ಲದೆ ಕಳವಳ ಪಡುತ್ತಿರುವ ಬಾಲಕನ ಸ್ಥಿತಿಯನ್ನು ಆ ಸಕಳೇಶ ಮಾದರಸರು ನೋಡಿ, ಹಲ್ಲುಗಳ ಕಾಂತಿಯು ಮುಖ

1 ಮಂತ್ರವ (ಮು,ಜ,ಗ,ದ,)

ಶೀಲವಂತರನಂತರುಂಟವಳಂತೊಱಂತೆಯುನೆಯ್ದೆ ತ
ಮ್ಮಾಲಯಸ್ಥಳದಲ್ಲಿ ತೋಡಿದರುಂಟೆ ಪೆರ್ಮುಳಿಸಾಗೆ ತ
ತ್ಕಾಲದೊಳ್ಪಡಿವಂದವಂ ಬಿಸುಟೀತನಂತೆ ಮುಸುಂಕುತುಂ
ಚೇಲವಂ ಮಿಗೆ ನೆರ್ಮಿ ಕಂಬಮನಿರ್ದರುಂಟೆ ಗೃಹಾಧಿಪರ್ ೪೮

ಚಿತ್ರಮಿದು ಚಿಕ್ಕಮಾದನ
ಪುತ್ರನಿವಂ ನುಡಿವ ಮಾತು ಪೊಸಬಗೆಯೆಮ್ಮೀ
ಶ್ರೋತ್ರಕಿನಿದಾಯ್ತು ಶಿವ ಶಿವ
ಧಾತ್ರಿಯೊಳಿವನನ್ನರೊಳರೆ ನುಡಿಯ ಬೆಡಂಗರ್ ೪೯

ವ॥ ಎಂದು ಪೊಗಳ್ದು ತಲೆದಡಪಿ ಮುದ್ದಿಸಿ ಮುಂಡಾಡಿ ನೋಡಿ—

ಬಾಲಲಿಂಗ ನಡೆ ಪೋಪಮೆನುತ್ತುಂ
ಲೀಲೆಯಿಂದೆ ಸಕಳೇಶ್ವರದೇವಂ
ಕಾಲವೈರಿಯ ನಿರೂಪಮಿದೆಂದಾ
ಕಾಲಕಂಠನಿಭನೇಳ್ತರುತಾಗಳ್ ೫೦

ಸಕಳೇಷ್ಟಪ್ರದ ದೇವ ನೀನಿರೆ ಮಲಂ ಬೇಱೊಂದು ನಿಶ್ಚೈಸಿ ಬೇ
ಡಿ ಕರಂ ದಾವತಿಗೊಳ್ವನಲ್ತು ಬಿಡದಾನೆಂಬಿಂತಿದಂ ನೀನೆ ಬ
ಲ್ಲೆ ಕೃಪಾಸಾಗರ ಪೇಳ್ವುದೇಂ ಪೆಱತನೆನ್ನಂಗೇಂದ್ರಿಯ ಪ್ರಾಣ ಚಿ
ತ್ತಕಧೀಶಂ ಸಕಳೇಶ ನೀನೇ ನಿಜಮೆಂದಾನಂದದಿಂ ಗೀತಮಂ ೫೧

ಪಾಡುತ್ತೆ ಬಾಲಲಿಂಗಂ
ಕೂಡೆಯ್ತರೆ ನಿಜ ದೃಗಂಚಲಪ್ರಭೆ ಜವದಿಂ

ದಲ್ಲಿ ಹೊರಹೊಮ್ಮುವಂತೆ ನಗುತ್ತ ವೀಣೆಯನ್ನು ತೆಗೆದು ಕೆಳಗಿಟ್ಟನು. ೪೮. ಶೀಲವುಳ್ಳವರು ಲೋಕದಲ್ಲಿ ಲೆಕ್ಕವಿಲ್ಲದಷ್ಟು ಇರುವರು. ಈ ಚಿಕ್ಕ ಮಾದಣ್ಣನ ಪತ್ನಿಯಂತೆ ತಮ್ಮ ಮನೆಯಲ್ಲಿಯೇ ಬಾವಿಯನ್ನು ತೋಡಿದವರುಂಟೇ ? ಕೋಪವು ಅಧಿಕವಾದರೆ ಆಯಾ ಕಾಲಕ್ಕೆ ಉಚಿತವಾದ ಗದರಿಕೆ ಹಾಕುವ ರೀತಿಯನ್ನು ಬಿಟ್ಟು, ಈತನ ಹಾಗೆ ಬಟ್ಟೆಯನ್ನು ಮುಸುಕು ಹಾಕಿಕೊಂಡು ಕಂಬಕ್ಕೆ ಆತು ಕುಳಿತುಕೊಳ್ಳುವ ಗೃಹಸ್ಥರೂ ಉಂಟೇ ? ೪೯. ಈ ಚಿಕ್ಕ ಮಾದಣ್ಣನ ಪುತ್ರನಾದ ಇವನ ನೂತನ ರೀತಿಯ ಮಾತುಗಳು ವಿಚಿತ್ರವಾಗಿವೆ. ನಮ್ಮ ಕಿವಿಗೆ ಬಹು ಮಧುರವಾಗಿವೆ, ಶಿವ ಶಿವ! ಲೋಕದಲ್ಲಿ ಇವನಂಥ ನುಡಿಯ ಬೆಡಗಿನ ಮಕ್ಕಳು ಯಾರಾದರೂ ಇರುವರೇ ? ವ॥ ಎಂದು ಹೊಗಳಿ ತಲೆಯ ಮೇಲೆ ಕೈಯಾಡಿಸಿ, ಮುದ್ದುಮಾಡಿ ಮೈಯನ್ನು ಸವರಿ ನೋಡಿ—೫೦. ನೀಲಕಂಠ ಸ್ವರೂಪನಾದ ಸಕಳೇಶ್ವರ ಮಾದರಸನು, ಇದು ಪರಮೇಶ್ವರನ ನಿರೂಪವೆಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ, 'ಎಲೈ ಬಾಲಲಿಂಗ, ನಡೆ ಹೋಗೋಣ' ಎಂದು ಹೊರಟು ಬಂದನು. ೫೧–೫೨. 'ಹೇ ದೇವ, ಸಕಲ ಇಷ್ಟಾರ್ಥಗಳನ್ನು ಕೊಡುವವನು ನೀನಿರುವಾಗ ಬೇರೊಂದನ್ನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಬೇಡುವ ವಿಶೇಷ ಧಾವತಿ

ದೋಡಿಸೆ ತವಮುಂ ಗುರುಕುಲ
ಚೂಡಾಮಣಿ ಮಾದಿರಾಜನೊಸೆದೇಳ್ತಂದಂ ೫೨

ವ॥ ಅಂತೇಳ್ತಂದು ತನ್ಮಂದಿರವಮಂ ಪೊಕ್ಕು ನಿಂದು ನಿರೀಕ್ಷಿಸಿ—

ಏಗೆಯ್ದಪೆ ಮಗಳೇ ಪೊದ
ಳ್ದೀಗಳ್ನಿನ್ನಿನಿಯನೇಕೆ ಮುನಿದನೊ ಪೊಱಮ
ಟ್ಟೀ ಗುಣನಿಧಿ ನಟ್ಟಿರುಳೆ
ಮ್ಮಾಗಾರಕ್ಕೇಕೆ ಬಂದನೋ ಬಳಲುತ್ತುಂ ೫೩

ವ॥ ಎಂಬ ಗಂಭೀರ ಧ್ವನಿಯನಾ ಮಹಾದೇವಿ ಕೇಳ್ದು ಖನನಕ್ರಿಯೆಯನುಳಿದು ಭೀತಿ ವೆರಸಿ ಭಕ್ತಿಭರದಿನೆಜಗುವಂತೆ ತದಂಘ್ರಿಗೆಜಗಿ ಮಗುಳ್ದು ಮಗುಳ್ದು ಪೊಡವಡುತ್ತುಮಿರೆ ನಡುವನೆಗೆ ವಂದು ಕಂಭಮಂ ನೆಮ್ಮಿರ್ದ ಚಿಕ್ಕಮಾದಣ್ಣನಂಗಮಂ ಮಾದಿರಾಜನಚ್ಚರಿವೆತ್ತು ನಿಜಕೃಪಾಪೀಯೂಷಾರ್ದ್ರಕಟಾಕ್ಷದಿನಡರೆ ನೋಡಿ ಪೆಸರ್ಗೊಂಡು ಕರೆದು—

ಯನ್ನು ಮಾಡಿಕೊಳ್ಳುವವನು ನಾನಲ್ಲ. ತಪ್ಪದೆ ಹೀಗೆಂದು ನಾನು ತಿಳಿದಿರುವ ಈ ರೀತಿಯನ್ನು ನೀನೇ ತಿಳಿದಿದ್ದೀಯೆ ಬೇರೆ ಹೇಳುವುದಾದರೂ ಏನಿದೆ? ಹೇ ಕೃಪಾಸಾಗರನೇ, ಸಕಲಕ್ಕೂ ಈಶ್ವರನೇ, ನನ್ನ ದೇಹ, ಇಂದ್ರಿಯ, ಪ್ರಾಣಚಯಕ್ಕೆಲ್ಲ ನಿಜವಾಗಿ ನೀನೇ ಒಡೆಯನಾಗಿದ್ದೀಯೆ?' ಹೀಗೆಂದು ವಚನವನ್ನು ಹಾಡುತ್ತ, ಆ ಬಾಲಲಿಂಗನೊಡನೆ ತನ್ನ ಕಣ್ಣಿನ ಕೊನೆಯ ಕಾಂತಿಯು ತೀವ್ರವಾಗಿ (ಮುಸುಕಿದ) ಕತ್ತಲೆಯನ್ನು ಓಡಿಸುತ್ತಿರಲು. ಆ ಗುರುಕುಲ ಚೂಡಾಮಣಿಯಾದ ಸಕಳೇಶ ಮಾದರಸನು ಚಿಕ್ಕಮಾದಣ್ಣನ ಮನೆಗೆ ಹೊರಟು ಬಂದನು. ವ॥ ಆ ರೀತಿ ಹೊರಟು ಬಂದು ಅವನ ಮನೆಯನ್ನು ಪ್ರವೇಶಿಸಿ ನಿಂತು ನೋಡಿ—೫೩. 'ಮಗಳೇ ಹರ್ಷಗೊಂಡು ಏನು ಮಾಡತೊಡಗಿದ್ದೀಯೆ? ನಿನ್ನ ಗಂಡನೇಕೆ ಕೋಪಗೊಂಡನೋ? ಮನೆ ಬಿಟ್ಟು ಹೊರಟು ಈ ಸದ್ಗುಣಗಳ ನಿಧಿಯಾದ ಬಾಲಲಿಂಗನು ಸಂಕಟಪಟ್ಟು ಮಧ್ಯರಾತ್ರಿಯಲ್ಲಿ ನಮ್ಮ ಮನೇಗೇಕೆ ಬಂದನೋ? ವ॥ ಹೀಗೆಂಬ ಗಂಭೀರವಾದ ಧ್ವನಿಯನ್ನು ಆ ಮಹಾದೇವಿಯು ಕೇಳಿ, ನೆಲವನ್ನು ಅಗಿಯುವ ಕಾರ್ಯವನ್ನು ಬಿಟ್ಟು ಭಯದಿಂದ ಕೂಡಿದವಳಾಗಿ ಭಕ್ತಿಯ ಭಾರದಿಂದ ಬಾಗುವ ಹಾಗೆ ಆ ಮಾದರಸನ ಪಾದಗಳಿಗೆ ನಮಸ್ಕರಿಸಿ, ಪುನಃ ಪುನಃ ಅಡ್ಡ ಬೀಳುತ್ತಿರಲು, ನಡುಮನೆಗೆ ಬಂದು ಅಲ್ಲಿ ಕಂಬವನ್ನು ಆತುಕೊಂಡು ಕುಳಿತಿದ್ದ ಚಿಕ್ಕ ಮಾದಣ್ಣನ ಶರೀರವನ್ನು ಮಾದಿರಾಜನು ಆಶ್ಚರ್ಯಗೊಂಡು, ತನ್ನ ದಯಾರಸದಿಂದ ತುಂಬಿದ ಕಡೆಗಣ್ಣಿನಿಂದ ನೋಡಿ, ಹೆಸರು ಹಿಡಿದು ಕರೆಯುತ್ತ—

ಬಿಡು ನಿನ್ನ ಮುನಿಸನೇಳೇ
ಳ್ತಡವಿಲ್ಲದೆ ಚಿಕ್ಕಮಾದ ನೀನೆಂಬುದುಮಾ
ಗಡೆ ತೀವೆ ಜೀವಮೆಳ್ದವ
ರಡಿಯೊಳ್ಸ್ಯಗೆಡೆದು ದೇವ ಶರಣೆನುತಿರ್ದಂ ೫೪

ಮಕರಾಂಕಮಾನಹರಣ ಹಿ
ಮಕರಾಂಕ ಕಪರ್ದಿರೂಪ ಜಯ ಜಯ ಸತತಂ
ಸಕಳೇಪ್ಸಿತಪ್ರದಾಯಕ
ಸಕಳೇಶ್ವರ ಮಾದಿರಾಜ ನತಸುರಭೂಜಾ ೫೫

ದೇವೇಶ ದೇವ ನಿಮ್ಮಡಿ
ದಾವರೆಯುಂ ಕಂಡು ಧನ್ಯನಾದೆಂ ಶಿವ ಧ
ರ್ಮಾವಾಸನಾದೆನನುಪಮ
ಪಾವನಪದನಾದೆನಾದೆನಾನತಿಮಾನ್ಯಂ ೫೬

ವ॥ ಎಂದಿಂತು ನಿಜಭಕ್ತಿಯಿಂ ಪೊಗಳ್ದು ಪೊಡಮಟ್ಟು ತಚ್ಚರಣತಳಂಗಳಂ ಶಿರದೊಳ್ಪೊತ್ತು ಪೊರೆಯೇಱಿ ಮನೋರಮಣಿಯುಂ ನಂದನನುಂ ಬೆರಸು ಚಿಕ್ಕಮಾದಣ್ಣನನುಪಮಾನಂದದಿನಿರ್ಪಿನಮಲ್ಲಿ—

ನೆರೆನೆರೆದು ಪರಮ ಭಕ್ತ
ರ್ಪರಮೋತ್ಸವಮುಲರೆ ಮಾದಿರಾಜನ ಪಾದಾಂ
ಬುರುಹಕಭಿವಂದಿಸುತ್ತ
ಚ್ಚರಿವಡುತುಂ ನೋಡಿ ಸಂಭ್ರಮಂಗೊಳುತಾಗಳ್ ೫೭

ಕಾಲವ್ಯಾಲೇಭಪಂಚಾನನ ಕಲಿಕಲುಷಧ್ವಾಂತಮಾರ್ತಾಂಡ ದುರ್ದಾಂ
ತಾಲೀಕಾಲಾಪನಿರ್ವಾಪಕ ಪರತರ ಪಂಚಾಕ್ಷರಪ್ರಾಣ ಲಿಂಗ

೫೪. 'ಚಿಕ್ಕ ಮಾದಣ್ಣ, ನೀನು ನಿನ್ನ ಈ ಕೋಪವನ್ನು ಬಿಡು. ತಡಮಾಡದೆ ಮೇಲಕ್ಕೇಳು'. ಎನ್ನಲು ಆಗಲೇ ಜೀವತುಂಬಿ ಅವನು ಎದ್ದು ಆ ಮಾದಿರಾಜರ ಪಾದಗಳಲ್ಲಿ ಅಡ್ಡಬಿದ್ದು 'ದೇವ, ಶರಣು' ಎನ್ನುತ್ತಿದ್ದನು. ೫೫. ಮಕರ ಕೇತನನಾದ ಮನ್ಮಥನ ಗರ್ವವನ್ನು ನಾಶಮಾಡಿದವನೂ, ಚಂದ್ರಕಳಾದರನೂ, ಆದ ಪರಮೇಶ್ವರನ ಸ್ವರೂಪನೇ ಸತತವೂ ಸಕಲ ಇಷ್ಟಾರ್ಥಗಳನ್ನುಂಟು ಮಾಡುವವನೇ, ನಮಸ್ಕರಿಸಿದವರಿಗೆ ಕಲ್ಪವೃಕ್ಷ ಸಮಾನನಾದವನೇ, ಸಕಳೇಶ್ವರ ಮಾದರಸನೇ ಜಯ ಜಯ! ೫೬. 'ದೇವೇಶ, ದೇವನೇ, ನಿಮ್ಮ ಪಾದಕಮಲವನ್ನು ಕಂಡು, ಧನ್ಯನಾದೆನು; ವೀರಶೈವ ಧರ್ಮಕ್ಕಾಶ್ರಯನಾದವನಾದೆನು; ಉಪಮಾತೀತವಾದ ಪವಿತ್ರ ಸ್ಥಾನದಲ್ಲಿರುವವನಾದೆನು; ಅತ್ಯಂತ ಮನ್ನಣೆಗೆ ಯೋಗ್ಯನಾದೆನು.' ವ॥ ಈ ರೀತಿ ಅನ್ನುತ್ತ, ನೈಜವಾದ ಭಕ್ತಿಯಿಂದ ಹೊಗಳಿ, ನಮಸ್ಕಾರ ಮಾಡಿ, ಸಕಳೇಶ ಮಾದರಸರ ಪಾದತಳಗಳನ್ನು ತಲೆಯ ಮೇಲೆ ಧರಿಸಿ, ಸಂಭ್ರಮಗೊಂಡು, ಹೆಂಡತಿ ಮತ್ತು ಮಗನೊಡನೆ ಆ ಚಿಕ್ಕಮಾದಣ್ಣನು ಅನುಪಮವಾದ ಆನಂದದಲ್ಲಿ ಇರುತ್ತಿರುವಷ್ಟರಲ್ಲಿ—೫೭–೫೮. ಪರಮಭಕ್ತರ ಸಮೂಹವೆಲ್ಲ ಬಂದು ಬಂದು ಕೂಡಿತು. ಪರಮೋತ್ಸಾಹದಿಂದ ಅರಳಿಹೋದ

ವ್ಯಾಲಗ್ನಸ್ವಾಂತ ಚಿಂತಾರಹಿತ ಚಿದಮಿತಾನಂದ ನಿರ್ದ್ವಂದ್ವ ಪೂರ್ಣ
ಪ್ರಾಲೇಯಾಂಶುಪ್ರಭಾಪ್ರಸ್ಫುರಿತನುತಯಶೋಭಾಸಿ ಮಾದಾರ್ಯವರ್ಯಾ ೫೮

ತರಳಂ ನಟ್ಟಿರುಳೆಯ್ದಿ ದೇವ ಮುನಿದಂ ಮತ್ತಾತನೀ ಕಾಯ್ಪನೊ
ತ್ತರಿಸಲ್ನಿಮ್ಮಡಿಯೆಯ್ದುಗೆಂದ ನುಡಿಯಂ ಕೆಯ್ಕೊಂಡು ಕಾರುಣ್ಯದೆ
ಳ್ತರದಿಂ ಬಂದಸುವಿತ್ತು ನಿದ್ರಿತನನೇಳೆಂಬಂತಿರೇಳೇಳೆನು
ತ್ತಿರವೇಳ್ವಂತಿರೆ ಮಾಡಿದೈ ಮಝುರೆ ಶೈವಾಚಾರ್ಯಚೂಡಾಮಣೀ ೫೯

ಮುಗಿಲಿತ್ತೊಡೆ ಜೀವನಮಂ
ಮಿಗೆ ಪುರುಡಿಸಿ ನಿನ್ನಪಾಂಗರುಚಿ ಮಿಂಚುವ ಮಿಂ
ಚೊಗೆದಿತ್ತುದು ಜೀವನಮಂ
ಜಗದೊಳ್ಭಕ್ತಾಂಗಸಸ್ಯಕಮಳಚರಿತ್ರಾ ೬೦

ಗುರುಚರಹರಾಂಘ್ರಿಭಜನಮೆ
ನೆರೆದಪವರ್ಗಕ್ಕಮಾರ್ಗಮಳಂ ನಿಜಮೆಂಬೀ

ಅವರೆಲ್ಲರೂ ಸಕಳೇಶ ಮಾದರಸರ ಪಾದಕಮಲಗಳಿಗೆ ನಮಸ್ಕಾರಮಾಡುತ್ತ, ಆಶ್ಚರ್ಯಪಟ್ಟು ನೋಡುತ್ತ ಸಂಭ್ರಮಗೊಂಡು ಆಗ–ಯಮನೆಂಬ ಸೊಕ್ಕಿದ ಆನೆಗೆ ಸಿಂಹಸ್ವರೂಪನಾದವನೂ, ಕಲಿಕಾಲದ ಪಾಪವೆಂಬ ಕತ್ತಲೆಗೆ ಸೂರ್ಯಪ್ರಾಯನಾದವನೂ, ಇಂದ್ರಿಯನಿಗ್ರಹದ ವಿಷಯದಲ್ಲಿ ಅಸಮರ್ಥರಾದ ಅಸತ್ಯವಾದಿಗಳ ಮಾತನ್ನು ನಾಶಗೊಳಿಸುವವನೂ, ಪರಮಶ್ರೇಷ್ಠವಾದ ಪಂಚಾಕ್ಷರೀ ಮಂತ್ರವೇ ಪ್ರಾಣವಾಗಿ ಉಳ್ಳವನೂ, ಶಿವಲಿಂಗದಲ್ಲಿ ನಟ್ಟುಹೋದ ಮನಸ್ಸುಳ್ಳ, ಚಿಂತೆಯಿಂದ ದೂರನಾದ, ಅಮಿತವಾದ ಜ್ಞಾನಪ್ರಕಾಶದಲ್ಲಿ ಆನಂದಗೊಳ್ಳುವ, ದ್ವಂದ್ವಭಾವವಿಲ್ಲದ (ಶಿವನಲ್ಲಿ ಅಭಿನ್ನಭಾವದಿಂದಿರುವ) ಪೂರ್ಣಚಂದ್ರನ ಕಿರಣಗಳ ಪ್ರಭೆಯಂತೆ ಪ್ರಕಾಶಮಾನವಾದ ಶ್ಲಾಘ್ಯಯಶೋವಿಶೇಷದಿಂದ ಶೋಭಿಸುವ ಸಕಳೇಶ ಮಾದಾರ್ಯವರ್ಯಾ (ಎಂದು ಹೊಗಳುತ್ತಿದ್ದರು). ೫೯. ಚಿಕ್ಕಬಾಲಕನು ಮಧ್ಯರಾತ್ರಿಯಲ್ಲಿ ಹೋಗಿ, 'ದೇವ, ನನ್ನ ತಂದೆ ಕೋಪವನ್ನು ದೂರಮಾಡಲು ಪೂಜ್ಯಪಾದರಾದ ತಾವು ದಯಮಾಡಿಸಬೇಕು.' ಎಂದ ಮಾತನ್ನನುಸರಿಸಿ ಕಾರುಣ್ಯದ ಆಧಿಕ್ಯದಿಂದ ಬಂದು ಚಿಕ್ಕಮಾದಣ್ಣನಿಗೆ ಪ್ರಾಣವನ್ನಿತ್ತು, ನಿದ್ರೆಹೋದವನನ್ನು ಎಬ್ಬಿಸಿದ ಹಾಗೆ 'ಏಳೇಳು' ಎನ್ನುತ್ತ ಎಬ್ಬಿಸಿ ಜೀವಿಸುವಂತೆ ಮಾಡಿದೆ. ಶೈವಾಚಾರ್ಯರಲ್ಲಿ ಚೂಡಾಮಣಿಯಂತಿರುವವನೇ, ಭಾಪುರೇ ! (ಎನ್ನುತ್ತಿದ್ದರು) ೬೦. ಪರಿಶುದ್ಧ ಚರಿತ್ರೆಯುಳ್ಳ ಸಕಲೇಶ ಮಾದರಸನೇ, ಲೋಕದಲ್ಲಿ ಮುಗಿಲು ಮಳೆಯನ್ನು ಸುರಿಸುತ್ತದೆ. (ಅದರಿಂದ ಸಸ್ಯಗಳು ಬದುಕುತ್ತವೆ) ಅದರೊಡನೆ ಸ್ಪರ್ಧೆಯಿಂದ ನಿನ್ನ ಕಡೆಗಣ್ಣುಗಳ ಕಾಂತಿಯೆಂಬ ಮಿಂಚು ಮಿಂಚಿ ಭಕ್ತನ ಅಂಗವೆಂಬ ಸಸ್ಯಕ್ಕೆ ನೀರನ್ನು (ಜೀವನವನ್ನು) ಕೊಟ್ಟಿತು. ೬೧. ಸತ್ಪುರುಷರಾದ ಜನರಿಗೆ ಕಲ್ಪವೃಕ್ಷ ಪ್ರಾಯನಾದವನೇ, ಗುರುಗಳ ಜಂಗಮದ ಪಾದಗಳ ಭಜನೆಯೇ ಮೋಕ್ಷಕ್ಕಿಂತ

ಪರಿಯುಱುಪುವಂತೆ ಭಕ್ತನ
ಹರಣಮನೊಲ್ದಿತ್ತೆ ಶಿಷ್ಟಜನಮಂದಾರಾ ೬೧

ತರಳನ ನುಡಿಯೆನ್ನದೆ ನ
ಟ್ಟಿರುಳೆಯ್ದುತೆ ಭಕ್ತನಸುವನಿತ್ತೈ ಮಝು ಭಾ
ಪುರೆ ದಯೆಯದೆಂತೊ ಶಕ್ತಿಯ
ಪರಿಯೆನ್ನದೊ ಸೌಮ್ಯಗುಣಗಣಾಲಂಕರಣಾ ೬೨

ವ॥ ಎಂದು ಕೀರ್ತಿಸಿ ತದ್ಭಕ್ತಸೂನುವಂ ನೋಡಿ—

ಹರಕೃಪೆವಡೆದಳಿದಣುಗನ
ಹರಣಮನೆಲೆ ಪಡೆದರೊಳರಿಳಾತಳದೊಳಿವಂ
ತರುಣಂ ನಿಮ್ಮಯ ಕೃಪೆವಡೆ
ದಿರದಸುವಳಿದಾತ್ಮಜನಕನಸುವಂ ಪಡೆದಂ ೬೩

ಎಂದಿಂತೆಲ್ಲಾ ಗಣಂಗಳ್ಪೊಗಳೆ ನೆಗಳ್ದ ಮಾದಾರ್ಯನಂ ಕಂಡು ಬಂದಾ
ನಂದಂ ಪೆಂಪೇಱೆ ಭಕ್ತಂಗಸುವನೊಸೆದು ಕೊಟ್ಟಂಗಡೀ ದೇವನೆಂದೊ
ಳ್ಪಿಂದಂ ಕೊಂಡಾಡುತುಂ ಪಾಡುತೆ ಪದಕೆಱಗುತ್ತಲ್ಲಿ ಕಣ್ಗೊಪ್ಪುತಿರ್ದಂ
ಕಂದರ್ಪಾರಾತಿ ಭಕ್ತಪ್ರಕರಸುಖಕರಂ ಭಕ್ತಿಭಾವಾಭಿರಾಮಂ ೬೪

ನಿಜವಾಗಿಯೂ ಶ್ರೇಷ್ಠವಾದದ್ದು, ಎಂಬ ಈ ರೀತಿಯನ್ನು ತಿಳಿಸುವ ಹಾಗೆ ಭಕ್ತನ ಪ್ರಾಣವನ್ನು ಒಲಿದುಕೊಟ್ಟೆ. ೬೨. ಹೇ, ಶಾಂತಿಗುಣಗಳ ಸಮೂಹವೇ ಆಭರಣವಾಗಿ ಉಳ್ಳ ಮಾದರಸನೇ, ಚಿಕ್ಕಬಾಲಕನ ಮಾತೆಂದು ತಿಳಿಯದೆ (ಉದಾಸೀನ ಮಾಡದೆ) ಮಧ್ಯರಾತ್ರಿಯಲ್ಲಿ ಬಂದು ಭಕ್ತನ ಪ್ರಾಣವನ್ನು ಕೊಟ್ಟೆ. ಮಝು ಭಾಪುರೇ ! ನಿನ್ನ ದಯೆಯೂ, ಸಾಮರ್ಥ್ಯದ ರೀತಿಯೂ ಅದು ಎಂತಹುದೋ ! ವ॥ ಹೀಗೆಂದು ಶ್ಲಾಘಿಸಿ ಆ ಭಕ್ತನಾದ ಚಿಕ್ಕಮಾದಣ್ಣನ ಮಗನನ್ನು ನೋಡಿ—೬೩. ಭೂಲೋಕದಲ್ಲಿ ಸತ್ತ ಮಗನ ಪ್ರಾಣವನ್ನು ಪರಮೇಶ್ವರನ ಕೃಪೆಯನ್ನು ಪಡೆದು ಪಡೆದವರುಂಟು; ಈ ಬಾಲಕನು ನಿಮ್ಮ ಕೃಪೆಯನ್ನು ಪಡೆದು ತಪ್ಪದೆ ಸತ್ತುಹೋದ ತಂದೆಯ ಪ್ರಾಣವನ್ನು ಪಡೆದನು. ೬೪. ಇತ್ಯಾದಿಯಾಗಿ ಸಮಸ್ತ ಶಿವಗಣಗಳು ಹೊಗಳುತ್ತಿರಲಾಗಿ ಖ್ಯಾತಿವೆತ್ತ ಸಕಳೇಶ ಮಾದರಸರಲ್ಲಿಗೆ ಆ ಮನ್ಮಥ ವೈರಿಯೂ, ಭಕ್ತಸಮೂಹಕ್ಕೆ ಸುಖವನ್ನುಂಟುಮಾಡುವವನೂ, ಭಕ್ತಿಯೆಂಬ ಕಾಂತೆಯಿಂದ ಮನೋಹರನಾದವನೂ ಆದ ಬಸವೇಶ್ವರನು ಬಂದು ಕಂಡು, ಉತ್ಸಾಹಗೊಂಡು ಈ ದೇವನು ಭಕ್ತನಿಗೆ ಪ್ರೀತಿಯಿಂದ ಪ್ರಾಣದಾನ ಮಾಡಿದನಲ್ಲವೇ ! ಎಂದು ಮನೋಹರವಾಗಿ ಕೊಂಡಾಡುತ್ತ, ಹಾಡುತ್ತ ಅವನ ಪಾದಗಳಿಗೆ ನಮಸ್ಕಾರ ಮಾಡುತ್ತ ಅಲ್ಲಿ ಶೋಭಿಸುತ್ತಿದ್ದನು.

ಸಕಳೇಶ ಮಾದಿರಾಜ
ಪ್ರಕಟ ಮಹತ್ವಾಂಕ ಕಥೆಯನಿದನೋದುವ ಕೇ
ಳ್ವಕಳಂಕಚಿತ್ತರಹಿರಾ
ಜಕಟಕನೊಲವಿಂದೆ ಪಡೆವರಭಿಮತಸುಖಮಂ ೬೫

ವೀರಶೈವಮಹಾಮತಾಶ್ರಿತಭಕ್ತನಿರ್ಜರವಲ್ಲರೀ
ದಾರುಣಾಸುರರಾಜಿಭಂಜನಶಾತಬಾಣಧನುರ್ಧರೀ
ಮಾರಮರ್ದನಮಾನಸಾಂಬುಜರಾಜಹಂಸಿ ಶಿವಂಕರೀ
ವಾರಣಾನನಮಾತೆ ರಕ್ಷಿಪುದೆನ್ನನದ್ರಿಜೆ ಶಾಂಕರೀ ೬೬

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ

ಶ್ರೀಪಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್

ಮಾದಿರಾಜಕೃತ ಚಿಕ್ಕಮಾದಣ್ಣ ಪ್ರಾಣದಾನ ಕಥನಂ

ದ್ವಾತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೨ಕ್ಕೆ ಪದಗಣನೆ ೨೫೫೬ಕ್ಕೆ ಮಂಗಳಮಹಾಶ್ರೀ॥

೬೫. ಸಕಳೇಶ ಮಾದರಸರ ಪ್ರಖ್ಯಾತವಾದ ಮಹತ್ವವೇ ಗುರುತಾಗಿ ಉಳ್ಳ ಈ ಕಥೆಯನ್ನು ಓದುವ, ಕೇಳುವ, ಕಲ್ಮಷ ರಹಿತರಾದ ಚಿತ್ತವುಳ್ಳವರು ಪರಶಿವನ ಕೃಪೆಯಿಂದ (ಅಹಿಗಳ ರಾಜನಾದ ಆದಿಶೇಷನೇ ಕಿವಿಯ ಆಭರಣವಾಗಿ ಉಳ್ಳ ಪರಮೇಶ್ವರನ ಕೃಪೆಯಿಂದ) ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆಯುವರು. ೬೬. ವೀರಶೈವ ಮಹಾಮತವನ್ನು ಆಶ್ರಯಿಸಿದ ಭಕ್ತರಿಗೆ ಕಲ್ಪಲತೆಯಂತಿರುವವಳೂ, ಭಯಂಕರರಾದ ರಾಕ್ಷಸರ ಸಮೂಹವನ್ನು ನಾಶಮಾಡುವ ತೀಕ್ಷ್ಣವಾದ ಬಾಣ ಮತ್ತು ಬಿಲ್ಲುಗಳನ್ನು ಧರಿಸಿರುವವಳೂ, ಈಶ್ವರನ ಮನಸ್ಸೆಂಬ ಕಮಲಕ್ಕೆ ರಾಜಹಂಸಪಕ್ಷಿಯೆಂದೆನಿಸಿದವಳೂ, ಮಂಗಳವನ್ನುಂಟುಮಾಡುವವಳೂ, ಗಜಮುಖನ ತಾಯಿಯೂ ಪರ್ವತ ಪುತ್ರಿಯೂ ಆದ ಪಾರ್ವತಿಯೇ ನನ್ನನ್ನು ರಕ್ಷಿಸುವವಳಾಗು.

ಮೂವತ್ತೆರಡನೆಯ ಆಶ್ವಾಸವು ಸಮಾಪ್ತವಾಯಿತು.

# ತ್ರಯಸ್ತ್ರಿಂಶಾಶ್ವಾಸಂ

## [ಕದಿರ ರೇಮಯ್ಯನ ಕಥೆ]

ಶ್ರೀತುಹಿನಗಿರಿಸುತಾಮುಖ
ಶೀತಾಂಶುವಿಲೋಕನೋತ್ಸುಕಂ ಗುಣನಿಧಿ ವಿ
ಖ್ಯಾತಹರಿಮುಖ್ಯಸುಗಸಂ
ಜಾತಾರ್ಚಿತನೀಗೆ ಸೌಖ್ಯಮಂ ಶಿವಲಿಂಗಂ ೧

ಸುರುಚಿರ ಸುರಪುರದಿರವಂ
ಪರಿಭವಿಸೆ ನೆಗಳ್ತೆವೆತ್ತ ಕಲ್ಯಾಣದೊಳೊ
ಪ್ಪಿರುತಿರ್ಪನೊರ್ವನಭಿನವ
ಚರಿತಂ ಚರಲಿಂಗಚರಣಸರಸಿಜಭೃಂಗಂ ೨

ವಿತತಸಿತಕೀರ್ತಿ ವಿಶ್ರುತ
ಮತಿ ದಳಿತನತಾರ್ತಿ ದಾನನಿಧಿ ವಿದಿತಗುಣಾ
ನ್ವಿತನುರುಗುರುಚರಪೂಜಾ
ಚತುರಂ ಸಲೆ ಕದಿರ ರೇಮನೆಂಬ ಮಹಾತ್ಮಂ ೩

ವ॥ ಆ ಮಹಿಮನೊಲ್ದೊಂದು ದಿನಂ ಗುರುಚರಣದರ್ಶನಕ್ಕೆಂದು ಸಡಗರಂ ಮಿಗೆಪೊಳಲಂ ಪೊಱಮಟ್ಟು ಬರ್ಪಾಗಳೆಡೆವಟ್ಟೆಯೊಳೊಂದೂರಿರ ದೂರಾಂತರಾಳದೊಳ್ಕಂಡು ತನಗೆ ಹರಪೂಜಾ

### ಕದಿರ ರೇಮಯ್ಯನ ಕಥೆ

೧. ಮಂಗಳಕರಳಾದ ಹಿಮವಂತ ರಾಜನ ಕುಮಾರಿ ಪಾರ್ವತಿಯ ಮುಖವೆಂಬ ಚಂದ್ರನನ್ನು ನೋಡುವುದರಲ್ಲಿ ಉತ್ಸಾಹವುಳ್ಳವನೂ, ಗುಣಗಳಿಗೆ ನಿಧಿಯೂ, ವಿಖ್ಯಾತರಾದ ವಿಷ್ಣುವೇ ಮೊದಲಾದ ದೇವತಾ ಸಮೂಹದಿಂದ ಪೂಜಿಸಿಗೊಳ್ಳುವವನೂ ಶಿವಲಿಂಗನು ಸೌಖ್ಯವನ್ನುಂಟುಮಾಡಲಿ. ೨. ಮನೋಹರವಾದ ಇಂದ್ರನ ಅಮರಾವತಿಯನ್ನು ತಿರಸ್ಕರಿಸುವ ರೀತಿಯಲ್ಲಿ ಖ್ಯಾತಿವೆತ್ತ ಕಲ್ಯಾಣ ನಗರದಲ್ಲಿ ಜಂಗಮಂಗಲದ ಪಾದ ಕಮಲಗಳಲ್ಲಿ ಭೃಂಗದೋಪಾದಿಯಲ್ಲಿ ಒಬ್ಬ ನೂತನ ಚರಿತ್ರೆಯುಳ್ಳ (ಶರಣನು) ಒಪ್ಪಿ ಇರುತ್ತಿದ್ದನು. ೩. ವಿಸ್ತಾರವಾದ ಶುಭ್ರಕೀರ್ತಿಯಿಂದ ಪ್ರಖ್ಯಾತ ಬುದ್ಧಿಯುಳ್ಳವನೂ, ನಮಸ್ಕರಿಸಿದವರ ಮನೋವ್ಯಥೆಯನ್ನು ಕತ್ತರಿಸಿಹಾಕುವವನೂ, ದಾನಕ್ಕೆ ನಿಧಿರೂಪನೂ. ಪ್ರಖ್ಯಾತವಾದ ಸದ್ಗುಣಗಳಿಂದ ಕೂಡಿದವನೂ, ಗುರು-ಜಂಗಮರ ಪೂಜೆಯಲ್ಲಿ ಚತುರನೂ ಎನಿಸಿದ ಆ ಮಹಾತ್ಮನ ಹೆಸರು ಕದಿರ ರೇಮಯ್ಯನೆಂದು. ವ॥ ಆ ಮಹಿಮನು ಪ್ರೀತಿಯಿಂದ ಒಂದು ದಿವಸ ಗುರುವಿನ ಪಾದದರ್ಶನಕ್ಕೆಂದು, ವಿಶೇಷ ಸಡಗರದಿಂದ ಪಟ್ಟಣದಿಂದ ಹೊರಹೊರಟು ಬರುತ್ತಿರುವಾಗ ಮಾರ್ಗಮಧ್ಯದಲ್ಲಿ

ಸಮಯಮಾದುದಿದನುಲ್ಲಂಘಿಸಿ ಪೋಗೆ 'ಶಿವಾರ್ಚನಾತಿ ಕ್ರಮಣಂ ಮಹಾದೋಷಸ್ಯ ಕಾರಣಮೆ'ಂದು ಶಿವಾಗಮೋಕ್ತಿಯೊಳವಡಱಿನಿಲ್ಲಿ ಮಹಾದೋಷಂ ತಗುಳ್ಗುಮೆಂದವಧರಿಸಿ ನಡೆತಂದಾ ಪುರದೊಳಿರ್ಪ ಸೋಮನಾಥನೆಂಬ ಭಕ್ತನಂಗಣಮಂ ಪೊಕ್ಕು ತದಂಗನೆಯುಪ್ಪಣ್ಣಲದೇವಿ ಪಾದಪ್ರಕ್ಷಾಲನಂಗೆಯ್ಯೆ ಸಾದರಂ ತನ್ಮಂದಿರದೊಳಗಂ ಪುಗುತಂದಿಕ್ಕಿದ ಮೆ[1]ಲ್ವಸೆಯೊಳ್ಕುಳ್ಳಿರ್ದಾಗಳ್—

ಪಿರಿದುತ್ಸವದಿಂ ಕಂಡಾ
ದರದಿಂ ನಿಜತನಯ ಮಲ್ಲಿನಾಥಸಮೇತಂ
ಗುರುವರನ ವಿಮಳ ಪದಸರ
ಸಿರುಹಕ್ಕಾ ಸೋಮನಾಥಭಕ್ತಂ ಮಣಿದಂ ೪

ವ॥ ಅಂತು ಮಣಿದೆಳ್ದು ನಿಂದು ಭಯಭಕ್ತಿಯಿಂ ಕರಾಂಜಲಿವೆರಸು ಕೀರ್ತಿಸುತ್ತು ಮಿರ್ಪಿನಮಲ್ಲಿ ಸಡಗರದಿನಣ್ಣಲದೇವಿ ಸಾಂಗಮೆನೆ ಲಿಂಗಾರ್ಚನಂಗೆಯ್ಸಿ ನೈವೇದ್ಯಮಂ ಭಕ್ತಿಮಿಗೆ ಗಡಣಿಸಲೊಡನೆ—

ನಲಿದರ್ಪಿಸಿ ರೇಮಾರ್ಯಂ
ಸ್ವಲಿಂಗದೇವಂಗೆ ಸವಿದು ತಾನುಳಿಪಿದ ನಿ
ರ್ಮಲಸುಪ್ರಸಾದಮಂ ಮನ
ದೊಲವಿಂ ಕೆಯ್ಕೊಂಡನೆಱಗಿ ಮಗುಳ್ದವರಡಿಯೊಳ್ ೫

ಒಂದು ಊರು ಇತ್ತು. ಆ ಊರನ್ನು ದೂರದಿಂದಲೇ ಕಂಡು, ನನಗೆ ಲಿಂಗಪೂಜಾ ಸಮಯವಾಯಿತು. ಈ ಕಾಲವನ್ನು ಅತಿಕ್ರಮಿಸಿಹೋದರೆ, 'ಶಿವಾರ್ಚನೆಯನ್ನೂ ಅತಿಕ್ರಮಣಮಾಡುವುದು ಮಹಾದೋಷಕ್ಕೆ ಕಾರಣ' ವೆಂದು ಹೇಳಿದ ಶಿವಾಗಮ ವಚನವನ್ನು ಉಲ್ಲಂಘಿಸಿದಂತಾಗುವುದು. ಆದ್ದರಿಂದ ಇಲ್ಲಿ ಮಹಾ ದೋಷವು ನನಗೆ ಉಂಟಾಗುವುದು ಎಂದು ನಿರ್ಧರಿಸಿದವನಾಗಿ ನಡೆದು ಬಂದು ಆ ಊರಿನಲ್ಲಿರುವ ಸೋಮನಾಥನೆಂಬ ಭಕ್ತನೊಬ್ಬನ ಮನೆಯ ಅಂಗಳವನ್ನು ಪ್ರವೇಶಿಸಿದ್ದನು, ಆ ಸೋಮನಾಥನ ಹೆಂಡತಿಯಾದ ಅಣ್ಣಲದೇವಿಯು (ಈ ಕದಿರ ರೇಮಯ್ಯನ) ಪಾದಗಳನ್ನು ತೊಳೆದಳು. ಆದರಪೂರ್ವಕವಾಗಿ ಆ ಮನೆಯೊಳಕ್ಕೆ ಪ್ರವೇಶಿಸಿ ತಂದು ಹಾಕಿದ ಮೆತ್ತನೆಯ ಆಸನದಲ್ಲಿ ಕುಳಿತು ಆಗ—೪. ಆ ಸೋಮನಾಥನೆಂಬ ಭಕ್ತನು ತನ್ನ ಮಗನಾದ ಮಲ್ಲಿನಾಥ ಸಮೇತವಾಗಿ ಅತ್ಯಂತ ಸಂತೋಷದಿಂದ ಕಂಡು, ಆ ಗುರುಶ್ರೇಷ್ಠನ ಪವಿತ್ರವಾದ ಕಮಲಗಳಿಗೆ ನಮಸ್ಕಾರ ಮಾಡಿದನು. ವ॥ ಆ ರೀತಿ ನಮಸ್ಕರಿಸಿ ಮೇಲಕ್ಕೆದ್ದು ನಿಂತು, ಭಯ ಭಕ್ತಿಯಿಂದ ಕೈಮುಗಿದು ಸ್ತೋತ್ರ ಮಾಡುತ್ತಿರುವಾಗ ಅಲ್ಲಿ ಅಣ್ಣಲ ದೇವಿ ಯಥಾಸಾಂಗವಾಗಿ (ಅವರ) ಲಿಂಗಾರ್ಚನೆಯನ್ನು ಮಾಡಿಸಿ, ನೈವೇದ್ಯವನ್ನು ವಿಶೇಷ ಭಕ್ತಿಯಿಂದ ಜೋಡಿಸಿಡಲು ಒಡನೆಯೇ—೫. ಕದಿರ ರೇಮಾರ್ಯನು ತನ್ನ ಇಷ್ಟಲಿಂಗ ದೇವನಿಗೆ ಪ್ರೀತಿಯಿಂದ ಸಮರ್ಪಣೆಮಾಡಿ, ತಾನು ಊಟ ಮಾಡಿ, ಉಳಿಸಿದ ನಿರ್ಮಲವಾದ ಸುಪ್ರಸಾದವನ್ನು ಆ ಸೋಮನಾಥನು ಅವರ ಪಾದಗಳಲ್ಲಿ ನಮಸ್ಕಾರ ಮಾಡಿ

---

1 ಮೆ:(ಮೂ, ಗ)

ವ॥ ಅಂತುಮಾ ಮಹಾಪ್ರಸಾದಮಂ ಕೆಯ್ಕೊಂಡು ತನ್ನರಸಿಯಣುಗರ್ವೆರಸಿ ಸವಿದ ನಂತರಮಾ ಕದಿರ ರೇಮಯ್ಯನಿಂ ಶಿವತತ್ತ್ವಾನುಭಾವಮಂ ಬೆಸಗೊಂಡು ಕೇಳ್ದು ಕೃತಾರ್ಥಭಾವಮಂ ತಾಳ್ದಿರ್ದನಾಗಳ್—

ಎಳೆಯಂ ರೇಮಯ್ಯನ ಪದ
ತಳಕೆಱಗುವನೊಲ್ದು ನೋಡುವಂ ನಗುವಂ ಕಂ
ಗಳ ಮುಗಿವನಲರ್ಚುವನ
ಪ್ಪಳಿಪಂ ಸುಳಿಸುಳಿದು ಸುತ್ತುವಂ ಸಡಗರಿಪಂ ೬

ಅಂಗುಟಮಂ ಪಿಡಿದಲುಗುವ
ನಂಗುಲಿಯಿಂ ಕರದಿನೊತ್ತುವಂ ಪದತಳಮಂ
ಮುಂಗಡೆಯೊಳಾಡುವಂ ಮು
ದ್ದಿಂಗೆಡೆಯೆಂದೆನಿಸಿ ಬಿನದಿಪಂ ಪುಟನೆಗೆವಂ ೭

ಎಲೆ ಬೊಪ್ಪ ನೋಳ್ಪುದಯ್ಯನ
ನಿಲವಂ ನೀನೆಂದು ತೋಱುವಂ ಕರತಳದಿಂ
ನಲಪೆರ್ಚುವನತ್ತಿತ್ತಂ
ತೊಲಗಂ ಪೆಱತೊಂದನೆಳಸದಿಂತೆಸೆವಾಗಳ್ ೮

ವ॥ ಕದಿರ ರೇಮಯ್ಯನಾ ಕುವರನ ನಚ್ಚಿನ ಬಿನದಕ್ಕೆ ಬಗೆವೆತ್ತು ನೋಡಿ ಮುದ್ದುಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ—

ಸಂತೋಷಗೊಂಡವನಾಗಿ ಸ್ವೀಕರಿಸಿದನು. ವ॥ ಆ ರೀತಿ ಆ ಮಹಾಪ್ರಸಾದವನ್ನು ತಾನು ತಕ್ಕೊಂಡು ತನ್ನ ಹೆಂಡತಿ ಮಕ್ಕಳೂ ಒಡನೆಯೇ ಸ್ವೀಕಾರಮಾಡಿದನಂತರ ಆ ಕದಿರ ರೇಮಯ್ಯನಿಂದ ಶಿವತತ್ತ್ವದ ಅನುಭಾವವನ್ನು ಅಪ್ಪಣೆ ಮಾಡಬೇಕೆಂದು ಕೇಳಿ ಪಡೆದು ಕೃತಾರ್ಥತೆಯ ಭಾವವನ್ನು ಹೊಂದಿದನು, ಆಗ—೬-೭. ಬಾಲಕನಾದ ಮಲ್ಲಿನಾಥನು ರೇಮಯ್ಯನ ಕಾಲಿಗೆ ನಮಸ್ಕರಿಸುವನು; ಪ್ರೀತಿಯಿಂದ ನೋಡುವನು ; ನಗುವನು ; ಕಣ್ಣುಗಳನ್ನು ಮುಚ್ಚುವನು; ಅಪ್ಪಳಿಸುವನು ; ಸುಳಿಸುಳಿದು ಸುತ್ತಾಡುವನು; ಸಂಭ್ರಮಗೊಳ್ಳುವನು ; ಹೆಬ್ಬೆರಳನ್ನು ಹಿಡಿದು ಅಲುಗಾಡಿಸುವನು ; ಬೆರಳುಗಳಿಂದ, ಕೈಗಳಿಂದ ಕಾಲುಗಳನ್ನು ಒತ್ತುವನು ; ಮುಂಭಾಗದಲ್ಲಿ ಆಟವಾಡುವನು; ಪುಟನೆಗೆಯುವನು, ಹೀಗೆ (ಪ್ರೀತಿಗೆ ಇದೊಂದು ಸ್ಥಾನವೋ ಎನ್ನುವಂತೆ) ಆ ರೇಮಯ್ಯನನ್ನು ವಿನೋದಗೊಳಿಸುವನು. ೮. 'ಎಲೆ ಅಜ್ಜ, ನೀನು ನಮ್ಮಪ್ಪನ ನಿಲುವನ್ನು ನೋಡು' ಎಂದು ತನ್ನ ತಂದೆಯನ್ನು ಕೈಮಾಡಿ ತೋರಿಸುವನು, ಸಂತೋಷವನ್ನು ಅಧಿಕಗೊಳಿಸುವನು, ಅತ್ತಿತ್ತ ಅಗಲಿ ಹೋಗುತ್ತಿರಲಿಲ್ಲ ; ಬೇರೊಂದೇನನ್ನೂ ಇಚ್ಛಿಸುತ್ತಿರಲಿಲ್ಲ–ಹೀಗೆ ಶೋಭಿಸುತ್ತಿರುವಾಗ– ವ॥ ಕದಿರ ರೇಮಯ್ಯನು ಆ ಬಾಲಕನ ವಿಶ್ವಾಸಪೂರ್ಣವಾದ ವಿನೋದಕ್ಕೆ ಸಂತೋಷಗೊಂಡು ನೋಡಿ ಮುದ್ದು ಮಾಡಿ ಮುಂಡಾಡಿ ಮೈಯನ್ನು

ಮುನ್ನೆಂದುಮಱಿಯದೀ ಮಗು
ವೆನ್ನೊಳ್ಶಿನದಿಪುದು ಚಿತ್ರಮೆನುತುಂ ಗುಣಸಂ
ಪನ್ನಂ ಮಚ್ಚುತೆ ಮನದೊಲ
ವಿನ್ನಗುತುಂ ನಲಿವುತಿರ್ಪ ಸುಮುನಂತರದೊಳ್ ೯

ಅಣ್ಣಲದೇವಿ ಲಿಂಗಯಜನೋಚಿತ ವಸ್ತುವನೀಯೆ ನಲ್ಮೆಯಿಂ
ಬಣ್ಣಿಸಿ ಪಾಡುತುಂ ಶಿವಸಮರ್ಚನೆಗೆಯ್ದು ಶಿವಪ್ರಸಾದಮಂ
ಪಣ್ಣನೆ ಭಕ್ತಿಯಿಂ ಸವಿದು ಶೇಷಮನಿತ್ತನವರ್ಗೆ ರೇಮಯುಂ
ಚಿಣ್ಣನುಮಾತ್ಮಮಾತೆಯೊಡನಾ ಗುರುಶೇಷಮನುಂಡನಳ್ಕಱಿಂ ೧೦

ವ॥ ಅಂತುಮಾ ಮೂವರುಂ ಗುರುಪ್ರಸಾದಮಂ ಸೇವಿಸಿ ಧನ್ಯಭಾವಂಬಡೆದು ಮಗುಳ್ದು ಪೊಡಮಡಲೊಡನೆ ನಿಜ ಕಾರುಣ್ಯಮಂ ಬೀಱಿ—

ಎಲೆ ಸೋಮನಾಥ ಗುರುಪುರಿ
ಗೊಲವಿಂದಾಂ ಪೋಗಿ ಬರ್ಪೆನಂತಿರು ನೀನೆಂ
ದಲಘುಮತಿ ಸಂತಮಿರಿಸುತೆ
ವಿಲಾಸದಿಂ ದೇಶಿಕೇಂದ್ರಪುರಿಗೇಳ್ತಂದಂ ೧೧

ಪರಮಾನಂದದಿನಾ ಗುರು
ವರನಂ ಕಂಡಳ್ಕಱಿಂದೆ ಮೆಯ್ಯಿಕ್ಕಿ ಕೃಪಾ

ಸವರುತ್ತ ಮನ್ನಣೆಗೊಳಿಸಿ–೯-೧೦. 'ಈ ಪೂರ್ವದಲ್ಲಿ ಎಂದೂ ನನ್ನನ್ನು ಈ ಮಗುವು ತಿಳಿದುದಲ್ಲ; (ಈಗ) ನನ್ನಲ್ಲಿ ಈ ರೀತಿ ವಿನೋದಗೊಳಿಸುವುದು ವಿಚಿತ್ರವಾಗಿದೆಯಲ್ಲಾ! ಎನ್ನುತ್ತ ಆ ಸದ್ಗುಣ ಸಂಪನ್ನನಾದ ರೇಮಯ್ಯನು ಮೆಚ್ಚುತ್ತ, ಮನಸಂತೋಷದಿಂದ ನಗುತ್ತ ನಲಿದಾಡುತ್ತಿರುವ ಸ್ವಲ್ಪ ಸಮಯದ ನಂತರ ಅಣ್ಣಲದೇವಿಯು ಲಿಂಗಪೂಜಾ ಯೋಗ್ಯವಸ್ತುಗಳನ್ನು ಕೊಡಲಾಗಿ ಪ್ರೀತಿಯಿಂದ ಬಣ್ಣಿಸಿ ಹಾಡುತ್ತ ಶಿವಪೂಜೆಯನ್ನು ಮುಗಿಸಿ, ಶಿವ ಪ್ರಸಾದವನ್ನು ಭಕ್ತಿಯಿಂದ ಕ್ರಮವಾಗಿ ಸ್ವೀಕಾರ ಮಾಡಿ, ರೇಮಯ್ಯನು ಅವರಿಗೆ ಶೇಷಪ್ರಸಾದವನ್ನು ಕೊಟ್ಟನು. ಹೀಗೆ ಕೊಟ್ಟ ಗುರುವಿನ ಶೇಷಪ್ರಸಾದವನ್ನು ಚಿಣ್ಣನು ತನ್ನ ತಾಯಿಯೊಡನೆ ಪ್ರೀತಿಯಿಂದ ಊಟ ಮಾಡಿದನು. ವ॥ ಹೀಗೆ ತಂದೆ ತಾಯಿಯರೂ ಮಗನೂ ಈ ಮೂವರೂ ಗುರುಪ್ರಸಾದವನ್ನು ಸೇವನೆ ಮಾಡಿ, ಧನ್ಯರಾಧೆವೆಂಬ ಭಾವನೆಯನ್ನು ಹೊಂದಿ, ಪುನಃ ನಮಸ್ಕಾರ ಮಾಡಲಾಗಿ (ಆ ಗುರುವು) ಅವರ ಮೇಲೆ ತನ್ನ ಕಾರುಣ್ಯವನ್ನು ಬೀರಿದನು. ಆಗ—೧೧. 'ಎಲೈ ಸೋಮನಾಥನೇ, ಗುರುವಿನ ಪಟ್ಟಣಕ್ಕೆ ನಾನು ಪ್ರೀತಿಯಿಂದ ಹೋಗಿಬರುತ್ತೇನೆ. ನೀನು ಈ ರೀತಿಯಲ್ಲಿ ಇರು.' ಎಂದು ಆ ಶ್ರೇಷ್ಠಮತಿಯುಳ್ಳ ರೇಮಯ್ಯನು ಅವನನ್ನು ಸಮಾಧಾನಪಡಿಸಿ, ಸಂಭ್ರಮದಿಂದ ತನ್ನ ಗುರುಶ್ರೇಷ್ಠನ ಪಟ್ಟಣಕ್ಕೆ ಹೊರಟುಬಂದನು. ೧೨–೧೩. ಪರಮಾನಂದದಿಂದ ಆ ಗುರುಶ್ರೇಷ್ಠನನ್ನು ಕಂಡು ಅಕ್ಕರೆಯಿಂದ ಸಾಷ್ಟಾಂಗ ನಮ

ಕರ ಜಯ ಜಯ ಶರಣಾಗೆನು
ತುರುತರ ನಿಜಭಕ್ತಿಭಾವದಿಂ ಕೀರ್ತಿಸುತಂ ೧೨

ಜಲ ಗಂಧಾಕ್ಷತೆ ಪುಷ್ಪ ಧೂಪ ವಿಳಸದ್ದೀಪಾರ್ಪಣಂಗೆಯ್ದು ಮುಂ
ಜುಲ ನೈವೇದ್ಯ ಸುಗಂಧವೀಟಿಕೆಯನಿತ್ತೋರಂತೆ ಕೆಯ್ಗೆಯ್ದುನ್ನತು
ಜ್ವಲರತ್ನಾಭರಣಂಗಳಿಂ ಗುರುಪದಾಂಭೋಜಾತಮಂ ಪೂಜಿಸು
ತ್ತೊಲವಿಂ ತತ್ಕೃಪೆವೆತ್ತು ತನ್ಮಠದೊಳಿರ್ದಂ ಭಕ್ತಿಭಾಗ್ಯಾನ್ವಿತಂ ೧೩

ವ॥ ಅನ್ನೆವರಮಿತ್ತಲ್—

ಮಲ್ಲಿನಾಥನ ಮಾತೆ ಜಂಗಮವೃಂದಮೇಳ್ತರೆ ಮಂದಿರ
ಕ್ಕಲ್ಲಿ ವಂದಿಸುತಂಘ್ರಿಯಂ ತೊಳೆದೊಲ್ದು ಕುಳ್ಳಿರಿಸುತ್ತೆ ತ
ತ್ಪಲ್ಲವಾಧರೆ ಪಾಕಮಂ ಸಮೆಯಲ್ಕೆ ಕಾಷ್ಠಮನಾಯ್ದುತಂ
ದಲ್ಲದಾಗದೆನುತ್ತೆ ನಂದನನೆಯ್ದೆ ಪೀದೆ ವಿಳಾಸದಿಂ ೧೪

ಬಂದು ಪಿತ್ತಿಲನೆಯ್ದೆ ಪೊಕ್ಕಡುಗರ್ಬನೀಕ್ಷಿಸುತಾಯ್ವ ಪೊ
ಳ್ತೊಂದು ಚಂದನಕಾಷ್ಠಮಂ ಸುತನೆತ್ತೆ ತಾಂ ಕೆಳಗಿರ್ದ ಭು
ಸ್ಸೆಂದು ಪಲ್ಮೊರೆದೆಳ್ದು ಘೋರವಿಷಾತಿಭೀಷಣಸರ್ಪನಾ
ಕಂದನಂ ಪಿಡಿದೊತ್ತಿ ಕರ್ಚಿದುದುರ್ಚೆ ಪಲ್ಮೊನೆ ಪಾಯ್ವಿನಂ ೧೫

ಸ್ಕಾರಮಾಡಿ, 'ಕೃಪಾಕರನೇ, ಜಯಜಯ-ರಕ್ಷಿಸು' ಎನ್ನುತ್ತ ಅತ್ಯಂತ ಭಕ್ತಿಭಾವದಿಂದ ಸ್ತೋತ್ರ ಮಾಡುತ್ತ ಭಕ್ತಿ ಭಾಗ್ಯದಿಂದ ಕೂಡಿದ ರೇಮಯ್ಯನು—ನೀರು-ಗಂಧ-ಅಕ್ಷತೆ—ಪುಷ್ಪಧೂಪ—ಪ್ರಕಾಶಿಸುವ ದೀಪಾದಿಗಳನ್ನು ಸಮರ್ಪಣೆ ಮಾಡಿ ಮನೋಹರವಾದ ನೈವೇದ್ಯ, ಸುಗಂಧಮಿಶ್ರಿತ ತಾಂಬೂಲವನ್ನು ಕೊಟ್ಟು ಕ್ರಮವಾಗಿ ಉಜ್ವಲವಾದ ರತ್ನಾಭರಣಗಳಿಂದ ಅಲಂಕಾರಗೊಳಿಸಿದನು. ಗುರುವಿನ ಪಾದ ಕಮಲಗಳನ್ನು (ಈ ರೀತಿ) ಪೂಜಿಸುತ್ತ ಒಲುಮೆಯಿಂದ ಅವರ ಕೃಪಾ ವಿಶೇಷವನ್ನು ಪಡೆದು ಅವರ ಮಠದಲ್ಲಿ ಇರುತ್ತಿದ್ದನು. ವ॥ ಅಷ್ಟರಲ್ಲಿ ಇತ್ತಕಡೆಗೆ—೧೪. ಮನೆಗೆ ಜಂಗಮ ಸಮೂಹವು ಬರಲಾಗಿ ಬಾಲಕನಾದ ಮಲ್ಲಿನಾಥನ ತಾಯಿಯು ಬಂದ ಆ ಜಂಗಮರಿಗೆ ನಮಸ್ಕಾರ ಮಾಡಿ, ಪಾದಗಳನ್ನು ತೊಳೆದು ಪ್ರೀತಿಯಿಂದ ಕುಳ್ಳಿರಿಸಿದಳು. ಪಲ್ಲವದಂತೆ ತುಟಿಗಳುಳ್ಳ ಆ ಸ್ತ್ರೀಯು(ಬಂದ ಜಂಗಮರಿಗೋಸುಗ) ಅಡಿಗೆಯನ್ನು ಮಾಡುವುದಕ್ಕೆ ಕಟ್ಟಿಗೆ (ಸೌದೆ) ಯನ್ನು ತಂದಲ್ಲದೆ ಆಗದು ಎನ್ನುತ್ತ ಮನೆಯ ಹಿಂಭಾಗಕ್ಕೆ ಸಂಭ್ರಮದಿಂದ ಬಂದಳು. ಜೊತೆಗೆ ಬಾಲಕನೂ ಬಂದನು.—೧೫. ಹೀಗೆ ಬಂದು ಹಿತ್ತಿಲನ್ನು ಹೊಕ್ಕು, ಸೌದೆಯನ್ನು ನೋಡಿ ಆರಿಸುವ ಸಮಯದಲ್ಲಿ, ಬಾಲಕನು ಒಂದು ಚಂದನದ ಕಟ್ಟಿಗೆಯನ್ನು ಹಿಡಿದೆತ್ತಿದನು. ಆಗ ಅದರ ಕೆಳಗಿದ್ದ ಘೋರವಾದ ಅತ್ಯಂತ ವಿಷದಿಂದ ಭಯಂಕರವಾದ ಸರ್ಪವೊಂದು ಭುಸ್ಸೆಂದು ಹಲ್ಲು ಮೊರೆಯುತ್ತ ಮೇಲಕ್ಕೆದ್ದು, ಆ ಬಾಲಕನನ್ನು ಹಿಡಿದು ಒತ್ತಿ ಹಲ್ಲಿನ ಮೊನೆಗಳು ನಾಟಿ ಪಾರಾಗುವ ಹಾಗೆ ಕಚ್ಚಿತು.

ವ॥ ಅಂತು ತನ್ನನಗಿದ ಭೀಕರಾಹಿಯಂನಾ ಕುಮಾರಂ ಕಂಡಗಿದು ಜನನಿಯಂ ಬೆದರ್ದ ಕಂಗಳಿಂ ನೋಡಿ —

ತಾಯೆ ಕಡೆದೊಲಗು ಬಾರದಿ
ರೀಯೆಡೆಗಹಿಯಿರ್ದುದೀದುದಕಟಕಟೆನ್ನಂ
ನೋಯಿಸಿ ಕಡಿದುದೆನುತ್ತುಂ
ಬಾಯಳಿದಾ ಬಾಲನುಸುರ್ದು ಪಳಯಿಸುತಿಳೆಯೊಳ್ ೧೬

ಪಡಲಿಟ್ಟು ಫಣಿಯ ವಿಷದುರಿ
ಯುಡರೆ ಕರಂ ಮುಗುಳೆ ಕಣ್ಗಳಳವಳಿದಸುವಂ
ಬಿಡೆ ಮಲ್ಲಿನಾಥನವನಂ
ಮೃಡಭಕ್ತೆ ನಿರೀಕ್ಷಿಸುತ್ತೆ ಸಾರ್ಕೆಯೊಳಾಗಳ್ ೧೭

ಸುಗಿದಳೆ ಸುಯ್ದಳೇ ತನಯ ಹಾ ಸುತ ಹಾ ಸುಕುಮಾರ ಹಾಯೆನು
ತ್ತುಗಿದಳಲಿಂದೆ ರೋದಿಸಿದಳೇ ಬಗೆಗುಂದಿದಳೇ ಬಳಲ್ದಳೇ
ಮಿಗೆ ಕಱಗುಂದಿ ಕುಂದಿದಳೆ ಪೆರ್ಚಿದ ಬೇವಸದಿಂ ಬೆಳರ್ತು ಬೆಂ
ಡೊಗೆದಳೆ ಕಂದ ಕೆಟ್ಟೆನಕಟೆಂತೆನಗೆಂದು ವಿಷಾದಮಾಂತಳೇ ೧೮

ಅಣುಗು ಫಣಿಯಿಂ ಮಡಿದು
ಗುಣನಿಧಿಯೇಗೆಯ್ವೆನೆಂದು ಪಳಯಿಸಿದಳೆ ತ
ಲ್ಲಣಿಸಿ ಮಱುಗಿದಳೆ ಧೈರ್ಯದ
ಕಣಿ ಕಣ್ಬನಿಗಱೆದು ತಾಪಮಂ ತಾಳ್ದಿದಳೇ ೧೯

ವ॥ ಆ ರೀತಿ ತನ್ನನ್ನು ಕಡಿದ ಭಯಂಕರ ಹಾವನ್ನು ಆ ಕುಮಾರನು ಕಂಡು ಹೆದರಿ ತಾಯಿಯನ್ನು ಬೆದರಿದ ಕಣ್ಣುಗಳಿಂದ ನೋಡುತ್ತ.—೧೬-೧೮ ಅಮ್ಮಾ, ದೂರಕ್ಕೆ ಸರಿದು ಹೋಗು ! ಈ ಕಡೆಗೆ ಬರಬೇಡ. ಹಾವಿದೆ ! ಹಾವಿದೆ ! ಅಕಟಕಟ !! ನನ್ನನ್ನು ನೋಯಿಸಿ ಕಡಿಯಿತು. ಎನ್ನುತ್ತ ಬಾಯಿಬಿಟ್ಟು ಆ ಕುಮಾರನು ಹೇಳಿ ಪ್ರಲಾಪಿಸುತ್ತ ಭೂಮಿಯ ಮೇಲೆ ಬಿದ್ದು, ಹಾವಿನ ವಿಷದ ಉರಿಯು ಏರಲಾಗಿ ಕಣ್ಣುಗಳನ್ನು ಮುಚ್ಚಿ ಸಂಕಟಪಟ್ಟು ಆ ಮಲ್ಲಿನಾಥನು ಪ್ರಾಣವನ್ನು ಬಿಟ್ಟನು. ಹೀಗೆ ಪ್ರಾಣ ಬಿಟ್ಟ ಮಗನನ್ನು ಆ ಶಿವಭಕ್ತೆಯಾದ ಅಣ್ಣಲ ದೇವಿಯು ಸಮೀಪಕ್ಕೆ ಬಂದು ನೋಡುತ್ತ ಹೆದರಿದಳೇ ? ನಿಟ್ಟುಸಿರು ಬಿಟ್ಟಳೇ ? ಮಗನೇ ಹಾ ! ಸುತನೇ ಹಾ ! ಸುಕುಮಾರಾ ಹಾ ! ಎನ್ನುತ್ತ ಹೆದರಿ ಸಂಕಟದಿಂದ ಅತ್ತಳೇ ? ಧೈರ್ಯಗುಂದಿದಳೇ ? ಬಳಲಿದಳೇ ? ಕಪ್ಪಿಟ್ಟು ಕುಂದಿದಳೇ? ವಿಶೇಷವಾದ ಸಂಕಟದಿಂದ ಬೆಳ್ಳಗಾಗಿ ಬೆಂಡಾದಳೇ ? ಅಕ್ಕಟ ! ಕಂದಾ ಕೆಟ್ಟೆನು, ನನಗೆ ಇನ್ನೆಂತು ಎಂದು ವಿಷಾದಗೊಂಡಳೇ ? ೧೯. ಗುಣಗಳಿಗೆ ನಿಧಿಯೆನಿಸಿದ ನನ್ನ ಮಗನು ಹಾವಿನ ಕಡಿತದಿಂದ ಸತ್ತನು. ಇನ್ನೇನು ಮಾಡಲೆಂದು ಪ್ರಲಾಪಿಸಿದಳೇ ? ಸಂಕಟದಿಂದ ಮರುಗಿದಳೇ ? ಧೈರ್ಯದ ಗಣಿಯೆನಿಸಿದ ಅವಳು ಕಣ್ಣೀರು

ಆಕಟೆಂತು ಮಡಿಪಿದಂ ಗಡ
ಸುಕುಮಾರನನಭವನೆಂದು ನೊಂದಳೆ ಮಡಿದ
ರ್ಭಕನಸುವನೀವುದೆಲೆ ಭ
ಕ್ತಕದಂಬಮೆ ತಳ್ವದೆಂದು ಪಂಬಲಿಸಿದಳೇ ೨೦

ಹರ ನಿಮ್ಮಂಘ್ರಿಯ ಪೂಜೆಗೆಯ್ದುಂ ಮಳಿವಂತಾಯ್ತಾತ್ಮಜಂಗೆಂದಳ
ಲ್ಪಿರಿದಾಗುತ್ತಿರೆ ಸುಯ್ದಳೇ ಗುರುಗಳಿಂ ಮುಂಮಂತ್ರಿಸಲ್ಬಾಳ್ವನೀ
ತರುಣಂ ತಾನೆನುತುಂ ಪಲುಂಬಿದಳೆ ಪುತ್ರಂ ಬಾಳ್ವವೋಲ್ಮಾಡಿರೇ
ಶರಣರ್ತೇರಸಷೋಡಶರ್ಭಜಿಪೆನೆಂದಭ್ಯರ್ಥನಂಗೆಯ್ದಳೇ ೨೧

ಅನುನಯದಿನೀಕ್ಷಿಸುತೆ ನಿಜ
ತನಯನಿವಂ ಸಂದನಭವಗಣತತಿಗಿದು ಲೇ
ಸೆನುತೊಲವಿಂದೆಳೆನಗೆಯಾ
ನನನಳಿನದೊಳುಣ್ಮೆ ತನ್ನ ಪತಿಯೊಡನಾಗಳ್ ೨೨

ಪೆಱರಾರುಂ ಕಾಣವಂತಾಲಯಕೆ ಸುತನ ತತ್ಕಾಯಮುಂ ತಂದು ಕಟ್ಟ
ಳ್ಕಱಿಂದೊಳಾ ಲಿಂಗಾರ್ಚನಾವೇದಿಕೆಯನಗುಳ್ದು ರುದ್ರಾಕ್ಷೆಯಿಂ ಭಸ್ಮದಿಂದೊ
ಳ್ಪಱುಗಂಪಂ ತಾಳ್ದ ಭಕ್ತ್ಯರ್ಪಿತಕುಸುಮಲಸದ್ಬಿಲ್ವದಿಂ ಸಿಂಗರಂಗೆ
ಯ್ದೆಱಕಂ ಕೆಯ್ಗಣ್ಮೆ ನಿಕ್ಷೇಪಿಸಿದಳದನದೇನೆಂಬೆನಾಶ್ಚರ್ಯದುರ್ಬಂ ೨೩

ಸುರಿಸಿ ತಾಪವನ್ನು ಹೊಂದಿದಳೇ ? ೨೦. ಅಯ್ಯೋ ! ಪರಮಾತ್ಮನು ನನ್ನ ಸುಕುಮಾರನನ್ನು ಹೀಗೆ ಸಾಯುವಂತೆ ಮಾಡಿದನಲ್ಲವೇ ! ಎನ್ನುತ್ತ ನೊಂದುಕೊಂಡಳೇ ? ಎಲೈ ಶಿವಭಕ್ತ ಜನಸಮೂಹವೇ, ತಡಮಾಡದೆ ನನ್ನ ಸತ್ತ ಮಗನ ಪ್ರಾಣವನ್ನು ಕೊಡಿರೆಂದು ಹಲುಬಿದಳೇ ? ೨೧. ಪರಮೇಶ್ವರನೇ, ನಿಮ್ಮ ಪಾದದ ಪೂಜೆಯನ್ನು ಮಾಡಿಯೂ ಕೂಡ, ನನ್ನ ಮಗನಿಗೆ ಇಂಥ ಸಾವುಂಟಾಯಿತೇ ಎಂದು ಹೆಚ್ಚಾದ ದುಃಖದಿಂದ ಉಸುರುಗರೆದಳೇ ? ಸದ್ಗುರುಗಳಿಂದ ಮಂತ್ರವನ್ನು ಹಾಕಿಸಿದರೆ ಈ ನನ್ನ ಮಗನು ಬಾಳುವನೆನ್ನುತ್ತ (ಅದಕ್ಕಾಗಿ) ಹಲುಬಿದಳೇ ? 'ಹೇ ಶರಣರಿರಾ, ತೇರಸರುಗಳಿರಾ, ಷೋಡಷರುಗಳಿರಾ ನನ್ನ ಪುತ್ರನು ಬದುಕುವ ಹಾಗೆ ಮಾಡಿಕೊಡಿರೇ' ಎಂದು ಪ್ರಾರ್ಥಿಸಿಕೊಂಡಳೇ ? ೨೨. (ಸತ್ತ ಆ ಮಗನನ್ನು) ಸಂತೋಷದಿಂದ ನೋಡುತ್ತ, ಈ ನನ್ನ ಕುಮಾರನು ಶಿವಗಣಗಳ ಸಮೂಹಕ್ಕೆ ಸೇರಿಕೊಂಡನು. ಇದೊಂದು ಒಳ್ಳೆಯದಾಯಿತು ಎಂದು ಪ್ರೀತಿಯಿಂದ ಮುಖ ಕಮಲದಲ್ಲಿ ಎಳೆನಗೆ ಹೊರ ಚಿಮ್ಮುತ್ತಿರಲು ತನ್ನ ಪತಿಯೊಡನೆ ಹೇಳಿದಳು. ೨೩. ಬೇರೆಯವರಾರೂ ಕಾಣದ ಹಾಗೆ ಮನೆಗೆ ಆ ತನ್ನ ಕುಮಾರನ ಮೃತದೇಹವನ್ನು ತಂದು, ವಿಶೇಷವಾದ ಅಕ್ಕರೆಯಿಂದ ಮನೆಯಲ್ಲಿನ ಲಿಂಗಾರ್ಚನೆಯ ವೇದಿಕೆಯನ್ನು ಅಗೆದು, ರುದ್ರಾಕ್ಷಿಯಿಂದಲೂ ಭಸ್ಮದಿಂದಲೂ, ಶ್ರೇಷ್ಠ ಬಿಲ್ವದಳಗಳಿಂದಲೂ ಅಲಂಕಾರಗೊಳಿಸಿ, ಪ್ರೀತಿಯ ಆಧಿಕ್ಯದಿಂದ ಹುಗಿದಳು. ಅವಳ

ವ॥ ಅಂತು ನಿಕ್ಷೇಪಿಸಿ ಸತಿಪತಿಗಳಿರ್ವರುಮೇಕಚಿತ್ತರಾಗಿ—

ಮುನ್ನಿನ ಪರಿಯಿಂ ಶಿವಗಣ
ಪನ್ನಳಿನಮನೋಜೆಯಿಂದೆ ಪೂಜಿಸುತುಂ ಸ
ತ್ವೋನ್ನತಮತಿಗಳ್ಸುಖಮಿ
ರ್ಪನ್ನೆವರಂ ಕದಿರ ರೇಮನಾ ಗುರುಪದಮಂ ೨೪

ಭಜಿಯಿಸುತೇಳುಂ ದಿನಮಿ
ರ್ದಜಡಂ ಗುರುಚರಣಕೆಱಗಿ ತತ್ಕರುಣಮನೊ
ಟ್ಟಜೆಯಿಂ ಪಡೆದೇಳ್ತಂದಂ
ಸುಜನಸ್ತುತನಲ್ಲಿ ಮಗುಳ್ದು ಶಿವಗಣಸಹಿತಂ ೨೫

ವ॥ ಅಂತೇಳ್ತಂದಾ ಸೋಮನಾಥನಿರ್ದ ಪೊಳಲಂ ಪೊಕ್ಕು ಸಂಭ್ರಮದಿಂ ತನ್ಮಂದಿರಕ್ಕೆ ನಡೆತರೆ—

ಕಂಡಷ್ಟಾಂಗಪ್ರಣಾಮಂಬೆರಸು ತೊಳೆದು ಪಾದಾಬ್ಜಮಂ ಪಾದತೀರ್ಥಂ
ಗೊಂಡಾಗಳ್ಧನ್ಯಭಾವಂದಳೆದು ಪದೆದು ಲಿಂಗಾರ್ಚನಂಗೆಯ್ಸಿ ತಾನುಂ
ಪೆಂಡಿರ್ತಚ್ಛೇಷಮಂ ಸೇವಿಸುವ ಸಮಯದೊಳ್ ನೋಡುತೊಳ್ಪಿರ್ವರಂ ಮಾ
ರ್ತಾಂಡಾಂಶುಸ್ಫಾರತೇಜಂ ಚದುರ ಕದಿರರೇಮಾರ್ಯನಿಂತೆಂದನಾಗಳ್ ೨೬

ಆಶ್ಚರ್ಯಕರವಾದ ಆ ಉತ್ಸಾಹವನ್ನು ಏನೆಂದು ಹೇಳಲಿ ! ವ॥ ಆ ರೀತಿಯಿಂದ (ಮೃತನಾದ ಕುಮಾರನನ್ನು) ಹುಗಿದು, ಸತಿಪತಿಗಳಿಬ್ಬರೂ ಒಂದೇ ಚಿತ್ತವುಳ್ಳವರಾಗಿ- ೨೪-೨೫. ಮೊದಲಿನ ರೀತಿಯಲ್ಲಿಯೇ ಶಿವಶರಣರುಗಳ ಪಾದ ಕಮಲಗಳನ್ನು ಯಥಾ ಕ್ರಮದಿಂದ ಆ ಸತ್ವಪೂರ್ಣ ಉನ್ನತ ಬುದ್ಧಿಯುಳ್ಳ ದಂಪತಿಗಳು ಪೂಜಿಸುತ್ತ ಸುಖವಾಗಿ ಇರುತ್ತಿರುವಷ್ಟರಲ್ಲಿ ಪ್ರಜ್ಞಾನಸನಾದ ಕದಿರ ರೇಮಯ್ಯನು ತನ್ನ ಗುರುವಿನ ಪಾದವನ್ನು ಭಜಿಸುತ್ತ ಏಳುದಿನ (ಆ ಗುರುವಿನ ಊರಿನಲ್ಲಿ) ಇದ್ದು ಗುರುಚರಣಕ್ಕೆ ನಮಸ್ಕಾರಮಾಡಿ, ಆತನ ಕಾರುಣ್ಯವನ್ನು ಅತಿಶಯವಾಗಿ ಪಡೆದು ಸಜ್ಜನರಿಂದ ಶ್ಲಾಘಿಸಲ್ಪಡುವ ಅವನು ಶಿವಗಣಸಹಿತವಾಗಿ (ಕಲ್ಯಾಣದ ಕಡೆಗೆ) ಹೊರಟು ಬಂದನು. ವ॥ ಹಾಗೆ ಹೊರಟು ಬಂದು, ಸೋಮನಾಥನಿದ್ದ ಪಟ್ಟಣವನ್ನು (ಮೊದಲಿನಂತೆ) ಹೊಕ್ಕು ಸಂಭ್ರಮದಿಂದ ಅವನ ಮನೆಗೆ ಬರಲಾಗಿ ೨೬. (ಸೋಮನಾಥನು ಕದಿರ ರೇಮಯ್ಯನನ್ನು) ಕಂಡು ಸಾಷ್ಟಾಂಗ ಪ್ರಣಾಮ ಪೂರ್ವಕವಾಗಿ ಪಾದ ಕಮಲವನ್ನು ತೊಳೆದು, ಪಾದ ತೀರ್ಥವನ್ನು ಸ್ವೀಕರಿಸಿ ಧನ್ಯನಾದೆನೆಂಬ ಭಾವವನ್ನು ಹೊಂದಿ ಸಂತೋಷದಿಂದ ಲಿಂಗಾರ್ಚನೆಯನ್ನು ಮಾಡಿಸಿದನು. ತಾನೂ ತನ್ನ ಹೆಂಡತಿಯೂ, ಅವರ ಶೇಷಪ್ರಸಾದವನ್ನು ಸೇವಿಸುವ ಸಮಯದಲ್ಲಿ ಪ್ರೀತಿಯಿಂದ ಆ ಸೂರ್ಯ ಕಿರಣಗಳಿಗೆ ಸಮಾನವಾದ ಕಾಂತಿಯಿಂದ ಕೂಡಿದ ತೇಜಸ್ವಿಯಾದ ಚತುರ ಕದಿರ ರೇಮ

ಅಣ್ಣಲದೇವಿ ನಿನ್ನಣುಗನಾವೆಡೆಗೆಯ್ದಿದನಿಲ್ಲಿ ಕಾಣೆವಾ
ಚಿಣ್ಣನನಾಡಲೆಯ್ದಿದನೊ ಮಕ್ಕಳೊಳಾರ್ಯಗೃಹಾಂತರಕ್ಕೆ ಮು
ಕ್ಕಣ್ಣನ ಪೂಜೆಯಂ ಪದೆದು ನೋಳ್ಪೊಡೆ ಪೋದನೊ ಭಕ್ತರೀಶನಂ
ಬಣ್ಣಿಸಿ ಪಾಡೆ ಕೇಳಲವರಂಗಣಕೇಂ ತಳರ್ದತ್ತ ನಿಂದನೋ ೨೭

ಚರಲಿಂಗದ ಮಠದತ್ತ
ಲ್ಪರಿದನೊ ಶಿವಲಿಂಗಯಜನಕೊಪ್ಪುವ ಪೊಸ ಕ
ಮ್ಮರಲಂ ತಿಱಿಯಲ್ಪಿತ್ತಿಲ
ನಿರದೆಯ್ದಿ ವಿನೋದದಿಂದೆ ಪೂಗೊಯ್ದಪನೋ ೨೮

ಗಿರಿಶಪುರಾಣಮನೋದುವ
ಶರಣರ ಬಳಿಸಾರ್ದು ಬಾರದಿರ್ಪನೊ ನಿನ್ನೊಳ್
ತರುಣಂ ಮುನಿದೇಂ ಮೆಯ್ಗರೆ
ದಿರುತಿರ್ಪನೊ ಪೊಱಗೆ ನಿದ್ರೆಗೆಯ್ದಿರ್ದಪನೋ ೨೯

ಅಂದಾವೆಯ್ತರೆ ತಾಂ ಪಲ
ವಂದದೆ ಬಿನದಿಸುತುಮಿರ್ದನೆಮ್ಮೊಡನೊಲವಿಂ
ಕಂದನವನಾಡದಿರ್ಪೀ
ಮಂದಿರಮಿದು ಭಿನ್ನನಾ[1]ಗಿ ಕಾಣಿಪುದಲ್ತೇ ೩೦

ಯ್ಯನು ದಂಪತಿಗಳಿಬ್ಬರನ್ನೂ ನೋಡುತ್ತ ಆಗ ಹೀಗೆಂದನು : ೨೭. ಅಣ್ಣಲದೇವಿಯೇ ನಿನ್ನ ಕುಮಾರನು ಎಲ್ಲಿಗೆ ಹೋಗಿದ್ದಾನೆ ? ಆ ಚಿಣ್ಣನನ್ನು ನಾವು ಕಾಣಲಿಲ್ಲವಲ್ಲಾ ! ಮಕ್ಕಳೊಡನೆ ಆಡಲಿಕ್ಕೆ ಹೋಗಿರುವನೋ ? ಶ್ರೇಷ್ಠರಾದ ಶಿವಶರಣರ ಮನೆಗೆ ಪರಮೇಶ್ವರನ ಪೂಜೆಯನ್ನು ಪ್ರೀತಿಯಿಂದ ನೋಡಲಿಕ್ಕೆ ಹೋದನೋ ? ಭಕ್ತ ಜನರುಗಳು ಈಶ್ವರನನ್ನು ವರ್ಣಿಸಿ ಹಾಡುತ್ತಿರಲು ಅದನ್ನು ಕೇಳುವುದಕ್ಕೆ ಅವರ ಮನೆಯ ಅಂಗಳಕ್ಕೆ ಹೊರಟುಹೋಗಿ ಅದನ್ನು ಕೇಳುತ್ತ ಅಲ್ಲಿಯೇ ನಿಂತನೋ ಏನೊ ? ೨೮ ಜಂಗಮಲಿಂಗದ ಮಠದ ಕಡೆಗೆ ಓಡಿದನೋ ? ಶಿವಲಿಂಗ ಪೂಜೆಗೆ ಒಪ್ಪುವಂತಹ ಹೊಸ ಸುಗಂಧಭರಿತ ಹೂವುಗಳನ್ನು ಎತ್ತಿತರಲು ಹಿತ್ತಿಲನ್ನು ಪ್ರವೇಶಿಸಿ ಅಲ್ಲಿ ವಿನೋದದಿಂದ ಹೂವುಗಳನ್ನೇನಾದರೂ ಎತ್ತುತ್ತಿರುವನೋ ? ೨೯. ಶಿವ ಪುರಾಣವನ್ನು ಹೇಳತಕ್ಕ ಶರಣರುಗಳ ಹತ್ತಿರಕ್ಕೆ ಹೋಗಿ, ಬಾರದೆ ಇರುವನೋ ? ನಿನ್ನೊಡನೆ ಆ ಬಾಲಕನು ಕೋಪಿಸಿಕೊಂಡು ಅಡಗಿಕೊಂಡು (ಎಲ್ಲಿಯಾದರೂ) ಕುಳಿತಿರುವನೋ ? (ಅಥವಾ) ಹೊರಗೆಲ್ಲಿಯಾದರೂ ನಿದ್ರೆಮಾಡುತ್ತಿರುವನೋ ? ೩೦. ಈ ಪೂರ್ವದಲ್ಲಿ ನಾವು ಬಂದಿದ್ದಾಗ ನಮ್ಮೊಡನೆ ಅತಿ ಪ್ರೀತಿಯಿಂದ ಹಲವಾರು ಪ್ರಕಾರದಲ್ಲಿ ವಿನೋದಗೊಳಿಸುತ್ತಿದ್ದನು. ಕಂದನಾದ ಅವನು ಆಟವಾಡದಿರುವ ಈ ಮನೆಯು ಭಿನ್ನವಾಗಿ (ಬೇರೊಂದು

1 ವಾ(ದ)

ಕರೆ ತಂಗಿ ನಿನ್ನ ತನಯನ
ನರವರಿಸದೆ ಬೇಗಮೀಗಳೆಂದಾ ಗುಣಸಾ
ಗರ ಕದಿರ ರೇಮನೆನೆ ತ
ತ್ತರುಣೀಮಣಿ ಮಣಿದು ಮುಗುಳ್ದು ನೆಗಳ್ದಂಜ[1]ಲಿಯಂ ೩೧

ದೇವ ಕರೆಯಲ್ಕೆ ಚಂಗಳೆ
ದೇವಿಯೆ ಪೇಳಾಂ ತನೂಜನಂ ಕರೆಯದ ಸ
ದ್ಭಾವಮನಾನಲ್ಲಿಂಬಿಯೆ
ಭಾವಿಸೆ ತದ್ಗೇಹದಾಸಿಯರ್ಗಾನಣೆಯೇ ೩೨

ಕರೆಯಲ್ಸಾಮರ್ಥ್ಯಮಿಲ್ಲಂ ಕರೆಯದುಸಿರದಿರ್ದಂದು ನಿಮ್ಮುಕ್ತಿಯಂ ಸೈ
ತಿರದಾದಂ ಮೀಱಿದಂತಾದಪ್ಪುದೆನಗಿದನೇನೆಂಬೆನಾಂ ದೇವ ನೀಮೆ
ನ್ನಿರವಂ ಮುನ್ನೋಡದೀ ದುರ್ಘಟಮನೊರೆವುದೇಂ ತಕ್ಕುದೇ ಪೇಳ್ಕೃಪಾಸಾ
ಗರ ಕಾರ್ಯಾಕಾರ್ಯಮಂ ನಿಮ್ಮಡಿಗಳಱಿಗುಮಂತಲ್ಲದಾನೆತ್ತ ಬಲ್ಲೆಂ ೩೩

ದೇವ ಭವದೀಯ ಪದದಾ
ಜೀವದೊಳೆನ್ನಣುಗನಿರ್ದಪಂ ಗಡ ಬೇಱೆ
ನ್ನಾವೆಡೆಯೊಳಱಸಿ ಕರೆವೆಂ
ನೀವಿದನಱಿದಿರ್ದುಮೆನಗೆ ಪೇಳ್ವುದು ಚಿತ್ರಂ ೩೪

ವಿಧವಾಗಿ) ಕಾಣುತ್ತಿರುವುದಲ್ಲವೇ ? ೩೧–೩೨. ತಂಗೀ ಕಳವಳಿಸದೆ ನಿನ್ನ ಕುಮಾರನನ್ನು ಈಗಲೇ ಬೇಗ ಕರೆಯಮ್ಮಾ !' ಎಂದು ಆ ಸದ್ಗುಣ ಸಮುದ್ರನಾದ ಕದಿರ ರೇಮಯ್ಯನು ಎನ್ನಲಾಗಿ, ಆ ಸ್ತ್ರೀರತ್ನವು ಅವರಿಗೆ ನಮಸ್ಕಾರ ಮಾಡುತ್ತ, ಪುನಃ ಕೈಮುಗಿದು ನಿಂತು 'ದೇವ (ಆ ಮಗನನ್ನು) ಕರೆಯಲಿಕ್ಕೆ ನಾನೇನು (ಸಿರಿಯಾಳ ಪತ್ನಿಯಾದ) ಚಂಗಳೆಯೇ ? ಹೇಳು (ಅಥವಾ) ಮಗನನ್ನು ಕರೆಯದೆ ಸದ್ಭಾವವನ್ನು ಹೊಂದುವುದಕ್ಕೆ ಆ ನಿಂಬಿಯಕ್ಕನೇ ? ವಿಚಾರಮಾಡಿನೋಡಿದರೆ ಅವರ ಮನೆಯ ದಾಸಿಯರಿಗೆ ನಾನು ಸಮಾನಳೇ ? ೩೩. ಕೃಪಾಸಮುದ್ರನೇ, (ನನಗೆ ನನ್ನ ಮಗನನ್ನು) ಕರೆಯಲಿಕ್ಕೆ ಸಾಮರ್ಥ್ಯವಿಲ್ಲ; ಕರೆಯದೆ ಸುಮ್ಮನಿದ್ದರೆ ನಿಮ್ಮ ಮಾತನ್ನು ನಡೆಸದೆ ಅತಿಶಯ (ಆದಂ)ವಾಗಿ ನಾನು ಮೀರಿದಂತಾಗುವುದು. ದೇವಾ ಈ ವಿಷಯದಲ್ಲಿ ನಾನೇನು ಹೇಳಲಿ ! ನೀವೇ ನನ್ನ ಸ್ಥಿತಿಯನ್ನು ಮೊದಲು ನೋಡಿಕೊಳ್ಳದೆ ಈ ಅಸಾಧ್ಯ ಕಾರ್ಯವನ್ನು ಹೇಳುವುದೇನು ತಕ್ಕದ್ದೇ ? ಹೇಳು ! ಕಾರ್ಯ ಅಕಾರ್ಯ ಇವನ್ನು ತಮ್ಮ ಶ್ರೀಪಾದಗಳೇ ಬಲ್ಲವು; ಹಾಗಲ್ಲದೆ ನಾನೆತ್ತ ಬಲ್ಲೆನು ? ೩೪. 'ದೇವ, ನಿನ್ನ ಪಾದಕಮಲಗಳಲ್ಲಿ ನನ್ನಮಗ ನಿದ್ದಾನಲ್ಲವೇ ! (ಅಲ್ಲಲ್ಲದೆ) ಬೇರೆ ಇನ್ನಾವ ಕಡೆಗಳಲ್ಲಿ ಅವನನ್ನು ಹುಡುಕಿ ಕರೆಯಲಿ ? ನೀವು ಈ ವಿಷಯವನ್ನು ತಿಳಿದೂ ಕೂಡ ನನಗೆ ಹೇಳುತ್ತಿರುವುದು ವಿಚಿತ್ರವಾಗಿದೆ.

---

1 ಜು(ಗ)

ವ॥ ಎಂದು ನುಡಿವ ಸದ್ಭಕ್ತೆಯ ಭಕ್ತಿಭಾವಕ್ಕೆ ಸಾಶ್ಚರ್ಯಚಿತ್ತಂ ಸಂತಸಂಬಟ್ಟು ಪೂಳ್ದ ನಿಕ್ಷೇಪಮನಗುಳ್ವಂತಿರಾ ವೇದಿಕಾಸಮಾಧಿಯನಗುಳ್ಚಿ ಮುಸುಂಕಿ ತಳ್ತ ಬಿಲ್ವದಳ ಭಸಿತರೇಣುಗಳ ನಾಗಳೆ ನೂಂಕಿ ಛೋಂಕನೆ ನಿಜಪ್ರಸನ್ನ ದೃಷ್ಟಿರುಚಿಸುಧಾಸೇಚನಮನೆಸಗುವಂತಿರಭೀಕ್ಷಿಸಿ—

ಪೆಸರ್ಗೊಂಡೇಳೇಳೆಂಬುದು
ಮಸಮಸದಿಂ ತೆಱೆದು ಕಂಗಳಂ ಜನನಿಗೆ ಸಂ
ತಸಮೊಗೆತರೆ ಮೊಲೆವಾಲ್ಬಿರಿ
ದೊಸರ್ದಿಳಿತರೆ ಕುವರನೆಳ್ದನತಿ ಸಂಭ್ರಮದಿಂ ೩೫

ವ॥ ಅಂತೆಳ್ದು ಶರಣಾರ್ಥಿರವಂ ಬೆರಸು ಮುಗಿದ ಕೆಯ್ಯಾಂತೆಳ್ದ ನಿಜಕುಮಾರಕನಂ ಮಾತೆ ಬಿಗಿದ[1]ಪ್ಪಿ ತೆಗೆದೆತ್ತಿಕೊಂಡು ಕದಿರ ರೇಮವಿಭುವಿನಡಿದಾವರೆಗೆ ಪೊಡಮಡಿಸಲೊಡನೆ—

ಕರುಣಾಸುಧೆ ತೆರೆ ಮಸಗು
ತ್ತಿರೆ ನೋಡಿ ನಿಜ ಪ್ರಸಾದದಿಂ ತಣಿಪುತೆ ತ
ತ್ತರುಣನನಾ ಪಿತರರನಾ
ದರಿಸಿ ಮಹಾಸುಖದೊಳಿರಿಸಿದಂ ಘನಮಹಿಮಂ ೩೬

ವ॥ ಹೀಗೆಂದು ನುಡಿಯುವ ಆ ಸದ್ಭಕ್ತೆಯಾದ ಅಣ್ಣಲದೇವಿಯ ಭಕ್ತಿಭಾವಕ್ಕೆ ಆಶ್ಚರ್ಯದಿಂದ ಕೂಡಿದ ಚಿತ್ತವುಳ್ಳವನಾದ ಆ ರೇಮಯ್ಯನು ಸಂತೋಷಗೊಂಡು, ಹುಗಿದ ಐಶ್ವರ್ಯ (ದ್ರವ್ಯ) ವನ್ನು ತೋಡುವಂತೆ ಅ ಪೂಜಾ ವೇದಿಕೆಯ ಸ್ಥಾನದಲ್ಲಿದ್ದ ಸಮಾಧಿಯನ್ನು ಅಗೆದು ತುಂಬ ಮುಚ್ಚಿಕೊಂಡ ಬಿಲ್ವದಳ ಭಸ್ಮದ ಧೂಳನ್ನು ಆಗಲೇ ನೂಕಿ, ಕೂಡಲೇ ತನ್ನ ಪ್ರಸನ್ನತೆಯಿಂದ ಕೂಡಿದ ದೃಷ್ಟಿಯ ಕಾಂತಿಯೆಂಬ ಅಮೃತದ ಸೇಚನವನ್ನು ಮಾಡುವಂತೆ ನೋಡಿದನು. ೩೫. ಆ ಬಾಲಕನ ಹೆಸರು ಹಿಡಿದು 'ಏಳೇಳು' ಎಂದು ಕರೆಯಲಾಗಿ, ಆ ಕೂಡಲೇ (ಬೇಗನೆ) ಕಣ್ಣುಗಳನ್ನು ತೆರೆದು, ತಾಯಿಗೆ ಸಂತೋಷವುಂಟಾಗುವಂತೆ, ಹೆಚ್ಚಾಗಿ ಮೊಲೆ ಹಾಲುಗಳು ತೊರೆಸಿ ಒಸರಿ ಹೊರಬರುಬರುವಂತೆ ಆ ಕುಮಾರನು ಅತ್ಯಂತ ಸಂಭ್ರಮದಿಂದ ಎದ್ದು ಬಂದನು. ವ॥ ಹಾಗೆ ಎದ್ದು, 'ಶರಣಾರ್ಥಿ' ಎಂಬ ಧ್ವನಿಯಿಂದ ಕೂಡಿ, ಕೈಮುಗಿದುಕೊಂಡೇ ಎದ್ದ ತನ್ನ ಕುಮಾರನನ್ನು ತಾಯಿಯು ಬಿಗಿಯಾಗಿ ಅಪ್ಪಿಕೊಂಡು, ಎಳೆದು ಎತ್ತಿಕೊಂಡು, ಕದಿರ ರೇಮವಿಭುವಿನ ಪಾದಕಮಲಗಳಿಗೆ ನಮಸ್ಕಾರಮಾಡಿಸಲು ಆ ಕೂಡಲೆ ೩೬. ಆ ಘನ ಮಹಿಮಾ ಶಾಲಿಯಾದ ಕದಿರ ರೇಮಯ್ಯನು ಕರುಣೆಯೆಂಬ ಅಮೃತದ ಕೆರೆಗಳು ಮುತ್ತಿಕೊಳ್ಳುವ ಹಾಗೆ (ಆ ಕುಮಾರನನ್ನು) ನೋಡುತ್ತ, ತನ್ನ ಪ್ರಸಾದದಿಂದ ಅವನನ್ನು ತಣಿಸಿ, ಆ ಬಾಲಕನನ್ನೂ, ಆತನ ತಂದೆ ತಾಯಿಯರುಗಳನ್ನೂ ಆದರಿಸಿ, ಮಹಾ

1 ಯ (ಮ)

ವ॥ ಆಗಳಾ ಕದಿರ ರೇಮಯ್ಯನಿಂತೆಸಗಿದದ್ಭುತ ವಾರ್ತೆಯಂ ಬಸವರಾಜಂ ಕೇಳ್ದು ಸಂಭ್ರಮಿಸಿ ಗಣಸಮಿತಿಸಮೇತಂ ಬಂದು ಕಂಡು ತದಂಘ್ರಿಯುಗಕ್ಕೆ ಭಕ್ತಿಮಿಗೆ ಪೂವಲಿಗೆದಱಿ ಸಾಷ್ಟಾಂಗವೆಱಗಿ ನಿಂದು—

ಪರಮಾನಂದಸರೋಮರಾಳ ನಿಗಮಾಂಭೋಜಾತಬಾಲಪ್ರಭಾ
ಕರ ಕಾರುಣ್ಯಕಳಾವಿಳಾಸನಿಧಿ ನಿರ್ಧೂತಾನತವ್ರಾತಸಂ
ಸರಣಧ್ವಾಂತ ಧರಾವನೋದ್ಯಮ ಸದಾನಿರ್ನಿದ್ರ ಭೂರುದ್ರ ಭಾ
ಸುರವೀರವ್ರತ ಭಾಪುರೇ ಕದಿರ ರೇಮಾಚಾರ್ಯ ಚೂಡಾಮಣೇ ೩೭

ಶರಣಲಲಾಮ ಸತ್ಯಗುಣಧಾಮ ಸದಾಶಿವಭಕ್ತಿಸೀಮ ಶೈ
ವರುಚಿರನಾಮಜಾಪಕ ನಿಕಾಮ ನಿರಾಕೃತಮತ್ತಕಾಮ ದು
ರ್ಧರಪರಭೀಮ ಸಜ್ಜನಧಿಸೋಮ ಸಮಸ್ತಕಳಾಭಿರಾಮ ಚಾ
ಗುರೆ ತತನಾಮ ಸನ್ನತಜನಾಮರಭೂರುಹ ರೇಮ ಧೀಮಣೀ ೩೮

ಎಂದಿಂತಾನಂದದಿಂ ಕೀರ್ತಿಸುತಳಿದೆಳೆಯುಂಗಿಂತುಟೇಳುಂ ದಿನಂಗ
ಳ್ಸಂದಾಗಳ್ಪ್ರಾಣಮಂ ಪಾಲಿಸಿದಿರಮಮ ನೀಮೆಂದು ಕೊಂಡಾಡುತುಂ ನ

ಸುಖದಲ್ಲಿ ಇರುವಂತೆ ಮಾಡಿದನು. ವ॥ ಆಗ ಆ ಕದಿರ ರೇಮಯ್ಯನು ಈ ರೀತಿಯಲ್ಲಿ ಮಾಡಿದ ಅದ್ಭುತವಾರ್ತೆಯನ್ನು ಬಸವರಾಜನು ಕೇಳಿ, ಸಂಭ್ರಮಗೊಂಡು, ಶಿವಗಣ ಸಮೂಹದೊಡನೆ ಕೂಡಿಕೊಂಡು ಅವನಿರುವಲ್ಲಿಗೆ ಬಂದು, ಅವನ ಎರಡೂಪಾದಗಳಿಗೆ ವಿಶೇಷ ಭಕ್ತಿಯಿಂದ ಅಂಜಲಿಯಲ್ಲಿ ಹಿಡಿದ ಹೂವುಗಳನ್ನು ಹಾಕಿ, ಸಾಷ್ಟಾಂಗ ನಮಸ್ಕಾರಮಾಡಿ, ನಿಂತು ೩೭. ಹೇ, ಪರಮಾನಂದವೆಂಬ ಸರೋವರದಲ್ಲಿನ ಹಂಸ ಪಕ್ಷಿಯೋಪಾದಿಯಲ್ಲಿರುವವನೂ, ವೇದಗಳೆಂಬ ಕಮಲಗಳಿಗೆ ಬಾಲಸೂರ್ಯನ ಬಿಸಿಲಿನಂತಿರುವವನೂ, ಕರುಣೆಯೆಂಬ ವಿದ್ಯೆಯ ಲೀಲೆಗೆ ನಿಕ್ಷೇಪರೂಪನೂ, ನಮಸ್ಕಾರ ಮಾಡಿದ ಭಕ್ತರುಗಳ ಜನನಮರಣಾತ್ಮಕ ಸಂಸಾರವೆಂಬ ಕತ್ತಲೆಯನ್ನು ಪರಿಹರಿಸುವವನೂ, ಭೂ ಭಾಗವನ್ನು ಪರಿಪಾಲಿಸುವ ಕರ್ತವ್ಯದಲ್ಲಿ ಯಾವಾಗಲೂ ಜಾಗರೂಕನಾಗಿರುವವನೂ, ಭೂಮಂಡಲದ ರುದ್ರ ಸ್ವರೂಪನೂ, ಪ್ರಕಾಶಮಾನವಾದ ವೀರಶೈವ ವ್ರತವುಳ್ಳವನೂ, ಆದ ಕದಿರ ರೇಮಯ್ಯ ಶಿರೋರತ್ನವೇ, ಭಾಪುರೇ! ೩೮. ಶಿವಶರಣರಲ್ಲಿ ಭೂಷಣನಾದವನೇ, ಸತ್ಯ ಗುಣಗಳಿಗೆ ಮೂಲಸ್ಥಾನನಾದವನೇ, ಸದಾಶಿವನ ಭಕ್ತಿಯಲ್ಲಿ ಮೇರೆಯಿಲ್ಲದಿರುವವನೇ, ಶಿವ ಸಂಬಂಧವಾದ ಮನೋಹರವಾದ ನಾಮ ಸ್ಮರಣೆಮಾಡುವವನೇ, ಅತ್ಯಧಿಕವಾಗಿ ಮದೋನ್ಮತ್ತ ಮನ್ಮಥ ಸಂಬಂಧವಾದ ಕಾಮವನ್ನು ತಿರಸ್ಕರಿಸಿದವನೂ, ಸಹಿಸಲಸಾಧ್ಯವಾದ ಪರಸಮಯಕ್ಕೆ ಭಯಂಕರನಾಗಿರುವವನೂ, ಸತ್ಪುರುಷರೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವವನೂ, ಸಮಸ್ತ ಶ್ರೇಷ್ಠ ವಿದ್ಯೆಗಳಿಂದ ಮನೋಹರನಾಗಿರುವವನೂ, ಪ್ರಸಿದ್ಧವಾದ ಹೆಸರುಳ್ಳವನೂ, ನಮಸ್ಕಾರ ಮಾಡುವ ಜನರಿಗೆ ಕಲ್ಪವೃಕ್ಷಪ್ರಾಯನಾದವನೂ, ಹೇ ರೇಮಾರ್ಯ ಪಂಡಿತ ರತ್ನವೇ ಚಾಗುರೇ ! (ಭಲರೇ !) ೩೯. ಈ ರೀತಿಯಾಗಿ ಆನಂದದಿಂದ ಹೊಗಳುತ್ತ 'ಅಮಮ ! ನೀವು

ಣ್ಪೆಂದಂ ತತ್ಸಾರಕಾರುಣ್ಯಮನೆ ಪಡೆದು ಕಣ್ಗೊಪ್ಪಿದಂ ಭಕ್ತಿವಲ್ಲೀ
ಕಂದಂ ಕಂದರ್ಪದರ್ಪಪ್ರಹರಗಣಘನಾಂಭೋಧಿಚಂದ್ರಂ ವೃಷೇಂದ್ರಂ ೩೯

ಕದಿರ ರೇಮವಿಭುಸಚ್ಚರಿತ್ರಮಂ
ಪದೆದು ಕೇಳ್ವನಿದನಾವನೋದುವಂ
ಮದನವೈರಿ ನಿಜಭೋಗಮೋಕ್ಷಸಂ
ಪದಮನೀವನವರ್ಗೀ ಧರಿತ್ರಿಯೊಳ್ ೪೦

ಮಂದರ ಭೂಧರಮಂದಿರಭಾಸುರೆ ಶಾಂಕರಿ ಶಂಭುಸುಖಂಕರಿ ಸಂ
ಕ್ರಂದನವಂದಿತೆ ಚಂದನಗಂಧಿ ಸುಧಾಕರಮೌಳಿ ಶುಭಾಕರಪೂ
ರ್ಣೇಂದುಮುಖಾನ್ವಿತ ಕುಂದದರಸ್ಮಿತರಾಜಿತೆ ನಿರ್ಜರಪೂಜಿತೆ ಸೈ
ಪೊಂದಿರೆ ರಕ್ಷಿಪುದಿಂದಿರೆಗಾರ್ಯೆ ಜಗನ್ನುತೆ ಪರ್ವತರಾಜಸುತೇ ೪೧

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಕದಿರರೇಮಾರ್ಯ ವೃತ್ತಾಂತಕಥನಂ
ತ್ರಯಸ್ತ್ರಿಂಶಾಶ್ವಾಸಂ ಸಮಾಪ್ತಂ
ಅಂತು ಆಶ್ವಾಸ ೩೩ಕ್ಕೆ ಪದಗಣನೆ ೨೪೯೭ಕ್ಕೆ ಮಂಗಳಮಹಾ ಶ್ರೀ!!

ಸತ್ತು ಹೋದ ಚಿಕ್ಕ ಬಾಲಕನಿಗೆ ಸತ್ತ ಏಳು ದಿನಗಳ ಮೇಲೆ ಪ್ರಾಣವನ್ನು ದಯಪಾಲಿಸಿದಿರಿ.' ಎಂದು ಕೊಂಡಾಡುತ್ತ ಪ್ರೀತಿಯಿಂದ ಅವನ ಸಾರತರವಾದ ಕಾರುಣ್ಯವನ್ನು ಪಡೆದು ಭಕ್ತಿಯೆಂಬ ಬಳ್ಳಿಯ ಗೆಡ್ಡೆಯಂತಿರುವವನೂ, ಮನ್ಮಥನ ದರ್ಪವನ್ನು ಹರಣ ಮಾಡಿದವನೂ, ಶಿವಗಣಗಳ ಮಹಾಸಂದೋಹವೆಂಬ ಸಮುದ್ರಕ್ಕೆ ಚಂದ್ರಪ್ರಾಯನೂ ಆದ ಬಸವೇಶ್ವರನು (ಆ ಕಲ್ಯಾಣ ಪಟ್ಟಣದಲ್ಲಿ) ಕಂಗೊಳಿಸುತ್ತಿದ್ದನು. ೪೦. ಕದಿರ ರೇಮಪ್ರಭುವಿನ ಶ್ರೇಷ್ಠವಾದ ಚರಿತ್ರೆಯನ್ನು ಸಂತೋಷದಿಂದ ಯಾವನು ಕೇಳುವನೋ ಮತ್ತು ಇದನ್ನು ಓದುವನೋ ಅವನಿಗೆ ಶಿವನು ತನ್ನ ಸಂಬಂಧವಾದ ಭೋಗಮೋಕ್ಷ ಸಂಪತ್ತನ್ನು ಕೊಡುವನು. ೪೧. ಮಂದರ ಪರ್ವತದ ಮನೆಯಲ್ಲಿ ಪ್ರಕಾಶಿಸುವವಳೂ ಶಂಕರನ ಪತ್ನಿಯೂ, ಶಂಭುವಿಗೆ ಸುಖವನ್ನುಂಟು ಮಾಡುವವಳೂ, ಇಂದ್ರನಿಂದ ನಮಸ್ಕರಿಸಿಕೊಳ್ಳುವವಳೂ, ಚಂದನ ಗಂಧದ ಪರಿಮಳವುಳ್ಳವಳೂ, ಚಂದ್ರನನ್ನು ಮೌಳಿಯಲ್ಲುಳ್ಳವಳೂ, ಮಂಗಳವನ್ನುಂಟುಮಾಡುವ ಪೂರ್ಣ ಚಂದ್ರನಂತೆ ಪ್ರಕಾಶಿಸುವ ಮುಖವುಳ್ಳವಳೂ, ಸ್ವಲ್ಪ ಅರಳಿದ ಮೊಲ್ಲೆಯ ಹೂವಿನಂತಹ ಮುಗುಳು ನಗೆಯಿಂದ ವಿರಾಜಿಸುವವಳೂ, ದೇವತೆಗಳಿಂದ ಪೂಜೆಗೊಳ್ಳುವವಳೂ ಆದ ಪೂಜ್ಯಳೇ, ಜಗಜ್ಜನಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವಳೇ, ಪರ್ವತರಾಜ ಪುತ್ರಿಯೇ ಪುಣ್ಯವುಂಟಾಗುವಂತೆ (ನನ್ನನ್ನು) ರಕ್ಷಿಸುವುದು.

# ಚತುಸ್ತ್ರಿಂಶಾಶ್ವಾಸಂ

## [ಏಕಾಂತ ರಾಮಯ್ಯನ ಕಥೆ]

ಶ್ರೀಕಾತ್ಯಾಯನಿಯರಸಂ
ಗೋಕಾಂತವಿರಿಂಚಿವಿಷ್ಣುಪೂಜಿತಪದನ
ಸ್ತೋಕಮಹಿಮಾಂಕನತುಳ ಕೃ
ಪಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ಆ ಕಲ್ಯಾಣದೊಳಿರ್ಪನೊರ್ವನನಘಂ ಗಾಂಭೀರ್ಯವಾರಾಶಿ ಭ
ದ್ರಾಕಾರಂ ಪರವಾದಿಮತ್ತಗಜಪಂಚಾಸ್ಯಂ ಪರಿಭ್ರಾಜದ
ಸ್ತೋಕಾತ್ಮೀಯಮಹತ್ವಮಂಡಿತನುಮೇಶಧ್ಯಾನಸಂಧಾನವಿ
ದ್ಯಾಕಾಂತಂ ಗುಣಶಾಲಿ ಶೌರ್ಯನಿಧಿ ಸಂದೇಕಾಂತರಾಮಾಹ್ವಯಂ ೨

ಶಿವಧರ್ಮಪ್ರತಿಪಾಲಕಂ ಶಿವಕಥಾಕರ್ಣಾವತಂಸಂ ಶಿವೋ
ತ್ಸವಧಾಮಂ ಶಿವಮಂತ್ರವಾಣಿ ಶಿವಭಕ್ತಪ್ರೇಮಕೃದ್ವರ್ತನಂ

### ಏಕಾಂತ ರಾಮಯ್ಯನ ಕಥೆ

೧. ಮಂಗಳಕರಳಾದ ಪಾರ್ವತಿಯ ಪತಿಯೂ. ಇಂದ್ರ (ಗೋಕಾಂತ), ಬ್ರಹ್ಮ, ವಿಷ್ಣು ಮೊದಲಾದವರಿಂದ ಪೂಜಿಸಲ್ಪಡುವ ಪಾದವುಳ್ಳವನೂ, ಅತ್ಯಧಿಕವಾದ ಮಹಿಮೆಯೇ ಚಿಹ್ನೆಯಾಗಿ ಉಳ್ಳವನೂ, ಅಸದೃಶ ಕೃಪೆಯನ್ನುಂಟುಮಾಡುವವನೂ, ಆದ ಶಿವಲಿಂಗನು ನಮಗೆ ಸೌಖ್ಯವನ್ನು ಕೊಡಲಿ. ೨. ಆ ಕಲ್ಯಾಣನಗರದಲ್ಲಿ ಒಬ್ಬ ಪಾಪರಹಿತನೂ, ಗಾಂಭೀರ್ಯದಲ್ಲಿ ಸಮುದ್ರದಂತಿರುವವನೂ, ಮಂಗಳಕರ ಆಕಾರ ವುಳ್ಳವನೂ, ಪರವಾದಿಗಳೆಂಬ ಮದೋನ್ಮತ್ತ ಆನೆಗಳಿಗೆ ಸಿಂಹಪ್ರಾಯನಾದವನೂ, ಅಧಿಕವಾಗಿ ಪ್ರಕಾಶಿಸುವ ತನ್ನದೇ ಆದ ಮಹಿಮೆಯಿಂದ ಅಲಂಕೃತನಾದವನೂ, ಪರಮೇಶ್ವರನ ವಿಷಯಕವಾದ ಅನುಸಂಧಾನ (ಲಿಂಗಾಂಗ ಸಾಮರಸ್ಯದ ಅನುಸಂಧಾನ) ವಿದ್ಯೆಯಿಂದ ಪ್ರಕಾಶಿಸುವವನೂ, ಸದ್ಗುಣಸಮೂಹಗಳಿಂದ ಕೂಡಿದವನೂ, ಶೌರ್ಯ ಗಳಿಗೆ ನಿಧಿಸ್ವರೂಪನೂ, ಎನಿಸಿ, ಏಕಾಂತರಾಮಯ್ಯನೆಂಬ ಹೆಸರಿನ ಶರಣನು ಇದ್ದನು. ೩. (ಅವನು) ವೀರಶೈವ ಧರ್ಮದ ಸಂರಕ್ಷಕನು ; ಶಿವಸಂಬಂಧವಾದ ಕಥೆಗಳೇ ಕಿವಿಗೆ ಆಭರಣವಾಗಿ ಉಳ್ಳವನು ; ಶಿವನ ಉತ್ಸವಗಳಿಗೆ ಆಶ್ರಯ ಸ್ಥಾನನು ; ಮಾತು ಗಳೆಲ್ಲ ಶಿವಮಂತ್ರವಾಗಿ ಉಳ್ಳವನು ; ಶಿವಭಕ್ತರಲ್ಲಿ ಪ್ರೇಮವನ್ನುಂಟುಮಾಡುವ ವರ್ತನೆಯುಳ್ಳವನು ; ಶಿವಯೋಗದ ಸಂಬಂಧಗೊಳಿಸಲ್ಪಟ್ಟ ಆತ್ಮನನ್ನುಳ್ಳವನು ;

ಶಿವಯೋಗಾಂಗಸಮನ್ವಿತಂ ಶಿವಮತಾಚಾರಾಧ್ವದೀಪಾಂಕುರಂ
ಶಿವಲಿಂಗಾಂಘ್ರಿಸಮರ್ಚಕಂ ಶಿವಗಣಶ್ರೀಪಾದಪೂಜಾಪರಂ ೩

ಶಿವಲೋಲಂ ಶಿವದೂಷಕಪ್ರಕರದರ್ಪಾಂಭೋದಝಂಝಾನಿಲಂ
ಶಿವನಿಷ್ಠಾನಿಧಿ ನೀತಿಶಾಲಿ ಶಿವತತ್ವಜ್ಞಾನರತ್ನಾಕರಂ
ಶಿವಭಕ್ತಿಪ್ರಮದಾಮುಖೈಕಮುಕುರಂ ಶೈವಾಗಮಾಭಿಜ್ಞನೊ
ಪ್ಪುವನೆಂದುಂ ಶಿವದರ್ಶನಾಂಬುಜವನೀಬಾಲಪ್ರಭಾವಲ್ಲಭಂ ೪

ವ॥ ಎಂಬ ನೆಗಳ್ತೆಗಡರ್ಪಾಗಿ ರಂಜಿಸುತ್ತುಮಿರ್ದು—

ಶಿವಲೋಕಕ್ಕೆಯ್ದಿ ಲಿಂಗಾರ್ಚನೆಯು ಕಡೆಯೊಳಲ್ಲಿರ್ದ ವಿಖ್ಯಾತಲೀಲೋ
ತ್ಸವರುದ್ರಶ್ರೇಣಿ ಭಾಸ್ವತ್ಪ್ರಮಥತತಿಗೆ ದಂಡಪ್ರಣಾಮೋತ್ಕರಂ ಗೆ
ಯ್ದು ವಿಳಾಸಂಬೆತ್ತು ನಣ್ಪಿಂ ಪೊಗಳ್ದು ಶಿವರಹಸ್ಯಾರ್ಥದೇಕಾಂತಮಂ ಮಾ
ಡಿ ವಿಶಿಷ್ಟಾನಂದವಾರಾಶಿಯೊಳ್ ಮುಳುಗಿಸುತ್ತದ್ಭುತೋತ್ಸಾಹದಿಂದಂ ೫

ಮಗುಳ್ದೆಯ್ತರುತುಂ ಧಾತ್ರಿಗೆ
ಮಗುಳ್ದಾ ಲೋಕಕ್ಕೆ ಪೋಗುತಂತಂತೆಸಗು
ತ್ತೊಗಃಮಿಗೆಯಿನನುದಿನಂ ತಾಂ
ನೆಗಳ್ದೆಸೆದಿರ್ದಂ ಶಿವೈಕ್ಯಜನಮಂದಾರಂ ೬

ವೀರಶೈವ ಮತಾಚಾರಕ್ಕೆ ದಾರಿ ದೀಪದ ಕುಡಿಯಂತಿರುವವನು ; ಶಿವಲಿಂಗದ ಪಾದವನ್ನು ಪೂಜಿಸುವವನು : ಶಿವಗಣಗಳ ಮಂಗಳಕರವಾದ ಪಾದಗಳನ್ನು ಪೂಜಿಸುವವನು ಎನಿಸಿದ್ದನು. ೪. (ಅವನು) ಶಿವನಲ್ಲಿ ಲೋಲನು (ಆಸಕ್ತನು); ಶಿವನನ್ನು ದೂಷಿಸುವ ಜನರ ಸಮುದಾಯದ ದರ್ಪವೆಂಬ ಮೋಡಕ್ಕೆ ಪ್ರಚಂಡ ವಾಯು ಸ್ವರೂಪನು; ಶಿವನಲ್ಲಿಟ್ಟ ನಿಷ್ಠೆಗೆ ನಿಧಿಸ್ವರೂಪನು ; ನೀತಿವಂತನು ; ಶಿವನ ಸಂಬಂಧವಾದ ತತ್ವವೆಂಬ ಜ್ಞಾನಕ್ಕೆ ಸಮುದ್ರಪ್ರಾಯನು ; ಶಿವಭಕ್ತಿಯೆಂಬ ಸುಂದರಿಯ ಮುಖದ ಪ್ರಮುಖ ಕನ್ನಡಿಯಂತಿರುವವನು ; ಶೈವಾಗಮ ಜ್ಞಾನವುಳ್ಳವನು ; ವೀರಶೈವ ದರ್ಶನವೆಂಬ ಕಮಲವನಕ್ಕೆ ಸೂರ್ಯನೆನಿಸಿ ಸದಾ ಒಪ್ಪುತ್ತಿದ್ದನು. ವ॥ ಹೀಗೆಂಬ ಖ್ಯಾತಿಗೆ ಆಶ್ರಯನೆನಿಸಿ ಶೋಭಿಸುತ್ತ (ಆ ಕಲ್ಯಾಣದಲ್ಲಿ) ಇದ್ದು—೫-೬. ಅವನು ಶಿವಲೋಕಕ್ಕೆ ಹೋಗಿ, (ಅಲ್ಲಿ) ಲಿಂಗಾರ್ಚನೆಯಾದಮೇಲೆ ವಿಖ್ಯಾತವಾದ ಲೀಲೆಯಿಂದ ಕೂಡಿದ ಉತ್ಸಾಹ ಭರಿತ ರುದ್ರಗಣಗಳ ಸಮೂಹಕ್ಕೂ ಪ್ರಕಾಶಮಾನರಾದ ಶಿವಗಣಗಳ ಸಮೂಹಕ್ಕೂ ದಂಡ ಪ್ರಣಾಮವನ್ನು ಅತಿಶಯವಾಗಿ ಮಾಡುವನು. ಸಂಭ್ರಮಗೊಂಡು ಪ್ರೀತಿಯಿಂದ ಅವರನ್ನು ಹೊಗಳುವನು. ಶಿವನ ಸಂಬಂಧದ ರಹಸ್ಯವಾದ ತತ್ವಾರ್ಥವನ್ನು ಸಮಾಲೋಚನೆ ಮಾಡುವನು. ಅವರನ್ನು ಆನಂದವೆಂಬ ಸಮುದ್ರದೊಳಗೆ ಮುಳುಗಿದವರನ್ನಾಗಿ ಮಾಡುವನು. ಅದ್ಭುತವಾದ ಉತ್ಸಾಹಭರಿತನಾಗಿ ಅಲ್ಲಿಂದ ತಿರುಗಿ ಭೂಲೋಕಕ್ಕೆ ಬರುವನು. ಪುನಃ ಸ್ವರ್ಗಕ್ಕೆ ಹೋಗುವನು. ಹೀಗೆ ಶಿವೈಕ್ಯ ಚಿತ್ತರೆನಿಸಿದ ಜನರಿಗೆ ಕಲ್ಪವೃಕ್ಷ ಸಮಾನನಾದ ಆ ಏಕಾಂತ ರಾಮಯ್ಯನು ಪ್ರತಿದಿನವೂ ಆಯಾಕಾರ್ಯಗಳನ್ನು ಉತ್ಸಾಹಭರಿತನಾಗಿ ಮಾಡುತ್ತ ಪ್ರಖ್ಯಾತನೆನಿಸಿ ಶೋಭಿಸು

ಏಕಾಂತವಾದುತಿಂತು ಪಿ
ನಾಕಿಯ ಗಣನಿವಹದೊಡನೆ ಶಿವನೊಡನೊಲವಿಂ
ದೇಕಾಂತರಾಮವಿಭುವೆ
ಲ್ಲಾಕಾಲದೊಳೀತು ಮೆಱೆವುತಿರ್ದೊಂದುದಿನಂ ೭

ಬಿನದದಿನಾ ನಗರದ ಪಾ
ವನ ಶಿವನಿಳಯಕ್ಕೆ ಬಂದು ಕುಳ್ಳಿರ್ದಾಗ
ಳ್ಜಿನಭಜಕನಾ ಗುಡಿಯನೊ
ಯ್ಯನೆ ಕೆರ್ವಂ ತಾಳ್ದ ಕಾಲ್ಗಳಿಂದೊಳಪೊಕ್ಕಂ ೮

ವ|| ಪುಗೆ ಕಂಡು ಕಾಯ್ಪಿಂ ತಾಳ್ದ

ಎಲೆ ಶವಣಗುನ್ನಿ ಲಿಂಗದ
ನಿಲಯಮನಡಿಗೆರ್ಪುವೆರಸು ಪುಗಲಕ್ಕುಮೆ ದು
ಷ್ಟಲ ನೆಗಳ್ದೆ ನೀಚಕೃತ್ಯಮ
ನಲಸದೆ ದುರ್ವಾರದುರಿತಭಾಜನನಾದೈ ೯

ಗುಡಿಯಿಂ ಪೊಱಮಡು ತಪ್ಪೆಂ
ದಡಿಗೆರ್ಪಂ ಕಳೆದು ಬಂದು ಲಿಂಗಕ್ಕೀಗ
ಳ್ಪೊಡಮಡು ಪೊಡಮಡದೊಡೆ ನಿ
ನ್ನೊಡಲಂ ಕಡಿದಿಕ್ಕದಲ್ಲದಾಂ ಬಿಟ್ಟಪೆನೇ ೧೦

ವ|| ಎನೆ ಕೇಳ್ದು ಜೈನಂ ಸರೋಷಹಸಿತಾಸ್ಯನಾಗಿ—

ತ್ತಿದ್ದನು. ೭–೮. ಏಕಾಂತರಾಮಯ್ಯ ವಿಭುವು ಎಲ್ಲಾ ಕಾಲದಲ್ಲೂ, ಪರಮೇಶ್ವರನ ಗಣಸಮೂಹದೊಡನೆ, (ಮತ್ತು) ಶಿವನೊಡನೆ ಪ್ರೀತಿಯಿಂದ ಈರೀತಿ ಏಕಾಂತ ರಹಸ್ಯಾರ್ಥಗಳನ್ನು ತಿಳಿಯುವ ಕರ್ತವ್ಯದಲ್ಲಿ ಮೆರೆಯುತ್ತಿದ್ದನು. ಒಂದು ದಿನ ಆ ಕಲ್ಯಾಣನಗರದ ಪವಿತ್ರವಾದ ಶಿವಮಂದಿರಕ್ಕೆ ಬಂದು, ಕುಳಿತುಕೊಂಡಿದ್ದನು. ಅಷ್ಟರಲ್ಲಿ ಒಬ್ಬ ಜೈನನು ಆ ಗುಡಿಯನ್ನು ಕೆರಗಳನ್ನು ಮೆಟ್ಟಿದ ಕಾಲಿನಲ್ಲಿಯೇ ಮೆಲ್ಲಗೆಬಂದು ಹೊಕ್ಕನು. ವ|| ಹೀಗೆ ಅವನು ಹೊಕ್ಕದ್ದನ್ನು ಕಂಡು—೯. 'ಎಲೈ ಸವಣ ನಾಯಿಯೇ, ಕಾಲಲ್ಲಿ ಕೆರವನ್ನು ಮೆಟ್ಟಿಕೊಂಡೇ ಶಿವಾಲಯವನ್ನು ಪ್ರವೇಶಿಸಬಹುದೇ. ದುಷ್ಟನೂ ನೀಚನೂ ಆದ ನೀನು ಹಿಂಜರಿಯದೆ ಹೀನಕೆಲಸವನ್ನು ಮಾಡಿದೆ. ಹೋಗಲಾಡಿಸಲ ಶಕ್ಯವಾದ ಪಾಪಕ್ಕೆ ಭಾಜನನಾದೆ. ೧೦. ಗುಡಿಯಿಂದ ಹೊರಗೆ ಹೊರಟು ಬಾ, ಕೆರವನ್ನು ಕಳಚಿ ಬಂದು ತಪ್ಪಾಯಿತೆಂದು ಹೇಳಿ ಲಿಂಗದ ಮುಂದೆ ಅಡ್ಡಬೀಳು. ಹಾಗೆ ಹೇಳಿ ನಮಸ್ಕರಿಸದಿದ್ದರೆ ನಿನ್ನ ದೇಹವನ್ನು ಕತ್ತರಿಸಿ ಹಾಕಿದಲ್ಲದೆ ಬಿಡುವುದಿಲ್ಲ. ವ|| ಹೀಗೆನ್ನಲು ಆ ಜೈನನು ಕೇಳಿ, ಕೋಪದಿಂದ ಕೂಡಿದ (ಅಟ್ಟಹಾಸದ) ನಗೆಯ

ಇನಿತೊಂದಾಗ್ರಹವೇಕೆ ಶೈವ ನಿನಗೆನ್ನೊಳ್ ಭೂರಿ ಭೂಭಾಗದ
ಲ್ಲಿ ನಿತಾಂತಂ ಶಿವಭಕ್ತಿ ನಿನ್ನ ಶಿರದೊಳ್ಪುಟ್ಟಿತ್ತೆ ನೀನೊರ್ವನಾ
ದೆ ನವೀನಂ ಶಿವದರ್ಶನಸ್ಥಿತಿಗೆ ಪೆಂಪಂ ಮಾಡಲಿಂತಪ್ಪ ಕೊ
ರ್ವನದೇಕೆನ್ನೊಳೆ ತೋಱುವಯ್ ಬಿಡು ಬಿಡೀ ದುರ್ವಾರಗರ್ವೋಕ್ತಿಯಂ ೧೧

ಗುಡಿ ಬಸದಿಯೆ ಜಿನನೆ ಜಗ
ಕ್ಕೊಡೆಯಂ ಬೇಱಿನ್ನು ದೈವಮುಂ ಗುಡಿಯುಂ ಪೇ
ಳ್ಪೊಡವಿಯೊಳೊಳವೆಯಿದೇನಂ
ನುಡಿದಪೆ ಪೋಣಾಳ್ಕೊಡಿಂದು ನಿನ್ನಯ ಶಿರಮುಂ ೧೨

ಪಱಿದೇಳುಂ ದಿನಮಂ ಕಳಿ
ದುಱಿ ಪತ್ತಿಸಿ ಕೊಂಡೊಡಿಳೆಗೆ ಶಂಭುವೆ ದೈವಂ
ನೆಱೆಗಲಿ ನೀನೇ ಭಕ್ತಂ
ಮಱುಮಾತೇಂ ನಿನ್ನ ಪೆಂಪನಱಿದಪೆನೀಗಳ್ ೧೩

ವ॥ ಎಂದಾ ಜೈನನ [1]ದುರ್ವ[1]ಚನಮುನಾ ಜನನುತಚರಿತ್ರಂ ಕೇಳ್ದು—

ಮುಖವುಳ್ಳವನಾಗಿ—೧೧. 'ಎಲೈ ಶೈವನೇ, ನಿನಗೆ ನನ್ನ ಮೇಲೆ ಇಷ್ಟೊಂದು ಆಗ್ರಹವೇಕೆ ? ಈ ಭೂಭಾಗದಲ್ಲಿ ತುಂಬಿರುವ ಸಮಸ್ತ ಶಿವಭಕ್ತಿಯೆಲ್ಲಾ ನಿನ್ನ ತಲೆಯಲ್ಲೇ ಹುಟ್ಟಿತ್ತೇ ? ನೀನೊಬ್ಬ ಹೊಸಮನುಷ್ಯನಾಗಿದ್ದೀಯೆ. ಶಿವನ ದರ್ಶನ ಮಾಡುವಿಕೆಗೆ ಇಷ್ಟೊಂದು ಒತ್ತಾಯಮಾಡುವ ಕೊಬ್ಬನ್ನು ನನ್ನಲ್ಲೇಕೆ ತೋರಿಸು ತ್ತೀಯೆ ? ಸಾಕು ಈ ಹೋಗಲಾಡಿಸಲಶಕ್ಯವೆನ್ನುವ ಗರ್ವದ ನುಡಿಗಳನ್ನು ಬಿಟ್ಟು ಬಿಡು ! ೧೨–೧೩. 'ಗುಡಿ' ಎಂದರೆ ಬಸದಿಯೇ ! ಜಗತ್ತಿಗೆಲ್ಲ ಒಡೆಯನೆಂದರೆ ಜಿನನೇ ! ಬೇರೆ ಇನ್ನು ಯಾವ ದೇವರೂ, ಗುಡಿಯೂ ಲೋಕದಲ್ಲಿ ಇರುವವೇ ? ಹೇಳು ! ನೀನು ಮಾತನಾಡುವುದು ಇದೇನು ? ಒಂದು ವೇಳೆ (ಹಾಗೆ ಬೇರೆ ಗುಡಿ ಯಾಗಲಿ ದೈವವಾಗಲಿ) ಇವೆಯೆನ್ನುವುದಾದರೆ, ಈಗ ನಿನ್ನ ಶಿರಸ್ಸನ್ನು ಕತ್ತರಿಸಿಕೊಂಡು ಏಳು ದಿವಸಗಳು ಕಳೆದಮೇಲೆ ಚೆನ್ನಾಗಿ (ಪುನಃ) ಹತ್ತಿಸಿಕೊಂಡರೆ, ಭೂಮಿಗೆಲ್ಲ ಶಿವನೇ ದೇವರು, ಮಹಾಕಲಿಯೆನಿಸಿದ ನೀನೇ ಭಕ್ತ ; ಬೇರೆ ಮಾತೇನು ? ಈಗ ನಿನ್ನ ಘನತೆಯನ್ನು ನಾನು ನೋಡುತ್ತೇನೆ. ವ॥ ಹೀಗೆಂದ ಆ ಜೈನನ ದುಷ್ಟವಚನವನ್ನು ಜಗತ್ತಿನಲ್ಲೆಲ್ಲ ಶ್ಲಾಘ್ಯನೆನಿಸಿದ ಚರಿತ್ರೆಯುಳ್ಳ ಆ ಏಕಾಂತರಾಮಯ್ಯನು ಕೇಳಿ—

1 ವ(ಚ, ಗ)

ಇಱಿವುದು ತಡಮಲ್ತೀತನ
ನಿಱಿದೊಡೆ ಸತ್ತಪನದೇಕೆ ಮೂದಲಿಸಿದ ಕ
ಟ್ಟೆಱಿಕದ ಕಜ್ಜಮನೀಗಳೆ
ನೆಱೆ ತೋರ್ಪುದೆ ಪಂತಮಂತೆ ಗೆಯ್ದಪೆನೆನುತುಂ ೧೪

ವ॥ ಎಂದು ವೀರಭಕ್ತಿ ವಿಜೃಂಭಿಸೆ ನಿರ್ಧಾರಣಂಗೆಯ್ದುರ್ಬಿ ನಿಂದು—

ಕಡುಪಿಂ ಪೂಣ್ದಲೆ ಜೈನ ಕೇಳ್ಜಿನನೆ ದೈವಂ ಲೋಕಕೆಂದೇಳ್ಗೆಯುಂ
ನುಡಿವುತ್ತಿರ್ದಪೆ ನಾಭಿರಾಜ ಮರುತಾದೇವ್ಯಾತ್ಮಜಂ ಲೋಕಕೆಂ
ತೊಡೆಯುಂ ತಾನೆನಿಸಿರ್ದನೆಮ್ಮ ಶಿವಭಕ್ತವ್ರಾತದಿಂ ಬನ್ನಮಂ
ಪಡೆದಂ ತಾಂ ಮಗುಳ್ದಿಂತು ಕೇಳ್ದುಮಱಿದಿರ್ದುಂ ಕೆಮ್ಮನೇನೆಂದಪಯ್ ೧೫

ಶಿರಮರಿದು ಮಗುಳ್ದು ಪಡೆವುದಿ
ದರಿದೇ ಕೇಳ್ಮುನ್ನಮೆಮ್ಮ ಶರಣರ್ಶಿರಮಂ
ಕರಮರಿದು ಮೇಣದಂ ಪಡೆ
ಯರೆ ನಿನಗಾನೊರೆವೆನವರ ಚರಿತಮನೀಗಳ್ ೧೬

ಸಾರತರ ಭಕ್ತಿ ಮಿಗೆ ಜಂ
ಬೂರ ಮಹಾಕಾಳನೆಂಬ ಭಕ್ತಂ ಶಿರಮಂ
ಮಾರಾರಿಗೆ ಕೊಱೆದರ್ಪಿಸಿ
ಪೌರಜನಂ ಪೊಗಳೆ ಮಗುಳೆ ಪಡೆದೊಪ್ಪಿರ್ದಂ ೧೭

೧೪. (ಈತನನ್ನು) ಕತ್ತರಿಸಿಹಾಕುವುದು ತಡವಿಲ್ಲದ್ದು ; ಈತನನ್ನು ಇರಿದು ಹಾಕಿದರೆ ಸತ್ತೇ ಹೋಗುತ್ತಾನೆ, ಅದಾದರೂ ಏಕೆ ? ಇವನು ತಿರಸ್ಕರಿಸಿ ನುಡಿದ ಮಹಾ ಸಾಹಸದ ಕಾರ್ಯವನ್ನು ಈಗಲೇ ಚೆನ್ನಾಗಿ ಮಾಡಿತೋರಿಸುವುದೇ ನನ್ನ ಶಪಥ ; ಹಾಗೆಯೇ ಮಾಡುತ್ತೇನೆ ಎನ್ನುತ್ತ—ವ॥ ಹೀಗೆಂದು ವೀರಭಕ್ತಿಯು ಆಧಿಕ್ಯಗೊಳ್ಳು ವಂತೆ ನಿರ್ಧಾರಮಾಡಿ ಉತ್ಸಾಹದಿಂದ ನಿಂತುಕೊಂಡು—೧೫. ಶೌರ್ಯವಿಶಿಷ್ಟನಾಗಿ ಶಪಥಮಾಡಿ, 'ಎಲೈ ಜೈನನೇ ಕೇಳು : ಲೋಕಕ್ಕೆ ಜಿನನೇದೇವರೆಂದು ಅವನ ಹೆಚ್ಚಳ ವನ್ನು ಮಾತನಾಡುತ್ತಿದ್ದೀಯೆ. ನಾಭಿರಾಜನಿಂದ ಮರುತಾದೇವಿಯ ಗರ್ಭದಲ್ಲಿ ಹುಟ್ಟಿದವನು ಲೋಕಕ್ಕೆ ದೇವನೆಂತಾದಾನು ? (ಮೇಲಾಗಿ) ಅವನು ನಮ್ಮ ಶಿವ ಭಕ್ತರ ಸಮೂಹದಿಂದ ಭಂಗಗೊಂಡವನಾಗಿದ್ದಾನೆ. ಇದನ್ನು ನೀನು ಕೇಳಿ ತಿಳಿದಿದ್ದರೂ ಪುನಃ ಹೀಗೆ ವ್ಯರ್ಥವಾಗಿ (ಲೋಕಕ್ಕೆ ಆ ಜಿನನೇ ದೈವನೆಂದು) ಮಾತನಾಡು ತ್ತಿದ್ದೀಯೆ. ೧೬. ಶಿರವನ್ನು ಕತ್ತರಿಸಿಕೊಂಡು ಪುನಃ ಪಡೆಯುವುದೇನು ಅಸಾಧ್ಯ ಕಾರ್ಯವೇ ? ಕೇಳು : ಈ ಪೂರ್ವದಲ್ಲಿ ನಮ್ಮ (ಅನೇಕ) ಶರಣರು ಶಿರಸ್ಸನ್ನು ಚೆನ್ನಾಗಿ ಕತ್ತರಿಸಿಕೊಂಡು, ಪುನಃ ಅದನ್ನು ಪಡೆದಿಲ್ಲವೇ ? ಅವರ ಚರಿತ್ರೆಗಳನ್ನು ನಿನಗೀಗ ಹೇಳುತ್ತೇನೆ : ೧೭. ಸಾರತರವಾದ ಮಿಗಿಲಾದ ಶಿವಭಕ್ತಿಯಿಂದ ಕೂಡಿದ್ದ ಜಂಬೂರು ಮಹಾಕಾಳಯ್ಯನೆಂಬ ಭಕ್ತನು, ಪರಮೇಶ್ವರನಿಗೆ ತನ್ನ ಶಿರಸ್ಸನ್ನು ಕತ್ತರಿಸಿ ಅರ್ಪಣಮಾಡಿ, ಪಟ್ಟಣದ ಜನರೆಲ್ಲ ಹೊಗಳುತ್ತಿರುವಂತೆ ಪುನಃ ಶಿರಸ್ಸನ್ನು ಪಡೆದು

ಶರಣಂ ಗೋವಿಂದಭಟ್ಟಾರಕನನುಪಮನಾ ವಾರ್ತೆಗೇಳ್ದಲ್ಲಿಗೇಳ್ತಂ
ದಿರದೀಶಂಗಿತ್ತ ನಿರ್ಮಾಲ್ಯಶಿರಮನಿವನಿಂತಾಂತುದೇ ತಪ್ಪೆನುತ್ತೀ
ಶ್ವರಿಯಾಣ್ಮಂಗರ್ಪಿಸುತ್ತುಂ ಕೊಱೆದು ನಿಜಶಿರೋಂಭೋಜಮಂ ಬೇಱದೊಂದಂ
ಶಿರಮಂ ಮೂಱುಂ ದಿನಂಗಳ್ಕಳಿಯೆ ಪಡೆದನಾ ಲಿಂಗದಿಂ ಸಾಹಸಾಂಕಂ ೧೮

ವ॥ ಅಂತವಂ ಪಡೆಯೆ ಕಂಡಲ್ಲಿ ಮೊರಟದ ಬಂಕಿದೇವನೆಂಬ ಚಲದಂಕಭಕ್ತಂ ಪರಿಹಾಸಂಗೆಯ್ದು ಸಂಭ್ರಮಿಸಿ ನಿಂದು—

ಅನಯದಿನಿವಂಗೆ ಮೂಱುಂ
ದಿನಂಬರಂ ಶಿರಮನೀಯದಿರ್ಪಂದಭವಂ
ಘನದೀರ್ಘನಿದ್ರೆಯೊಳ್ಸಂ
ದನೊ ಮೆಯ್ಯಂ ಮಱೆದು ನಿದ್ರೆಗೆಯ್ದನೊ ತಿಳಿಯೆಂ ೧೯

ವ॥ ಎಂದೇಳಿದಂಗೆಯ್ದು ನಕ್ಕು ಪನ್ನತಿಕೆಯಿಂ ತನ್ನ ಕರತಳ ಕರಾಳ ಖಡ್ಗಮಂ ಜಡಿದಡಸಿ ಪಿಡಿದು ಸಾರತರ ವೀರಭಕ್ತಿಧುರಂಧರಂ ನಿಜಶಿರಮಂ ಗರಿಲನರಿದು ಮಗುಳ್ದೊಗೆವ ಶಿರಮನಂತೆ ಕೊಱೆದು—

ಕುಂದದ ನಿಜಭಕ್ತಿಯ ಬಲ
ದಿಂದಂ ತಲೆ ಮತ್ತೆ ಮತ್ತೆ ಮೊಳೆವುತ್ತಿರೆ ಶೌ

ಶೋಭಿಸಿದನು. ೧೮. ಅನುಪಮ ಶರಣನೆಂದೆನಿಸಿದ ಗೋವಿಂದ ಭಟ್ಟಾರಕನು ಈ ವಾರ್ತೆಯನ್ನು ಕೇಳಿ ಅಲ್ಲಿಗೆಬಂದು ಈಶ್ವರನಿಗೆ ಅರ್ಪಿಸಿದ ನಿರ್ಮಾಲ್ಯ ಶಿರಸ್ಸನ್ನು ಹೀಗೆ ಪುನಃ ಪಡೆದದ್ದೇ ತಪ್ಪು ಎನ್ನುತ್ತ, ತನ್ನ ಶಿರಸ್ಸೆಂಬ ಕಮಲವನ್ನು ಕೊರೆದು, ಪಾರ್ವತೀಪತಿಗೆ ಸಮರ್ಪಣೆ ಮಾಡಿ, ಮೂರು ದಿನಗಳನಂತರ ಆ ಸಾಹಸಾಂಕನು ಲಿಂಗ ಕೃಪೆಯಿಂದ ಬೇರೊಂದು ಶಿರಸ್ಸನ್ನು ಪಡೆದನು. ವ॥ ಈ ರೀತಿ ಅವನು ಪಡೆದುದನ್ನು ಕಂಡ ಮೊರಟದ ಬಂಕಿದೇವನೆಂಬ ಹೆಸರಿನ ಚಲವೇ ಗುರುತಾಗುಳ್ಳ ಭಕ್ತನು ಅಪಹಾಸ್ಯ ಮಾಡಿ, ಸಂಭ್ರಮಗೊಂಡು ನಿಂತು—**ಮೊರಟದ ಬಂಕಿದೇವನಕಥೆ (ಅಥವಾಮೊರಟದ ಮಲ್ಲಿಕಾರ್ಜುನನ ಕಥೆ)** ೧೯. ನೀತಿದಪ್ಪಿ (ಕ್ರಮದಪ್ಪಿ) ಈ ಗೋವಿಂದ ಭಟ್ಟಾರಕನಿಗೆ ಮೂರುದಿನಗಳವರೆಗೆ ಶಿರಸ್ಸನ್ನು ಕೊಡದೆ ಇರುವಾಗ ಪರಮೇಶ್ವರನು ಚಿರನಿದ್ರೆಯಲ್ಲಿದ್ದನೋ(ಅಥವಾ) ಎಚ್ಚರದಪ್ಪಿ ನಿದ್ರೆಮಾಡುತ್ತಿದ್ದನೋ ತಿಳಿಯೆನು. ವ॥ ಹೀಗೆಂದು ತಿರಸ್ಕಾರಮಾಡಿ ನಗುತ್ತ ಶೌರ್ಯದಿಂದ ತನ್ನ ಕಯ್ಯಲ್ಲಿರುವ ಭಯಂಕರ ಖಡ್ಗವನ್ನು ಝಳಪಿಸುತ್ತ, ಭದ್ರವಾಗಿ ಹಿಡಿದುಕೊಂಡು ಶ್ರೇಷ್ಠತರ ವೀರಶೈವ ಭಕ್ತಿಧುರಂಧರನಾದ ಮೊರಟದ ಬಂಕಯ್ಯನು ತನ್ನ ಶಿರಸ್ಸನ್ನು ಗರಿಲ್ಲೆಂದು ಕತ್ತರಿಸಿದನು. ಪುನಃ ಜಿಗಿಯುತ್ತಿರುವ ಶಿರಸ್ಸನ್ನು ಅದೇ ರೀತಿಯಲ್ಲೇ ಕತ್ತರಿಸುತ್ತ (ಇರಲು) ೨೦–೨೫. ಪವಿತ್ರವಾದ ಅವನ ಶ್ರೇಷ್ಠಭಕ್ತಿಯ ಪ್ರಭಾವದಿಂದ ಆ ತಲೆಯು ಪುನಃ ಪುನಃ ಜಿಗಿಯುತ್ತಲೇ

ರ್ಯುಂದಳೆದು ಕೊಱೆಕೊಱೆದು ತಱಿ
ಸಂದವನಭಂಗೆ ಭಕ್ತನರ್ಪಿಸುವಾ[1]ಗಳ್ ೨೦

ನಲಿವ ತಲೆ ನಗುವ ತಲೆ ಕ
ಣ್ಣಲರ್ಚಿ ನಿರೀಕ್ಷಿಸುವ ತಲೆ ಕಡಂಗುವ ತಲೆಯಾ
ರ್ದುಲಿವ ತಲೆ ಮಲೆವ ತಲೆ ಕೆಲ
ಕೊಲೆದುರ್ಬುವ ತಲೆ ಪೊದಳ್ದು ಪಾಡುವ ತಲೆಗಳ್ ೨೧

ಬೆಱೆವ ತಲೆ ಮುರಿದು ನೋಡುವ
ಮುಱುಕದ ತಲೆ ಪುರ್ಬನೇಱಿಸುವ ತಲೆ ಪಲ್ಲಂ
ಕಿಱಿವ ತಲೆ ನಿಮಿರ್ವ ತಲೆ ಬಾ
ಯ್ದೆಱೆವೊಳ್ದಲೆ ಜಯ ಜಯ ಪ್ರಣಾದದ ತಲೆಗಳ್ ೨೨

ತೂಗುವ ತಲೆ ಕುಕಿಲಿಱಿವುತೆ
ಕೂಗುವ ತಲೆ ರಸನೆದೆಱೆವ ತಲೆ ಶಿವ ಶರಣೆಂ
ದಾಗುಳಿಪ ತಲೆ ಪೊದಳ್ದನು
ರಾಗಿಪ ತಲೆ ರಂಜಿಸಿರ್ಪ ತಲೆ ಪೊಸತಲೆಗಳ್ ೨೩

ಕರಮೆಸೆಯೆ ಶತಸಹಸ್ರಂ
ಶಿರಮುವು ಶಿವಲಿಂಗಕರ್ಪಿತಂಗೆಯ್ವುತ್ತಂ
ತಿರೆ ಲಿಂಗದ ಗರ್ಭಗೃಹಾಂ
ತರಮಂ ನೆಱೆ ತೀವಿ ಲಿಂಗದಂಗದೊಳೆತ್ತಂ ೨೪

ಇರಲು ಆ ಭಕ್ತನು ಕಾರ್ಯ ವಿಶಿಷ್ಟನಾಗಿ (ಹುಟ್ಟುತ್ತಿರುವ ತಲೆಗಳನ್ನೆಲ್ಲ) ಕೊರೆಕೊರೆದು ನಿರ್ಧಾರಮನಸ್ಸಿಂದ ಶಿವನಿಗೆ ಅರ್ಪಿಸುತ್ತಿರುವಾಗ ನಲಿದಾಡುವ ತಲೆ, ನಗುತ್ತಿರುವ ತಲೆ, ಕಣ್ಣನ್ನರಳಿಸಿ ನೋಡುವ ತಲೆ, ಉತ್ಸಾಹಗೊಳ್ಳುವ ತಲೆ, ಗಟ್ಟಿಯಾಗಿ ಚೀರುವ ತಲೆ, ಮಲೆತು ನಿಲ್ಲುವ ತಲೆ, ಅಕ್ಕಪಕ್ಕಕ್ಕೆ ಒಲೆದಾಡುತ್ತ ಉಬ್ಬುತ್ತಿರುವ ತಲೆ, ಸಂತೋಷದಿಂದ ಹಾಡುವ ತಲೆ, ಬಿಗಿದುಕೊಳ್ಳುವ (ಸೆಡೆದುಕೊಳ್ಳುವ) ತಲೆ, ವಕ್ರವಾಗಿ ದೃಷ್ಟಿಯಿಟ್ಟು ನೋಡುವ ಮುರುಕದ ತಲೆ, ಹುಬ್ಬುವನ್ನೇರಿಸುವ ತಲೆ, ಹಲ್ಲು ಕಿರಿಯುವ ತಲೆ, ನಿಗುರಿ ನಿಲ್ಲುವ ತಲೆ, ಬಾಯನ್ನು ತೆರೆಯುವ ಒಳ್ಳೆಯ ತಲೆ, 'ಜಯ ಜಯ' ಎಂದು ವಿಶೇಷ ಧ್ವನಿ ಮಾಡುವ ತಲೆ, ತೂಗಾಡುವ ತಲೆ, ಕೇಕೆ ಹಾಕುತ್ತ ತೂಗಾಡುವ ತಲೆ, ನಾಲಗೆ ಹೀರಿದ ತಲೆ, 'ಶಿವನೇ ಶರಣು' ಎಂದು ಆಕಳಿಸುವ ತಲೆ, ವ್ಯಾಪ್ತವಾಗಿ ಅನುರಾಗ ತೋರಿಸುವ ತಲೆ, ಹೀಗೆ ರಂಜಿಸುತ್ತಿದ್ದ ಹೊಸ ಹೊಸವಾದ ಲಕ್ಷ ಸಂಖ್ಯೆಯ ತಲೆಗಳು ಶಿವಲಿಂಗಕ್ಕೆ ಅರ್ಪಿಸಲ್ಪಟ್ಟವುಗಳಾಗಿರಲು ಅವುಗಳೆಲ್ಲ ಶಿವಾಲಯದ ಗರ್ಭ ಗೃಹದ ಒಳಗಡೆಯಲ್ಲಿ ಪೂರ್ಣವಾಗಿ ತುಂಬಿಕೊಂಡು ಲಿಂಗದ ಅಂಗಕ್ಕೆ ಮುತ್ತಿ

---

1 ತಾ (ಗ)

ಪಸರಂ ಬೆತ್ತಿರೆ ಕಂಡು ಬಿಂಕ ಚಲದಂಕಾ ನಿನ್ನ ಸದ್ಭಕ್ತಿ ಸಾ
ಹಸದುರ್ಬಂ ನಡೆ ನೋಳ್ಪೊಡೆನ್ನಳವೆ ಹಾ ಹಾ ನಿಲ್ ಶಿರಃಶ್ರೇಣಿ ಸಂ
ದೆಸಕಂಬೆತ್ತು ಮುಸುಂಕೆ ಸೈರಿಪೆನದೆಂತೀ ಭಾರಮಂ ಪೊಣ್ಮಿದು
ಬ್ಬಸಕಃನಾರ್ಪೆನೆ ಸೋಲ್ತೆನಾಂ ನಿನಗೆ ಗೆಲ್ಲಂ ನಿನ್ನದೆಲ್ಲಂವದಿಂ ೨೫

ಬಿಡು ಬಿಡು ಕೊರಲಂ ಕೊಱೆವೀ
ಕಡುಗಜ್ಜಮನಯ್ಯ ಸಾಲ್ಗುಮೇದಾಕ್ಷಣದೊ
ಳ್ಮೃಡನವನ ಕೆಯ್ಯನೊಯ್ಯನೆ
ಪಿಡಿದು ನಿವಾರಿಸುತೆ ಮುದಮನೊದವಿಸುತಾಗಳ್ ೨೬

ಮೊರಟದ ಮಲ್ಲಿಕಾರ್ಜುನನಿಳಾತಳಮಚ್ಚರಿವಟ್ಟು ಕೀರ್ತಿಸು
ತ್ತಿರೆ ನಿಜಮಸ್ತಕವ್ರಜದ ಪೂಜೆಯನಾಳ್ದಿರೆ ಬಂಕನಂಕಮಂ
ಹರನೊಡನೊಲ್ದು ಗೆಲ್ದನವನಂದದ ಭಕ್ತರನೇಕರುಂಟು ಕೇ
ಳ್ಪರೆಯೊಳದಿರ್ಕೆ ನಿನ್ನಳವೆ ಕೇಳ್ವೊಡೆ ಮತ್ತಮನೂನಶೌರ್ಯದಿಂ ೨೭

ಸುತ್ತು ಮುತ್ತೆಲ್ಲ ಪ್ರಸಾರಗೊಂಡಿದ್ದವು. ಇದನ್ನು ಕಂಡು ಆ ಗೋವಿಂದ ಭಟ್ಟಾರಕ ಶರಣನು 'ಹೇ, ಬಿಂಕದ ಶಪಥಗಾರನಾದ ಬಂಕಿ ದೇವನೇ, ನಿನ್ನ ಸದ್ಭಕ್ತಿಯ ಸಾಹಸದ ಆಧಿಕ್ಯವನ್ನು ನೋಡುವುದು ನನ್ನ ಸಾಮರ್ಥ್ಯಕ್ಕೆ ಮಿಕ್ಕಿದ್ದು. ಹಾ! ಹಾ! ನಿಲ್ಲು ನಿಲ್ಲು! (ಈ ನಿನ್ನ) ಶಿರಸ್ಸಿನ ಸಾಲುಗಳು ಒತ್ತೊತ್ತಾಗಿ (ಶಿವಲಿಂಗದ ಸುತ್ತೆಲ್ಲ) ಮುತ್ತಿಕೊಂಡಿರುವುವು. ಇದನ್ನು ನಾನೆಂತು ಸೈರಿಸಲಿ? ಈ ರೀತಿಯ ಘನತೆಯನ್ನು ಹೊರ ಹೊಮ್ಮಿಸಿದ ನಿನ್ನ ಸಾಮರ್ಥ್ಯ ತೋರಿಸಲು ನಾನು ಸಮರ್ಥನೇ? ನಿನಗೆ ನಾನು ಸೋತೆನು, ಎಲ್ಲಾ ರೀತಿಯಲ್ಲೂ ಗೆಲುವು ನಿನ್ನದೇ ಆಯಿತು. ೨೬. 'ಅಯ್ಯ ಸಾಕು; ಕೊರಳನ್ನು ಕತ್ತರಿಸುವ ನಿನ್ನ ಈ ಸಾಹಸದ ಉದ್ಯೋಗವನ್ನು ಬಿಟ್ಟು ಬಿಡು', ಎಂದಾಕ್ಷಣದಲ್ಲಿಯೇ ಶಿವನು ಅವನ ಕಯ್ಯನ್ನು ಮೆಲ್ಲನೆ ಹಿಡಿದು (ಶಿರವನ್ನು ಕತ್ತರಿಸುವ ಅವನ ಕಾರ್ಯವನ್ನು) ನಿವಾರಣೆ ಮಾಡಿ, ಆಗ ಸಂತೋಷವುಂಟಾಗುವಂತೆ ಮಾಡಿದನು. ೨೭. (ಇಂಥ) ಮೊರಟದ ಮಲ್ಲಿಕಾರ್ಜುನನ್ನು (ಅಥವಾ ಮೊರಟದ ಬಂಕಿ ದೇವನನ್ನು) ಲೋಕವೆಲ್ಲ ಆಶ್ಚರ್ಯದಿಂದ ಕೂಡಿ ಸ್ತೋತ್ರ ಮಾಡುತ್ತಿತ್ತು. ಅವನ ಆ ಎಲ್ಲ ಶಿರಸ್ಸುಗಳೆ ಪೂಜೆಯನ್ನು ಮಾಡುತ್ತಿದ್ದವು. ಬಂಕಯ್ಯನು ಹೀಗೆ ತನ್ನ ಶಪಥವನ್ನು ಹರನೊಡನೆ ಮಾಡಿ ಗೆದ್ದನು. ಇವನಂತಹ ಭಕ್ತರು ಲೋಕದಲ್ಲಿ ಅನೇಕರುಂಟು. ಕೇಳು ಕೇಳುವುದಕ್ಕೆ ನಿನಗೆ ಸಾಮರ್ಥ್ಯವುಂಟೆ? (ಹೀಗೆಂದು) ಪುನಃ ಅತ್ಯಧಿಕ ಶೌರ್ಯದಿಂದ (ಆ ಏಕಾಂತ ರಾಮಯ್ಯನು ಜೈನನಿಗೆ ಹೇಳತೊಡಗಿದನು) ತಿರುವಾಕದೀಶ್ವರನ ಕಥೆ†

---

† ತಮಿಳು ದೇಶದ ಪ್ರಸಿದ್ಧ ಶೈವಸಮಯಾಚಾರ್ಯರಲ್ಲಿ ಒಬ್ಬರಾಗಿ ಪ್ರಸಿದ್ಧರಾದ 'ವಾಗೀಶ' ಎಂಬುವರೇ ಇವರು. ಇವರಿಗೆ ಶೈವೋಪದೇಶವಾದ ಮೇಲೆ 'ವಾಗೀಶ' ಎಂಬ ಹೆಸರು ಬಂದಿರಬಹುದು.

ನಿನ್ನ ತಥಾಗತಮತಮಂ
ಬನ್ನಂಬಡಿಸಿದ ಮದೀಯ ಶರಣರ ಪೆಂಪಂ
ಚನ್ನಲರೆ ಪೇಳ್ದಪೆಂ ಬುಧ
ಸನ್ನುತ ತಿರುವಾಕರೀಶನೆಂಬವನೊರ್ವಂ ೨೮

ತಿರುವಾರೂರೊಳಗೊಪ್ಪುವಂ ಜಿನಮತಾಚಾರ್ಯಂ ಕಳಾವೃಂದ ಬಂ
ಧುರನಿರ್ಪನ್ನಮವಂಗೆ ಶೂಲರುಜೆಯಾದತ್ತಾತನಾರೋಗದಿಂ
ಮರಣಾವಸ್ಥೆಯನಾಳ್ದು ಬಿಳ್ದು ಧರೆಯೊಳ್ ಬೇಳಪ್ಪಿನಂ ತತ್ಸಹೋ
ದರಿ ಕಂಡೆಂದಳವಂಗೆ ಶಂಕರಪದಾಂಭೋಜಾತಮಂ ಭಕ್ತಿಯಿಂ ೨೯

ಮಱೆವುಗೆ ನಿನ್ನೀ ರುಜೆಯುಂ
ಪಱಿಗುಂ ಸುಖಮಕ್ಕುಮಿದನೆ ನಂಬುಳಿದೀ ನಿ
ನ್ನೆಱಕದ ಮಂತ್ರದ ತಂತ್ರದ
ಬಱಿ ಬೆಜ್ಜದ ಕಜ್ಜದಿಂದೆ ಫಲಮಿನಿತಿಲ್ಲಂ ೩೦

ವ॥ ಎಂದ ನಿಜಾಗ್ರಜೆಯ ಹಿತೋಪದೇಶಮನವಂ ಮನದೆಗೊಂಡಂತೆ ಗೆಯ್ವೆಂ ತೊದಳ್ಲೆನ್ನನೇಪರಿಯಿಂನಾದೊಡಂ ಪೊರೆವುದೆಂದು ದೈನ್ಯೋಕ್ತಿಯಿಂ ಮೆಯ್ಯಿಕ್ಕಿ ಮಣಿಯೆ—

ಹರಶರಣರ್ಕಳಂ ನೆನೆದು ನಿಷ್ಠೆ ಪೊದಳ್ದಿರೆ ಮೂಲಮಂತ್ರದಿಂ
ಪರಮವಿಭೂತಿಯಂ ಪಿಡಿದು ಮಂತ್ರಿಸಿ ತನ್ನಿಟಲಪ್ರದೇಶದೊ

**(ವಾಗೀಶರು)** ೨೮–೩೦. (ಎಲೈ ಜೈನನೇ) ನಿನ್ನ ಜೈನ ಮತವನ್ನು ಭಂಗಗೊಳಿಸಿದ ನನ್ನ ಶರಣರ ಹಿರಿಮೆಯನ್ನು ಮನೋಹರವಾಗಿ ಹೇಳುತ್ತೇನೆ (ಕೇಳು). ಜ್ಞಾನಿಗಳಿಂದ ಶ್ಲಾಘ್ಯನೆನಿಸಿದ ತಿರುವಾಕರೀಶ್ವರನೆನ್ನುವ ಶರಣನೊಬ್ಬನು ತಿರುವಾರೂರೆಂಬಲ್ಲಿ ಶೋಭಿಸುತ್ತಿದ್ದನು. ಜಿನಮತದ ಆಚಾರ್ಯನೂ, ವಿದ್ಯಾ ಸಮೂಹದಿಂದ ತುಂಬಿದವನೂ ಎನಿಸಿದ ಅವನಿಗೆ ಹೊಟ್ಟೆನೋವಿನ ರೋಗವು ಪ್ರಾಪ್ತವಾಗಿತ್ತು. ಆತನು ಆ ರೋಗದಿಂದ ಮರಣಾವಸ್ಥೆಯನ್ನು ಹೊಂದಿ ಭೂಮಿಯ ಮೇಲೆ ಬಿದ್ದು ಶಕ್ತಿಗುಂದಿದವನಾಗಿರಲು ಅವನ ಸಹೋದರಿಯು ಕಂಡು ಅವನಿಗೆ ಹೀಗೆ ಹೇಳಿದಳು: ಶಂಕರನ ಪಾದಕಮಲಗಳನ್ನು ಭಕ್ತಿಯಿಂದ ಮರೆ ಹೊಕ್ಕರೆ, ಅವನು ನಿನ್ನ ಈ ರೋಗವನ್ನು ಪರಿಹರಿಸುವನು. (ಆಗ) ಸುಖವುಂಟಾಗುವುದು; ಇದನ್ನು ನಂಬು, ಉಳಿದ ಈ ನಿನ್ನ ಪ್ರಿಯವಾದ ಮಂತ್ರ, ತಂತ್ರ, ವ್ಯರ್ಥವಾದ ವೈದ್ಯ ಮೊದಲಾದ ಕಾರ್ಯದಿಂದ ಸ್ವಲ್ಪವೂ ಫಲವಿಲ್ಲ. ವ॥ ಹೀಗೆಂದ ತನ್ನ ಸಹೋದರಿಯ ಹಿತೋಪದೇಶವನ್ನು ಅವನು ಮನಸ್ಸಿಗೆ ತಂದುಕೊಂಡು ಹಾಗೆಯೇ ಮಾಡುತ್ತೇನೆ, ತಪ್ಪುವುದಿಲ್ಲ; ನನ್ನನ್ನು ಯಾವ ರೀತಿಯಿಂದಲಾದರೂ, ರಕ್ಷಿಸಬೇಕು, ಎಂಬ ದೀನಭಾವದ ಮಾತುಗಳಿಂದ ಕೂಡಿ, ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ ತಲೆ ತಗ್ಗಿಸಿ ನಿಲ್ಲಲು ೩೧. ಆಗ ಅವಳು ಹರಶರಣರುಗಳನ್ನು ನೆನೆದು ನಿಷ್ಠಾಯುತಳಾಗಿ 'ನಮಃ ಶಿವಾಯ' ಎಂಬ ಮೂಲ ಮಂತ್ರದಿಂದ ಶ್ರೇಷ್ಠ ವಿಭೂತಿ

ಳ್ಧರಿಸಿನಿರೀಕ್ಷಿಗೆಯ್ವುದುಮವಳ್ತ್ರವಿಲಾದುದು ಶೂಲೆಯಾಗಳ
ಚ್ಚರಿವಡುತಕ್ಕ ರಕ್ಷಿಸಿದೆಯೆಂದೆಱಗಿರ್ದನವಂ ತದಂಘ್ರಿಯೊಳ್ ೩೧

ವ॥ ಅಂತೆಱಗಿ ತನ್ನಿರೂಪದಿನಭವನಂ ಶರಣ್ವೊಕ್ಕು ಶಿವಾಜ್ಞೆಯಂ ಪೊತ್ತು ಪೊಳಲ ಪೊಲಗೇರಿಯೊಳೊಂದು ಜೀರ್ಣಕುಟಿಯೊಳ್ನೆಲಸಿರ್ದ ಸದ್ಗುರುವಂ ಕಂಡು ದಂಡ ಪ್ರಣಾಮಂಗೆಯ್ದು ವಿಧಿವದುಪಸನ್ನನಾಗಿ—

ಗುರುವರ ಪೆಳರ್ದೀ ಭವಭರ
ದುರವಣೆಗಾಂ ನಿಮ್ಮ ಚರಣಮಂ ಮಱೆವೊಕ್ಕೆಂ
ಹರದೀಕ್ಷೆಯಿತ್ತು ಪೊರೆದು
ದ್ಧರಿಸೆನ್ನನೆನುತ್ತೆ ಬಿನ್ನಪಂ ಗೆಯ್ಯಲೊಡಂ ೩೨

ಕರುಣಾಲೋಕನಮಾತ್ರದಿಂ ಮೊದಲ ದುಷ್ಕರ್ಮಂಗಳಂ ತೂಳ್ದು ಕು
ಳ್ಳಿರಿಸುತ್ತುಂ ಕಳಶೋದಕಸ್ನಪನದಿಂ ಶುದ್ಧಾತ್ಮನಂ ಮಾಡಿ ತ
ಚ್ಛಿರದೊಳ್ಶ್ರೀಶಿವಹಸ್ತಮಂ ಮಡಗಿ ಭಸ್ಮಾಲೇಪನಂಗೆಯ್ದು ಭಾ
ಸುರ ಭಾಳಸ್ಥಳದಲ್ಲಿ ದುರ್ಲಿಪಿನಿರಾಸಂಗೆಯ್ದು ತದ್ದೇಶಿಕಂ ೩೩

ಕರುಣಿಸಿ ಲಿಂಗಮಂ ಕರದೊಳಾತನ ಕರ್ಣದೊಳೀಶಮಂತ್ರಮಂ
ನಿರವಿಸಿ ಚಿದ್ಘನಪ್ರಭೆಯನಾತ್ಮನೊಳೂದಿಸಿ ಮಾಯೆಯಂ ಸಮು

ಯನ್ನು ಕೈಯಲ್ಲಿ ಹಿಡಿದು, ಆತನ ಹಣೆಯಲ್ಲಿ ಧರಿಸಿ, ನೋಡುತ್ತಿರಲು (ಆತನ) ಉದರ ಶೂಲೆಯು ಇಲ್ಲದಾಯಿತು. ಅವನು ಆಶ್ಚರ್ಯಪಡುತ್ತ 'ಅಕ್ಕ, (ನನ್ನನ್ನು) ರಕ್ಷಿಸಿದೆ' ಎಂದು ಅವಳ ಪಾದಗಳಲ್ಲಿ ನಮಸ್ಕರಿಸಿದನು. ವ॥ ಆ ರೀತಿ ನಮಸ್ಕಾರ ಮಾಡಿ, ಅವಳ ಆದೇಶದಂತೆ ಪರಮೇಶ್ವರನನ್ನು ಶರಣು ಹೊಕ್ಕು, ಶಿವನ ಆಜ್ಞೆಯನ್ನು ಧರಿಸಿ, ಆ ಪಟ್ಟಣದ ಹೊಲೆಯರ ಕೇರಿಯಲ್ಲಿ ಒಂದು ಹರಕು ಗುಡಿಸಲಿನಲ್ಲಿ ವಾಸ ಮಾಡಿಕೊಂಡಿದ್ದ ಸದ್ಗುರುವನ್ನು ಕಂಡು, ದೀರ್ಘದಂಡ ಪ್ರಣಾಮ ಮಾಡಿ, ವಿಧಿವತ್ತಾಗಿ ಅವನ ಶಿಷ್ಯತ್ವವನ್ನು ಪಡೆದು, ೩೨–೩೩. ಗುರುಶ್ರೇಷ್ಠನೇ, ಜನನ ಮರಣಾತ್ಮಕವಾದ ಈ ಸಂಸಾರ ಭಾರದ ತೀವ್ರತೆಗೆ ಹೆದರಿದ ನಾನು ನಿಮ್ಮ ಪಾದದ ಮರೆ ಹೊಕ್ಕಿದ್ದೇನೆ. ನನಗೆ ಶಿವದೀಕ್ಷೆಯಿತ್ತು ಸಂರಕ್ಷಿಸಿ ಉದ್ಧಾರ ಮಾಡಬೇಕೆಂದು ವಿಜ್ಞಾಪಿಸಿಕೊಳ್ಳಲಾಗಿ ಆ ದೇಶಿಕವರೇಣ್ಯನು ಕಾರುಣ್ಯ ಪೂರ್ಣವಾದ ನೋಡುವಿಕೆಯಿಂದಲೇ ಅವನ ಪೂರ್ವದ ದುಷ್ಕರ್ಮಗಳನ್ನೆಲ್ಲ ತೊಡೆದುಹಾಕಿದನು. ಕುಳ್ಳಿರಿಸಿಕೊಂಡು (ಅವನನ್ನು) ತನ್ನ ಕಮಂಡಲೋದಕದ ಸ್ನಾನದಿಂದ ಪರಿಶುದ್ಧಾತ್ಮನನ್ನಾಗಿ ಮಾಡಿ, ಶಿರದಲ್ಲಿ ಮಂಗಳಕರವಾದ ಹಸ್ತವನ್ನಿಟ್ಟು. ಹಣೆಯ ಮೇಲೆ ಭಸ್ಮವನ್ನು ಧರಿಸಿ, ಹಣೆಯಲ್ಲಿನ (ಬ್ರಹ್ಮನು ಬರೆದ) ಕೆಟ್ಟಲಿಪಿಯನ್ನು ಹೋಗಲಾಡಿಸಿದನು. ೩೪. ಆತನ ಕೈಗೆ ಲಿಂಗವನ್ನು ಕರುಣಿಸಿ ಕೊಟ್ಟು, ಕಿವಿಯಲ್ಲಿ ಶಿವಮಂತ್ರವನ್ನು ಉಸುರಿ ಆತ್ಮದಲ್ಲಿ ಪ್ರಕಾಶಮಯ ಜ್ಞಾನವನ್ನುಂಟು ಮಾಡಿ, ಮಾಯೆಯನ್ನು (ಅಜ್ಞಾನವನ್ನು) ಓಡಿಸಿ, ಇಷ್ಟಲಿಂಗದಿಂದ ಕೂಡಿದ ಅವನ ಅಂಗವನ್ನು ದೃಢವಾಗಿ

ತ್ತರಿಸಿ ನಿಜಾಂಗಲಿಂಗ ದೃಢಯೋಗವನಾಗಿಸಿ ತತ್ಸ್ವರೂಪವಂ
ಪರಿವಿಡಿಗೆಯ್ದು ಬೋಧಿಸಿ ನಿವಿರ್ಚಿ ನಿರಾಕುಳಚಿತ್ತವೃತ್ತಿಯಂ ೩೪

ವಿತತ ಶಿವಜ್ಞಾನ ಸಮು
ನ್ನತ ಸತ್ಕ್ರಿಯೆಯುಂ ನೆಗಳ್ಚಿ ಗುರುಚರಲಿಂಗಾ
ರ್ಪಿತ ಸುಪ್ರಸಾದಸುಖಪಂ
ಣತಿಯುಂ ಪದೆದಿತ್ತು ತಿಳುಪಿ ಚಿದ್ಘನದಿರವಂ ೩೫

ಜೀವನ್ಮುಕ್ತಿಗೆ ಮೂಲಕಾರಣಮೆನಿಪ್ಪಸ್ಪಂದಪೂರ್ಣ ಪ್ರಭಾ
ಭಾವೋದ್ಯತ್ಪ್ರಣವಾಂಗಲಿಂಗಮನೆ ಸಾಕ್ಷಾತ್ಕಾರಮಂ ಮಾಡಿ ವಿ
ದ್ಯಾವಾಸಂ ಗುರುದೀಕ್ಷೆಗೆಯ್ಯೆ ದಯೆಯಿಂ ಕೆಯ್ಕೊಂಡು ಸದ್ಭಕ್ತಿವೆ
ತ್ತಾ ವಾಗೀಶ್ವರನಿರ್ದನೀಶ್ವರಪದಾಂಭೋಜಾತಪೂಜೋತ್ಸವಂ ೩೬

ಪರಮಾನಂದವನಾಳ್ದು ಭಸ್ಮವಿಳಸದ್ರುದ್ರಾಕ್ಷೆಯುಂ ತಾಳ್ದು ಭಾ
ಸುರ ಪಂಚಾಕ್ಷರಮಂತ್ರಮಂ ಜಪಿಯಿಸುತ್ತೀಶಾರ್ಚನಂಗೆಯ್ವುತುಂ
ಚರಪಾದಾಂಬುಜಮಂ ಸಮರ್ಚಿಸುತೆ ಶೈವಾಚಾರಸಂಪತ್ತಿವೆ
ತ್ತಿರದರ್ಥಾಂಗನಿಜಾಸುಮುಖ್ಯಮನುಮೇಶಂಗರ್ಪಿಸುತ್ತಳ್ಕಱಿಂ ೩೭

ಪರಮ ಶಿವಲಾಂಛನಸ್ಪ
ಸ್ಫುರಿತಾಂಗಂ ಭಕ್ತಿಪಾರವಶ್ಯದಿನಿಂತೊ

ಸಂಬಂಧಗೊಳಿಸಿ, ಆ ಲಿಂಗಸ್ವರೂಪವನ್ನು ಕ್ರಮವಾಗಿ ಬೋಧಿಸಿ, ಚಿತ್ತವೃತ್ತಿಯನ್ನು ನಿಶ್ಚಂಚಲಗೊಳಿಸಿದನು. ೩೫. ಪ್ರಸಿದ್ಧವಾದ ಪರಶಿವಜ್ಞಾನ ಮತ್ತು ತತ್ಸಂಬಂಧವಾದ ಶ್ರೇಷ್ಠಕ್ರಿಯೆಯನ್ನು ಅವನಿಗೆ ಉಂಟುಮಾಡಿ, ಗುರು ಮತ್ತು ಜಂಗಮಾರ್ಪಿತವಾದ ; ಶ್ರೇಷ್ಠಪ್ರಸಾದದ ಸುಖದ ಪರಿಣಾಮವನ್ನು ಸಂತೋಷದಿಂದ ಕೊಟ್ಟು ಉತ್ಕೃಷ್ಟವಾದ ಪರಮಾತ್ಮನ ಜ್ಞಾನದ ರೀತಿಯನ್ನು ತಿಳಿಸಿದನು. ೩೬. ಜೀವನ್ಮುಕ್ತಿಗೆ ಕಾರಣವೆಂದೆನಿಸುವ ಅಚಲಿತವಾದ ಪೂರ್ಣ ಪ್ರಕಾಶಾಧಿಕ್ಯದಿಂದ ಕೂಡಿದ, ಉತ್ಕೃಷ್ಟ ಓಂಕಾರವೆಂಬ ಮೂಲ ಪ್ರಣವವೇ ದೇಹವಾಗಿಉಳ್ಳ, ಲಿಂಗದ ಸಾಕ್ಷಾತ್ಕಾರವನ್ನುಂಟುಮಾಡುತ್ತ, ಸಕಲವಿದ್ಯೆಗಳಿಗೆ ಆವಾಸನೆನಿಸಿದ ಗುರುವು ದೀಕ್ಷೆ ಮಾಡಲಾಗಿ, ಅಂಥ ಶಿವದೀಕ್ಷೆಯನ್ನು ಪಡೆದು, ಈಶ್ವರವಿಷಯಕ ಸದ್ಭಕ್ತಿಯನ್ನು ಹೊಂದಿ, ಈಶ್ವರಪಾದಪೂಜೆಯಲ್ಲಿ ಕುತೂಹಲವುಳ್ಳವನಾಗಿ ವಾಗೀಶ್ವರನು (ಸುಖದಿಂದ) ಇದ್ದನು, ೩೭. (ಆ ವಾಗೀಶನು) ಪರಮಾನಂದಭರಿತನಾಗಿ, ಭಸ್ಮ. ಶ್ರೇಷ್ಠ ರುದ್ರಾಕ್ಷಿಗಳನ್ನು ಧರಿಸಿ, ಪ್ರಕಾಶಮಾನವಾದ ಪಂಚಾಕ್ಷರಮಂತ್ರವನ್ನು ಜಪಿಸುತ್ತ, ಈಶ್ವರ ಪೂಜೆಯನ್ನು ಮಾಡುವವನಾಗಿ, ಜಂಗಮ ಪಾದಕಮಲಗಳನ್ನು ಸಮರ್ಪಿಸುತ್ತ, (ಈ ಪ್ರಕಾರದಲ್ಲಿ) ವೀರಶೈವಾಚಾರ ಸಂಪತ್ತಿನಿಂದ ಕೂಡಿ, ತನ್ನ ಐಶ್ವರ್ಯ, ದೇಹ ಪ್ರಾಣಾದಿಗಳನ್ನು ಈಶ್ವರನಿಗೆ ಪ್ರೀತಿಯಿಂದ ಅರ್ಪಿಸಿದವನಾಗಿದ್ದನು. ೩೮. ವಾಗೀಶನು ಹೀಗೆ ಶ್ರೇಷ್ಠವಾದ ಶಿವಸಂಬಂಧದ ಲಾಂಛನಗಳಿಂದ ಪ್ರಕಾಶಿಸುವ ದೇಹವುಳ್ಳವನಾಗಿ

ಪ್ಪಿರೆ ವಾಗೀಶಂ ಜೈನೋ
ತ್ಕರವಿೂಕ್ಷಿಸಿ ಮುಳಿದು ಕೆಳರ್ದು ಗಳಪುತೆ ಪಲವಂ ೩೮

ಮೃಡದರ್ಶನಮಂ ಪೊಕ್ಕಂ
ಜಡಮತಿ ಜಿನಮತಮನುಳಿದು ಮದ್ಗುರುವೆನುತುಂ
ಪಿಡಿದಿಭದ ಮುಂದೆ ನೂಂಕಿದೊ
ಡೆಡೆಗಿಡದೆ ಗಜಾಸುರಾರಿ ಶರಣೆನುತಿರ್ದಂ ೩೯

ಅಂಜಿದುದು ಮತ್ತಕುಂಜರ
ನಂಜದವರ್ದುಗುಳ್ದ ಫಣಿಗಳಿಂ ಬಾಧಿಸೆ ಮೃ
ತ್ಯುಂಜಯ ಫಣಿಧರ ಶರಣೆನು
ತುಂ ಜಯಿಸಿದನುಗ್ರಫಣಿಗಳಂ ವಾಗೀಶಂ ೪೦

ಶವಣರದನೀಕ್ಷಿಸುತೆ ಘೋ
ರವಿಷಂ ತೀವಿರ್ದ ಕೊಳದೊಳಿಡೆ ಸಾಗರಸಂ
ಭವವಿಷಹರ ಶರಣೆನುತಂ
ಜವದಿಂ ಮೇಗೊಗೆದು ಜಯಿಸಿದಂ ವಿಷಮನದಂ ೪೧

ಅಳಿಯನಿವನಾವ ತೆಜದಿಂ
ದಳಿವವೊಲೆಸಗುವೆವೆನುತ್ತೆ ಕಾಳ್ಗಿರ್ಚಿನೊಳಾ
ಖಳರಿಡೆ ಜಯಿಸಿದನದನು
ಜ್ವಳ ಶಿಖಿರಸನಾಪ್ರಹರಣ ಶರಣೆನುತಾಗಳ್ ೪೨

ಶೋಭಿಸುತ್ತಿರಲು, ಜೈನರ ಸಮೂಹವು ನೋಡಿ, ಕೋಪಗೊಂಡು, ಕೀಳ್ಮಾಡಿ ಹಲವಾರು ವಿಧದಲ್ಲಿ ನಿಂದೆಗೆಯ್ಯುತ್ತಿತ್ತು. ೩೯. ಮಂದಮತಿಯಾದ ಇವನು ಜೈನ ಮತವನ್ನು ಬಿಟ್ಟು ನನ್ನಗುರುವೆಂದು ಶಿವಮತವನ್ನು ಪ್ರವೇಶಿಸಿದನು, ಎನ್ನುತ್ತ (ಆ ಜೈನರು) ಇವನನ್ನು ಹಿಡಿದು ಆನೆಯಮುಂದೆ ನೂಕಲಾಗಿ ಅವನು 'ಗಜಾಸುರನಿಗೆ ವೈರಿಯಾದ ಶಿವನಿಗೆ ಶರಣು' ಎನ್ನುತ್ತಿದ್ದನು. ೪೦. ಇವನನ್ನು ಕಂಡು ಮದೋನ್ಮತ್ತವಾದ ಆ ಆನೆಯು ಹೆದರಿತು, ಅಷ್ಟಕ್ಕೂ ಅವರು ಹೆದರದೆ, ಹಾವುಗಳಿಂದ ಬಾಧೆಗೊಳಿಸಲು, 'ಮೃತ್ಯುಂಜಯನೇ, ಸರ್ಪಾಭರಣನೇ, ಶರಣು' ಎನ್ನುತ್ತ ಆ ಭಯಂಕರ ಹಾವುಗಳನ್ನು ಜಯಿಸಿದನು. ೪೧. ಜೈನ ಶ್ರವಣರು ಅದನ್ನು ಕಂಡು, ಘೋರ ವಿಷದಿಂದ ಕೂಡಿದ ಸರೋವರದಲ್ಲಿ ಮುಳುಗಿಸಿದರು. 'ಕ್ಷೀರಸಾಗರದಲ್ಲಿ ಹುಟ್ಟಿದ ಹಾಲಾಹಲ ವಿಷವನ್ನು ಧರಿಸಿದ ಶಿವನೇ ಶರಣು' ಎನ್ನುತ್ತ ಬೇಗನೆ ಮೇಲಕ್ಕೆ ಹಾರಿ ಬಂದು ಆ ವಿಷವನ್ನು ಜಯಿಸಿದನು. ೪೨. ಯಾವರೀತಿಯಿಂದಲೂ ಇವನು ಸಾಯುತ್ತಿಲ್ಲವೆಂದುಕೊಂಡು ಕಾಡುಕಿಚ್ಚಿನಿಂದ ಇವನು ಸಾಯುವಂತೆ ಮಾಡುತ್ತೇವೆಂದು ಕಾಡುಕಿಚ್ಚಿಗೆ ಗುರಿಮಾಡಲು, 'ಪ್ರಕಾಶಮಾನವಾದ ಬೆಂಕಿಗಳ ನಾಲಿಗೆಯನ್ನೇ ಕತ್ತರಿಸಿದ ಶಿವನೇ

ವ॥ ಮತ್ತಮಿಂತು ಕತಿಪಯ ಕಪಟೋಪಾಯದಿಂ ಕೊಲಲ್ಬಗೆದೆಸಗಿದಂದವೆಲ್ಲವಂ ತಿರುವಾಕರೀಶಂ ಗೆಲೆ ಕಂಡು ಭಯಂಗೊಂಡೀ ಮಹಾಮಹಿಮಂ ಬಳಿಯಿನೆಮ್ಮನೆಂತುಂ ಭಂಜಿಸದೆ ಮಾಣನೆಂದು ನೆನೆದಾ ಶವಣರೆಲ್ಲರವನತರಾಗಿ ಶರಣ್ಬೊಗಲೊಡನನಿಬರೆಲ್ಲರ ಭವಿಮುದ್ರೆಯಂ ತೊಡೆದು ಶಿವಮುದ್ರಾಂಕಿತರಂ ಮಾಡಿ ಶಿವಭಕ್ತಿಭಾಗ್ಯಮನಿತ್ತು ಪೊರೆದು—

ಕಳ್ತಲೆಯಂ ಕಳೆವಂತಿರೆ
ಕಿಳ್ತು ಬಿಸುಟ್ಟನ್ನೆನಿಂ ಜಿನಪ್ರತಿಮೆಗಳಂ
ತಳ್ತ ಗುಡಿಗಳನೆ ಕಿಡಪಿ ನೆ
ಗಳ್ತೆಗೆ ನೆಲೆಯಾಗೆ ನೋಳ್ಪರರಿದೆನೆ ಧರೆಯೊಳ್ ೪೩

ಜಿನಮತಮದನಗಕುಲಿಶಂ
ಜಿನಮತಘನಚಂಡಮಾರುತಂ ಜಿನಮತಕಾ
ನನಪರಶುವೆಂಬ ಬಿರಿದೆಸೆ
ಯೆ ನಿತಾಂತಂ ಮೆಱೆದನಾಗನೇ ವಾಗೀಶಂ ೪೪

ಆರುಹತ ಕೇಳ್ವುದೆಲೆ ತಿರು
ವಾರೂರೆನಿಸಿರ್ಪ ಪೊಳಲೊಳೊಪ್ಪುವನೊರ್ವಂ
ಮಾರಹರಭಕ್ತನಚಳಿತ
ಧೀರ ನಿರುತ್ತಾಂಡಿಯೆಂಬನನಘಚರಿತ್ರಂ ೪೫

ಶರಣು' ಎನ್ನುತ್ತ ಅದನ್ನು ಜಯಿಸಿದನು. ವ॥ ಈರೀತಿ ಅನೇಕ ಕಪಟೋಪಾಯಗಳಿಂದ ಕೊಲ್ಲಲು ಯೋಚಿಸಿ, ಅದರಂತೆ ಮಾಡಲು, ಅವೆಲ್ಲವನ್ನೂ ತಿರುವಾಕರೀಶನು ಗೆಲ್ಲಲು (ಅವನನ್ನು) ಕಂಡು ಭಯಗೊಂಡವರಾಗಿ, ಈ ಮಹಿಮನು (ಇಷ್ಟು ಹಿಂಸೆಯನ್ನು ನಾವು ಮಾಡಿದ) ನಮ್ಮನ್ನು ಆಮೇಲೆ ನಾಶಮಾಡದೆ ಬಿಡನು ಎಂದು ಯೋಚಿಸಿದರು, ಆ ಜೈನ ಸಂನ್ಯಾಸಿಗಳೆಲ್ಲ ತಲೆಬಾಗಿ ಶರಣು ಹೊಕ್ಕರು. ಆಗ ಅವರೆಲ್ಲರ ಭವಿಮುದ್ರೆಯನ್ನು ತೊಡೆದು ಹಾಕಿ ಶಿವಲಾಂಛನ ವಿಶಿಷ್ಟರನ್ನಾಗಿ ಮಾಡಿ, ಶಿವಭಕ್ತಿಯೆಂಬ ಭಾಗ್ಯವನ್ನುಂಟುಮಾಡಿ ರಕ್ಷಿಸಿದನು. ೪೩. ನೋಡುವವರಿಗೆ ಇದು ಆಶ್ಚರ್ಯವೆನ್ನುವ ಹಾಗೆ ಪರಾಕ್ರಮದಿಂದ ಕತ್ತಲೆಯನ್ನು ನಾಶಮಾಡುವಂತೆ, ಜಿನಪ್ರತಿಮೆಗಳನ್ನು ಕಿತ್ತು ಬಿಸಾಡಿ, ಆ ಗುಡಿ (ಬಸದಿ)ಗಳನ್ನೆಲ್ಲ ಕೆಡವಿ ಹಾಕಿ ಪ್ರಸಿದ್ಧಿಗೆ ನೆಲೆಯಾಗುವಂತೆ ಮಾಡಿದನು. ೪೪. ಹೀಗೆ ಆ ವಾಗೀಶನು 'ಜೈನಮತವೆಂಬ ಮರದ ಪರ್ವತಕ್ಕೆ ವಜ್ರಾಯುಧ, ಜೈನ ಮತವೆಂಬ ಮೋಡಗಳಿಗೆ ಚಂಡಮಾರುತ, ಜೈನಮತವೆಂಬ ಅರಣ್ಯಕ್ಕೆ ಕೊಡಲಿ,' ಎಂಬ ಬಿರುದು ಶೋಭಿಸುವ ಹಾಗೆ ನಿಶ್ಚಯವಾಗಿ ಮೆರೆದವನಾಗಲಿಲ್ಲವೇ? ೪೫. ಎಲೈ ಜೈನನೇ, ಕೇಳು: ತಿರುವಾರೂರೆಂಬ ಪಟ್ಟಣದಲ್ಲಿ ಪರಮೇಶ್ವರನ ಭಕ್ತನೂ ಅಚಲನಾದ ಧೀರನೂ, ಎಂದೆನಿಸಿದ, 'ನಿರುತ್ತಾಂಡಿ' ಎಂಬ ಹೆಸರಿನ ಪಾಪರಹಿತವಾದ ಚರಿತ್ರೆಯುಳ್ಳ

ಜಾತ್ಯಂಧಕನಖಿಳಬುಧ
ಸ್ತುತ್ಯನವಂ ಲಿಂಗಮಜ್ಜನಾರ್ಥದ ಕೊಳನಂ
ಸತ್ಯನಿಧಿ ನೆಗಳ್ವ ಬಗೆವಿಡಿ
ದತ್ಯಧಿಕಮೆನಿಪ್ಪ ಲಿಂಗಗೇಹದ ಬಳಿಯೊಳ್ ೪೬

ಪೆಡಗೆ ಗುದ್ದಲಿ ನೇಣ್ಗಳಂ ತಳೆದೊಳ್ಪಿನಿಂ ಶಿವಲಿಂಗದಾ
ಗುಡಿಯ ಮುಂಗಡೆಯೊಂದುಮಂ ಕೊಳದಗ್ರದೇಶದೊಳೊಂದುಮಂ
ನಡುತೆ ಕಂಭಮನಲ್ಲಿ ಪೆರ್ವಿರ್ಗಳಿಗಟ್ಟುತುಂ ಪಿಡಿದೆಯ್ದೆ ಮ
[1]ಣ್ಣಡ[1]ಕುತೊಂದೆಡೆ ನೇರ್ಪುಗೊಂಡಗುಳತ್ತು[2]ಮಂತ[2]ವನಿರ್ಪಿನಂ ೪೭

ವ॥ ಜಿನಸಮಯಸ್ಥರಾದ ಕುಮತಿಗಳದಂ ಕಂಡಳ್ಕಜಂಗೊಂಡೇಳ್ತಂದು ನಟ್ಟಕಂಭಮಂ ಮುಱಿದು ನೇಣಂ ಪಱಿದು ಭಕ್ತಕೃತ್ಯಕ್ಕೆ ವಿಘ್ನಮಂ ನೆಗಳ್ಚಿ ಪಿರಿದು ಪರಿಹಾಸಂ ಗೆಯ್ಯುತ್ತುಮಿರ್ಪ ಸಮಲ್ಲಿ—

ಆಗಳೆ ಕಣ್ಬಡೆದಭವನಿ
ನಾ ಗುಣನಿಧಿ ಜಿನಮತಸ್ಥರಂ ಕುರುಡರನಂ
ದಾಗಿಸಿ ಭಂಗಿಸಿ ಕೆಡಪಿ ಜಿ
ನಾಗಾರಮನಾತ್ಮಮಹಿಮೆಯುಂ ಪ್ರಕಟಿಸನೇ ೪೮

ಒಬ್ಬನು ಶೋಭಿಸುತ್ತಿದ್ದಾನೆ. ೪೬–೪೭. ಅವನು ಹುಟ್ಟುಕುರುಡನು, ಸಮಸ್ತ ವಿದ್ವಾಂಸರ ಶ್ಲಾಘನೆಗೆ ಪಾತ್ರನಾದವನು. ಆ ಸತ್ಯಕ್ಕೆ ನಿಧಿಯೆನಿಸಿದ ಭಕ್ತನು ಲಿಂಗ ಮಜ್ಜನಕ್ಕೋಸ್ಕರ ಒಂದು ಕೊಳವನ್ನು ನಿರ್ಮಾಣ ಮಾಡುವ ಪ್ರೀತಿಯಿಂದ ಕೂಡಿದ ಮನಸ್ಸುಳ್ಳವನಾಗಿ, ಅತ್ಯಂತ ಶ್ರೇಷ್ಠವೆನಿಸಿದ ಶಿವಾಲಯದ ಬಳಿಯಲ್ಲಿ ಹೆಡಿಗೆ, ಗುದ್ದಲಿ, ಹಗ್ಗ ಮೊದಲಾದುವುಗಳನ್ನು ಹಿಡಿದು ಆ ಶಿವಾಲಯದ ಮುಂಭಾಗದಲ್ಲಿ ಕೊಳದ ಅಗ್ರ ಭಾಗದಲ್ಲಿ ಒಂದು ಕಂಬವನ್ನು ನಿಲ್ಲಿಸಿ ಅದಕ್ಕೆ ದೊಡ್ಡ ಹಗ್ಗವನ್ನು ಕಟ್ಟಿ (ಕುರುಡ ನಾದ್ದರಿಂದ) ಆ ಹಗ್ಗದ ಗುರುತನ್ನು ಹಿಡಿದುಕೊಂಡು ನೆಲವನ್ನು ಅಗೆದು ಮಣ್ಣನ್ನು ರಾಶಿ ಹಾಕುತ್ತ ತನ್ನ ಕರ್ತವ್ಯದಲ್ಲಿ ಈ ರೀತಿ ಅವನು ಇರುತ್ತಿರುವಾಗ. ವ॥ ದುರ್ಬುದ್ಧಿಯುಳ್ಳ ಜೈನಮತಸ್ಥರಾದ ಕೆಲವರು ಇದನ್ನು ಕಂಡು ಮಾತ್ಸರ್ಯಗೊಂಡು ಅಲ್ಲಿಗೆಬಂದು, ನಿಲ್ಲಿಸಿದ ಕಂಬವನ್ನು ಮುರಿದು, ಹಗ್ಗವನ್ನು ಹರಿದು, ಆ ಭಕ್ತನ ಕರ್ತವ್ಯಕ್ಕೆ ವಿಘ್ನವನ್ನುಂಟುಮಾಡಿ, ವಿಶೇಷವಾಗಿ ಹಾಸ್ಯವನ್ನು ಮಾಡುತ್ತಿರುವಷ್ಟರಲ್ಲಿ. ೪೮. ಆ ಕೂಡಲೇ ಗುಣನಿಧಿಯಾದ ಅವನು ಶಿವನಿಂದ ಕಣ್ಣುಗಳನ್ನು ಪಡೆದು, (ತನ್ನ ಕಾರ್ಯಕ್ಕೆ ವಿಘ್ನವನ್ನುಂಟುಮಾಡಿದ) ಜೈನ ಮತಸ್ಥರನ್ನು ಕುರುಡರನ್ನಾಗಿಮಾಡಿ, ಭಂಗ ಗೊಳಿಸಿ ಜೈನ ದೇವಾಲಯ (ಬಸದಿ)ಗಳನ್ನು ಕೆಡವಿ ಹಾಕಿ ತನ್ನ ಮಹಿಮೆಯನ್ನು

---

1 ಣ್ಣುಡು(ಚ) 2 ಮತ್ತ(ಅ)

ವ॥ ಅಂತುಮಲ್ಲದೆಯುಂ—

ಧರಣೀಭಾಮಿನಿಯಾಸ್ಯಬಿಂಬಮೆನೆ ಚೆಲ್ವಾಗಿರ್ದ ತದ್ದ್ರಾವಿಡೋ
ರ್ವರೆಯೊಳ್ ಕಂಗೊಳಿಸಿರ್ಪ ಕಾಲಪುರದೊಳ್ ಶೈವದ್ವಿಜಾಖ್ಯಾನಭೂ
ಸುರವರ್ಯಂಗೊಗೆದೊಪ್ಪಿದಂ ಕುಮತವಿಧ್ವಂಸಾರ್ಥಮೀಶಾಜ್ಞೆಯಿಂ
ಶರಜನ್ಮಂ ಜಿತತಾರಕಂ ಪ್ರಮುದಿತಸ್ವಾರಾಣ್ಮುಖಂ ಷಣ್ಮುಖಂ ೪೯

ವ॥ ಅಂತೊಗೆದು ಶೈಶವವಿಳಾಸಮನವಲಂಬಿಸಿರೆ ತಜ್ಜನಕನೊಂದುದಿನದ ಮಧ್ಯಂದಿನ ಸ್ನಾನಕ್ಕೆ ಬರುತ್ತುಮಾ ಕುಮಾರನಂ ಪೆಗಲೊಳ್ತಳೆದು ಪೆಂಪಿಂದೇಳ್ತ[1]ಂದೊಂದು ಕುಸುಮಾರಾಮದ ವಿಮಳಸ್ಥಳದ ಕುಮುದ ಕಲ್ಹಾರ ಕಮನೀಯ ಸರಳತರಳತರಂಗಸಂಗತ ಮಧುರ ಶೀತಳವಿಮಳಜಳ ಕಲಿತ ಸರೋವರದ ಪರಿಸರದ ಪಸಲೆಯೊಳಿರಿಸಿ ನೀರ್ಮುಳುಗಲೆಯ್ದಿದನಿತರೊಳಾ ಕುಮಾರನಿರ್ದ ತಾಣಕ್ಕೆ—

ಜನನಿ ಜನಕರ್ಕಳಿರ್ವ
ರ್ಮನವೊಲ್ದೀಳ್ತಂದು ನಿಜಕುಮಾರನನಾಗ
ಳ್ಮನೆಕೊನೆವೋಗುತೆ ರಾಗಿಸಿ
ಬಿನದದೆ ನಡೆನೋಡಿ ನೋಡಿ ನಲಿದರುಮೇಶರ್ ೫೦

ಪ್ರಕಟಿಸಲಿಲ್ಲವೇ ? ವ॥ ಅದೂ ಅಲ್ಲದೆ—**ತಿರುಜ್ಞಾನ ಸಂಬಂಧರ ಕಥೆ** ೪೯. ಭೂಮಿಯೆಂಬ ಸುಂದರಸ್ತ್ರೀಯ ಮುಖಮಂಡಲವೋ ಎಂಬಂತೆ ಚೆಲುವುಗೊಂಡಿದ್ದ ಆ ದ್ರಾವಿಡ ದೇಶದಲ್ಲಿ 'ಕಾಲಪುರ' ಎಂಬ ಊರು ಶೋಭಿಸುತ್ತಿತ್ತು. ಅಲ್ಲಿ ಶೈವಬ್ರಾಹ್ಮಣನೆಂಬ ಹೆಸರಿನ ದ್ವಿಜನಿಗೆ ದುಷ್ಟಮತಗಳ ಧ್ವಂಸ ಕಾರ್ಯಕ್ಕೋಸುಗ ಪರಮೇಶ್ವರನ ಆಜ್ಞೆಯಿಂದ ಶರವೆಂಬ ಹುಲ್ಲಿನಲ್ಲಿ ಜನ್ಮಧರಿಸಿದವನೂ, ತಾರಕನನ್ನು ಜಯಿಸಿದವನೂ, ಇಂದ್ರನೇ ಮೊದಲಾದವರನ್ನು ಸಂತೋಷಗೊಳಿಸಿದವನೂ ಎನಿಸಿದ ಷಣ್ಮುಖನೇ ಮಗನೆನಿಸಿ ಶೋಭಿಸುತ್ತಿದ್ದನು.* ೫೦. ಹೀಗೆ ಅವನು ಜನ್ಮತಾಳಿ, ಬಾಲ್ಯೋಚಿತವಾದ ಸೌಂದರ್ಯದಿಂದ ಕೂಡಿರಲು, ಅವನ ತಂದೆಯೆನಿಸಿದ ಆ ಬ್ರಾಹ್ಮಣನು ಒಂದು ದಿನ ಮಧ್ಯಾಹ್ನ ಕಾಲದ ಸ್ನಾನಕ್ಕೆಂದು ಆ ಕುಮಾರನನ್ನು ಹೆಗಲ ಮೇಲೆ ಕುಳ್ಳಿರಿಸಿ ಕೊಂಡು ಸಂಭ್ರಮದಿಂದ ಬಂದು, ಒಂದು ಹೂದೋಟದ ಪರಿಶುದ್ಧ ಸ್ಥಳದಲ್ಲಿರುವ ಕಮಲ, ಕಲ್ಹಾರಗಳಿಂದಲೂ, ಮನೋಹರವಾದ ಸರಳವಾದ ಕೆರೆಗಳಿಂದಲೂ, ಮಧುರವಾದ ನೀರಿನಿಂದಲೂ ತುಂಬಿದ್ದ ಸರೋವರದ ದಂಡೆಯ ಮೇಲೆ ಅವನನ್ನು ಕುಳ್ಳಿರಿಸಿ ಸ್ನಾನಕ್ಕೆ ತೆರಳಿದನು. ಅಷ್ಟರಲ್ಲಿ ಆ ಬಾಲಕನಿದ್ದ ಸ್ಥಳಕ್ಕೆ ಆ ಕುಮಾರನ

1 ಳ್ದಂ(ಚ)

* ತಮಿಳುನಾಡಿನ ಮೂವರು ಸಮಯಾಚಾರ್ಯರೆನಿಸಿದವರಲ್ಲಿ ಒಬ್ಬರಾದ 'ತಿರುಜ್ಞಾನ ಸಂಬಂಧರು'—ಇವರು ಷಣ್ಮುಖನ ಅವತಾರವೆಂಬ ನಂಬಿಕೆಯಿದೆ.

ಮೃಡನಂಗದತ್ತಣಿಂದಿಳಿ
ದೊಡನೇಳ್ತಂದಗಜೆ ಬೀಗಿ ಬಿಗಿಯಪ್ಪಿ ಮುದಂ
ಬಡೆದೆಚ್ಚು ಪಾಯೆ ಮೊಲೆವಾ
ಲ್ತೊಡೆಯೊಳ್ಕುಳ್ಳಿರಿಸಿ ಕುವರನಂ ಮುದ್ದಿಸಿದಳ್ ೫೧

ವ॥ ಅಂತು ಮುದ್ದಿಸಿ ಮುಂಡಾಡಿ ಶಾಂಭವಿ ಶಾಂಭವದೀಕ್ಷೆಯುಂ ಕರುಣಿಸಿ ತೊರೆದ ಮೊಲೆವಾಲಂ ತಣಿವಿನಮೂಡಿ ಮತ್ತಮಿರದೆ—

ಮೊಲೆವಾಲಂ ತೀವಿ ಪೊಂಬಟ್ಟಲೊಳೆ ಶಿಶುಕರಕ್ಕಿಂತದಂ ಕೊಟ್ಟು ಸಾರೋ
ಜ್ಜ್ವಲಸತ್ಯಾಲಾಪದಿಂದಂ ಪರಸಿ ಸರಸಿಜಾತಾಕ್ಷಿ ಮಾಣಿಕ್ಯಭೂಷಾ
ವಲಿಯಿಂ ಕೆಯ್ಗೆಯ್ದು ನೇಹಂ ನಿಮಿರೆ ಬಿಗಿದು ತಳ್ಕೈಸುತಾತ್ಮೇಶನಂಕ
ಸ್ಥಲಮಂ ತಾನೆಯ್ದೆ ತತ್ಕಾಲದೊಳೆ ಕೊಳದೆ ನೀರ್ವಿಂದು ಬಂದಂ ದ್ವಿಜೇಂದ್ರಂ ೫೨

ಕುಡಿದ ಮೊಲೆವಾಲ ಧಾರೆಗ
ಳೊಡನಿಳಿತರೆ ಲಾಲೆವಿಡಿದು ಕಡೆವಾಯಿಂ ಚೆ

(ಷಣ್ಮುಖನ) ಜನನೀಜನಕರಾದ ಉಮಾಶಂಕರರಿಬ್ಬರೂ ಸಂತೋಷದಿಂದ ಬಂದು ತಮ್ಮ ಕುಮಾರನಾದ ಅವನನ್ನು ಬಹು ಸಂತೋಷದಿಂದ ಪ್ರೀತಿಸಿ, ವಿನೋದ ದಿಂದ ದಿಟ್ಟಿಸಿನೋಡುತ್ತ ನಲಿದಾಡಿದರು. ೫೧. ಈಶ್ವರನ ದೇಹದಿಂದ ಪಾರ್ವತಿಯು ಆ ಕೂಡಲೇ ಬೇರ್ಪಟ್ಟು ಬಂದು (ಕುಮಾರನನ್ನು ಕಂಡು)ಉಬ್ಬಿಹೋಗಿ, ಬಿಗಿಯಾಗಿ ತಬ್ಬಿಕೊಂಡು, ಸಂತೋಷಗೊಳಿಸುತ್ತಿರಲು ಮೊಲೆಯ ಹಾಲುಗಳು ಚಿಮ್ಮಿ ಹೊರ ಬರುತ್ತಿದ್ದವು. ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆ ಕುಮಾರನನ್ನು ಮುದ್ದಿಸಿದಳು. ವ॥ ಆ ರೀತಿ ಮುದ್ದಿಸಿ ಮೈಮೇಲೆ ಕೈಯಾಡಿಸಿ, ಪಾರ್ವತಿಯು ಅವನಿಗೆ ಶಿವಸಂಬಂಧವಾದ ದೀಕ್ಷೆಯನ್ನು ಅನುಗ್ರಹಿಸಿ, ತೊರೆದು ಹೋದ ಮೊಲೆಹಾಲನ್ನು ತೃಪ್ತಿಗೊಳ್ಳುವಂತೆ ಉಣ್ಣಿಸಿ, ಮತ್ತು ಇರದೆ ೫೨. ಆ ಕಮಲನೇತ್ರೆಯಾದ ಪಾರ್ವತಿಯು ತನ್ನ ಮೊಲೆಹಾಲನ್ನು ಬಂಗಾರದ ಬಟ್ಟಲಲ್ಲಿ ತುಂಬಿ, ಅದನ್ನು ಆ ಶಿಶುವಿನ ಕೈಯಲ್ಲಿ ಕೊಟ್ಟು ಸಾರವತ್ತಾದವೂ, ಉಜ್ವಲವಾದವೂ ಆದ ಸತ್ಯ ನುಡಿಗಳಿಂದ (ಯಥಾರ್ಥವಾದ ಮಾತುಗಳಿಂದ) ಆಶೀರ್ವಾದ ಮಾಡಿದಳು. ಮಾಣಿಕ್ಯ ವಿಶಿಷ್ಟವಾದ ರತ್ನಾಭರಣಗಳಿಂದ ಅಲಂಕಾರಗೊಳಿಸಿದಳು. ಸಂತೋಷವು ಅಧಿಕ ಗೊಳ್ಳಲಾಗಿ ಅವನನ್ನು ಬಿಗಿಯಾಗಿ ಹಿಡಿದಪ್ಪಿಕೊಂಡು, ಪತಿಯಾದ ಪರಮೇಶ್ವರನ ದೇಹಾರ್ಧದ ಗುರುತಿನವಳಾಗಿ ಆಗಲು (ಈಶ್ವರನ ದೇಹಾರ್ಧದಲ್ಲಿ ಸಮಾವೇಶ ಗೊಳ್ಳಲು) ಅಷ್ಟರಲ್ಲಿಯೇ ಆ ಶ್ರೇಷ್ಠ ಬ್ರಾಹ್ಮಣನು ಸ್ನಾನಮಾಡಿ ಅಲ್ಲಿಗೆ ಬಂದನು. ೫೩–೫೪. ಮೊಲೆ ಹಾಲನ್ನು ಕುಡಿದ ಕಾರಣ ಕಟಬಾಯಿಯಿಂದ ಲಾಲಾರಸದಿಂದ ಕೂಡಿ ಹಾಲಿನ ಧಾರೆಯು ಇಳಿಯುತ್ತಿರುವವನೂ, ರತ್ನಾಭರಣಗಳ ಪ್ರಕಾಶದಿಂದ ಶೋಭೆಗೊಂಡಿರುವವನೂ, ಬಂಗಾರದ ಬಟ್ಟಲನ್ನು ಕೈಯಲ್ಲಿ ಹಿಡಿದಿರುವವನೂ ಆದ

ಲ್ವಿದರ್ದ ಮಣಿ ಭರಣರುಚಿ ಪೆಂ
ಪಿಡಿದಿರೆ ಪೊಂಬಟ್ಟಲಾಂತು ಮಿಸುಗುವ ಶಿಶುವಂ ೫೩

ಜನಕಂ ವಿಸ್ಮಯಮುತ್ತು ನೋಡಿ ಕಿನಿಸಂ ತಾಳ್ದಿತ್ತಣಿಂ ಬಂದುದೀ
ಕನಕಪ್ರೋಜ್ವಳಪಾತ್ರಪೂರ್ಣಸುಧೆ ಪೇಳೆಂದಾಗ್ರಹಂಗೆಯ್ಯೆ ನಂ
ದನನಾ ತಾತನ ತರ್ಜನಕ್ಕಳಱುತೆಂದಂ ತಂದೆ ಕೇಳ್ಬಂದರಿಂ
ದು ನಭೋಮಾರ್ಗದೆ ರತ್ನಪುಷ್ಪಕದೊಳೊಳ್ಪಿಂದಂಬಿಕಾಶಂಕರರ್ ೫೪

ಪ್ರಕಟಜಟಾಕಿರೀಟಿಯು ಫಣೀಂದ್ರವಿಭೂಷನ ಶೂಲಪಾಣಿಯು
ದ್ಧಕರಟಿ ಕೃತ್ತಿವಾಸನ ಶಿಖಾವಹಲೋಚನನಂಕದಿಂ ಮಣಿ
ಪ್ರಕರಕಿರೀಟಧಾರಿಣಿ ಸುರತ್ನವಿಭೂಷಣೆ ಪದ್ಮಪಾಣಿ ದಿ
ವ್ಯಕನಕವಾಸೆ ಸಾರಕರುಣಾರ್ದ್ರವಿಲೋಚನೆ ಬಂದಳಳ್ಕಱಿಂ ೫೫

ಕುಸುಮದೊಳೆ ಕಂಪು ಕರ್ಬಿನ
ರಸದೊಳ್ಮಿಸುಪಿಂಪು ಜೊನ್ನದೊಳ್ತಂಪು ವಿರಾ
ಜಿಸುವವೊಲಭವನೊಳೊಡವೆರೆ
ದೆಸೆವ ಜಗನ್ಮಾತೆ ಕೃಪೆಯಿನಿಂದೇಳ್ತಂದಳ್ ೫೬

ವ॥ ಅಂತೇಳ್ತಂದು ಜಗಜ್ಜನನಿ ಜನನಿ ತನಯನಂ ಮುದ್ದಿಪಂತೆನ್ನಂ ತನ್ನಂಕಪರ್ಯಂಕದೊಳ್ತೆಗೆದು ಬಿಗಿದಪ್ಪಿ ಕುಳ್ಳಿರಿಸಿ ಕೃಪಾರಸಂ ತೆರೆಮಸಪ ಕಟಾಕ್ಷದಿನಭೀಕ್ಷಿಸಿ ತೊರೆದೆಚ್ಚುಸಾಯ್ನ

ಆ ಬಾಲಕನನ್ನು ಕಂಡು ತಂದೆಯಾದ ಆ ಬ್ರಾಹ್ಮಣನು ಆಶ್ಚರ್ಯಗೊಂಡು ನೋಡಿ, ಕೋಪಗೊಂಡು, 'ಈ ಹಾಲಿನಿಂದ ತುಂಬಿದ ಹೊಳೆಯುತ್ತಿರುವ ಬಂಗಾರದ ಪಾತ್ರೆಯೆಲ್ಲಿಂದ ಬಂತು ? ಹೇಳು' ಎಂದು ಆಗ್ರಹಗೊಳಿಸಲು, ಕುಮಾರನಾದ ಅವನು ತಂದೆಯು ಈ ಭಯಗೊಳಿಸುವಿಕೆಗೆ ಹೆದರಿ, 'ಅಪ್ಪಾ, ಕೇಳು ಈಗ ತಾನೆ ಆಕಾಶಮಾರ್ಗದಿಂದ ಪುಷ್ಪಕ ವಿಮಾನದಲ್ಲಿ ಕುಳಿತು ಪಾರ್ವತೀ ಪರಮೇಶ್ವರರು ಬಂದರು. ೫೫. 'ಪ್ರಕಟಗೊಂಡ ಜಡೆಯೇ ಕಿರೀಟವಾಗಿವುಳ್ಳವನೂ, ಆದಿಶೇಷನ ಆಭರಣವುಳ್ಳವನೂ, ತ್ರಿಶೂಲ ಹಸ್ತನೂ, ಶ್ರೇಷ್ಠ ಆನೆಯ ಚರ್ಮವನ್ನುಟ್ಟವನೂ, ಅಗ್ನಿನೇತ್ರನೂ ಆದ ಶಿವನ ತೊಡೆಯಿಂದ ಮಣಿಸಮೂಹಗಳ ಕಿರೀಟ ಧರಿಸಿದವಳೂ, ಶ್ರೇಷ್ಠ ರತ್ನಾಭರಣಗಳಿಂದ ಭೂಷಿತಳಾದವಳೂ, ಕಮಲವನ್ನು ಕೈಯಲ್ಲಿ ಹಿಡಿದಿರುವವಳೂ, ಬಂಗಾರದ ಪಟ್ಟೆ ವಸ್ತ್ರವನ್ನುಟ್ಟವಳೂ, ಸಾರವತ್ತಾದ ಕರುಣೆಯಿಂದ ತೋಯ್ದು ಹೋದ ಕಣ್ಣುಳ್ಳವಳೂ ಆದ ಪಾರ್ವತಿಯು ಪ್ರೀತಿಯಿಂದ ಬಂದಳು.' ೫೬. 'ಹೂವಿನಲ್ಲಿ ಸುಗಂಧ, ಕಬ್ಬಿನ ಹಾಲಿನಲ್ಲಿ ಶೋಭಿಸುವ ರುಚಿ, ಬೆಳದಿಂಗಳಲ್ಲಿ ತಂಪು ವಿರಾಜಿಸುವಂತೆ, ಪರಮೇಶ್ವರನಲ್ಲಿ ಒಡಗೊಂಡು ಶೋಭಿಸುವ ಆ ಜಗತ್ತುಗಳ ತಾಯಿಯಾದ ಪಾರ್ವತಿಯು ಕೃಪೆಯಿಂದ ಈಗ ತಾನೆ ಬಂದಳು. ವ॥ 'ಹೀಗೆ ಬಂದು ಜಗತ್ತಿನ ತಾಯಿಯಾದ ಅವಳು ತಾಯಿಯು ತನ್ನ ಮಗುವನ್ನು ಮುದ್ದಾಡುವಂತೆ ನನ್ನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಬರಸೆಳೆದು ಬಿಗಿಯಾಗಿ ಅಪ್ಪಿಕೊಂಡು, ಕುಳ್ಳಿರಿಸಿ, ಕೃಪೆಯ ರಸವು

ಮೊಲೆವಾಲನೂಡಿ ಮಣಿದೊಡವನಿಟ್ಟು ಮಗುಳ್ದು ಕುಚಕನಕಕಲಶದಮೃತರಸಮಂ ಪೊಂಬಟ್ಟ ಲೊಳ್ಕಱೆದು ತೀವಿ ಮತ್ಕರದೊಳಿತ್ತು ಕರುಣಿಸಿ ನಿಜರಮಣನೊಡನೆ ಮಣಿಪುಷ್ಪಕಮನಡರ್ದು—

ತೊಳತೊಳಗುತೆ ಸುರಪಥದೊ
ಳ್ತಳರ್ದಪಳೆಲೆ ನೋಳ್ಪುದೆಂದು ಜನಕಂಗೆನೆ ಕೇ
ಳ್ದಿಳೆಗಿದು ಪೊಸತೆನುತುಂ ಬಾಂ
ದಳದೊಳ್ನಡೆನೋಡಿ ಕಂಡನವನದ್ರಿಜೆಯಂ ೫೭

ಗಿರಿಶಾಂಕಾರೂಢೆಯುಂ ಗೀರ್ವರಮುರಹರಭಾಮಾಸಮಾಚಾಲಿತೋಚ್ಚಾ
ಮರಚಂಚತ್ಪಾರ್ಶ್ವೆಯುಂ ನಿರ್ಜರಪರಿವೃತಪಾದಾಬ್ಜೆಯುಂ ದಿವ್ಯದೇಹಾ
ಭರಣಪ್ರದ್ಯೋತಿತಾಶಾಕುಳೆಯುನಮಿತ ಸೌಂದರ್ಯಸಂಪನ್ನೆಯುಂ ಶಾಂ
ಕರಿಯಂ ಕಂಡಲ್ಲಿ ದಂಡಪ್ರಣತಿಯೆಸಗಿದಂ ಭೂಸುರಂ ಭಕ್ತಿಯಿಂದಂ ೫೮

ವ॥ ಅಂತು ದಂಡಪ್ರಣಾಮಂಗೆಯ್ದು ಪುತ್ರನಂ ವಿಸ್ಮಯಮುತ್ತು ನೋಡಿ—

ತನುಜನೆನಗಲ್ತಿವಂ ಮ
ಜ್ಜನಕಂ ಮದ್ಗುರು ಮದಿಷ್ಟದೈವಮೆನುತ್ತುಂ
ಮನದೊಳ್ನಮಿಸುತೆ ಪೆಗಲೊ
ಳ್ಬಿನದದೆ ತಳೆದವನನಾತ್ಮಗೃಹಕೇಳ್ತಂದಂ ೫೯

ತೆರೆಯಾಗಿ ಹೊರಹೊಮ್ಮುತ್ತಿರಲು ಕಡೆಗಣ್ಣುಗಳಿಂದ ನೋಡಿ, ತೊರೆದು ಚಿಮ್ಮಿ ಬರುತ್ತಿರುವ ಮೊಲೆ ಹಾಲನ್ನು ಕುಡಿಸಿ, ರತ್ನಾಭರಣಗಳನ್ನಿಟ್ಟು ಅಲಂಕರಿಸಿ ಪುನಃ ಬಂಗಾರದ ಕಲಶಗಳಿಗೆ ಸಮಾನವಾದ ಮೊಲೆಯ ಅಮೃತ ರಸವನ್ನು ಈ ಬಂಗಾರದ ಬಟ್ಟಲಲ್ಲಿ ತುಂಬಿ, ನನ್ನ ಕೈಗೆ ಕೊಟ್ಟು ಕರುಣೆದೋರಿ ತನ್ನ ಪತಿಯಾದ ಶಿವನೊಡನೆ ಪುಷ್ಪಕ ವಿಮಾನವನ್ನು ಹತ್ತಿ'—೫೭. 'ತೊಳ ತ್ತೊಳಗುತ್ತ ಆಕಾಶ ಮಾರ್ಗದಲ್ಲಿ ಹೋಗುತ್ತಿರುವವರು. ಎಲೆ ತಂದೆಯೇ, ನೋಡು' ಎಂದು ತನ್ನ ತಂದೆಗೆ ಹೇಳಲು. ಅವನು ಕೇಳಿ ಭೂಮಂಡಲದಲ್ಲಿ ಇದೊಂದು ಹೊಸ ವಿಷಯವೆಂದುಕೊಂಡು ಪಾರ್ವತಿ ಯನ್ನು ಆಕಾಶದಲ್ಲಿ ದಿಟ್ಟಿಸಿ ನೋಡುತ್ತ ಕಂಡನು. ೫೮. ಪರಮೇಶ್ವರನ ತೊಡೆ ಯನ್ನೇರಿದವಳೂ, ಬ್ರಹ್ಮ, ವಿಷ್ಣುಗಳ ಹೆಂಡಂದಿರು ಪಾರ್ಶ್ವದಲ್ಲಿ ನಿಂತು ಚಲನೆಗೊಳಿಸು ತ್ತಿರುವ ಚಾಮರಗಳುಳ್ಳವಳೂ, ದೇವತೆಗಳಿಂದ ಸುತ್ತುವರಿಯಲ್ಪಟ್ಟ ಪಾದಕಮಲ ವುಳ್ಳವಳೂ. ದಿವ್ಯಶರೀರದಲ್ಲಿರುವ ಆಭರಣಗಳ ಪ್ರಕಾಶದಿಂದ ದಿಕ್ಕುಗಳ ಸಮೂಹವನ್ನು ಬೆಳಗಿಸುವವಳೂ, ಅಗಣಿತವಾದ ಸೌಂದರ್ಯದಿಂದ ಕೂಡಿದ ವಳೂ ಆದ ಪಾರ್ವತೀ ದೇವಿಯನ್ನು ಕಂಡು ಅಲ್ಲಿಯೆ ಆ ಶೈವ ಬ್ರಾಹ್ಮಣನು ಭಕ್ತಿಯಿಂದ ದೀರ್ಘ ದಂಡ ಪ್ರಣಾಮಗಳನ್ನು ಮಾಡಿದನು. ವ॥ ಹಾಗೆ ದೀರ್ಘದಂಡ ಪ್ರಣಾಮಗಳನ್ನು ಮಾಡಿ, ಪುತ್ರನನ್ನು ಆಶ್ಚರ್ಯದಿಂದ ನೋಡುತ್ತ ೫೯. 'ಇವನು ನನ್ನ ಮಗನಲ್ಲ; ನನ್ನ ತಂದೆ, ನನ್ನ ಗುರು, ನನ್ನ ಇಷ್ಟ ದೈವ' ಎನ್ನುತ್ತ ಮನಸ್ಸಿನಿಂದಲೇ ನಮಸ್ಕಾರ ಮಾಡುತ್ತ, ಹೆಗಲ ಮೇಲೆ ಕುಳ್ಳಿರಿಸಿಕೊಂಡು ಆ

ವ॥ ಅಂತೇಳ್ತಂದು ನಿಜರಮಣಿಯೊಡನದೆಲ್ಲಮನಱುಪಿ ತನ್ಮನಕ್ಕೆ ಸಾಶ್ಚರ್ಯಸಂತೋಷಮಂ ಪಡೆದು ಸುಖದಿರ್ದನನ್ನೆಗಂ—

ಪಡೆದಂ ಸರ್ವಜ್ಞತೆಯಂ
ಪಡೆದಂ ವಾಕ್ಸಿದ್ಧಿವೃದ್ಧಿಯಂ ತೇಜಮುಮಂ
ಪಡೆದಂ ಕುವರಂ ಗಿರಿಶನ
ಮಡದಿಯ ಮೊಲೆವಾಲ ಮಹಿಮೆ ಸಾಧಾರಣಮೋ ೬೦

ತರುಣಂ ಮಱುದಿನದುದಯದೊ
ಳಿರದೆಳ್ದಾಪುರದ ಗಿರಿಶಗೃಹಕೇಳ್ತಂದಾ
ದರದಿಂ ಕಂಡಂ ಗಿರಿಜೆಯ
ಚರಣಮನೊಲ್ದೆಱಗಿ ಪೊಗಳ್ದನತಿ ಸಂಭ್ರಮದಿಂ ೬೧

ಸುರನುತಚರಣೇ ವರಗುಣಭರಣೇ ಖರರುಚಿಬಿಂಬಗತೇ
ಸರಸಿಜವದನೇ ಸುರುಚಿರರದನೇ ಪುರಹರಣಾಂಗಯುತೇ
ಕರಧೃತನಳಿನೇ ಪರಿಹೃತಮಳಿನೇ ಹರಿವಿಧಿಶಕ್ರನತೇ
ಕರಿರಿಪುಗಮನೇ ಹರಿರಿಪುಶಮನೇ ಪೊರೆ ಗಿರಿರಾಜಸುತೇ ೬೨

ವ॥ ಎಂದಭಿವಂದಿಸಿದ ನಂದನನನಂಬಿಕೆ ದಯಾವಲೋಕನದಿನಭೀಕ್ಷಿಸಿ—

ಬ್ರಾಹ್ಮಣನು ತನ್ನ ಮನೆಗೆ ಬಂದನು. ವ॥ ಹಾಗೆ ತನ್ನ ಮನೆಗೆ ಬಂದು, ತನ್ನ ಹೆಂಡತಿಯೊಡನೆ ನಡೆದ ವೃತ್ತಾಂತವನ್ನೆಲ್ಲ ತಿಳಿಸಿ, ಅವಳ ಮನಸ್ಸಿಗೆ ಆಶ್ಚರ್ಯವನ್ನೂ ಸಂತೋಷವನ್ನೂ ಉಂಟು ಮಾಡಿ, ಸುಖದಿಂದ ಇರುತ್ತಿರುವಲ್ಲಿ ೬೦. ಆ ಕುಮಾರನು ಸರ್ವಜ್ಞತ್ವವನ್ನು ಪಡೆದನು; ವಾಕ್ಸಿದ್ಧಿಯನ್ನೂ. ತೇಜಸ್ಸನ್ನೂ ಪಡೆದನು. ಈಶ್ವರನ ಪತ್ನಿಯಾದ ಪಾರ್ವತಿಯ ಮೊಲೆ ಹಾಲಿನ ಮಹಿಮೆಯೇನು ಸಾಮಾನ್ಯವಾದದ್ದೇ? ೬೧. ಮರುದಿನ ಪ್ರಾತಃ ಕಾಲದಲ್ಲಿ ಆ ತರುಣನು ತಪ್ಪದೆ ಆ ಪಟ್ಟಣದಲ್ಲಿರುವ ಪರಮೇಶ್ವರನ ಗುಡಿಗೆ ಬಂದು ಪ್ರೀತಿಯಿಂದ ಪಾರ್ವತೀ ದೇವಿಯನ್ನು ಕಂಡು ಸಂತೋಷದಿಂದ ನಮಸ್ಕರಿಸಿ ಅತ್ಯಂತ ಸಂಭ್ರಮದಿಂದ ಹೊಗಳುತ್ತಿದ್ದನು. ೬೨. ದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ ಪಾದವುಳ್ಳವಳೇ, ಶ್ರೇಷ್ಠ ಸದ್ಗುಣಗಳೇ, ಆಭರಣವಾಗಿ ಉಳ್ಳವಳೇ, ಸೂರ್ಯಮಂಡಲವನ್ನು ಹೊಂದಿದವಳೇ, ಕಮಲ ಮುಖಿಯೇ, ಮನೋಹರವಾದ ದಂತಗಳುಳ್ಳವಳೇ, ತ್ರಿಪುರಸಂಹಾರಿಯಾದ ಶಿವನ ಅಂಗದಲ್ಲಿ ಬೆರೆತಿರುವವಳೇ, ಕೈಯಲ್ಲಿ ಕಮಲವನ್ನು ಧರಿಸಿರುವವಳೇ, ವಿಷ್ಣು, ಬ್ರಹ್ಮ, ಇಂದ್ರಾದಿಗಳಿಂದ ಸ್ತೋತ್ರ ಮಾಡಿಸಿ ಕೊಳ್ಳುವವಳೇ, ಸಿಂಹವನ್ನು ವಾಹನವನ್ನಾಗಿ ಮಾಡಿಕೊಂಡು ಸಂಚರಿಸುವವಳೇ ಹೇ ಗಿರಿರಾಜ ಪುತ್ರಿಯೇ ರಕ್ಷಿಸು. ವ॥ ಹೀಗೆಂದು (ಸ್ತೋತ್ರ ಮಾಡಿ) ನಮಸ್ಕ

---

1 ತ್ರಿ(ಮು)

ಚಂಡಿಕೆಗಾತ್ಮಕಂಧರದ ಮಾಲೆಯನೊಪ್ಪಿರೆ ಸೂಡಿ ಸತ್ಪ್ರಭಾ
ಮಂಡಿತಮಂಡನಂದುಡಿಸಿ ಸಾರ್ಚಿ ಸುವರ್ಣದುಕೂಲಮಂ ಮನಂ
ಗೊಂಡೆಸೆವಾನಕಪ್ರಕರಮಂ ಮಣಿಚಾಮರವೀಜನಂಗಳಂ
ದಂಡಿಗೆ ಕಾಹಳೀ ಧವಳಶಂಖಮನಿತ್ತಳಪರ್ಣೆ ಕೂರ್ಮೆಯಿಂ ೬೩

ಚಂದಂ ಮಿಗೆ ಶಂಕರನಂ
ನಂದೀಶಾದೀಶಗಣಮನೆನ್ನಂ ಪಾಡೆಂ
ದಿಂದುರವಿಬಿಂಬನಿಭಮಂ
ಪೊಂದಾಳಮನಿತ್ತಳಗಜೆ ಕುವರಂಗೊಲವಿಂ ೬೪

ವ॥ ಅಂತಿತ್ತು ಮನ್ನಿಸಿ ಕಳುಪೆ ತಿರುಜ್ಞಾನ ಸಂಬಂಧೀಶನೀಶನೆಡೆಗೆಳ್ತಂದು ಪೊಂಗಿ ಪೊಡ ಮಟ್ಟು ಪೊಂದಾಳಮಂ ಪಿಡಿದು ನಿಂದು—

ಧೃತಶಶಿಕಲಂ ಕೃತಭುವನಕುಲಂ ಶತದಳನೇತ್ರನತಂ
ತತಗುಣಭರಣಂ ಜಿತದನುಜರಣಂ ಶ್ರುತಿಗಣವಂದ್ಯಪದಂ
ವಿತರಣನಿಳಯಂ ಭೃತಫಣಿವಳಯಂ ಕ್ರತುಗತನಾಕಿಹರಂ
ರತಿಪತಿಹರಣಂ ಪ್ರತಿಭಜಶರಣಂ ನುತಗಿರಿಜಾರಮಣಂ ೬೫

ರಿಸಿದ ಕುಮಾರನನ್ನು ಪಾರ್ವತಿಯು ದಯಾ ಪೂರ್ಣವಾದ ದೃಷ್ಟಿಯಿಂದ ನೋಡಿ, ೬೩–೬೪. ಅವನ ಚಂಡಿಕೆಗೆ ತನ್ನ ಕೊರಳಲ್ಲಿರುವ ಮಾಲೆಯನ್ನು (ತೆಗೆದು) ಚಂದ ಕಾಣುವಂತೆ ಅಲಂಕಾರಗೊಳಿಸಿ, ಅತ್ಯಂತ ಪ್ರಭೆಯಿಂದ ಅಲಂಕಾರಗೊಂಡ ಆಭರಣ ಗಳನ್ನು ಚೆಂದ ಕಾಣುವಂತೆ ತೊಡಿಸಿ, ಸುವರ್ಣಮಯವಾದ ರೇಷ್ಮೆಯ ವಸ್ತ್ರವನ್ನು ಉಡಿಸಿ, ಮನೋಹರವಾಗಿ ಶೋಭಿಸುವ ವಾದ್ಯ (ತಮಟೆಗಳೇ ಮೊದಲಾದ ವಾದ್ಯ) ಸಮೂಹವನ್ನು, ರತ್ನದ ಹಿಡಿಕೆಗಳುಳ್ಳ ಚಾಮರ ಮತ್ತು ಬೀಸಣಿಕೆಗಳನ್ನು, ಪಲ್ಲಕ್ಕಿ, ಕಹಳೆ, ಬಿಳಿಯ ಶಂಖಗಳನ್ನು ಆ ಪಾರ್ವತಿಯು ಪ್ರೀತಿಯಿಂದ ಕೊಟ್ಟಳು. 'ಅತ್ಯಂತ ಮನೋಹರವಾಗಿರುವಂತೆ ಶಂಕರನನ್ನೂ, ನಂದೀಶ್ವರನೇ ಮೊದಲಾದ ಶಿವಗಣ ಸಮೂಹವನ್ನೂ, ನನ್ನನ್ನೂ ಸ್ತೋತ್ರ ಮಾಡು' ಎನ್ನುತ್ತ ಸೂರ್ಯಚಂದ್ರ ಬಿಂಬಗಳಿಗೆ ಸಮಾನವೆನಿಸಿದ ಬಂಗಾರದ ತಾಳಗಳನ್ನು ಪಾರ್ವತಿಯು ಪ್ರೀತಿಯಿಂದ ತನ್ನ ಆ ಮಗನಿಗೆ ಕೊಟ್ಟಳು. ವ॥ ಈ ರೀತಿ ಮನ್ನಣೆ ಮಾಡಿ ಕಳಿಸಲು ತಿರುಜ್ಞಾನ ಸಂಬಂಧರು ಈಶ್ವರನ ಸಮೀಪಕ್ಕೆ ಹೋಗಿ, ಅತ್ಯುತ್ಸಾಹದಿಂದ ಸಾಷ್ಟಾಂಗ ಪ್ರಣಾಮ ಮಾಡಿ, ಬಂಗಾರದ ತಾಳಗಳನ್ನು ಹಿಡಿದು ನಿಂತು ೬೫. ಚಂದ್ರನ ಒಂದು ಕಳೆಯನ್ನು ಧರಿಸಿದವನೂ, ಸಮಸ್ತ ಲೋಕಗಳನ್ನು ಸೃಷ್ಟಿಸಿದವನೂ, ವಿಷ್ಣುವಿನಿಂದ ನಮಸ್ಕರಿಸಿ ಕೊಳ್ಳುವವನೂ, ಅನಂತ ಸದ್ಗುಣಗಳೇ ಆಭರಣವಾಗಿ ಉಳ್ಳವನೂ, ರಥದಲ್ಲಿ ರಾಕ್ಷಸ ರನ್ನು ಗೆದ್ದವನೂ, ವೇದ ಸಮೂಹದಿಂದ ನಮಸ್ಕರಿಸಿಕೊಳ್ಳಲ್ಪಟ್ಟ ಪಾದವುಳ್ಳವನೂ, ದಾನ ಗುಣಕ್ಕೆ ಆಶ್ರಯನೆನಿಸಿದವನೂ, ಹಾವುಗಳ ಕಂಕಣಗಳನ್ನು ಧರಿಸಿದವನೂ. ದಕ್ಷ

ವ॥ ಎಂದು ತುಂಬುರಾದಿಗಳಂ ಪಳಿಕೆಯುದ್ದ ಪಾಡೆ ಸಂಗೀತರಸಕ್ಕೆ ಶಂಕರಂ ಮೆಚ್ಚಿ ಮನಂದಂದು ಸರ್ವಸಿದ್ಧಿಪ್ರದಭಸ್ಮಘಂ[1]ಟಿಕೆಯುಮಂ ಗಗನಗಮನಮಣಿಮಯ ಮಂಟಪಮುಮಂ ಪೊನ್ನಂದಣಮುಮಂ ಮೌಕ್ತಿಕಾತಪತ್ರಮುಮನಪರಿಮಿತ ಧನಕನಕ ವಸನಮಣಿಭರಣಾದಿಗಳನೀಯೆ ಕೊಂಡಲ್ಲಿಂ ಮಣಿಮಯಾಂದೋಳಮನಡರ್ದು ತಳರ್ವಾಗಳೆತ್ತಿದ ಧವಳಾತಪತ್ರದ ಕೆಲಬಲದೊಳ್ಬೀಸುವ ಧವಳ ಚಾಮರದ ಸೂಸುವ ಸೀಗುರಿಯ ನವರತ್ನಮಾಲೆಯ ನಡೆತೋರಣದ ಮುಂದೆ ಮಿಳಿರ್ವ ವೃಷಭ ಧ್ವಜದ ಪಿಂದೆ ಬರ್ಪ ವಿಬುಧಕದಂಬದ ಮೊಳಗುವ ದುಂದುಭಿಯ ಪೂರೈಪ ಶಂಖದ ಡಮಡಮೆಂಬ ಡಿಂಡಿಮದ ಜತಿಗುಡುವ ಮೃದಂಗದ ಬೇಬಳಿವಿಡಿದ ಬೊಂಬುಳಿಯ ಕುಣಿವ ನಚ್ಚಣಿಯರ ಬಿರಿದೆತ್ತಿ ಪೊಗಳ್ವ ವಂದಿವೃಂದದ ನೆರೆದು ನೋಳ್ಪ ಪುರಜನದ ಕಳಕಳದ ಪಿರಿಯ ಸಂಭ್ರಮಮಿಂಬುವಡೆಯೆ

ಯಜ್ಞಕ್ಕಾಗಮಿಸಿದ ದೇವತೆಗಳನ್ನು ಕೊಂದವನೂ, ಮನ್ಮಥನನ್ನು ಸುಟ್ಟವನೂ ಸ್ತೋತ್ರ ಮಾಡುವವರನ್ನು ರಕ್ಷಿಸುವವನೂ, ಸ್ತೋತ್ರಾರ್ಹಳಾದ ಪಾರ್ವತಿಯ ಪತಿಯೂ (ಆದವನೇ). ವ॥ ಹೀಗೆಂದು ತುಂಬುರರೇ ಮೊದಲಾದ ದೇವ ಲೋಕದ ಗಾಯಕರನ್ನು ತಿರಸ್ಕರಿಸುವಂತೆ ಹಾಡಿದನು. (ಇವನ ಈ) ಸಂಗೀತದ ಮಾಧುರ್ಯಕ್ಕೆ ಶಂಕರನು ಮೆಚ್ಚಿ, ಮನವೊಲಿದು ಸಕಲ ಸಿದ್ಧಿಗಳನ್ನುಂಟು ಮಾಡುವ ಭಸ್ಮದ ಘಟ್ಟಿಯನ್ನೂ, ಗಗನದಲ್ಲಿ ಸಂಚರಿಸುವದಕ್ಕೆ ಯೋಗ್ಯವಾದ ರತ್ನ ಖಚಿತ ಮಂಟಪವನ್ನೂ, ಬಂಗಾರದ ಪಲ್ಲಕ್ಕಿಯನ್ನೂ, ಮುತ್ತನ್ನು ಬಿಗಿಸಿ ಮಾಡಿದ ಛತ್ರಿಯನ್ನೂ, ಅಗಣಿತವಾದ ಧನ, ಕನಕ, ವಸ್ತ್ರ, ರತ್ನಾಭರಣವೇ ಮೊದಲಾದವುಗಳನ್ನೂ ಕೊಡಲು, ಅವುಗಳನ್ನು ಸ್ವೀಕರಿಸಿ, ಅಲ್ಲಿಂದ ಮುಂದೆ ರತ್ನಖಚಿತ ಪಲ್ಲಕ್ಕಿಯನ್ನೇರಿ, ಹೊರಡುತ್ತಿರುವಾಗ ಎತ್ತಿ ಹಿಡಿದ ಶ್ವೇತ ವರ್ಣದ ಛತ್ರಿ, ಅಕ್ಕ ಪಕ್ಕಗಳಲ್ಲಿ ಬೀಸುತ್ತಿರುವ ಚಾಮರಗಳು, ಬೀಸುತ್ತಿರುವ ಸೀಗುರಿ (ಮೂರ್ಛಾಲು) ಗಳು, ನವರತ್ನಗಳಿಂದ ಮಾಡಿದ ನಡೆ ದೋರಣಗಳು (ಎತ್ತಿಕೊಂಡು ಹೋಗಲು ಯೋಗ್ಯವಾದ ತೋರಣಗಳು) ಮುಂಭಾಗದಲ್ಲಿ ಹಾರಾಡುತ್ತಿರುವ ವೃಷಭ ಧ್ವಜಗಳು, ಹಿಂಭಾಗದಲ್ಲಿ ಅನುಸರಿಸಿ ಬರುತ್ತಿರುವ ವಿದ್ವಾಂಸರ ಸಮೂಹ, ಧ್ವನಿಮಾಡುತ್ತಿರುವ ನಗಾರಿಗಳು, ಊದುತ್ತಿರುವ ಶಂಖ ಡಮ ಡಮ ಎಂದು ಧ್ವನಿಮಾಡುತ್ತಿರುವ ಡಮರುಗಳು, ಇವುಗಳೊಡನೆ ಮೇಳಗೊಂಡು ನುಡಿಸುತ್ತಿರುವ ಮೃದಂಗ, ಬೆನ್ನು ಹತ್ತಿ ನರ್ತಿಸುತ್ತ ಬರುವ ನರ್ತಕಿಯರು, ಬಿರುದನ್ನು ಉತ್ತರ ಸ್ವರದಿಂದ ಹೊಗಳುವ ವಂದಿಗಳ ಸಮೂಹ ಇವೆಲ್ಲವುಗಳನ್ನು ನೋಡುತ್ತಿರುವ ನಾಗರೀಕ ಕಳಕಳವೆನ್ನುವ ಹಿರಿದಾದ ಸಂಭ್ರಮದ ಆಧಿಕ್ಯದಿಂದ ಕೂಡಿ

1 ಘು(ಚ)

ತತಜ್ಜೈನವ್ರಾತಗರ್ವಾಚಳಪವಿಧರನೀ ಬಂದನೀ ಬಂದನತ್ಯು
ದ್ಧತಬೌದ್ಧಧ್ವಾಂತವಿಧ್ವಂಸನಖರಕರನೀ ಬಂದನೀ ಬಂದನತ್ಯೂ
ರ್ಜಿತಚಾರ್ವಾಕೋಗ್ರದರ್ವೀಕರಖಗಪತಿಯಿೂ ಬಂದನೀ ಬಂದನೆಂದ
ದ್ಭುತನಾದಂ ಕರ್ಣಮಂ ಜಕ್ಕುಲಿಸೆ ಕಹಳೆಗಳ್ ಮುಂದೆ ವಿಸ್ತಾರದಿಂದಂ ೬೬

ಕರೆಯೆ ಬಿರಿದೆತ್ತಿ ಜೈನ
ರ್ಜರಿಯೆ ಖಲರ್ಸರಿಯೆ ಬೌದ್ಧರೆರ್ದೆ ಬಿರಿಯೆ ಬುಧ
ರ್ಪೊರೆಯೇಱ ಪೊಗಳೆ ನೋಳ್ಪ
ರ್ಪಿರಿದಚ್ಚರಿವೆಱೆಯೆ ತಳರ್ದನತಿ ಸಂಭ್ರಮದಿಂ ೬೭

ಶಿವಲಿಂಗಂಗಳನಲ್ಲಿಗಲ್ಲಿಗೊಲವಿಂದಂ ನೋಡುತುಂ ಪಾಡುತುಂ
ಶಿವಭಕ್ತರ್ಗೊಲವೀವುತುಂ ಪ್ರಣತನಾದುತ್ತುಂಗಚೋಳಂಗೆ ಪೂ
ರ್ಣವಿಳಾಸಂ ಶಿವದೀಕ್ಷೆಯುಂ ಕರುಣಿಸುತ್ತಾರ್ಪಿಂದೆ ಮಾಱಾಂತ ಬೌ
ದ್ಧವರೇಣ್ಯದ್ವಿಸಹಸ್ರಮಂ ಜಯಿಸಿ ವಾದಂಗೆಯ್ದು ವಿಕ್ರಾಂತದಿಂ ೬೮

ಕೊಡಿರಲು ೬೬–೬೭. ವಿಸ್ತಾರವಾದ (ಅಧಿಕವಾದ) ಜೈನರುಗಳ ಸಮೂಹದ ಗರ್ವವೆಂಬ ಪರ್ವತಕ್ಕೆ ವಜ್ರಾಯುಧ ಪ್ರಾಯನು ಇಗೋ ಇಲ್ಲೇ ಬಂದನು ! ಅತ್ಯಂತ ಗರ್ವಿಷ್ಠರಾದ ಬೌದ್ಧರೆಂಬ ಕತ್ತಲೆಯ ಸಮೂಹವನ್ನು ವಿಧ್ವಂಸನಗೊಳಿಸುವ ಸೂರ್ಯ ಪ್ರಾಯನಾದವನು ಇಗೋ ಇಲ್ಲೇ ಬಂದನು ! ಬಂದನು ! ಅತ್ಯಂತ ಊರ್ಜಿತಾವಸ್ಥೆಯಲ್ಲಿರುವ ಚಾರ್ವಾಕರೆಂಬ ಭಯಂಕರ ಹಾವುಗಳಿಗೆ ಗರುಡ ಪ್ರಾಯನಾದವನು ಇಗೋ ಇಲ್ಲೇ ಬಂದನು ! ಬಂದನು ! ಎಂದೆನ್ನುವ ಅತ್ಯದ್ಭುತವಾದ ಧ್ವನಿಯು ಕಿವಿಗಳನ್ನು ಚಕ್ಕಳಿಗುಳಿಯಿಡುವ ಹಾಗೆ ಕಹಳೆಗಳು ಮುಂಭಾಗದಲ್ಲಿ ಅಸಂಖ್ಯಾತವಾಗಿ ಬಿರುದನ್ನು ಹೇಳುತ್ತ ಕೂಗುತ್ತಿದ್ದವು. (ಆಗ) ಜೈನರು ಜರುಗಿದರು (ಹಿಂದಕ್ಕೆ ಸರಿದರು) ದುಷ್ಟರು ದೂರ ಸರಿದರು; ಬೌದ್ಧರ ಎದೆಗಳು ಬಿರಿದವು; ವಿದ್ವಾಂಸರು ಉತ್ಸಾಹ ಗೊಂಡು ಹೊಗಳಿದರು; (ಈ ರೀತಿ) ನೋಡುವವರೆಲ್ಲ ಆಶ್ಚರ್ಯಗೊಳ್ಳುವಂತೆ ಅತ್ಯಂತ ಸಂಭ್ರಮದಿಂದ ಹೊರಟನು. ೬೮. ಅಲ್ಲಿಗಲ್ಲಿಗೆ ಶಿವಲಿಂಗಗಳನ್ನು ಪ್ರೀತಿಯಿಂದ ನೋಡುತ್ತಲೂ ಹಾಡುತ್ತಲೂ, ಶಿವಭಕ್ತರೆನಿಸಿದವರಿಗೆ ಸಂತೋಷವನ್ನುಂಟು ಮಾಡುತ್ತಲೂ, ನಮಸ್ಕರಿಸಿದ ಕುಲೋತ್ತುಂಗ ಚೋಳನೆಂಬ ರಾಜನಿಗೆ ಅತ್ಯಂತ ವೈಭವದಿಂದ ಶಿವದೀಕ್ಷೆಯನ್ನು ಕರುಣಿಸುತ್ತಲೂ, ಪರಾಕ್ರಮದಿಂದ ಎದುರಿಸಿದ ಎರಡು ಸಾವಿರ ಶ್ರೇಷ್ಠ ಬೌದ್ಧ ಧರ್ಮೀಯರನ್ನು ವಾದ ಮಾಡಿ ಶೌರ್ಯದಿಂದ ಜಯಿಸಿದನು.

ಮಱೆವುಗೆ ಮೋಣವರ್ಗೆ ಶಿವದೀಕ್ಷೆಯನಿತ್ತು ಶಿವೈಕ[1]ನಿಷ್ಠೆಯಿಂ
ತೆಱೆಯಿಸಿ ಕೆತ್ತುದಂ ತಿರುಮರಕ್ಕಡವೆಂಬ ಪುರಾಂತರಾಳದೊ
ಳ್ಮೆಱುಗುವ ಲಿಂಗದಾಗರದ ಬಲ್ಗಡಪಂ[2] ತಿರುವಾಲ ಪಟ್ಟಣ
ಕ್ಕಱೆ ನಡೆತಂದು ಜೈನಕುಲಮಂ ಸಲೆ ಸೋಲಿಸಿ ವಾದದೇಳ್ಗೆಯಿಂ ೬೯

ಫಣಿಯಾಗಿಯೆ ಮಡಿದ ಶೂದ್ರನ
ಪೆಣಕ್ಕೆ ಜೀವನಮನಿತ್ತು ಮಧುರಾಹ್ವಯ ಪ
ಟ್ಟಣಕೇಳ್ತಂದಂ ಪದಪಿಂ
ಗುಣನಿಧಿ ತದ್ಭೂಪನರಸಿಯನುಮತದಿಂದಂ ೭೦

ವ॥ ಆಗಳಾ ಪುರದ ಜೈನಬೌದ್ಧಾದಿಗಳಸೂಯೆಯಿಂದರಸನೆಡೆಗೇಳ್ತಂದು—

ಜಿನಧರ್ಮಾವಾಸಮಪ್ಪೀ ನಗರಿಗೆಲೆ ಧರಾಧೀಶ ನೀಂ ಜೈನನೆಂದೆಂ
ಬ ನಿಮಿತ್ತಂ ಭೀತಿ ಮುನ್ನಿಲ್ಲದೆ ಜಿನಮತಕಾಂತಾರದಾವಾಗ್ನಿ ತಾನೆಂ
ದು ನಿತಾಂತಂ ಬಿಂಕದಿಂದಂ ಬಿರಿದ ಪೊಗಳಿಸುತ್ತೆಯ್ದಿದಂ ಬಾಲನೊರ್ವಂ
ಘನಶೈವಂ ತಳ್ವದಿಲ್ಲಿಂ ಪೊಱಮಡಿಸವನಂ ಧೂರ್ತನಂ ದೂತರಿಂದಂ ೭೧

ವ॥ ಎಂದು ಪಿಸುಣ್ಗೆಡೆದ ಶವಣರ್ಗರಸನಿಂತೆಂದಂ—

೬೯. (ಸೋತುಹೋದ ಆ ಬೌದ್ಧರು) ಮರೆ ಹೊಗಲಾಗಿ, ಅವರಿಗೆ ಶಿವ ದೀಕ್ಷೆಯನ್ನು ಕೊಟ್ಟನು. 'ತಿರುಮರಕ್ಕಡಿ' ಎಂಬ ಪಟ್ಟಣದ ಮಧ್ಯದಲ್ಲಿರುವ ಶೋಭಿಸುವ ಶಿವಾಲಯದ ಮುಚ್ಚಿದ ಬಲಾಢ್ಯವಾದ ಕದಗಳನ್ನು ಶಿವನಲ್ಲಿನ ಏಕನಿಷ್ಠೆಯಿಂದ ತೆಗೆಯಿಸಿದನು. 'ತಿರುವಾಲ' ವೆಂಬ ಪಟ್ಟಣಕ್ಕೆ ಬಂದು (ಅಲ್ಲಿದ್ದ) ಜೈನ ಸಮೂಹವನ್ನು ವಾದದ ಪ್ರೌಢಿಮೆಯಿಂದ ಚೆನ್ನಾಗಿ ಸೋಲಿಸಿದನು. ೭೦. ಹಾವು ಕಚ್ಚಿ ಸತ್ತು ಹೋದ ಶೂದ್ರನೊಬ್ಬನ ಹೆಣಕ್ಕೆ ಜೀವವನ್ನು ಕೊಟ್ಟನು; 'ಮಧುರಾ' ಎಂಬ ಹೆಸರಿನ ಪಟ್ಟಣಕ್ಕೆ ಸದ್ಗುಣಗಳ ನಿಧಿಯೆನಿಸಿದ ಆ ಪಟ್ಟಣದ (ಪಾಂಡ್ಯ) ಅರಸನ ಹೆಂಡತಿಯ ಇಚ್ಛೆಯ ಮೇರೆಗೆ ಸಂತೋಷದಿಂದ ಬಂದನು. ವ॥ ಆಗ ಆ ಪಟ್ಟಣದಲ್ಲಿದ್ದ ಜೈನ ಬೌದ್ಧಾದಿಗಳು ಅಸೂಯೆಯಿಂದ ಅರಸನ ಹತ್ತಿರಕ್ಕೆ ಬಂದು ೭೧. ಎಲೈ ಭೂಪಾಲನೇ, ನೀನು ಜೈನಧರ್ಮಿಯನೆಂಬ ನಿಮಿತ್ತದ ಭೀತಿಯೂ ಕೂಡ ಇಲ್ಲದೆ, ಜೈನಧರ್ಮಿಯರ ನಿವಾಸವೆನಿಸಿದ ಈ ಪಟ್ಟಣಕ್ಕೆ, ಜೈನಮತವೆಂಬ ಅರಣ್ಯಕ್ಕೆ ಕಾಡ್ಗಿಚ್ಚು ಎಂಬ ಬಿರುದನ್ನು ಗರ್ವದಿಂದ ಅತ್ಯಧಿಕವಾಗಿ ಹೊಗಳಿಸಿಕೊಳ್ಳುತ್ತ ಓರ್ವ ಬಾಲಕನು ಬಂದಿದ್ದಾನೆ. ಮಹಾಶೈವನಾದ ಆ ಧೂರ್ತನು ಇಲ್ಲಿ ನಿಲ್ಲದಂತೆ ದೂತರಿಂದ ಹೊರಹಾಕಿಸು. ವ॥ ಹೀಗೆಂದು ಚಾಡಿಯನ್ನು ಹೇಳಿದ ಸವಣರಿಗೆ ಅರಸನು ಹೀಗೆ ಹೇಳಿದನು :

1 ಕ್ಯ (ಚ, ಅ) 2 ವಂ(ದ, ಅ)

ಅವನುತ್ತುಂಗಾಖ್ಯ ಚೋಳೇಂದ್ರನ ಗುರುವವನಂ ಸರ್ವಶಾಸ್ತ್ರಜ್ಞನಂ ಬ
ಲ್ಲವರಲ್ಲೆಂಬಂತದೆಂತಾಂ ಪೊಱಮಡಿಸಿದಪೆಂ ನೀವೆ ತರ್ಕಂಗಳಿಂ ಸೋ
ಲ್ವವೊಲಾತಂ ವಾದದೊಳ್ಗೆಲ್ದೊಡೆ ತಳರ್ಗುಮಿದೇ ಕಜ್ಜಮೆಂದಾಡೆ ಕೇಳ್ದಾ
ಶ್ರವಣರ್ಕೆಯ್ಕೊಂಡು ಪಾಂಡ್ಯಕ್ಷಿತಿಪವಚನಮಂ ಕಾಯ್ದುಪೆತ್ತುರ್ಕಿನಿಂದಂ ೭೨

ಪದಿನೆಂಟು ಸಾಸಿರಂ ದು
ರ್ಮದ ಜೈನರ್ ನೆರೆದು ಬಂದು ವಾದಿಸಿ ಜಯಮಾ
ಗದೆ ಸೋಲ್ತು ಕುವರನೊಳ್ಕೊ
ಳ್ಕುದಿಗೊಂಡಿರದೊಂದು ಕುಹಕಮಂ ಚಿಂತಿಸಿದರ್ ೭೩

ವ॥ ಅಂತು ಚಿಂತಿಸುತ್ತಮಹಿಂಸಾ ಪರಮೋ ಧರ್ಮಯೆಂಬ ನಿಜೋಕ್ತಿಯಂ ನಿರ್ಮೂ ಲನಂಗೆಯ್ದಾ ತಿರುಜ್ಞಾನ ಸಂಬಂಧರ್ಪಟ್ಟಿರ್ದ ಗೃಹಕ್ಕೆ ನಟ್ಟಿರುಳ್ಕಿರ್ಚನಿಕ್ಕೆ ಚುರ್ಚಲಾಱದದು ರೂಪುದಾಳ್ದೆಱಗಿ ಕೆಯ್ಮುಗಿದು ನಿಲಲೊಡನೆ ಕಂಡು—

ಎಲವೊ ಕೃಶಾನು ದಕ್ಷನ ಮುಖಕ್ಕಱಿತಂಗಿಡುತೆಯ್ದಿ ನೀಂ ಸಮು
ಜ್ವಲರುಚಿ ಸಪ್ತಜಿಹ್ವೆಗಳನಂದೊಡನೀಗಿದೆ ವೀರಭದ್ರನಿಂ
ಖಲರ ಬೆಸಕ್ಕೆ ಬಂದೆಗಡ ಮದ್ಗೃಹಕಿಂದೆಲೆ ನಿನ್ನ ಮೂಗನ
ಸ್ಖಲಿತ ಕೃಪಾಣದಿಂದರಿವೆನಿಲ್ಲಿರೆ ತಳ್ವದೆಪೋಗಿ ಪಾಂಡ್ಯನಾ ೭೪

ಒಡಲಂ ಪುಗು ಖಲಜೈನರ
ಕಡು ಬಿಂಕಮನಿಂದು ಕಾಣ್ಬೆನೆಂದಟ್ಟಲೊಡಂ

೭೨–೭೩. ಅವನು ಉತ್ತುಂಗ ಚೋಳಮಹಾರಾಜನ ಗುರುವರನು. ಸರ್ವ ಶಾಸ್ತ್ರಜ್ಞನಾದ ಅವನನ್ನು ತಿಳಿದವರಲ್ಲವೆಂದು ನಾನು ತಾನೆ ಹೇಗೆ ಹೊರಡಿಸಲಿ. ನೀವೇ ಅವನನ್ನು ವಾದದಲ್ಲಿ ಸೋಲಿಸಿದರೆ ತಾನಾಗಿಯೇ ಹೊರಟುಹೋಗುವನು. ಇದೇ ಸರಿಯಾದ ಮಾರ್ಗ, ಎಂದು ಆ ರಾಜನು ಹೇಳಲಾಗಿ, ಆ ಶ್ರವಣರು ಪಾಂಡ್ಯ ಮಹಾರಾಜನ ಮಾತನ್ನು ಒಪ್ಪಿಕೊಂಡು ಕೋಪಗೊಂಡು ಗರ್ವದಿಂದ ದುಷ್ಟಮದ ದಿಂದ ಕೂಡಿದ ಹದಿನೆಂಟು ಸಾವಿರ ಮಂದಿ ಜೈನರು ಸೇರಿ ಬಂದು ವಾದಿಸಿದರು. ಆಗ ಆ ಜೈನರಿಗೆ ಜಯವಾಗದೆ ಸೋತು, ಆ ಬಾಲಕನೊಡನೆ ಮತ್ಸರದಿಂದ ತಳಮಳ ಗೊಂಡು, ತಪ್ಪದೆ ಒಂದು ಮೋಸವನ್ನು ಚಿಂತಿಸಿದರು. ವ॥ ಹಾಗೆ ಚಿಂತಿಸುತ್ತ 'ಅಹಿಂಸಾಪರಮೋಧರ್ಮ' ಎಂಬ ತಮ್ಮ ಧರ್ಮದ ಸತ್ಯವಾಕ್ಯವನ್ನು ಗಾಳಿಗೆತೂರಿ (ನಿರ್ಮೂಲನಗೊಳಿಸಿ) ಆ ತಿರುಜ್ಞಾನ ಸಂಬಂಧರು ಮಲಗಿದ್ದ ಮನೆಗೆ ಮಧ್ಯರಾತ್ರಿ ಯಲ್ಲಿ ಬೆಂಕಿಯನ್ನು ಹಚ್ಚಿದರು, ಅದು ಸುಡಲಾರದೆ (ಮನುಷ್ಯ) ರೂಪವನ್ನು ಧರಿಸಿ (ಅಗ್ನಿರೂಪಧರಿಸಿ) ಕೈಮುಗಿದು ನಿಲ್ಲಲಾಗಿ ಆ ಕೂಡಲೆ ಕಂಡು—೭೪–೭೫. 'ಎಲೈ ಅಗ್ನಿಯೇ, ಹಿಂದೆ ನೀನು ದಕ್ಷನ ಯಜ್ಞಕ್ಕೆ ತಿಳುವಳಿಕೆಯಿಲ್ಲದೆ ಹೋಗಿ, ವೀರಭದ್ರ ನಿಂದ ಪ್ರಕಾಶಿಸುವ ಕಾಂತಿಯುಳ್ಳ ನಿನ್ನ ಏಳು ನಾಲಿಗೆಗಳನ್ನು ಹಾಳುಮಾಡಿಕೊಂಡೆ. ಎಲೈ ನೀನು ನನ್ನ ಮನೆಗೆ ಈ ದಿವಸ ದುಷ್ಟರಾದ (ಜೈನ, ಬೌದ್ಧರುಗಳ) ಅಪ್ಪಣೆ

ಮೃಡಸುತನೇಳ್ತಂದನಲಂ
ತೊಡರ್ದರಸನ ತನುವಿನೊಳ್ಪ್ರವೇಶಿಸಿತಾಗಳ್ ೭೫

ಬಿಡದುಗ್ರಜ್ವರರೂಪಿಂ
ದಿಡಿದಡಸಿ ಕವಲ್ತು ಕವಿದು ಕಾಯ್ದುವನೊಡಲಂ
ಕಡುಪಿಂ ಜ್ವಾಲಾವಲಿಯಿಂ
ಸುಡೆ ಸಿಡಿಮಿಡಿಗೊಂಡು ತಾಪವಿಹ್ವಳನಾದಂ ೭೬

ಕಱೆಗಂದಿದಾನನಂ ರಸ
ಮಱತಧರಂ ಕಿಡಿಯನುಗುಳ್ವ ಸುಯ್ಬತ್ತಿದ ಬಾ
ಯ್ಪೊಱಪಾಯ್ವ ಮೆಯ್ಯ ಬಿಸುಪೆ
ಳ್ಚಱನಳ್ಗಿಪ ತಾಪಮುರ್ಬಸಂಬಡುವಸುಗಳ್ ೭೭

ಇರೆ ಕಂದಿ ಕುಂದಿ ಸಂಜ್ವರ
ದುರಿಯಿಂ ಕಾಳ್ಗಿರ್ಚು ತಗುಳ್ದ ಮಿಗದಂತೆ ನೃಪಂ
ಕೊರಗಿ ಕಳವಳಿಸಿ ಪೊರಳು
ತ್ತುರುಳುತ್ತುಂ ಬೇಗೆವಟ್ಟು ಬೇವಸಗೊಂಡಂ ೭೮

ಯಿಂದ ಬಂದೆಯಲ್ಲವೇ ! ಈಗ ನೀನು ಇಲ್ಲಿದ್ದರೆ ನಿನ್ನ ಮೂಗನ್ನು ತೀಕ್ಷ್ಣವಾದ ಖಡ್ಗದಿಂದ ಕತ್ತರಿಸಿಹಾಕಿಬಿಡುತ್ತೇನೆ, ತಡಮಾಡದೆ ಹೋಗಿ ಆ ಪಾಂಡು ರಾಜನ ಶರೀರವನ್ನು ಪ್ರವೇಶಿಸು. ದುಷ್ಟರಾದ ಜೈನರ ಗರ್ವದ ಆಧಿಕ್ಯವನ್ನು ಈ ದಿವಸ ನೋಡಿಕೊಳ್ಳುತ್ತೇನೆ.' ಎಂದು ಆ ಅಗ್ನಿಯನ್ನು ಷಣ್ಮುಖನು ಅಟ್ಟಿಬಿಡಲಾಗಿ ಅದು ಆ ಕೂಡಲೇ ಅರಸನ ದೇಹವನ್ನು ಪ್ರವೇಶಮಾಡಿತು. ೭೬. (ಹೀಗೆ ಅಗ್ನಿಯು ಪಾಂಡುರಾಜನನ್ನು) ಬಿಡದೆ ಉಗ್ರಜ್ವರದ ರೂಪದಿಂದ ತೀವ್ರವಾಗಿ ಪ್ರವೇಶಿಸಿ ಕವಲುಗೊಂಡು ವ್ಯಾಪಿಸಿ, ಕಾವುಗೊಂಡು ಅವನ ಶರೀರವನ್ನು ಜ್ವಾಲೆಗಳ ಸಮೂಹದಿಂದ ಸುಡುತ್ತಿರಲಾಗಿ, ಆ ಅರಸನು ಕೋಪಗೊಂಡು ತಾಪದಿಂದ ನಡುಗುತ್ತಿರುವವನಾದನು. ೭೭–೭೮. ಕಪ್ಪುಬಣ್ಣದಿಂದ ಕಂದಿ ಹೋದ ಮುಖ, ರಸವಿಹೀನವಾದ ತುಟಿ, ಕಿಡಿಗಳನ್ನು ಹೊರಸೂಸುತ್ತಿರುವ ಉಸಿರು, ಬತ್ತಿಹೋದ ಬಾಯಿ, ಹೊರ ಹೊಮ್ಮುತ್ತಿರುವ ಮೆಯ್ಯ ಬಿಸಿ, ಎಚ್ಚರವನ್ನು ತಗ್ಗಿಸುವ ತಾಪ, ಉಬ್ಬಸಗೊಳ್ಳುವ ಪ್ರಾಣಗಳು—ಈ ರೀತಿಯು ಅವನಿಗಾಗಲು, ಹೆಚ್ಚಾದ ಜ್ವರದ ಉರಿಯಿಂದ ಕಂದಿ, ಕುಂದಿ ಕಾಡುಗಿಚ್ಚು ಹತ್ತಿಕೊಂಡ ಮೃಗದ ಹಾಗೆ ಅರಸನು ಕೊರಗಿ ಕಳವಳದಿಂದ

ಪಾಸಿದ ಪಲ್ಲವಪ್ರತತಿ ಪೊತ್ತೆ ವಿಳಾಸಿನಿಯರ್ಕಳಂಗದೊ
ಳ್ಪೂಸಿದ ಚಂದನಂ ಪೊಗೆಯೆ ಸೂಸುವ ಶೀತಳವಾರಿ ಬತ್ತೆ ಮೇ
ಣ್ಬೀಸುವ ಬಾಳೆಯೊಳ್ದಳಿರ ವೀಜನಮುಂ ಕಱಗಂದೆ ಕಣ್ಗೆ ಕ
ಟ್ಟಾಸುರವಾಗಿ ಪರ್ಬಿದುದು ಭೂಭುಜನಂಗದೊಳಾ ಮಹಾಜ್ವರಂ ೭೯

ನೋಡಿದೊಡೆ ಕಣ್ಗಳೆವೆಯು
ಳ್ಳಾಡುಗುಮವನಂಗದಲ್ಲಿ ಕೈಸಾರ್ಚೆ ಪುಗು
ಳ್ಳೊಡುಗುಮವನಿದಿರೊಳ್ನಿಲೆ
ಬಾಡುಗುಮಂಗಂಗಳೆಂದೊಡೇವಣ್ಣಪುದೋ ೮೦

ವ॥ ಇಂತಳವಿಗಳೆದು ವಿಳಯಾನಲನಂತೆ ಕವಿದಳುರ್ದ ಶಿಖಿಯ ಸೆಕೆಯಿಂ ಕೊಳ್ಗುದಿಗೊಂಡು ಹಮ್ಮೈದಂಬೋದರಸನಿರವಂ ಕೇಳ್ದು ತದ್ಗುರುಗಳಪ್ಪ ಪಿಂಛೈಕಲಾಂಛನರಾದ ಶವಣರೇಳ್ತಂದು ಸಂದಣಿಸಿ ಕುಳ್ಳಿರ್ದು—

ಅವನಿಪನಂಗತಾಪದುರಿ ಪತ್ತೆ ಜಿನೇಂದ್ರನ ಜಾನಮೆಂಬ ಬ
ಲ್ನೆವದೊಳೆ ಮುಚ್ಚುತಕ್ಷಿಗಳನಂಜಳಿಯೊಳ್ಘನಸಾರವಾರಿಯುಂ
ತವೆ ತಳೆದಲ್ಲಿ ಮಂತ್ರಿಸಿ ತದಂಗದೊಳೊಯ್ಯನೆ ಸೂಸೆ ಚುಯ್ಯೆನು
ತ್ತವಿರಳತಪ್ತಲೋಹಕೆಱೆದಂಬುವಿನಂತೆವೊಲಾದುದದ್ಭುತಂ ೮೧

ಹೊರಳಾಡುತ್ತ, ಉರುಳಾಡುತ್ತ ತಾಪಗೊಂಡು ಸಂಕಟಗೊಳ್ಳುತ್ತಿದ್ದನು. ೭೯. (ಅವನಿಗೆ) ಹಾಸಿದ ಚಿಗುರಿನ ಸಮೂಹವು (ಸುಟ್ಟು) ಹೊತ್ತಿತ್ತು; ವಿಳಾಸಿನೀ ಜನಗಳು ದೇಹದಲ್ಲಿ ಹಚ್ಚಿಕೊಂಡಿದ್ದ ಚಂದನವು ಹೊಗೆಯಾಡಿತು ; ತಣ್ಣೀರು ಬತ್ತಿತ್ತು ; ಬೀಸುತ್ತಿದ್ದ ಬಾಳೆಯೆಲೆಯ ಒಳ್ಳೆಯ ಚಿಗುರಿನ ಬೀಸಣಿಕೆಯು ಕಪ್ಪಾಗಿ ಕಂದಿತು ; ಈ ರೀತಿಯಲ್ಲಿ ನೋಡುವುದಕ್ಕೆ ಭಯಂಕರವೆನಿಸಿ ರಾಜನ ದೇಹದಲ್ಲಿ ಆ ಮಹಾಜ್ವರವು ಹಬ್ಬಿತು. ೮೦. ನೋಡಿದವರ ಕಣ್ಣುಗಳ ಎವೆಗಳೇ ಅಲ್ಲಾಡತೊಡಗಿದವು ; ಅವನ ದೇಹದಲ್ಲಿ ಕೈಯಿಡಲು, ಗುಳ್ಳೆಗಳೇಳತೊಡಗಿದವು ; ಅವನ ಎದುರಿಗೆ ನಿಂತವರ ಅಂಗಾಂಗಗಳೇ ಬಾಡಿಹೋಗುತ್ತಿದ್ದವೆನ್ನುವಾಗ ಅದನ್ನು ವರ್ಣನೆ ಮಾಡುವುದೇನಿದೆ ? ವ॥ ಹೀಗೆ ಗಣನಾತೀತವಾಗಿ ಪ್ರಳಯಕಾಲದ ಅಗ್ನಿಯಂತೆ ಕವಿದು ಸುಡುತ್ತಿರುವ ಬೆಂಕಿಯ ಸೆಕೆಯಿಂದ ಕೊಳು ಕುದಿಯುವಹಾಗೆ ಕುದ್ದು, ಎಚ್ಚರದಪ್ಪಿಹೋದ ಅರಸನ ಸ್ಥಿತಿಯನ್ನು ಕೇಳಿ ಅವನ ನವಿಲುಗರಿಯೇ ಪ್ರಮುಖ ಲಾಂಛನವುಳ್ಳ ಗುರುಗಳಾದ ಜೈನ ಸಂನ್ಯಾಸಿಗಳು ಬಂದು ಒಟ್ಟಾಗಿ ಸೇರಿ ಕುಳಿತುಕೊಂಡರು. ೮೧. ಅವರಿಗೂ ರಾಜನ ದೇಹದ ಉರಿಯು ಹತ್ತಿತು. ಜಿನೇಂದ್ರನನ್ನು ಧ್ಯಾನ ಮಾಡುವ ನೆಪದಲ್ಲಿ ಕಣ್ಣುಗಳನ್ನು ಮುಚ್ಚಿದರು ; ಬೊಗಸೆಯಲ್ಲಿ ಪಚ್ಚಕರ್ಪೂರ ಮಿಶ್ರಿತವಾದ ನೀರನ್ನು ಹಿಡಿದುಮಂತ್ರಿಸಿ, ಆಗ ಅವನ ದೇಹದ ಮೇಲೆ ಚೆನ್ನಾಗಿ ಚಿಮುಕಿಸಿದರು; ಆ ನೀರು ವಿಶೇಷವಾಗಿ ಕಾಯ್ದ ಲೋಹದ ಮೇಲೆ ಹಾಕಿದ ನೀರಿನಂತೆ ಅದ್ಭುತವೆನ್ನುವಂದೆ 'ಚುಯ್' ಎಂದು ಬತ್ತಿ

ವ॥ ಅಂತದಱಿನುರಿಗಾಜ್ಯವೆಱೆದಂತೆ ಮತ್ತೆ ಮಗುಳ್ದು ಪೆರ್ಚೆ ಜಿನಮುನಿಗಳ್ಕೆಲಂಬ ಜ್ವಾಲಾಮಾಲಿನಿಯುಂ ಕುಕ್ಕುಟನಾಥಾದಿಗಳಂ ನಿಷ್ಠೆಯಿಂ ನೆನೆದು ತನ್ಮಂತ್ರಂ ಬಿಡಿದು ಕುಂಚದಿಂ ಬೀಸಲೊಡನದು ಗರಿಗರಿಲನುರಿಯೆ ಮುಂಗಾಣದೆ ಕಂಗೆಟ್ಟು ಮಂಗಾಯಕ್ಕರಸಿಯೆಂಬ ತನ್ನೃಪನರಸಿಯೊ ರುಜೆಯುಂ ತೀರ್ಚಲಿವರೆಂತುಂ ನೆಱೆಯರೇಗೆಯ್ವೆನೆಂದು ಚಿಂತಿಸಿ ನೆನೆದಾ ತಿರುಜ್ಞಾನಸಂಬಂಧರಂ ಬರಿಸೆ—

ತೊಳಪ ರಮ್ಯದರಸ್ಮಿತಾನನಮಾಯತಾಕ್ಷಿ ಲಲಾಟದೊ
ಳ್ಪೊಳೆವ ಭೂತಿಯ ಮೂಱು ರೇಖೆಗಳಕ್ಷಮಾಲಿಕೆ ಮಿಂಚನು
ಚ್ಚಳಿಪ ದಂತಮರೀಚಿ ರತ್ನಕಿರೀಟಮುಜ್ವಳ ಭೂಷಣಾ
ವಳಿ ಸುವರ್ಣದುಕೂಲವೊಪ್ಪೆ ವಿರಾಜಿಸಿರ್ದ ಕುಮಾರನಂ ೮೨

ವ॥ ನೋಡಿ ಪಾಂಡ್ಯರಾಜನರಸಿ ವಿಶ್ವಾಸಭಾವಂ ಬಲಿದು—

ಜ್ವರದುರಿಪದಿನಳಿದಪನೆ
ಮ್ಮರಸಂ ಪರಿಹಪುದಿಂದು ನೀಮಿದನತಿಭಾ
ಸುರಮಹಿಮ ಶೈವಮಂತ್ರಾ
ಭರಣಾನನ ತಳ್ವದೆಂದು ಕೆಯ್ಮುಗಿದೆಂದಳ್ ೮೩

ಹೋಗತೊಡಗಿತು. ವ॥ ಈ ರೀತಿ ಚಿಮುಕಿಸಿದ ನೀರಿನಿಂದ ಉರಿಗೆತುಪ್ಪವನ್ನು ಸುರಿದ ಹಾಗೆ ತಾಪವು ಪುನಃ ಪುನಃ ಹೆಚ್ಚಾಗತೊಡಗಲು, ಜಿನ ಸಂನ್ಯಾಸಿಗಳು ಕೆಲವರು ಜ್ವಾಲಾಮಾಲಿನಿಯನ್ನೂ, ಕುಕ್ಕುಟನಾಥನೇ ಮೊದಲಾದ ದೇವತೆಗಳನ್ನೂ ನಿಷ್ಠೆಯಿಂದ ಸ್ತೋತ್ರಮಾಡಿ, ಆಯಾ ದೇವತೆಗಳ ಸಂಬಂಧದ ಮಂತ್ರಗಳನ್ನು ಹೇಳುತ್ತ ನವಿಲು ಗರಿಯ ಪಿಂಛದಿಂದ ಬೀಸುತ್ತಿರಲು ಆ ಪಿಂಛವೂ ಗರಿಗರಿಲೆಂದು ಉರಿಯಿತು. ಆಗ ಅವರು ಮುಂದೇನೆಂಬುದನ್ನರಿಯದವರಾಗಿ ದಿಕ್ಕುಗೆಟ್ಟು ಹೋಗಲು ಆ ಮಹಾರಾಜನ ಹೆಂಡತಿಯಾದ ಮಂಗಾಯಕ್ಕ ಅರಸಿಯು 'ಈ ಮಹಾರಾಜನ ಜ್ವರದ ಬೇನೆಯನ್ನು ಹೋಗಲಾಡಿಸಲು ಇವರು ಯಾವ ರೀತಿಯಿಂದಲೂ ಸಮರ್ಥರಾಗುವುದಿಲ್ಲ, ಏನು ಮಾಡಲಿ' ಎಂದು ಯೋಚಿಸಿ ಆ ತಿರುಜ್ಞಾನ ಸಂಬಂಧರನ್ನು ನೆನೆದು ಅವರನ್ನು ಬರ ಮಾಡಿಕೊಂಡಳು. ೮೨. ಪ್ರಕಾಶಮಾನವಾದ ಮನೋಹರ ಮುಗುಳು ನಗೆಯ ಮುಖ, ದೀರ್ಘವಾದ ಕಣ್ಣು, ಹಣೆಯ ಮೇಲೆ ಶೋಭಿಸುವ ಮೂರು ಬೆರಳಿನ ವಿಭೂತಿ, ರುದ್ರಾಕ್ಷಿಗಳ ಮಾಲೆ, ಮಿಂಚನ್ನು ಹೊರಸೂಸುವ ಹಲ್ಲುಗಳಸಾಲು, ರತ್ನ ಕಿರೀಟ, ಪ್ರಕಾಶಿಸುತ್ತಿರುವ ತೊಟ್ಟ ಆಭರಣ, ಸುವರ್ಣಮಯವಾದ ಉಟ್ಟವಸ್ತ್ರ—ಇವುಗಳಿಂದ ಒಪ್ಪಿ ಶೋಭಿಸುತ್ತಿದ್ದ ಕುಮಾರನನ್ನು (ಕುಮಾರಾಕಾರದ ತಿರುಜ್ಞಾನ ಸಂಬಂಧರನ್ನು)—ವ॥ ನೋಡಿ ಪಾಂಡ್ಯರಾಜನರಸಿಯಾದ ಮಂಗಾಯಕ್ಕನು ಅಧಿಕವಾದ ವಿಶ್ವಾಸವುಳ್ಳ ಭಾವದಿಂದ ಕೂಡಿ—೮೩. ಪ್ರಕಾಶಮಾನವಾದ ಮಹಿಮೆಯುಳ್ಳವನೇ, ಶಿವಸಂಬಂಧವಾದ ಮಂತ್ರವೇ ಆಭರಣವಾಗಿ ಉಳ್ಳವನೇ, ಜ್ವರದ ಉರಿಯು ಏಕೆಯಿಂದ ನಮ್ಮ ಪ್ರಭುವು ಸಾಯುತ್ತಿದ್ದಾನೆ. ಈಗ ತಾವು ಅವನ್ನು ತಡಮಾಡದೆ

ವ॥ ಆಗಳ್ಜೈನಮುನಿಗಳವಳೆಂದುದಂ ಕೇಳ್ದೀರ್ಷೆಯಿಂ ತಾಳ್ದು ಸರೋಷಮುಖರ ಮುಖರಾಗಿ—

ಕಾಮಿ ಶಿವನೆಮ್ಮ ದೇವಂ
ಕಾಮವಿದೂರಂ ಗಡಂತಱಿಂದೆಮ್ಮಯ ಮುಂ
ದೇವಾತೊ ಶೈವಮಹಿಮೆಯ
ದೀ ಮಹಿಯೊಳ್ಜೈನಮಹಿಮೆಗೇಂ ಪಾಸಟಿಯೇ ೮೪

ಅತಿಕೃತ ಮಹಾತಪಜ್ಜೈ
ನತಪೋಧನರಿವರಿನಳಿಯದೀ ಜ್ವರಮೆಂತುಂ
ಕೃತಕಮತಿ ಶೈವವಟುವಿಗ
ಳಿತಮಪ್ಪುದೆ ಬಱಿದೆ ದೈನ್ಯಮೇಕೆ ಲತಾಂಗೀ ೮೫

ವ॥ ಎಂದ ದುರುಕ್ತಿಗೆ ಕುಮಾರಂ ಕುಪಿತನಾಗಿ —

ಎಲೆ ದುಷ್ಪಾಂಡಿತ್ಯಪಾಷಂಡರಿರ ಹರನದೇಂ ಕಾಮಿಯೇ ಕಾಮನಂ ಗ
ರ್ಗ್ಗಲನುದ್ಯದ್ಭಾಳನೇತ್ರಸ್ಫುಟಪಟುಶಿಖಿಯಿಂ ಸುಟ್ಟು ಬೊಟ್ಟಿಟ್ಟು ಕಾಮಾ
ರಿಲಸನ್ನಾಮಕ್ಕೆ ಪಕ್ಕಾದಭವನನಘನಾದ್ಯಂ ತಪಂಗೆಯ್ದು ತನ್ನು
ಜ್ವಲವಿದ್ಯಾಶಕ್ತಿಗೊಲ್ದಂಕದೊಳೆ ತಳೆದ ಕಾರುಣ್ಯಪೂರ್ಣಾಂತರಂಗಂ ೮೬

ಪರಿಹರಿಸಬೇಕು, ಎನ್ನುತ್ತ ಕೈಗಳನ್ನು ಮುಗಿಯುತ್ತ ಕೇಳಿಕೊಂಡಳು. ವ॥ ಆಗ ಹೇಳಿದುದನ್ನು ಜೈನ ಮುನಿಗಳು ಕೇಳಿ, ಅಸೂಯೆಯಿಂದ ಕೂಡ ವಿಶೇಷ ರೋಷಾವೇಶದಿಂದ ತುಂಬಿದ ಮುಖವುಳ್ಳವರಾಗಿ—೮೪. ಶಿವನು ಕಾಮುಕನು ; ನಮ್ಮ ದೇವರು ಕಾಮನನ್ನು ದೂರಮಾಡಿದವರಲ್ಲವೇ ! ಆದ ಕಾರಣ ನಮ್ಮೆದುರಿನಲ್ಲಿ ನಿನ್ನದು ಇದಾವಮಾತೋ ! ಲೋಕದಲ್ಲಿ ಈ ಶಿವ ಸಂಬಂಧವಾದ ಮಹಿಮೆಯೆಂಬುದು ಜೈನ ಮಹಿಮೆಗೆ ಏನು ಸಮಾನವಾದೀತು ! ೮೫. ಅತಿಶಯವಾಗಿ ಮಹಾತಪಸ್ಸನ್ನಾಚರಿಸಿದ ಜೈನತಪೋಧನರಾದ ಇವರಿಂದ ಇಳಿಯದ ಈ ಜ್ವರವು ಕೃತಕ ಬುದ್ಧಿಯ ಈ ಶೈವ ಬಾಲಕನಿಂದ ಹೇಗೂ ಇಳಿಯುಲಿಕ್ಕೆ ಸಾಧ್ಯವೇ ? ಹೇ ಲತಾಂಗಿಯೇ ಸುಮ್ಮ ಸುಮ್ಮನೆ ಈ ದೈನ್ಯಭಾವ ಇವನಲ್ಲಿ (ನಿನಗೆ) ಏಕೆ ? ವ॥ ಹೀಗೆಂದ ದುಷ್ಟಮಾತುಗಳಿಗೆ ಆ ಕುಮಾರನು ಕೋಪಗೊಂಡು. ೮೬. ಎಲೈ ಕೆಟ್ಟ ಪಾಂಡಿತ್ಯದಿಂದ ಕೂಡಿದ ಪಾಷಂಡಿಗಳಿರಾ,* ಅದೇನು ? ಶಿವನು ಕಾಮುಕನೇ ? ಮನ್ಮಥನನ್ನು ಗರಿಗರಿಲೆಂದು ಭಯಂಕರವೂ, ಶ್ರೇಷ್ಠವೂ ಆದ ಹಣೆಗಣ್ಣಿನ ಸ್ಪಷ್ಟವಾದ ಸಾಮರ್ಥ್ಯದಿಂದ ಕೂಡಿದ ಬೆಂಕಿಯಿಂದ ಸುಟ್ಟು ಬೊಟ್ಟಿಟ್ಟು 'ಕಾಮಾರಿ' ಎಂಬ ಶ್ರೇಷ್ಠ ನಾಮಕ್ಕೆ ಕಾರಣನಾದ ಪಾಪ ದೂರನಾದ ಶಿವನು ಆದ್ಯನು. ನನ್ನ ಉಜ್ವಲವೂ ಶೈವ ಸಂಬಂಧವೂ ಆದ ವಿದ್ಯೆ ಮತ್ತು ಶಕ್ತಿಗಳಿಗೆ ಒಲಿದು ತೊಡೆಯ ಮೇಲೆ ಕುಳ್ಳಿರಿಸಿಕೊಂಡ ಕಾರುಣ್ಯ ಪೂರ್ಣವಾದ

———

*ಪಾಷಂಡಿ : ಸಂಸಾರ ಬಂಧ ಕಾರಣಗಳೆನಿಸಿದ ಅಸತ್ಯ ಶಾಸ್ತ್ರಗಳನ್ನು ಹೇಳುವವರು.

ತರುಣಿಯನುಳಿದನಿತರ್ಕೀ
ಶ್ವರನಪ್ಪನೆ ಜಗಕೆ ನಿಮ್ಮ ಜಿನನಮಮ ಮಹೇ
ಶ್ವರನಂತೆ ಭೀಷ್ಮನುಂ ಮಾ
ನರಪತಿಯುಂ ವಧುವನುಳಿಯರೇ ವಸುಮತಿಯೊಳ್ ೮೭

ಜಿನಭಕ್ತರಳವುಮೀಶನ
ಘನಭಕ್ತರ ಮಹಿಮೆಯಱಿಯಲಕ್ಕುಂ ನಿಮ್ಮೀ
ಜನಪನೆಡದರೆಯೊಡಲ ರುಜೆ
ಯುನೆ ಪರಿಯಿರೆ ಪರಿವೆನುಳಿದ ದೇಹಜ್ವರಮಂ ೮೮

ವ॥ ಎಂದು ದೂಷಕಜನಜಲದಝಂಝಾಪ್ರಭಂಜನಂ ಗಂಭೀರನಾದದಿಂ ಪೂಣ್ದು ರಸನ ವಾಮಾರ್ಧಾಂಗಮಂ ನವರ್ಗಿತ್ತು ದಕ್ಷಿಣಾರ್ಧಾಂಗಮಂ ತಾಂ ಕೆಯ್ಕೊಂಡು—

ಅಮೃದ್ಗಂ ಸಿಂಪಿಸುವಂತೆ ಮಂತ್ರಿತಮಹಾಶ್ರೀಭಸ್ಮಮಂ ಸಿಂಪಿಸು
ತ್ತೆ ಮಹೀಪಾಲನ ದಕ್ಷಿಣಾರ್ಧತನುಗೊಲ್ದಾಲೇಪನಂಗೆಯ್ವುದುಂ
ಶಮನಂಬೆತ್ತು ತದಂಗದರ್ಧದೆಡೆಯುಂ ಬಿಟ್ಟೆಯ್ದಿ ವಾಮಾಂಗದ
ರ್ಧಮನಾ ಕಾಯ್ಪಿನೊಳೋದುತಿರ್ಮಡಿಸಿ ತಾಪಂಗೆಯ್ದುದಾ ಪಾವಕಂ ೮೯

ಅರೆಯೊಡಲೊಳ್ಶೀತಳತೆಯು
ನರೆಯೊಡಲೊಳ್ತೀವ್ರತಾಪಮುಂ ತಳೆದ ಮಹೀ
ಶ್ವರನಂಗಂ ತಾಳ್ದುದು ನಿ
ರ್ಝರದಾವಪರೀತ ಪಾರ್ಶ್ವಭೂಧರದಿರವಂ ೯೦

ಅಂತರಂಗವುಳ್ಳವನು. ೮೭. ನಿಮ್ಮ ಜಿನನು ತರುಣಿಯನ್ನು ಬಿಟ್ಟವನೆಂದಮಾತ್ರಕ್ಕೆ ಈ ಜಗತ್ತಿಗೆ ಈಶ್ವರ ನೆನಿಸುವನೇ ? ಅಮಮ ! ಲೋಕದಲ್ಲಿ ಭೀಷ್ಮನೂ, ಹನುಮಂತನೂ ತರುಣಿಯನ್ನು ಬಿಟ್ಟಮಾತ್ರದಿಂದ (ನಿಮ್ಮ ಜಿನನಂತೆ) ಮಹೇಶ್ವರರೇ ಆಗುವರೇ ? (ಎಂದನು). ೮೮. ಜಿನಭಕ್ತರ ಸಾಮರ್ಥ್ಯವೇನು ? ಈಶ್ವರ ಭಕ್ತರ ಸಾಮರ್ಥ್ಯ ವೇನು ? ಎಂಬುದು ತಿಳಿದು ಬರುವುದು ! ನಿಮ್ಮ ಈ ಮಹಾರಾಜನ ಅರ್ಧದೇಹದ ರೋಗವನ್ನು ಪರಿಹರಿಸಿರಯ್ಯ ! ನಾನು ಉಳಿದ ದೇಹ ಜ್ವರವನ್ನು ನಿವಾರಿಸುತ್ತೇನೆ ! ವ॥ ಹೀಗೆಂದು ದೂಷಕ ಜನವೆಂಬ ಮೋಡಗಳಿಗೆ ಬಿರುಗಾಳಿಯಂತಿರುವ ಆ ಕುಮಾರನು ಗಂಭೀರ ಧ್ವನಿಯಿಂದ ಪ್ರತಿಜ್ಞೆಮಾಡಿ, ಎಡಭಾಗದ ಅರ್ಧದೇಹದ ಬಾಧೆಯನ್ನು ಪರಿಹರಿಸಲು ಅವರಿಗೆ ಕೊಟ್ಟು, ಬಲಭಾಗದ ಅರ್ಧ ಅಂಗವನ್ನು ತಾನು ಸ್ವೀಕರಿಸಿ, ೮೯. ಅಮೃತವನ್ನು ಸಿಂಪಡಿಸುವಂತೆ ಮಂತ್ರಿಸಲ್ಪಟ್ಟ ಘನವಾದುದೂ, ಮಂಗಳಕರ ವಾದುದೂ ಆದ ಭಸ್ಮವನ್ನು ಸಿಂಪಡಿಸುತ್ತ ಆ ರಾಜನ ಬಲಭಾಗದ ಅರ್ಧದೇಹಕ್ಕೆ ಪ್ರೀತಿಯಿಂದ ಧರಿಸಲಾಗಿ, ಆ ಅಗ್ನಿಯು ಆ ಅರ್ಧ ಶರೀರದ ಸ್ಥಾನವನ್ನು ಬಿಟ್ಟು ಉಪಶಮನಗೊಂಡು, ಎಡಭಾಗದ ಅರ್ಧದೇಹದಲ್ಲಿ ಎರಡು ಪಟ್ಟು ಕಾವನ್ನು ಹೊಂದಿ, ತಾಪಕ್ಕೀಡು ಮಾಡಿತು. ೯೦. ದೇಹಾರ್ಧದಲ್ಲಿ ತಂಪನ್ನೂ, ಅರ್ಧದೇಹದಲ್ಲಿ ಅತ್ಯಂತ ತಾಪವನ್ನೂ ಹೊಂದಿದ ಮಹಾರಾಜನ ದೇಹವು ಗಿರಿ ನದಿ ಮತ್ತು ಕಾಡುಗಿಚ್ಚುಗಳಿಂದ

ಸಸಿ ಬಿಸುಪನುಗುಳ್ದುದಾ ರವಿ
ಸಸಿಯಂತಿರೆ ತಣ್ಪನುಗುಳ್ದುದೆಡಗಣ್ಬನ್ನೀ
ರ್ಮಸಗುತ್ತಿರ್ದುದು ಬಲಗ
ಣ್ಮಿಸುಗುತ್ತಲರ್ದುದು ನರೇಂದ್ರನಂಗದೊಳಾಗಳ್ ೯೧

ಇಡಿದಡಸಿ ಕವಿದು[1] ಕಡಲಂ
ಕುಡಿದಳುರ್ವೌ[2]ರ್ವಾಗ್ನಿಯಂತೆ ತನ್ನರೆಯೊಡಲಂ
ಕಡುಪಿಂ ಸುಡೆ ಶಿಖಿ ಮಿಟ್ಟನೆ
ಮಿಡುಕುತೆ ಬಾಯ್ಬಿಡುತೆ ನೃಪತಿ ಸಿಡಿಮಿಡಿಗೊಂಡಂ ೯೨

ವ॥ ಅಂತು ಬಳಲ್ದರಸನವಸ್ಥೆಯಂ ಕಂಡು ಜೈನಮುನಿಗಳ್ಸ್ವಭಾಗಗತದೇಹಾರ್ಧರಕ್ಷೆಯಂ ಬಹುವಿಧದಿಂ ನೆಗಳ್ಚೆ ತದ್ದೇಹದಾಹಮುಚ್ಚಳಿಯದೆ ಮತ್ತೆಯುಂ ಪೆರ್ಚೆ ನಿಜ ಮಂತ್ರತಂತ್ರಂಗಳೆಲ್ಲಂ ವ್ಯರ್ಥಮಾಗಲೊಡನವರೇನು[3]ಮೆನಲ[3]ಱಿಯದೆ ಖಿನ್ನಮುಖರಾಗಿ ಬಿನ್ನನಿರೆ ನಿಜಾರ್ಧಪ್ರಾಣಮಿತ್ತ ಶೈವಮುನಿಯುಂ ದೈನ್ಯದೃಷ್ಟಿಯಿನರಸನೀಕ್ಷಿಸುತ್ತೆ ಕರಮಂ ಮುಗಿದು—

ತಿಳಿದೆಂ ದೇವೇಶ ನಿಮ್ಮಾ ಮತದ ಮಹಿಮೆಯುಂ ನಿಮ್ಮ ಸಾಮರ್ಥ್ಯಮುಂ ದು
ರ್ಬಳಜೈನಾಚಾರ್ಯರಿಂ ಮಳ್ಗದ ರುಜೆಯನಿದಂ ಪೂಣ್ದು ಪೋಗಾಡಿದಿರ್ನಿ

ಸುತ್ತುವರಿಯಲ್ಪಟ್ಟ ಪರ್ವತದ ಎರಡು ಪಾರ್ಶ್ವಗಳ ರೀತಿಯನ್ನು ಹೊಂದಿತು. ೯೧. ಆ ರಾಜೇಂದ್ರನ ದೇಹದಲ್ಲಿ ಆಗ (ಎಡಗಡೆಯಿರುವ) ಚಂದ್ರನಾಡಿಯು ಬಿಸಿಯನ್ನು ಉಗುಳುತ್ತಿತ್ತು ; (ಬಲಗಡೆಯಿರುವ) ಸೂರ್ಯನಾಡಿಯು ಚಂದ್ರನಂತೆ ತಂಪನ್ನು ಉಗುಳುತ್ತಿತ್ತು ; ಎಡಗಡೆಯ ಕಣ್ಣು ಕಾಂಬ್ದು ನೀರಿನಿಂದ ಕಾಂತಿ ಹೀನವಾಗುತ್ತಿತ್ತು ; ಬಲಗಡೆಯ ಕಣ್ಣು ಕಾಂತಿಯಿಂದ ಅರಳುತ್ತಿತ್ತು. ೯೨. ದಟ್ಟವಾಗಿ ಒಳಹೊಕ್ಕು ವ್ಯಾಪಿಸಿ ಸಮುದ್ರವನ್ನೇ ಕುಡಿದು ಸುಡುತ್ತಿರುವ ಬಡಬಾಗ್ನಿಯಂತೆ ತನ್ನ ಅರ್ಧದೇಹವನ್ನು ಶೌರ್ಯದಿಂದ ಬೆಂಕಿಯು ಸುಡಲು ಆ ಅರಸನು ಮಿಡು ಮಿಡನೆ ಮಿಡುಕುತ್ತ (ವಿಲಿ ವಿಲಿ ಒದ್ದಾಡುತ್ತ) ಬಾಯಿ ಬಿಟ್ಟು ಅಳುತ್ತ ಸಂಕಟಗೊಳ್ಳುತ್ತಿದ್ದನು. ವ॥ ಈ ರೀತಿ ಬಳಲುತ್ತಿರುವ ಅರಸನ ದುರವಸ್ಥೆಯನ್ನು ಕಂಡು, ಜೈನ ಮುನಿಗಳು ತಮ್ಮ ಪಾಲಿಗೆ ಬಂದ ಅರ್ಧದೇಹದ ರಕ್ಷಣೆಯನ್ನು ಅನೇಕ ಬಗೆಯಲ್ಲಿ ಹಲವಾರು ರೀತಿಯ ಚಿಕಿತ್ಸೆಗೊಳಗುಮಾಡಿದರೂ ಆ ದೇಹಾರ್ಧಭಾಗದ ದಾಹವು ಸ್ವಲ್ಪವೂ ಕಡಿಮೆಯಾಗದೆ ಮತ್ತೆ ಮತ್ತೆ ಹೆಚ್ಚುತ್ತಲೇ ಇತ್ತು. ತಾವು ಮಾಡಿದ ಮಂತ್ರ ತಂತ್ರಗಳೆಲ್ಲವೂ ವ್ಯರ್ಥವಾಗ ತೊಡಗಲು ಅವರು ಏನನ್ನೂ ಮಾತನಾಡಲರಿಯದವರಾಗಿ, ಖಿನ್ನಗೊಂಡ ಮುಖದಿಂದ ತೆಪ್ಪಗೆ ಬಾಯಿ ಮುಚ್ಚಿರಲು, ತನ್ನ ಭಾಗಕ್ಕೆ ಬಂದ ದೇಹಾರ್ಧದ ಪ್ರಾಣವನ್ನು ಕೊಟ್ಟ ಶೈವ ಮುನಿಯನ್ನು ದೀನ ಭಾವದಿಂದ ಆ ಅರಸನು ನೋಡುತ್ತ ಕೈಗಳನ್ನು ಮುಗಿದು. ೯೩. 'ಹೇ ದೇವೇಶ, ನಿತ್ಯವೂ ಉಜ್ವಲವಾದ ಕಾರುಣ್ಯದಿಂದ ಕೂಡಿರುವವನೇ, ನಿಮ್ಮ ಈ

1 ದ(ಮು, ಗ, ಜ) 2 ದೌರ್ವ(ದ) 3 ಮನ (ಅ, ಗ, ಚ, ಮು)

ಮ್ಮಳವಂ ಬಣ್ಣಿಪ್ಪನಾವಂ ಬಿಡದರೆಯೊಡಲೀ ವಹ್ನಿಯಂ ನೂಂಕಿ ನಿತ್ಯೋ
ಜ್ವಳ ಕಾರುಣ್ಯಾಬ್ಧಿ ನೀನೇ ಪೊರೆ ನಿನಗೆ ಶರಣ್ಬೊಕ್ಕೆನೆಂದಂ ನರೇಂದ್ರಂ ೯೩

ವ॥ ಎಂಬುದುಮಾಗಳಂತೆ ಜಿನಮತವನಜವನಗಜೇಂದ್ರಂ ಶಿವಮಂತ್ರಮನುಚ್ಚರಿಸುತ್ತುಮಾ ತಪ್ತಾರ್ಧಶರೀರದೊಳ್ ಶ್ರೀಭಸಿತಮಂ ತಳಿಯೆ—

ಪರೆದುದವನಂಗದುಗ್ರ
ಜ್ವರಮಾಗಳೆ ಶಿವಕುಮಾರಶಶಿಭಸಿತಲಸ
ತ್ಕರಪಾತದಿಂ ಸುಧಾಸಾ
ಗರದೊಳ್ಮಗೆ ಮುಳುಗಿದಂತಿರಾದಂ ಭೂಪಂ ೯೪

ಮಿಗೆ ಕಾಸಿ ತಿರ್ದಿದಂತೆವೊ
ಲಗಲದ ಬೆಂಗೂನುಮಳಿಯೆ ಸಸಿನಂದಳೆದಾ
ಜಗತೀಪತಿಯಂಗಂ ಪೊಗ
ರ್ಗೆ ಸೌಂದರ್ಯಮನೆ ತಾಳ್ದು ಕಂಗೊಳಿಸಲೊಡಂ ೯೫

ವ॥ ಅಂದು ಮೊದಲ್ಗೂನ ಪಾಂಡ್ಯನಾಮಂ ಪೋಗಿ ಸೌಂದರಪಾಂಡ್ಯನೆಂಬ ನಾಮಂ ಪ್ರಸಿದ್ಧಮಾಗಿರ್ದುದಾ ಭೂಕಾಂತಂ ಕಾಂತೆಯೊಡನೆ ಸಾಶ್ಚರ್ಯಮುದಮನಾಳ್ದು ಸಾಷ್ಟಾಂಗಮೆಱಗಿ

ಮತದ ಮಹಿಮೆಯನ್ನೂ, ನಿಮ್ಮ ಶಕ್ತಿಯನ್ನೂ, ದುರ್ಬಲರಾದ ಜೈನಾಚಾರ್ಯರಿಂದ ವಾಸಿಗೊಳ್ಳದ ಈ ಬೇನೆಯನ್ನೂ, ಪ್ರತಿಜ್ಞೆಮಾಡಿ ನೀವು ಹೋಗಲಾಡಿಸಿದ ನಿಮ್ಮ ಸಾಮರ್ಥ್ಯವನ್ನೂ ವರ್ಣಿಸುವವನಾವನು ? ತಪ್ಪದೆ ಅರ್ಧದೇಹದ ಈ ಉರಿಯನ್ನು ನೀನೇ ನಿವಾರಿಸಿ ನನ್ನನ್ನು ರಕ್ಷಿಸು. ನಿನಗೆ ಶರಣು ಹೊಕ್ಕಿದ್ದೇನೆ' ಎಂದು ಆ ರಾಜನು ಹೇಳಿದನು. ವ॥ ಹೀಗೆಂದು (ಆ ಅರಸನು) ಹೇಳಲು ಅಂತೆಯೇ ಜೈನ ಮತವೆಂಬ ಕಮಲಗಳ ಸಮೂಹಕ್ಕೆ ಶ್ರೇಷ್ಠ ಆನೆಯಂತಿರುವ ಆ ಶೈವ ಮುನಿಯು ಶಿವಮಂತ್ರವನ್ನು ಉಚ್ಚರಿಸುತ್ತ ತಪ್ತಗೊಂಡ ಆ ಅರ್ಧದೇಹದಲ್ಲಿ ಮಂಗಳಕರವಾದ ಭಸ್ಮವನ್ನು ಹಚ್ಚಲು. ೯೪. ಆ ಶಿವಕುಮಾರನಾದ ಜ್ಞಾನ ಸಂಬಂಧನ ಚಂದ್ರನೇಪಾದಿಯಲ್ಲಿರುವ ಪವಿತ್ರ ಭಸ್ಮದ ಧರಿಸುವಿಕೆಯಿಂದ ಆ ಕೂಡಲೇ ಆ ಅರಸನ ದೇಹದಲ್ಲಿದ್ದ ಉಗ್ರ ಜ್ವರವು ನಾಶವಾಯಿತು. ಅರಸನು ಅಮೃತದ ಸಾಗರದಲ್ಲಿ ಚೆನ್ನಾಗಿ ಮುಳುಗಿದವನಂತೆ ಆದನು. ೯೫. ಚೆನ್ನಾಗಿ ಕಾಸಿ ತಿದ್ದಿ ಸರಿ ಪಡಿಸಿದ ರೀತಿಯಲ್ಲಿ (ಏನು ಮಾಡಿದರೂ) ಹೋಗದೆ ಇದ್ದ ಆ ಅರಸನ ಗೂನುಗೊಂಡ ಬೆನ್ನೂ ಕೂಡ ನಾಶವಾಯಿತು. (ಸರಿಯಾಯಿತು) ಆನಂದಗೊಂಡ ಭೂಮೀಶ್ವರನ ದೇಹವು ಹೊರಹೊಮ್ಮುತ್ತಿರುವ ಕಾಂತಿಯಿಂದ ಕೂಡಿ, ಸೌಂದರ್ಯವನ್ನು ಹೊಂದಿ ಕಂಗೊಳಿಸುತ್ತಿರಲಾಗಿ. ವ॥ ಅದಕ್ಕೂ ಪೂರ್ವದಲ್ಲಿ 'ಗೂನ ಪಾಂಡ್ಯ' ನೆಂದು ಕರೆಯುತ್ತಿದ್ದ ಹೆಸರು ಹೋಗಿ, 'ಸೌಂದರ ಪಾಂಡ್ಯ' ಎಂಬ ಹೆಸರು ಪ್ರಸಿದ್ಧವಾಯಿತು. ಆ ಭೂವಲ್ಲಭನು ತನ್ನ ಹೆಂಡತಿ ಸಹಿತವಾಗಿ ವಿಶೇಷ ಆಶ್ಚರ್ಯ ಭರಿತನಾಗಿ ಸಂತೋಷವನ್ನು ಹೊಂದಿ, ಸಾಷ್ಟಾಂಗ ನಮಸ್ಕಾರ

ಕೂರ್ವೆಯಿಂ ಕೊಂಡಾಡಿ ತಚ್ಚರಣಮಂ ಶರಣ್ಬೊಕ್ಕವರ್ಗೆ ಮಣಿಮಕುಟ ಸುವರ್ಣಾಭರಣ ಸುವಸನಾದಿಗಳಂ ಸಮರ್ಪಿ[4]ಸಿ ಪಾದಪೂಜೆಯುಂ ರಚಿಸಿ ಪದುಳವಿರ್ಪಿನಂ ಜ್ಞಾನಸಂಬಂಧರ ಶಿಷ್ಯನೊರ್ವಂ ಪರಾಜಯಮುಂಬಡೆದು ಸವಿಷಾದ ಕುಪಿತರಾಗಿರ್ದ ಜಿನಮುನಿಗಳಂ ನೋಡುತಿಂತೆಂದಂ—

ಜಿನನೆ ಘನಮೆಂದು ಗಳಪಿದ
ಮುನಿಗಳೆ ನಿಮಗಾಯ್ತು ಸೋಲಮೆಮಗಾಯ್ತು ಜಯಂ
ಜನಪರುಜೆ ನಿಮಗಸಾಧ್ಯಮಿ
ದೆನಿಸುತ್ತೆಮ್ಮಿಂದೆ ಪರಿದ ಕಾರಣದಿಂದಂ ೯೬

ವ॥ ಎನೆ ಜೈನವರ್ಗಕೋರಂಡು ವೈದ್ಯಸಾಧ್ಯನೃಪತಾಪಹರಣಮಾತ್ರದಿಂ ನಿಮಗೆ ಜಯಮೆಂತಕ್ಕುಮೀಗಳೆರಡು ಪತ್ರಿಕೆಯೊಳೆ ಜಿನ–ಶಿವಶಾಸನಂಗಳಂ ಬರೆದುರಿವಗ್ನಿಯೊಳಿಟ್ಟೊಡಾವ ಪತ್ರಿಕೆ ಬೇಯದುಳಿದುದದಱಿನಾ ಮತಕ್ಕೆ ಗೆಲ್ಲಂ ಬೇದುದದಱಿಂ ಸೋಲಮಕ್ಕುಮಿದು ನಿಮಗೆ ಸಮ್ಮತಮಾದೊಡಂತೆ ಗೆಯ್ವುದುವೆಂಬುದುಮಾ ನುಡಿಯಂ ಜ್ಞಾನ ಸಂಬಂಧರೊಡಂಬಟ್ಟೆರಡುಂ ಪತ್ರದೊಳ್ ಶಿವನಾಮ ಜಿನನಾಮಂಗಳಂ ಬರೆದವರುಂ ತಾನುಮರಸಿನ ಕೆಯ್ಯೊಳೀವಾಗಳೆಲ್ಲರುಂ ಕೇಳ್ವಿನಮಲ್ಲಿ—

ಮಾಡಿ, ಪ್ರೀತಿಯಿಂದ ಕೊಂಡಾಡಿದನು. ಆ ಜ್ಞಾನಸಂಬಂಧರ ಪಾದವನ್ನು ಶರಣು ಹೊಕ್ಕು ಅವರಿಗೆ ರತ್ನ ಖಚಿತವಾದ ಕಿರೀಟ, ಬಂಗಾರದ ಅಭರಣಗಳು, ಶ್ರೇಷ್ಠವಸ್ತ್ರಗಳೇ ಮೊದಲಾದುವನ್ನು ಸಮರ್ಪಣೆಮಾಡಿ ಪಾದಪೂಜೆಯನ್ನು ಮಾಡಿ, ಸಂತೋಷದಿಂದ ಇರುತ್ತಿದ್ದನು. ಜ್ಞಾನಸಂಬಂಧರ ಒಬ್ಬ ಶಿಷ್ಯನು ಸೋತು ಹೋಗಿ ವಿಷಾದದಿಂದಲೂ, ಕೋಪದಿಂದಲೂ ಕೂಡಿದ ಜೈನ ಸಂನ್ಯಾಸಿಗಳನ್ನು ನೋಡುತ್ತ ಹೀಗೆಂದನು : ೯೬. ಎಲೈ ಮುನಿಗಳೇ, ಜಿನನೇ ಶ್ರೇಷ್ಠನೆಂದು ವ್ಯರ್ಥವಾಗಿ ಮಾತನಾಡಿದ ನಿಮಗೆ ಸೋಲೂ, ನಮಗೆ ಜಯವೂ ಅರಸನ ಬೇನೆಯು ನಿಮಗೆ ಅಸಾಧ್ಯವೆನಿಸಿ ನಮ್ಮಿಂದ ಪರಿಹಾರವಾದ ಕಾರಣದಿಂದ ಆದಂತಾಯಿತು. ವ॥ ಹೀಗೆನ್ನಲು ಜೈನನು ಪ್ರತಿಭಟಿಸುತ್ತ (ಓರ್ವ) ವೈದ್ಯನಿಂದ ನಿವಾರಣೆಗೊಳಿಸ ಬಹುದಾದ ಅರಸನ ತಾಪವನ್ನೂ ಹರಣಮಾಡಿದ ಮಾತ್ರದಿಂದ ನಿಮಗೆ ಹೇಗೆ ಜಯವಾದೀತು ! ಈಗ ಎರಡು ಓಲೆಯ ಎಲೆಗಳಲ್ಲಿ (ಒಂದರಲ್ಲಿ) ಜಿನಶಾಸನವನ್ನೂ (ಮತ್ತೊಂದರಲ್ಲಿ) ಶಿವಶಾಸನವನ್ನೂ ಬರೆಯಿಸಿ, ಅವನ್ನು ಉರಿಯುತ್ತಿರುವ ಅಗ್ನಿಗೆ ಹಾಕಿದರೆ, ಯಾವ ಪತ್ರಿಕೆ ಬೇಯದೆ ಉಳಿಯುವುದೋ ಅದರ ಮೇಲಿಂದ ಆ ಮತಕ್ಕೆ ಗೆಲುವು ; ಸುಟ್ಟರೆ ಅದರಿಂದ ಸೋಲು ಆಗುವುದು. ಈ ರೀತಿ ನಿಮಗೆ ಒಪ್ಪಿಗೆಯಾದರೆ, ಹಾಗೆಯೇ ಮಾಡೋಣ ಎನ್ನಲಾಗಿ, ಆ ಮಾತನ್ನು ತಿರುಜ್ಞಾನ ಸಂಬಂಧರು ಒಪ್ಪಿಕೊಂಡು, ಓಲೆಗಳಲ್ಲಿ ಶಿವನಾಮ–ಜಿನನಾಮಗಳನ್ನು ಬರೆದು ಜೈನರೂ ತಾನೂ ಬರೆದು ಅರಸನ

4 ರ್ಚಿ(ಚ)

ಶುನಕನ ದಂತವಮಂ ಕನಕವಮಂ ಸರಿತೂಗಿದೊಡಾ ಸುವರ್ಣಕಾ
ಶುನಕನ ದಂತವೇಂ ಸರಿಯೆ ಮುತ್ತಿನೊಳೊಂದು ವರಾಟವಮಂ ತುಲಾ
ವಿನಿಹಿತಪಾತ್ರೆಯಲ್ಲಿರಿಸಿ ತೂಗೆ ಸಮಾನವೆ ತದ್ವರಾಟವಾ
ಘನರುಚಿ ಮೌಕ್ತಿಕಕ್ಕೆ ಜಿನಮಂತ್ರದ ಪತ್ರಿಕೆ ಶೈವಮಂತ್ರದಾ ೯೭

ಘನಪತ್ರಿಕೆಗೆಣೆವಕ್ಕುಮೆ
ಜನಮಧ್ಯದೆ ಕೂಡಿ ಗಣನೆದಾಳ್ದೊಡಮೀ ಲೇ
ಖನದತಿಶಯಮಂ ಕಾಣ್ಬೆ
ಜನಪತಿ ನೀನೆಂದು ಪೂಣ್ದುವಂಗಿತ್ತನದಂ ೯೮

ವ॥ ಅರಸನಾ ಲೇಖನದ್ವಯಮಂ ಕೆಯ್ಕೊಂಡುರಿವಗ್ನಿಯೊಳೊರ್ವೆ ತಳ್ವದಿಡಲೊಡನೆ ಜೈನಪತ್ರಂ ತನ್ಮನೋರಥದೊಡನೆ [1]ಗರಿ[1]ಗರಿಲನುರಿದು ಗಳಿಲನೆ ಭಸ್ಮಮಾದುದಲ್ಲಿ—

ಕೈಯಲ್ಲಿ ಕೊಡುವಾಗ ಎಲ್ಲರೂ ಕೇಳುವಂತೆ ಅಲ್ಲಿ. ೯೭. 'ನಾಯಿಯ ಹಲ್ಲನ್ನೂ ಬಂಗಾರವನ್ನೂ ಸರಿದೂಗಿ ನೋಡಿದರೆ, ಬಂಗಾರಕ್ಕೆ ಆ ನಾಯಿಯ ಹಲ್ಲೇನು ಸಮಾನ ವಾದೀತೇ ? ಮುತ್ತಿನೊಡನೆ, ಒಂದು ಕವಡೆಯನ್ನು ತಕ್ಕಡಿ ಪರಡಿಯಲ್ಲಿಟ್ಟು ತೂಗಿ ದರೆ ಮುತ್ತಿನ ಶ್ರೇಷ್ಠಕಾಂತಿಗೆ ಆ ಕವಡೆಯೇನು ಸಮಾನವೆನಿಸೀತೇ ? ಜೈನ ಮತದ ಪತ್ರಿಕೆಯು ಆ ಶೈವಮತದ ಪತ್ರಿಕೆಗೆ ಸಮಾನವಾದೀತೇ ? ಮಹಾರಾಜ, ಕೂಡಿದ ಗಣನೀಯ ಜನಸಮೂಹದ ಮಧ್ಯದಲ್ಲಿ ಇದರ ಘನತೆಯನ್ನು ನೀನು ನೋಡುತ್ತೀಯೆ' ಹೀಗೆಂದು ಪ್ರತಿಜ್ಞೆಮಾಡಿ ಆ ಎರಡೂ ಪತ್ರಿಕೆಗಳನ್ನು ಅವನ ಕೈಗೆ ಕೊಟ್ಟನು. ವ॥ ಅರಸನು ಆ ಎರಡೂ ಬರವಣಿಗೆಗಳುಳ್ಳ ಪತ್ರಗಳನ್ನು ಕೈಯಲ್ಲಿ ಹಿಡಿದು, ಉರಿಯು ತ್ತಿರುವ ಬೆಂಕಿಯಲ್ಲಿ ತಡಮಾಡದೆ ಇಡಲಾಗಿ ಆ ಕೂಡಲೇ ಜೈನರ ಪತ್ರವು ಆ ಬೆಂಕಿ ಯಲ್ಲಿ ಅವರ ಮನೋರಥದೊಡನೆಯೇ ಗರಿಗರಿಲೆಂದು ಉರಿದು ಆ ಕೂಡಲೇ ಭಸ್ಮ ವಾಯಿತು. ೯೮. ಮಹಾರಾಜನು ಇದು ಆಶ್ಚರ್ಯ ವೆಂದೆನ್ನುತ್ತಿರುವಂತೆ ಪ್ರಸಿದ್ಧವಾದ ಆ ಶಿವಮಂತ್ರವು ಸೂರ್ಯನಿಂದ ವಿಕಸಿತಗೊಂಡ ಕಮಲದ ಹಾಗೆ ಶೋಭಿಸಿತು. ಶೈವ ಜನರುಗಳ ಮುಖವು ವಿಕಾಸಗೊಂಡಿತು ; ಜೈನ ಮುನಿಗಳ ಸಮೂಹದ ಮುಖವು ಕೊರಗಿತು. ವ॥ ಆಗ ಅರಸನು ಶೈವರಿಗೆ ಜಯವೂ, ಜೈನರಾದ ನಿಮಗೆ ಸೋಲೂ ಆಯಿತು, ಎನ್ನಲು, ಜೈನ ಸಂನ್ಯಾಸಿಗಳು ಕೇಳಿ ರಾಜನೆದುರಿಗೆ ಬಂದು 'ಯಾವುದನ್ನೇ ಆದರೂ ಮೂರು ಮೂರು ಸಲ ಪರೀಕ್ಷಿಸಿ ನೋಡಬೇಕು. ಇನ್ನೊಂದು ಸಲ ಆ ಎರಡೂ ಪತ್ರಿಕೆಗಳನ್ನು ಹರಿಯುವ ನೀರಿನಲ್ಲಿ ಹಾಕಬೇಕು. ಯಾವ ಪತ್ರಿಕೆಯು ಪ್ರವಾಹಕ್ಕೆ ಎದುರು ಹರಿಯುವುದೋ ಅದೇ ಜಯ ಪತ್ರಿಕೆಯೆನಿಸುವುದು, ಅದರಂತೆ ಪರೀಕ್ಷಿಸಿ ನೋಡಿರಿ' ಎನ್ನಲು ಆ ಅರಸನು ತಿರುಜ್ಞಾನ ಸಂಬಂಧರ ಮುಖವನ್ನು

---

1 x (ಚ)

ಪ್ರಕಟ ಶಿವಮಂತ್ರಮದು ರವಿ
ವಿಕಸಿತಶತಪತ್ರದಂತಿರೆಸೆದುದು ಶೈವ
ಪ್ರಕರಮುಖಮಲರೆ ಜಿನಮುನಿ
ನಿಕರಮುಖಂ ಕೊರಗೆ ನೃಪತಿಯರಿದೆಂಬಿನೆಗಂ ೯೯

ವ॥ ಆಗಳರಸಂ ಶೈವರ್ಗೆ ಜಯಮುಂ ನಿಮಗೆ ಪರಾಜಯಮುಮಾದುದೆನೆ ಕೇಳ್ದು ಶವಣರಿದಿರ್ಗೆವಂದಾವುದನಾದೊಡಂ ಮಱುಂ ಸೂಳ್ಗೊಳ್ದಲ್ವೇಳ್ಕುಮಿನ್ನೊಮ್ಮೆರ್ಗೆ ಪತ್ರಿಕಾದ್ವಯಮುಂ ಪರಿವ ತೊಱೆಯೊಳಿಕ್ಕಲೊಡನಾವುದಿದಿರೇಱುಗುಮದೆ ಜಯಪತ್ರಿಕೆಯಕ್ಕುಮೆಂತೆ ನೆಗಳ್ಚಿಮೆನೆ ನರೇಂದ್ರಂ ಜ್ಞಾನಸಂಬಂಧರಾನನಮಂ ನೋಡಲೊಡನವನಿಂತೆಂದಂ—

ಇವರಂ ಸುಮ್ಮನೆ ಪೋಗಲಿತ್ತಪುದೆ ಶೈವದ್ವೇಷ ತದ್ದೂಷಣೋ
ದ್ಭವದೋಷಂ ಜಿನದೂಷ್ಯ ಜೈನರಿವರೆಂದಂತಕ್ಕೆ ಸೋಲ್ತರ್ಗೆ ಭೂ
ಧವತೀಕ್ಷ್ಣಾಗ್ರಮಹೋಗ್ರಲೋಹಮಯಶೂಲಾರೋಹಣಂ ದಂಡಮಾ
ಗೆ ವಲಂ ತೋಱುವೆನೆನ್ನ ಪೆಂಪನೆನೆ ಪಾಂಡ್ಯಂ ಕೇಳ್ದು ಜೈನರ್ಕ[ಳಂ][1] ೧೦೦

ವ॥ ನೋಡಿ ನಿಮ್ಮಭಿಪ್ರಾಯಮಂ ಬೇಗಂ ಪೇಳಿಮೆಂಬುದುಮಿವರೆಂದುದನೊಡಂಬಟ್ಟೆವೆಂದಾ ಜೈನರೆನೆ ಕುಮತಕುಜಕುಠಾರಂ ಕೇಳ್ದರಸನುಮನವರುಮನೊಡಗೊಂಡು ಸಮುತ್ಸಾಹದಿಂ ಕಾವೇರೀತಟಕೆಯ್ತಂದು ನಿಂದೆರಡುಂ ಪತ್ರಂಗಳುಂ ಪರಿವ ತತ್ಸಲಿಲದೊಳ್ಜನಪನಿಂ ಬಿಡಿಸಲೊಡನೆ ಹರಹರಧ್ವಾನದಿನುಘೇರವಂಗುಡುತ್ತೆ ಶೈವನಿಕರಂ ಸಂಭ್ರಮಿಸೆ—

ನೋಡಲಾಗಿ ಅವನು ಹೀಗೆಂದನು : ೧೦೦. 'ಈ ಜೈನರನ್ನು ಶಿವಭಕ್ತರಾದವರೊಡನೆ ಮಾಡುತ್ತಿರುವ ವೈರ ಮತ್ತು ಅವರನ್ನು ನಿಂದಿಸುವಿಕೆ ಇವುಗಳಿಂದಾದ ಪಾಪವೂ ಜಿನದೂಷಣೆಯೂ ಸುಮ್ಮನೆ ಹೋಗಗೊಟ್ಟೀತೇ ? ಮಹಾರಾಜನೇ ಸೋತವರಿಗೆ ಶೀಘ್ರವಾಗಿ ಭೇದಿಸುವ (ಚುಚ್ಚುವ) ಮೊನೆಯುಳ್ಳ ಭಯಂಕರವಾದ ಲೋಹಮಯವಾದ ಶೂಲವನ್ನೇರುವಿಕೆಯೇ ಶಿಕ್ಷೆಯಾಗುವುದು ಪಣವಾಗಲಿ. ಆಗ ನನ್ನ ಘನತೆಯನ್ನು ತೋರಿಸುತ್ತೇನೆ' ಎಂದನು. ಆ ಮಾತನ್ನು ಸೌಂದರ ಪಾಂಡ್ಯನು ಕೇಳಿ ಜೈನ ಸಂನ್ಯಾಸಿಗಳನ್ನು. ವ॥ ನೋಡುತ್ತ ('ಎಲೈ ಸಂನ್ಯಾಸಿಗಳೇ ಜ್ಞಾನಸಂಬಂಧರು ಆಡಿದ ಮಾತುಗಳಿಗೆ) ನಿಮ್ಮ ಅಭಿಪ್ರಾಯವನ್ನು ಬೇಗನೆ ಹೇಳಿರಿ,' ಎಂದನು. 'ಇವರು ಹೇಳಿದುದನ್ನು ನಾವು ಒಪ್ಪಿಕೊಂಡಿದ್ದೇವೆ.' ಎಂದು ಆ ಜೈನರು ಅನ್ನಲು–ದುಷ್ಟಮತಗಳೆಂಬ ಗಿಡಗಳಿಗೆ ಕೊಡಲಿಯಂತಿರುವ ತಿರುಜ್ಞಾನಸಂಬಂಧರು ಕೇಳಿ, ಅರಸನನ್ನೂ, ಆ ಜೈನಸನ್ಯಾಸಿಗಳನ್ನೂ ಸಂಗಡ ಕರೆದುಕೊಂಡು ಅತ್ಯುತ್ಸಾಹದಿಂದ ಕಾವೇರೀ ನದಿಯ ದಂಡೆಗೆ ಬಂದು ನಿಂತುಕೊಂಡು, ಆ ಎರಡೂ ಪತ್ರಿಕೆಗಳನ್ನು ಆ ಸೌಂದರ ಪಾಂಡ್ಯ ರಾಜನ ಕೈಯಿಂದ ನೀರಿನಲ್ಲಿ ಹಾಕಿಸಿದರು. ಆ ಕೂಡಲೇ 'ಹರಹರ' ಎಂಬ ಧ್ವನಿಮಾಡಿ ಉಘೇ ! ಉಘೇ ! ಎಂದು ಕೂಗುತ್ತ

1 ಳಾ(ಅ, ಗ, ಚ, ಜ, ದ, ಮ)

ನದಿಗಿದಿರೇಱಿದುದಘಹರ
ಪದಪತ್ರಂ ಜೈನಪತ್ರವೞದು ಕೀಳ್ಗಡೆಗೋ
ಡಿದುದದನೀಕ್ಷಿಸಿ ನೃಪನು
ರ್ಕಿದ ಜೈನರ ಸುಭಟರಿಂದೆ ಪಿಡಿತರಿಸುತ್ತುಂ ೧೦೧

ಶರಣೆಂದ ಶೈವಲಾಂಛನ
ಧರರಂ ಬಿಟ್ಟುಳಿದ ಸಮದ ಜೈನರನರಸಂ
ಶರಣ ಕುಲಚ್ಚೞಿಯರ್ಸಮೆ
ದಿರಿಸಿದ ಶೂಲಂಗಳಲ್ಲಿ ಕೆಡಪಿದನಾಗಳ್ ೧೦೨

ವ|| ಆಗಳಿಂತು ಶಿವದ್ರೋಹಿಗಳುಮನೆಲ್ಲರುಮಂ ಪೂಣ್ದಂತೆ ಶೂಲಾರೋಹಣಂಗೆಯ್ಸಿ ಜಸಂಬೆತ್ತು—

ಸ್ಫುರದ್ದೀಕ್ಷೆಯಂ ಭೂಭುಜಂಗಿತ್ತು ನಣ್ಪಿಂ
ಪುರದ್ವಿಟ್ಸದಾಚಾರದೊಳ್ನೇಮಿಸುತ್ತುಂ
ಪರಪ್ರೌಢವಾದಂಗಳಂ ಗೆಲ್ವುತೊಳ್ಪಿಂ
ತಿರುಜ್ಞಾನಸಂಬಂಧ ಯೋಗೀಶನಿರ್ದಂ ೧೦೩

ವ|| ಇರ್ಪಿನಮಿತ್ತಲ್—

ಶೈವ ಭಕ್ತ ಸಮೂಹವು ಸಂಭ್ರಮ ಗೊಳ್ಳುತ್ತಿದ್ದ ಹಾಗೆಯೇ ೧೦೧-೧೦೨. ಪಾಪನಾಶಕನಾದ ಶಿವನ ಗುರುತಿನ ಪತ್ರವು ನದಿಗೆ ಇದಿರು ಏರಿತು ; ಜೈನರ ಗುರುತಿನ ಪತ್ರವು ಕೆಳಭಾಗಕ್ಕೆ (ಪ್ರವಾಹದೊಡನೆ) ಹರಿದು ಹೋಯಿತು. ಅದನ್ನು ಕಂಡ ಅರಸನು ಗರ್ವದಿಂದ ಕೂಡಿದ್ದ ಜೈನರನ್ನೆಲ್ಲ ರಾಜ ಭಟರಿಂದ ಹಿಡಿತರಿಸಿದನು. 'ಶರಣು' ಎನ್ನುತ್ತ ಶಿವಲಾಂಛನ ಧರಿಸಿದವರನ್ನು ಬಿಟ್ಟು, ಉಳಿದಂಥ ಮದಮತ್ತರಾದ ಜೈನರನ್ನು ಸೌಂದರ ಪಾಂಡ್ಯನು ಕುಲಚ್ಚರಿಯರು ಮಾಡಿನಿಲ್ಲಿಸಿದ್ದ ಶೂಲಗಳಿಗೆ ಏರಿಸಿದನು. ವ|| ಆಗ ಜ್ಞಾನಸಂಬಂಧರು ಶಿವದ್ರೋಹಿಗಳೆನಿಸಿದ ಎಲ್ಲರನ್ನೂ ಈರೀತಿ ಪ್ರತಿಜ್ಞೆಮಾಡಿದ ಹಾಗೆ ಶೂಲವನ್ನು ಹತ್ತಿಸಿ, ಯಶಸ್ಸನ್ನು ಪಡೆದು ೧೦೩. ಆ ಸೌಂದರ ಪಾಂಡ್ಯರಾಜನಿಗೆ ಪ್ರಕಾಶಮಾನವಾದ ಶೈವ ಸಂಬಂಧವಾದ ದೀಕ್ಷೆಯನ್ನು ಕೊಟ್ಟು, ತ್ರಿಪುರ ವೈರಿಯಾದ ಪರಮೇಶ್ವರನ ಸಂಬಂಧದ ಶ್ರೇಷ್ಠ ಆಚಾರದಲ್ಲಿ ನೇಮಿಸುತ್ತ ಶ್ರೇಷ್ಠವಾದ ಪ್ರೌಢವಾದಗಳಲ್ಲಿ ಗೆಲುವನ್ನು ಸಂಪಾದಿಸುತ್ತ ಸಂತೋಷದಿಂದ ತಿರುಜ್ಞಾನಸಂಬಂಧ ಯೋಗೀಶ್ವರನು ಇದ್ದನು. ವ|| ಹೀಗೆ ಇರುತ್ತಿರುವಲ್ಲಿ ಇತ್ತ

ವೀರವ್ರತನಿಷ್ಠಂ ನಿಡು
ಮಾರನೆನಿಪ್ಪೊರ್ವನಭವಪದಭಕ್ತನಿಳಾ
ಸೂರಿಜನವಿನುತಕೀರ್ತಿ ಮ
ಹೀರಮಣಂ ರಂಜಿಸಿರ್ದನತಿವೈಭವದಿಂ ೧೦೪

ವ॥ ಆ ಮಹೀರಮಣಂ ತನ್ನ ದೇಶಮೆಲ್ಲಂ ಜೈನಮಯಮಾಗೆ ಮರ್ದಿಂಗೊರ್ವ ಭಕ್ತರಿಲ್ಲದುದಂ ಕಂಡೆಂದಿಂಗೆನ್ನ ರಾಜ್ಯಮೆಲ್ಲಂ ಪೂಜ್ಯಮೆನೆ ಶಿವಭಕ್ತಮಯಮಕ್ಕುಮೆಂದು ಚಿಂತೆಗೆಯ್ಯುತ್ತುಮಿರ್ಪಿನಮಲ್ಲಿಗೆ—

ಪದೆದೆಯ್ತಂದೊರ್ವನಾಗಳ್ ಶಿವಪದಭಜಕಂ ಪಾಂಡ್ಯದೇಶೀಯ ಜೈನೌ
ಘದ ಸೊರ್ಕಂ ವಾದದೊಳ್ಮಿಗ್ಗಿಸಿ ಮದಯುತರಂ ಶೂಲದೊಳ್ಕೊಂದು ಶೈವಾ
ಭ್ಯುದಿತಶ್ರೀದೀಕ್ಷೆಯಂ ಭೂಪತಿಗೆ ನೆಗಳ್ದು ಪಂಚಾಬ್ದದೊಳ್ಪೆರ್ಮೆವೆತ್ತ
ಗ್ಗದ ಸಮ್ಯಜ್ಞಾನಸಂಬಂಧರ ಜಸದಿರವಂ ಪೇಳೆ ಕೇಳ್ದಾ ಮಹೇಶಂ ೧೦೫

ಮುದಮಂ ತಾಳ್ದಮರಿರ್ದ ತಾಣಕೊಲವಿಂ ತಾನೆಯ್ದಿ ಕಂಡಲ್ಲಿ ತ
ತ್ಪದಮಂ ಪೂಜಿಸಿ ಭಕ್ತಿಯಿಂ ನಮಿಸಿ ಕೊಂಡಾಡುತ್ತೆ ತನ್ನೂರ್ಗೆ ಪೆ
ರ್ಚಿದ ಸದ್ವೈಭವದಿಂ ಕಡಂಗಿ ಬಿಜಯಂಗೆಯ್ಯುತ್ತೆ ತನ್ನಿಷ್ಟಸಂ
ಪದಮೆಯ್ತಂದುದೆನುತ್ತೆ ಕುಳ್ಳಿರಿಸುತುಂ ಭದ್ರಾಸನಸ್ಥಾನದೊಳ್ ೧೦೬

**ನಿಡುಮಾರನ ಕಥೆ** ೧೦೪. ವೀರಶೈವ ವ್ರತದಲ್ಲಿ ನಿಷ್ಠೆಯುಳ್ಳವನೂ, ಪರಮೇಶ್ವರನ ಪಾದಗಳಲ್ಲಿಟ್ಟ ಭಕ್ತಿಯುಳ್ಳವನೂ. ಲೋಕದ ವಿದ್ವಾಂಸರಾದವರ ಹೊಗಳಿಕೆಗೆ ಪಾತ್ರನಾದ ಕೀರ್ತಿಯುಳ್ಳವನೂ, ಆದ ನಿಡುಮಾರನೆಂಬ ಹೆಸರಿನ ರಾಜನು ಅತ್ಯಂತ ವೈಭವದಿಂದ ರಂಜಿಸುತ್ತಿದ್ದನು. ವ॥ ಆ ರಾಜನು ತನ್ನ ದೇಶವೆಲ್ಲವೂ ಜೈನರಿಂದ ತುಂಬಿಹೋಗಿ, ಔಷಧಕ್ಕೆ ಬೇಕೆಂದರೆ ಒಬ್ಬ ಶೈವನೂ ಇಲ್ಲದಿದ್ದುದನ್ನು ಕಂಡು, 'ಎಂದಿಗೆ ನನ್ನ ರಾಜ್ಯವೆಲ್ಲ ಪೂಜ್ಯವಾದದ್ದು ಎನ್ನುವಂತೆ ಶಿವಭಕ್ತರಿಂದ ತುಂಬಿಹೋದೀತು ?' ಎಂದು ಚಿಂತೆಗೊಳಗಾಗಿ ಇರುತ್ತಿರಲು ಅಲ್ಲಿಗೆ ೧೦೫–೧೦೬. ಓರ್ವ ಶಿವಪಾದ ಪೂಜಕನೆನಿಸಿದ ಮಾಹೇಶ್ವರನು ಆ ರಾಜನ ಹತ್ತಿರ ಪ್ರೀತಿಯಿಂದ ಬಂದು, ಸುಂದರಪಾಂಡ್ಯನ ರಾಜ್ಯದಲ್ಲಿದ್ದ ಜೈನಸಮೂಹದ ಸೊಕ್ಕನ್ನುವಾದದಲ್ಲಿ ಮುರಿದುಹಾಕಿ, ಮದೋನ್ಮತ್ತರಾದವರನ್ನು ಶೂಲಕ್ಕೇರಿಸಿ ಕೊಂದು, ಶೈವಧರ್ಮದ ಅಭ್ಯುದಯಕಾರಕವಾದ ಮಂಗಳಕರ ದೀಕ್ಷೆಯನ್ನು ಆ ರಾಜನಿಗೆ ಮಾಡಿ, ಐದೇವರ್ಷಗಳಲ್ಲಿ ಹಿರಿಮೆಗೊಂಡ ಶ್ರೇಷ್ಠವಾದ ಯಶಸ್ಸಿನಿಂದ ಮೆರೆಯುತ್ತಿರುವ ತಿರುಜ್ಞಾನಸಂಬಂಧರ ರೀತಿಯನ್ನು ಹೇಳಿದನು. ಅದನ್ನು ಕೇಳಿದ ಆ ಮಾಹೇಶ್ವರನೆನಿಸಿದ ರಾಜನು, ಸಂತೋಷಗೊಂಡವನಾಗಿ, ಆ ತಿರುಜ್ಞಾನ ಸಂಬಂಧರಿರುವ ಸ್ಥಾನಕ್ಕೆ ತಾನೇ ಪ್ರೀತಿಯಿಂದ ಹೋಗಿ, ಅವರನ್ನು ಕಂಡು. ಅವರ ಪಾದಗಳನ್ನು ಪೂಜಿಸಿ, ಭಕ್ತಿಯಿಂದ ನಮಸ್ಕಾರಮಾಡಿ ಕೊಂಡನು. ತನ್ನ ಇಷ್ಟಾರ್ಥವಾದ ಸಂಪತ್ತೇ (ತನ್ನಲ್ಲಿಗೆ) ಬಂದಂತಾಯಿತೆಂದು ತಿಳಿದುಕೊಂಡು ಅವರನ್ನು

ಬರಿಸಿದನಲ್ಲಿಗಾ ಜನಪದಸ್ಥಿತ ಜೈನಗುರು ಪ್ರತಾನಮುಂ
ನರಪತಿ ಪೇಳ್ದನೀಶ್ವರ ಕುಮಾರನ ಜೈನಜಯಪ್ರಸಂಗಮುಂ
ಪರಶಿವ ಸನ್ಮಹತ್ವಮನೆ ಬೋಧಿಸಿ ಶೈವಮತಸ್ಥರಾಗೆ ನೀ
ಮೆರೆದುದನೀವೆನಲ್ಲದೊಡೆ ಶೂಲದೊಳಿಕ್ಕುವೆನೆಂದನಾರ್ಪಿನಿಂ ೧೦೭

ವ॥ ಎಂದಾಗ್ರಹಿಸಿ ನರಪಶುವಂ ದೇವನೆಂದು ಭಜಿಯಿಪುದಂ ಬಿಡಿಸಿ ಪಶುಪತಿಯುಂ ಶರಣ್ಬುಗಿಸಿ ಶವಣಗುರುಗಳಂ ಶಿವಭಕ್ತರಂ ಮಾಡಿ ಕೇಳದ ಮದಾಂಧರಂ ತಲೆಕೆಳಗಾಗೆ ನಿಶಿತಶೂಲಾಗ್ರದೊಳಿಕ್ಕಿ ಕಳೆದು—

ನಿಜದೇಶಮೆಲ್ಲಮುಂ ಶಿವ
ಭಜನಾನ್ವಿತಮಯಮನೆಸಗಿ ಮೆಱೆಯನೆ ಧಾತ್ರೀ
ಭುಜಪತಿ ನಿಡುಮಾರಂ ಕೇ
ಳ್ವೃಜಿನಾತ್ಮಕ ಪೇಳ್ವೆನಿನ್ನುಮೆಸುತಿಂತೆಂದು ೧೦೮

ವ॥ ನೆಗಳ್ತೆವೆತ್ತ ತಿಗುಳ್ನಾಡೊಳ್ಚಿಲ್ಲತಿರುವದೂರೆಂಬ ಪೊಳಲೊಳಗೆ—

ನಮಿನಂದಿಯೆಂಬ ಭಕ್ತಂ
ವಿಮಳಾಜ್ಯ ಸಹಸ್ರದೀಪಮುಂ ಬೆಳಗುವ ನೇ
ಮಮನಾಳ್ದು ನಿಚ್ಚಮುಂ ಸಂ
ಭ್ರಮದಿಂದಂತಂತೆ ಬೆಳಗುತುಂ ಶಿವಗೃಹದೊಳ್ ೧೦೯

ಭದ್ರಾಸನದಲ್ಲಿ ಕುಳ್ಳಿರಿಸಿದನು. ೧೦೭. (ಆಗ) ಅಲ್ಲಿಗೆ ಆ ತನ್ನರಾಜ್ಯದಲ್ಲಿರುವ ಸಮಸ್ತ ಜೈನಗುರುಗಳ ಸಮೂಹವನ್ನೆಲ್ಲ ನಿಡುಮಾರನೃಪತಿಯು ಬರಮಾಡಿಕೊಂಡನು, ಅವರಿಗೆ (ಆಗಮಿಸಿರುವ) ಈಶ್ವರ ಕುಮಾರನೆನಿಸಿದ ತಿರುಜ್ಞಾನಸಂಬಂಧರು ಜೈನರನ್ನು ಜಯಿಸಿದ ಕಥೆಯನ್ನೆಲ್ಲ ಹೇಳಿದರು. ಅವರಿಗೆ ಪರಶಿವನ ಸತ್ವಪೂರ್ಣವಾದ ಮಹತ್ವವನ್ನು ಬೋಧಿಸಿ, ನೀವೆಲ್ಲ ಶೈವಮತಸ್ಥರಾದರೆ, ನೀವು ಬೇಡಿದ್ದನ್ನುಕೊಡುತ್ತೇನೆ. ಅಲ್ಲದಿದ್ದರೆ ಶೂಲಕ್ಕೇರಿಸಿ ಬಿಡುತ್ತೇನೆಂದು ಸಾಮರ್ಥ್ಯಪೂರ್ಣವಾಗಿ ತಿಳಿಸಿದನು. ವ॥ ಹೀಗೆಂದು ನಿಡುಮಾರರಾಜನು ಆಗ್ರಹಪೂರ್ವಕವಾಗಿ ನರಪಶುಗಳನ್ನುದೇವರೆಂದು ಭಜಿಸುವ ಭಜನೆಯನ್ನು ಬಿಡಿಸಿ, ಪರಮೇಶ್ವರನಲ್ಲಿ ಶರಣಾಗತರನ್ನಾಗಿ ಮಾಡಿ ಜೈನ ಸಂನ್ಯಾಸಿ ಗಳನ್ನೆಲ್ಲ ಶಿವಭಕ್ತರನ್ನಾಗಿಮಾಡಿದನು. (ತನ್ನಮಾತನ್ನು ಕೇಳದ ಮದಾಂಧರನ್ನು, ತಲೆಕೆಳಗಾಗುವಂತೆ ತೀಕ್ಷ್ಣವಾದ ಶೂಲಕ್ಕೇರಿಸಿ ನಾಶಗೊಳಿಸಿದನು.—೧೦೮. ಹೀಗೆ ತನ್ನ ಸಮಸ್ತರಾಜ್ಯವನ್ನೂ ಶಿವಭಜನೆಯ ಮಯವೇ ಆಗಿಬಿಡುವಂತೆ ಆ ಧಾತ್ರೀಶ್ವರನಾದ ನಿಡುಮಾರನು ಮೆರೆಯಲಿಲ್ಲವೇ ? ಪಾಪಸಮೂಹವುಳ್ಳವನೇ, ಇನ್ನೂಕೇಳು : ಹೇಳುತ್ತೇನೆ ಎಂದು (ಆ ಏಕಾಂತರಾಮಯ್ಯನು ಹೀಗೆ ಹೇಳಿದನು. **ನಮಿನಂದಿಯ ಕಥೆ** ವ॥ ಖ್ಯಾತಿವೆತ್ತ ತಿಗುಳದೇಶವಲ್ಲಿ 'ಚಿಲ್ಲತಿರುವದೂರು' ಎಂಬ ಪಟ್ಟಣದಲ್ಲಿ ೧೦೯-೧೧೦. ನಮಿನಂದಿಯೆಂಬ ಭಕ್ತನಿದ್ದನು. ಅವನು ದಿನಾಲು ಸಹಸ್ರ ಸಂಖ್ಯೆಯ ಶ್ರೇಷ್ಠವಾದ ತುಪ್ಪದ ದೀಪವನ್ನು ಶಿವಾಲಯದಲ್ಲಿ ಬೆಳಗುವ ನೇಮವನ್ನು ಆಚರಿಸುತ್ತಿದ್ದು

ಧನವೆಲ್ಲಂ ಸವೆಯೆ ಶಿವಾ
ರ್ಚನೆಗಾ ಪೊಳಲಲ್ಲಿ ಘೃತದ ಭಿಕ್ಷೆಯನೆರೆವು
ತ್ತನುದಿನಮಾರ್ಜಿಸಿದಾಜ್ಯದಿ
ನನಘಂ ಬೆಳಗುತ್ತೆ ದೀಪಮಂ ಮೃಡನಿದಿರೊಳ್ ೧೧೦

ಘನಭಕ್ತಂ ಮಾಣದಿಂತೊಪ್ಪಿರೆ ಪೊಳಲ ಶಿವದ್ರೋಹಿಗಳ್ಕಾಣದಾ ಭ
ಕ್ತನ ಕೃತ್ಯಂಗಂಡಿವಂ ಮತ್ಪುರದೊಳಿರಲದೇಂ ತಕ್ಕನೇ ಶೈವನೀತಂ
ಗಿನಿತುಂ ಗೇಹಂಗಳೊಳ್ಗೋಘೃತಮನೆ[ಱೆ][1]ಯದಂತಾಜ್ಞೆಯಂ ಮಾಡೆ ತಾನೇ
ಮುನಿದಿಲ್ಲಿಂ ಪೋಪನೆಂದಂತೆಸಗೆ ಘೃತದ ಭಿಕ್ಷಾಟನಂ ಗೆಯ್ದು ಭಕ್ತಂ ೧೧೧

ಪಡೆಯದಾಜ್ಯಮನಾ ಪುರಾಂತರದೊಳ್ವಿಷಾದದಿನೆಯ್ದಿ ತ
ನ್ಮೃಡನ ಮಂದಿರಕೆಯ್ದೆ ನಂದುವ ದೀಪಮಂ ನಡೆನೋಡಿ ನಿಂ
ದುಡುಗದಾತ್ಮಶಿರಕ್ಕೆ ಖಡ್ಗಮನಿಕ್ಕಿ ಗೋಣ್ಗೊಱೆವಾಗಳಾ
ಕಡುಗಮಂ ಕಡೆನೂಂಕಿ ಶಂಕರನೊಲ್ದು ನೋಡಿ ಕೃಪಾಕರಂ ೧೧೨

ಪದಪಿಂದಂ ವೀರಸೋಮಾಂಬಿಕೆ ಜಳಮಱೆದೋರಂದದಿಂ ದೀಪಮಂ ಲಿಂ
ಗದ ಮುಂದುದೆತ್ತಿದಂತೀ ತಿಳಿಗೊಳದ ಜಳಂಗೊಂಡು ತತ್ಪಾತ್ರೆಯೊಳ್ಕಾ
ಣದೆ ನೀಂ ನೀರ್ದೀವಿ ದೀಪಂಗಳನೆ ಬೆಳಗಿದೇ ನೇಮಮೆನ್ನಗ್ರದೊಳ್ ಜೈ
ನ ದುರಾತ್ಮರ್ತತ್ಪುರೀಗೋಕುಲಜನಮಳಿಗುಂ ನಾಳೆ ಕೇಳ್ಭಕ್ತವರ್ಯಾ ೧೧೩

ಸಂಭ್ರಮಗೊಂಡು ಹಾಗೆಮಾಡುತ್ತಿರಲು(ತನ್ನಲ್ಲಿದ್ದ) ಹಣವೆಲ್ಲ ವೆಚ್ಚವಾಗಿ ಹೋಯಿತು. (ತಾನುಮಾಡುತ್ತಿದ್ದ) ಶಿವನ ಅರ್ಚನೆಗೆ ಪಟ್ಟಣದಲ್ಲಿ ತುಪ್ಪದ ಭಿಕ್ಷೆಯನ್ನು ಬೇಡುತ್ತ, ದಿನದಿನವೂ ಸಂಪಾದಿಸಿದ ತುಪ್ಪದಿಂದ ಪಾಪದೂರನಾದ ಆ ನಮಿನಂದಿಯು ಈಶ್ವರನೆದುರಿನಲ್ಲಿ ದೀಪವನ್ನು ಬೆಳಗತೊಡಗಿದನು. ೧೧೧-೧೧೨. ತಪ್ಪದೆ ಶ್ರೇಷ್ಠ ಭಕ್ತನಾದ ಅವನು ಹೀಗೆ ತನ್ನ ಭಕ್ತಿಯನ್ನು ಅರ್ಪಿಸುತ್ತ ಶೋಭಿಸುತ್ತಿದ್ದನು. ಆ ಪಟ್ಟಣದಲ್ಲಿದ್ದ ಶಿವ ದ್ರೋಹಿಗಳು ಆ ಭಕ್ತನ ಕೃತ್ಯವನ್ನು ಕಂಡು, ಸೈರಿಸಲಾರದೆ, ಇವನು ನಮ್ಮ ಪಟ್ಟಣದಲ್ಲಿರಲು ಯೋಗ್ಯನಾದವನೇ ? ಶೈವನಾದ ಈತನಿಗೆ ಈ ನಮ್ಮೂರಿನ ಮನೆಗಳಲ್ಲಿ ಸ್ವಲ್ಪವೂ ತುಪ್ಪ ಸಿಗದಂತೆ ಕಟ್ಟಪ್ಪಣೆ ಮಾಡಿದರೆ ಕೋಪಗೊಂಡು ತಾನಾಗಿಯೇ ಈ ಪಟ್ಟಣವನ್ನು ಬಿಟ್ಟು ಹೋಗುತ್ತಾನೆಂದು ಹಾಗೆಯೇ ಮಾಡಿದರು. (ಆಗ) ತುಪ್ಪದ ಭಿಕ್ಷೆಯನ್ನು ಮಾಡಿ ಅದನ್ನು ಪಡೆಯಲು ಶಕ್ಯವಿಲ್ಲದಾಗಲು ವಿಷಾದಗೊಂಡು ಊರಹೊರಗಿರುವ ಆ ಶಿವಮಂದಿರಕ್ಕೆ ಹೋಗಿನೋಡಲಾಗಿ ದೀಪವುನಂದುವುದರಲ್ಲಿದ್ದುದನ್ನು ಕಂಡು ಸ್ವಲ್ಪವೂ ಹಿಂದೆಮುಂದೆ ನೋಡದೆ (ಕುಗ್ಗದೆ), ತನ್ನತಲೆಗೆ ಖಡ್ಗವನ್ನು ಇಕ್ಕಿ ಗೋಣನ್ನು ಕತ್ತರಿಸಿ ಕೊಳ್ಳುತ್ತಿರುವಾಗ ಕೃಪಾಕರನಾದ ಶಂಕರನು ಒಲಿದು ಪ್ರತ್ಯಕ್ಷನಾಗಿ ಆ ಖಡ್ಗವನ್ನು ತಳ್ಳಿಹಾಕಿ ಅವನನ್ನು ನೋಡುತ್ತ, 'ಎಲೈಭಕ್ತಶ್ರೇಷ್ಠನೇ' ಈ ಪೂರ್ವದಲ್ಲಿ ವೀರಸೋಮಾಂಬಿಕೆಯೆಂಬುವವಳು ಪ್ರೀತಿಯಿಂದ ನೀರನ್ನೇಎರೆದು, ಮನೋಹರವಾಗಿ ಲಿಂಗದ ಮುಂದೆ ದೀಪನ್ನು ಎತ್ತಿಬೆಳಗಿದಹಾಗೆ, ನೀನು ಈ ತಿಳಿನೀರಿನ

---

1 ರೆ(ಅ, ಗ, ಚ, ಜ, ದ, ಮ)

ವ॥ ಎಂದೀಶಂ ಬೆಸಸೆ ಮಹಾಪ್ರಸಾದಮೆಂದಾ ಪರಿಯಿಂ ತೀರ್ಥಜಲಮನೆಱೆದು ದೀಪಂಗಳಂ ಬೆಳಗುತ್ತುಮಿರ್ದಂ ಪೊಳಲೊಳ್ಘೃತಭಿಕ್ಷೆಗೊಡದರ ಗೃಹಂಗಳೊಳಂ ಪಿಶುನ ಶವಣ ಭವನಂಗಳೊಳಮಿರ್ದಿರ್ದಂತೆ ಖಲಪ್ರಸರಮುಂ ಪಶುವಿಸರಮುಂ ಮಡಿಯೆ ಜೈನರ್ಕೆಲಂಬರ್ತಮ್ಮೊಳಿದೇನೆಂದು ಭಯಂ ಬಡೆದನುವಿಸಿ—

ಜಿನಧರ್ಮದೊಳೊಂದುಂ ಕೊಱ
ತೆ ನಾಂಟದೆಮ್ಮಿಂದೆ ಜೀವತತಿ ನೊಂದುದುಮಿ
ಲ್ಲಿನಿತುಂ ಪುಸಿ ಪೊರ್ದದು ಕೆ
ಮ್ಮನಿದೇಂ ಕಾರಣಮೊ ಮಿಳ್ತು ಪೊಕ್ಕುದು ಪೊಳಲಂ ೧೧೪

ವ॥ ಎಂದು ದೋಷಾವಿಲರ್ತಮ್ಮಂ ದೋಷರಹಿತರಂ ಬಗೆದು ನುಡಿವಿನಮಲ್ಲಿಕೆಲಂಬರ್—

ಶೈವಭಕ್ತಗಾಜ್ಯಭಿಕ್ಷೆ ಪುಟ್ಟದಂತೆ ಮಾಡೆ ನೀ
ಮೀ ವಿಪತ್ತಿ ಬಂದುದಾತನಿಂದೆ ನನ್ನಿಯೆಂದೊಡಾ
ಶ್ರಾವಕರ್ಕಳಳ್ಕಿ ಸತ್ಯಮಿಂತಿದೆಂದು ಬಂದು ದಂ
ತಾವಳಾಜಿನಾಂಬರಾಲಯಕ್ಕೆ ಕಂಡರಾತನಂ ೧೧೫

ಕೊಳದೊಳಗಿನ ನೀರನ್ನೇ (ಪಣತಿಗಳಿಗೆ) ತಪ್ಪದೆ ತುಂಬಿ ದೀಪಗಳನ್ನು ನನ್ನಮುಂದೆ ಬೆಳಗಿಸು, ಇದೇ ನಿನ್ನ ನೇಮವಾಗಲಿ. ನಾಳೆಯದಿನವೇ ಆ ಪಟ್ಟಣದಲ್ಲಿರುವ (ತುಪ್ಪವನ್ನು ನೀಡದಿರುವ) ಗೋವುಗಳನ್ನು ಸಾಕುವವರ ಸಮೂಹವೆಲ್ಲ ಸತ್ತುಹೋಗುವುದು. ವ॥ ಎಂದು ಈಶ್ವರನು ಅಪ್ಪಣೆಮಾಡಿದನು, ಆಗ ಆ ನಮಿನಂದಿಯು ಮಹಾಪ್ರಸಾದವೆಂದು ಶಂಕರನು ಹೇಳಿದ ರೀತಿಯಲ್ಲಿಯೇ ತೀರ್ಥಜಲವನ್ನು ಹೊಯ್ದು ದೀಪಗಳನ್ನು ಬೆಳಗಿಸುತ್ತಿದ್ದನು. ಆ ಪಟ್ಟಣದಲ್ಲಿ ತುಪ್ಪದ ಭಿಕ್ಷೆಯನ್ನು ಕೊಡದೆ ಇರುವವರ ಮನೆಗಳಲ್ಲಿಯೂ, ಚಾಡಿಕೋರರಾದ ಜೈನರುಗಳ ಮನೆಗಳಲ್ಲಿಯೂ ಇದ್ದಕ್ಕಿದ್ದಂತೆ ದುಷ್ಟರುಗಳೂ, ಗೋವುಗಳಸಮೂಹವೂ ಸಾಯತೊಡಗಲು, ಕೆಲವು ಜೈನರು ತಮ್ಮತಮ್ಮಲ್ಲಿ ಇದೇನೆಂದು (ಇದೇನು ಪ್ರಮಾದವೆಂದು) ಭಯಗೊಂಡವರಾಗಿ ಊಹೆಮಾಡುತ್ತ ೧೧೪. ಜೈನಧರ್ಮದಲ್ಲಿ ಯಾವ ಒಂದು ಕೊರತೆಯು ಉಂಟಾಗಿಲ್ಲ; ನಮ್ಮಿಂದ ಜೀವಿಗಳ ಸಮೂಹವು ನೋವುಗೊಳ್ಳಲಿಲ್ಲ ; ಸ್ವಲ್ಪವೂ ಸುಳ್ಳುವ್ಯವಹಾರನಡೆಯಲಿಲ್ಲ ; ಸುಮ್ಮಸುಮ್ಮನೇ ನಮ್ಮ ಪಟ್ಟಣವನ್ನು ಯಾವಕಾರಣದಿಂದ ಮೃತ್ಯುವು ಪ್ರವೇಶಿಸಿತೊ ವ॥ ಹೀಗೆಂದು ದೋಷವಿಶಿಷ್ಟರಾದ ಅವರು ತಮ್ಮನ್ನು ದೋಷರಹಿತರೆಂದು ಭಾವಿಸಿಕೊಂಡು, ನುಡಿಯುತ್ತಿರಲು ಅಲ್ಲಿ ಕೆಲವರು ೧೧೫. ನೀವು ಶೈವಭಕ್ತನಿಗೆ ತುಪ್ಪದ ಭಿಕ್ಷೆಯು ಹುಟ್ಟದಹಾಗೆ ಮಾಡಲಾಗಿ ಆತನಿಂದ ಈ ವಿಪತ್ತು ನಿಮಗೆ ಉಂಟಾಯಿತು, ಇದು ಸತ್ಯವಿಷಯ, ಎಂದೆನ್ನಲು ಆ ಜೈನಶ್ರಾವಕರುಗಳು ಹೆದರಿ, ಇದು ಸತ್ಯಸಂಗತಿಯೆಂದುಕೊಂಡು ಗಜಚರ್ಮಧರ (ದಂತಾವಳಾಜಿನಾಂಬರ) ನಾದ ಶಿವನ ಮಂದಿರಕ್ಕೆ

ವ॥ ಅಂತು [1]ಕಂಡು[1] ನೀರೆಱೆದು ದೀಪಮನವಂ ಬೆಳಗುವಳವಂ ನೋಡಿ ಮಹಾತ್ಮನಕ್ಕು ಮೆಂದು ಮೆಯ್ಯಿಕ್ಕಿ ಜಿನಮುನಿಗಳ್ಕೆಯ್ಯಂ ಮುಗಿದು—

ಸಾವಂ ಮಾಂಜಿಸು ಜೀವರ
ನೋವಂ ಪರಿಹರಿಸು ಮಡಿದ ಪಶುಗಳ್ಗಸುವಿ
ತ್ತೋವೆಮ್ಮೊಳೊಗೆದ ತಪ್ಪಂ
ಭಾವಿಸದಿರ್ ನಿನ್ನ ಗುಣವ ಮೆಱೆ ಕರುಣಾಬ್ಧೀ ೧೧೬

ವ॥ ಎಂದು ಬಾಯ್ವಿಟ್ಟು ಶರಣ್ಬುಗೆ ಶವಣರ್ಗುಪದೇಶಮಿತ್ತು ಭಕ್ತರಂ ಮಾಡಿ—

ಮಡಿದ ಪಶುಗಳ್ಗೆ ಪೊಳಲೊ
ಳ್ಕೆಡೆದಳಿದರ್ಗಸುವನಿತ್ತು ನಮಿನಂದಿ ಮುದಂ
ಬಡಿಸಿ ಜನಮಱಿಯೆ ಪೊರೆಯನೆ
ಕಡುಪಿಂದಲೆ ಜೈನ ಕೇಳ್ವುದಿನ್ನುಂ ಧರೆಯೊಳ್ ೧೧೭

ಸುಲಲಿತ ಚೋಳಮಂಡಲಕೆ ಮಂಡನಮೆಂದೆನಿಸಿರ್ದ ಶಾಂತಮಂ
ಡಲಮೆನೆ ತೋರ್ಪ ಪಟ್ಟಣದೊಳೊಪ್ಪುವ ಬೌದ್ಧನ ಪುತ್ರನಾಗಿ ನಿ
ಶ್ಚಲಮತಿ ಸಾಂಖ್ಯತೊಂಡಪೆಸರಾಂತೆಸೆದಿರ್ದು ಮಹಾತ್ಮನೊರ್ವನ
ಸ್ಖಲಿತ ಶಿವೈಕಭಕ್ತಿ ತಲೆದೋಱೆ ಪುರಾತನ ಪುಣ್ಯದೇಳ್ಗೆಯುಂ ೧೧೮

ಬಂದು ಆ ನಮಿನಂದಿಯೆಂಬ ಭಕ್ತನನ್ನು ಕಂಡರು. ವ॥ ಈ ರೀತಿ ಅವನನ್ನುಕಂಡು, ಅವನು ನೀರೆರೆದು ದೀಪವನ್ನು ಬೆಳಗಿಸುವ ಸಾಮರ್ಥ್ಯವನ್ನು ನೋಡಿ, ಇವನು ಮಹಾತ್ಮನಾಗಿದ್ದಾನೆ. ಎಂದುಕೊಳ್ಳುತ್ತ ಆ ಜೈನಮುನಿಗಳು ನಮಸ್ಕಾರ ಮಾಡಿ ಕೈ ಜೋಡಿಸಿ ನಿಂತು ೧೧೬. ಹೇ ಕರುಣಾಸಮುದ್ರನೇ, ನಮ್ಮ ಊರಿನ ಜನಗಳ ಸಾವನ್ನು ಹೋಗಲಾಡಿಸು, ಜೀವಿಗಳ ನೋವನ್ನು ಪರಿಹರಿಸು ; ಸತ್ತ ಪಶುಗಳಿಗೆ ಪ್ರಾಣವಿತ್ತು ರಕ್ಷಿಸು ; ನಮ್ಮಿಂದಾದ ತಪ್ಪನ್ನು ಮನಸ್ಸಿಗೆ ತಂದುಕೊಳ್ಳಬೇಡ ; ನಿನ್ನ ಸದ್ಗುಣವನ್ನು ಮೆರೆಸು. ವ॥ ಹೀಗೆಂದು ಅಳುತ್ತ ಶರಣು ಹೊಕ್ಕ ಜೈನ ಸಂನ್ಯಾಸಿಗಳಿಗೆ ಶೈವೋಪದೇಶವಿತ್ತು ಶಿವಭಕ್ತರನ್ನಾಗಿ ಮಾಡಿದನು. ೧೧೭. ಸತ್ತು ಹೋದ ಗೋವುಗಳಿಗೂ, ಪಟ್ಟಣದಲ್ಲಿ ಬಿದ್ದು ಸತ್ತು ಹೋದವರಿಗೆ ಜೀವದಾನ ವನ್ನೂ ಮಾಡಿ, ಆ ನಮಿನಂದಿಯು (ಎಲ್ಲರನ್ನೂ) ಸಂತೋಷಗೊಳಿಸಿ ಲೋಕ ಕ್ಕೆಲ್ಲ ಪ್ರಸಿದ್ಧವಾಗಿರುವಂತೆ ತನ್ನ ಸಾಮರ್ಥ್ಯದಿಂದ ರಕ್ಷಿಸಲಿಲ್ಲವೇ ಎಲೈ ಜೈನನೇ ಇನ್ನೂ ಕೇಳು ; ಭೂಮಂಡಲದಲ್ಲಿ—೧೧೮. ಅತ್ಯಂತ ಮನೋಹರವಾದ ಚೋಳ ಮಂಡಲಕ್ಕೆಲ್ಲ ಭೂಷಣಪ್ರಾಯವಾದ 'ಶಾಂತಮಂಡಲ' ಎಂದು ಪ್ರಸಿದ್ಧವಾಗಿರುವ ಪಟ್ಟಣದಲ್ಲಿ ಶೋಭಿಸುವ ಬೌದ್ಧನೊಬ್ಬನ ಪುತ್ರನಾಗಿ, ಚಂಚಲರಹಿತ ಬುದ್ಧಿಯುಳ್ಳವ

1 × (ಚ)

ಎಲೆ ಶಿವ ಮಹೇಶ ಶಂಕರ
ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀ
ನಲಸದೆ ಪುಟ್ಟಿಸಿದಂತಿರೆ
ಖಲ ಬೌದ್ಧನ ಬಸಿಱೊಳೆನ್ನನೇಂ ಪುಟ್ಟಿಪುದೇ ೧೧೯

ವ॥ ಎಂದು ನೊಂದು ನುಡಿದೊಂದು ಶಿವಲಿಂಗಮಂ ಕಾಣ್ಬೆನೆಂದಱಸುತ್ತುಂ ಬಂದಾ ಪೊಳಲ ಪೊಱವೞಯದೊಳ್ಪಾಳ್ದೇಗುಲದಂತಿರ್ದ ಶಿವಾಲಯಮಂ ಕಂಡೊಳಪೊಕ್ಕಲ್ಲಿ ಶಿವಲಿಂಗಮಿರೆ ನಿಷ್ಠೆಯಿಂ ನಿರೀಕ್ಷಿಸಿ ವಂದನಂಗೆಯ್ದು—

ಮಾರಹರ ನಿನ್ನ ಪೂಜೆಯ
ನೋರಂತಿರೆ ಮೂಱುಕಾಲಮುಂ[1] ನೆಗಳ್ವೆನಿದೇ
ವೀರವ್ರತಮಿದನುಳಿದಾ
ಹಾರಂಗೊಳೆನೆಂದು ನೇಮಮಂ ಕೆಯ್ಕೊಂಡಂ ೧೨೦

ವ॥ ಅಂತು ಕೆಯ್ಕೊಂಡು ನಿಚ್ಚಮುಂ ತ್ರಿಕಾಲಂದಪ್ಪದೆ—

ಫುಲ್ಲೋತ್ಪಲಭಾವನೆಯಿಂ
ನಿಲ್ಲದೆ ಕೆಯ್ಕೊಳ್ವುದೆಂದು ಸಾಂಖ್ಯಂ ಮೂಱುಂ
ಕಲ್ಲಿಂದಿಡುತುಂ ಗೌರೀ
ವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ ೧೨೧

ನೆನಿಸಿ, ಸಾಂಖ್ಯತೊಂಡನೆಂಬ ಹೆಸರನ್ನು ಪಡೆದ ಒಬ್ಬ ಮಹಾತ್ಮನು ಶೋಭಿಸುತ್ತಿದ್ದನು. ಅವನಲ್ಲಿ ಪುರಾತನರ ಪುಣ್ಯದ ಏಳಿಗೆಯಿಂದ ಶಿವನೊಬ್ಬನಲ್ಲೇ ಇಟ್ಟ ದೃಢವಾದ ಭಕ್ತಿಯು ಉಂಟಾಗಲಾಗಿ, ೧೧೯. ಎಲೈ ಮಹೇಶ್ವರನೇ, ಶಂಕರನೇ, ಹೊಲೆಯರ ಬಳಕೆಯ ಸರೋವರದಲ್ಲಿ ಕಮಲವನ್ನು ನೀನು ಬೇಸರಪಟ್ಟುಕೊಳ್ಳದೆ ಹುಟ್ಟಿಸಿದ ಹಾಗೆ, ದುಷ್ಟರಾದ ಬೌದ್ಧರ ಗರ್ಭದಲ್ಲಿ ನನ್ನನ್ನೇಕೆ ಹುಟ್ಟಿಸಿದೆ ? ವ॥ ಹೀಗೆಂದು (ತನ್ನ ಹುಟ್ಟಿನ ವಿಷಯದಲ್ಲಿ) ನೊಂದುಕೊಂಡು ನುಡಿದು, ಒಂದು ಶಿವಲಿಂಗವನ್ನು ಕಾಣುತ್ತೇನೆಂದು ಹುಡುಕುತ್ತ ಬಂದು ಆ ಪಟ್ಟಣದ (ಶಾಂತಮಂಡಲವೆಂಬ ಪಟ್ಟಣದ) ಹೊರಭಾಗದಲ್ಲಿ ಹಾಳುದೇವಾಲಯದಂತಿರುವ ಶಿವಾಲಯವನ್ನು ಕಂಡು, ಅದರೊಳಗೆ ಪ್ರವೇಶಿಸಿ, ಅಲ್ಲಿದ್ದ ಶಿವಲಿಂಗವನ್ನು ನಿಷ್ಠೆಯಿಂದ ನಿರೀಕ್ಷಿಸಿ ನಮಸ್ಕಾರ ಮಾಡಿ—೧೨೦. ಮನ್ಮಥನಾಶಕನೇ, ನಿನ್ನ ಪೂಜೆಯನ್ನು ಕ್ರಮವಾಗಿರುವ ಹಾಗೆ ಮೂರು ಕಾಲಗಳಲ್ಲೂ ಮಾಡುವೆನು. ಇದೇ ನನ್ನ ವೀರವ್ರತವು. ಇದನ್ನು ಬಿಟ್ಟು ನಾನು ಆಹಾರವನ್ನೇ ಸೇವಿಸುವುದಿಲ್ಲ. ಎಂದು ನೇಮವನ್ನು ಸ್ವೀಕರಿಸಿದನು. ವ॥ ಆ ರೀತಿ ವ್ರತವನ್ನು ಸ್ವೀಕರಿಸಿ ಪ್ರತಿದಿನದ ಮೂರುಕಾಲವೂ ತಪ್ಪದ ಹಾಗೆ—೧೨೧. ಮೂರು ಕಲ್ಲುಗಳನ್ನು ಅರಳಿದ ಕಮಲಗಳೆಂಬ ಭಾವನೆಯಿಂದ ತಪ್ಪದೆ ಹಿಡಿದುಕೊಂಡು

1 ಮಂ(ಚ, ಗ, ಮು, ಜ)

ವ॥ ಅನ್ನೆವರಮಲ್ಲಿ—

ಪೊಳೆವೆಳೆಮಿಂಚು ಸಂಚಳಿಸೆ ಕಾರ್ಮುಗಿಲೇಳೆ ಮಹೇಂದ್ರಚಾಪಮು
ಜ್ವಳಿಸೆ ಕಳಾಪಿ ತಾಂಡವಮನಾಡೆ ಮುಗುಳ್ತು ಕದಂಬರಾಜಿ ಕಂ
ಗೊಳಿಸೆ ಚಿಳಿಲ್ಛಿಟಿಲ್ಧ್ವನಿಘನಾಘನದೊಳ್ನೆಲೆವೆರ್ಚೆ ಚಾತಕಾ
ವಳಿ ನಲವೇಱೆ ಕಟ್ಟಿಕಱೆದತ್ತಿಳೆಯೊಳ್ಮಳೆ ಕಾರಕಾಲದೊಳ್ ೧೨೨

ವ॥ ಅಂತೆಡೆವಿಡದೆ ಕಱೆವ ಪೆರ್ಮಳೆಯೊಳ್ತೊಱೆಯುರ್ಕಿ ಪರಿಯೆ ತನಗೆ ದಾಂಟಲಳವಲ್ಲದೆ ಲಿಂಗಾರ್ಚನೆಯುಳಿಯೆ ಮೂಱುಂದಿನಮುಪವಾಸಮಿರ್ದನಂತರಂ ತೊಱೆ ತೆಗೆಯೆ ದೇಗುಲಕ್ಕೆ ಭಕ್ತಂ ಬಂದು—

ಉಳಿದನಿತುಂ ದಿನಂಗಳ ಶಿವಾರ್ಚನೆಗೆಯ್ದಪೆನೀಗಳೆಂದು ಕ
ಲ್ಗಳನಱಸುತ್ತೆ ಕಾಣದಲಸುತ್ತೆ ಮಹಾಶಿಲೆಯೊಂದನೆತ್ತಿ ತಂ
ದೊಳವಿದಱಲ್ಲಿ ಮಿಕ್ಕ ಶಿಲೆಗಳ್ ಶಿವ ಕೊಳ್ವುದೆನುತ್ತೆ ಮೇಲೆ ನಿ
ಶ್ಚಳಮತಿ ನೂಂಕೆ ಭೋಂಕನದನೊತ್ತರಿಸುತ್ತೆ ನಗುತ್ತೆ ಶಂಕರಂ ೧೨೩

ಎರೆ ವರಮನಮಳಸುಗುಣಾ
ಭರಣ ಭವನ್ನಿಷ್ಠೆಗೊಲ್ದೆನೆನೆ ವಿಪುಳ ಕೃಪಾ

ಆ ಸಾಂಖ್ಯನು ಅವುಗಳಿಂದ ಶಿವನಿಗೆ ಹೊಡೆಯುತ್ತಿದ್ದನು. (ಈ ರೀತಿಯಲ್ಲಿ ಭಕ್ತಿಯನ್ನು ಆಚರಿಸುತ್ತ) ಗೌರೀಪತಿಯಾದ ಶಿವನನ್ನು ನಂಬಿ, ಮನದೊಲವಿನಿಂದ ಪೂಜಿಸುತ್ತಿದ್ದನು. ವ॥ ಅಷ್ಟರೊಳಗೆ ಅಲ್ಲಿ—೧೨೨. ಒಂದು ಮುಂಗಾರಿನ ಕಾಲದಲ್ಲಿ ಹೊಳೆಯುತ್ತಿರುವ, ಬಳ್ಳಿ ಮಿಂಚು ಮಿಂಚುತ್ತಿರಲು ಕಪ್ಪಾದ ಮೋಡಗಳು ಹುಟ್ಟಿದವು ; ಇಂದ್ರ ಧನುಸ್ಸು ಪ್ರಕಾಶಿಸಿತು ; ನವಿಲುಗಳು ತಾಂಡವನೃತ್ಯವನ್ನು ಆಡಿದವು ; ಕದಂಬವೃಕ್ಷಗಳು ಹೂ ಬಿಟ್ಟು ಕಂಗೊಳಿಸಿದವು ; ಛಿಳಿಲ್, ಛಿಟಿಲ್ ಎಂದು ಧ್ವನಿಮಾಡುತ್ತ ಮಳೆಯನ್ನು ಸುರಿಸುವ ಮೋಡಗಳ ನಿಲುವು (ರೀತಿಯು) ಅಧಿಕಗೊಂಡವು ; ಚಾತಕಪಕ್ಷಿಗಳು ಹರ್ಷಗೊಂಡವು—ಹೀಗೆ ಆ ಮುಂಗಾರಿನ ಕಾಲದಲ್ಲಿ ಮಳೆಯು ಭೂಮಿಯ ಮೇಲೆ ಒಂದೇ ಸವನೆ ಸುರಿಯುತ್ತಿತ್ತು. ವ॥ ಹೀಗೆ ಎಡೆಬಿಡದೆ ಸುರಿಯುತ್ತಿರುವ ದೊಡ್ಡ ಮಳೆಯ ಕಾರಣದಿಂದ ಹೊಳೆಯು ಉಕ್ಕಿ ಹರಿಯುತ್ತಿರಲು ತನಗೆ ದಾಟುವುದಕ್ಕೆ ಶಕ್ತಿ ಸಾಲದೆ ಲಿಂಗಾರ್ಚನಾಕ್ರಿಯೆಯು ನಿಂತಿತು. ಮೂರು ದಿನಗಳು ಉಪವಾಸಮಾಡಿದನಂತರ ಹೊಳೆಯು ಇಳಿಯಲು, ದೇವಾಲಯಕ್ಕೆ ಭಕ್ತನು ಬಂದು—೧೨೩–೧೨೪. ಉಳಿದು ಹೋದ ಮೂರು ದಿನಗಳ ಶಿವಾರ್ಚನೆಯನ್ನು ಈಗಲೇ ಮಾಡುತ್ತೇನೆಂದು ಕೊಂಡು ಕಲ್ಲುಗಳನ್ನು ಹುಡುಕುತ್ತ ಕಾಣದೆ ಸಂಕಟಗೊಂಡು, ಮಹಾಶಿಲೆಯೊಂದನ್ನೆತ್ತಿ ತಂದು, ಶಿವನೇ ಮಿಕ್ಕಕಲ್ಲುಗಳೆಲ್ಲ ಇದರೊಳಗೆ ಇರುತ್ತವೆ, ಸ್ವೀಕರಿಸು ಎನ್ನುತ್ತ ಆ ನಿಶ್ಚಲಮತಿಯಾದ ಸಾಂಖ್ಯತೊಂಡನು ಒಮ್ಮೆಲೇ ಬಿರುಸಾಗಿ ಎತ್ತಿಹಾಕಲಾಗಿ (ನೂಕಲಾಗಿ)

ಕರನೀಕ್ಷಿಸಿ ಭಕ್ತಂ ಪುರ
ಹರಂಗೆ ಪೊಡಮಟ್ಟು ಪೊಗಳ್ದನತುಳೋತ್ಸವದಿಂ ೧೨೪

ಪರಮಕೃಪಾಸಮುದ್ರ ಫಣಿರಾಜವಿಭೂಷಣ ಭವ್ಯ ಭಾವ್ಯ ಭಾ
ಸ್ವರ ಶತಕೋಟಿತೇಜ ಭಜಕಾಮರಭೂರುಹ ಭೂರಿದೈತ್ಯಸಂ
ಹರ ಹರಿಣಾಂಕಜೂಟ ಶಮನ ಸ್ಮರಘಸ್ಮರ ಭಾಳನೇತ್ರ ಶಂ
ಕರ ಜಯ ದೇವದೇವ ನಿಗಮಾಗಮಸನ್ನುತ ನೀಲಕಂಧರಾ ೧೨೫

ಪುರಹರ ನಿನ್ನ ನಿತ್ಯತೆಗೆ ಮೃತ್ಯುಹರತ್ವಮೆ ಸಾಕ್ಷಿ ನಿನ್ನಧೀ
ಶ್ವರತೆಗೆ ಪಾದದಲ್ಲಿ ತಳೆದಚ್ಯುತನಕ್ಷಿಯೆ ಸಾಕ್ಷಿ ನೀಂ ಜಗ
ದ್ಗುರುವೆನಿಸಿರ್ಪುದರ್ಕೆ ನಿಗಮಂಗಳ ಪೆತ್ತುದೆ ಸಾಕ್ಷಿ ನಿನ್ನ ಸ
ತ್ಪುರುಷತೆಗಾದಿವಿಷ್ಣು ವಧುವಾದುದೆ ಸಾಕ್ಷಿ ಸಮಸ್ತ ಲೋಕದೊಳ್ ೧೨೬

ಹರ ನಿನ್ನಾದ್ಯಂತ ಶೂನ್ಯತ್ವಕೆ ನುಡಿದಫುದಿಂ ಪಂದಿ ಪರ್ದಾದ ಪದ್ಮೋ
ದರ ಗೋಪ[1]ರ್ಸಾಕ್ಷಿ ನಿನ್ನುಜ್ವಳಮಹಿಮೆಗೆ ವೇದಂಗಳೇ ಸಾಕ್ಷಿ ಲೋಕೋ

ಶಂಕರನು ನಗುತ್ತ–'ಎಲೈ ಶ್ರೇಷ್ಠ ಸದ್ಗುಣಗಳೇ ಆಭರಣವಾಗಿ ಉಳ್ಳ ಸಾಂಖ್ಯ ತೊಂಡನೇ, ನಿನ್ನ ನಿಷ್ಠೆಗೆ ಒಲಿದೆನು. ವರಗಳನ್ನು ಬೇಡು ಎಂದು ಆ ವಿಪುಲವಾದ ಕರುಣವನ್ನುಂಟುಮಾಡುವ ಶಿವನು ನೋಡಿ ಹೇಳಲು, ಆ ಭಕ್ತನು ಪರಮೇಶ್ವರನಿಗೆ ನಮಸ್ಕರಿಸುತ್ತ ಅತುಳವಾದ ಸಂತೋಷದಿಂದ ಹೊಗಳಿದನು. ೧೨೫. ಪರಮಕೃಪೆಗೆ ಸಮುದ್ರದೋಪಾದಿಯಲ್ಲಿರುವವನೇ, ಸರ್ಪಗಳ ಆಭರಣವನ್ನು ತೊಟ್ಟವನೇ, ಮಂಗಳ ಸ್ವರೂಪರಾದ ಭಕ್ತರುಗಳಿಂದ ಧ್ಯಾನಿಸುವುದಕ್ಕೆ ಯೋಗ್ಯನಾದವನೇ, ಶತಕೋಟಿ ಸೂರ್ಯರ ತೇಜಸ್ಸುಳ್ಳವನೇ, ಭಜನೆಮಾಡುವ ಜನಕ್ಕೆ ಕಲ್ಪವೃಕ್ಷ ಪ್ರಾಯನಾದವನೇ, ಅಸಂಖ್ಯ ದೈತ್ಯರನ್ನು ಸಂಹರಿಸಿದವನೇ, ಜಡೆಯಲ್ಲಿ ಚಂದ್ರನನ್ನು ಧರಿಸಿದವನೇ, ಯಮ ಮತ್ತು ಮನ್ಮಥರುಗಳನ್ನು ಸುಟ್ಟುಹಾಕಿದ (ನುಂಗಿ ಹಾಕಿದ) ಹಣೆಗಣ್ಣುಳ್ಳವನೇ, ವೇದಾಗಮಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವನೇ, ದೇವದೇವಾ, ನೀಲಕಂಧರನೇ ಜಯ. ೧೨೬. ಪರಮೇಶ್ವರ, ನಿನ್ನ ನಿತ್ಯತ್ವಕ್ಕೆ ಮೃತ್ಯುವನ್ನು ಹರಣಮಾಡಿದುದೇ ಸಾಕ್ಷಿ; ನಿನ್ನ ಒಡೆಯತನಕ್ಕೆ (ಪ್ರಭುತ್ವಕ್ಕೆ) ಪಾದದ ಮೇಲೆ ಏರಿಸಲ್ಪಟ್ಟ ವಿಷ್ಣುವಿನ ನೇತ್ರವೇ ಸಾಕ್ಷಿ ; ನೀನು ಜಗತ್ತಿಗೆ ಗುರುವೆನ್ನುವುದಕ್ಕೆ ವೇದಗಳನ್ನು ಉಸುರಿದುದೇ ಸಾಕ್ಷಿ ; ನಿನ್ನ ಶ್ರೇಷ್ಠ ಪುರುಷತ್ವಕ್ಕೆ ಆದಿಯಲ್ಲಿ ವಿಷ್ಣುವು ಹೆಂಡತಿಯಾದುದೇ ಸಾಕ್ಷಿ. ೧೨೭. 'ಹರನೇ, ಕೇಳು : ನೀನು ಆದಿ ಅಂತ್ಯ ಶೂನ್ಯನು ಎಂಬುವಕ್ಕೆ ಹಂದಿಯ ರೂಪದಲ್ಲಿ ವಿಷ್ಣುವು ಪಾತಾಳಕ್ಕೂ, ಹದ್ದಾಗಿ (ಹಂಸಪಕ್ಷಿಯಾಗಿ) ಆಕಾಶಭಾಗಕ್ಕೆ ಬ್ರಹ್ಮನೂ ಹೋಗಿ ಹುಡುಕಿ ಕಾಣದೆ ಇದ್ದುದೇ ಸಾಕ್ಷಿ ; ನಿನ್ನ ಪ್ರಕಾಶಮಾನವಾದ ಮಹಿಮೆಗೆ ವೇದಗಳೇ ಸಾಕ್ಷಿ (ಅಂದರೆ ವೇದಗಳಲ್ಲಿ ಹೇಳಿರುವ ಸಹಸ್ರ ಶೀರ್ಷಾ

1 ಬೊಮ್ಮ (ಚ, ಗ), ಬ್ರಹ್ಮ (ದ)

ತ್ಕರ ರಕ್ಷಾಶಾಲಿ ನೀನೆಂಬುದಕೆ ಗಳವಿಷಂ ಸಾಕ್ಷಿ ಕೇಳ್ದೇವ ಕಾರು
ಣ್ಯರಸಾಂಭೋರಾಶಿ ನೀನಾದುದಕೆನಗಣವೊಲ್ದಂದಮೇ ಸಾಕ್ಷಿಯಲ್ತೇ ೧೨೭

ಹರಿ ನಿನ್ನಂ ಪೂಜೆಗೆಯ್ದಂ ಧವಳನಳಿನದಿಂ ಪದ್ಮಜಂ ಪದ್ಮದಿಂದಂ
ಸುರಪಂ ಮಂದಾರದಿಂ ಚಂದ್ರಮನಸಿತಸರೋಜಾತದಿಂ ಸೂರ್ಯನರ್ಕೋ
ತ್ಕರದಿಂ ಮಾಣಿಕ್ಯದಿಂದಂ ಫಣಿಪತಿ ದಶಕಂಠಂ ಶಿರೋಬೃಂದದಿಂದು
ಭರದಿಂದಾನಿಲ್ಲಿ ಕಲ್ಲಿಂ ಪೊಸತೆನೆ ನೆಗಳ್ದೆಂ ಪೂಜೆಯಂ ಚಂದ್ರಮೌಳೀ ೧೨೮

ಎಲ್ಲರ್ಪೂವಿಂ ಪೂಜಿಪ
ರಿಲ್ಲಿ ಕರಂ ಕಲ್ಗಳಿಂದೆ ಪೂಜಿಸಿದನಿವಂ
ಖುಲ್ಲನೆನುತುಂ ವಿಡಂಬಿಸ
ಲೊಲ್ಲದೆ ನೀನೊಲ್ದೆ ಗಡ ದಯಾಳುಗಳರಸಾ ೧೨೯

ವರದಾನಶೀಲ ಸುಗುಣಾ
ಭರಣ ದಯಾವಾರ್ಧಿ ನಿನ್ನ ಮಹಿಮೋನ್ನತಿಯಂ
ಹರಿ ವಿಧಿ ಮನುಮುನಿ ನಿಗಮೋ
ತ್ಕರಮರಿಗುಮೆ ಬಲ್ಲೆನೆಂತೊ ನಿನ್ನತಿಶಯಮಂ ೧೩೦

ಪುರುಷಃ ಸಹಸ್ರಾಕ್ಷಸ್ಸಹಸ್ರಪಾತ್–ಇತ್ಯಾದಿ ಮಾತುಗಳೇ ಸಾಕ್ಷಿ ಎಂದು ಭಾವ) ಲೋಕ ಸಮೂಹಗಳನ್ನು ರಕ್ಷಣೆ ಮಾಡುವುದಕ್ಕೆ ಯೋಗ್ಯನೆಂಬುದಕ್ಕೆ ಭಯಂಕರ ಹಾಲಾಹಲ ವನ್ನು ಕುಡಿದು ಕುತ್ತಿಗೆಯಲ್ಲಿ ಧರಿಸಿದುದೇ ಸಾಕ್ಷಿ ; ದೇವ, ನೀನು ಕಾರುಣ್ಯರಸದ ಸಮುದ್ರ ಸ್ವರೂಪನೇ ಹೌದು ಎಂಬುದಕ್ಕೆ ನನಗೆ ಒಲಿದ ರೀತಿಯೇ ಸಾಕ್ಷಿಯಲ್ಲವೇ ? ೧೨೮. ಹೇ ಚಂದ್ರಮೌಳಿಯೇ, ವಿಷ್ಣುವು ನಿನ್ನನ್ನು ಬಿಳಿಯ ಕಮಲಗಳಿಂದ ಪೂಜೆ ಮಾಡಿದನು. ಬ್ರಹ್ಮನು ಕಮಲಗಳಿಂದ ದೇವೇಂದ್ರನು ಕಲ್ಪವೃಕ್ಷಗಳ ಹೂವುಗಳಿಂದ, ಚಂದ್ರನು ಕನ್ನೈದಿಲೆಯ ಹೂವುಗಳಿಂದ, ಸೂರ್ಯನು ಎಕ್ಕದ ಹೂವುಗಳ ಸಮೂಹ ದಿಂದ, ಆದಿಶೇಷನು ಮಾಣಿಕ್ಯಗಳಿಂದ, ರಾವಣನು ತನ್ನ ಶಿರಸ್ಸುಗಳ ಸಮೂಹದಿಂದ. ಭರದಿಂದ ಬೀಸುತ್ತಿರುವ ಕಲ್ಲುಗಳಿಂದ ನಾನು ಲೋಕಕ್ಕೆ ಹೊಸದೆನ್ನುವಂತೆ ಪೂಜೆ ಮಾಡಿದೆನು. ೧೨೯. ದಯಾಳುಗಳ ಅರಸನಾದ ಶಿವನೇ, ಎಲ್ಲರೂ ಹೂವುಗಳಿಂದ ಪೂಜೆ ಮಾಡಿದರೆ, ದುಷ್ಟನಾದ ಇವನಾದರೋ ಹೆಚ್ಚಾಗಿ ಕಲ್ಲುಗಳಿಂದ ಹೊಡೆದು ಪೂಜಿಸುತ್ತಿದ್ದಾನೆ ಎನ್ನುತ್ತ ತಿರಸ್ಕಾರ ಮಾಡದೆ (ಇಂಥವನನ್ನೂ ಕೂಡ) ಒಲಿದೆ ಯಲ್ಲವೇ । ೧೩೦. ಶ್ರೇಷ್ಠವಾದ ದಾನಗುಣವೇ ಶೀಲವಾಗಿ ಉಳ್ಳವನೇ, ಸದ್ಗುಣ ಗಳೇ ಆಭರಣವಾಗಿ ಉಳ್ಳವನೇ, ದಯಾ ಸಮುದ್ರನೇ, ನಿನ್ನ ಶ್ರೇಷ್ಠವಾದ ಮಹಿಮಾತಿ ಶಯವನ್ನು ಹರಿಬ್ರಹ್ಮರೂ, ಮನುವೇ ಮೊದಲಾದ ಮುನಿಗಳೂ, ವೇದಸಮೂಹವೂ ಅರಿಯಲು ಶಕ್ಯವೇ ? ಆದರೆ ನಾನು ಹೇಗೆ ನಿನ್ನ ಶ್ರೇಷ್ಠತೆಯನ್ನು ಅರಿಯಲಿ ?

ಬಲ್ಲಪ್ರಮಥಾಧೀಶ
ರ್ಬಲ್ಲಂ ವೃಷಭೇಂದ್ರನಮಳ ಶರಣರ್ಬಲ್ಲ
ರ್ಕಲ್ಲಿಡುವ ಕಜ್ಜವೊಂದಂ
ಬಲ್ಲೆಂ ನಿನ್ನಿರವನೆಂತುಮಾನಱಿದಪೆನೇ ೧೩೧

ವ॥ ಎಂದಿಂತು ಪರಮಾನಂದದಿಂ ಪೊರೆಯೇಱಿ ಪೊಗಳ್ದು—

ವರಮಂ ಬೇಱೊಂದುಮಂ ಪ್ರಾರ್ಥಿಸೆನನುದಿನಮಾನಿರ್ದ ಭೂಮಂಡಲಂ ಬೌ
ದ್ಧರಿನಾ ಚಾರ್ವಾಕರಿಂ ಜೈನರ ಸಮುದಯದಿಂ ಶೂನ್ಯಮಪ್ಪಂತೆ ಗೆಯ್ದೀ
ಶ್ವರಭಕ್ತಶ್ರೇಣಿಯಿಂ ತೀವುವವೊಲೆಸಗಿದೆನ್ನಿಷ್ಟಮೆಂದದ್ರಿಜಾಧೀ
ಶ್ವರನಿಂ ತಾನೆಂದವೋಲಾಗಿಸಿ ಮೆಱೆಯನೆ ಕೇಳ್ಧಾತ್ರಿಯೊಳ್ಸಾಂಖ್ಯತೊಂಡಂ ೧೩೨

ವಾಗೀಶನ ಕಥೆಯಂ ಚ
ಲ್ವಾಗೀಶನ ಭಕ್ತರೆಡೆಯೊಳೋದುವನವನಾ
ವಾಗೀಶಮುಖ್ಯ ಸುರಗುರು
ವಾಗೀಶಕೃಪಾವಿಶೇಷದಿಂ ಸುಖಮಿರ್ಕುಂ ೧೩೩

ಹರಸುತನ ವಿಮಳ ಕಥನಮ
ನೊರೆವರ್ಗಂ ಕೇಳ್ವವರ್ಗಮೀವಂ ದೇವಂ

೧೩೧. ನಿನ್ನ ಇರವನ್ನು ಪ್ರಮಥಾದೀಶರು ಬಲ್ಲರು ; ವೃಷಭೇಶ್ವರನು ಬಲ್ಲನು ; ಶ್ರೇಷ್ಠರಾದ ಶರಣರು ಬಲ್ಲರು ; ಆದರೆ ನಾನು ಕೇವಲ ಕಲ್ಲುಗಳಿಂದ ಹೊಡೆಯುವುದನ್ನು ಬಲ್ಲೆನಲ್ಲದೆ ನಾನು ತಿಳಿಯಲು ಶಕ್ತನಾದೇನೆಯೇ ? ವ॥ ಇತ್ಯಾದಿಯಾಗಿ ಉತ್ಸಾಹಗೊಂಡು ಪರಮಾನಂದದಿಂದ ಹೊಗಳಿ—೧೩೨. ನನಗೆ ಯಾವ ಒಂದು ವರವನ್ನೂ ಪ್ರಾರ್ಥಿಸುವುದಿಲ್ಲ. ಸದಾಕಾಲವೂ ನಾನಿರುವ ಈ ಭೂಮಂಡಲವು ಬೌದ್ಧರಿಂದಲೂ, ಚಾರ್ವಾಕರಿಂದಲೂ, ಜೈನರ ಸಮೂಹದಿಂದಲೂ ಶೂನ್ಯವಾಗಿರುವಂತೆ ಮಾಡು ; ಈಶ್ವರಭಕ್ತ ಸಮೂಹದಿಂದ ತುಂಬುವಂತೆ ಮಾಡು, ಇದೇ ನನ್ನ ಬಯಕೆ ಎಂದು ಗಿರಿರಾಜತನಯೆಯ ಒಡೆಯನಾದ ಶಿವನಿಂದ ತಾನು ಕೇಳಿಕೊಂಡ ಹಾಗೆ ಆಗುವಂತೆ ಆ ಸಾಂಖ್ಯತೊಂಡನು ಆಗಿಸಿ ಪ್ರಕಾಶಿಸಲಿಲ್ಲವೇ ? ಕೇಳು (ಎಂದು ಆ ಏಕಾಂತ ರಾಮಯ್ಯನು ಜೈನರಿಗೆ ತಿಳಿಸಿದನು.) ೧೩೩. ವಾಗೀಶನ ಕಥೆಯನ್ನು ಚಂದವಾಗಿ ಶಿವಭಕ್ತರ ಸಮೂಹದಲ್ಲಿ ಓದುವವನು ಆ ವಾಗೀಶನಾದ ಬ್ರಹ್ಮನೇ ಮೊದಲಾದ ದೇವತೆಗಳಿಗೆ ಗುರುವೆನಿಸಿ ಈಶ್ವರನ ಕೃಪಾ ವಿಶೇಷದಿಂದ ಸುಖವಾಗಿರುವನು. ೧೩೪. ಹರನ ಸುತನಾದ ತಿರುಜ್ಞಾನ ಸಂಬಂಧರ ಪವಿತ್ರವಾದ ಕಥೆಯನ್ನು ಹೇಳುವವರಿಗೆ, ಕೇಳುವವರಿಗೆ ಮೇರುಪರ್ವತವೇ ಮನೆಯಾಗಿ ಉಳ್ಳವನೂ,

ವರಮುಂ ಪರಮುಂ ಗಿರಿಮಂ
ದಿರ ಮಂಗಳರೂಪನೋಪನಗಪತಿ[1]ಸುತೆಯಾ[1] ೧೩೪*

ನಿಡುಮಾರದೇವ ಕಥನಮ
ನೊಡನುತ್ಸವದಿಂದೆ ಪಠಿಯಿಪಾಲಿಪ ಮನುಜ
ರ್ಗೆಡೆವಿಡದ ಪೂರ್ಣ ಸುಖಮಂ
ಮೃಡನೀವಂ ದೇವದೇವನೀ ವಸುಮತಿಯೊಳ್ ೧೩೫

ನಮಿನಂದಿನಾಥ ವಿಮಳ ಸಚ್ಚರಿತ್ರಮಂ
ಕ್ರಮದಿಂದೆ ಪೇಳ್ವ ಮಿಗೆ ಕೇಳ್ವ ಮರ್ತ್ಯರಂ
ಸುಮಹಾಗಣೇಂದ್ರ ಪದವಿತ್ತು ರಕ್ಷಿಪಂ
ಹಿಮಶೈಲಪುತ್ರಿಯರಸಂ ವಿಳಾಸದಿಂ ೧೩೬

ಕಲಿಸಾಂಖ್ಯ ಚರಿತಮಂ ನಿ
ಶ್ಚಲಮತಿಯಿಂ ಪೇಳ್ವ ಕೇಳ್ವ ವಿಬುಧರ್ಗಮರಾ
ಚಲಚಾಪನೀವನತಿ ಮಂ
ಜುಲಸುಖಮಂ ಶತಮುಖಾದಿನುತ ಗಣಪದಮಂ ೧೩೭

ವಿಳಸತ್ಕಲ್ಯಾಣಕಲ್ಪದ್ರುಮನಖಿಳಕಳಾಶಾಲಿ ಶೈವಪ್ರಭಾವೋ
ಜ್ವಳಧಾಮಂ ಭಕ್ತಿಭಾವಾರಮಣನಮಳಕೀರ್ತಿಪ್ರಭಾಪೂರಿತಾಶಾ

ಮಂಗಳಸ್ವರೂಪನೂ, ಹಿಮವಂತರಾಜನ ಮಗಳ ಒಡೆಯನೂ ಆದ ದೇವನು ಪರಮ ವರವನ್ನು ಈಯುವನು. ೧೩೫. ನಿಡುಮಾರ ದೇವನ ಕಥೆಯನ್ನು ಒಡನೆ ಸಂತೋಷ ದಿಂದ ಓದುವ ಕೇಳುವ ಮನುಷ್ಯರಿಗೆ ಸತತವಾಗಿ ಪೂರ್ಣ ಸುಖವನ್ನು ಈ ಭೂಲೋಕ ದಲ್ಲಿ ದೇವತೆಗಳಿಗೆಲ್ಲ ದೇವನೆನಿಸಿದ ಪರಶಿವನು ಕೊಡುವನು. ೧೩೬. ನಮಿನಂದಿ ನಾಥನ ಪರಿಶುದ್ಧ ಚರಿತ್ರೆಯನ್ನು ಕ್ರಮವಾಗಿ ಹೇಳುವ, ಚೆನ್ನಾಗಿ ಕೇಳುವ ಮನುಷ್ಯ ರಿಗೆ ಹಿಮವಂತ ರಾಜನ ಪುತ್ರಿಯ ಗಂಡನಾದ ಶಿವನು ಸಂತೋಷದಿಂದ ಶ್ರೇಷ್ಠವಾದ ಮಹಾಗಣ ಶ್ರೇಷ್ಠಪದವಿಯನ್ನು ಕೊಟ್ಟು ರಕ್ಷಿಸುವನು. ೧೩೭. ಕಲಿಯಾದ ಸಾಂಖ್ಯತೊಂಡ ಚರಿತ್ರೆಯನ್ನು ನಿಶ್ಚಲ ಬುದ್ಧಿಯಿಂದ ಹೇಳುವ ಕೇಳುವ ವಿದ್ವಾಂಸರಿಗೆ ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡ ಶಿವನು ಮನೋಹರವಾದ ಸುಖ ವನ್ನೂ, ದೇವೇಂದ್ರಾದಿ ದೇವತೆಗಳಿಂದ ಹೊಗಳಿಸಿಕೊಳ್ಳಲ್ಪಡುವ ಶಿವಗಣ ಪದವಿ ಯನ್ನೂ ಕೊಡುವನು. ೧೩೮. ಪ್ರಕಾಶಮಾನವಾದ ಕಲ್ಯಾಣ ನಗರದ ಕಲ್ಪವೃಕ್ಷ ನೆನಿಸಿದ, ಸಕಲ ಸದ್ವಿದ್ಯೆಗಳುಳ್ಳ, ಶಿವಸಂಬಂಧವಾದ ಪ್ರಭಾವದ

---

[1] ಯುರಸಾ(ದ)

* ಈ ಪದ್ಯದ ತರುವಾಯ 'ದ' ಪ್ರತಿಯಲ್ಲಿ ಈ ಕಂದಪದ್ಯವಿದೆ :
ಗಿರುತಾಂಡಿಚರಿತನೊರವಂ । ಪರವೋತ್ಸವದಿಂದ ಪಠಿಯಿಸಿದನೋದುವಗಂ ॥
ವರಮಂ ಕೊಡುವಂ ಪರಮಂ । ವರಗಣನಿಕರದೊಳೆ ಸುಖದೆೊಳಿರ್ಕುಂನವರಂತಂ ॥

ವಳಯುಂ ದುರ್ದಾಂತವಾಗ್ವ್ಯಂಜನನಧಿಗತ ಸರ್ವಾರ್ಥನಿಂತಿಂತವಂ ಮಂ
ಜುಳವೃತ್ತಂಪೇಳ್ದುದಂ ತಾಂ ತಿಳಿದು ಮುದಮನಾಳ್ದೊಪ್ಪುತಿರ್ದಂ ನೃಪೇಂದ್ರಂ ೧೩೮

ಮುರಾರಿ ಶಂಬರಾರಿ ವಾ
ಗ್ವರಾದಿ ನಿರ್ಜರಾರ್ಚಿತೇ
ಧರಾಧರೇಶ್ವರಾತ್ಮಜೇ
ಹರಪ್ರಿಯೆ ಜಯಾಂಬಿಕೇ ೧೩೯

ಇದು ವಿನಮದಖಿಳ ಸುರಾಸುರೇಂದ್ರಮುಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ವೀರಭಕ್ತವಿಳಾಸಂ

ಚತುಸ್ತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೪ಕ್ಕೆ ಪದಗಣನೆ ೨೭೩೬ಕ್ಕೆ ಮಂಗಳಮಹಾ ಶ್ರೀ

ತೇಜಸ್ಸಿಗೆ ಸ್ಥಾನನೆನಿಸಿದ, ಭಕ್ತಿಯೆಂಬ ಸ್ತ್ರೀಯ ರಮಣನೆನಿಸಿದ, ಪರಿಶುದ್ಧವಾದ ಕೀರ್ತಿಯ ಪ್ರಭೆಯಿಂದ ಸಮಸ್ತ ದಿಕ್ಕುಗಳನ್ನು ತುಂಬಿದ ದುಷ್ಟರಾದವರ ಮಾತುಗಳನ್ನು ಖಂಡಿಸುವ, ಸಮಸ್ತ ಇಷ್ಟಾರ್ಥಗಳನ್ನು ಹೊಂದಿದ ಬಸವೇಶ್ವರನು ಈ ರೀತಿಯ ವೀರಭಕ್ತರ ಮನೋಹರವಾದ ಕಥೆಗಳನ್ನು ಹೇಳಿದು ದನ್ನು ತಾನು ತಿಳಿದುಕೊಂಡು ಸಂತೋಷವನ್ನು ಹೊಂದಿ ಶೋಭಿಸುತ್ತಿದ್ದನು. ೧೩೯. ವಿಷ್ಣು, ದೇವೇಂದ್ರ, ಬ್ರಹ್ಮರೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುವ ಪಾದಗಳುಳ್ಳವಳೂ, ಭೂಧರನಾದ ಹಿಮವಂತರಾಜನ ಮಗಳೂ, ಪರಮೇಶ್ವರನ ಪ್ರಿಯೆಯೂ ಎನಿಸಿದ ಅಂಬಿಕೆಯೇ ಜಯ.

ಮೂವತ್ತುನಾಲ್ಕನೆಯ ಆಶ್ವಾಸವು ಸಮಾಪ್ತವಾಯಿತು.

# ಪಂಚತ್ರಿಂಶಾಶ್ವಾಸಂ

## [ಕೋ[1]ವೂರ ಬೊಮ್ಮಯ್ಯನ ಕಥೆ]

ಶ್ರೀಹಿಮಗಿರೀಂದ್ರಕನ್ಯಾ
ಬಾಹಾಚಂಪಕಸುಮಾಲಿ ಕಾಕಲಿತಗಳಂ
ಮೋಹವಿದೂರಂ ಸುಗುಣಸ
ಮೂಹಾನ್ವಿತನೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಮತ್ತಂ[2]—

ಧರಣೀಭಾಗದೊಳೇಳ್ಗೆವೆತ್ತು ಮಿಸುಪಾ ಕೋವೂರ ಬೊಮ್ಮಯ್ಯನೀ
ಶ್ವರಭಕ್ತಂ ಗೆಲೆ ಜೈನತಾಪಸರನಾರ್ಪಿಂ ವಾದದೊಳ್ ಸೋಲ್ತವರ್
ಕರಮೊಂದಂ ನೆನೆದಾವೆ ಬಾಳಿಪೆವಿದಂ ಪೇರಾಲಮಂ ನೀನೆ ಸು
ಟ್ಟುರುಪಂತಲ್ಲದೊಡಾವೆ ಸುಟ್ಟಪೆವಿದಂ ನೀಂ ಬಾಳಿಸೈ ಮಂತ್ರದಿಂ ೨

ವ॥ ಎರಡ[3]ೞೊಳೊಂದಭಿಮತಮವಪ್ಪುಕೆಯ್ದು ನೆಗಳ್ವುದಿದೆ ದೃಷ್ಟಾಂತಮೆಮ್ಮ ಮಹಿಮೆಗಂ ನಿಮ್ಮ ಪೆರ್ಮೆಗಮೆಂದು[3]ಕಃಮಂತ್ರತಂತ್ರನಿಪುಣಶವಣರ್ನುಡಿಯೆ ಬೊಮ್ಮಿದೇವಂ ಮಾರ್ಕೊಂಡು—

### ಕೋವೂರ ಬೊಮ್ಮಯ್ಯನ ಕಥೆ

೧. ಮಂಗಳಕರಳಾದ ಪಾರ್ವತೀ ದೇವಿಯ ಬಾಹುಗಳೆಂಬ ಸಂಪಿಗೆ ಹೂವುಗಳ ಮಾಲಿಕೆಗಳಿಂದ ಕೂಡಿದ ಕಂಠವುಳ್ಳವನೂ, ಮೋಹದಿಂದ ದೂರನಾದವನೂ, ಸದ್ಗುಣಗಳ ಸಮೂಹದಿಂದ ಕೂಡಿದವನೂ ಆದ ಶಿವಲಿಂಗನು ಸೌಖ್ಯವನ್ನು ಕೊಡಲಿ. ವ॥ ಮತ್ತು, ೨. ಭೂಮಂಡಲದಲ್ಲಿ ಪ್ರಸಿದ್ಧಿಯನ್ನು ಹೊಂದಿ ಶೋಭಿಸುತ್ತಿರುವ ಕೋವೂರ ಬೊಮ್ಮಯ್ಯನೆಂಬ ಈಶ್ವರ ಭಕ್ತನು ಜೈನ ತಪಸ್ವಿಗಳನ್ನು ವಾದದಲ್ಲಿ ಪರಾಕ್ರಮದಿಂದ ಗೆದ್ದನು. ಸೋತುಹೋದ ಅವರು ಒಂದು ಯುಕ್ತಿಯನ್ನು ಚೆನ್ನಾಗಿ ಯೋಚಿಸಿ. 'ಒಂದು ದೊಡ್ಡ ಆಲದ ಮರವನ್ನು ನೀನು ಸುಟ್ಟು ಉರಿಸಿ ಬಿಡು, ನಾವು ಅದನ್ನು ಪುನಃ ಮಂತ್ರದಿಂದ ಬದುಕಿಸುತ್ತೇವೆ, (ಅಥವಾ) ನಾವು ಸುಟ್ಟು ಉರಿಸುತ್ತೇವೆ; ನೀನಾದರೂ ಮಂತ್ರದಿಂದ ಬದುಕಿಸು, (ಎಂದರು.)' ವ॥ 'ಈ ಎರಡರಲ್ಲಿ ಒಂದರ ಬಗೆಗೆ ನಿನ್ನ ಒಪ್ಪಿಗೆಯನ್ನು ಕೊಟ್ಟು ಮಾಡಿ ತೋರಿಸು. ನನ್ನ ಮತ್ತು ನಿನ್ನ ಮಹಿಮೆಗೆ ಇದೇ ದೃಷ್ಟಾಂತ'ವೆಂದು ಕೆಟ್ಟ ಮಂತ್ರ ತಂತ್ರದಲ್ಲಿ ನಿಪುಣರಾದ ಜೈನ ಸಂನ್ಯಾಸಿಗಳು ನುಡಿಯಲಾಗಿ ಬೊಮ್ಮಿದೇವನು ಅವರ ಮಾತಿಗೆ ಪ್ರತಿಯಾಗಿ,

---

[1] ಬಾ(ಜ) [2] × (ಅ) [3] ದಂ(ಜ, ಮು, ಚ)

ಪಸಿದಿರ್ದುಂ ಪಣ್ಗಳಿಂ ತಾಂ ಪಸಿವನುಡು[1]ಗಿಕುಂ ಪ್ರಾಣಿವರ್ಗಕ್ಕೆ ನಿಚ್ಚಂ
ಬಿಸಿಲೊಳ್ತಾನಿರ್ದುಮನ್ಯರ್ಬರೆ ಬಳಿನೆಳಲಂ ಸಾರ್ಚುಗುಂ ನಿರ್ನಿರಂ ಪ
ಕ್ಷಿಸಹಸ್ರಾಲಂಬನಂ ತಾನೆನಿಕುಮಿದನದೆಂತುಂ ಸುಡಲ್ತಕ್ಕುದೇ ಭ
ಕ್ತಸಮೂಹಕ್ಕಿಂದು ನೀವೇ ಸುಡೆ ಪಡೆದಪೆನೀಯಾಲಮಂ ಲೀಲೆಯಿಂದಂ ೩

ಎನೆ ಕೇಳ್ದು ಜೈನರಾಗಳ್ಗಳಪುತಣಕವಾತಂ ತಪೋವಹ್ನಿಯಿಂ ಭೋಂ
ಕನೆ ಸುಟ್ಟುರ್ಭಸ್ಮಮಪ್ಪಂತಿರೆ ವಟತರುವಂ ಕಂಡು ಸದ್ಭಸ್ಮಸಂಜೀ
ವನಮಂ ತಾಂ ಸೂಸುತುಂ ಪುಟ್ಟಿಸುತೆ ಜಯಿಸಿ ತಜ್ಜೈನರಂ ಭಂಜಿಸುತ್ತುಂ
ಜಿನಗೇಹವ್ರಾತಮಂ ಕಿಳ್ತಿಡಿಸಿ ಮಱೆಯನೇ ಶೌರ್ಯಮಂ ಬೊಮ್ಮಿದೇವಂ ೪

ಪೊಟ್ಟಳಕೆಱೆವೆಸರೊಪ್ಪುವ
ಪಟ್ಟಣದರಸಂ ಯಶಸ್ವಿ ಜಿನಧರ್ಮಪರಂ
ದಿಟ್ಟಂ ರಿಪುಗೋಧೂಮಘ
ರಟ್ಟಂ ಜಯಸಿಂಹನೆಂಬನವನೀಪಾಲಂ ೫

ಕ್ಷಿತಿಯೊಳೊಪ್ಪುವ ತನ್ನೃಪಾಲನ ದೇಶಿಕಂ ಜಿನಭಕ್ತನಾ
ನುತಪುರಾಂತರದೊಳ್ವಿರಾಜಿಪನುದ್ಧವಾದವಿಚಕ್ಷಣಂ

೩. 'ತಾನು ಹಸಿದು ನಿಂತು ಅನ್ಯರಿಗೆ ತನ್ನ ಹಣ್ಣುಗಳಿಂದ ಪ್ರಾಣಿಗಳ ಸಮೂಹಕ್ಕೆ ಹಸಿವನ್ನು ದೂರ ಮಾಡುವುದು. ನಿತ್ಯವೂ ತಾನು ಬಿಸಿಲಲ್ಲಿ ನಿಂತಿದ್ದು ಅನ್ಯರು ಹತ್ತಿರಕ್ಕೆ ಬಂದರೆ ಅವರಿಗೆ ನೆಳಲನ್ನು ನೀಡುವುದು. ನಿರ್ನಿಮಿತ್ತವಾಗಿ ಸಹಸ್ರ ಸಹಸ್ರ ಸಂಖ್ಯೆಯ ಪಕ್ಷಿಗಳಿಗೆ ಆಶ್ರಯವನ್ನು ಕೊಡುವಂತಹುದು. ಶಿವಭಕ್ತ ಸಮೂಹವು ಇಂಥ ಮರವನ್ನು ಸುಡುವುದು ತಕ್ಕದ್ದಲ್ಲ. ಈಗ ನೀವೇ ಸುಟ್ಟು ಹಾಕಿರಿ; ನಾನು ಲೀಲೆಯಿಂದ ಈ ಆಲವನ್ನು ಪಡೆಯುತ್ತೇನೆ.' ೪. ಹೀಗೆಂದು ಆ ಕೋವೂರ ಬೊಮ್ಮಯ್ಯನು ಅನ್ನಲು, ಆಗ ಜೈನರು ಅಣಕದ ವ್ಯರ್ಥ ಮಾತುಗಳನ್ನಾಡಿ, ಒಮ್ಮೆಲೇ ಆ ಆಲದ ಮರವು ಬೂದಿಯಾಗುವಂತೆ ಸುಟ್ಟು ಹಾಕಿದರು. ಅದನ್ನು ಕಂಡು ಬೊಮ್ಮಯ್ಯನು ಶ್ರೇಷ್ಠವಾದ ಭಸ್ಮವನ್ನು ಚಿಮುಕಿಸಿ ಅದಕ್ಕೆ ಜೀವವನ್ನು ಉಂಟು ಮಾಡಿ ಪುನಃ ಹುಟ್ಟಿಸಿದನು. (ಹೀಗೆ) ಆ ಜೈನರನ್ನು ಜಯಿಸಿ, ನಾಶಮಾಡಿ ಜಿನ ಮಂದಿರಗಳನ್ನು ಕಿತ್ತು ಬಿಸಾಡಿ ತನ್ನ ಶೌರ್ಯವನ್ನು ಮೆರೆಯಲಿಲ್ಲವೇ? ೫. 'ಪೊಟ್ಟಲ ಕೆರೆ' ಎಂಬ ಹೆಸರಿನಿಂದ ಶೋಭಿಸುವ ಪಟ್ಟಣದ ಅರಸನಾದ ಜಯಸಿಂಹನೆಂಬ ಭೂಪಾಲನು ಯಶಸ್ವಿಯು, ಜೈನ ಧರ್ಮಪರನು, ಧೈರ್ಯಶಾಲಿಯು, ವೈರಿಗಳೆಂಬ ಗೋಧಿಯ ಕಾಳುಗಳಿಗೆ ಬೀಸುವ ಕಲ್ಲಿನಂತಿರುವವನು, ಎನಿಸಿದ್ದನು. ೬. ಭೂಮಂಡಲದಲ್ಲಿ ಶೋಭಿಸುವ ಆ ಅರಸನ ಗುರುವು ಜಿನ ಭಕ್ತನೂ, ಪ್ರಶಸ್ತವಾದ ಶಾಸ್ತ್ರವಾದದಲ್ಲಿ ಕುಶಲನೂ

1 ಡಿ(ಅ, ಮು, ಜ)

ಕೃತಕಶಾಸ್ತ್ರಧುರಂಧರಂ ಸಲೆ ಪುಷ್ಪಸೇನಕನೊಲ್ದು ವಿಂ
ಶತಿಸಹಸ್ರ ಸಮಾನ ಶಿಷ್ಯಸಮೇತನುದ್ಧತವೃತ್ತಿಯಿಂ ೬

ವ॥ ಆ ಪುಷ್ಪಸೇನಪಂಡಿತನಾ ಪೊಳಲ ಮನುಜರ್ಗೆ ಜಿನಧರ್ಮಮಂ ಬೋಧಿಸುತ್ತು ಮವರಂ ಜಿನಭಕ್ತರಂ ಮಾಡುತ್ತುಂ ನೆಗಳ್ತೆವೆತ್ತಿರೆ ಜಯಸಿಂಹನೃಪನರಸಿ ಸೃಗ್ವಲೆದೇವಿಯೆಂಬವಳ್ ತಾಂ ಶಿವಭಕ್ತೆಯಪ್ಪುದಱಿನದಂ ಸೈರಿಸಲಾಱದೆ ತನ್ಮದಮನಳಿ[1]ಸಲೆಳಸಿ ನಿಜಗುರುವಪ್ಪ ದಾಸಿಮಯ್ಯನಂ ಶರಣಗಣಪರಿವೃತನನಾಪ್ತಜನದಿಂ ಭಕ್ತಿವಿಜ್ಞಾಪನ ಪೂರ್ವಕಂ ಬರಿಸಿ ತನ್ನರಮನೆಗೆ ಬಿಜಯಂಗೆಯ್ಸಿ ಸಾಷ್ಟಾಂಗವೆಱಗಿ ಕೇಳೀವನದ ಮಣಿಮಾಡಮಂ ಬೀಡುದಾಣಂಗೆಯ್ದಿರಿಸಿ ಸಮುಚಿತ ಸಾಮಗ್ರಿಗಳಂ ನಿಯೋಜಿಸಿ ಸಂತಸಂ ಬಡೆದಿರ್ದಳದಂ ಕಂಡಾ ಜಿನಮುನಿಗಳ್ನೃಪನರಸನೆಡೆಗೇಳ್ತಂದು—

ನಿನ್ನ ವಲ್ಲಭೆ ಶೈವನೊರ್ವನನೀದು ಮದ್ಗುರುವೆಂದು ಮೇ
ಲನ್ನಿರೀಕ್ಷಿಸದಿಲ್ಲಿಗೆಯ್ದಿಸಿ ಪೂಜೆಗೆಯ್ದಪಳಿತಿಂದೊಂ
ದನ್ಯಯಂ ಜಿನಶುದ್ಧಧರ್ಮವಿರುದ್ಧಮಾತನನೀಗಳಿ
ಲ್ಲಿನ್ನಿವಾರಿಪುದೆಂದೊಡಂಬಡೆ ಪೇಳೆ ಕೇಳ್ದು ನರೇಶ್ವರಂ ೭

ಅಂತವುರಕೆಯ್ದಿ ತನ್ನಯ
ಕಾಂತೆಯನೇಕಾಂತದೆಡೆಗೆ ಕರೆದೆಂದಂ ಭೂ

ಕೃತಕಗಳಾದ ಶಾಸ್ತ್ರಗಳಲ್ಲಿ ಸಮರ್ಥನೂ ಎನಿಸಿದ 'ಪುಷ್ಪ ಸೇನಕ'ನೆಂಬ ಹೆಸರಿನವನು, ಅವನು ತನಗೆ ಸಮಾನರಾದ ಇಪ್ಪತ್ತು ಸಾವಿರ ಶಿಷ್ಯರಿಂದ ಕೂಡಿ ಗರ್ವದ ನಡೆವಳಿಕೆಯಿಂದ ಆ ಪಟ್ಟಣದಲ್ಲಿ ಶೋಭಿಸುತ್ತಿದ್ದನು. ವ॥ ಇಂಥ ಪುಷ್ಪಸೇನನೆಂಬ ಪಂಡಿತನು ಆ ಪಟ್ಟಣದ ಜನರಿಗೆ ಜೈನಧರ್ಮವನ್ನು ಬೋಧಿಸುತ್ತ ಅವರನ್ನು ಜೈನರನ್ನಾಗಿ ಮಾಡುತ್ತ ಪ್ರಖ್ಯಾತನಾಗಿರಲು, ಜಯಸಿಂಹ ಮಹಾರಾಜನ ಹೆಂಡತಿಯಾದ 'ಸೃಗ್ವಲೆ ದೇವಿ' (ಸುಗ್ಗಲಾ ದೇವಿ) ಯೆಂಬುವವಳು ತಾನು ಶಿವಭಕ್ತೆಯಾದುದರಿಂದ ಅದನ್ನು ಸೈರಿಸಲಾರದೆ, ಆತನ ಆ ಮದವನ್ನು ನಾಶಮಾಡಬೇಕೆಂದು ಅಪೇಕ್ಷಿಸಿ ಶರಣ ಸಮೂಹದಿಂದ ಸುತ್ತುವರಿಯಲ್ಪಟ್ಟ ತನ್ನ ಗುರುವಾದ ದಾಸಿಮಯ್ಯನನ್ನು ಆಪ್ತರಾದವರ ಮೂಲಕ ಭಕ್ತ ವಿಜ್ಞಾಪನಾ ಪೂರ್ವಕವಾಗಿ ತನ್ನ ಅರಮನೆಗೆ ಬರಮಾಡಿಕೊಂಡಳು. ದಯಮಾಡಿಸಿದ ಅವರಿಗೆ ಸಾಷ್ಟಾಂಗ ಪೂರ್ವಕ ನಮಸ್ಕಾರ ಮಾಡಿ ಉಪವನದಲ್ಲಿರುವ ರತ್ನ ನಿರ್ಮಿತವಾದ ಮನೆಯನ್ನು ಅವರ ಬಿಡಾರಕ್ಕೆ ಸಜ್ಜುಗೊಳಿಸಿ ಅಲ್ಲಿರಿಸಿದಳು. ಅವರಿಗೆ ಬೇಕಾಗುವ ಸಾಮಗ್ರಿಗಳನ್ನೆಲ್ಲ ಸಜ್ಜುಗೊಳಿಸಿ ಸಂತೋಷಗೊಂಡಳು. ಅದನ್ನು ಕಂಡ ಆ ಜೈನ ಸನ್ಯಾಸಿಗಳು ಕೋಪಗೊಂಡು ಅರಸನ ಹತ್ತಿರಕ್ಕೆ ಬಂದು ೭–೮. 'ಮಹಾರಾಜಾ, ನಿನ್ನ ಪತ್ನಿಯು ಓರ್ವ ಶೈವನನ್ನು ಈ ದಿವಸ ತನ್ನ ಗುರುವೆಂದು ಮುಂದಾಲೋಚನೆ ಮಾಡದೆ ಇಲ್ಲಿಗೆ ಬರಮಾಡಿಕೊಂಡು, ಪೂಜೆ ಮಾಡುತ್ತಿದ್ದಾಳೆ. ಇದೊಂದು ಅನ್ಯಾಯದ ವಿಚಾರ. ಜೈನರ ಶುದ್ಧ ಧರ್ಮಕ್ಕೆ ವಿರೋಧಿಯಾದ ಆತ

1 ಳ್ಗ(ಮು)

ಕಾಂತನೆಲೆ ರಮಣಿಯೆನ್ನಿರ
ವಂ ತಿಳಿಯದೆ ಶೈವನಂಘ್ರಿಯಂ ಪೂಜಿಪುದೇ ೮

ಸತಿಗಂ ಪತಿಗಂ ಗುರುವುಂ
ಮತದೈವಮುಮೆಂಬಿವಬಲೆ ಪೆಱತೊಳವೆ ವಲಂ
ಪತಿಯೇವ ಗುರುವೆನುತ್ತಿರೆ
ಹಿತೋಕ್ತಿ ನೀನನ್ಯಗುರುವನಾರಾಧಿಪುದೇ ೯

ಇದನಱಿದೊಡೆ ವಿಪರೀತಮ
ನೊದವಿಸದಿರರೆಮ್ಮ ಜಿನತಪಸ್ವಿಗಳದಱಿಂ
ಸುದತಿ ಭವದ್ಗುರುವಂ ತ
ಳ್ವದೆ ಕಳುಪೆನೆ ಕಾಂತೆ ಕೇಳ್ದು ಕತಿಗೊಳುತೆಂದಳ್ ೧೦

ಮತಿ ಮಿಗೆ ಸತಿಗಂ ಪತಿಗಂ
ಮತಮದು ಬೇಱಿಲ್ಲಮೆಂದು ನುಡಿದಪೆ ನಯಮಂ
ನುತ ಗುರುಗಂ ಶಿಷ್ಯರ್ಗಂ
ಮತಮದು ಪೆಱತುಂಟೆ ಧರ್ಮಶಾಸ್ತ್ರಕ್ರಮದೊಳ್ ೧೧

ಇಡಿದಖಿಳಾವನೀತಳದೊಳುರ್ಬಿದ ಪರ್ಬಿದ ಮರ್ಬಿನೇಳ್ಗೆಯಂ
ಕಿಡಿಸಲೆ ಬಂದ ತಿಗ್ಮರುಚಿ ಸುಮ್ಮನೆ ಪೋಪನೆ ಮಿಕ್ಕ ಸೊರ್ಕಿನು

ನನ್ನು ಈಗಲೇ ಇಲ್ಲಿಂದ ಹೊರ ಹೊರಡಿಸಬೇಕು, ಎಂದು ಒಪ್ಪುವಂತೆ ಹೇಳಿದರು. ಈ ಮಾತನ್ನು ಆ ಜಯಸಿಂಹ ಭೂಪಾಲನು ಕೇಳಿ, ತನ್ನ ಅಂತಃಪುರಕ್ಕೆ ಬಂದನು. ತನ್ನ ಪತ್ನಿಯಾದ ಸುಗ್ಗಲೆ ದೇವಿಯನ್ನು ಏಕಾಂತ ಸ್ಥಳಕ್ಕೆ ಕರೆದು ಆ ಭೂಮೀಶ್ವರನು 'ಎಲೈ ಪತ್ನಿಯೇ, ನನ್ನ ಜೈನ ಧರ್ಮಾಚರಣೆಯ ರೀತಿಯನ್ನು ತಿಳಿಯದೆ ಶೈವನ ಪಾದಗಳನ್ನು ನೀನು ಪೂಜಿಸುವುದೇ? ಎಂದನು. ೯. 'ಎಲೈ ಅಬಲೆಯೇ, ಹೆಂಡತಿಗೂ ಗಂಡನಿಗೂ ಗುರು ಮತ್ತು ಮತದ ದೇವತೆಗಳು ಎಂಬ ಇವುಗಳು ನಿಜವಾಗಿ ಬೇರೆ ಬೇರೆ ಇರುವುದುಂಟೆ? ಪತಿಯೇ ಗುರುವೆಂದು ಹಿತವಚನಗಳು ನುಡಿಯುತ್ತಿರುವಾಗ ನೀನು ಅನ್ಯಗುರುವನ್ನು ಆರಾಧನೆ ಮಾಡುವುದೇ? ೧೦. 'ನಮ್ಮ ಜೈನ ತಪಸ್ವಿಗಳು ಇದನ್ನು ತಿಳಿದರೆ ವಿಪರೀತವನ್ನುಂಟು ಮಾಡದೇ ಇರುವುದಿಲ್ಲ. ಆದ್ದರಿಂದ ಎಲೈ ಸುಂದರಿಯೇ, ನಿನ್ನ ಗುರುವನ್ನು ತಡಮಾಡದೆ ಇಲ್ಲಿಂದ ಕಳುಹಿಸಿ ಬಿಡು' ಎನ್ನಲು ಆ ಧರ್ಮ ಪತ್ನಿಯು ಕೇಳಿ, ಕೋಪಗೊಂಡು ಹೀಗೆ ನುಡಿದಳು: ೧೧. '(ಮಹಾರಾಜಾ) ಬಲು ಬುದ್ಧಿವಂತಿಕೆಯಿಂದ ಸತಿಗೂ ಪತಿಗೂ ಮತವೆಂಬುದು ಬೇರೆ ಇಲ್ಲವೆಂದು ನೀತಿಯನ್ನು ನುಡಿಯುತ್ತಿರುವೆ. ಶ್ರೇಷ್ಠರಾದ ಗುರುವಿಗೂ ಶಿಷ್ಯರಿಗೂ ಧರ್ಮಶಾಸ್ತ್ರ ರೀತ್ಯಾ ಆ ಮತವೆಂಬುದು ಬೇರೆ ಇರುವುದುಂಟೇ?' ೧೨. 'ಸಮಸ್ತ ಭೂಮಿಯನ್ನು ತುಂಬಿಕೊಂಡು ಹೆಚ್ಚುಗೊಂಡು ಹಬ್ಬುತ್ತಿರುವ ಕತ್ತಲೆಯ ಅತಿಶಯವನ್ನು ಹೋಗಲಾಡಿಸಲಿಕ್ಕೆ ಬಂದ ಸೂರ್ಯನು ಸುಮ್ಮನೆ ಹೋಗುವನೇ? ಮಿಗಿಲಾದ ಸೊಕ್ಕಿನಿಂದ

ಕರ್ಡುಗದ ಜೈನತಾಪಸರ ದುರ್ಮದಮಂ ಮುಱಿದಿಕ್ಕಲೆಂದು ಬಂ
ದೆಡೆಯೊಳದೆಂತು ಸುಮ್ಮನೆ ಜಗದ್ಗುರು ಮದ್ಗುರು ಪೋಗಲಾರ್ಪನೊ[1] ೧೨

ಇನರುಚಿಯಂ ಮುಸುಂಕುತಳಿಮಿಂಚಿನ ಮಿಂಚನೆ ತೋರ್ಪ ಮೇಘಮಂ
ಘನಪವನಂ ಪಳಂಚಿ ಕಿಲನೂಂಕಿ ರವಿದ್ಯುತಿದೋರ್ಪವೋಲ್ಮಹೇ
ಶನ ಮತದೇಳ್ಗೆಯುಂ ಮುಱಿಸುತಾತ್ಮಮತಸ್ಥಿತಿದೋರ್ಪ ನಿನ್ನ ನ
ಚ್ಚಿನ ಜಿನವರ್ಗಮಂ ತವಿಸಿ ಮದ್ಗುರು ತನ್ಮತದೇಳ್ಗೆದೋಱುಮಂ ೧೩

ನಿನಗೆ ಹಿತೋಪದೇಶಮಿದು ಕೇಳ್ ನೃಪ ಮದ್ಗುರುಸನ್ನಿಧಾನಕಾ
ಜಿನಮುನಿಬೃಂದಮಂ ಬರಿಸು ಮಾಡಿಸು ವಾದಮನಾಗಮೌಘಶಾ
ಸ್ತ್ರನಿವಹಸತ್ಪ್ರಮಾಣದೊಳೆ ಮದ್ಗುರು ಗೆಲ್ದೊಡೆ ತತ್ಪದಾಬ್ಜಮಂ
ಮನದೊಲವಿಂದೆ ನೀಂ ಪಿಡಿದು ಶೈವಮತಸ್ಥಿತನಾಗು ಬೇಗದಿಂ ೧೪

ಇನಿತನನುಕರಿಸೆ ಮತಮೊಂ
ದನುಮಕ್ಕುಂ ನಿನಗಮೆನಗಮಂತಲ್ಲದೊಡಂ

ಕೂಡಿ ಗರ್ವನಾಶವಾಗದಿರುವ ಜೈನ ತಪಸ್ವಿಗಳ ದುಷ್ಟ ಮದವನ್ನು ಮುರಿದು ಹಾಕಲಿಕ್ಕೆ ಬಂದು (ಆ ಕಾರ್ಯವನ್ನು ಪೂರೈಸದೆ) ಮಧ್ಯದಲ್ಲಿಯೇ ನನ್ನ ಗುರುವೂ, ಜಗದ್ಗುರುವೂ ಆದ ಆ ದಾಸಿಮಯ್ಯನು ಅದು ಹೇಗೆ ಸುಮ್ಮನೆ ಹೋಗಲಿಕ್ಕೆ ಸಾಧ್ಯನಾದನು?' ೧೩. 'ಸೂರ್ಯ ಕಿರಣಗಳನ್ನು ಮುತ್ತಿ ಕ್ಷಣಿಕವಾದ ಮಿಂಚಿನ ಹೊಳಪನ್ನು ತೋರಿಸುವ ಮೇಘವನ್ನು ಭಯಂಕರವಾದ ಗಾಳಿಯು ಅಪ್ಪಳಿಸಿ ಪಕ್ಕಕ್ಕೆ ತಳ್ಳಿ ಸೂರ್ಯ ಪ್ರಕಾಶವನ್ನು ತೋರಿಸುವಂತೆ ಶಿವಸಂಬಂಧವಾದ ಮತದ ಏಳಿಗೆಯನ್ನು ಮರೆ ಮಾಡುತ್ತ ತಮ್ಮ ಜೈನ ಮತದ ಸ್ಥಿತಿಯನ್ನು (ಏಳಿಗೆಯನ್ನು) ತೋರಿಸುವ ನಿನ್ನ ಪ್ರೀತಿಯ ಜೈನರ ಗರ್ವವನ್ನು ಹೋಗಲಾಡಿಸುತ್ತ ನನ್ನ ಗುರುವಾದ ದಾಸಿಮಯ್ಯನವರು ಆ ವೀರಶೈವ ಮತದ ಹೆಚ್ಚಳವನ್ನು ತೋರಿಸುವನು.' ೧೪. 'ಮಹಾರಾಜನೇ, ನಾನು ಹೇಳುವ ಈ ಮಾತುಗಳು ನಿನಗೆ ಹಿತೋಪದೇಶಗಳು. ಇವನ್ನು ಕೇಳು, ನನ್ನ ಗುರುವಾದ ದಾಸಿಮಾರ್ಯರ ಸನ್ನಿಧಾನಕ್ಕೆ ಆ ಜೈನ ಮುನಿಗಳ ಸಮೂಹವನ್ನು ಬರಮಾಡು, ವಾದ ವಿವಾದಗಳನ್ನು ಆಗಮ ಸಮುದಾಯ ಶಾಸ್ತ್ರ ಸಮೂಹ ರೀತ್ಯಾ ಒಳ್ಳೆಯ ಆಧಾರ ಪೂರ್ವಕವಾಗಿ ನಡೆಯುವಂತೆ ಮಾಡಿಸು. ನನ್ನ ಗುರುವು ಗೆದ್ದರೆ ಅವನ ಪಾದಕಮಲಗಳನ್ನು ನೀನು ಮನಃ ಪೂರ್ವಕವಾಗಿ ಹಿಡಿದು ಬೇಗನೆ ವೀರಶೈವಮತ ಸ್ವೀಕರಿಸುವವನಾಗು.' ೧೫. 'ಇಷ್ಟನ್ನು ನೀನು ಅನುಸರಿಸಿದ್ದಾದರೆ ನಿನಗೂ ನನಗೂ ಮತವೆಂಬುದು ಒಂದಾಗುವುದು. ಹಾಗಲ್ಲದಿದ್ದರೆ ಅಂದು ನಡೆದ (ಹಿಂದೆ ಆದ) ಮದು

1 ನೆ(ದ, ಮ:, ಅ)

ದಿನ ಪರಿಣಯೋಕ್ತಿಯುಂ ನೀಂ
ನೆನೆದೆನ್ನಂ ಬಿಟ್ಟು ಕಳೆದು ನೆರೆದಿರು ಪೆಱಳೊ[1]ಳ್ ೧೫

ವ॥ ಎಂದಿನಿಯಳುಕ್ತಿಯುಂ ಮನದೆಗೊಂಡರಸನಲ್ಲಿಂದೆಳ್ದು ಸಭಾಸ್ಥಳಕ್ಕೆ ನಿಜಗುರುಗಳಂ ಬರಿಸಿ ತಾನುಮವರುಂ ಕುಳ್ಳಿರ್ಪಿನಮಾ ಸುಗ್ಗಲೆದೇವಿ ತದ್ದಕ್ಷಿಣಭಾಗದೊಳ್ ಕನಕಮಯ ಸಮುನ್ನತ ದಿವ್ಯಸಿಂಹಾಸನಮನಮರ್ಚಿ ದಾಸಿದೇವನಂ ಕೈಗೊಟ್ಟು ಬಿಜಯಂಗೆಯ್ಸಿ ಮೂರ್ತಿಗೊಳಿಸಿ ವಿದಗ್ಧ ಸಖೀಜನಸಮೇತಂ ತಚ್ಚರಣಕಮಳಮನೋಲಗಿಸುತ್ತುಮಿರ್ದಳಾ ಪ್ರಸ್ತಾವದೊಳಾ ಜಿನಮುನಿಗಳ್ತಮ್ಮ ಕುಹಕ ಮಂತ್ರ ತಂತ್ರ ಮಾಯಾವಿದ್ಯಾವಿಲಾಸ ವೈಚಿತ್ರ್ಯಗರ್ಭಿತ ವಚೋವೈಭವಂಗಳಿಂ ವಾದಮಂ ನೆಗಳಲೊಡನದೆಲ್ಲಮಂ ನಿಜಮಹತ್ವದಿಂ ಜಯಿಸಿ—

ವೇದಾಗಮ ಮೀಮಾಂಸಾ
ವೇದಾಂತ ಪುರಾಣ ತರ್ಕ ವೈಶೇಷಿಕ ಸಂ
ಪಾದಿತ ತತ್ವಾರ್ಥಮನಾ
ವಾದದೊಳವಲಂಬಿಸುತ್ತಮರ್ಗಿಂತೆಂದಂ ೧೬

ಸಕಳ ಜಗದಾದಿಕಾರಣ
ನಕಳಂಕಂ ರಾಮನಾಥನೊರ್ವನೆ ವಿಶ್ವಾ

ವೆಯ ಕಾಲದ (ಧರ್ಮ, ಅರ್ಥ, ಕಾಮಗಳಿಂದ ನಿನ್ನೊಡನಲ್ಲದೆ ಅತಿಕ್ರಮಿಸಿ ವ್ಯವಹರಿಸುವುದಿಲ್ಲ ಎಂಬ) ಮಾತನ್ನು ನೆನೆದುಕೊಂಡು ನನ್ನನ್ನು ಬಿಟ್ಟುಕೊಟ್ಟು ಬೇರೊಬ್ಬಳಲ್ಲಿ ಕೂಡಿಕೊಂಡಿರು.' ವ॥ ಹೀಗೆಂದ ಹೆಂಡತಿಯ ಮಾತನ್ನು ಮನಸ್ಸಿಗೆ ಹಾಕಿಕೊಂಡು ಮಹಾರಾಜನಾದ ಜಯಸಿಂಹನು ಅಲ್ಲಿಂದ ಎದ್ದು ಸಭಾ ಸ್ಥಳಕ್ಕೆ ತನ್ನ ಗುರುಗಳಾದ ಜೈನ ಸನ್ಯಾಸಿಗಳನ್ನು ಬರಮಾಡಿಕೊಂಡು. ತಾನೂ ಅವರೂ ಕುಳಿತುಕೊಂಡಿರುವಷ್ಟರಲ್ಲಿ ಸುಗ್ಗಲೆ ದೇವಿಯು ಮಹಾರಾಜನ ಬಲಗಡೆಯ ಭಾಗದಲ್ಲಿ ಸುವರ್ಣ ನಿರ್ಮಿತವಾದ ಎತ್ತರದ ದಿವ್ಯವಾದ ಸಿಂಹಾಸನವನ್ನು ಹಾಕಿಸಿ, ದಾಸಿಮಾರ್ಯ ದೇವನನ್ನು ಕೈಹಿಡಿದು ಕರೆದುಕೊಂಡು ಬಂದು ಅದರ ಮೇಲೆ ಕುಳ್ಳಿರಿಸಿ, ಪ್ರೌಢೆಯರಾದ ಸಖೀಜನರುಗಳು ಸಮೇತವಾಗಿ ಅವರ ಚರಣ ಕಮಲಗಳ ಸೇವೆಯನ್ನು ಮಾಡುತ್ತಿದ್ದಳು. ಆ ಸಮಯದಲ್ಲಿ ಆ ಜೈನ ಸನ್ಯಾಸಿಗಳು ತಮ್ಮ ತಮ್ಮ ಕುಹಕ ಮಂತ್ರ, ತಂತ್ರ, ಮಾಯಾ ವಿಲಾಸಗಳ ವಿಚಿತ್ರಗಳಿಂದ ತುಂಬಿದ ಮಾತಿನ ಆಡಂಬರದಿಂದ ವಾದವನ್ನು ಮಾಡತೊಡಗಲು ಕೂಡಲೇ ಅವರ ವಾದವನ್ನೆಲ್ಲ ತನ್ನ ಮಹಾತ್ಮೆಯಿಂದ ಜಯಿಸಿ ೧೬. ವೇದ ಆಗಮ, ಮೀಮಾಂಸೆ, ಉಪನಿಷತ್ತು, ಪುರಾಣ, ತರ್ಕ, (ನ್ಯಾಯ), ವೈಶೇಷಿಕಗಳೇ ಮೊದಲಾದವುಗಳಿಂದ ತಾನು ಸಂಪಾದಿಸಿದ ತತ್ತ್ವಾರ್ಥಗಳನ್ನೆಲ್ಲ ತನ್ನ ವಾದದಲ್ಲಿ ಮಂಡಿಸುತ್ತ ಅವರಿಗೆ ಹೀಗೆ ಹೇಳಿದನು. ೧೭–೧೮–೧೯. 'ಸಮಸ್ತ ಜಗತ್ತಿಗೆ ಮೂಲ

1 ರೊ(ಅ, ಚ, ಗ)

ಧಿಕನದ್ವಿತೀಯನೆಂಬುದೆ
ಸುಕರಾರ್ಥವಿವಂಗೆ ಸರಿ ಮಿಗಿಲ್ವೆಜರಿಲ್ಲಂ ೧೭

ಸರ್ವಂ ಲಿಂಗದ ಮಧ್ಯದೊಳ್ ನೆಲಸಿ ತೋರ್ಕುಂ ಲಿಂಗಮಧ್ಯೇ ಜಗತ್
ಸರ್ವಂ ಪೂರ್ವಜವಾಕ್ಯ ನಿಶ್ಚಿತಮಿದೇಕೋ ರುದ್ರ ಮುಖ್ಯಾಗಮಾ
ಖರ್ವೋಕ್ತಿಪ್ರಥಿತಂ ದಲೊರ್ವನೆ ಶಿವಂ ಕರ್ತಾರನೆಂಬರ್ಥಮಿಂ
ತರ್ವಾಚೀನಪದಂ ಯಥಾ ಮುಖವಚಸ್ಸಿದ್ಧಂ ಮಹಾದೇವನಾ[1] ೧೮

ಪರಿಪೂರ್ಣತೆಯುಮನಭವನ
ನಿರತಿಶಯೈಶ್ವರ್ಯಮಂ ನಿರರ್ಗಳಮಹಿಮಾ
ಕರತೆಯುನೊರೆಯೊರೆದುಜಿತ್ ಬಿ
ತ್ತರಿಪುದು ನಿಗಮಾಂತಚಯಮುಮಾಗಮತತಿಯುಂ ೧೯

ವ॥ ಎಂದಿಂತು ನಿಖಿಳ ಪುರಾಣೋಪಬೃಂಹಿತೋಪನಿಷದಾದಿವಚನನಿಚಯದಿಂ ಸಹಜ ಶಿವಾಧಿಕ್ಯಸ್ಥಾಪನಂಗೆಯ್ದು ವಾದಿಜನಮದಭಂಜನಂ ಲಿಂಗಬಾಹ್ಯಾತ್ ಪರಂ ನಾಸ್ತಿಯೆಂಬುದಱಿಂ

ಕಾರಣನೂ, ಕಳಂಕರಹಿತನೂ ಆದ ರಾಮನಾಥನೊಬ್ಬನೇ ವಿಶ್ವಕ್ಕೆ ಅಧಿಕನಾದವನು; ಅವನು ಅದ್ವಿತೀಯನೆನ್ನುವುದೇ ಸಮೀಚೀನವಾದ ಅರ್ಥವಾಗಿದೆ. ಇವನಿಗೆ ಸರಿಮಿಗಿಲಾದವರು ಬೇರೆ ಯಾರೂ ಇಲ್ಲ. ಈ ಸಮಸ್ತ ಬ್ರಹ್ಮಾಂಡವೂ ಲಿಂಗ ಮಧ್ಯದಲ್ಲಿಯೇ ನೆಲಸಿ ತೋರಿಕೆಗೆ ಒಳಗಾಗಿದೆ. (ಎಂಬ ಅರ್ಥದ) 'ಲಿಂಗ ಮಧ್ಯೇಜಗತ್ ಸರ್ವಂ' ಎಂಬ ಪೂರ್ವದವರ ಮಾತು ಸತ್ಯವಾದದ್ದು. ಇದೋ ಕೇಳು: ರುದ್ರನೊಬ್ಬನೇ ಪರಬ್ರಹ್ಮನು ಎಂಬುವೇ ಮೊದಲಾದ ಶ್ರುತಿ ಸಮ್ಮತವಾದ ಮಾತಿನಿಂದ ಪ್ರಸಿದ್ಧವಾದುದದಲ್ಲವೇ? ಶಿವನು ಸಮಸ್ತ ಬ್ರಹ್ಮಾಂಡದ ಕರ್ತಾರನು ಎಂಬ ಅರ್ವಾಚೀನ ಪದವು ಆ ಮಹಾದೇವನ ಮುಖದಿಂದ ತನ್ನಿಷ್ಟಕ್ಕೆ ತಾನೆ ಹೊರ ಹೊರಟು ಬಂದ ಆಗಮ ಪ್ರಮಾಣದಿಂದ ಸಿದ್ಧವಾದುದೆನಿಸಿದೆ. ವೇದಾಂತ (ಉಪನಿಷತ್) ಸಮೂಹವೂ, ಆಗಮ ಸಮೂಹವೂ, ಪರಮಾತ್ಮನ (ಪರಶಿವನ) ಪರಿಪೂರ್ಣತೆಯನ್ನೂ (ಅಂದರೆ ಸರ್ವ ಬ್ರಹ್ಮಾಂಡದಲ್ಲಿ ತುಂಬಿರುವಿಕೆಯನ್ನೂ), ಪರಿಪೂರ್ಣವಾದ ಐಶ್ವರ್ಯವನ್ನೂ, ತಡೆಯಿಲ್ಲದ ಮಹಿಮೆಗೆ ಆಧಾರವಾಗಿರುವಿಕೆಯನ್ನೂ, ಹೆಚ್ಚಾಗಿ ಹೇಳಿ ಹೇಳಿ ಪ್ರಕಟಪಡಿಸುತ್ತಿವೆ.' ವ॥ ಈ ರೀತಿಯ ಸಮಸ್ತ ಉಪನಿಷತ್ ವಚನಗಳಿಗೆ ಟೀಕೆಗಳ ರೂಪದಲ್ಲಿರುವ ಪುರಾಣ ವಾಕ್ಯಗಳ ಸಮೂಹದಿಂದ ಸಹಜವಾಗಿ ಶಿವನ ಆಧಿಕ್ಯವನ್ನು ಪ್ರತಿಷ್ಠಾಪಿಸಿ, ವಾದ ಮಾಡುವವರ ಮದವನ್ನು ಮುರಿದು ಲಿಂಗದಿಂದ ಹೊರಗೆ ಏನೂ ಇಲ್ಲ. (ಅಂದರೆ ಸಮಸ್ತ ಪ್ರಪಂಚವೆಲ್ಲ ಲಿಂಗದಲ್ಲಿಯೇ ಅಡಕಗೊಂಡಿದೆ) ಎಂಬುದರಿಂದ

---

1 ನಂ(ಅ)

**ಶಿವನೊರ್ವನೆ [1]ಸರ್ವ[1]ಪೂರ್ಣನಕ್ಕುಮಿದೆ ಸತ್ಯಮೆಂದು ವಿಜೃಂಭಿಸಿ ನುಡಿಯೆ ಶವಣರ್ ತಮ್ಮೊಳೋರೊರ್ವರ ಮುಖಮನೋರೊರ್ವರ್ ನೋಡಿ —**

ಎಲ್ಲಂ ಶಿವಮಯಮೆಂದಪೆ
ಸಲ್ಲದು ಭವದುಕ್ತಿಯಂತುಟಾದೊಡೆ ಗುಡಿಯಿ
ರ್ದಲ್ಲಿಗೆಡೆಯಾಡಲೇಕಿ
ರ್ದಲ್ಲಿಯೆ ಶಿವನಿರ್ಪ ಕತದಿನೆಱಗುಗೆ ಭಕ್ತಂ ೨೦

ಅಮಮ ಶಿವನೆಲ್ಲರಮರ್ದಂ
ಗಮೊ ಜೀವನೊ ಮಿಸುಗುವಾತ್ಮನೋ ಪೇಳಿದಱಂ
ದಮನೆನೆ ಪೂರ್ವಪ್ರಶ್ನೆಗೆ
ಸಮಸಂದುತ್ತರಮನೀವೆನಖಿಳಾವನಿಯಂ ೨೧

ನೃಪನಾವರಿಸಿರ್ದಪನೆನೆ
ನೃಪನಪ್ಪನೆ ಮಾಣದಲ್ಲಿ ವಿಪ್ರವ್ಯಾಧ
ಶ್ವಪಚಾದಿರೂಪನಾಜ್ಞಾ
ವ್ಯಪದೇಶಂಜೆತ್ತು ನೆಲನನಾವರಿಸಿರ್ಪಂ ೨೨

ಆ ಪರಿಯಿಂ ಶಂಭು ಜಗ
ದ್ವ್ಯಾಪಕನೆನಿಸಿರ್ಪನಲ್ತೆ ನಿಜಶಕ್ತಿಯಿನಾ

ಶಿವನೊಬ್ಬನೇ ಸರ್ವ ಪರಿಪೂರ್ಣನಿಸಿದ್ದಾನೆ. ಇದೇ ಸತ್ಯ ವಿಷಯವೆಂದು ಉತ್ಸಾಹಗೊಂಡು ನುಡಿಯಲಾಗಿ ಜೈನ ಸನ್ಯಾಸಿಗಳು ತಮ್ಮ ತಮ್ಮಲ್ಲಿಯೇ ಒಬ್ಬರ ಮುಖವನ್ನೊಬ್ಬರು ನೋಡುತ್ತ ೨೦. 'ಎಲ್ಲವೂ ಶಿವಮಯವೆಂದೆನ್ನುತ್ತಿದ್ದೀಯೆ ಅದು ಯೋಗ್ಯವಲ್ಲ. ನಿನ್ನ ಮಾತಿನಂತೆ ಎಲ್ಲವೂ ಶಿವಮಯವೇ ಆದದ್ದಾದರೆ ಗುಡಿಯಿದ್ದಲ್ಲಿಗೆ ಭಕ್ತನಾದವನು ಓಡಾಡುವುದೇತಕ್ಕೆ? ಇದ್ದಲ್ಲಿಯೇ ಶಿವನಿರುವುದರಿಂದ ಅಲ್ಲಿಯೇ ನಮಸ್ಕಾರ ಮಾಡಿದರೆ ಆಗುವುದಿಲ್ಲವೇ?' ೨೧–೨೨. ಅಬ್ಬಬ್ಬಾ! ಶಿವನೇ ಎಲ್ಲರಲ್ಲಿಯೂ ಸೇರಿದ ದೇಹಿಯೋ, ಜೀವನೋ, ಶೋಭಿಸುವ ಆತ್ಮನೋ ಇದರ ರೀತಿಯೇನು? ಹೇಳು.' ಎಂದರು. ಆಗ ಮೊದಲ ಪ್ರಶ್ನೆಗೆ ಸಮರ್ಪಕ ಉತ್ತರವನ್ನು ಹೇಳುತ್ತೇನೆ, (ಕೇಳು). ಸಮಸ್ತ ಭೂಮಿಯನ್ನು ಅರಸನು ಆವರಿಸಿದ್ದಾನೆಂದರೆ ಎಲ್ಲವೂ ಅರಸನೇ ಆಗುತ್ತಾನೆಯೇ ? ತಪ್ಪದೆ ಅಲ್ಲಿ ಬ್ರಾಹ್ಮಣ, ವ್ಯಾಧ, ಶ್ವಪಚರೇ ಆದಿಯಾಗಿ ಎಲ್ಲರಲ್ಲಿಯೂ ತನ್ನ ಆಜ್ಞೆಯ ನೆವವನ್ನು ಹೊಂದಿ ರಾಜನು ಭೂಮಂಡಲವನ್ನು ವ್ಯಾಪಿಸಿದ್ದಾನೆ (ಎಂಬುದು ಅದರ ಅರ್ಥವಾಗಿದೆ)' ೨೩. ಇದೇ ರೀತಿಯಲ್ಲಿ ಶಿವನು ಜಗತ್ತಿನ ತುಂಬೆಲ್ಲ ತನ್ನ ಶಕ್ತಿಯಿಂದ ವ್ಯಾಪಕನೆನಿಸಿದ್ದಾನಲ್ಲವೇ ? ಹೀಗೆ ವ್ಯಾಪಿಸಿ

1 ಸಕಲಪರಿ(ಚ)

ವ್ಯಾಪಿಸಿದ ಶಂಭು ಭುವನದ
ರೂಪವುನಾಳ್ದೆಸೆವನೆಂಬುದ[1]ಪಸಿದ್ಧಾಂತಂ ೨೩

ಘಟಜಲಬಿಂಬಿತ ರವಿ ತ
ದ್ಘಟಜಲಬಿಂಬಂಗಳಿಂದೆ ಪೆಜಿನಲ್ತೆ ವಲಂ
ಪಟುತನುಜೀವಾತ್ಮಾಂತರ
ಘಟಿತ ನಿಜಜ್ಯೋತಿ ಪರಶಿವಂ ಪರನಲ್ತೇ ೨೪

ಸರ್ವೋ ವೈ ರುದ್ರ ಎನು
ತ್ತುರ್ವುತೆ ವಿಶ್ವಾಧಿಕಃ ಪಶೂನಾಂ ಪತಿಯುಂ
ದೊರ್ವಂಗೆರಡುಂ ಬಗೆಯುಂ
ನಿರ್ವಚಿಪಾಗಮದ ನುಡಿಗಿದೇ ತಾತ್ಪರ್ಯಂ ೨೫

ಹರನೆ ಚರಾಚರಪ್ರಚಯರೂಪದೊಳೊಂದಿರೆ ಬೇಱೆ ಲಿಂಗಮುಂ
ದಿರಕೆಡೆಯಾಡಲೇಕೆನುತೆ ಮಾಡಿದ ಶಂಕೆಗೆ ಕೊಟ್ಟಪೆಂ ಸದು
ತ್ತರಮುನಶೇಷಲೋಕವಿಭುವಾದೊಡಮೊಂದೆಡೆಯಲ್ಲಿ ಸತ್ಕಳಾ
ಪರಿಣತಿವೆತ್ತು ಕಾಣಿಪನುಮಾಧಿಪನೆಂತೆನೆ ದೃಷ್ಟಮುರ್ವಿ[2]ಯೊಳ್ ೨೬

ಸುರಿಗುಂ ಸ್ವಾತಿಯ ವೃಷ್ಟಿಯೆಲ್ಲೆಡೆಯೊಳುಂ ಮುತ್ತಕ್ಕುಮೇ ಬಿಂದುಸಾ
ಗರತೀರಸ್ಥಿತಶುಕ್ತಿಯೊಳ್ಬಲಿದು ಮುತ್ತಾದಪ್ಪುದೆಂತಂತೆ ಶಂ

ಕೊಂಡಿರುವ ಶಂಭುವು (ಸಮಸ್ತ) ಭುವನದ ರೂಪವನ್ನು ಹೊಂದಿ ಶೋಭಿಸುತ್ತಿದ್ದಾನೆಂಬುದು ಸಿದ್ಧಾಂತಸಮ್ಮತವಲ್ಲ. ೨೪. ಕೊಡದಲ್ಲಿರುವ ನೀರಿನಲ್ಲಿ ಪ್ರತಿಬಿಂಬಿತವಾಗಿರುವ ಸೂರ್ಯನು ಆ ಘಟದ ನೀರಿನಲ್ಲಿರುವ ಬಿಂಬದಿಂದ ನಿಜವಾಗಿ ಬೇರೆಯೇ ಅಲ್ಲವೇ (ಇದರಂತೆ) ಚೈತನ್ಯಮಯ ದೇಹದಲ್ಲಿರುವ ಜೀವಾತ್ಮನ ಮಧ್ಯದಲ್ಲಿ ಬೆಸುಗೆಗೊಂಡ ಜ್ಯೋತಿಯಾಗಿ ಪರಶಿವನು ಬೇರೆಯಾಗಿಯೇ ಇದ್ದಾನಲ್ಲವೇ ? ೨೫. ಸರ್ವೋವೈರುದ್ರಃ ಎಂದರೆ ರುದ್ರನು ಸಕಲವಸ್ತು ಸ್ವರೂಪನಾದವನಲ್ಲವೇ ? ಎಂದು ಉಬ್ಬಿ ಹೇಳುತ್ತ–'ವಿಶ್ವಾಧಿಕಃ ಪಶೂನಾಂಪತಿಃ ' ಅಂದರೆ ವಿಷ್ಣು ಬ್ರಹ್ಮಾದಿ ಜೀವರುಗಳಿಗೆ ಪತಿಯಾದ ಶಿವನು ಪ್ರಪಂಚಕ್ಕಿಂತ ದೊಡ್ಡವನು. ಎಂದು ಎರಡು ಬಗೆಯಲ್ಲಿ ಹೇಳುತ್ತಿರುವ ಆಗಮದ ಮಾತಿಗೆ ಇದೇ ತಾತ್ಪರ್ಯ. [ಅಂದರೆ ಮೊದಲು ಸಕಲ ಜಗತ್ತಿನ ಸ್ವರೂಪನೂ ಆ ಶಿವನೇ ಆಗಿದ್ದಾನೆಂದು ಹೇಳಿ ಆಮೇಲೆ ಜಗತ್ತಿಗೆಲ್ಲಕ್ಕೂ ಅವನೇ ದೊಡ್ಡವನು ಎಂದು ಹೇಳುವುದರಿಂದ ಶಿವನು ಜಗತ್ತಿಗಿಂತ ಭಿನ್ನನಾದವನೆಂದು ಹೇಳಿದ್ದರಿಂದ ಈ ಎರಡು ಬಗೆಯ ಮಾತಿಗೆ ಇದೇ ತಾತ್ಪರ್ಯ ಎಂದು ಭಾವ] ೨೬–೨೭. ಇನ್ನು ಶಿವನೇ ಚರಾಚರ ಪ್ರಪಂಚರೂಪದಿಂದ ಕೂಡಿಕೊಂಡಿರುವಾಗ ಬೇರೆ ಶಿವಾಲಯಗಳಿಗೆ ಓಡಾಡುವುದೇಕೆಂದು ಮಾಡಿದ ನಿಮ್ಮ ಶಂಕೆಗೆ ಒಳ್ಳೆಯ

1 ದು(ಅ) 2 ಶಿ(ಚ)

ಕರತೇಜಂ ಜಗದಲ್ಲಿ ತುಂಬಿ ಮೆಱೆದಿರ್ಕುಂ ಮೇಣದಂತಾದೊಡಂ
ವರ ಲಿಂಗಾಮಳಭಕ್ತಸಂತತಿಯೊಳೊಪ್ಪಂಬೆತ್ತು ಕಣ್ಗೊಪ್ಪುಗುಂ ೨೭

ಹಿಮರುಚಿರೋಚಿಯೆಲ್ಲೆಡೆಯ ಕಲ್ಗಳೊಳಂ ಪುದಿದಿರ್ದೊಡಂ ಮೃಗಾಂ
ಕಮಣಿಯೆ ಮಾಣದೊಲ್ದೊಸರ್ಗುಮೀಶನ[1] ಸತ್ಕಳೆ ಸರ್ವಲೋಕಸಂ
ಕ್ರಮಣತೆವೆತ್ತೊಡಂ ಪರಮಭಕ್ತನ ಚಿತ್ತಮೆ ಸದ್ರಸಾರ್ದ್ರಭಾ
ವಮನೊಡನಾಳ್ಗುಮಲ್ಲದುಳಿದನ್ಯಶಿಲಾತ್ಮಚಯಕ್ಕಿದಕ್ಕುಮೇ ೨೮

ಇಂದುಗಿಂದುಕಾಂತಮಿಂದುಕಾಂತಕಿಂದು ಕೂರ್ಪವೋ
ಲಿಂದುಮೌಳಿಗೆಯ್ದೆ ಭಕ್ತನೆಯ್ದೆ ಭಕ್ತಿಶಾಲಿಗೊ
ಲ್ದಿಂದುಮೌಳಿ ಕೂರ್ಪನಾತ್ತಸಾರವಸ್ತುಗ
ಳ್ಗೊಂದೆ ಭಾವಮಕ್ಕುಮಲ್ಲದನ್ಯವಸ್ತುಗಪ್ಪುದೇ ೨೯

ಉತ್ತರವನ್ನು ಕೊಡುತ್ತಿದ್ದೇನೆ (ಕೇಳಿರಿ :). ಶಿವನು ಸಮಸ್ತ ಲೋಕದ ಪ್ರಭುವಾದರೂ ಒಂದು ಸ್ಥಳದಲ್ಲಿ (ತನ್ನ) ಶ್ರೇಷ್ಠವಾದ ತನ್ನ ಅಂಶದ (ಕಳೆಯ) ಪರಿಣತೆಯಿಂದ ಕೂಡಿ ಆ ಉಮಾಧವನು ಕಾಣಿಸಿಕೊಳ್ಳುತ್ತಾನೆ. ಅದಕ್ಕೆ ದೃಷ್ಟಾಂತವೇನೆಂದರೆ ಭೂಮಿಯ ಮೇಲೆ ಸ್ವಾತಿ ನಕ್ಷತ್ರದಲ್ಲಿ ಮಳೆಯು ಎಲ್ಲೆಲ್ಲೂ ಸುರಿಯುವುದಲ್ಲವೇ ? ಆ ಮಳೆಯ ಹನಿಯು ಸಮುದ್ರತೀರದಲ್ಲಿರುವ ಬಾಯ್ದೆರೆದ ಶುಕ್ತಿಯಲ್ಲಿ ಬಿದ್ದು ಒಲಿತು ಮುತ್ತಾಗುವುದಲ್ಲದೆ, ಎಲ್ಲ ಕಡೆಗೂ ಮುತ್ತಾಗುವುದೇ ? ಇದು ಹೇಗೋ ಹಾಗೆಯೇ ಶಂಕರನ ತೇಜಸ್ಸು ಜಗತ್ತಿನಲ್ಲೆಲ್ಲ ತುಂಬಿ ಪ್ರಕಾಶಿಸುತ್ತಿದೆ. ಹೀಗೆಂದು ಪ್ರಕಾಶಿಸುತ್ತಿದ್ದರೂ, ಶ್ರೇಷ್ಠವಾದ ಲಿಂಗಧಾರಣದಿಂದ ಪರಿಶುದ್ಧ ಭಕ್ತಿಜೀವನವನ್ನಾಚರಿಸುವ ಭಕ್ತ ಸಮೂಹದಲ್ಲಿ ಪ್ರಕಾಶಮಾನವಾಗಿ ಕಂಗೊಳಿಸುವುದು. ೨೮. ಚಂದ್ರಕಿರಣವು ಎಲ್ಲ ಕಡೆಗೂ ಇರುವ ಕಲ್ಲುಗಳಲ್ಲಿ ವ್ಯಾಪಿಸಿದರೂ ಕೂಡ, ಚಂದ್ರಕಾಂತ ಶಿಲೆ ಮಾತ್ರ ವೇ ತಪ್ಪದೆ ಒಲಿದು ಒಸರುವುದು. (ಇದರಂತೆ) ಈಶ್ವರನ ಶ್ರೇಷ್ಠಕಳೆಯು ಸಮಸ್ತ ಲೋಕದಲ್ಲಿ (ವ್ಯಾಪಿಸಿ) ಕೊಡಿಕೊಂಡಿದ್ದರೂ, ಶ್ರೇಷ್ಠ ಭಕ್ತನೆನಿಸಿರುವವನ ಚಿತ್ತವೇ ಪರಿಶುದ್ಧ ಶಿವನ ಅನುರಾಗವೆಂಬ ಜಲದಿಂದ ಆರ್ದ್ರಗೊಂಡದ್ದಾಗುವುದಲ್ಲದೆ ಉಳಿದ, ಕಲ್ಲಿನಂತಹ ಆತ್ಮವುಳ್ಳ ಜನರ ಸಮೂಹಕ್ಕೆ ದಕ್ಕುವ ಮಾತಲ್ಲ. ೨೯. ಚಂದ್ರನಿಗೆ ಚಂದ್ರಕಾಂತ ಶಿಲೆಯೂ, ಚಂದ್ರಕಾಂತ ಶಿಲೆಗೆ ಚಂದ್ರನೂ (ಪರಸ್ಪರ ಆಲಂಬನ ಭಾವ ದಿಂದ) ಪ್ರೀತಿ ತೋರಿಸುವ ಹಾಗೆ ಇಂದುಧರನಾದ ಶಿವನಿಗೆ ಚೆನ್ನಾಗಿ ಶಿವಭಕ್ತನೂ, ಶಿವಭಕ್ತನಿಗೆ ಒಲಿದು ಶಿವನೂ, ಪ್ರೀತಿಯನ್ನು (ಪರಸ್ಪರ) ತೋರಿಸುವರು. ಸಾರವತ್ತಾದ ಎರಡು ವಸ್ತುಗಳ ಭಾವವು ಒಂದೇ ಆಗುವುದು. (ಸಾರವತ್ತಾದ ಭಕ್ತನ ಆತ್ಮ, ಪರಿಪೂರ್ಣನಾದ ಶಿವನ ತೇಜ ಎರಡೂ ಒಂದೇ ಆಗುವುವು–ಎಂದು ಭಾವ) ಅಲ್ಲದೆ

1 ಲ(ಅ, ಚ, ದ)

ಭಕ್ತಾರ್ಥಂ ಶಿವಲೀಲೆ ಭಕ್ತನಿಜಭಾವಂ ಶಂಕರಾರ್ಥಂ ಲಸ
ದ್ಭಕ್ತೇಶರ್ಗೆ ಪರಸ್ಪರಾತಿಶಯ ಸೌಹಾರ್ದಂ ಜಗಂ ವರ್ಧಿಕುಂ
ಭಕ್ತೇಶದ್ವಯಸಾಮರಸ್ಯದೆ ಜಗದ್ವ್ಯಾಮುಖ್ಯಮಾಳ್ದಿರ್ವರುಂ
ಭಕ್ತೇಶರ್ಬೆರೆದೊಂದುಗೂಡಿ ಸಲೆ ಸತ್ಯಸ್ನೇಹದಿಂದೊಪ್ಪುವರ್ ೩೦

ಉಳಿದ ಮಳೆವನಿಯನುಳಿದೊಳ
ಕೊಳುತಿರ್ಕುಂ ಸ್ವಾತಿಯುದಕಮಂ ಶುಕ್ತಿ ನಿರಾ
ಕುಳಮನ್ಯರನುಳಿದಭವನ
ನೊಳಕೊಳ್ಗುಂ ಭಕ್ತಚಿತ್ತಮಾದಱಿಂತೆ ವಲಂ ೩೧

ಆಕಳ ಜೀವನಂ ಕಱುವದಕ್ಕಸುವಾಕಳೆನಿಕ್ಕುಮಲ್ಲಿ ನಿ
ರ್ವ್ಯಾಕುಳಮುರ್ವುಗುಂ ಸುಧೆ ಸುಧಾರಸದಿಂ ತಣಿಗುಂ ಜನಂ ಶಿವ
ಸ್ವೀಕೃತಜೀವಮಾ ಶರಣನೀಶನವಂಗಸುವಲ್ಲಿ ಸತ್ಕೃಪಾ
ಲೋಕನಮುಣ್ಮುಗುಂ ಪ್ರಣಯದಿಂ ಜಗ[1]ಮಂತದಱಿಂದೆ ಜೀವಿಕುಂ ೩೨

ವಿಭಿನ್ನಸಾರವಸ್ತುಗಳು ಒಂದಾಗುವುದು ಸಾಧ್ಯವಾದೀತೇ ? ೩೦. ಶಿವನ (ಸೃಷ್ಟಿ, ಸ್ಥಿತಿ, ಲಯಾದಿ ವ್ಯವಹಾರಗಳ) ಲೀಲೆಯು ತನ್ನ ಭಕ್ತರಿಗಾಗಿ ಆಗಿದೆ, ಭಕ್ತನಾದವನ ಭಾವವು ಶಂಕರನಿಗೋಸುಗವೇ (ಅವನಿಗೆ ಅರ್ಪಿಸುವುದಕ್ಕೋಸ್ಕರವೇ) ಆಗಿದೆ. (ಹೀಗೆ) ಶ್ರೇಷ್ಠಭಕ್ತ ಮತ್ತು ಪರಮೇಶ್ವರ ಇವರುಗಳಿಗೆ ಪರಸ್ಪರವಾದ ಅತ್ಯಂತ ಸೌಹಾರ್ದ ವುಳ್ಳದಾಗಿದೆ. ಭಕ್ತ ಮತ್ತು ಈಶ್ವರ ಇವರುಗಳ ಸಮರಸ ಭಾವದಿಂದಲೇ ಜಗತ್ತು ವೃದ್ಧಿಯನ್ನು ಹೊಂದುತ್ತದೆ. ಜಗತ್ತಿನ ವ್ಯವಹಾರಗಳಿಂಥ (ಅಂದರೆ ಲೌಕಿಕ ವ್ಯಾಪಾರಾದಿಗಳಿಂದ) ವಿಮುಖರಾಗಿ ಭಕ್ತ ಮತ್ತು ಪರಶಿವರುಗಳಿಬ್ಬರೂ ಬೆರೆತು ಒಂದುಗೂಡಿ, ಶಾಶ್ವತ ಸ್ನೇಹದಿಂದ ಚೆನ್ನಾಗಿ ಒಪ್ಪುತ್ತಿದ್ದಾರೆ. ೩೧. ಮುತ್ತಿನ ಚಿಪ್ಪು ಬೇರೆಯದಾದ ಮಳೆಯ ನೀರಿನ ಹನಿಗಳನ್ನು ಬಿಟ್ಟು (ಕೇವಲ) ಸ್ವಾತಿ ನಕ್ಷತ್ರದಲ್ಲಿ ಬಿದ್ದ ಮಳೆಯ ನೀರಿನ ಹನಿಗಳನ್ನೇ ತನ್ನಲ್ಲಿ ಧರಿಸುವುದು. ಅದರಂತೆ ಬೇರೆ ಭವಿಜೀವರುಗಳನ್ನು ಬಿಟ್ಟು ಶಿವನು (ಕೇವಲ) ತನ್ನಲ್ಲಿಟ್ಟ ಆಕುಲ ರಹಿತವಾದ ಭಕ್ತಿ ವಿಶೇಷವುಳ್ಳವರ ಚಿತ್ತವನ್ನು ಒಳಗೊಂಡಿರುತ್ತಾನಲ್ಲವೆ ! ೩೨. ಆಕಳ ಜೀವವೇ ಅದರ ಕರುವು ; ಆ ಕರುವಿಗೆ ಆಕಳೇ ಜೀವವೆನಿಸುವುದು. ವ್ಯಾಕುಲರಹಿತ ವಾಗಿಯೇ ಆಕಳಿನಿಂದ ಹಾಲು ಹೆಚ್ಚುಕೊಂಡು (ತೊರೆಸಿ) ಬರುವುದು. ಜನರು ಆ ಹಾಲಿನಿಂದ ತೃಪ್ತಿಪಡುವರು. ಶಿವನಿಂದ ಸ್ವೀಕರಿಸಲ್ಪಟ್ಟ ಜೀವವೇ ಆ ಶರಣನು ; ಅವನೇ ಈಶ್ವರನ ಲಿಂಗನೆನಿಸುವನು. (ಹೀಗಾದಾಗ) ಅಲ್ಲಿ ಸತ್ಕೃಪೆಯಿಂದ ಕೂಡಿದ ದೃಷ್ಟಿಯು ಹೊರಹೊಮ್ಮುವುದು. ಈ ಕಾರಣದಿಂದ ಜಗತ್ತು (ಪರಸ್ಪರ) ಪ್ರೀತಿಯಿಂದ

---

1 ನ(ಅ)

ಮೃಡಮಹಿಮೆಯೆಂಬ ಚಂಬಿಸಿ
ಲಿಡಿದಿರೆಯುಂ ಧರೆಯೊಳಿತರಜನಘೂಕಕುಳಂ
ಪಡೆಯದು ತದ್ದರ್ಶನಮಂ
ತಡೆಯದದಂ ಕಂಡು ಭಕ್ತಚಕ್ರಂ ನಲಿಗುಂ ೩೩

ಅಂಗಮೊ ಜೀವವೋ ಮಿಸುಗುವಾತ್ಮನೊ ಶಂಕರನೆಂದ ಶಂಕೆಗಾಂ
ಪಿಂಗದೆ ಪೇಳ್ವೆನುತ್ತರಮನಂಗಮ ಪೂರ್ವಕೃತಾತ್ಮಕರ್ಮಶೇ
ಷಂಗಳಿನಾದುದಾತ್ಮಸುಖದುಃಖದ ಪುಣ್ಯದ ಪಾಪದಿಕ್ಕೆ ಮಾ
ರಾಂಗಹರಂ ವಿಲಕ್ಷಣನಿದಕ್ಕೆ ವಿಚಾರಿಪೊಡಂಗಮಪ್ಪನೇ ೩೪

ಅತಿಮಲಿನನಸ್ವತಂತ್ರಂ
ಸತತಂ ಸಂಸಾರಿ ಜನ್ಮಿ ಸಕಲನನಿತ್ಯಂ
ತತದುಷ್ಕರ್ಮಂ ಪಾಶಾ
ನ್ವಿತಪಶುವಾ ಜೀವನೆಂಬುದಾಗಮಸಿದ್ಧಂ ೩೫

ಪ್ರವಿಮಳನತಿಸ್ವತಂತ್ರಂ
ಭವಮೃತಿಸಂಸಾರಕರ್ಮರಹಿತಂ ಪತಿ ಪಾ
ಶವಿಮುಕ್ತನಿಷ್ಕಳಂ ಪರ
ಶಿವನೆಂತುಂ ಜೀವನಪ್ಪನೇ ಬಗೆವಾಗಳ್ ೩೬

ಬಾಳುವುದು. ೩೩. ಪರಮೇಶ್ವರನ ಮಹಿಮೆಯೆಂಬ ಹೊಂಬಿಸಿಲು ಧರೆಯನ್ನೆಲ್ಲ ವ್ಯಾಪಿಸಿದರೂ, (ಆತನಲ್ಲಿ ಭಕ್ತಿಯಿಲ್ಲದಿರುವ) ಇತರ ಜನಗಳೆಂಬ ಗೂಗೆಗಳಿಗೆ ಆ ಶಿವನ ದರ್ಶನವನ್ನು ಪಡೆಯಲಾಗುವುದಿಲ್ಲ. ಅಂಥ ಬಿಸಿಲನ್ನು ಭಕ್ತರೆಂಬ ಚಕ್ರವಾಕ ಪಕ್ಷಿಗಳು ಕಂಡು ನಲಿದಾಡುವುವು. ೩೪. (ಇನ್ನೂ) ಶಂಕರನು ಅಂಗನೋ, ಜೀವನೋ, ಶೋಭಿಸುವ ಆತ್ಮನೋ ? ಹೀಗೆಂದ ನಿಮ್ಮ ಶಂಕೆಗೆ ನಾನು ತಪ್ಪದೆ ಉತ್ತರವನ್ನು ಕೊಡುವೆನು. ಪೂರ್ವ ಜನ್ಮದಲ್ಲಿ ತಾನು ಮಾಡಿದ ಕರ್ಮಶೇಷಗಳಿಂದ ಆದದ್ದು ಅಂಗ. ಅದು ತನ್ನ ಸುಖ ದುಃಖಗಳಿಗೆ ಪುಣ್ಯ ಪಾಪಗಳಿಗೆ ಆಶ್ರಯವಾದದ್ದು. ಮನ್ಮಥನಾಶಕನಾದ ಪರಶಿವನು ವಿಲಕ್ಷಣನು. ವಿಚಾರಮಾಡಿ ನೋಡಿದರೆ (ಇಂಥ ಪೂರ್ವಜನ್ಮ ಕೃತಕರ್ಮಗಳಿಗನುಸಾರವಾಗಿ ಜನನಗೊಂಡ ದೇಹಕ್ಕೆ) ಅಂಗನು ಹೇಗಾದನು ? ೩೫. ಅತ್ಯಂತ ಮಲಿನವಾದ ಅಂತಃಕರಣವುಳ್ಳವನು, ಸ್ವತಂತ್ರನಲ್ಲದವನು, ಸದಾ ಸಂಸಾರ ಭಾವವುಳ್ಳವನು. ಪುನಃ ಹುಟ್ಟಿಬರುವವನು, ಸಾಕಾರನು (ಕಲೆಯಿಂದ ಸಹಿತನಾದವನು) ನಿತ್ಯನಲ್ಲದವನು, ವಿಶೇಷವಾದ ದುಷ್ಕರ್ಮಗಳಿಂದ ಕೂಡಿದವನು, ಮಾಯೆಂಬ ಪಾಶದಿಂದ ಬಂಧಿಸಲ್ಪಟ್ಟನು. ಪಶುವೆನಿಸಿ 'ಜೀವ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುವುದು ಆಗಮ ಪ್ರಮಾಣದಿಂದ ಸಿದ್ಧವಾಗುವುದು. ೩೬. ಅತ್ಯಂತ ಪರಿಶುದ್ಧನೂ, ಅತಿಸ್ವತಂತ್ರನೂ, ಹುಟ್ಟು ಸಾವುಗಳೆಂಬ ಸಂಸಾರದ ಕರ್ಮಗಳಿಂದ ದೂರನಾದವನೂ, ಮಾಯಾಪಾಶ ವಿಮುಕ್ತನೂ ನಿಷ್ಕಲನೂ ಆದ ಪತಿಯೇ ಪರಶಿವನು. ಇಂಥ ಶಿವನು ವಿಚಾರಿಸಿ

ಪಂಚಮುಖನಾತ್ಮನಕ್ಕುಮೆ
ಪಂಚೇಂದ್ರಿಯಭೂತಪಂಚಕಾತ್ಮಕನಾತ್ಮಂ
ಪಂಚಮುಖಂ ಪರಮಾತ್ಮಂ
ಪಂಚೇಂದ್ರಿಯಭೂತಪಂಚಕಾತ್ಮಾಧಾರಂ ೩೭

ವ॥ ಅಂತುಮಲ್ಲದೆಯುಂ—

ಅಂದದಿನಣೋರಣೀಯಾ
ನೆಂದೆನೆ ನಿಗಮೋಕ್ತಿ ತಾನೆ ಸಚರಾಚರದೊಳ್
ಸಂದಿಲ್ಲದಣುಪದಾರ್ಥದೊ
ಳೊಂದುತಣೀಯಸ್ತ್ವದಿಂ ಪ್ರವೇಶಿಸುತದಜಿರೊಳ್ ೩೮

ತಿಲದೊಳ್ ತೈಲಂ ನಭಂ ಕುಂಭದೊಳೆ ಶಿಖಿ ಸಮಿದ್ಗರ್ಭದೊಳ್ನೇತ್ರದೊಳ್ ನಿ
ರ್ಮಲತೇಜಂ ಬೀಜದೊಳ್ಭೂರುಹಮಮರ್ದಿನೊಳಾಜ್ಯಂ ನೆಳಲ್ದರ್ಪಣಾಂತ
ಸ್ಸ್ಥಲದೊಳ್ ಚಂದ್ರಂ ಘಟಾಂತರ್ಜಲದೊಳಗದೊಳುದ್ಯತ್ಪ್ರತಿಧ್ವಾನಮುತ್ಯು
ಜ್ವಲಹೇಮಂ ಗ್ರಾವದೊಳ್ಸೂತ್ರಮುಮಳಮಣಿಯೊಳ್ ಶಬ್ದದೊಳ್ಮಂಜುಳಾರ್ಥಂ ೩೯

ಪಳಿಕಿನೊಳತಿ ನೀರಂಧ್ರೋ
ಜ್ವಳಭಾವಂ ಮಿಸುಪ ತೆಱದೆ ರಂಜಿಪನಭವಂ
ವಿಳಸಿತ ಸಮಸ್ತಭುವನಾ
ವಳಿಗಳನೊಳಕೊಂಡು ಸರ್ವಗತನಾಗಿರ್ಪಂ ೪೦

ನೋಡಿದರೆ ಜೀವನೆನಿಸುವನೇ ? ೩೭. ಪಂಚಮುಖನೆನಿಸಿದ ಪರಮಾತ್ಮನು ಆತ್ಮನೆನಿಸುವನೇ? ಆತ್ಮನು ಪಂಚೇಂದ್ರಿಯ ಭೂತನೆನಿಸಿದ ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮಗಳೆಂಬ ಪಂಚೇಂದ್ರಿಯಗಳು, ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳೆಂಬ ಪಂಚಭೂತ ಸ್ವರೂಪನಾದವನೆನಿಸಿದ್ದಾನೆ. (ಐದು ಇಂದ್ರಿಯಗಳು ಕ್ರಮವಾಗಿ ಐದು ಭೂತಗಳಿಂದ ಉತ್ಪತ್ತಿಯಾಗಿ ಅವುಗಳಿಂದ ಕೂಡಿ ದೇಹಿಯೆನಿಸಿದ್ದಾನೆ ಎಂದು ಭಾವ) ಪರಮಾತ್ಮನು ಐದು ಇಂದ್ರಿಯಗಳು ಐದು ಭೂತಗಳಿಗೆ ಆಧಾರಭೂತನೆನಿಸಿದ್ದಾನೆ. ವ॥ ಅದೂ ಅಲ್ಲದೆ ೩೮–೪೦. ಚೆಂದದಿಂದ ವೇದದಲ್ಲಿ ಹೇಳಿರುವಂತೆ ಅಣೋರಣೀಯಾನ್ ಎಂದರೆ ಅಣುವಿಗಿಂತಲೂ ಅಣುವೆನಿಸಿ ಆ ಪರಮಾತ್ಮನು ಸಮಸ್ತ ಚರಾಚರ ಪ್ರಪಂಚದಲ್ಲಿ ಅನಂತಪರಿಯಲ್ಲಿ ತೆರಪಿಲ್ಲದ ಹಾಗೆ ಸೂಕ್ಷ್ಮರೂಪದಿಂದ ಪ್ರವೇಶಿಸಿದ್ದಾನೆ. ಅದರಲ್ಲಿ ಎಳ್ಳಿನ ಸರ್ವಾಂಗದಲ್ಲಿ ಎಣ್ಣೆಯೂ, ಕುಂಭದ ಒಳಗಡೆಯಲ್ಲಿ ಆಕಾಶವೂ, ಸಮಿತ್ತುಗಳ (ಕಟ್ಟಿಗೆಗಳ) ಮಧ್ಯದಲ್ಲಿ ಅಗ್ನಿಯೂ, ಕಣ್ಣಿನಲ್ಲಿ ನಿರ್ಮಲವಾದ ತೇಜಸ್ಸೂ ಬೀಜದಲ್ಲಿ ವೃಕ್ಷವೂ, ಹಾಲಿನಲ್ಲಿ ತುಪ್ಪವೂ, ಕನ್ನಡಿಯೊಳಗಡೆ ಪ್ರತಿಬಿಂಬವೂ ಘಟದಲ್ಲಿ ತುಂಬಿದ ನೀರಿನಲ್ಲಿ ಚಂದ್ರನ ಪ್ರತಿಬಿಂಬವೂ, ಪರ್ವತದಲ್ಲಿ ವಿಶೇಷವಾದ ಪ್ರತಿಧ್ವನಿಯೂ ಕಲ್ಲಿನಲ್ಲಿ ಅತ್ಯುಜ್ವಲವೆನಿಸಿದ ಬಂಗಾರವೂ, ಮಣಿಗಳ ಮಧ್ಯದಲ್ಲಿ ದಾರವೂ, ಶಬ್ದದಲ್ಲಿ ಮನೋಹರವಾದ ಅರ್ಥವೂ, ಸ್ಫಟಿಕದಲ್ಲಿ ಅತ್ಯಂತ ದಟ್ಟವಾಗಿ ಪ್ರಕಾಶಿಸುವಿಕೆಯೂ, ಶೋಭಿಸುವ ರೀತಿಯಲ್ಲಿ ಶಿವನು ಪ್ರಕಾಶಿಸುತ್ತಿದ್ದಾನೆ. ಅವನು ಶೋಭಿಸುತ್ತಿರುವ ಸಮಸ್ತ ಬ್ರಹ್ಮಾಂಡಾವಳಿಗಳನ್ನೆಲ್ಲ ಒಳಗೊಂಡವನಾಗಿ ಸರ್ವವ್ಯಾಪಕನಾದವನಾಗಿದ್ದಾನೆ.

ವಿಶ್ವವಿಭು ವಿಶ್ವಜನಕಂ
ವಿಶ್ವಾಂತರ್ಯಾಮಿ ವಿಶ್ವರಕ್ಷಣಶೀಲಂ
ವಿಶ್ವಹರಂ ವಿಶ್ವಪರಂ
ವಿಶ್ವಾಧಿಕನೆಂದು ರಾಮನಾಥನೆ ಸತ್ಯಂ ೪೧

ವ॥ ಎಂದು ದಾಸ[1]ದೇವಂ ನುಡಿಗೊಡೆ ಜೈನಮುನಿಗಳ್ಮಾರ್ಕೊಂಡು—

ಮಾಡಿದ ಶಂಕೆಗುತ್ತರಮನೊಳ್ಳಿತನೆಂದಪೆ ಲೇಸು ಲೇಸು ನೀ
ನಾಡಿದೆ ಜೀವರೆಲ್ಲ ಪಶುಗಳ್ ಪತಿಯೇ ಶಿವನಾ ಮಹೇಶ್ವರಂ
ಕೂಡಿ ಪಶುಪ್ರತಾನದೊಳಗೊಪ್ಪುವನೆಂದಿದು ನನ್ನಿಯಾಗೆ ಪೇಳ್
ನಾಡೆ ಪಶುಪ್ರತಾನದೊಳೆ ತದ್ಗುಣವೊಂದುಮದೇಕೆ ತೋಱದೋ ೪೨

ಸುಡುವಗ್ನಿಯ ಸಂಪರ್ಕದೆ
ಸುಡುಗುಂ ಜಲಮುಂತುಟೀಶಸಂಪರ್ಕದಿನಾ
ಜಡಜೀವರುಮುವನಂತಿರೆ
ತಡೆಯದೆ ಸರ್ವಜ್ಞಭಾವಮಾಳ್ದಿರವೇಡಾ ೪೩

ವ॥ ಎನೆ [2]ದಾಸದೇವಂ[2] ಕೇಳ್ದು ನಗೆ ನಕ್ಕು—

೪೧. ಅವನು ಪ್ರಪಂಚಕ್ಕೆ ಒಡೆಯನು ; ಪ್ರಪಂಚದ ಉತ್ಪತ್ತಿಗೆ ಕಾರಣನು ; ವಿಶ್ವದಲ್ಲೆಲ್ಲ ವ್ಯಾಪಿಸಿಕೊಂಡವನು ; ವಿಶ್ವವನ್ನೆಲ್ಲ ರಕ್ಷಿಸುವುದೇ ಶೀಲವಾಗಿ ಉಳ್ಳವನು ; ಪ್ರಪಂಚವನ್ನೇ ನಾಶಮಾಡುವವನು, (ಪ್ರಪಂಚಕ್ಕೆ ಪ್ರಳಯವನ್ನುಂಟು ಮಾಡಿ ನಾಶ ಗೊಳಿಸುವವನು) ; ಈ ಪ್ರಪಂಚದಲ್ಲೇ ಆಸಕ್ತಿಯುಳ್ಳವನು ; (ಸೃಷ್ಟಿ, ಸ್ಥಿತಿ, ಲಯರೂಪವಾದ ಆಸಕ್ತಿಯುಳ್ಳವನು) ; ವಿಶ್ವಕ್ಕೆಲ್ಲ ಅಧಿಕನು ಇಂಥ ರಾಮನಾಥನೇ ಸತ್ಯಸ್ವರೂಪನೆನಿಸಿದ್ದಾನೆ. ವ॥ ಹೀಗೆಂದು ದಾಸಿಮಾರ್ಯರು ನುಡಿದು ತೋರಿಸಲು ಜೈನ ಸಂನ್ಯಾಸಿಗಳು ಪ್ರತಿಯಾಗಿ ೪೨–೪೩ ನಾವು ಮಾಡಿದ ಶಂಕೆಗಳಿಗೆಲ್ಲ ಒಳ್ಳೆಯ ಉತ್ತರವನ್ನೇ ಹೇಳಿದೆ. ಒಳ್ಳೆಯದು ! ಒಳ್ಳೆಯದು ! ನೀನು ಹೇಳಿದೆ ; 'ಜೀವರುಗಳೆಲ್ಲ ಪಶುಗಳು ; ಪತಿಯೇ ಶಿವನು ; (ಹೀಗೆ) ಆ ಮಹೇಶ್ವರನು ಜೀವರುಗಳ ಸಮೂಹದಲ್ಲಿ ಬೆರೆತುಕೊಂಡು ಶೋಭಿಸುತ್ತಿದ್ದಾನೆ,' ಎಂದು ಈ ಮಾತು ಸತ್ಯವಾದರೆ, ಸಮಸ್ತ ಜೀವಿಗಳಲ್ಲಿ ಆ ಪತಿಯಾದವನ ಗುಣವೊಂದೂ ಚೆನ್ನಾಗಿ ಅದೇಕೆ ಕಾಣುವುದಿಲ್ಲ ? ಸುಡುವ ಅಗ್ನಿಯ ಸಂಪರ್ಕದಿಂದ ನೀರೂ ಸುಡುವುದಿಲ್ಲವೇ ; ಅದರಂತೆ ಈಶ್ವರನ ಸಂಪರ್ಕದಿಂದ ಆ ಜಡ ಜೀವರುಗಳಲ್ಲಿನ ಅಜ್ಞಾನ ಭಾವವು ತೊಲಗಿ, ತಪ್ಪದೆ ಅವನ ಹಾಗೆಯೇ ಸರ್ವಜ್ಞತ್ವಭಾವವನ್ನು ಹೊಂದಿರಬೇಡವೇ ? ವ॥ ಹೀಗೆ ಆ ಜೈನ

---

1 ಸಿ(ಅ, ಚ, ಗ, ಜ) 2 ದೇವದಾಸಂ(ಜ)

ಹರನೆಲ್ಲರೊಳಿರ್ದಪನೆನೆ
ಹರನ ಗುಣಂ ಜೀವರಲ್ಲಿ ತೋರ್ಕುಮೆ ಮಣಿ ಸಾ
ಗರದೊಳ್ ಶಿಖಿ ಮರದೊಳ್ತ
ಳ್ತಿರೆ ಮಣಿ ಶಿಖಿಗುಣಮುಮಬ್ಧಿ ತರುಗಳೊಳೊಳವೇ ೪೪

ಬಿಸಿಯಪ್ಪನಿತೆ ಗಡಗ್ನಿಯ
ಬೆಸುಗೆಯಿನುದಕಂ ತದಗ್ನಿಯಂತಿರೆ ಮರ್ಬಂ
ಪೊಸೆದಿಕ್ಕುವ ತೇಜಮನಾ
ಳ್ದೆಸೆಗುಮೆ ಹರನಿರ್ಪ ಕತದಿನೊಳಗೀ ಪಶುಗಳ್ ೪೫

ಚೈತನ್ಯದಾರ್ಢ್ಯಮಂ ಪಡೆ
ದೋತಿರ್ಕುಮದಲ್ಲದಾ ಮಹೇಶನ ಸುಗುಣ
ವ್ರಾತಮನೇಂ ತಳೆಗುಮೆ ಪೇ
ಳ್ದೀ ತೆಱದಿಂ ಮುನ್ನಮೊರೆದ ದೃಷ್ಟಾಂತದವೋಲ್ ೪೬

ತಿಲದೊಳೆ ತೈಲಮೇನಿರದೆ ದೀಪಮನುರ್ವಿಪ ತೈಲಸಾರದು
ಜ್ವಲಗುಣಮುಂಟೆ ತತ್ತಿಲದೊಳಿಂತು ಶಿವಂ ಸಕಳಾತ್ಮವರ್ಗದೊಳ್
ನೆಲಸಿ ವಿರಾಜಿಸಿರ್ಪನನಿತರ್ಕೆ ತದೀಯ ಜಗದ್ವಿವರ್ಧನಾ
ದ್ಯಲಘುಗುಣಾಳಿಯಾತ್ಮತತಿಗುಂಟೆ ವಿ[1]ಚಾರಿ[1]ಪುದಿಂತುಟೆಲ್ಲಮಂ ೪೭

ಸಂನ್ಯಾಸಿಗಳು ಅನ್ನಲು ೪೪. ಹರನು ಎಲ್ಲರಲ್ಲಿಯೂ ಇರುತ್ತಾನೆಂದರೆ ಹರನ ಗುಣಗಳೆಲ್ಲ ಜೀವರುಗಳಲ್ಲಿ ತೋರುವುವೇ ? ಮಣಿಯು ಸಾಗರದಲ್ಲಿಯೂ, ಬೆಂಕಿಯು ಮರದೊಳಗೂ ಕೂಡಿಕೊಂಡಿರುವವೆಂದಾಕ್ಷಣಕ್ಕೆ ಆ ರನ್ನ ಮತ್ತು ಬೆಂಕಿಯ ಗುಣಗಳನ್ನು (ಕ್ರಮವಾಗಿ) ಸಮುದ್ರ ಮತ್ತು ಗಿಡಗಳು ಹೊಂದುವುವೇನು ? ೪೫-೪೬. ನೀರಿಗೆ ಅಗ್ನಿಯ ಸಂಬಂಧ ಬೆಚ್ಚಗಾಗುವಷ್ಟೆ ಅಲ್ಲವೇ ! ಆ ಅಗ್ನಿಯ ಬೆಸುಗೆಯಿಂದ ನೀರು ಅಗ್ನಿಯಹಾಗೆ ಕತ್ತಲೆಯನ್ನು ಓಡಿಸುವ ತೇಜಸ್ಸನ್ನು ಹೊಂದಿ ಶೋಭಿಸುವುದೇನು ? ಈ ರೀತಿಯಿಂದ ಸರ್ವಜೀವಿಗಳಲ್ಲಿ ಹರನಿರುವ ಕಾರಣದಿಂದ ಚೈತನ್ಯದ ದೃಢತೆಯನ್ನು ಹೊಂದಿರುವುದಲ್ಲದೆ, ಪರಮೇಶ್ವರ ಸಮಸ್ತ ಸದ್ಗುಣ ಸಮೂಹವನ್ನು ಈ ಮೊದಲು ಹೇಳಿದ ದೃಷ್ಟಾಂತದಂತೆ ಹೊಂದುವುದಕ್ಕೆ ಸಾಧ್ಯವೇ ? ೪೭. ಎಳ್ಳಿನಲ್ಲಿ ಎಣ್ಣೆಯೇನಿಲ್ಲವೇ ? ಆ ಎಳ್ಳಿಗೆ ದೀಪವನ್ನು ಬೆಳಗಿಸುವ ಎಣ್ಣೆಯ ಉಜ್ವಲವಾದ ಗುಣವುಂಟೇನು ? ಈ ರೀತಿಯಲ್ಲಿ ಸಕಲ ಜೀವಾತ್ಮ ವರ್ಗಗಳಲ್ಲಿ ನೆಲಸಿರುವನು. ಹೀಗೆ ನೆಲಸಿರುವನೆಂದಮಾತ್ರಕ್ಕೆ ಆ ಶಿವನ ಸಂಬಂಧವಾದ ಜಗತ್ತನ್ನು ಸೃಷ್ಟಿಗೊಳಿಸುವುದೇ ಮೊದಲಾದ ಶ್ರೇಷ್ಠ ಶಕ್ತಿಯ ಗುಣ ಸಮೂಹಗಳು ಆ ಸಕಲ ಜೀವಾತ್ಮ ಸಮೂಹಕ್ಕೆ ಉಂಟಾದವೇನು? ಈ ರೀತಿಯಲ್ಲಿ ಎಲ್ಲವನ್ನೂ ವಿಚಾರ ಮಾಡ

1 ರಾಜಿ(ಜ, ಮ)

ತಿಲದೊಳ್ ತೈಲಮಿರ್ಕುಂ
ತಿಲಮಿಲ್ಲಂ ತೈಲರಸದೊಳೆಂತಂತೆ ಶಿವಂ
ನೆಲಸಿರ್ಕುಮಖಿಳ ಜಗದೊಳ್
ನೆಲಸದು ಶಿವನಲ್ಲಿ ಮಾಯಿಕಂ ಜಗಮನಿಶಂ ೪೮

ಒಗೆದಿರ್ದಳಿಗುಂ ಮುಗಿಲಾ
ಗಗನದೊಳಾ ಗಗನಮಲ್ಲಿ ನಿರ್ಲೇಪಕಮಂ
ತೊಗೆದಿರ್ದಳಿಗುಂ ಜಗಮಾ
ಜಗದೀಶನೊಳೀಶನವಿರತಂ ನಿರ್ಲೇಪಂ ೪೯

ಮಲಿನಮತಿ ಕಾಣ್ಬೆನೆಂಬೊಡೆ
ಸಲೆ ಸಿಲ್ಕಂ ನಿರ್ಮಲೈಕಮತಿ ಭಾವಿಸೆ ಬಂ
ದೊಲವಿತ್ತು ರಕ್ಷಿಪಂ ನಿ
ಶ್ಚಲನನಘಂ ನಿತ್ಯನಪ್ರಮೇಯನಜೇಯಂ ೫೦

ವ॥ ಮತ್ತಮಾ ಪರಮಶಿವನನಾದ್ಯಂತನುಮವಿದ್ಯಾರಹಿತನುಂ ನಿರಸ್ತಸಮಸ್ತದೋಷಕಳಂಕನುಂ ಸತ್ಯಜ್ಞಾನಾನಂದಮಯನುಂ ಸರ್ವಜ್ಞನುಂ ನಿತ್ಯತೃಪ್ತನುಂ ಸ್ವತಂತ್ರನುಮನಾದಿಪ್ರಕಾಶಪ್ರಭಾವನುಮನಂತಾಲುಪ್ತಶಕ್ತಿಸಮೇತನುಮದ್ವಿತೀಯಾಖಂಡಪರಮೈಶ್ವರ್ಯವಿಭ್ರಾಜಿತನುಮನುಭ

ಬೇಕು. ೪೮. ಎಳ್ಳಿನಲ್ಲಿ ಎಣ್ಣೆಯಿರುವುದು; ಆದರೆ ಆ ತಿಲದ ರಸದಲ್ಲಿ (ತೈಲದಲ್ಲಿ) ತಿಲವು ಹೇಗೆ ಇಲ್ಲವೋ ಹಾಗೆ ಶಿವನು ಸಮಸ್ತ ಜಗತ್ತಿನಲ್ಲೆಲ್ಲಾ ವ್ಯಾಪಿಸಿದ್ದರೂ ಆ ಶಿವನಲ್ಲಿ ಮಾಯಾ ಸ್ವರೂಪನಾದ ಜಗತ್ತು ಯಾವಾಗಲೂ ನೆಲಸುವುದಿಲ್ಲ. (ಅಂದರೆ ಶಿವನು ನಿರ್ಮಾಯ ಸ್ವರೂಪನೆಂದು ಭಾವ) ೪೯. ಮೋಡವು ಗಗನದಲ್ಲಿ ಹುಟ್ಟಿ ನಾಶವಾಗುವುದು. ಈ ದೃಷ್ಟಾಂತದಲ್ಲಿ ಗಗನವು ನಿರ್ಲೇಪವೆನಿಸುವುದು. (ಮೋಡದ ಲೇಪವು ಆಕಾಶಕ್ಕೆ ಇಲ್ಲ. ಅಲ್ಲಿ ಹುಟ್ಟಿ ಅಲ್ಲಿಯೇ ಅದು ಅಳಿದು ಹೋಗುವುದು) ಇದರ ಹಾಗೆ ಶಿವನಿಂದ ತೋರಿಕೆಗೊಂಡ ಜಗತ್ತು ಅಲ್ಲಿಯೇ ನಾಶವಾಗಿ ಹೋದರೂ ಈಶ್ವರನು ಮಾತ್ರ ನಿರ್ಲೇಪನಾಗಿಯೇ ಇರುತ್ತಾನೆ. (ಶಿವನ ಲೀಲೆಯಿಂದ ಜಗತ್ತು ಕಾಣಿಸಿಕೊಂಡು ಅವನಿಂದಲೇ ಅದು ಪ್ರಳಯಗೊಂಡರೂ ಶಿವನು ನಿರ್ಲೇಪನಾಗಿಯೇ ಇರುತ್ತಾನೆ ಎಂದು ಭಾವ) ೫೦. ನಿಶ್ಚಲನೂ, ಪಾಪರಹಿತನೂ, ನಿತ್ಯನೂ, ಅಗಣಿತನೂ (ಅಳೆಯುವುದಕ್ಕೆ ಸಾಧ್ಯವಿಲ್ಲದವನೂ) ಅಜೇಯನೂ (ಜಯಿಸುವುದಕ್ಕೆ ಇನ್ನೊಬ್ಬರಿಂದ ಸಾಧ್ಯವಿಲ್ಲದವನೂ) ಎನಿಸಿದ ಪರಶಿವನನ್ನು ಪಾಪ ಬುದ್ಧಿಯವನು ಕಾಣುತ್ತೇನೆಂದರೆ ಸಿಲುಕುವವನಲ್ಲ. ನಿರ್ಮಲವಾದ ಬುದ್ಧಿಯುಳ್ಳವನೊಬ್ಬನೇ ಧ್ಯಾನಿಸಿದರೆ ಮಾತ್ರ ಅವನು ಒಲಿದು ಬೇಡಿದುದನ್ನಿತ್ತು ರಕ್ಷಿಸುವನು. ವ॥ ಮತ್ತು ಆ ಪರಶಿವನು ಆದಿ ಅಂತ್ಯವಿಲ್ಲದವನು; ಅಜ್ಞಾನದಿಂದ ದೂರನಾದವನು; ಸಮಸ್ತ ಪಾಪವೆಂಬ ಕೊಳೆಯನ್ನು ನಾಶಗೊಳಿಸುವವನು ; ಯಥಾರ್ಥವಾದ ಜ್ಞಾನದಿಂದುಂಟಾದ ಆನಂದ ಸ್ವರೂಪನು;

ವೈಕವಿಷಯಪಠವಾವ್ಯತಸ್ವರೂಪಕನುಮಜಾಚ್ಯುತಮ್ಯಗ್ಯನುಂ ಪರಾತ್ಪರನುಂ ಪರಮುಕ್ತಿಪ್ರದನುಂ ವಿಶ್ವಮಯನುಂ ವಿಶ್ವಪ್ರೇರಕನುಂ ಸ್ವಭಕ್ತ ಸುಲಭನುಮಭಕ್ತದುರ್ಲಭನುಂ ಅನುಪಮಕಲ್ಯಾಣಗುಣ ಗಣಾಲಂಕರಣನುಮಖಿಳ ಬ್ರಹ್ಮಾಂಡಮಂಡಳಾಧೀಶ್ವರನುಂ ತಾನೊರ್ವನೆಯಾಗಿ—

ಎಲ್ಲರೊಳಹೊಱಗೆ ಪೂರ್ಣನು
ಮೆಲ್ಲವನಱಿವವನುಮೆಲ್ಲರಂತಿರದವನೊ
ಲ್ದೆಲ್ಲರ ಪೊರೆವನುಮೆಲ್ಲವ
ನುಲ್ಲಂಘಿಸಿದವನುಮಾಭವನಲ್ಲದೆ ಪೆಱರಾರ್ ೫೧

ಶ್ರೀರಾಮನಾಥನೊರ್ವನೆ
ಭೂರಿ ಜಗಜ್ಜಾಲಪತಿ ವಲಂ ಪರಮಿಲ್ಲೆಂ
ದೋರಂತೆ ನಿಗಮ ನಿಗಮಶಿ
ರೋರಾಜಿ ಪುರಾಣವಾಣಿಯುಲಿಗುಮಜಸ್ರಂ ೫೨

ಸರ್ವವನ್ನೂ ತಿಳಿದವನು ; ಸದಾ ತೃಪ್ತಿಯಿಂದ ಕೂಡಿದವನು ; ಸರ್ವರೀತಿಯಲ್ಲೂ ಸ್ವತಂತ್ರನು (ಅನ್ಯರ ತಂತ್ರಕ್ಕೆ ಒಳಗಾದವನಲ್ಲ) ; ತನಗಿಂತಲೂ ಆದಿಯೆಂಬುದು ಇನ್ನೊಂದಿಲ್ಲದಂತಹ ಪ್ರಕಾಶದ ಪ್ರಭಾವದಿಂದ ಕೂಡಿದವನು ; ಅಪಾರವಾದ ನಾಶವೇ ಇಲ್ಲದ ಶಕ್ತಿಯಿಂದ ಕೂಡಿದವನು ಎಂದರೆ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಯಿಂದ ಸಮನ್ವಿತನು ; ದ್ವಿತೀಯವಾದ ಬೇರೊಂದು ಇಲ್ಲದೆಯಿರುವ ಅಖಂಡವೂ ಆದ ಉತ್ಕೃಷ್ಟವೂ ಆದ ಷಡ್ಗುಣೈಶ್ವರ್ಯದಿಂದ ಪ್ರಕಾಶಿಸುವಂಥವನು ; ಕೇವಲ ಅನುಭವಕ್ಕೆ (ಅವನ ಸಂಬಂಧದ ಅನುಭವಕ್ಕೆ) ಮಾತ್ರ ಗೋಚರಿಸುವ ಪರಮ ಅಮೃತ ಸ್ವರೂಪನು ; ಬ್ರಹ್ಮ ಮತ್ತು ವಿಷ್ಣುಗಳಿಂದ ಹುಡುಕಿಸಿಕೊಳ್ಳಲ್ಪಡುವವನು ; ಶ್ರೇಷ್ಠಕ್ಕಿಂತಲೂ ಶ್ರೇಷ್ಠನಾದವನು (ಇವನಿಗಿಂತ ಬೇರೊಂದು ಶ್ರೇಷ್ಠವೇ ಇಲ್ಲವೆನಿಸಿದವನು) ; ಶ್ರೇಷ್ಠವಾದ ಮುಕ್ತಿಯನ್ನು ಕೊಡುವವನು ; ವಿಶ್ವವನ್ನೆಲ್ಲ ವ್ಯಾಪಿಸಿದವನು ; ವಿಶ್ವವ್ಯವಹಾರಗಳಿಗೆ ಚಾಲಕ ಶಕ್ತಿಯಾಗಿರುವವನು ; ತನ್ನ ಭಕ್ತರಿಗೆ ಸುಲಭವಾಗಿ ಲಭ್ಯವಾಗುವವನು ; ಭಕ್ತರಲ್ಲದವರಿಗೆ ಲಭ್ಯವಾಗುವುದಕ್ಕೆ ಸಾಧ್ಯವಿಲ್ಲದವನು ; ಉಪಮಾರಹಿತವಾದ ಮಂಗಳಕರ ಗುಣಗಳಿಂದ ಅಲಂಕಾರಗೊಂಡವನು ; ಸಮಸ್ತ ಬ್ರಹ್ಮಾಂಡಗಳಿಗೆ ಪ್ರಭುವೆನಿಸಿದವನೂ—ತಾನೊಬ್ಬನೇ ಆಗಿ ೫೧. ಎಲ್ಲರ ಒಳಗೂ ಅವನೇ, ಹೊರಗೂ ಅವನೇ ತುಂಬಿದವನೆನಿಸಿದ್ದಾನೆ ; ಎಲ್ಲವನ್ನೂ ತಿಳಿಯುವವನು, (ಮತ್ತು) ಎಲ್ಲರ ಹಾಗಿರದೆ ಅವನು ಒಲಿದು ಎಲ್ಲರನ್ನೂ ರಕ್ಷಿಸುವನು ; ಎಲ್ಲ ಜಗದ್ವ್ಯಾಪಾರಗಳನ್ನೂ ಉಲ್ಲಂಘಿಸಿದವನು—ಇಂಥ ಈ ಪರಮಾತ್ಮನಲ್ಲದೆ ಬೇರೆ ಯಾರಿದ್ದಾರೆ ? ೫೨. ಶ್ರೀರಾಮನಾಥನೊಬ್ಬನೇ ಸಮಸ್ತ ಬ್ರಹ್ಮಾಂಡ ಜಾಲಗಳಿಗೆಲ್ಲ ಪತಿಯಲ್ಲವೇ ! ಬೇರೆ ಇನ್ನೊಬ್ಬರಾರೂ ಇಲ್ಲವೆಂದು ಒಂದೇ ಸವನೆ (ಏಕ ಪ್ರಕಾರವಾಗಿ) ವೇದೋಪನಿಷತ್ತು

ವ॥ ಎಂದಿಂತು ಶಿವದಾಸಂ ನುಡಿಯೆ ಮಲಧಾರಿಗಳ್ಕೇಳ್ದಿನಿತರ್ಥಮೆಲ್ಲಮಂನಿಗಮವಾಕ್ಯದಿಂ ಸಾಧಿಸುವೆಯಪ್ಪೊಡಾ ನಿಗಮಂ ವ್ಯಾಘಾತಪುನರುಕ್ತ್ಯಾದಿ ಸಂಕಲಿತಮಪ್ಪುದಱಿನಪ್ರಮಾಣಮದಱಿನುಕ್ತಾರ್ಥಮನೆಂತು ಸಮರ್ಥಿಪೆಯೆನೆ ಜಿನಮತಮರ್ದನಂ ಮಾರ್ಕೊಂಡು—

ವೇದದಿನೊಗೆದತ್ತಾಯು
ರ್ವೇದಂ ಭೈಷಜ್ಯಮೆಸಗೆ ತತ್ಸಮ್ಮತದಿಂ
ಮೇದಿನಿಯೊಳಖಿಳ ರುಜೆಗಳಿ
ವಾದಪುದದಱಿಂ ಪ್ರಮಾಣಮಾಗಮಮಲ್ತೇ ೫೩

ಶ್ರುತಿಗಂಗಂ ಜ್ಯೋತಿಷಂ ಪೇಳ್ದಪುದು ಗಗನದೊಳ್ಚಂದ್ರಸೂರ್ಯರ್ಕಳಂ ದೂ
ರತರಂ ತದ್ರಾಹು ಕೊಳ್ವಾ ಸಮಯಮನಿನಿಸುಂ ತಪ್ಪದಂತೆಯ್ದೆ ವೇದ
ಪ್ರತತಿ ಪ್ರಾಮಾಣ್ಯಕ್ಕಿಂತಪ್ಪುದನೊರೆದ ತದಂಗೋಕ್ತಿ ದೃಷ್ಟಾಂತಮೆಂಬಾ
ಯತಿಯಂ ನೀವೇಕೆ ಜೈನಾಥಮರಿರಱಿಯಿರೇನೆಂಬೆನೀ ನಿಮ್ಮ ಗಾಂಪಂ ೫೪

ಗಳ ಸಮೂಹ, ಪುರಾಣಗಳ ಮಾತುಗಳು ಸದಾ ಕೂಗುತ್ತಿವೆ. ವ॥ ಈ ರೀತಿಯಲ್ಲಿ ದಾಸಿಮಯ್ಯನು ನುಡಿಯಲು ಪಾಪಲೇಪವುಳ್ಳ (ಪಾಪದಿಂದ ಕೂಡಿದ) ಅವರೆಲ್ಲರೂ ಕೇಳಿ ಇಷ್ಟು ಅರ್ಥವೆಲ್ಲವನ್ನೂ, ವೇದ ವಾಕ್ಯದಿಂದ ಸಾಧಿಸುತ್ತೀಯಾದರೆ, ಆ ವೇದವೂ ಕೂಡ ಪರಸ್ಪರ ವಿರೋಧ ಅಭಿಪ್ರಾಯದಿಂದಲೂ (ವ್ಯಾಘಾತದಿಂದಲೂ) ಹೇಳಿದ್ದನ್ನೇ ಪುನಃ ಹೇಳುವ ದೋಷಗಳಿಂದ ಕೂಡಿರುವುದರಿಂದ ಪ್ರಮಾಣವನ್ನು (ವೇದದಲ್ಲಿ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ ಎಂಬ ಪ್ರಮಾಣವನ್ನು) ಅವುಗಳಲ್ಲಿ ಹೇಳಿದುದೇ ಸರಿಯಾದ ಮಾತೆಂದು ಹೇಗೆ ಸಮರ್ಥನೆ ಮಾಡುತ್ತೀಯೆ ? ಎನ್ನಲು, ಜಿನ ಮತವನ್ನು ನಾಶಗೊಳಿಸಿದ (ಅಥವಾ ನಾಶಗೊಳಿಸಿದವನೆಂಬ ಬಿರುದುಳ್ಳ) ದಾಸಿಮಯ್ಯನು ಪ್ರತಿಯಾಗಿ ೫೩. ಆಯುರ್ವೇದವು ವೇದದಿಂದ ಹುಟ್ಟಿತು. ಆ ಆಯುರ್ವೇದದಲ್ಲಿ ಉಕ್ತವಾದ ಪ್ರಕಾರದಿಂದ ವೈದ್ಯವನ್ನು ಮಾಡಿದರೆ ಲೋಕದಲ್ಲಿ ಎಲ್ಲರ ರೋಗಗಳು ನಾಶವಾಗುವುವು. ಆದ್ದರಿಂದ ಆ ವೇದಗಳೇ ಪ್ರಮಾಣವಲ್ಲವೆ. (ಅಂದರೆ ಎಲ್ಲರ ತರ್ಕಗಳೆಂಬ ರೋಗಗಳಿಗೆ ವೇದ ಪ್ರಮಾಣವು ಅಂಗೀಕಾರಾರ್ಹವಾದುದಲ್ಲವೇ ? ಎಂದು ಭಾವ) ೫೪. ವೇದಗಳಿಗೆ ಅಂಗವೆನಿಸಿದ ಜ್ಯೋತಿಶ್ಶಾಸ್ತ್ರವು ಆಕಾಶದಲ್ಲಿರುವ ಚಂದ್ರ ಸೂರ್ಯರುಗಳನ್ನು ದೂರದಲ್ಲಿರುವ ಆ ರಾಹುವು ನುಂಗುವ ಸಮಯದ ಲೆಕ್ಕಾಚಾರವನ್ನು ಸ್ವಲ್ಪವೂ ತಪ್ಪದ ಹಾಗೆ ಚೆನ್ನಾಗಿ ಹೇಳುವುದಲ್ಲವೇ ! ಇದಕ್ಕೆ ವೇದ ಸಮೂಹಗಳ ಪ್ರಾಮಾಣ್ಯ ಅಂಗೀಕರಿಸಿದ ಅದರ ಅಂಗವಾದ ಜ್ಯೋತಿಶ್ಶಾಸ್ತ್ರದ ಮಾತೇ ಪ್ರಮಾಣವೆಂದು ಹೇಳುವ ಆ ಯತಿಯನ್ನು (ಜ್ಯೋತಿಶ್ಶಾಸ್ತ್ರಜ್ಞನಾದ ಯತಿಯನ್ನು) ಜೈನಾಥಮರುಗಳಾದವರೇ, ನೀವೇಕೆ ತಿಳಿಯುತ್ತಿಲ್ಲ ? ನಿಮ್ಮ ಈ ದಡ್ಡತನವನ್ನು ಏನೆನ್ನ

ಪಲವಾಳಾಪದಿನೇಂ ಫಲಂ ಶಿವನೆ ಕರ್ತಾರಂ ಜಗನ್ಮಂಡಲೀ
ಕುಲಕೆಂದುಂ ಪೆಱನಿಲ್ಲ ದೇವನೆನುತುಂ ದೃಷ್ಟಾಂತಮಂ ತೋರ್ಪೆನಿಂ
ದೆಲೆ ನೀವೆಂದುದನೀಗಳಿಂತೆ ಜಿನಗೇಹವ್ರಾತಮಂ ಕಿಳ್ತು ನೀ
ವೊಲವಿಂ ಪೂಜಿಪ ತಜ್ಜಿನಪ್ರಚಯಮುಮಂ ನುರ್ಗೊತ್ತಿ ಪಾಳ್ಮಾಡುವೆಂ ೫೫

ವ॥ ಎಂದು ವಿಜೃಂಭಿಸಿ ದೃಢಪ್ರತಿಜ್ಞಾರೂಢನಾದ ಜೈನಜನಭಂಜನನ ಪಟುಕಟೂಕ್ತಿಯುಂ ಕೇಳ್ದು ಮುಳಿಸಂ ತಾಳ್ದು ಪೇರೊಡಲ ಪೆಂಕುಳಿಗಳುಂ, ತರಂಟುದಲೆಯೊರಂಟರುಂ, ಪೆರ್ಬಡಿಕೆ ಮೆಯ್ಯ ದುರ್ಬೋಧರುಂ, ನೊಳಪೆಱಪ ಕೊಳೆವಾಯ ಖಳರುಂ, ಪುಳಿಚೆಳ್ಳ ಕಿಣೆವಲ್ಲ ಪುರುಷಾಧಮರುಂ, ಪಾಳ್ಮೊಗದ ಕಾಳ್ಮಾನಿಸರುಂ, ಪೊಲಸುನಾಱು ವಂಗದ ಪಂಚಮಲದ ಪಾಷಂಡರುಂ, ಬತ್ತಲೆಯೊಡಲ ಬಾಹಿರರುಂ, ಮಿಂಚುದಲೆಯ ವಂಚಕರುಂ, ಕುತರ್ಕದ ಕುತ್ಸಿತರುಂ, ಕುಮಂತ್ರದ ಕುಟಿಲ[1]ರುಂ ಪತಿಯುಂ ಪಳಿವ ಪಾಪ ಕರ್ಮರುಂ, ನಿಗಮಮುಮಂ ತೆಗಳ್ವ ನೀಚರುಂ, ನಗೆಗಂಜದ ನಾಣಿಲಿಗಳುಂ, ಕುಂಚದ ಕೂಳರುಂ, ತಟ್ಟಿನ ತಾಮಸರುಂ, ಗುಂಡಿಗೆಯ ಭಂಡರುಂ, ಪುಸಿನುಡಿಯ ಪೊಲೆಯರು ಮೆನಿಪ ಮಲಧಾರಿಗಳ್ಮಸಣವಟ್ಟೆಯ ಮರುಳ್ಗಳಂತೆ ಮಸಕಂಗೊಂಡು, ಮಂತ್ರಕ್ಕೆ ಮಲೆವ ಬೇತಾಳ

ಬೇಕೋ ತಿಳಿಯದು ! ೫೫. 'ಹಲವಾರು ಮಾತುಗಳಿಂದೇನು ಪ್ರಯೋಜನ ! ಯಾವಾಗಲೂ ಸಮಸ್ತ ಜಗತ್ತುಗಳ ಸಮೂಹಕ್ಕೆ ಶಿವನೇ ಕರ್ತೃ. ಬೇರೆ ದೇವರೆಂಬುವರು ಇಲ್ಲ. ನೀವೆಂದುದಕ್ಕೆ ಈ ರೀತಿ ದೃಷ್ಟಾಂತವನ್ನು ಈಗಲೇ ತೋರಿಸಿಕೊಡುತ್ತೇನೆ. ಜೈನಮಂದಿರಗಳ ಸಮೂಹವನ್ನು ಕಿತ್ತುಹಾಕಿ ನೀವು ಒಲವಿನಿಂದ ಪೂಜಿಸುವ ಜಿನರುಗಳ ಮೂರ್ತಿ ಸಮೂಹವನ್ನು ನುಚ್ಚು ನೂರು ಮಾಡಿ ಬಿಸಾಡಿ ಬಿಡುತ್ತೇನೆ.

ವ॥ ಹೀಗೆಂದು ಶೌರ್ಯವನ್ನು ಪ್ರದರ್ಶಿಸಿ, ದೃಢವಾದ ಪ್ರತಿಜ್ಞೆಯನ್ನು ಹೊಂದಿದ ಜೈನ ಜನರನ್ನು ಭಂಗಗೊಳಿಸಿದ ದಾಸಿಮಯ್ಯನ ಸಮರ್ಥವಾದ ಕಠಿಣೋಕ್ತಿಗಳನ್ನು ಕೇಳಿ, ಕೋಪಗೊಂಡ ದಪ್ಪನಾದ ಹೊಟ್ಟೆಯ ಹುಚ್ಚರೂ, ಹರಕು ಕೂದಲಿನ ತಲೆಯುಳ್ಳ ಒರಟರೂ, ಹೇಸಿಗೆಯನ್ನುಂಟು ಮಾಡುವ (ಅಬ್ಬಳಿಕೆಯುಂಟಾಗುವಂತೆ ಕಾಣುವ) ಮೆಯ್ಯುಳ್ಳವರೂ, ಅಜ್ಞಾನದಿಂದ ಕೂಡಿದವರೂ, ನೊಣಗಳು ಮುತ್ತುವ ಕೊಳೆಯಿಂದ ಕೂಡಿದ ಬಾಯುಳ್ಳ ದುಷ್ಟರೂ, ಹಸರು ಗಟ್ಟಿದ (ಪುಳಿಚೆಳ್ಳ ?) ಗಂಟುಗೊಂಡ ಹಲ್ಲುಗಳುಳ್ಳ ನೀಚ ಮನುಷ್ಯರೂ, ಹಾಳು ಮುಖದ ಕಾಡು ಮನುಷ್ಯರೂ (ಭಸ್ಮಾದಿಲೇಪನವಿಲ್ಲದೆ ಇರುವ ಹಾಳು ಮುಖದವರೆಂದು ಭಾವ), ಹೊಲಸು ನಾರುವ ದೇಹವುಳ್ಳ ಪಂಚ ಹೊಲಸುಗಳಾದ ಮೂಗಿನ ಸಿಂಬುಳ, ಕಣ್ಣಿನ ಪಿಚ್ಚು, ಕಿವಿಯ ಕೂರಣೆ, ಹಲ್ಲಿನ ಹಸುರು, ಮೆಯ್ಯ ಕೊಳೆಗಳುಳ್ಳ ನಾಸ್ತಿಕರೂ, ವಸ್ತ್ರವಿಹೀನವಾದ ಮೆಯ್ಯಿಂದ ಕೂಡಿದ ವೇದಾದಿ ಶಾಸ್ತ್ರ ಬಾಹಿರರೂ, ಮಿಂಚುವ ತಲೆಯ ಕೂದಲುಗಳನ್ನು ಕೀಳಿಸಿಕೊಂಡು ಮಿಂಚುತ್ತಿರುವ ತಲೆಯ ಮೋಸಗಾರರೂ, ಕೆಟ್ಟ ತರ್ಕವನ್ನು ಮಾಡುವ ನೀಚರೂ, ಕೆಟ್ಟಮಂತ್ರದ ಕುಟಿಲರೂ, ಈಶ್ವರನನ್ನೇ ನಿಂದಿಸುವ ಪಾಪ ಕರ್ಮಿಗಳೂ, ವೇದಗಳನ್ನೇ ತಿರಸ್ಕರಿಸುವ ನೀಚರೂ, ಲೋಕದ ಜನರ ನಗೆಗೆ ಹೆದರದ ನಾಚಿಗೆಯಿಲ್ಲದ

1 ಲಿಗ (ಚ)

ರಂತೆ ಪಲ್ಮೊಱೆದು, ತುಪ್ಪುಳ್ದಱೆದ ಕೋಳಿಗಳಂತೆ ಮಿಳ್ಮಿಳನೆ ನೋಡುತ್ತುಂ ಕೂಳಂ ಕಂಡ ಕೊತ್ತಳಿಯಂತೆ ಕಳಕಳಂಗೆಯ್ದು, ಬಸದಿಯೊಳೊಳ್ವ ಬಳ್ಳುಗಳಂತೆ ಕೂಗಿಡುತ್ತುಂ, ಮೊಲೆನಾಗಂ[1] ಪಿಡಿದ ಮರ್ಕಟಂಗಳಂತೆ ನಾನಾ ವಿಕಾರಂ ದೋಱಿ ಕಳ್ಳ ಸೊರ್ಕು ತಲೆಗೇಱಿದ ತಳಾಱರಂತೆಬಾಯ್ಗೆ ಬಂದುದಂ ಗಳಪುತ್ತುಂ ತಮ್ಮೊಳೆಲ್ಲರ್ಮಂತಣಂಗೆಯ್ದೊಂದು ಕಪಟೋಪಾಯಮನಾಳೋಚಿಸಿ—

ಕಡು ದುರುಳಂ ಶೈವನಿವಂ
ಮಡಿಪನೆ ಮಾಣ್ದಪದೆ ಬಳಿಯಿನೆಮ್ಮಂ ಮುನ್ನಂ
ಬಿಡದೀತಂ ಮಡಿವವೊಲೆಡೆ
ಯುಡುಗದೆ ನೆಗಳಲ್ಕೆವೇಳ್ಕುಮೆಂದಾ ಶವಣರ್ ೫೬

ಪಟುಗರಳ ಪಾವಕಪ್ರ
ಸ್ಫುಟಚಳರಸನಾಗ್ರಪಾಟಲಸ್ಫುಟಚಟುಲೋ
ತ್ಕಟಭೀಕರಮುಖಫಣಿಯಂ
ಕುಟಿಲಾತ್ಮರ್ ಘಟದೊಳಿಟ್ಟು ಮುಂದಿಳುಪುತ್ತುಂ ೫೭

ಗಡಬಡಿಸುತ್ತೆ ನೀಂ ಗಳಪದಿರ್ಪಲವಂ ಶಿವನಿರ್ಪನಿರ್ಪನೆ
ಲ್ಲೆಡೆಯೊಳಮೆಂದು ಪೂಣ್ದೆ ಗಡ ಕಂಡಪೆವೀ ಘಟಮಂ ತುಡುಂಕಿ ತ

ವರೂ, ನವಿಲುಗರಿಯ ಕುಂಚವನ್ನು ಕೈಯಲ್ಲಿ ಹಿಡಿದ ದುಷ್ಟರೂ, ಗುಂಪು ಕೂಡಿದ ತಮೋಗುಣವುಳ್ಳವರೂ, ಕೆಟ್ಟ ಧೈರ್ಯವುಳ್ಳ ಎದೆಯ ಭಂಡರೂ, ಸುಳ್ಳು ಮಾತಿನ ಹೊಲೆಯರು ಎಂದೆನಿಸುವ ಅಶುದ್ಧಿಯಿಂದ ಕೂಡಿ ಶ್ಮಶಾನ ಮಾರ್ಗದಲ್ಲಿರುವ ಪಿಶಾಚಿಗಳ ಹಾಗೆ ಕೋಪಾತಿಶಯದಿಂದ ಕೂಡಿ, ಮಂತ್ರ ಹಾಕಿದೊಡನೆ ಮಲೆತು ನಿಲ್ಲುವ ಬೇತಾಳಗಳ ಹಾಗೆ ಹಲ್ಲು ಕಡಿಯುತ್ತ, ತುಪ್ಪಳಗಳನ್ನು ತೆರೆದ ಕೋಳಿಗಳ ಹಾಗೆ ಮಿಳಮಿಳನೆ ನೋಡುತ್ತ, ಕೂಳನ್ನು ಕಂಡ ಕಾಗೆಗಳ ಸಮೂಹದಂತೆ ಕಳಕಳ ಧ್ವನಿಯನ್ನು ಮಾಡಿ, ಬಸದಿಗಳಲ್ಲಿ (ಜಿನವಸತಿಯಲ್ಲಿ) ನರಿಗಳ ಹಾಗೆ ಕೂಗಾಡುತ್ತ, ಮಲರೋಗ (ಮೂರ್ಛೆರೋಗ) ಬಂದ ಕೋತಿಗಳ ಹಾಗೆ ನಾನಾ ಬಗೆಯ ವಿಕಾರಗಳನ್ನು ತೋರಿಸಿ, ಹೆಂಡದ ಮದವು ತಲೆಗೇರಿದ ಊರಿನ ಗಸ್ತು ತಿರುಗುವ ತಳವಾರರಂತೆ ಬಾಯಿಗೆ ಬಂದದ್ದನ್ನೇ ಗಳಪುತ್ತ, ತಮ್ಮ ಎಲ್ಲ ಜನರೂ ಒಟ್ಟಾಗಿ ಸೇರಿ ಯೋಚನೆ ಮಾಡಿ ಒಂದು ಕಪಟೋಪಾಯವನ್ನು ಆಲೋಚಿಸಿ ೫೬–೫೮. ಈ ಶೈವನು ಮಹಾ ದುಷ್ಟನು ನಮ್ಮನ್ನು ಕೊಲ್ಲದೆ ಬಿಡುವುದಿಲ್ಲ. ನಮ್ಮನ್ನು ಕೊಲ್ಲುವುದಕ್ಕೆ ಮೊದಲೇ, ತಪ್ಪದೆ ಈತನನ್ನು ಕಾಲಾವಕಾಶ ಕೊಡದೆ ಸಾಯುವ ಹಾಗೆ ಮಾಡಬೇಕು, ಎಂದು ಆ ಜೈನ ಸಂನ್ಯಾಸಿಗಳು ತೀಕ್ಷ್ಣ ವಿಷದ ಅಗ್ನಿಯಿಂದಲೂ, ಸ್ಫುಟವಾಗಿ ಕಾಣುತ್ತ ಚಲಿಸುತ್ತಿರುವ ನಾಲಿಗೆಯ ತುದಿಯುಳ್ಳದ್ದೂ, ಕೆಂಪಾದ ಬಣ್ಣದ ಹೆಡೆಯಿಂದ ಚಂಚಲವಾಗಿ ಕಾಣುವ, ವಿಶೇಷ ಭಯವನ್ನುಂಟು ಮಾಡುವ ಮುಖವನ್ನು ಹೊಂದಿದ್ದೂ ಆದ ಒಂದು ಹಾವನ್ನು

1 ರಂ (ಚ)

ನ್ನೃದನಿದಱಲ್ಲಿ ತಳ್ತಿಸೆವನೆಂಬುದನೀಗಳೆ ತೋಱಿಸಾಗದಿ
ರ್ದೊಡೆ ಬಿಡು ನಿನ್ನ ಬಿನ್ನಣಮನೆಂದೆನೆ ಕೇಳ್ದು ಕನಲ್ದು ನೋಡಿದಂ ೫೮

ವ॥ ಅಂತು ನೋಡಿ ರಾಜಾಮಾತ್ಯ ದಂಡನಾಥ ಮಂಡಳಿಕ ಸಾಮಂತ ಭೂಮೀಶ್ವರಾದಿ ಗಳ್ನೆರೆದಚ್ಚರಿ ಮಿಗೆ ನಿರೀಕ್ಷಿಸುತ್ತುಮಿರೆ ತದಾಸ್ಥಾನಮಧ್ಯದಲ್ಲಿ—

ರಾಮನಾಥನೆ ವಿಶ್ವದೊಳ್ಪರಿಪೂರ್ಣನೆಂಬುದೆ ಸತ್ಯವಾ
ರಾಮನಾಥನ ಭಕ್ತರೇ ಭುವನತ್ರಯಾಧಿಕರಾವಗಂ
ರಾಮನಾಥನನೊಲ್ದು ಪೂಜಿಸದಾತ್ಮರೇ ದುರಿತಾತ್ಮರೀ
ರಾಮನಾಥನೆ ದೇವನೆಂದಿಳೆ ಮೆಚ್ಚೆ ದೃಷ್ಟಮನೀಕ್ಷಣಂ ೫೯

ತೋಱುವೆನೀ ಜಿನಮತಮಂ
ಪಾಱಿಪೆನೆಂದಣ್ಮಿತಾದ್ಯ ನವಭಕ್ತರ ಪೆಂ
ಪೇಱಿದ ಪದನಳಿನಂಗಳ
ಜಾಱದೆ ನೆಱೆ ನಿಂದು ಜಾನಿಸುತ್ತಧಟಿಂದಂ ೬೦

ವ॥ ಶಂಭುಸನ್ನಿಭಂ ಕುಂಭಿನೀಪತಿಯಿದಿರೊಳ್ಕುಂಭಕುಂಭೀನಸಮಂ ನಿಂದು ನಿರೀಕ್ಷಿಪಾಗಳ್—

ಆ ಕುಟಿಲವಾದ ಆತ್ಮವುಳ್ಳ ಜೈನರು ಘಟವೊಂದರಲ್ಲಿಟ್ಟು, ದಾಸಿಮಯ್ಯನ ಮುಂದೆ ಆ ಕುಂಭವನ್ನಿಟ್ಟು (ಎಲೈ ಶೈವನೇ) ನೀನು ಗಡ ಬಡಿಸುತ್ತ ಹಲವಾರು ವ್ಯರ್ಥವಾದ ಮಾತುಗಳನ್ನು ಆಡಬೇಡ. ಶಿವನು ಎಲ್ಲೆಲ್ಲೂ ಇದ್ದಾನೆ ! ಇದ್ದಾನೆ ! ಎಂದು ಪ್ರತಿಜ್ಞೆ ಮಾಡಿ ಹೇಳಿದೆಯಲ್ಲವೇ ! ಅದನ್ನು ನಾವು ಕಾಣಬೇಕು. ಈ ಘಟದೊಳಗೆ ಕೈಯಿಟ್ಟು, ಆ ನಿನ್ನ ಶಿವನು ಇದರಲ್ಲಿಯೂ ಬೆಸುಗೆಗೊಂಡು (ವ್ಯಾಪ್ತಿಗೊಂಡು) ಶೋಭಿಸುತ್ತಿದ್ದಾನೆಂಬುದನ್ನು ಈಗಲೇ ನಮಗೆ ತೋರಿಸಿಕೊಡು. ಆಗದಿದ್ದರೆ ನಿನ್ನ ಈ ಬಿನ್ನಾಣವನ್ನು ಬಿಟ್ಟು ಬಿಡು.' ಎನ್ನಲಾಗಿ, ಅವರ ಮಾತನ್ನು ಕೇಳಿ, ರೋಷಗೊಂಡು ನೋಡಿದನು. ವ॥ ಹಾಗೆ ರೋಷದಿಂದ ನೋಡಿ, ರಾಜ, ಅಮಾತ್ಯ, ದಂಡನಾಥ, ಮಾಂಡಲಿಕ, ಸಾಮಂತರೇ ಮೊದಲಾದ ಭೂಮೀಶ್ವರರುಗಳೇ ಆದಿಯಾಗಿ ಎಲ್ಲರೂ ನೆರೆದು ವಿಶೇಷಾಶ್ಚರ್ಯದಿಂದ ನೋಡುತ್ತಿದ್ದಂತೆ ಆ ಜಯಸಿಂಹ ಮಹಾರಾಜನ ಆಸ್ಥಾನ ಮಧ್ಯದಲ್ಲಿ ೫೯–೬೦. ರಾಮನಾಥನೇ ವಿಶ್ವದಲ್ಲಿ ಪರಿಪೂರ್ಣನಾದವನೆಂಬುದೇ ಸತ್ಯ ; ಆ ರಾಮನಾಥನ ಭಕ್ತರೇ ಯಾವಾಗಲೂ, ಮೂರುಲೋಕಗಳಲ್ಲೂ ಶ್ರೇಷ್ಠರು ; ಆ ರಾಮನಾಥನನ್ನು ಭಕ್ತಿಯಿಂದ ಪೂಜಿಸದಿರುವ ಮನುಷ್ಯರೇ ಪಾಪಾತ್ಮರಾದವರು ; ಈ ರಾಮನಾಥನೇ ದೇವನೆಂದು ಭೂಮಂಡಲವೆಲ್ಲ ಮೆಚ್ಚುವಂತೆ ದೃಷ್ಟವನ್ನು (ಪ್ರತ್ಯಕ್ಷ ಪ್ರಮಾಣವನ್ನು) ಈ ಕ್ಷಣದಲ್ಲಿಯೇ ತೋರಿಸಿಕೊಡುತ್ತೇನೆ. ಈ ಜೈನ ಮತವನ್ನು ಓಡಿಸಿ ಬಿಡುತ್ತೇನೆ, ಎಂದು ಪ್ರತಿಜ್ಞೆ ಮಾಡುತ್ತ (ಶೌರ್ಯವನ್ನು ಪ್ರಕಟಿಸುತ್ತ) ಪುರಾತನರಾದವರ, ನೂತನರಾದ ಭಕ್ತರ ಘನತೆಯಿಂದ ಕೂಡಿದ ಪಾದಕಮಲಗಳನ್ನು (ಹೃದಯದಲ್ಲಿ) ಜಾರದಂತೆ ಚೆನ್ನಾಗಿ ಪರಾಕ್ರಮ ವಿಶಿಷ್ಟನಾಗಿ ನಿಂತು ಧ್ಯಾನ ಮಾಡುತ್ತ ವ॥ ಶಿವ ಸದೃಶನಾದ ಜೇಡರದಾಸಿಮಯ್ಯನು ರಾಜನ ಎದುರಿನಲ್ಲಿ ಇಟ್ಟಂಥ ಘಟದಲ್ಲಿರುವ

ಸ್ಫುಟಕೋಪಾಟೋಪನಿರ್ಯದ್ಗರಳ ಶಿಖಿಶಿಖಾವಿಸ್ಫುರದ್ವಿಸ್ಫುಲಿಂಗೋ
ತ್ಕಟಧೂಮಶ್ವಾಸಭೀಷ್ಮಾನನಮತಿಚಳಪುಚ್ಛಟಾಗ್ರಸ್ಫಟಾತ
ದ್ಘಟಗರ್ಭಾಸ್ಫಾಲನಾಪ್ರಕ್ರಿಯಮಧಿಗತಘೂತ್ಕಾರ ಸಂಚಾಲಿತೋದ್ಯ
ತ್ಪಟುಜಿಹ್ವಾಪೂರ್ಣಕಾಯಂ ನಿಜಬಳಜಿತಕರ್ಕೋಟಕಂ ಕ್ರೂರಸರ್ಪಂ ೬೧

ಕೊಡದೊಳ್ಕಣ್ಗೊಪ್ಪೆ ಕೆಯ್ಯಿಟ್ಟಡಸಿ ತುಡುಕಿದಂ ಭೋಗಿಭೂಷೋಪಮಂ ಪೆಂ
ಪಿಡಿದಾ ಘೋರಾಹಿ ಶಿಷ್ಯಂ ಗುರುಕರಕಮಳಸ್ಪರ್ಶದಿಂದೀಶಭಾವಂ
ಬಡೆದಂತಾ ದಾಸದೇವಸ್ಫುಟಕರಕಮಳಸ್ಪರ್ಶದಿಂ ಪೂರ್ವಭಾವಂ
ಕಿಡೆ ಭಾಸ್ವಲ್ಲಿಂಗರೂಪಂದಳೆದು ಪೊಳೆದು ಕಣ್ಗೆಡ್ಡಮಾಗಿರ್ದುದಾಗಳ್ ೬೨

ಪಳಿದರ್ಕಪ್ರಾಂಶುವಂ ಪಜ್ಜಳಿಪ ಶಶಿಮಯೂಖಾಳಿಯಂ ತೂಳ್ದು ಲೋಕಾ
ವಳಿಯಂ ಪ್ರಕ್ಷಾಳನಂಗೆಯ್ದೆಸೆಯೆ ವಿಮಳ ಲಿಂಗಪ್ರಭಾಮಂಡಳಂ ಕಂ
ಡಿಳೆಯಾಣ್ಮಂಗೂಡಿ ಸರ್ವರ್ತಲೆಯನೊಲೆದು ಕೊಂಡಾಡಿದರ್ದೇವಿ ತನ್ಮಂ
ಜುಳ ಪಾದಾಂಭೋಜಕುರ್ವುತ್ತೆಱಗಿ ರಮಣವಕ್ತ್ರಾಬ್ಜಮಂ ನೋಡುತೆಂದಳ್ ೬೩

ಸರ್ಪವನ್ನು ನಿಂತು ನೋಡುತ್ತಿರುವಾಗ ೬೧–೬೨. ಕೋಪಾತಿಶಯದಿಂದ ಸ್ಪಷ್ಟವಾಗಿ ಹೊರ ಹೊಮ್ಮುತ್ತಿರುವ ವಿಷಾಗ್ನಿಯ ಜ್ವಾಲೆಯಿಂದ ಪ್ರಕಾಶಮಾನವಾದ ಕಿಡಿಗಳ ಸಮೂಹಗಳು ಹಾರುತ್ತಿದ್ದವು. ಶ್ವಾಸದಿಂದ ಹೊಗೆಯು ಹೊರಹೊಮ್ಮಿ ಭಯಂಕರ ವಾಗಿ ಮುಖವು ಕಾಣುತ್ತಿತ್ತು. ಬಾಲದ ತುದಿಯೂ ಹೆಡೆಯೂ ಅತಿಯಾಗಿ ಚಲಿ ಸಾಡುತ್ತಿದ್ದುವು. (ಹೀಗೆ) ಆ ಕುಂಭದೊಳಗಡೆಯಲ್ಲಿ ಮೈಮುರಿಯುತ್ತ ಹೊಡೆದಾಡುವ ಕ್ರಿಯೆಯಿಂದ ಕೂಡಿತ್ತು. ವಿಶೇಷವಾಗಿ ಭುಸುಗುಡುತ್ತ ಹೊರಗಡೆ ಹಿರಿಯುವ ದೊಡ್ಡದೂ ಸಮರ್ಥವೂ ಆದ ನಾಲಿಗೆಯಿಂದ ಕೂಡಿತ್ತು. ತುಂಬಿದ ದೇಹದಿಂದ ಕೂಡಿತ್ತು. ತನ್ನ ಪರಾಕ್ರಮದಿಂದ ಕಾರ್ಕೋಟಕವೆಂಬ ದೊಡ್ಡ ಹಾವನ್ನು ಜಯಿಸಿದ ಕ್ರೂರ ಸರ್ಪವು ಆ ಕೊಡದೊಳಗೆ ಈ ರೀತಿ ಶೋಭಿಸುತ್ತಿತ್ತು. (ಅಂಥ) ಸರ್ಪವನ್ನು ಹಾವುಗಳೇ ತೊಡಿಗೆಯಾಗಿ ಉಳ್ಳವನಾದ ಶಿವ ಸದೃಶನಾದ ದಾಸಿಮಯ್ಯ ಕೈಚಾಚಿ ಕೊಡದೊಳಗಿಟ್ಟು ಹಿಡಿಯಲಾಗಿ, ಮಹತ್ವದಿಂದ ಕೂಡಿದ ಆ ಘೋರ ಸರ್ಪವು–ಶಿಷ್ಯ ನಾದವನು ಗುರುವಿನ ಕರಕಮಲದ ಸ್ಪರ್ಶದಿಂದ ಈಶ್ವರ ಸದ್ಭಾವವನ್ನು ಪಡೆದ ಹಾಗೆ ಆ ದಾಸಿಮಾರ್ಯನ ಸ್ಫುಟವಾದ ಕಮಲ ಸದೃಶ ಕೈಗಳ ಸ್ಪರ್ಶದಿಂದ (ಆ ಹಾವಿನ) ಪೂರ್ವ ಭಾವವೆಲ್ಲ ನಾಶವಾಗಿ ಪ್ರಕಾಶಮಾನವಾದ ಲಿಂಗರೂಪವನ್ನು ಹೊಂದಿ ಹೊಳೆ ಯುತ್ತ ನೋಡುವುದಕ್ಕೆ ಮನೋಹರವಾಗಿ ಕಂಡಿತು. ಆಗ ಸೂರ್ಯನ ಕಿರಣಗಳ ತೇಜಸ್ಸನ್ನೂ ಕೀಳು ಮಾಡಿದ, ಹೊಳೆಯುತ್ತಿರುವ ಚಂದ್ರನ ಕಿರಣಗಳ ಸಮೂಹವನ್ನು ಮೆಟ್ಟಿ ಹಾಕಿದ ಆ ಲಿಂಗದ ಶ್ರೇಷ್ಠವಾದ ಪ್ರಭೆಯ ಮಂಡಲವು ಸಮಸ್ತ ಲೋಕಗಳ ಸಮೂಹವನ್ನೂ ತೊಳೆದು ಹಾಕಿ ಪ್ರಕಾಶಿಸತೊಡಗಿತು, ಇದನ್ನು ಕಂಡು ಮಹಾರಾಜ ನಾದ ಜಯಸಿಂಹನೊಡನೆ ಕೂಡಿ ಸರ್ವರೂ ತಲೆದೂಗಿ ಕೊಂಡಾಡಿದರು. ಸುಗ್ಗಲಾ ದೇವಿಯು ಆ ದಾಸಿಮಾರ್ಯರ ಪಾದಕಮಲಗಳಿಗೆ ಉತ್ಸಾಹಗೊಂಡು ನಮಸ್ಕರಿಸುತ್ತ

ಇನ್ನಾದೊಡಮೆಲೆ ಮದ್ಗುರು
ವಂ ನಂಬೆರಡಿಲ್ಲದೆಂದ ರಮಣಿಯ ನುಡಿಗಾ
ತಂ ನಲಿದು ದಾಸಿಮಯ್ಯನ
ಪನ್ನಳಿನಕ್ಕೆಱಗಿ ಪಾವನಾತ್ಮಕನಾದಂ ೬೪

ಕರುಣಂಗೆಯ್ದೆಱಗಿರ್ದ ತದ್ವಿಭುಗಮಂಜುತ್ತುಂ ಶರಣ್ಬೊಕ್ಕ ತ
ದ್ಗುರು ಜೈನಾಳಿಗಮೊಲ್ದು ದೀಕ್ಷೆಗುಡುತುಂ ಸದ್ಭಕ್ತರಂ ಮಾಡಿ ಮಿ
ಕ್ಕರನೆಳ್ಚಟ್ಟಿ ನೆಗಳ್ಚಿ ಸುಗ್ಗಲೆಗೆ ಪೂರ್ಣೋತ್ಸಾಹಮಂ ತಜ್ಜಿನೋ
ತ್ಕರ ಗೇಹಂಗಳನೊತ್ತಿ ಕಿಳ್ತಿಡಿಸಿ ದಾಸಂ ತನ್ನ ಶಿಷ್ಯರ್ಕಳಿಂ ೬೫

ಧರಣಿಪನಾಳ್ವ ಭೂಸತಿಗೆ ದೀಕ್ಷೆಯನೀವವೊಲಾತ್ಮಪಾಣಿಪಂ
ಕರುಹದೊಳುದ್ಭವಂಬಡೆದ ತದ್ವಿಮಳಸ್ಫಟಿಕಾಂಗಲಿಂಗಮಂ
ಭರದೆ ನಿಜೋತ್ತರಂ ಜಯಿಸೆ ತಾನೊಗೆತಂದುದಱಿಂದಮುತ್ತರೇ
ಶ್ವರನೆನಿಪಾಖ್ಯೆಯಂ ರಚಿಸಿ ತತ್ಪುರಮಧ್ಯದೆ ಹೇಮಗೇಹದೊಳ್ ೬೬

ದಾಸಂ ಪ್ರತಿಷ್ಠೆಗೆಯ್ದು ವಿ
ಲಾಸಂ ಮಿಗೆ ರಾಜಪೂಜೆಯಂ ಕೆಯ್ಕೊಂಡಾ

ತನ್ನ ಗಂಡನ ಮುಖಕಮಲವನ್ನು ನೋಡುತ್ತ ಈ ರೀತಿ ಹೇಳಿದಳು : ೬೪. 'ಎಲೈ, ಇನ್ನಾದರೂ ಎರಡಿಲ್ಲದಂತೆ ನನ್ನ ಗುರುವನ್ನು ನಂಬು.' ಎಂದ ಹೆಂಡತಿಯ ಮಾತಿಗೆ ಆತನು ನಲಿದು ದಾಸಿಮಯ್ಯನ ಪಾದ ಕಮಲಕ್ಕೆರಗಿ ಪರಿಶುದ್ಧವಾದ ಆತ್ಮವುಳ್ಳವನಾದನು. ೬೫. ನಮಸ್ಕಾರ ಮಾಡಿದ ಆ ಜಯಸಿಂಹನೆಂಬ ರಾಜನಿಗೆ ಕರುಣವನ್ನು ತೋರಿಸಿ, ಶರಣಾಗತನಾದ ಆ ರಾಜನು ಗುರುಗಳಾದ ಜೈನ ಸಮೂಹಕ್ಕೆ ಒಲಿದು ಶಿವ ದೀಕ್ಷೆಯನ್ನು ಕೊಟ್ಟು, ಸದ್ಭಕ್ತನ್ನಾಗಿ ಮಾಡಿದನು. ಮಿಕ್ಕವರುಗಳನ್ನು ಅಲ್ಲಿಂದ ಎಬ್ಬಿಸಿ, ಓಡಿ ಹೋಗುವಂತೆ ಮಾಡಿದನು. ಸುಗ್ಗಲಾದೇವಿಗೆ ಪೂರ್ಣೋತ್ಸಾಹವಾಗುವಂತೆ ಮಾಡಿದನು. ಅಲ್ಲಿರುವ ಶ್ರೇಷ್ಠ ಜಿನಮಂದಿರಗಳನ್ನೆಲ್ಲ ದಾಸಿಮಯ್ಯನು ತನ್ನ ಶಿಷ್ಯರುಗಳಿಂದ ಒತ್ತಿ ಕಿತ್ತು ಹಾಕಿಸಿದನು. ೬೬. ಭೂಮೀಶ್ವರನಾದ ಜಯಸಿಂಹನಾಳುವ ಭೂಮಿಯೆಂಬ ಸ್ತ್ರೀಯಳಿಗೆ ದೀಕ್ಷೆಯನ್ನು ಮಾಡುವಂತೆ ತನ್ನ ಕರಕಮಲದಲ್ಲಿ ಉದ್ಭವಗೊಂಡ ಆ ಶ್ರೇಷ್ಠವಾದ ಸ್ಫಟಿಕ ಶರೀರವುಳ್ಳ ಲಿಂಗವನ್ನು ಭರದಿಂದ ವಾದದಲ್ಲಿ ತಾನು ಕೊಟ್ಟ ಉತ್ತರಕ್ಕೆ ಜಯವುಂಟಾದ ಕಾರಣದಿಂದ ಮೂಡಿಬಂದ ಲಿಂಗವಾದ್ದರಿಂದ 'ಉತ್ತರೇಶ್ವರ' ಎಂಬ ಹೆಸರನ್ನಿಟ್ಟು ಆ ಪಟ್ಟಣ ಮಧ್ಯದಲ್ಲಿ ಸುವರ್ಣದಿಂದ ನಿರ್ಮಿತವಾದ ಗುಡಿಯಲ್ಲಿ ದಾಸಿಮಯ್ಯನು ಪ್ರತಿಷ್ಠೆಮಾಡಿದನು. ವಿಶೇಷ ವೈಭವದಿಂದ ರಾಜಪೂಜೆಯನ್ನು ಆ ಪಟ್ಟಣದಲ್ಲಿ ಸ್ವೀಕರಿಸಿ, ಆ ಜಯಸಿಂಹ ಭೂಪಾಲನೂ, ಆತನ

ಭೂಪತಿಯಂರಸನನರಸಿಯು
ಲೇಸೆನೆ ಸುಖವಿರಿಸಿ ನಿಜಪುರಕ್ಕೇಳ್ತಂದಂ ೬೭

ವ॥ ಅಂತೇಳ್ತಂದು ಶಿವಗಣಸಪರ್ಯೋತ್ಸವದಿಂ ಸುಖಮಿರ್ದನೆಂದು—

ಪೇಳುತ್ತೇಕಾಂತರಾಮಂ ಜಿನಪದಭಜಕಂಗಿಂತು ಜೈನಪ್ರತಾನ
ಪ್ರಾಲೇಯೊದ್ದಂಡ ಚಂಡಪ್ರಭನಿಭಶರಣಾಲಾಪಮಂ ಮತ್ತಮೊಂದಂ
ಪೇಳಲ್ಕೆಂದಿರ್ದ ಪಾಂಗಂ ತಿಳಿದು ತಳೆದು ಸಾಶ್ಚರ್ಯಸಂತೋಷಮಂ ಸ
ತ್ಯಾಳಾಪಂ ಭಕ್ತರೊಳ್ಪೇಳುತೆ ಸುಖಮೆಸೆದಂ ವೀರಶೈವಾಬ್ಧಿಚಂದ್ರಂ ೬೮

ಘನತರ ಕೋವೂರಾ ಬೊ
ಮ್ಮನ ಕಥೆಯಂ ಭಕ್ತಿಯಿಂದೆ ಪೇಳ್ದಾಲಿಪ ಸ
ಜ್ಜನರೈಹಿಕಮಾಮುಷ್ಮಿಕ
ವಿನುತಸುಖಂಬಡೆವರೀಶಭಕ್ತರ ಕೃಪೆಯಿಂ ೬೯

ದಾಸಿಮಯ್ಯನ ಕಥಾಪ್ರಸಂಗಮಂ
ಲೇಸೆನಿಪ್ಪ ನಿಜಭಕ್ತಿಯಿಂದೆ ಕೇ
ಳ್ದಾ ಸಮಸ್ತ ಮನುಜರ್ಗೆ ಮಾಳ್ಪನೆ
ಲ್ಲಾ ಸಮುನ್ನತ ಸುಖಂಗಳಂ ಶಿವಂ ೭೦

ರಾಣಿಯಾದ ಸುಗ್ಗಲಾದೇವಿಯೂ, ಕೃತಾರ್ಥರಾಗುವಂತೆ ಮಾಡಿ, ಸುಖವಾಗಿ ಇರಿಸಿ, ತನ್ನ ಊರಿಗೆ ಹೊರಟುಬಂದನು. ವ॥ ಈ ರೀತಿ ಹೊರಟು ಬಂದು ಶಿವಗಣಗಳ ಸಹವಾಸದಿಂದುಂಟಾದ ಉತ್ಸಾಹದಿಂದ ಸುಖವಾಗಿ ಇದ್ದನೆಂದು ೬೮. ಹೇಳುತ್ತ ಏಕಾಂತ ರಾಮಯ್ಯನು ಜಿನನ ಪಾದ ಭಜಕನಿಗೆ ಜೈನ ಸಮೂಹವೆಂಬ ಮಂಜಿಗೆ ಪ್ರಬಲ ಸೂರ್ಯ ಸಮಾನನಾದ ಶರಣನ ಮತ್ತೊಂದು ಕಥೆಯನ್ನು ಹೇಳುವುದಕ್ಕೆಂದು ತೊಡಗಿದ ರೀತಿಯನ್ನು ತಿಳಿದು ಆಶ್ಚರ್ಯ ಸಮೇತ ಸಂತೋಷವನ್ನು ಹೊಂದಿ ಸತ್ಯವಾದ ಆಲಾಪವುಳ್ಳ (ಯಥಾರ್ಥವಾದ ಮಾತುಳ್ಳ) ವೀರಶೈವವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವ ಬಸವೇಶ್ವರನು ಭಕ್ತರಲ್ಲಿ ಆ ಕಥೆಯನ್ನು ಹೇಳುತ್ತ ಸುಖವಾಗಿರುತ್ತ ಶೋಭಿಸುತ್ತಿದ್ದನು. ೬೯. ಶ್ರೇಷ್ಠವಾದ ಆ ಕೋವೂರ ಬೊಮ್ಮಯ್ಯನ ಕಥೆಯನ್ನು ಭಕ್ತಿಯಿಂದ ಹೇಳುವ, ಕೇಳುವ ಸಜ್ಜನರುಗಳು ಐಹಿಕವಾದ ಆಮುಷ್ಮಿಕವಾದ ಶ್ಲಾಘ್ಯವಾದ ಸುಖವನ್ನು ಈಶಭಕ್ತರ ಕೃಪೆಯಿಂದ ಪಡೆಯುವರು. ೭೦. ದಾಸಿಮಾರ್ಯನ ಕಥಾಪ್ರಸಂಗವನ್ನು ಒಳ್ಳೆಯದೆನಿಸುವ ಸತ್ಯದಿಂದ ಕೂಡಿದ ಭಕ್ತಿಯಿಂದ ಕೇಳಿದ ಆ ಸಮಸ್ತ

ಹರಿವಿರಿಂಚಿಸುರರಾಜಪೂಜಿತೇ
ಸುರುಚಿರಾರ್ಕರುಚಿರಾಜಿರಾಜಿತೇ
ಸುರಪರಪ್ರಹರೆ ಪಾಶವರ್ಜಿತೇ
ಗಿರಿತನೂಜೆ ಜಯ ಶಂಕರಾನ್ವಿತೇ ೭೧

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಕೋವೂರ ಬ್ರಹ್ಮದಾಸದೇವಾದಿವಿಜಯ ಕಥನಂ

ಪಂಚತ್ರಿಂಶಾಶ್ವಾಸಂ ಸಮಾಪ್ತಂ.

ಅಂತು ಆಶ್ವಾಸ ೩೫ಕ್ಕೆ ಪದಗಣನೆ ೨೪೦೭ಕ್ಕೆ ಮಂಗಳಮಹಾ ಶ್ರೀ॥

ಮನುಷ್ಯರಿಗೆ ಶಿವನು ಎಲ್ಲಾ ರೀತಿಯ ಶ್ರೇಷ್ಠ ಸುಖಗಳನ್ನು ಮಾಡುವನು. ೭೧. ವಿಷ್ಣು, ಬ್ರಹ್ಮ, ದೇವೇಂದ್ರಾದಿಗಳಿಂದ ಪೂಜೆಗೊಳ್ಳುವವಳೇ, ಮನೋಹರವಾದ ಸೂರ್ಯನ ಕಾಂತಿಗಳೋಪಾದಿಯಲ್ಲಿರುವ ಕಾಂತಿಗಳ ಸಮೂಹದಿಂದ ವಿರಾಜಿಸುವವಳೇ, ಸುರರ ವೈರಿಗಳಾದ (ಸುರ + ಪರ) ರಾಕ್ಷಸರುಗಳನ್ನು ಸಂಹಾರ ಮಾಡಿದವಳೇ, ತೃಷೆ, ಶಂಕೆ, ಭೀತಿ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಗರ್ವವೆಂಬ ಪಾಶಗಳಿಂದ ದೂರಳಾದವಳೇ, ಶಂಕರನೊಡನೆ ಒಡಿವೆರೆದವಳೇ, ಗಿರಿರಾಜ ಕುಮಾರಿಯೇ ಜಯ.

ಮೂವತ್ತೈದನೆಯ ಆಶ್ವಾಸವು ಸಮಾಪ್ತವಾಯಿತು.

# ಷಟ್ತ್ರಿಂಶಾಶ್ವಾಸಂ

## [ಮಾರುಡಿಗೆ ನಾಚಯ್ಯ–ವೈಜಾಂಬೆಯರ ಕಥೆ]

ಶ್ರೀಮಂಗಳಮಯಗೌರೀ
ಹೇಮಾಂಭೋಜಾಸ್ಯಸೌರಭಾಸ್ವಾದನಸು
ಪ್ರೇಮಂ ಪ್ರಣತಶರಣ
ಸ್ತೋಮಂ ಪೊರೆಗೆಮ್ಮನೊಲ್ಮೆಯಿಂ ಶಿವಲಿಂಗಂ ೧

ಎಲೆ ಶವಣ ಕೇಳ್ವುದಿನ್ನುಂ
ಖಲಜೈನರ ಭಂಗಮಂ ಸಮಂತೆಸಗಿದ ನಿ
ಶ್ಚಲಭಕ್ತರ ಕಥೆಗಳನೆಂ
ದಲಘುತರಂ ರಾಮನಾಥವಿಭುವಿಂತೆಂದಂ ೨

ಪೊಡವಿಯೊಳೆ ಪೆಸರ್ವಡೆದ ಮಾ
ರುಡಿಗೆಯೆನಿಪ್ಪೊಂದು ಪೊಳಲೊಳಿಪ್ಪವನೊರ್ವಂ
ಕಡುಗಲಿ ನಾಚಯ್ಯಂ ದೃಢ
ಮೃಡಭಕ್ತಂ ಗುಪ್ತಭಕ್ತಿಯಿಂ ವರ್ತಿಸುತುಂ ೩

ಆ ನಗರದೊಳೆಸೆದಿರ್ಪರ್
ಜೈನರಸಂಖ್ಯಾತರವರ ಮಧ್ಯದೊಳಿರ್ಪಂ
ತಾನೊರ್ವನಲ್ಲಿ ಘೂಕವಿ
ತಾನದ ನಡುವೆಸೆವ ರಾಜಹಂಸನ ತೆಱದಿಂ ೪

### ಮಾರುಡಿಗೆಯ ನಾಚಯ್ಯ–ವೈಜಾಂಬೆಯರ ಕಥೆ

೧. ಮಂಗಳಮಯಳಾದ ಶ್ರೀ ಗೌರಿಯ ಕನಕಕಮಲದಂತಿರುವ ಮುಖದ ಸುಗಂಧವನ್ನು ಆಸ್ವಾದನ ಮಾಡುವುದರಲ್ಲಿ ಒಳ್ಳೆಯ ಅನುರಾಗವುಳ್ಳವನೂ, ನಮಸ್ಕರಿಸುತ್ತಿರುವ ಶರಣರ ಸಮೂಹವುಳ್ಳ ಶಿವಲಿಂಗನು ಪ್ರೀತಿಯಿಂದ ನಮ್ಮನ್ನು ರಕ್ಷಿಸಲಿ. ೨. ಎಲೈ ಜೈನನೇ, ದುಷ್ಟರಾದ ಜೈನರ ನಾಶವನ್ನು ಚೆನ್ನಾಗಿ ಮಾಡಿದ ನಿಶ್ಚಲರಾದ ಭಕ್ತರ ಅತ್ಯಧಿಕವಾದ ಕಥೆಗಳನ್ನು ಇನ್ನೂ ಕೇಳು, ಎಂದು ರಾಮನಾಥ ವಿಭುವು ಹೀಗೆ ಹೇಳಿದನು : ೩. ಭೂಮಂಡಲದಲ್ಲಿ ಹೆಸರುವಾಸಿಯಾದ ಮಾರುಡಿಗೆ ಯೆಂಬ ಪಟ್ಟಣದಲ್ಲಿ ದೃಢವಾದ ಈಶ್ವರ ಭಕ್ತಿಯಿಂದ ಕೂಡಿದ ಒಬ್ಬ ಅತ್ಯಂತ ಶೂರನಾದ 'ನಾಚಯ್ಯ' ಎಂಬ ಹೆಸರಿನ ಭಕ್ತನು ಗುಪ್ತವಾಗಿ ಭಕ್ತಿಯನ್ನು ಆಚರಿಸುತ್ತ ಇದ್ದನು. ೪. ಆ ನಗರದಲ್ಲಿ ಅಸಂಖ್ಯಾತರಾದ ಜೈನರು ಶೋಭಿಸುತ್ತಿದ್ದರು. ಅವರ ಮಧ್ಯದಲ್ಲಿ ಇರುವ ಅವನೊಬ್ಬನು ಗೂಗೆಗಳ ಸಮೂಹ ಮಧ್ಯದಲ್ಲಿ ಶೋಭಿಸುವ

ವ॥ ಆ ಘನಮಹಿಮನಿಂತೆಸೆವಿನಮಾ ಪೊೞಲ ಸಾಸಿರದೇೞ್ನೂಱು ಬಸದಿಗಳೆಂಬ ಸಿಂಹಗುಹೆಗಳ್ಗೆ ಶರಭಗುಹೆಯಿರ್ಪಂತೊಂದು ಶಿವಗೃಹಮಿರ್ದುದದಂ ಕಂಡು ಜೈನರಸೂಯೆಗೊಂಡೀ ಜಿನಭವನಂಗಳ ನಡುವೆ ಶಿವಭವನಮಿರಲ್ಪಲ್ಲದೆಂದಾ ಗುಡಿಯು ಗೋಪುರಮುಮಂ ಕೆಡಪಿ ತಮ್ಮಡಿಯುಮಂ ಜಡಿಯುಲೊಡನವನದೆಲ್ಲಮುಮಂ ನಾಚಯ್ಯಂಗಱಿಪೆ ಮುಳಿಸೇಱಿ ಮೀಱಿ ಪತ್ತು ದಿನದೊಳಗೀ ಶಿವಾಪರಾಧಿಗಳೆನಿಪ ಜೈನರೆಲ್ಲರುಮುಮಂ ತರ್ಕುಗಿಡಿಸಿ ಸೊರ್ಕಂ ಮುಱಿದು ವಿಶಸನಂಗೆಯ್ದಲ್ಲದಾಹಾರಂಗೊಳೆನಂತೆಗೆಯ್ವೆನನ್ನೆವರಂ ಶಿವಂಗೆಂದಿನಂತೆ ಪೂಜೆಗೆಯ್ಯದಿರೆಂದಾಜ್ಞಾಪಿಸಿ ಪೊೞಲಂ ಪೊಱಮಟ್ಟು ಪತ್ತು ದಿನದೊಳಗೆ ಪನ್ನಿರ್ಚಾಸಿರ್ವರಂ ವೀರಭಕ್ತರಂ ನೆರಪಿ ಮಗುೞ್ದು ಪುರಮನವರ್ಗೂಡಿ ಪುಗುತ್ತಿರ್ಪಾಗಳ್[1]—

ಮೊೞಗುವ ಬೀರಮದ್ದಳೆಯ ಭೇರಿಯ ಶಂಖದ ಡಿಂಡಿಮೌಘಕಾ
ಹಳಿಯ ಘನಸ್ವನಂ ದಶದಿಗಂತಕೆ ಧೀಂಕಿಡೆ ನೂಂಕಿ ವೀರರೊ
ಬ್ಬುೞಿ ಕರವಾಳಕಾಂತಿ ಖರರೋಚಿಯ ನಾಣ್ಚಿಪೆ ಜೈನರೆಂಬ ಪೆ
ರ್ಮೆೞೆಗೆ ದವಾಗ್ನಿಯಂತೆಸೆದು ಕೂಡೊಡನೇೞ್ತರೆ ವೀರನಾಚಯಂ ೫

ರಾಜ ಹಂಸಪಕ್ಷಿಯ ಹಾಗೆ ಇದ್ದನು. ವ॥ ಈ ರೀತಿ ಶೋಭಿಸುವ ಆ ಘನಮಹಿಮನು; ಆ ಪಟ್ಟಣದಲ್ಲಿರುವ ಸಾವಿರದ ಏಳು ನೂರು ಬಸದಿಗಳೆಂಬ ಸಿಂಹದ ಗುಹೆಗಳಿಗೆ, ಶರಭಪಕ್ಷಿಯ ಗುಹೆಯಿರುವಂತೆ ಒಂದು ಶಿವಾಲಯವಿರುವುದನ್ನು ಜೈನರು ಕಂಡು ಹೊಟ್ಟೆಕಿಚ್ಚಿನಿಂದ ಕೂಡಿ, ಈ ಜಿನ ಭವನಗಳ ಮಧ್ಯದಲ್ಲಿ ಶಿವಾಲಯವು ಇರುವುದು ಕೂಡದು, ಎಂದು ಆ ಗುಡಿಯ ಗೋಪುರವನ್ನು ಕೆಡವಿ ಪೂಜಾರಿಯನ್ನು ಬಡಿದು ಹಾಕಲು ಅವನು ಅದೆಲ್ಲವನ್ನೂ ನಾಚಯ್ಯನಿಗೆ ತಿಳಿಸಿದನು. ನಾಚಯ್ಯನು ಅಧಿಕವಾಗಿ ಕೋಪಗೊಂಡು ಹತ್ತು ದಿನಗಳಲ್ಲಿ ಈ ಶಿವಾಪರಾಧಿಗಳೆನಿಸುವ ಜೈನರೆಲ್ಲರ ಶೌರ್ಯವನ್ನು ಅಡಗಿಸಿ ಸೊಕ್ಕನ್ನು ಮುರಿದು ಹಾಕಿ, ನಾಶಗೊಳಿಸಿದಲ್ಲದೆ, ಆಹಾರವನ್ನೇ ಸ್ವೀಕರಿಸುವುದಿಲ್ಲ. ಹಾಗೆ ಮಾಡುತ್ತೇನೆ. ಅಷ್ಟರವರೆಗೆ ಶಿವನಿಗೆ ಎಂದಿನ ಹಾಗೆ (ನೀನು) ಪೂಜೆ ಮಾಡಬೇಡವೆಂದು ಆಜ್ಞಾಪಿಸಿದನು. ಪಟ್ಟಣವನ್ನು ಬಿಟ್ಟು ಹೊರ ಹೊರಟು ಹತ್ತು ದಿನಗಳಲ್ಲಿ ಹನ್ನೆರಡು ಸಾವಿರ ವೀರಭಕ್ತರನ್ನು ಒಟ್ಟು ಗೂಡಿಸಿ, ಪುನಃ ಅವರೆಲ್ಲರೊಡನೆ ಕೂಡಿ ಬಂದು ಪಟ್ಟಣವನ್ನು ಹೊಗುತ್ತಿರುವಾಗ—೫. ಧ್ವನಿ ಮಾಡುತ್ತಿರುವ ವೀರ ಮದ್ದಳೆಯ (ಡೊಳ್ಳುಗಳ), ನಗಾರಿಯ, ಶಂಖದ, ಡಮರುಗಳ ಸಮೂಹದ, ಕಹಳೆಗಳ ಘನವಾದ ಸ್ವರವು ಹತ್ತೂ ದಿಕ್ಕುಗಳ ಕೊನೆಯವರೆಗೆ ಧುಮುಕುತ್ತ ನೂಕುತ್ತಿದ್ದವು. ವೀರರ ಸಮೂಹದ ಕೈಯಲ್ಲಿರುವ ಖಡ್ಗಗಳ ಕಾಂತಿಯು ಸೂರ್ಯ ಕಾಂತಿಯನ್ನು ನಾಚಿಕೆಗೊಳಿಸುವಂತೆ ಇತ್ತು. (ಹೀಗೆ) ಜೈನರೆಂಬ ದೊಡ್ಡ ಮೆಳೆ (ಪೊದೆ) ಗೆ ಕಾಡುಗಿಚ್ಚಿನ ಹಾಗೆ ಶೋಭಿಸುತ್ತ ವೀರನಾಚಯ್ಯನು ಅವರನ್ನು

1 ತಿ(ದ)

ಪುಗುತಂದಂ ಪೊಳಲಂ ಪರಾಕ್ರಮದೆ ಮೇಣಾವಾರ್ತೆಗೇಳ್ದಲ್ಲಿ ದೋ
ಷಿಗಳಾದಾ ಶವಣರ್ಕಳಳ್ಕ[1]ಜದೆ ತಾವುಂ ಯುದ್ಧಸನ್ನದ್ಧರಾ
ಗಿ ಗಜಾಶ್ವೋರುವರೂಥವೀರಭಟಸೈನ್ಯಂಗೂಡಿ ಕುಂತಾಸಿ ಚ
ಕ್ರ ಗದಾದ್ಯಾಯುಧವಾಂತು ಮಾರ್ನಡೆದು ಬೀಡಂ ಬಿಟ್ಟರಾಟೋಪದಿಂ ೬

ವ॥ ಅಂತು ಬಿಟ್ಟ ಮಾರ್ಬಲಮಂ ಕಂಡು ವೀರಭಕ್ತಬಲದೊಳ್ ಪದಿಮೂವರ್ವೀರ ರ್ವಿಕ್ಕ ಭಕ್ತರ್ಗೆಱಗಿ ಕೃತಾಂಜಲಿಗಳಾಗಿ—

ಬಡಶವಣರ್ಕಳಂ ಸದೆವುದಕ್ಕಿನಿತೇಕೆ ನೆಗಳ್ತೆ ತೊಟ್ಟನೊ
ರ್ಪಿಡಿ ತೃಣಮಂ ಸುಡಲ್ಕೆ ವಿಳಯಾನಲನೊಟ್ಟಜೆವೇಳ್ಕುಮೇ ಕಱು
ತ್ತೊಡನೆ ಪಳಂಚಿ ಪೊಯ್ದು ರಣಭೂತಗಣಂ ತಣಿವಂತೆ ಕೊಲ್ವೆವೀ
ಪಡೆಯನೊಱಲ್ದು ನಿಮ್ಮಡಿಗಳೀಕ್ಷಿಸುತಿರ್ಕೆ ಮದೀಯ ಶೌರ್ಯಮಂ ೭

ವ॥ ಎಂದಾ ನಾಚಯ್ಯಂಬೆರಸು ತೇರಸ ವೀರಭಕ್ತರ್ಮಗುಳ್ದು ಮಣಿದವರನಂತಿರಿಸಿ, ತಮಗಿದಿರೊಡ್ಡಿ ಮಹಾಮಸಕಂ ಮಸಗಿ ತಾಗಿದ ಮಾರ್ಪಡೆಯಾಟೋಪಮಂ ಕಂಡು ಕೃಪಾಣಮಂ ಜಡಿದು[2] ಕುರುಳ್ಚಿ ನಿಜಭುಜಾಸ್ಫಾಳನಂಗೆಯ್ದುಬ್ಬರಿಸಿ ಬೊಬ್ಬೆಗೊಟ್ಟೊಳ ಪೊಕ್ಕು ಮಿಕ್ಕು ಸಮರ ಸಮುತ್ಸಾಹಂದಳೆದು—

ಕೂಡಿಕೊಂಡು ಬರುತ್ತಿದ್ದನು.—೬. ಬಂದು ಪಟ್ಟಣವನ್ನು, ಪರಾಕ್ರಮದಿಂದ ಪ್ರವೇಶಿಸಿದನು. ಈ ಸುದ್ದಿಯನ್ನು ಕೇಳಿ ಅಲ್ಲಿದ್ದ ದೋಷಿಗಳಾದ ಶ್ರವಣರುಗಳು ಅಂಜದೆ ತಾವೂ ಕೂಡ ಯುದ್ಧಕ್ಕೆ ಸಿದ್ಧರಾಗಿ, ಆನೆ, ಕುದುರೆ, ಉತ್ಕೃಷ್ಟ ರಥ, ವೀರ ಭಟರುಗಳ ಸೈನ್ಯ ಸಮೇತರಾಗಿ, ಭರ್ಜಿ, ಖಡ್ಗ, ಚಕ್ರ, ಗದೆಯೇ ಮೊದಲಾದ ಆಯುಧಗಳನ್ನು ಧರಿಸಿ ಎದುರಾಗಿ, ನಡೆದು ಶೌರ್ಯಾತಿಶಯದಿಂದ ಬೀಡುಬಿಟ್ಟರು. ವ॥ ಈ ರೀತಿ ಬೀಡುಬಿಟ್ಟ ಪ್ರತಿಸೈನ್ಯವನ್ನು ಕಂಡು, ವೀರಭಕ್ತರ ಸೈನ್ಯದಲ್ಲಿ ಹದಿಮೂರು ಜನ ವೀರರು ಉಳಿದ ಭಕ್ತರಿಗೆ ನಮಸ್ಕರಿಸಿ ಕೈಮುಗಿದು ನಿಂತವರಾಗಿ—೭. ಬಡ ಜೈನರುಗಳನ್ನು ನಾಶಗೊಳಿಸುವುದಕ್ಕೆ ಇಷ್ಟೊಂದು ಕಾರ್ಯಾರಂಭವೇತಕ್ಕೆ ? ಒಂದು ಹಿಡಿ ಹುಲ್ಲನ್ನು ಸುಡುವುದಕ್ಕೆ ಪ್ರಳಯಕಾಲದ ಅಗ್ನಿಯ ಪರಾಕ್ರಮವಾಗ ಬೇಕೇ ? ಕೋಪಗೊಂಡು ಒಮ್ಮೆಲೆ ಮೇಲೆ ಬಿದ್ದು ಹೊಡೆದು ಯುದ್ಧಭೂಮಿಯ ಭೂತ ಸಮೂಹವು ತೃಪ್ತಿಗೊಳ್ಳುವಂತೆ ಈ ಸೈನ್ಯವೆಲ್ಲವನ್ನೂ ಕೊಲ್ಲುತ್ತೇವೆ. ಪ್ರೀತಿ ಯಿಂದ ನನ್ನ ಪರಾಕ್ರಮವನ್ನು ತಮ್ಮ ಪಾದಗಳು ನೋಡುತ್ತಿರಲಿ. ವ॥ ಹೀಗೆಂದು ಆ ನಾಚಯ್ಯನೊಡನೆ ಕೂಡಿಕೊಂಡು ಹದಿಮೂವರು (ತೇರಸ) ವೀರಭಕ್ತರುಗಳು ಪುನಃ ನಮಸ್ಕರಿಸಿ ಅವರನ್ನು ಹಾಗೆ ಇರಿಸಿ, ತಮಗೆ ಎದುರಾಗಿ ಮಹಾಶೌರ್ಯದಿಂದ ಸಂಘಟಿಸಿ ನಿಂತ ಪ್ರತಿಸೈನ್ಯದ ಪರಾಕ್ರಮವನ್ನು ನೋಡಿ, ಖಡ್ಗವನ್ನು ಭದ್ರವಾಗಿ ಹಿಡಿದು ಝಳಪಿಸುತ್ತ, ತಮ್ಮ ತೋಳುಗಳನ್ನು ಚಪ್ಪರಿಸುತ್ತ, ಆರ್ಭಟಮಾಡಿ, ಬೊಬ್ಬೆಹಾಕುತ್ತ ಜೈನರ ಆ ಸೈನ್ಯದ ಒಳಹೊಕ್ಕು ಅತಿಶಯವಾದ ಯುದ್ಧದ

1 ಕ್ಕ(ಅ) 2 ಕ(ದ)

ಇಱಿದರಿದಿರ್ಚಿದರ್ಕಡಿದರಿಕ್ಕಿದರಣ್ಮಿದರೆಚ್ಚರಾರ್ದು ಬೊ
ಬ್ಬಿಱಿದರಡುರ್ತು ಸೀಳ್ದರಱಿಯಟ್ಟಿದರೊಟ್ಟಿದರಟ್ಟೆಯಂ ಕೊರ
ಲ್ದಱಿದರದಿರ್ಚಿದರ್ಸದೆದರಿಟ್ಟರುರುಳ್ಚಿದರೊತ್ತಿ ತತ್ತಱಿಂ
ದಱಿದರಡಂಗೆ ಪೊಯ್ದರರಿಸೈನ್ಯಮನಾಹವದೊಳ್ಮಹಾಭಟರ್ ೮

ಇಡಿದಡಸಿ ಕವಿದ ಜೈನರ
ಪಡೆಯಂ ಕಡಿಕಡಿದು ಸೀಳ್ದು ಪಡಲಿಡಿಸಿ ಜಯಂ
ಬಡೆದುಳಿದರನೋಡಿಸಿ ತಲೆ
ವಿಡಿದೆಡಗೆಯ್ಯೊಳ್ಕರುಳ್ಚುತುಂ ಕರವಾಳಂ ೯

ನಡೆತಂದಂ ನಾಚಯ್ಯಂ
ನಡೆತರೆ ತೇರಸಗಣಂಗಳರಿಗಳ ಶಿರಮಂ
ಪಿಡಿದೊಡನೆ ವೀರರಸವೊ
ಗ್ಗುಡಿಸಿದವೋಲ್ ನೋಳ್ಪ ಶರಣರೆಡೆಗುತ್ಸವದಿಂ ೧೦

ವ॥ ಅಂತೆಲ್ಲಂದವಗ್ಗೂಡಿ ಶರಣಚರಣಂಗಳ್ಗೆ ಪೊಡವಟ್ಟು ತತ್ಕರುಣಾರಸಕ್ಕೆ ಪಾತ್ರನಾಗಿ ಸಡಗರದಿಂ ಗಣಂಗಳೊಡವರೆ ಮಾರುಡಿ[1]ಗೆ[1]ವೊಳಲಂ ಪೊಕ್ಕು ಬಸದಿಗಳನೊಳಪೊಕ್ಕು ಜಿನ ಪ್ರತಿಮೆಗಳಂ ಕಿಳ್ತು ಬಿಸುಟು ಮುನ್ನಮೆ ತಾಂ ಭಂಡಿಯೊಳ್ತಂದ ಸಾಸಿರವೇಳ್ನೂಱು ಲಿಂಗಂಗಳನಲ್ಲಲ್ಲಿ

ಉತ್ಸಾಹವನ್ನು ಹೊಂದಿದವರಾಗಿ, ೮. ಆ ಯುದ್ಧದಲ್ಲಿ ಕತ್ತರಿಸಿಹಾಕಿದರು ; ಎದುರಿಸಿದರು ; ಎರಡು ತುಂಡು ಮಾಡಿದರು ; ನೆಲಕ್ಕೆ ಇಕ್ಕಿದರು ; ಪರಾಕ್ರಮ ದೋರಿದರು ; ಬಾಣಪ್ರಯೋಗ ಮಾಡಿದರು ; ಶೌರ್ಯದಿಂದ ಬೊಬ್ಬೆಹಾಕಿದರು ; ಮೇಲೆ ಬಿದ್ದು ಸೀಳಿ ಹಾಕಿದರು ; ಹೊಡೆದು ಓಡಿಸಿದರು ; ಮುಂಡಗಳನ್ನು ಒಟ್ಟಿದರು; ಕುತ್ತಿಗೆಗಳನ್ನು ಕತ್ತರಿಸಿದರು ; ಎದುರಿಸಿದರು ; ಸದೆಬಡಿದರು ; ಬಡಿದು ಉರುಳಿಸಿ ದರು ; ಮೇಲೆಬಿದ್ದು ಚೂರುಚೂರಾಗುವಂತೆ ಕತ್ತರಿಸಿದರು ; ಅಡಗಿಹೋಗುವಂತೆ ಹೊಡೆದರು—(ಹೀಗೆ) ವೈರಿ ಸೈನ್ಯವನ್ನು ಆ ಮಹಾ ಭಟರುಗಳು ಎದುರಿಸಿದರು. ೯–೧೦. ನಿಬಿಡವಾಗಿ ಸೇರಿ ಮೇಲೆ ಬಿದ್ದ ಜೈನರ ಸೈನ್ಯವನ್ನು ಕತ್ತರಿಸಿ, ಕತ್ತರಿಸಿ, ಸೀಳಿಹಾಕಿ ಚಲ್ಲಾಪಿಲ್ಲಿಗೊಳಿಸಿ, ಜಯವನ್ನು ಪಡೆದು, ಕಳೆದುಳಿದವರನ್ನು ಓಡಿಸಿ, ಎಡಗೈಯಲ್ಲಿ ತಲೆಯನ್ನು ಹಿಡಿದು (ಬಲಗೈಯ) ಖಡ್ಗವನ್ನು ಝಳಪಿಸುತ್ತ ನಾಚಯ್ಯನು ನಡೆತಂದನು. ಹೀಗೆ ಬರಲು ಹದಿಮೂರು ಜನ ವೀರಗಣಂಗಳೂ ಕೂಡ ವೈರಿಗಳ ಶಿರಸ್ಸುಗಳನ್ನು ಹಿಡಿದು ಅವನೊಡನೆಯೇ ವೀರರಸವೆಲ್ಲ ಒಂದು ಗೂಡಿ ಬಂದಿದೆಯೋ ಎಂಬ ಹಾಗೆ ಶರಣರ ಹತ್ತಿರಕ್ಕೆ ಉತ್ಸಾಹದಿಂದ ಬಂದರು. ವ॥ ಹಾಗೆ ಅವರೆಲ್ಲ ಸೇರಿ ಬಂದು ನಾಚಯ್ಯನು ಶರಣರ ಪಾದಗಳಿಗೆ ನಮಸ್ಕಾರಮಾಡಿ, ಅವರ ಕಾರುಣ್ಯವೆಂಬ ರಸಕ್ಕೆ ಪಾತ್ರನಾಗಿ ಸಡಗರದಿಂದ ಶಿವಗಣಗಳೆಲ್ಲ ಬರುತ್ತಿರಲು

1 × (ಮು)

ಗೊಂದೊಂದು ಪ್ರತಿಷ್ಠೆಗೆಯ್ದು ಪೂಜಾವಿಧಿಗಳಂ ನಿಯೋಜಿಸಿ ಪೂರ್ವಶಿವಾಗಾರಕ್ಕೆ ತಳರ್ದಂದಿನಂತೆ ಗುಡಿಗೋಪುರಮಂ ನೆಗಳ್ಚಿ ಪೂಜೆಗೆಯ್ಸಿ ಸತ್ಯಸಂಗರಂ ನಿಜಗೃಹಕ್ಕೆ ಬಂದು ಬಂದ ಗಣಸಂದೋಹಮನರ್ಚಿಸಿ ತತ್‌ಪ್ರಸಾದಸಂತುಷ್ಟನಾಗಿರ್ಪಾಗಳ್—

ಮೃಡನಾಗಾರಮನೊತ್ತಿ ನೂಂಕೆ ಶವಣರ್ತಜ್ಜೈನರಂ ಸೀಳ್ದು ತ
ಮ್ಮಡಿಗೆಂದಂತೆ ನಿಜಪ್ರತಿಜ್ಞೆ ಸಲೆ ಜೈನಾಗಾರಮಂ ಕಿಳ್ತು ನು
ಗ್ಗೊಡೆದಾರ್ಪಿಂ ಜಿನರಂ ಪ್ರತಿಷ್ಠಿಸಿ ಮಹಾಲಿಂಗಂಗಳಂ ಬೆಳ್ಜಸಂ
ಬಡೆದಂ ಧಾತ್ರಿಯೊಳೆಂದೊಡೇವೊಗಳ್ವುದೋ ನಾಚಯ್ಯನಾಚಾರಮಂ ೧೧

ಎಂದೆಲ್ಲರ್ಪೊಗಳುತ್ತಿರೆ
ಮುಂದಿರ್ದಾ ವೀರ ತೇರಸಗೊಡಿ ಮಹಾ
ನಂದಂ ಮಿಗೆ ನಾಚಯ್ಯಂ
ಕುಂದದತಿ ಪ್ರಕಟಭಕ್ತಿಯಿಂದೆಸೆದಿರ್ದಂ ೧೨

ಇದು ಸಾರೆ ದೂರಮಲ್ತು
ರ್ಮಿದ ಜಿನಪುರಿಯಂ ನೆಗಳ್ಚನೇ ಶಿವಪುರಿಯಂ
ಪದೆದಾ ನಾಚಯ್ಯಂ ಜಸ
ದೊದವಾಳ್ತೆಸೆದಿರರೆ ವೀರ ತೇರಸರಿಳೆಯೊಳ್ ೧೩

ಅವರೊಡನೆ ಮಾರುಡಿಗೆ ಪಟ್ಟಣವನ್ನು ಹೊಕ್ಕು, (ಅಲ್ಲಿರುವ) ಬಸದಿಗಳೊಳಗೆ ಹೊಕ್ಕು ಜಿನ ಪ್ರತಿಮೆಗಳನ್ನು ಕಿತ್ತು ಬಿಸಾಡಿ ಮೊದಲೇ ತಾನು ಬಂಡಿಗಳಲ್ಲಿ ಹೇರಿಕೊಂಡು ತಂದಿದ್ದ ಲಿಂಗಗಳನ್ನು ಅಲ್ಲಲ್ಲಿಗೊಂದರಂತೆ ಪ್ರತಿಷ್ಠಾಪನೆ ಮಾಡಿ, (ಅವಕ್ಕೆ) ಪೂಜಾವಿಧಿಗಳನ್ನು ವ್ಯವಸ್ಥೆಗೊಳಿಸಿ, ಮೊದಲಿನ ಶಿವಾಗಾರಕ್ಕೆ ಹೊರಟು ಬಂದು ಮೊದಲಿನ ಹಾಗೆಯೇ ಆ ಗುಡಿಗೆ ಗುಡಿಗೋಪುರಗಳನ್ನು ಕಟ್ಟಿಸಿ, ಪೂಜೆ ಮಾಡಿಸಿ, ಸತ್ಯಕ್ಕಾಗಿ ಯುದ್ಧ ಮಾಡಿ ವೀರನಾದ ಅವನು ತನ್ನ ಮನೆಗೆ ಬಂದು, ಅಲ್ಲಿಗೆ ಬಂದ ಶಿವಗಣ ಸಮೂಹವನ್ನು ಪೂಜಿಸಿ ಅವರು ಕೊಟ್ಟ ಪ್ರಸಾದದಿಂದ ಸಂತೋಷಗೊಂಡು ಇರುತ್ತಿರುವಾಗ ೧೧. ಶಿವನ ದೇವಾಲಯವನ್ನು ಜೈನರು ಕೆಡವಿಹಾಕಲಾಗಿ, ಆ ಜೈನರನ್ನೆಲ್ಲ ಕತ್ತರಿಸಿಹಾಕಿ, ಪೂಜಾರಿಯೆದುರಿಗೆ ಹೇಳಿದ ಹಾಗೆ ತನ್ನ ಪ್ರತಿಜ್ಞೆಯು ನೆರವೇರುವಂತೆ ಜೈನರ ಬಸದಿಗಳನ್ನೆಲ್ಲ ಮುರಿದು ಅಲ್ಲಿದ್ದ ಜಿನಪ್ರತಿಮೆಗಳನ್ನು ಕಿತ್ತು ಬಿಸಾಡಿ ಶಿವಲಿಂಗಗಳನ್ನು ಪ್ರತಿಷ್ಠೆಗೊಳಿಸಿ ಶುಭಕೀರ್ತಿಯನ್ನು ಹೊಂದಿದ ಮಾರುಡಿಗೆಯ ನಾಚಯ್ಯನ ಆಚಾರವನ್ನು ಏನೆಂದು ಹೊಗಳುವುದೋ ! ೧೨. ಎನ್ನುತ್ತ ಎಲ್ಲ ಜನರೂ ಹೊಗಳುತ್ತಿರಲು, ತನ್ನ ಮುಂದೆ ನಿಂತಿದ್ದ ಹದಿಮೂರು ಜನ ವೀರರೊಡನೆ ಕೂಡಿಕೊಂಡು ಅತಿಯಾದ ಆನಂದದಿಂದ ಆ ನಾಚಯ್ಯನು ಕುಂದಿಲ್ಲದ ಅತ್ಯಂತ ಪ್ರಸಿದ್ಧವಾದ ಭಕ್ತಿಯಿಂದ ಶೋಭಿಸುತ್ತಿದ್ದನು. ೧೩. ಇದು ಬಹು ಹಿಂದಿನ ಸುದ್ದಿಯೇನೂ ಅಲ್ಲ, ಕೊಬ್ಬಿದ ಜಿನಪುರಿಯನ್ನು ನಾಚಯ್ಯನು ಪ್ರಸಿದ್ಧ ಶಿವಪುರವನ್ನಾಗಿ ಮಾಡಿದನು. (ಅವನಿಗೆ ನೆರವಾದ) ವೀರತೇರಸರು (ಹದಿಮೂರು ಜನ ವೀರ ಶಿವಗಣಗಳು) ಈ

ನೀಂ ದೇವನೆಂದು ಭಜಿಪ ಜಿ
ನಂ ದೇವನೆ ದೇವನಾದೊಡಿಂತಕ್ಕುಮೆ ಪೇ
ಳ್ಮಂದಮತಿ ಕೇಳ್ವುದಿನ್ನುಂ
ಕುಂದದೆ ಭವದಿಷ್ಟದೈವಕಾದುಪಟಳಮಂ ೧೪

ನೆಲವೆಣ್ಣ ಭಾಗ್ಯಲಕ್ಷ್ಮೀ
ನಿಲಯಮಿದೆಂಬಂತೆ ಸಂಪದಂಬಡೆದೆಸೆಗುಂ
ಪುಲಿಗೆಱೆವೊಳಲದಱೊಳ್ನಿ
ಶ್ಚಲಭಕ್ತಂ ಸೋಮನಾಥನೆಂಬವನಿರ್ಪಂ ೧೫

ವ॥ ಆ ಭಕ್ತಂ ದಿನದಿನದ ಮೂಱುಂ ಪೊೞ್ತಿನೊಳಂ ಲಿಂಗಸ್ಪರ್ಶನಪೂರ್ವಕ ನಮಸ್ಕಾರಮೆ ತನಗೆ ನಿಯತವ್ರತಮಾಗೆ ತಳೆದೆಸಗುತ್ತುಮಿರ್ದೊಂದು ದಿವಸಂ.—

ಕಡುಪಿಂ ಕಣ್ಬೇನೆ [1]ತಿಬ್ಬಂ[1] ಮಸಗೆ ತಡಕುತುಂ ಕಾಣದೇನೊಂದುಮಂ ಕೋ
ಲ್ವಿಡಿದೋರಂತೂಱುತುಂ ಮೆಲ್ಲನೆ ಶಿವನಿಳಯಕ್ಕೆಂದು ಬರ್ಪಲ್ಲಿ ಜೈನ
ರ್ಮೃಡಗೇಹಂದೋರ್ಪೆವಿತ್ತಲ್ನಡೆಯೆನುತಣಕಂಗೆಯ್ದು ಕೊಂಡೊಯ್ದು ಬೇಗಂ
ಗಡ ಚೈತ್ಯಾಗಾರಗರ್ಭಂಬುಗಿಸಿ ಜಿನಶಿರೋಭಾಗಮಂ ಮುಟ್ಟಿಸುತ್ತುಂ ೧೬

ಪೊಡಮಡು ನೀನೆಂಬುದುಮಾ
ಮೃಡಭಕ್ತಂ ನಂಬಿ ಲಿಂಗಮೆಂದೆಱಗೆ ಖಳ

ಭೂಮಿಯಲ್ಲಿ ಯಶಸ್ಸಿನ ರಾಶಿಯಿಂದ ಶೋಭಿಸುತ್ತ ಇರುವುದಿಲ್ಲವೇ ? ೧೪. ನೀನು ದೇವನೆಂದು ಭಜಿಸುವ ಜಿನನು ದೇವನೇ ? ದೇವನಾದರೆ, ಎಲೈ ಮಂದಮತಿಯೇ, ಹೀಗಾಗುತ್ತಿತ್ತೇ ? ಹೇಳು. ಕುಂದಿಲ್ಲದೆ ನಿನ್ನ ಇಷ್ಟದೈವಕ್ಕಾದ ಉಪಟಳವನ್ನು ಇನ್ನೂ ಕೇಳು : (ಎಂದು ಆ ಏಕಾಂತದ ರಾಮಯ್ಯನು ಹೇಳತೊಡಗಿದನು.) **ಪುಲಿಗೆರೆಯ ಸೋಮನಾಥನ ಕಥೆ** ೧೫. ಇದು ಭೂಮಿಯೆಂಬ ಸ್ತ್ರೀಯ ಭಾಗ್ಯಲಕ್ಷ್ಮಿಯ ಮನೆಯೋ ಎಂಬಂತೆ 'ಪುಲಿಗೆರೆ' ಎಂಬ ಪಟ್ಟಣವು ಸಂಪತ್ತನ್ನು ಹೊಂದಿ ಶೋಭಿಸುತ್ತಿತ್ತು. ಆ ಪಟ್ಟಣದಲ್ಲಿ ದೃಢವಾದ ಶಿವಭಕ್ತಿಯಿಂದ ಕೂಡಿದ ಸೋಮನಾಥನೆಂಬುವನು ಇದ್ದನು. ವ॥ ಆ ಶಿವಭಕ್ತನು ಪ್ರತಿದಿನದ ಮೂರು ಹೊತ್ತಿನಲ್ಲೂ ಲಿಂಗದ ಸ್ಪರ್ಶಮಾಡುವುದರ ಮೂಲಕ ನಮಸ್ಕಾರ ಮಾಡುವುದೇ ತನ್ನ ನಿತ್ಯವ್ರತವಾಗಿರಲು ಆ ವ್ರತವನ್ನು ಮಾಡುತ್ತ ಒಂದು ದಿವಸ ೧೬–೧೭. ಆ ಸೋಮನಾಥನಿಗೆ ತೀಕ್ಷ್ಣವಾದ ಕಣ್ಣುಬೇನೆ ತೀವ್ರವಾಗಿ ಉಂಟಾಗಿತ್ತು. ಶಿವನಿಳಯಕ್ಕೆಂದು ಕೈಯಲ್ಲಿ ಕೋಲು ಹಿಡಿದು ಊರುತ್ತ ಏನೊಂದನ್ನೂ ಕಾಣದೆ ತಡಕಾಡುತ್ತ ಮೆಲ್ಲನೆ ಬರುತ್ತಿದ್ದನು. ಜೈನರು (ಇಂಥ ಸ್ಥಿತಿಯ ಇವನನ್ನೂ ಕಂಡು) ಶಿವನಿಲಯವನ್ನು ತೋರಿಸುತ್ತೇವೆ; ಇತ್ತ ನಡೆ ಎಂದು ಪರಿಹಾಸ ಮಾಡಿ

[1] ತೀಬ್ರಂ (ಜ)

ರ್ಕಡು ನಗುತೆ ನಿನ್ನಭೀಷ್ಟಂ
ಗುಡುಗೀ ಜಿನನಾಥನೆಂದವರ್ಪರಸಲೊಡಂ ೧೭

ಘುಡುಘುಡಿಸುತ್ತೆ ಮೀಸೆ ಕುಣಿಯುತ್ತಿರೆ ಗಂಟಿಡೆ ಪುರ್ಬು ಕಾಯ್ಪಿನಿಂ
ಪಡ ಪಡ ಶಂಭುಗೆತ್ತಿದ ಕರಾಂಬುಜಮಂ ಜಿನನೆಂಬ ನಿನ್ನ ಪೆ
ರ್ಬಡಿಕೆಯ ಬೊಂಬೆಗೆತ್ತುವೆನೆ ಸರ್ವಜಗತ್ಪತಿಯಪ್ಪ ಶಂಕರಂ
ಗೊಡನೆಱಗಿರ್ದೆನಲ್ತೆ ಶಿವಮೂರ್ತಿಯನಿಲ್ಲಿಯೆ ತೋರ್ಪೆನೀಕ್ಷಣಂ ೧೮

ವ॥ ಎಂದಣ್ಕೆ ನುಡಿದು ಮುಂಬರಿದು ಮುಸುಂಕನುಗಿದು ಕೋಪಾರುಣ ನಿಜನೇತ್ರಂಗಳಂ ಬಿಜ್ಜನೆ ಬಿಟ್ಟು ನೋಡಲೊಡನೆ—

ಛಟಛಟ ನಿಸ್ವನಂ ನಿಮಿರೆ ಸಿಕ್ಕನೆ ಸೀಳ್ದು ಜಿನಾಂಗಮೆಲ್ಲಮುಂ
ಪಟಪಟ ರಾವದಿಂ ಸಿಡಿದು ಬೀಳ್ವಿನಮಾ ಜಿನನಂಗಮಧ್ಯದೊ
ಳ್ಪಟುನಿಟಿಲಾಂಬಕಂ ನೆಲಸಿ ನಿಂದನುದಗ್ರವೃಷೇಂದ್ರವಾಹನಂ
ಕುಟಿಲಜಟಾಧರಂ ತಿಸುಳಿ ಸೋಮನಮಾಯನಮೇಯ ವೈಭವಂ ೧೯

ವ॥ ಇಂತು ನಿಜಭಕ್ತಕೃತಪ್ರತಿಜ್ಞಾಪಾಲಕಂ ಸೋಮನಾಥನಾ ಪುಲಿಗೆಱೆವೊಳಲ ಸುರಹೊನ್ನೆಬಸದಿಯೊಳ್ನೆಗಳ್ತೆವೆತ್ತು ನಿಂದು —

ಕರೆದುಕೊಂಡು ಹೋಗಿ ಬೇಗನೆ ಆ ಕಡೆಯಿರುವ ಜಿನಮಂದಿರವನ್ನು ಹೊಗಿಸಿದರು. ಅಲ್ಲಿರುವ ಜಿನನ ಪ್ರತಿಮೆಯ ತಲೆಯ ಭಾಗವನ್ನು ಮುಟ್ಟಿಸಿ (ಇದೇ ಶಿವಲಿಂಗ) ನೀನು ನಮಸ್ಕಾರ ಮಾಡು ಎಂದರು. ಆ ಶಿವಭಕ್ತನು ಅವರ ಮಾತನ್ನು ನಂಬಿ, ಅದನ್ನೇ ಲಿಂಗ ವೆಂದು ತಿಳಿದು ನಮಸ್ಕಾರ ಮಾಡಿದನು. ದುಷ್ಟರಾದ ಅವರು ಕಂಡು ನಗುತ್ತ ಈ ಜಿನ ನಾಥನು ನಿನ್ನ ಅಭೀಷ್ಟವನ್ನು ಕೊಡಲಿ ಎಂದು ಆಶೀರ್ವದಿಸಲಾಗಿ. ೧೮. ಘುಡು ಘುಡಿಸುತ್ತ, ಮೀಸೆಗಳು ಕುಣಿಯುತ್ತಿರಲು, ಹುಬ್ಬುಗಳನ್ನು ಗಂಟಿಕ್ಕಿ ಕೋಪದಿಂದ ಫಡ ಫಡ! ಶಂಭುವಿಗೆ ಎತ್ತಿದ ಕರಕಮಲಗಳನ್ನು ಜಿನನೆನ್ನುವ ನಿನ್ನ ಈ ಹೇಸಿಗೆಯ ಗೊಂಬೆಗೆ ಎತ್ತುತ್ತೇನೆಯೇ ? ಸಕಲ ಜಗತ್ತಿನ ಪತಿಯಾಗಿರುವ ಶಂಕರನಿಗೆ ಕೂಡಲೇ ನಾನು ನಮ ಸ್ಕರಿಸಿದೆನಲ್ಲವೆ ! ಈ ಕ್ಷಣದಲ್ಲಿಯೇ ಇಲ್ಲಿ ಶಿವ ಮೂರ್ತಿಯನ್ನು ತೋರಿಸುತ್ತೇನೆ. ವ॥ ಎಂದು ಪ್ರತಿಜ್ಞೆ ಮಾಡಿ ಮಾತನಾಡಿ, ಮುಂಬರಿದು ಮೇಲೆ ಹಾಕಿಕೊಂಡ ಮುಸು ಕನ್ನು ತೆಗೆದು, ಕೋಪದಿಂದ ಕೆಂಪಾದ ತನ್ನ ನೇತ್ರಗಳನ್ನು ಬಿರ್ರನೆ ಬಿಟ್ಟು ನೋಡಿದ ಕೂಡಲೇ. ೧೯. ಛಟ ಛಟ ಎನ್ನುವ ಧ್ವನಿಯು ಹೊರಹೊಮ್ಮಿ, ಜಿನ ಪ್ರತಿಮೆಯ ಅಂಗವೆಲ್ಲ ಸಿರ್ರೆಂದು ಸೀಳಿ, ಪಟ ಪಟ ಧ್ವನಿಯಿಂದ ಸಿಡಿದು ಬೀಳಲಾಗಿ, ಆ ಜಿನಪ್ರತಿ ಮೆಯ ದೇಹ ಮಧ್ಯದಲ್ಲಿಯೇ ಸಮರ್ಥವಾದ ಹಣೆಗಣ್ಣನಿಂದಲೂ, ಶ್ರೇಷ್ಠ ವೃಷಭನ ವಾಹನವುಳ್ಳವನಾಗಿಯೂ. ವಕ್ರ ಕೂದಲಿನ ಜಡೆಯುಳ್ಳವನಾಗಿಯೂ ತ್ರಿಶೂಲಧಾರಿ ಯಾಗಿಯೂ, ಉಮಾಸಹಿತನಾಗಿಯೂ ನಿರ್ಮಾಯನೂ, ಅಗಣಿತ ವೈಭವಯುಕ್ತನೂ ಆದ ಶಿವನು ನೆಲಸಿ ನಿಂತನು. ವ॥ ಈ ರೀತಿ ತನ್ನ ಭಕ್ತನಿಂದ ಮಾಡಿದ ಪ್ರತಿಜ್ಞೆ ಯನ್ನು ಪಾಲಿಸುವ ಸೋಮನಾಥನು ಆ ಪುಲಿಗೆರೆ ನಗರದ 'ಸುರಹೊನ್ನೆ ಬಸದಿ' ಎಂಬ

ಅಣಕವುಮನುಡುಗಿಸಿ ಜಿನನಂ
ಕ್ಷಣದೊಳೀಳ್ದಲ್ಲಿ ನೆಲಸಿ ಭಕ್ತನ ಪೊರೆದಂ
ಗುಣವಾರಿಧಿ ಮುಂಗೈಕಂ
ಕಣಕೇಂ ಕನ್ನಡಿಯ ಸಾಕ್ಷಿಯೀದುದೆ ಧರೆಯೊಳ್ ೨೦

ವ॥ ಇನ್ನುಂ ಕೇಳ್ವುದೆಂತೆನೆ—

ಪರಿವಳಿಗೆಯೆಂಬ ವಿಳಸ
ತ್ಪುರದೊಳ್ವೈಜಾಂಬೆಯೆಂಬ ಪೆಸರಾಂತು ಕರಂ
ಪರಿರಂಜಿಸಿರ್ಪಳಭವನ
ವರಭಕ್ತೆ ಶಿವಾಂಘ್ರಿಗುಪ್ತಭಜನದಿನೊರ್ವಳ್ ೨೧

ಜಿನಭಕ್ತ ನೇಮಿಸೆಟ್ಟಿಯೆ
ತನಗಧಿಪತಿಯೆನಿಪನಲ್ಲಿ ಬಾಂಧವರೆಲ್ಲ
ರ್ಜಿನಭಕ್ತರಾಗೆ ಪಿರಿದುಂ
ಮನದುಮ್ಮಳದಿಂದೆ ವೈಜಕಾಂಬಿಕೆಯಿರ್ದಳ್ ೨೨

ವ॥ ಆಗಳೊಂದುದಿನವಾ ನೇಮಿಸೆಟ್ಟಿ ನಿಜಗುರುಗಳಪ್ಪ ಪಿರಿಯ ಮಲಧಾರಿಗಳೇಳ್ತರೆ

ಹೆಸರಿನ ಜಿನಮಂದಿರದಲ್ಲಿ ಪ್ರಖ್ಯಾತಿವೆತ್ತು ನಿಂತುಕೊಂಡು ೨೦. ಸದ್ಗುಣಗಳ ಸಮುದ್ರನೆನಿಸಿದ ಶಿವನು ಜೈನರು ಮಾಡಿದ ಅಣಕನ್ನು ಹಾಳು ಮಾಡಿ, ಜಿನನನ್ನು ಆ ಕ್ಷಣದಲ್ಲಿಯೇ ಸೀಳಿ, ಅಲ್ಲಿ ಪ್ರಕಟನಾಗಿ ಭಕ್ತನನ್ನು ರಕ್ಷಿಸಿದನು. ಲೋಕದಲ್ಲಿ ಮುಂಗೈಯ ಕಂಕಣವನ್ನು ನೋಡಿಕೊಳ್ಳಲು ಕನ್ನಡಿಯ ಸಾಕ್ಷಿಯನ್ನು ಒದಗಿಸಬೇಕೇ ? ವ॥ ಇನ್ನೂ ಕೇಳು. ಹೇಗೆಂದರೆ **ವೈಜಾಂಬೆಯ ಕಥೆ** ೨೧. ಪರವಳಿಗೆ ಎಂಬ ಹೆಸರಿನ ಶೋಭಿಸುವ ಪಟ್ಟಣದಲ್ಲಿ 'ವೈಜಾಂಬೆ' ಎಂಬ ಹೆಸರನ್ನು ಹೊಂದಿ, ಒಬ್ಬಳು ಪರಮೇಶ್ವರನ ಶ್ರೇಷ್ಠಭಕ್ತೆಯು ಶಿವನ ಪಾದಗಳಲ್ಲಿ ಗುಪ್ತಭಕ್ತಿಯನ್ನಾಚರಿಸುವವಳೆನಿಸಿ ಚೆನ್ನಾಗಿ ಶೋಭಿಸುತ್ತಿದ್ದಳು. ೨೨. ಜಿನಭಕ್ತನಾದ ನೇಮಿಸೆಟ್ಟಿಯೆಂಬುವನು ಅವಳಿಗೆ ಪತಿಯೆನಿಸಿದ್ದನು. ಬಂಧುಬಾಂಧವರೆಲ್ಲ ಅಲ್ಲಿ ಜಿನಭಕ್ತರೆನಿಸಿದ್ದರು. (ಈ ಕಾರಣದಿಂದ) ವಿಶೇಷವಾಗಿ ಮನೋವ್ಯಥೆಯಿಂದ ಕೂಡಿ, ಆ ವೈಜಕಾಂಬಿಕೆಯು ಇರುತ್ತಿದ್ದಳು. ವ॥ ಆಗ ಒಂದು ದಿವಸ ಆ ನೇಮಿಸೆಟ್ಟಿಯು ತನ್ನ ಗುರುಗಳೆನಿಸಿದ ಹಿರಿಯ ಪಂಚಮಲಗಳನ್ನು ಧರಿಸಿದ (ಕಣ್ಣಿನ ಪಿಸುರು, ಮೂಗಿನ ಸಿಂಬಳ, ಕಿವಿಯ ಕುಂಕಣಿ, ಹಲ್ಲಿನ ಹಸುರು, ಮೈಯಕೊಳೆ ಎಂಬ ಐದು ಮಲಗಳನ್ನು ಧರಿಸಿದ)† ಸಂನ್ಯಾಸಿಗಳು ಬರಲಾಗಿ

†'ಅಹಿಂಸಾ ಪರಮೋಧರ್ಮಃ' ಎಂಬ ವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸುವ ಜೈನರು ದೇಹದಲ್ಲಿಯೂ ಸೂಕ್ಷ್ಮವಾದ ಪ್ರಾಣಿಗಳು ಇದ್ದು ಅವು ಸಾಯುವುವೆಂಬ ಕಾರಣದಿಂದ ಸ್ನಾನವನ್ನೂ ಕೂಡ ಕೆಲ ಸಂನ್ಯಾಸಿಗಳು ಮಾಡುತ್ತಿಲ್ಲವಾದ ಕಾರಣದಿಂದ ಅವರ ದೇಹವಕೊಳೆಯುಕಡೆಗೂ ಲಕ್ಷ್ಯ ಕೊಡುತ್ತಿರುವುದಿಲ್ಲ. ಅಂಥವರನ್ನು ಮಲಧಾರಿಗಳೆಂದು ಕರೆಯುವುದು ವಾಡಿಕೆ, ಅಥವಾ ತಿರಸ್ಕಾರದ ನುಡಿಯೂ ಆಗಿರಬಹುದು.

ಕಾಂಡರ್ವೆರ್ಗಳಿಗಿ ಭೋಜನಕ್ಕೆ ಪೇಳ್ದು ಭೋಂಕನೆ ಮನೆಗೇಳ್ತಂದು ಮಡದಿಯುಂ ಕರೆದುಚಿತ ಸಾಧನಮಂ ನೆರಪಿ ರುಚಿರದಿಂಚಿತ್ತರಮಪ್ಪಂತೆ ಬೋನಮಂ ಸಮೆವುದೆಂದು ಪೇಳೆ ಕೇಳ್ದು—

ಗಾರಿ[1]ಗೆ ಚಕ್ಕುಲಿ ಮಂಡಗೆ
ಪೂರಿಗೆಯೊಡೆ ಪೇಣಿಯೆಂಬಿವಂ ಪಾಯಸಮಂ
ಸಾರತರ ಶಾಕಪಾಕಮ
ಹಾರುಚಿಯುತ ಭಕ್ಷ್ಯಭೋಜ್ಯಮಂ ಸಲೆ ಸಮೆದಳ್ ೨೩

ವ॥ ಅಂತು ಸಮೆದಿಂತಪ್ಪಾಹಾರಮನೊರ್ವಂಗಮಾದೊಡಂ ಮಾಹೇಶ್ವರಂಗುಣಲಿತ್ತೆನಲ್ತೆನ್ನ ಜನ್ಮಂ ನಿರರ್ಥಕಮಿಂದಾದೊಡಮೊರ್ವಂ ಮಾಹೇಶ್ವರನೆತ್ತಲಾನುಂ ಬಂದೊಡಾಂ ಬರ್ದುಂಕುವೆನೆಂದು ಮ್ಮಳಿಸಿ ನೆನೆವುದುಮಾ ವೇಳೆಯೊಳ್—

ಜಡೆಮುಡಿ ಭಾಳದೊಳ್ಳೊಳಪ ಭೂತಿ ಶಿವಾಕ್ಷಿಜಮಾಲೆ ಮೆಯ್ಯೊಳ
ಣ್ಪಿಡಿದ ವಿಭೂತಿ ಭಾಸ್ವದುರದೊಳ್ಮಿಸಜ್ಜಿಕೆ ಕಂಥೆ ಲಾಕುಳಂ
ಕಡು ಸೊಬಗಾಗೆ ಕಾಮರಿಪು ಜಂಗಮರೂಪಮನಾಳ್ದು ಬಂದು ನಿಂ
ದೊಡೆ ನಿಜಭಕ್ತೆ ಕಂಡೆಱಗಿ ಕಾಲ್ತೊಳೆದಿಂಟಿದಳಾ ಪದಾಂಬುವಂ ೨೪

ಅವರನ್ನು ಕಂಡು ನಮಸ್ಕರಿಸಿ, ಊಟಕ್ಕೆ ಆಮಂತ್ರಿಸಿ, ಕೂಡಲೇ ಮನೆಗೆ ಬಂದು, ಹೆಂಡತಿಯಾದ ವೈಜಾಂಬೆಯನ್ನು ಕರೆದು, 'ಅವರಿಗೆ ಉಚಿತವೆನಿಸಿದ ಊಟದ ಉಪಕರಣಗಳನ್ನು ಸಿದ್ಧಪಡಿಸಿ ಮನೋಹರವಾದ ರುಚಿಯುಳ್ಳಹಾಗೆ ಅನ್ನವನ್ನು ಮಾಡಬೇಕು' ಎಂದು ಹೇಳಲು, ಆ ಮಾತನ್ನು ಕೇಳಿ ೨೩. ಗಾರಿಗೆ, ಚಕ್ಕುಲಿ, ಮಂಡಗೆ, ಪೂರಿಗೆ, ಒಡೆ, ಪೇಣಿಗಳನ್ನೂ, ಪಾಯಸವನ್ನೂ, ರುಚಿಕರವಾದ ಶಾಕಪಾಕಗಳನ್ನೂ, ರುಚಿಯಿಂದ ಕೂಡಿದ ಭಕ್ಷ್ಯ ಭೋಜ್ಯಗಳನ್ನೂ ಚೆನ್ನಾಗಿ ಸಿದ್ಧಪಡಿಸಿದಳು. ವ॥ ಈ ರೀತಿ ಸಿದ್ಧಪಡಿಸಿದ ಇಂತಹ ಆಹಾರವನ್ನು ಒಬ್ಬ ಮಾಹೇಶ್ವರನಿಗಾದರೂ ಉಣ್ಣಲಿಕ್ಕೆ ಕೊಡಲಿಲ್ಲವಲ್ಲಾ! ನನ್ನ ಜನ್ಮ ನಿರರ್ಥಕವಾಯಿತು. ಈಗಲಾದರೂ ಒಬ್ಬ ಮಾಹೇಶ್ವರನು ಎತ್ತ ಕಡೆಯಿಂದಲಾದರೂ ಬಂದರೆ ನಾನು ಬದುಕುತ್ತೇನೆಂದು ಸಂಕಟದಿಂದ ನೆನೆಯುತ್ತಿರಲು ಆ ವೇಳೆಗೆ ಸರಿಯಾಗಿ ೨೪. ತಲೆಯಲ್ಲಿ ಜಡೆಮುಡಿ, ಹಣೆಯಲ್ಲಿ ಶೋಭಿಸುವ ಭಸ್ಮ, ರುದ್ರಾಕ್ಷ ಮಾಲೆಗಳು, ಮೈಯಲ್ಲಿ ಧರಿಸಿದ ವಿಭೂತಿ, ಎದೆಯ ಮೇಲೆ ಪ್ರಕಾಶಿಸುವ ಲಿಂಗದ ಕರಡಿಗೆ, ಹೊದೆದ ಕಾಷಾಯವಸ್ತ್ರ. ಯೋಗದಂಡ, ಇವು ಬಹು ಸೊಗಸಾಗಿ ಕಾಣುತ್ತಿರಲು, ಪರಮೇಶ್ವರನು ಜಂಗಮ ರೂಪಧರಿಸಿ ಬಂದು ನಿಲ್ಲಲಾಗಿ, ಆ ಸತ್ಯಶುದ್ಧ ಭಕ್ತೆಯಾದ ವೈಜವ್ವೆಯು ಕಂಡು ನಮಸ್ಕಾರಮಾಡಿ, ಕಾಲುತೊಳೆದು ಆ

---

1 ರ(ಚ, ಅ)

ಕರೆದೊಳಗಣ್ಗೆಯ್ದಿಸಿದಳ್
ಹರಣಂ ಬಂದಂತೆ ನಲಿದು ಮೃದುತಳ್ಪದೊಳಾ
ದರದಿಂ ಕುಳ್ಳಿರಿಸಿದಳೊ
ಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ೨೫

ಗಡಣಿಸಿ ತುಪ್ಪಮನೆಱೆದು
ಗ್ಗಡಮೆನೆ ಮಣಿದೆಳ್ದು ದೇವರಾರೋಗಿಪುದೆಂ
ದೊಡನುಸುರ್ದು ಕೆಯ್ಮುಗಿದಳೊ
ಲ್ದುಡುಪತಿಮುಖಿ ತಾಪಸೇಂದ್ರನಾರೋಗಿಸಿದಂ ೨೬

ಅನಿತಱೊಳೆಯ್ದಿದರ್ಜಿನತಪಸ್ವಿಗಳಾ ಗೃಹಕಲ್ಲಿ ಕಂಡು ಪಾ
ವನ ಚರಮೂರ್ತಿಯಂ ಮುಳಿದು ಸೆಟ್ಟಿಗೆ ಶಾಪಮನಿತ್ತು ಬೈವುತಂ
ಗನೆಯು [1]ಕನ[1]ಲ್ಕೆಯಿಂ ತಳರ್ದರಾ ಚರಮೂರ್ತಿಯದೃಶ್ಯನಾದನಾ
ಮನೆಯೊಡೆಯಂ ನಿರೀಕ್ಷಿಸಿ ನಿತಂಬಿನಿಯಂ ಘನರೋಷದೇಳ್ಗೆಯಿಂ ೨೭

ಎಲೆಯೆಲೆ ಧೂರ್ತೆ ದುಷ್ಟೆ ಗುರುಗಳ್ಗೊಲವಿಂ ಸಮೆದನ್ನಮೆಲ್ಲಮಂ
ನಲಿದುಣಲಿಕ್ಕಿ ಶೈವಮುನಿಗಳ್ಕದೆ ಪೊಲ್ಲದು ಗೆಯ್ದೆ ಮದ್ವ್ರತ
ಕ್ಕಲಸದೆ ಭಂಗಮಂ ನೆಗಳ್ದೆ ಪಾತಕಿಯುಂಡ ತಪಸ್ವಿಯೆಲ್ಲಿದಂ
ತೊಲಗಿಸುತೆತ್ತಡಂಗಿಸಿದೆ ಪೇಳವಸಂ ಭವನಾಂತರಾಳದೊಳ್ ೨೮

ಪಾದೋದಕವನ್ನು ಕುಡಿದಳು. ೨೫–೨೬. (ಆ ಜಂಗಮಾಕಾರದ ಶಿವನನ್ನು) ಒಳಕ್ಕೆ ಕರೆದುಕೊಂಡು ಹೋದಳು. ಪ್ರಾಣವೇ ಬಂದಹಾಗೆ ನಲಿದಾಡಿ, ಮೆತ್ತನೆಯ ಹಾಸಿಗೆಯ ಮೇಲೆ ಆದರಪೂರ್ವಕವಾಗಿ ಕುಳ್ಳಿರಿಸಿದಳು. ಬಾಳೆಯ ಎಲೆಯಲ್ಲಿ ಭಕ್ಷ್ಯಭೋಜ್ಯಾದಿಗಳನ್ನು ಒಪ್ಪವಾಗಿ ಜೋಡಿಸಿ, ತುಪ್ಪವನ್ನು ಎರೆದು, ಅತಿಶಯವಾದ ಭಕ್ತಿಯಿಂದ ನಮಸ್ಕರಿಸಿ ಎದ್ದು, ದೇವರು ಆರೋಗಿಸಬೇಕು, ಎಂದು ಆ ಕೂಡಲೇ ಹೇಳಿ ಆ ಚಂದ್ರಮುಖಿಯು ಪ್ರೀತಿಯಿಂದ ಕೈಮುಗಿಯಲು ಆ ತಾಪಸೇಂದ್ರನು ಊಟಮಾಡಿದನು. ೨೭–೨೮. ಅಷ್ಟರಲ್ಲಿ ಆ ಜೈನ ಸಂನ್ಯಾಸಿಗಳು ಆ ಮನೆಗೆ ಬಂದರು. ಅಲ್ಲಿದ್ದ ಪರಮ ಪವಿತ್ರನಾದ ಜಂಗಮಮೂರ್ತಿಯನ್ನು ಕಂಡು, ಕೋಪಗೊಂಡು. ಆ ಅಂಗನೆಯಾದ ವೈಜವ್ವೆಯನ್ನು ಕೋಪದಿಂದ ಬೈದು, ಸೆಟ್ಟಿಗೆ ಶಾಪವನ್ನುಕೊಟ್ಟು, ಹೊರಟುಹೋದರು ಆ ಜಂಗಮಮೂರ್ತಿಯು ಮಾಯವಾಯಿತು. ಆ ಮನೆಯ ಯಜಮಾನನಾದ ನೇಮಿಸೆಟ್ಟಿಯು ತನ್ನ ಪತ್ನಿಯನ್ನು ನೋಡಿ ಭಯಂಕರ ಕೋಪದ ಆಧಿಕ್ಯದಿಂದ, 'ಎಲೆಯೆಲೆ'! ನೀಚಳೇ, ದುಷ್ಟೆ, ಗುರುಗಳಿಗಾಗಿ ಪ್ರೀತಿಯಿಂದ ಮಾಡಿದ ಅನ್ನವನ್ನೆಲ್ಲ ಸ್ವಲ್ಪವೂ ಹೆದರದೆ ಶೈವ ಮುನಿಗೆ ಸಂತೋಷದಿಂದಊಟ ಮಾಡಲು ಕೊಟ್ಟು, ಮಾಡಬಾರದುದನ್ನು ಮಾಡಿದೆ. ನನ್ನ ವ್ರತಕ್ಕೆ ತಡಮಾಡದೆ ಭಂಗವನ್ನುಂಟು ಮಾಡಿದೆ. ಊಟ ಮಾಡಿದ ಆ ಪಾಪಿಷ್ಠನಾದ ತಪಸ್ವಿ ಎಲ್ಲಿದ್ದಾನೆ ? ಹೊರಹೊರಡಿಸಿ ಈ ಭವನ ಮಧ್ಯದಲ್ಲಿ ಎಲ್ಲಿ

---

1 ನಳ(ಅ)

ಗೊರವನ ರೂಪಿಂಗಾತನ
ಪರಿಜಿಂಗಂ ಕೂರ್ತು ಕೂಡಲೆಳಸಿ[1]ದೆಯು[1]ಕ್ಕುಂ
ಕರೆದೊಡನುಣಲಿತ್ತಡಗಿಸು
ತಿರುತಿರ್ದಪೆ ನಿನ್ನ ಮಾಯೆಯಾನಱಿಯದುದೇ ೨೯

ಪತಿಯಾಳತಿಯಂ ಮೀಱಿದೆ
ಮತಗುರುಗಳನುಳಿದು ಗೊರವನಡಿವಿಡಿದೆ ಮಹಾ
ಪತಿತೆ ನಿನಗಕ್ಕುಮೇ ಪರ
ಗತಿ ತೋಱೆಂದವನನೆಂದು ಘೂರ್ಮಿಸುತಾಗಳ್ ೩೦

ಅತಿ ಮಾನವತಿಯನತಿಶಯ
ಧೃತಿಯಂ ಶಿವಭಕ್ತಿರತಿಯನಾ ನಿಜಸತಿಯಂ
ಹತಮತಿ ಪತಿ ಕಸೆಗೊಂಡೊಡ
ನತಿ ನಿರ್ಭರದಿಂದೆ ಪಾಪಿ ಪೊಸೆದು ಬಡಿದಂ ೩೧

ಮೃಡನಾಜ್ಞೆಯೆಂಬ ಕವಚಮು
ದೊಡಲಂ ತಳ್ತಿರೆ ಲತಾಂಗಿಗಾ ಪತಿ ಮುಳಿಸಿಂ
ಬಡಿವ ಕಸೆ ಕುಸುಮಮಾಲೆಯ
ಪೊಡರ್ಪನನುಕರಿಸಿತಕ್ಷತಾಂಗದೊಳವಳಾ ೩೨

ಅಡಗುವಂತೆ ಮಾಡಿದೆ ? ಹೇಳು. ೨೯. ಆ ಗೊರವನ ರೂಪಕ್ಕೆ, ಆತನ ಆಕಾರಕ್ಕೆ ಪ್ರೀತಿಸಿ ಕೊಡಲು ಅಪೇಕ್ಷೆಪಟ್ಟಿರಬಹುದು. ಅವನನ್ನು ಕರೆದು ಕೂಡಲೇ ಊಟಕ್ಕಿಟ್ಟು, ಅಡಗಿಸುತ್ತ ಇದ್ದೀಯೆ. ನಿನ್ನ ಈ ಮಾಯೆಯು ನಾನು ತಿಳಿಯದುದೇ ? ೩೦. ಮಹಾ ಪತಿತೆಯೇ (ನೀತಿಗೆಟ್ಟವಳೇ), ಗಂಡನ ಅಪ್ಪಣೆಯನ್ನು ಮಿಕ್ಕಿದೆ; ನಮ್ಮ ಧರ್ಮ ಗುರುಗಳನ್ನು ಬಿಟ್ಟು, ಗೊರವನ (ಶೈವಸಂನ್ಯಾಸಿಯ) ಪಾದ ಹಿಡಿದೆ. (ಇಂಥ ನಿನಗೆ) ಪರಲೋಕ ಸುಖವುಂಟಾದೀತೇ ? ಈಗಲೇ ಅವನನ್ನು ತೋರಿಸು ಎಂದು, ಆಗ ಆ ಸೆಟ್ಟಿಯು ಗರ್ಜಿಸಿದನು. ೩೧. ಅತ್ಯಂತ ಮಾನವತಿಯೂ, ಅತ್ಯಂತ ಧೈರ್ಯಶಾಲಿನಿಯೂ, ಶಿವಭಕ್ತಿಯಲ್ಲಿ ಆಸಕ್ತಿಯುಳ್ಳವಳೂ, ಆದ ತನ್ನ ಸತಿಯನ್ನು ಬುದ್ಧಿಹೀನ ಪತಿಯಾದ ಪಾಪಿಷ್ಠ ಸೆಟ್ಟಿಯು ಚಾಟಿಯನ್ನು ತೆಗೆದುಕೊಂಡು ಬಹು ಗಟ್ಟಿಯಾಗಿ ಹೊಡೆದನು ; ಬಡಿದನು. ೩೨. ಪರಮೇಶ್ವರನ ಆಜ್ಞೆಯೆಂಬ ಕವಚವು ಅವಳ ದೇಹಕ್ಕೆ ಅಂಟಿಕೊಂಡಿರಲು, ಬಳ್ಳಿಯಂಥ ದೇಹವುಳ್ಳ ಅವಳಿಗೆ ಆ ತನ್ನ ಗಂಡನು ಕೋಪದಿಂದ ಹೊಡೆಯುವ ಚಾಟಿಯು ಹೂಮಾಲೆಯ ವೈಭವವನ್ನು ಧರಿಸಿ ಗಾಯ

---

1 ದಳ(ವು)

ಎಳೆಯುಳಂ ಪೊಡೆವಾ ಕಶಾಗ್ರದ ಪೊಯ್ಗಳಾ ಜಿನತಾಪಸಾ
ವಳಿಯು ತಾಗಿದವೇಳೆ ಬಾಸುಳೊಱಲ್ದು ಭಕ್ತೆಗೆ ಮಣ್ಗಳಂ
ತಳೆದು ಕಟ್ಟೆಯ ಬಿಟ್ಟಿಗೆಯ್ವ ಕಪರ್ದಿಯಂ ನೃಪನಾಳ್ಗಳ
ವ್ವಳಿಸಿ ಪೊಯ್ದೊಡೆ ಪೊಯ್ಗಳೆಲ್ಲರನಲ್ಲಿ ತಾಗಿದ ಮಾಳ್ಕೆಯಿಂ ೩೩

ವ॥ ಅಂತು ಕಡುಕೆಯ್ದು ಪೊಡೆವ ಕಶಾಘಾತಂ ಜಿನತಪಸ್ವಿಗಳಂಗಮನರ್ಜುನಾಸ್ತ್ರದಂತೆ ಶತಗುಣೋತ್ತರಮಾಗಿ ತಾಗೆ ತಾಳಲಾಱದೆ ತಲ್ಲಣಿಸಿ ಮಲ್ಲಳಿಗೊಂಡು—

ವಿತತ ಕಶಾಭಿಘಾತಗಳಿತಕ್ಷತಜಚ್ಛುರಿತಾಂಗರಾಗಿ ಸು
ಯ್ವುತಳುತೆ ಬಾಯ್ವಿಡುತ್ತೆ ಮೊಱೆಯಿಕ್ಕುತೆ ಮೋಱೆಯನೆತ್ತಿ ನೋಡುತೋ
ಡುತೆ ನಡುಗುತ್ತೆ ಕೆಟ್ಟೆವೆನುತೇಳುತೆ ಬೀಳುತೆ ಹಾ ಜಿನಾಯೆನು
ತ್ತತುಳ ವಿಷಾದದಿಂ ಮಱುಗಿ ಪಲ್ಗಿಱಿವುತ್ತೊರಗುತ್ತೆ ಧಾತ್ರಿಯೊಳ್ ೩೪

ಪೊರಳುತ್ತುಂ ಪುಣ್ಗಳಂ ಮುಟ್ಟುತೆ ಕರತಳದಿಂ ನೋವುತೋವೋವೊ ಕಾವ
ನ್ನರನಾರುಂ ಕಾಣೆವೆಂದಳ್ಕುತೆ ಪರಿದಡರುತ್ತೈದೆ ಮಾಡಂಗಳಂ ಪೆ
ರ್ಮರನಂ ಪತ್ತುತ್ತೆ ಗೇಹಂಬುಗುತೆ ಪಡಿಗಳಂ ಕೆತ್ತು ಪದ್ಮಾವತೀಮಂ
ದಿರ ಜೈನಾಗಾರದೊಳ್ಪೊಯ್ಗರೆವುತಗಿದು ಜೈನಾಥಮರ್ಸೇದೆವಟ್ಟರ್ ೩೫

ರಹಿತವಾದ ಅವಳ ಆ ದೇಹದಲ್ಲಿ ಅನುಕರಿಸುವಂತಿತ್ತು. ೩೩. ಹಿಂದೆ ಭಕ್ತೆಯಾದ ಪಿಡ್ಡವ್ವೆಗಾಗಿ ಮಣ್ಣನ್ನು ಹೊರುತ್ತ ಕೆರೆಕಟ್ಟುವ ಕೆಲಸದ ಬಿಟ್ಟಿಯನ್ನು ಮಾಡುವ ಪರಮೇಶ್ವರನನ್ನು ಅರಸನ (ಚೋಳಮಹಾರಾಜನ) ಆಳುಗಳು ಅಪ್ಪಳಿಸಿ ಹೊಯ್ದಾಗ ಆ ಹೊಡೆತಗಳು ಅಲ್ಲಿರುವ ಎಲ್ಲರಿಗೂ ಬೀಳುತ್ತಿರುವ ರೀತಿಯಲ್ಲಿ ಚಿಕ್ಕವಯಸ್ಸಿನವಳಾದ ಪೈಜವ್ವೆಗೆ (ಆವಳ ಗಂಡನಾದ ನೇಮಿಸೆಟ್ಟಿಯು) ಹೊಡೆಯುವ ಆ ಚಾಟಿಯ ಹೊಡೆತಗಳು ಜೈನ ಸಂನ್ಯಾಸಿಗಳಿಗೆ ಬಿದ್ದವು; (ಅವರ ಮೈಮೇಲೆ) ಬಾಸುಂಡೆಗಳೆದ್ದವು ; ಅವರು ಚೀರಿಕೊಂಡರು. ವ॥ ಈ ರೀತಿ ಪರಾಕ್ರಮದಿಂದ ಹೊಡೆಯುವ ಚಾಟಿಯ ಪೆಟ್ಟು ಜೈನಸಂನ್ಯಾಸಿಗಳ ದೇಹವನ್ನು ಅರ್ಜುನನ ಬಾಣಗಳ ಪೆಟ್ಟಿನಂತೆ ಶತಾಧಿಕವಾಗಿ (ನೂರು ಪಟ್ಟು ಹೆಚ್ಚಾಗಿ) ತಾಕುತ್ತಿರಲು, ಅವರು ಆ ಏಟುಗಳನ್ನು ತಾಳಲಾರದೆ ಸಂಕಟಗೊಂಡು ಬೆರಗಾಗಿ ೩೪-೩೫. ವಿಶೇಷವಾದ ಚಾಟಿಯ ಹೊಡೆತದಿಂದ ಸೋರುತ್ತಿರುವ ರಕ್ತದಿಂದ ವ್ಯಾಪ್ತವಾದ ದೇಹವುಳ್ಳವರಾಗಿ ನಿಟ್ಟುಸಿರುಬಿಡುತ್ತ, ಅಳುತ್ತ, ಚೀರುತ್ತ, ಕೂಗಿಕೊಳ್ಳುತ್ತ, ಮುಖವನ್ನು ಮೇಲೆ ಮಾಡಿ ನೋಡುತ್ತ, ಓಡುತ್ತ, ನಡುಗುತ್ತ, ಕೆಟ್ಟೆವು ಎನ್ನುತ್ತ, ಏಳುತ್ತ ಬೀಳುತ್ತ 'ಹಾ ! ಜಿನನೇ,' ಎನ್ನುತ್ತ ಅತ್ಯಧಿಕ ವಿಷಾದದಿಂದ ಮರುಗುತ್ತ, ಹಲ್ಲುಕಿರಿಯುತ್ತ, ಭೂಮಿಯ ಮೇಲೆ ಮಲಗುತ್ತ, ಹೊರಳುತ್ತ, ಮೈಮೇಲೆ ಆದ ಗಾಯಗಳನ್ನು ಕೈಯಿಂದ ಮುಟ್ಟಿಕೊಳ್ಳುತ್ತ, ನೋವುತ್ತ 'ಓವೋವೋ ! ಕಾಯುವವರನ್ನು ಯಾರನ್ನೂ ಕಾಣೆವಲ್ಲಾ !' ಎಂದು ಹೆದರುತ್ತ, ಓಡಿ ಓಡಿ ಹೋಗಿ ಮನೆಗಳ ಮೇಲೆ ಹತ್ತುತ್ತ, ದೊಡ್ಡ ದೊಡ್ಡ ಮರಗಳನ್ನು ಹತ್ತುತ್ತ, (ಕಂಡ ಕಂಡವರ) ಮನೆಗಳನ್ನು ಹೊಗುತ್ತ, ಪದ್ಮಾವತೀ ಮಂದಿರ, ಜಿನ ದೇವಾಲಯಗಳನ್ನು ಹೊಕ್ಕು ಕದ

ಜಿನ ನಿನ್ನ ಪೂಜೆಗೆಯ್ದುದ
ಕಿನಿತು [1]ಫಲಂ[1] ಸಾಲ್ಗುಮೆಂದು ನೊಂದಾ ಜಿನನಂ
ಮುನಿದೇಳಿಸುತುಂ ತಮ್ಮೊಳ
ಗನುಮಿಸುತಿಂತೆಂದು ತಿಳಿದರಾದುಪಟಳಮಂ ೩೬

ಇದು ನಿನ್ನೆ ನೇಮಿಸೆಟ್ಟಿಯ
ಸದನದೊಳೊಲ್ದುಂಡ ಗೊರವನಿಂದಾದುದು ತ
ಪ್ಪದು ನಿಜಮೆಂದೊರ್ವನನಾ
ಪದದೊಳ್ತದ್ಗೃಹಕೆನೋಳ್ಪಮೆಂದಟ್ಟಿಲೊಡಂ ೩೭

ವ॥ ಬಂದಾ ಶವಣಂ ನಿಂದು ಕಟ್ಟಿದಿರೊಳ್ಸೆಟ್ಟಿ ತದ್ಭಕ್ತೆಯುಂ ಕಠಿಗೊಂಡು ಪೊಡೆವ ಪೊಯ್ಗುಳ್ತನ್ನ ಬೆನ್ನಂ ಸೂಳ್ವಿಡಿದು ತಾಗೆ ನೊಂದು ಪೊಡೆಯದಿರ್ಮಾಣ್ಮಾಣೆಂದು ನಿವಾರಿಸುತ್ತಿಂತೆಂದಂ—

ಭರದೊಳೆ ಪುಷ್ಪಸೇನಮುನಿಯೋಡಿದನನ್ಯಪುರಕ್ಕೆ ಗಹ್ವರೋ
ದರದೊಳೆ ವೀರಸೇನಮುನಿ ಮೆಯ್ಗರೆದಂ ಪಡಲಿಟ್ಟನಂಬುಜಾ
ಕರದೊಳೆ ಪದ್ಮಸೇನಮುನಿ ಘೋರ ಮಹಾವಿಪಿನಾಂತರಕ್ಕೆ ಸೈ
ವರಿವುತೆ ಚಂದ್ರಸೇನಮುನಿ ಪೊಕ್ಕನನಲ್ಪಕಶಾಭಿಘಾತದಿಂ ೩೮

ಗಳನ್ನು ಮುಚ್ಚಿ, ಹೆದರಿ ಅಡಗಿಕೊಂಡು ಆ ಜೈನಾಧಮರುಗಳು ಸಂಕಟ ಪಟ್ಟರು. ೩೬. ಹೇ ಜಿನನೇ, ನಿನ್ನನ್ನು ಪೂಜೆ ಮಾಡಿದುದಕ್ಕೆ ಇಷ್ಟೇ ಫಲಸಾಕು ; ಎಂದು ನೊಂದುಕೊಂಡು ನುಡಿದು ಆ ಜಿನನನ್ನು ಕೋಪದಿಂದ ತಿರಸ್ಕರಿಸುತ್ತ, ಈ ಉಪಟಳವುಂಟಾಗುವುದಕ್ಕೆ ಕಾರಣವನ್ನು ತಮ್ಮ ತಮ್ಮಲ್ಲಿಯೇ ಅನುಮಾನದಿಂದ ಹೀಗೆ ಹೀಗೆಂದು ತಿಳಿದರು. ೩೭. (ತಮಗಾದ ಉಪಟಳವು)' ಇದು ನಿನ್ನೆಯ ದಿವಸ ನೇಮಿಸೆಟ್ಟಿಯ ಮನೆಯಲ್ಲಿ ಪ್ರೀತಿಯಿಂದ ಊಟಮಾಡಿದ ಗೋರವನಿಂದಲೇ ತಪ್ಪದೆ ಆದದ್ದು ನಿಜ.' ಎಂದುಕೊಂಡು, ಒಬ್ಬನನ್ನು ಆ ಕ್ಷಣದಲ್ಲಿಯೇ ಆ ನೇಮಿಸೆಟ್ಟಿಯ ಮನೆಗೆ ನೋಡೋಣವೆಂದು ಅಟ್ಟಲಾಗಿ ವ॥ ಆ ಜೈನನು ಬಂದು ನಿಂತು ತನ್ನೆದುರಿನಲ್ಲೇ ಸೆಟ್ಟಿಯು ಆ ಭಕ್ತೆಯಾದ ಪೈಜಪ್ಪೆಯನ್ನು ಚಾಟಿಯನ್ನು ಹಿಡಿದು ಹೊಡೆಯುವ ಹೊಡೆತಗಳು ತನ್ನ ಬೆನ್ನನ್ನು ಸರತಿಯಂತೆ (ಕ್ರಮವಾಗಿ) ತಾಕುತ್ತಿರಲು ನೊಂದುಕೊಂಡು. (ಎಲೈ ಸೆಟ್ಟಿಯೇ) ಹೊಡೆಯ ಬೇಡ ನಿಲ್ಲಿಸು ; ಎಂದು ನಿವಾರಿಸುತ್ತ ಹೀಗೆ ಹೇಳಿದನು : ೩೮. ಅತ್ಯಧಿಕವಾದ ಕಶಾಘಾತದಿಂದ ಪುಷ್ಪಸೇನ ಮುನಿಗಳು ಭರದಿಂದ ಓಡಿಹೋಗಿ ಬೇರೆ ಪಟ್ಟಣ ಸೇರಿದರು. ವೀರಸೇನ ಮುನಿಗಳು ಒಂದು ಗವಿಯ ಗರ್ಭವನ್ನು ಹೊಕ್ಕು ಅಡಗಿಕೊಂಡರು ; ಪದ್ಮಸೇನಮುನಿಗಳು ಸರೋವರದಲ್ಲಿ ಬಿದ್ದರು. ಚಂದ್ರಸೇನ

1 ಪದಂ(ಮು)

ಜಿನಮಂತ್ರಂ ಕಾದುದಿಲ್ಲಕ್ಕಟ ಜಿನಮುನಿಗಳ್ಮಾಳ್ಪ ಸಮ್ಯಕ್ತಪಂಗಳ್
ಘನಮಪ್ಪೀ ಬಾಧೆಯಂ ಪಿಂಗಿಸಲೆ ನೆಱೆಯದತ್ತೋಡಿದಳ್ಜ್ವಾಲಿಕಾಮಾ
ಲಿನಿ ತಾನೇನಾದಳೋ ಯಕ್ಷಿಣಿ ಜಿನಮತಧರ್ಮಂ ದಲೇಂ ಮಾಯಮಾದ
ತ್ತೋ ನಿತಾಂತಂ ಮಜ್ಜಿನೇಂದ್ರಂ ಮಡಿದನೊ ಮಸಣಂಬೊಕ್ಕರೋ ತೀರ್ಥಕರ್ಕಳ್ ೩೯

ವ॥ ಎಂದು ನೊಂದು ಪಳಯಿಸಿ—

ಅರೆಬರ್ಕೆಱೆಯಲ್ಲಿ ಕೆಲ
ರ್ಪರಿಕಾಲ್ಗಳೊಳಲ್ಲಿ ಕೆಲಬರಬ್ಜಾಕರದೊಳ್
ಪಿರಿಯಗಳೊಳನ್ಯರಪರ
ರ್ಪುರಾಣಕೂಪಂಗಳಲ್ಲಿ ಕೆಡೆದರ್ಮಡಿದರ್ ೪೦

ಜುತ್ತೆ ಕೆಲಂಬರ್ಕಾನನ
ದತ್ತಲ್ಪರಿದೋಡಿದರ್ಜಿನೇಂದ್ರಾಲಯಮಂ
ಪತ್ತಿ ಪೆಱರ್ಕೆಡೆದರ್ಪರ
ರತ್ತಿತ್ತಲ್ ಬಿಳ್ದು ಹಮ್ಮದಂಬೋಗಿರ್ದರ್ ೪೧

ಇವಳೇಂ ಮಾಯಾವಿಯೊ ನೀ
ನಿವಳಂ ಕಳೆಗೊಂಡು ಪೊಯ್ವ ಪೊಯ್ಗಳ್ಮೆಯ್ಗ
ಳ್ಬಪೆ ಬಿರಿಯೆ ತಾಂಗಿದುವು ಗಡ
ಶವಣರನೇವೇಳ್ವೆನವರ್ಗೆ ನೆಗಳ್ದುಪಹತಿಯಂ ೪೨

ಮುನಿಗಳು ಘೋರವಾದ ಅರಣ್ಯವನ್ನು ಓಡಿ ಹೋಗಿ ಹೊಕ್ಕುಬಿಟ್ಟರು. ೩೯. ಅಕ್ಕಟಾ! ಜಿನ ಮಂತ್ರವು ರಕ್ಷಿಸಲಿಲ್ಲ! ಜಿನಮುನಿಗಳು ಮಾಡುವ ಶ್ರೇಷ್ಠ ತಪಸ್ಸುಗಳು ಭಯಂಕರವಾದ ಈ ಬಾಧೆಯನ್ನು ಹಿಂಗಿಸಲು ಸಾಲದಾದುವು! ಆ ಜ್ವಾಲಾಮಾಲಿನಿ ದೇವತೆಯು ಎತ್ತ ಓಡಿ ಹೋದಳೋ! ಯಕ್ಷಿಣೀ ದೇವತೆಯು ತಾನು ಏನಾದಳೋ! ಜೈನ ಮತ ಧರ್ಮವು ನಿಶ್ಚಯವಾಗಿ ಮಾಯವಾಯಿತೋ ಏನೋ! ನಿಶ್ಚಯವಾಗಿ ನನ್ನ ಜಿನೇಂದ್ರನೇನು ಸತ್ತೇ ಹೋದನೋ! ತೀರ್ಥಂಕರರು ಶ್ಮಶಾನವನ್ನು ಹೊಕ್ಕರೋ ಏನೋ! ವ॥ ಹೀಗೆಂದು ನೊಂದುಕೊಂಡು ಪ್ರಲಾಪ ಮಾಡಿ. ೪೦. ಕೆಲವರು ಕೆರೆಯಲ್ಲಿ! ಕೆಲವರು ಹರಿಯುವ ಕಾಲುವೆಗಳಲ್ಲಿ! ಕೆಲವರು ಕಮಲ ಸರೋವರಗಳಲ್ಲಿ! ಅನ್ಯರು ಕೆಲವರು ದೊಡ್ಡ ಆಗಳುಗಳಲ್ಲಿ (ಕೋಟೆಯ ಸುತ್ತಲಿರುವ ಅಗಳಿನಲ್ಲಿ)! ಉಳಿದವರು ಹಳೆಯ ಬಾವಿಗಳಲ್ಲಿ ಬಿದ್ದರು; ಸತ್ತರು! ೪೧. ಮತ್ತೆ ಕೆಲವರು ಅಡವಿಗಳತ್ತ ಓಡಿ ಹೋದರು; ಉಳಿದ ಕೆಲವರು ಜಿನೇಂದ್ರಾಲಯಂಗಳ ಮೇಲೆ ಹತ್ತಿ ಬಿದ್ದರು; ಬೇರೆ ಕೆಲವರು ಅತ್ತ ಇತ್ತ (ಓಡಿಹೋಗಿ) ಬಿದ್ದು, ಮೂರ್ಛೆಗೊಂಡಿರುವರು. ೪೨. ಈ ಸೆಟ್ಟಿಯ ಹೆಂಡತಿಯೇನು ಮಾಯಾವಿಯೋ ಏನೋ! ನೀನು ಇವಳನ್ನು ಚಾಟಿಯನ್ನು ಹಿಡಿದು ಹೊಡೆಯುವ ಹೊಡೆತಗಳು (ನಮ್ಮ) ಮೆಯ್ಯಿಗಳು ಚೆನ್ನಾಗಿ ಬಿರಿಯುವಂತೆ ತಾಗಿದವಲ್ಲವೇ! ಜೈನ ಸಂನ್ಯಾಸಿಗಳಿಗಾದ

ವ॥ ಎಂದುಸುರ್ದು ಕಶಾಘಾತಮಹೋತ್ಪಾತಮಂ ಮಾಣಿಪುದುಮಾ ಜಿನಮುನಿಗಳಂ ತಾಗುವ ಪೊಯ್ಗಳ್ತವಿಲ್ದಾಗೆ ಸೆಟ್ಟಿ ಕಂಡು ಸಾಶ್ಚರ್ಯಮಾನಸನಾಗಿ—

ನಿನ್ನಿಂದಪಾಯಮುಂಟೆಮ
ಗಿನ್ನುಂ ನೀಂ ಪೋಗು ಮನೆಯೊಳಿರದಿರೆನುತ್ತುಂ
ಕನ್ನೆಯನಾತಂ ನೂಂಕಿದ
ನನ್ನಿಯಮೆನೆ ನೆರೆದು ನೋಳ್ಪ ಸುಜನವಿತಾನಂ ೪೩

ಸೆಱೆ[3] ಬಿಟ್ಟಂತಿರೆ ಮನೆಯಿಂ
ಪೊಱಮಟ್ಟಳ್ಬಸದಿಯಿರೆ ಶಿವಾಗಾರಮೆನು
ತ್ತಱಿಯದೊಳಪೊಕ್ಕು ಭಕ್ತಿಯೊ
ಳೆಱಗಿದಳೆಲೆ ಶಂಭು ಶರಣೆನುತ್ತಸವಸದಿಂ ೪೪

ವ॥ ಅಂತೆಱಗಿದಾಗಳ್ಭಕ್ತಾಭಿಮಾನಪರಿಪಾಲಕಂ ಭವಾನಿಯರಸಂ ತದ್ಭಕ್ತೆಯ ಸದ್ಭಾವದಿನದ್ಭುತಂ ಮಸಗೆ ಸದ್ಯೋಜಾತನಾಮ[1]ಕ್ಕಿದುಚಿತಮೆನಿಸಿ—

ಪಡೆದು ಮೂಡಿದನಲ್ಲಿ ತಜ್ಜಿನನಂಗವಿರ್ಭಾಗಿಯಾಗೆ ಮ
ಧ್ಯದೊಳುಮಾರಮಣಂ ಪ್ರಸನ್ನ ಮುಖಂ ಪ್ರಪ[2]ನ್ನಪರಾಯಣಂ ·

ನೋವನ್ನು ಏನೆಂದು ಹೇಳಲಿ ! ವ॥ ಎಂದು ಹೇಳುತ್ತ, ಕಶಾಘಾತದಿಂದಾಗುವ ಮಹಾ ತೊಂದರೆಯನ್ನು ನಿಲ್ಲಿಸಲಾಗಿ ಜಿನಮುನಿಗಳನ್ನು ತಾಕುತ್ತಿರುವ ಹೊಡೆತಗಳೂ ನಿಂತು ಹೋಗಲು, ಸೆಟ್ಟಿಯು ಕಂಡು ಆಶ್ಚರ್ಯಯುತ ಮನಸ್ಸಿನವನಾಗಿ, ೪೩. ಅನ್ಯಾಯವೆಂದು ನೆರೆದು ನೋಡುವ ಸಜ್ಜನ ಸಮುದಾಯವು ಅನ್ನುತ್ತಿರುವಂತೆಯೇ ಸೆಟ್ಟಿಯು 'ನಮಗೆ ಇನ್ನು ನಿನ್ನಿಂದ ಅಪಾಯವುಂಟಾಗುವುದು. ನೀನು ಹೊರಟು ಹೋಗು ; ಈ ಮನೆಯಲ್ಲಿ ಇರಬೇಡ' ಎನ್ನುತ್ತ ಕನ್ನೆಯಾದ ವೈಜವ್ವೆಯನ್ನು ಹೊರಗೆ ನೂಕಿದನು. ೪೪. ಸೆರೆಮನೆಯಿಂದ ಬಿಟ್ಟಂತಿರಲು ಆ ವೈಜವ್ವೆಯು ಮನೆಯಿಂದ ಹೊರಹೊರಟಳು. ಅಲ್ಲೊಂದು ಬಸದಿಯಿರಲಾಗಿ ಅದನ್ನೇ ಶಿವಾಲಯವೆಂದು ತಿಳಿಯದೆ ಅದರೊಳಗೆ ಹೊಕ್ಕು ಎಲೈ ಶಂಭುವೇ ಶರಣು ಎನ್ನುತ್ತ ಭಕ್ತಿಯಿಂದ ನಮಸ್ಕಾರ ಮಾಡಿದಳು. ವ॥ ಆ ರೀತಿ ನಮಸ್ಕಾರ ಮಾಡಿದಾಗ ಭಕ್ತರ ಅಭಿಮಾನವನ್ನು ಕಾಪಾಡುವ ಭವಾನೀ ಪತಿಯಾದ ಶಂಕರನು ಆ ಭಕ್ತೆಯ ಸದ್ಭಾವದಿಂದ ಅದ್ಭುತವೆನ್ನುವಂತೆ 'ಸದ್ಯೋಜಾತ'ನೆಂಬ ತನ್ನ ಹೆಸರಿಗೆ ಇದೇ ಉಚಿತ ಸಂದರ್ಭವೆಂದು ತಿಳಿದು ೪೫. ಆ ಜಿನನ ಮೂರ್ತಿಯ ದೇಹವು ಎರಡು ಹೋಳಾಗುವಂತೆ ಮಾಡಿ ಅದರ ಮಧ್ಯದಲ್ಲಿ ಉಮಾರಮಣನಾದ ಶಿವನು ಸಂಭ್ರಮದಿಂದಲೂ, ನಗುತ್ತಿರುವ ಮುಖದಿಂದಲೂ ಕೂಡಿ, ಶರಣಾಗತ ರಕ್ಷಕನಾದ ಅವನ ಪರಿಶುದ್ಧವಾದ ದೇಹ

1 +ಭಾವ(ಜ) 2 ಸ(ಚ)

ಪದಮುಳಾಂಗಮರೀಚಿ ಪೊಣ್ಮೆ ಪಳಂಚೆ ದಿಕ್ತಟಮಂ ಕರಂ
ಸುದತಿ ಸಮ್ಮದಮಾನೆ ಮಂಗಳಲಿಂಗರೂಪದಿನೀಶ್ವರಂ ೪೫

ಎರಡುಂ ಕಡೆಯೊಳಮಾ ಜಿನ
ನೆರಡುಂ ಕಡಿ ಕೆಡೆಯೆ ನಡುವೆ ಮೂಡಿರ್ದಭವಂ
ಶರಧಿಯನಿರ್ಬಗಿಗೆಯ್ದುಂ
ದುರುಲಿಂಗಾಕೃತಿಯನಾಳ್ದ ತೆಱದಿಂ ಪೊಱೆದಂ ೪೬

ಹರಭಕ್ತಿರಹಿತ ಪುರುಷನ
ನಿರದುಳಿದಭವಾಂಘ್ರಿವಿಡಿದ ರಮಣಿಗೆ ಲೇಸ
ಪ್ಪುದುಗತಿಯಕ್ಕುಂ ಮುನ್ನಂ
ಧರೆಯೊಳ್ತಿಲಕಾಂಬೆಯೆಂಬ ಸತಿ ನಿಜಪತಿಯುಂ ೪೭

ಶಿವಭಕ್ತಿರಹಿತನಂ ತೊಱೆ
ದವಿಕಲಮತಿಯಿರೆ ಕನಲ್ದು ಪತಿ ಕೊಂದಪೆನೆಂ
ದಡಗಡಿಸೆ ಪೋಗಿ ಪೊಗುತುಂ
ಭವಭವನಮನಭವನಂಘ್ರಿಯುಂ ಮಱೆವೊಕ್ಕಳ್ ೪೮

ಅನಿತಱೊಳಾ ಪತಿ ಮುಳಿದಂ
ಗನೆಯ ಪೆಱಂಗು ಕರಾಗ್ರದಿಂ ಸೆಳೆಯೆ ಮಹೇ
ಶನ ಕೃಪೆಯಿಂ ಗಂಡುದಮ
ನನುಕರಿಸಿದಳೆಂಬ ಕಥೆಯನಾಲಿಪೆವಿನ್ನುಂ ೪೯

ಪರಿವಳಿಗೆಯ ವೈಜಾಂಬಿಕೆ
ಹರಭಕ್ತಿವಿಹೀನನಾದ ಪತಿಯುಂ ತೊಱೆದಿಂ

ಕಾಂತಿಯು ಹೊರ ಹೊಮ್ಮಿ ದಿಕ್ಕುಗಳ ಕೊನೆಯವರೆಗೆ ಸೇರಿಕೊಳ್ಳಲು, ಸುಂದರಿಯಾದ ವೈಜವ್ವೆಯು ಅತ್ಯಂತ ಸಂತೋಷಗೊಳ್ಳುವಂತೆ ಮಂಗಳಕರವಾದ ಲಿಂಗರೂಪದಿಂದ ಆ ಈಶ್ವರನು ಮೂಡಿದನು. ೪೬. ಎರಡು ಕಡೆಗಳಲ್ಲೂ ಆ ಜಿನಮೂರ್ತಿಯು ಎರಡು ಹೋಳುಗಳಾಗಿ ಕತ್ತರಿಸಿ ಬೀಳಲು, ನಡುವೆ ಮೂಡಿದ ಶಿವನು ಪೂರ್ವದಲ್ಲಿ ಸಮುದ್ರವನ್ನು ಎರಡು ಭಾಗ ಮಾಡಿ ಮಧ್ಯದಲ್ಲಿ ಉರು ಲಿಂಗಾಕೃತಿಯಿಂದ ಮೂಡಿದ ರೀತಿಯಲ್ಲಿ ಮೂಡಿ ಪ್ರಕಾಶಿಸಿದನು. ೪೭–೪೮. ಹರನ ಭಕ್ತಿಯಿಂದ ದೂರನಾದ ಗಂಡನನ್ನು ತಪ್ಪದೆ ಬಿಟ್ಟು ಪರಮೇಶ್ವರನ ಪಾದವನ್ನು ಹಿಡಿದ ಆ ರಮಣಿಗೆ ಸುಖದಾಯಕವಾದ ಶ್ರೇಷ್ಠ ಗತಿಯು ಆಗುವುದು. ಈ ಪೂರ್ವದಲ್ಲಿ ಲೋಕದಲ್ಲಿ 'ಶಿವಕಾಂಬೆ' ಎಂಬ ಸ್ತ್ರೀಯು ಶಿವಭಕ್ತಿರಹಿತನಾದ ತನ್ನ ಪತಿಯನ್ನು ವ್ಯಾಕುಲರಹಿತ ಬುದ್ಧಿಯವಳಾದ ಅವಳು ತೊರೆದಿರಲು, ಅವಳ ಆ ಪತಿಯು ಕೋಪಗೊಂಡು ಕೊಲ್ಲುತ್ತೇನೆಂದು ತೊಂದರೆ ಗೊಳಿಸಲು ಅವನು ಶಿವಮಂದಿರಕ್ಕೆ ಹೋಗಿ ಒಳಹೊಕ್ಕು ಪರಮೇಶ್ವರನ ಪಾದಗಳಲ್ಲಿ ಮರೆ ಹೊಕ್ಕಳು. ೪೯–೫೦. ಅಷ್ಟರಲ್ಲಿ ಆ ಗಂಡನು ಕೋಪದಿಂದ ಆ

ಶ್ವರನಂಘ್ರಿವಿಡಿದು ಲೋಕೋ
ತ್ತರ ನಿಜಭಕ್ತಿಪ್ರಭಾವಮಂ ಪ್ರಕಟಿಸಿದಳ್ ೫೦

ಪಡೆದಳ್ಘನಸೌಖ್ಯಮನೆಂ
ದಡಿಗಡಿಗೊಲವಿಂದೆ ನುತಿಸೆ ಭಕ್ತವಿತಾನಂ
ಪೊಡವಡೆ ಜಿನಮುನಿತತಿ ಪತಿ
ನಡುಗುತೆ ಕೆಯ್ಮುಗಿಯೆ ಪೊಗಳೆ ಪೌರಕದಂಬಂ ೫೧

ಸ್ಫುರಿತ ನಿಜಭಾವದಿಂದೊಗೆ
ದುರುಲಿಂಗಂ ವೈಜನಾಥನಾಮಂಬೆತ್ತೊ
ಪ್ಪಿರೆ ಪರವಳಿಗೆಯೊಳಾ ಶಂ
ಕರನಂ ಮೆಚ್ಚಿಸುತೆ ವೈಜಕಾಂಬಿಕೆ ಮೆಱೆದಳ್ ೫೨

ವೈಜಾಂಬೆಯ ಪೆಸರ ಮಹಾ
ತೇಜೋಮಯಲಿಂಗಮೀಗಳುಂ ಮೆಱೆದಪುದೆ
ಲ್ಲಾ ಜನಮಱಿಗುಂ ಕೇಳಘ
ಭಾಜನ ಜಿನಭೃತ್ಯ ಕೇಳ್ದು ನೀನಱಿಯದುದೇ ೫೩

ಹೆಂಡತಿಯ ಸೀರೆಯ ಸೆರಗನ್ನು ಕರಾಗ್ರದಿಂದ ಎಳೆಯಲು, ಮಹೇಶ್ವರನ ಕೃಪೆಯಿಂದ ಅವಳು ಗಂಡನ ರೀತಿಯನ್ನೇ ಹೊಂದಿದಳೆಂಬ ಕಥೆಯನ್ನು ಕೇಳಿದ್ದೇವೆ. ಈಗಲೂ ಕೂಡ ಪರವಳಿಗೆಯ ವೈಜಾಂಬಿಕೆಯು ಹರಭಕ್ತಿವಿಹೀನನಾದ ಗಂಡನನ್ನು ತೊರೆದು ಈಶ್ವರನ ಪಾದಗಳನ್ನು ನಂಬಿ ಲೋಕೋತ್ತರವಾದ ತನ್ನ ಭಕ್ತಿಯ ಪ್ರಭಾವವನ್ನು ಪ್ರಕಟಪಡಿಸಿದಳು. ೫೧. ಭಕ್ತರ ಸಮೂಹವು ಅಡಿಗಡಿಗೆ (ವೈಜಾಂಬಿಕೆಯು) ಘನವಾದ ಸೌಖ್ಯವನ್ನು ಪಡೆದಳೆಂದು ಪ್ರೀತಿಯಿಂದ ಕೊಂಡಾಡುತ್ತಿರಲು, ಜಿನ ಮುನಿಗಳ ಸಮೂಹವೆಲ್ಲ ಬಂದು ನಮಸ್ಕಾರ ಮಾಡಿತು; ಗಂಡನು ನಡುಗುತ್ತ ಬಂದು ಕೈ ಮುಗಿದನು; ಪೌರಜನವೆಲ್ಲ ಹೊಗಳಿತು. ೫೨. ಪ್ರಕಾಶಿಸುವ ಅವಳ ಮನಸ್ಸಿನ ಭಕ್ತಿ ಭಾವದಿಂದ ರೂಪುಗೊಂಡ ಶ್ರೇಷ್ಠ ಲಿಂಗವು 'ವೈಜನಾಥ'ನೆಂಬ ಹೆಸರಿನಿಂದ ಪರವಳಿಗೆಯಲ್ಲಿ ಒಪ್ಪಿತು. ವೈಜಕಾಂಬಿಕೆಯು ಆ ಶಂಕರನನ್ನು (ತನ್ನ ಭಕ್ತಿಯಿಂದ) ಮೆಚ್ಚಿಸುತ್ತ, ಶೋಭಿಸುತ್ತಿದ್ದಳು. ೫೩. ವೈಜಾಂಬಿಕೆಯ ಹೆಸರಿನ ಮಹಾತೇಜೋಮಯವಾದ ಲಿಂಗವು ಈಗಲೂ ಮೆರೆಯುತ್ತಿರುವುದು. (ಇದನ್ನು) ಎಲ್ಲಾ-ಜನರೂ ಅರಿತಿದ್ದಾರೆ. ಎಲೈ ಪಾಪ ಭಾಜನನಾದ ಜಿನ ಸೇವಕನೇ ಕೇಳು: (ಈ ವಿಷಯವನ್ನು)

ಜಿನಮತಮಂ ವಿದಾರಿಸಿದ ಶಂಕರಭಕ್ತರ ಸನ್ಮಹತ್ವವ
ರ್ಣನಮುಮನಂತಮಿಂತೊಳವು ತತ್ಕಥನಾವಳಿ ಮಾಣ್ಗೆ ಭಕ್ತಸ
ತ್ವನಿಯತಿಗಂದುಮಿಂದುಮೆನಲುಂಟೆ ವಿಚಾರಿಪೊಡೊಂದೆ ಕೇಳ್ವುದಂ
ತೆನೆ ಮೆಱೆವಬ್ಬಲೂರೊಳಗೆ ಕೊರ್ಬಿದ ಜೈನತಪಸ್ವಿಸಂಕುಳಂ ೫೪

ಬಿಡದೆಮ್ಮೊಳ್ಪ್ರತಿವಾದಮಂ ನೆಗಳ್ದೊಡಾ ವಾದಂಗಳಂ ಯುಕ್ತಿ ನೇ
ರ್ಪಡೆ ಶಾಸ್ತ್ರೋಕ್ತಿಯಿನಾವದಂ ಜಯಿಸೆ ಸೋಲ್ತಾ ಜೈನರಿಂತಾಗದೀ
ಯೆಡೆ ದೃಷ್ಟಾಂತಮನೆಯ್ದೆ ತೋಱಿಮೆಮಗಾ ದೃಷ್ಟಾಂತಮಂ ಕಂಡು ಸಂ
ಗಡಮೆಲ್ಲರ್ಮೃಡಭಕ್ತರಪ್ಪೆವೆನೆ ಕೇಳ್ದಾ ಮಾತನುತ್ಸಾಹದಿಂ ೫೫

ಈ ಪೊಳಲ ಹಿರಿಯ ಬಸದಿಯ
ಗೋಪುರಮಂ ಗುಡಿಯುಮೊಡೆದು ಜಿನನೊಪಲನಿತುಂ
ರೂಪಳಿದು ಬೀಳ್ಗುಮೆಮ್ಮಾ
ಲಾಪಂ ದಿಟಮಾಗೆ ನೇಸಱುದಯಕೆ ಮುನ್ನಂ ೫೬

ವ॥ ಎಂದು ಪ್ರೊಡ್ಡಮ್ಮ ಪ್ರಾಸ್ಕಿಯಂ ಜಿನಮುನಿಗಳೊಡಂಬಟ್ಟಂತೆ ಗೆಯ್ಮಮದನೊರ್ಮೆ ನೋಳ್ಪೆವೆನೆ ಮಱುದಿನದುದಯಕಾಲದೊಳ್ಮಾದಲಿಸಿದಂತೆ ತೋರ್ಪೆವೀಗಳೆಬರ್ಪುದೆಂದಾ ಜೈನತಾಪಸರನೊಡಗೊಂಡು ಜಿನಾಲಯಮಂ ಸಾರ್ತಂದು ನೋಳ್ಪುದುಮಲ್ಲಿ—

ನೀನು ಕೇಳಿ ತಿಳಿಯದಿರುವಂತಹುದೇ ! ೫೪–೫೬. ಜೈನ ಮತವನ್ನು ಕತ್ತರಿಸಿ ಹಾಕಿದ ಶಂಕರನ ಭಕ್ತರ ಶ್ರೇಷ್ಠ ಮಹತ್ವದ ವರ್ಣನೆಗಳು ಈ ರೀತಿ ಲೆಕ್ಕವಿಲ್ಲದಷ್ಟಿರುವುವು. ಆ ಕಥೆಗಳ ಸಮೂಹವನ್ನು ಹೇಳುವುದು ಸಾಕು. ಶಿವಭಕ್ತರಾದವರ ಸತ್ವದ ನಿಶ್ಚಯಕ್ಕೆ ಅಂದಿನದು ಇಂದಿನದು ಎಂದೆನ್ನಲುಂಟೆ ? ವಿಚಾರಮಾಡಿ ನೋಡಿದರೆ ಎಲ್ಲ ಭಕ್ತರ ಸತ್ವವೂ ಒಂದೇ ಕೇಳು ; ಹೇಗೆಂದರೆ : ಶೋಭಿಸುವ ಅಬ್ಬಲೂರಿನಲ್ಲಿ ಕೊಬ್ಬಿ ಹೋದ ಜೈನ ಸನ್ಯಾಸಿಗಳ ಸಮೂಹವು ತಪ್ಪದೆ ನಮ್ಮೊಡನೆ ಪ್ರತಿವಾದವನ್ನು ಮಾಡಲಾಗಿ ಅವರ ಆ ವಾದಗಳನ್ನು ಯುಕ್ತಿಯುಕ್ತವಾಗಿ ಶಾಸ್ತ್ರೋಕ್ತಿಗಳ ಪ್ರಮಾಣಪೂರ್ವಕವಾಗಿ ನಾವು ಜಯಿಸಿದವು. ಸೋತ ಆ ಜೈನರು ಇಷ್ಟರಿಂದ ನೀವು ಗೆದ್ದ ಹಾಗಲ್ಲ (ಇಂತಾಗದು), ಈ ಸ್ಥಳಗಳಲ್ಲಿ ಒಂದು ಪ್ರತ್ಯಕ್ಷ ಪ್ರಮಾಣವನ್ನು ಚೆನ್ನಾಗಿ ನಮಗೆ ತೋರಿಸಿರಿ. ಆ ದೃಷ್ಟಾಂತವನ್ನು ಕಂಡು ನಿಮ್ಮ ಸಂಗಡವೇ ನಾವೆಲ್ಲರೂ ಶಿವ ಭಕ್ತರಾಗುತ್ತೇವೆ. ಎನ್ನಲು ಅವರ ಆ ಮಾತನ್ನು ಉತ್ಸಾಹದಿಂದ ಕೇಳಿ, ಈ ಪಟ್ಟಣದ ದೊಡ್ಡ ಬಸದಿಯ ಗೋಪುರವೂ, ಗುಡಿಯೂ ಒಡೆದು, ಜಿನಮೂರ್ತಿಯ ದೇಹವು ರೂಪುಗೆಟ್ಟು, ನಮ್ಮ ಈ ಮಾತು ದಿಟವಾಗುವಂತೆ ನಾಳೆ ಸೂರ್ಯೋದಯಕ್ಕೆ ಮೊದಲೇ ಬೀಳುವುವು. ವ॥ ಹೀಗೆಂದು ಪ್ರತಿಜ್ಞೆ ಮಾಡಿದ ಶಪಥವನ್ನು ಜೈನ ಸನ್ಯಾಸಿಗಳು ಒಪ್ಪಿಕೊಂಡು 'ಹಾಗೆಯೇ ಮಾಡಿರಿ ಅದನ್ನು ಒಮ್ಮೆ ನೋಡುತ್ತೇವೆ,' ಎನ್ನಲು ಮಾರು ದಿವಸ ಉದಯಕಾಲದಲ್ಲಿ 'ನಾವು ಶಪಥ ಮಾಡಿದಂತೆ, (ಬಸದಿಯ ಗೋಪುರಾದಿಗಳು ಬಿದ್ದ ರೀತಿಯನ್ನು) ತೋರಿಸುತ್ತೇವೆ ಈಗಲೇ ಬನ್ನಿರಿ' ಎನ್ನುತ್ತ ಆ ಜೈನ ಸನ್ಯಾಸಿಗಳನ್ನು ಸಂಗಡ ಕರೆದುಕೊಂಡು ಜಿನ ಮಂದಿರದ ಸಮೀಪಕ್ಕೆ ಬಂದು ನೋಡಲಾಗಿ ಅಲ್ಲಿ

ಪುಡಿಯುಡರೆ ಜಿನನ ತಲೆ ಸೀ
ಳ್ದೊಡಲುರುಳೆ ಧರಾತಳಕ್ಕೆ ಸರಿಮುಪ್ಪಿನೆಗಂ
ಕೆಡೆದ ಗುಡಿಗೋಡೆಯುಂ ಮುಂ
ಗಡೆಯೊಳ್ಪಡಲಿಟ್ಟ ಗೋಪುರಂ ತೋಱಲೊಡಂ ೫೭

ಕಂಡಲ್ಲಿ ಜೈನರೆಲ್ಲಂ
ಗಂಡುಡುಗಿ ಬಿಗುರ್ತು ಮಣಿದರಾದ್ಯರ ಕಥೆಯುಂ
ಕೊಂಡು ಕೊನೆವಂತುಟೇಂ ಮು
ಕೊಂಡೀಗಳೆ ತೋರ್ಪೆನೆನ್ನ ಸಾಹಸದಿರವಂ ೫೮

ಬಿಂಕದ ಮೊರಟದ ಬಂಕನ
ಲೆಂಕಂಗೆನಗಱಳ ವೀರಭಕ್ತಂಗೆ ಬಿಡಾ
ತಂಕಮೆ ಮದೀಯ ಶಿರಮುಂ
ಭೋಂಕನೆ ಕೊಱೆದಿಳುಪಿ ಸಪ್ತದಿನಸಂಬರೆಗು ೫೯

ಪೊಡವಿಯೊಳಾರ್ಪಿನಿಂ ಮೆಱೆಯಿಸುತ್ತಿಳೆಗದ್ಭುತಮಾಗೆ ಮೇಣದಂ
ಪಡೆದಪೆನೀ ಜಿನಾಲಯಸಮುತ್ಕರಮಂ ಬಳಿಕೊಂದುಮಿಲ್ಲದಂ
ತೊಡೆದಪೆನುರ್ಕಿ ಸೊರ್ಕಿದ ಜಿನವ್ರತನಿಷ್ಠರ ಭಾಳದಕ್ಕರಂ
ದೊಡೆದಪೆನಿಂತಿದೇ ಬತಮಿದೇ ಮತಮಿಂತಿದೆ ಕಜ್ಜಮುಜ್ಜುಗು ೬೦

೫೭–೫೮. ಜಿನನ ತಲೆ ಸೀಳಿ ಪುಡಿಪುಡಿಯಾಗಿತ್ತು ; ಭೂಮಿಗೆ ಆ ಮೂರ್ತಿಯ ದೇಹವು ಉರುಳಿ ಬಿದ್ದಿತ್ತು ; ಸರಿಯೆನ್ನುವಂತೆ ಉರುಳಿ ಬಿದ್ದ ಗುಡಿಯ ಗೋಡೆಯೂ, ಮುಂಭಾಗದಲ್ಲಿ (ಮುರಿದು) ಹರಡಿ ಬಿದ್ದಿದ್ದ ಗೋಪುರವೂ ಕಾಣಲಾಗಿ, ಅವನ್ನು ಕಂಡ ಜೈನರೆಲ್ಲರು ಗಂಡಸುತನವೇ ನಾಶವಾಗಿ, ಭಯಗೊಂಡು ನಮಸ್ಕಾರ ಮಾಡಿದರು. ಪುರಾತನರಾದವರ ಕಥೆಗಳನ್ನು ಸ್ವೀಕರಿಸಿ ಹೆಮ್ಮೆಗೊಳ್ಳುವುದೇನು ? ಈಗಳೇ ಮುಂದುವರೆದು ನನ್ನ ಸಾಹಸದ ರೀತಿಯನ್ನು ತೋರಿಸುತ್ತೇನೆ. ೫೯–೬೦. ಬಿನ್ನಾಣದಿಂದ ಕೂಡಿದ ಮೊರಟನ ಬಂಕಿದೇವನ ಆಳಾದ ನನಗೆ, ದೃಢವಾದ ವೀರಶೈವ ಭಕ್ತನಿಗೆ ಬಿಡು ಇದೇತರ ಆತಂಕ ! ನನ್ನ ಶಿರಸ್ಸನ್ನು ಈ ಕೂಡಲೇ ಕತ್ತರಿಸಿ ಇಳುಪಿ ಏಳುದಿನಗಳ ವರೆಗೆ ಭೂಮಂಡಲಕ್ಕೆಲ್ಲ ಅದ್ಭುತವಾಗುವಂತೆ ಸಾಮರ್ಥ್ಯದಿಂದ ಈ ಭೂಮಿಯಲ್ಲಿ ಮೆರೆಯಿಸುತ್ತ ಪುನಃ ಅದನ್ನು ಪಡೆಯುತ್ತೇನೆ. (ಮುಂಡದೊಡನೆ ಜೋಡಿಸಿ ಜೀವವನ್ನು ಪಡೆಯುತ್ತೇನೆ.) ಆಮೇಲೆ ಈ ಜಿನಾಲಯ ಸಮೂಹವನ್ನೆಲ್ಲ ಒಂದೂ ಉಳಿಯದಂತೆ ಒಡೆದು ಹಾಕುತ್ತೇನೆ, ಗರ್ವದಿಂದ ಸೊಕ್ಕಿ ಹೋಗಿರುವ ; ಈ ಜಿನ ವ್ರತ ನಿಷ್ಠರಾಗಿರುವವರ ಹಣೆಯ ಬರಹವನ್ನೇ ಒರೆಸಿ ಹಾಕುತ್ತೇನೆ. ಇಂತಿರುವುದೇ ನನ್ನ ವ್ರತ ;

ವ॥ ಎಂದು ವಿಜೃಂಭಿಸಿ ಪೂಣ್ಕೆಗೆಯ್ದಾ ಜಿನಮತತೃಣಧಾಮಧೂಮಧ್ವಜನ ನುಡಿಯು ನೊಡಂಬಟ್ಟು ಶವಣಮುಖ್ಯಂ ತನ್ನ ಗುರುಗಳ್ಮೊದಲಾದರೆಲ್ಲರುಮಂ ಬರಿಸುತವರ್ಗೞಡಿ ಗೊಂದಣಿಸಿ ನಿಂದು ಶೈವನ ಪಂಥಪಳವಂ ಕಾಣ್ಬೆನೆಂದು ನೋಡುತ್ತುಮಿರ್ದನಾವಾರ್ತೆಗೇಳ್ದು—

ಧರಣೀಶಂ ಬಿಜ್ಜಳಂ ತನ್ನಖಿಳ ಸಚಿವ ಸಾಮಂತ ಸೇನಾಧಿನಾಥಾ
ದ್ಯರಿನಾಗಳ್ಕೂಡಿ ಬಂದಾ ಶರಣನಿದಿರೊಳೊಪ್ಪಿರ್ದನಂತಲ್ಲಿಗತ್ಯಾ
ದರದಿಂದೇಳ್ತಂದು ಸತ್ಯಾನ್ವಿತ ನಿರುಪಮಸಾಮರ್ಥ್ಯಸಂಪನ್ನ ಮಾಹೇ
ಶ್ವರಯುಕ್ತಂ ಭಕ್ತರೊಡ್ಡೋಲಗದೊಳೆಸೆದು ನೋಡುತ್ತಮಿರ್ದಂ ವೃಷೇಂದ್ರಂ ೬೧

ಪೌರಜನಮೀಕ್ಷಿಸುತ್ತಿರೆ
ಧೀರಂ ಗಣಸಭೆಗೆ ಮಣಿದು ಪೊಡಮಟ್ಟು ದರ
ಸ್ಮೇರರುಚಿ ತುಳ್ಕೆ ವದನಾಂ
ಭೋರುಹದೊಳ್ಜಡಿದು ಖಡ್ಗಮಂ ಕರತಳದೊಳ್ ೬೨

ಪಟುರವದಿಂದೆ ಬೊಬ್ಬೆಗುಡುತಬ್ಬರಿಸುತ್ತೆಡಗೆಯ್ಯೊಳೊತ್ತಿ ಸಂ
ಘಟಿಸಿ ಕಚೌಘಮಂ ಪಿಡಿದು ಖಡ್ಗಮನಾತ್ಮಗಳಕ್ಕೆ ಸಾರ್ಚಿತು

ಇದೇ ಮತ ; ಇದೇ ಕಾರ್ಯಗೌರವ (ಕಾರ್ಯೋದ್ಯೋಗ). ವ॥ ಹೀಗೆಂದು ಆರ್ಭಟಿಸಿ ಪ್ರತಿಜ್ಞೆ ಮಾಡಿ, ಆ ಜೈನ ಮತವೆಂಬ ಹುಲ್ಲಿನ ಮನೆಗೆ ಬೆಂಕಿಯಂತಿರುವ (ಧೂಮವೇ ಧ್ವಜವಾಗಿ ಉಳ್ಳ ಬೆಂಕಿಯಂತಿರುವ) ಏಕಾಂತದ ರಾಮಯ್ಯನ ನುಡಿಯನ್ನು ಒಪ್ಪಿಕೊಂಡು; ಶ್ರವಣ ಸಂನ್ಯಾಸಿಗಳಲ್ಲಿ ಮುಖ್ಯನಾದವನು ತನ್ನ ಗುರುಗಳೇ ಮೊದಲಾದ ಎಲ್ಲ ಜೈನರನ್ನೂ ಬರಮಾಡಿಕೊಂಡು ಅವರೆಲ್ಲರನ್ನೂ ಗುಂಪಾಗಿ ಸೇರಿಸಿ ನಿಂತುಕೊಂಡು (ಈಗ) ಶಪಥದ ಸಾಮರ್ಥ್ಯವನ್ನು ಕಾಣುತ್ತೇನೆಂದು ನೋಡುತ್ತಿದ್ದನು. ಈ ಸುದ್ದಿಯನ್ನು ಕೇಳಿ ೬೧. ಭೂಮೀಶ್ವರನಾದ ಬಿಜ್ಜಳನು ತನ್ನ ಸಮಸ್ತ ಸಚಿವ, ಸಾಮಂತ, ಸೇನಾಧಿಪತಿ ಇವರೇ ಮೊದಲಾದವರಿಂದ ಕೂಡಿಕೊಂಡು ಬಂದು, ಆ ಶರಣನಾದ ಏಕಾಂತದ ರಾಮಯ್ಯನೆದುರಿನಲ್ಲಿ ಒಪ್ಪುತ್ತಿದ್ದನು. ಅದೇ ರೀತಿ ಅಲ್ಲಿಗೆ ಅತ್ಯಂತ ಪೂಜ್ಯ ಭಾವದಿಂದ, ಸತ್ಯದಿಂದ ಕೂಡಿದವನೂ, ಅನುಪಮ ಸಾಮರ್ಥ್ಯವುಳ್ಳವನೂ, ಮಾಹೇಶ್ವರರುಗಳಿಂದ ಕೂಡಿದವನೂ ಆದ ಬಸವೇಶ್ವರನು ಬಂದು ಭಕ್ತ ಸಮೂಹದವರ ಸಭೆಯಲ್ಲಿ ಪ್ರಸನ್ನ ಭಾವದಿಂದ ನೋಡುತ್ತಿದ್ದನು. ೬೨–೬೩. ಪಟ್ಟಣದ ಜನರೆಲ್ಲರೂ ನೋಡುತ್ತಿದ್ದ ಹಾಗೆಯೇ ಧೈರ್ಯಶಾಲಿಯಾದ ಆ ಏಕಾಂತ ರಾಮಯ್ಯನು ಶಿವಭಕ್ತರುಗಳ ಸಭೆಗೆ ಬಾಗಿ ಸಾಷ್ಟಾಂಗ ಪೂರ್ವಕ ನಮಸ್ಕರಿಸಿ, ಮುಖ ಕಮಲದಲ್ಲಿ ಮಂದಹಾಸದ ಕಾಂತಿಯು ತುಳುಕುತ್ತಿರಲು, ಕಯ್ಯಲ್ಲಿ ಖಡ್ಗವನ್ನು ಹಿಡಿದು ಝಳಪಿಸುತ್ತ, ಸಮರ್ಥವಾದ ಧ್ವನಿಯಿಂದ ಬೊಬ್ಬೆಯಿಟ್ಟು ಗರ್ಜಿಸುತ್ತ, ಎಡಗೈಯಿಂದ ಗಟ್ಟಿಯಾಗಿ ಮುಂಡುಗೂಡಿಸಿದ ಕೂದಲುಗಳ ಸಮೂಹವನ್ನು ಹಿಡಿದು, (ಬಲಗೈಯು) ಖಡ್ಗವನ್ನು ತನ್ನ

ತ್ಕಟಿಸಿ ಕಡಂಗಿ ಮಸ್ತಕಮನಾರ್ದರಿದಾಕ್ಷಣಮಾ ಶಿರಂ ಪರಿ
ಸ್ಫುಟರವದಿಂದೆ ಬೊಬ್ಬಿಱಿದು ಕೀರ್ತಿಸುತಿರ್ದುದು ವಾಮಹಸ್ತದೊಳ್ ೬೩

ಮುರಿದ ¹ಕುಡಿ¹ಮೀಸೆ ಕುಣಿವು
ತ್ತಿರೆ ಕೆಂಪಡರ್ದಕ್ಷಿ ತೊಳಗೆ ಬಿಱುನಗೆ ದಶನ
ಸ್ಫುರಿತರುಚಿನಿಟಿಲಭಸಿತ
ತ್ರಿರೇಖೆಗಳ್ಭ್ರುಕುಟಿಯೆಸೆಯೆ ಮಿಸುಪಾ ಶಿರಮಂ ೬೪

ಕಂಡಾಶ್ಚರ್ಯಮನಾಳ್ದು ಕೆಯ್ಮುಗಿದನಾ ಭೂಪಾಲನಾನಂದದಿಂ
ಕೊಂಡಾಡುತ್ತೆಸೆದಿರ್ದನಲ್ಲಿ ವೃಷಭೇಂದ್ರಂ ಭಕ್ತರುತ್ಸಾಹದಿಂ
ತಂಡಂಬೆತ್ತರರೇ ವುಘೇಯೆನುತುಮಿರ್ದಪೌರವೃಂದಂ ಮನಂ
ಗೊಂಡತ್ಯದ್ಭುತಮಿಂತಿದೆಂದು ಪೊಗಳುತ್ತಿರ್ದತ್ತು ಸಂಪ್ರೀತಿಯಿಂ ೬೫

ಆ ಸಮಯದೊಳಖಿಳರ್ಜಯ ಜೀಯೆನೆ
ಭಾಸುರಶರಣಾವಳಿ ಭಲರೇಯೆನೆ
ನೆರೆದು ಗಣಂಗಳ್ ಕಡುನಲಿವುತ್ತಿರೆ
ಬಿರಿದಿನ ಕಹಳೆಗಳೊಡನುಲಿವುತ್ತಿರೆ
ಪಟುಪಟಹಧ್ವನಿ ಶಂಖನಿನಾದಂ
ಚಟುಲಮೃದಂಗದ ತಾಳದ ನಾದಂ
ಬೀಸುವ ಚಾಮರವೀಜನತತಿಗಳ್
ಸೂಸುವ ಸೀಗುರಿ ಲಾಸ್ಯದ ಗತಿಗಳ್
ಪೊಸರನ್ನದ ನಡೆತೋರಣದೋರಣ

ಕುತ್ತಿಗೆಯ ಮೇಲಿಟ್ಟು, ಅತ್ಯುಗ್ರತೆಯ ಭಾವದಿಂದ ಉತ್ಸಾಹಗೊಂಡು, ಗಟ್ಟಿಯಾಗಿ ಚೀರಿ ಕತ್ತರಿಸಿಕೊಂಡ ಆಕ್ಷಣವೇ ಶಿರಸ್ಸು ಪರಿಸ್ಫುಟವಾದ ಧ್ವನಿಯಿಂದ ಬೊಬ್ಬಿರಿಯುತ್ತ ವಾಮಹಸ್ತದಲ್ಲಿ ಸ್ತೋತ್ರ ಮಾಡತೊಡಗಿತು. ೬೪–೬೫. ಮುರಿದು ಹುರಿಗೊಳಿಸಿದ ತುದಿಮೀಸೆಗಳು ಕುಣಿಯುತ್ತಿದ್ದವು; ಕೆಂಪಾದ ಕಣ್ಣುಗಳು ಪ್ರಕಾಶಿಸುತಿದ್ದವು; ಗಟ್ಟಿಯಾದ ನಗೆ, ಹೊಳೆಯುತ್ತಿರುವ ಹಲ್ಲುಗಳ ಕಾಂತಿ, ಹಣೆಯಲ್ಲಿನ ಭಸ್ಮದ ಮೂರು ಬೆರಳುಗಳು, ಹುಬ್ಬುಗಳು—ಇವುಗಳಿಂದ ಶೋಭಿಸುತ್ತಿರುವ ಆ ಶಿರಸ್ಸನ್ನು ಭೂಪಾಲನಾದ ಬಿಜ್ಜಳ ಮಹಾರಾಜನು ಕಂಡು ಆಶ್ಚರ್ಯಗೊಂಡು ಆನಂದದಿಂದ ಕೈಮುಗಿದನು; ಬಸವೇಶ್ವರನು ಕೊಂಡಾಡುತ್ತ ಅಲ್ಲಿ ಶೋಭಿಸುತ್ತಿದ್ದನು; ಭಕ್ತರು ತಂಡ ತಂಡವಾಗಿ ಉತ್ಸಾಹದಿಂದ ಅರರೇ! ಉಫೇ!! ಎನ್ನುತ್ತಿದ್ದರು; ಪೌರ ಜನರ ಸಮೂಹವು ಮನಸಾರ ಇದು ಅತ್ಯದ್ಭುತವಾದದ್ದು ಎಂದು ಅತ್ಯಂತ ಪ್ರೀತಿಯಿಂದ ಹೊಗಳುತ್ತಲಿತ್ತು. (ಮಂದಾನಿಲ ರಗಳೆಯ ಭಾಗ) ಆ ಸಮಯದಲ್ಲಿ ಸಮಸ್ತರೂ ಜಯ ಜೀಯ ಎನ್ನುತ್ತಿದ್ದರು. ಪ್ರಕಾಶಮಾನರಾದ

---

1 ಕೊನೆ(ಚ)

ಮೆಸೆದಿರೆ ಶರಣಮಹೋತ್ಸವಕಾರಣ
ವೊಸಗೆಯು ಪೂವಲಿ ಕಳಶಂ ಕನ್ನಡಿ
ಮಿಸುಗುವ ನಂದಿಯು ಪಳಯಿ[1]ಗೆ ನಡೆಮಡಿ
ಬಿರಿದು ಪೊಗಳ್ವ ಮಹಾಮಾಗಧತತಿ
ತರದಿಂ ಕೈವಾರಿಪ ಬುಧ ಸಂತತಿ
ಸೊಗಯಿಪ ವೀರಗಣಂಗಳ ಕಳಕಳ
ಮಗಲದ ನಾನಾ ಸಂಭ್ರಮಸಂಕುಳ
ಮಲರ್ದಿರೆ ತೊಳತೊಳಪಕ್ಷಿಗಳಿಂದಂ
ಸುಲಲಿತ ನಿಟಿಲ ಚಳಾಳಕದಂದಂ
ಬಡೆದೊಪ್ಪುತೆ ಕೆತ್ತುವ ಮೀಸೆಗಳಿಂ
ಮಿಡುಕೋಡದ ಪುರ್ಬಿನ ದೇಸೆಗಳಿಂ
ಪೊಗರುಗುವಮಳ ಕಪೋಲದ್ವಯದಿಂ
ಸೊಗಯಿಪ ಸಸ್ಮಿತ ರವದತಿಶಯದಿಂ
ಮೆಱೆವ ಶಿರಂ ತನ್ನೆಡಗೆಯ್ಗುರ್ದಿರೆ
ಕಱೆಗೊರಲನ ನುತಿಯಿಪ ರುತಿ ನಿಮಿರ್ದಿರೆ
ಬಲಗೆಯ್ಯೊಳ್ಕರವಾಳಂ ಜಡಿವುತೆ
ನೆಲೆವೆರ್ಚಿದ ಸಡಗರದಿಂ ನಡೆವುತೆ

ಶರಣರುಗಳ ಸಮೂಹವು ಭಲರೇ ! ಅನ್ನುತ್ತಿತ್ತು. ಶಿವಗಣಂಗಳೆಲ್ಲ ಸೇರಿ ಅತ್ಯಧಿಕವಾಗಿ ನಲಿದಾಡುತ್ತಿದ್ದರು. ಬಿರುದನ್ನು ಹೊಗಳುವ ಕಹಳೆಗಳು ಇವರೊಡನೆಯೇ ಕೂಗಿಡುತ್ತಿದ್ದುವು. ಸಮರ್ಥವಾದ ನಗಾರಿಗಳ ಧ್ವನಿ, ಶಂಖದ ನಿನಾದ, ಸೊಗಸಾದ ಮೃದಂಗದ, ತಾಳದ ನಾದ (ಉಂಟಾಗುತ್ತಿದ್ದವು). ಚಾಮರ ಮತ್ತು ಬೀಸಣಿಗೆಗಳು ಸಮೂಹಗೊಂಡು ಬೀಸಲ್ಪಡುತ್ತಿದ್ದವು. ಸೀಗುರಿಗಳು (ಮಯೂರ್ಭಾಲುಗಳು) ಬೀಸಲ್ಪಡುತ್ತಿದ್ದವು. ಗರೆವಿಡಿದು ಲಾಸ್ಯ ನಡೆಯುತ್ತಿತ್ತು. ನೂತನವಾದ ರತ್ನ ನಿರ್ಮಿತ ನಡೆ ದೋರಣವು ಶೋಭಿಸುತ್ತಿತ್ತು. ಮಹೋತ್ಸವಗೊಂಡ ಕಾರಣ ಶರಣರು ಪೂವಲಿಗೆದರುತ್ತಿದ್ದರು. ಕಳಶ, ಕನ್ನಡಿ, ಶೋಭಿಸುವ ನಂದಿಯ ಧ್ವಜ, ನಡೆ ಮಡಿಗಳ (ಉಪಚಾರ ಮಾಡುತ್ತಿದ್ದರು). ಬಿರುದುಗಳನ್ನು ಹೊಗಳುವ ಮಹಾಮಾಗಧರ ಸಮೂಹ, ಕ್ರಮವಿಡಿದು ಸ್ತೋತ್ರ ಮಾಡುವ ಜ್ಞಾನಿಗಳ ಸಮೂಹ, ಸೊಗಸಿನಿಂದ ಕೂಡಿದ ವೀರಶೈವ ಭಕ್ತ ಗಣಂಗಳ ಕಳಕಳ ಧ್ವನಿ ಅಗಲದಂತೆ ನಾನಾ ಬಗೆಯ ಸಂಭ್ರಮದ ಸಮೂಹ–ಇವೆಲ್ಲ ಉತ್ಸಾಹಗೊಂಡಿತ್ತು. (ಆ ಶಿರವು) ಪ್ರಕಾಶಮಾನವಾಗಿ ಬೆಳಗುವ ಕಣ್ಣುಗಳಿಂದಲೂ, ಮನೋಹರವಾದ ಹಣೆಯಲ್ಲಿ ಕುಣಿದಾಡುವ ಮುಂಗುರುಳುಗಳು, ಅಂದವಾಗಿ ಒಪ್ಪುತ್ತಿದ್ದವು. ಕುಣಿಯುತ್ತಿರುವ ಮೀಸೆಗಳಿಂದಲೂ ಮಿಡುಕಾಟ ತಪ್ಪದಿರುವ ಹುಬ್ಬಿನ ಅಂದದಿಂದಲೂ, ಕಾಂತಿಯು ಹೊರ ಹೊಮ್ಮುವ

1 ಏ(ಚ)

ಪರವಾದಿಗಳಿದಿರೊಳ್ಮೊನೆದೋಱುತೆ
ಕರಖಡ್ಗವ ಚಿಮ್ಮುತೆ ನಲವೇಱುತೆ
ಗಣಸಂಕುಳವಂ ಬಲವರುತೊಲವಿಂ
ಕುಣಿಕುಣಿದಾಡುತೆ ಪಾಡುತೆ ಪಲವಂ
ತಲೆ ನೇಮಿಸಿದಭಿನಯವಂ ಪಿಡಿವುತೆ
ತಲೆ ಜತಿಗುಡೆ ನರ್ತಿಸುತುಂ ನಡೆವುತೆ
ಪುಟನೆಗೆವುತೆ ನಿಲುತಡ್ಡಂಬಾಱುತೆ
ನಟಿಸುತ್ತುಂ ಭ್ರಮರಿಗಳಂ ಬೀಱುತೆ
ಸುಳಿಸುಳಿದತ್ತಿತ್ತಂ ಪರಿವರಿವುತೆ
ಖಳಜನರಂಜುತ್ತಿರೆ ಪಲ್ಮೊರೆವುತೆ
ಜಿನಮತಜೈತ್ರಂ ಜನನುತಿಪಾತ್ರಂ
ಶಿವಗಣಮಿತ್ರಂ ಭುವನಪವಿತ್ರಂ
ಗುಣಮಣಿಸೂತ್ರಂ ಪ್ರಣುತಚರಿತ್ರಂ
ಸುಮತಿಸುಧಾಮಂ ಪ್ರಮಥಲಲಾಮಂ
ಪರಮತಭೀಮಂ ಪರಿಹೃತಕಾಮಂ

ಶ್ರೇಷ್ಠ ಕಪೋಲದ್ವಯದಿಂದಲೂ, ಸೊಗಸನ್ನುಂಟು ಮಾಡುವ ಮಂದಸ್ಮಿತದಿಂದ ಕೂಡಿದ ಧ್ವನಿಯ ಅತಿಶಯದಿಂದಲೂ, ಶೋಭಿಸುತ್ತಿರುವ ಶಿರಸ್ಸು (ಆ ಏಕಾಂತ ರಾಮಯ್ಯನ) ಎಡಗೈಯಿಂದ ಗಟ್ಟಿಯಾಗಿ ಹಿಡಿಯಲ್ಪಟ್ಟು (ಶೋಭಿಸುತ್ತಿತ್ತು.) (ಬಾಯಿಂದ) ಪರಶಿವನನ್ನು ಸ್ತೋತ್ರ ಮಾಡುವ ಧ್ವನಿಯುಂಟಾಗುತ್ತಿತ್ತು. ಬಲಗಯ್ಯಲ್ಲಿ ಹಿಡಿದ ಖಡ್ಗವು ಝಳಪಿಸಲ್ಪಡುತ್ತಿತ್ತು. ಮಿತಿಮೀರಿದ ಸಡಗರದಿಂದ ನಡೆಯುತ್ತ, ಪರವಾದಿಗಳ ಎದುರಿನಲ್ಲಿ ಸಾಮರ್ಥ್ಯವನ್ನು ಪ್ರಕಟಿಸುತ್ತ, ಕೈಯಲ್ಲಿನ ಖಡ್ಗವನ್ನು ಚಿಮ್ಮುತ್ತ, ಉತ್ಸಾಹಗೊಳ್ಳುತ್ತ, ಪ್ರೀತಿಯಿಂದ ಶಿವಗಣ ಸಮೂಹವನ್ನು ಪ್ರದಕ್ಷಿಣೆ ಮಾಡುತ್ತ, ಕುಣಿ ಕುಣಿದು ಆಡುತ್ತ, ಹಲವಾರು ಬಗೆಯಲ್ಲಿ ಹಾಡುತ್ತ, (ಶೋಭಿಸುತ್ತಿತ್ತು). (ಕೈಯಲ್ಲಿ ಹಿಡಿದ) ತಲೆಯು ಆಜ್ಞಾಪಿಸುತ್ತಿದ್ದ ರೀತಿಯಲ್ಲಿ ಅಭಿನಯವನ್ನು ಹಿಡಿದಾಡುತ್ತ, ತಲೆಯು ಜೊತೆಗೊಡುತ್ತಿರಲು ನರ್ತನ ಮಾಡುತ್ತ, ನಡೆಯುತ್ತ, ಪುಟ ನೆಗೆದಾಡುತ್ತ, ನಿಂತುಕೊಂಡು ಅಡ್ಡಲಾಗಿ ಹಾರುತ್ತ ನಟನೆ ಮಾಡುತ್ತ, ಭ್ರಮರಿ (ಸುತ್ತುವಿಕೆಯ ಭಂಗಿ) ಯನ್ನು ಬೀರುತ್ತ, ಅತ್ತಿತ್ತ ಸುಳಿಸುಳಿದು ಓಡಾಡುತ್ತ, ದುಷ್ಟರಾದ ಜನರು ಅಂಜುವಂತೆ ಹಲ್ಲುಗಳನ್ನು ಕಡಿದು ಧ್ವನಿ ಮಾಡುತ್ತ ಜೈನ ಮತಕ್ಕೆ ಚೈತ್ರಮಾಸದಂತಿರುವ, ಜನರ ಸ್ತೋತ್ರಕ್ಕೆ ಪಾತ್ರನಾದ, ಶಿವಭಕ್ತಗಣಗಳಿಗೆ ಮಿತ್ರನೆನಿಸಿದ, ಭೂಲೋಕಕ್ಕೆಲ್ಲ ಪವಿತ್ರನೆನಿಸಿದ, ಸದ್ಗುಣವೆಂಬ ರತ್ನಗಳ ಮಧ್ಯದ ದಾರವೆನಿಸಿದ, ಶ್ಲಾಘ್ಯವಾದ ಚರಿತ್ರೆಯುಳ್ಳ, ಸದ್ಬುದ್ಧಿಗೆ ಮೂಲಸ್ಥಾನನಾದ, ಪ್ರಮಥ ಶ್ರೇಷ್ಠನೆನಿಸಿದ, ಪರ ಮತಗಳಿಗೆ ಭಯಂಕರನೆನಿಸಿದ, ಮನ್ಮಥನನ್ನು ನಾಶ

ಮಹಿಮಸಮುದ್ರಂ ಮಹಿತಳರುದ್ರಂ
ಸಡಗರದಿಂದಂ ನಡೆತರುತಿರ್ದಂ

ವ॥ ಇಂತು ಪಿರಿಯ ಸಂಭ್ರಮದಿಂ ಲೋಕೈಕವೀರನೇಕಾಂತರಾಮವಿಭು ಕಲ್ಯಾಣಕಟಕದ ಸೋಮಸೂರ್ಯವೀಥಿಗಳೊಳ್ಮೆಱೆದಿಂತೇಳ್ತರುತ್ತುಮೇಳುಂ ದಿನಂಗಳುಂ ಕಳಿದು ಮೊದಲ ಶಿವ ಮಂದಿರಕ್ಕೆ ಮಗುಳ್ದು ಬಂದಲ್ಲಿ ಪನ್ನತಿಕೆಯಿಂ ನಿಂದು ಜೈನಮುನಿಗಳಂ ನೋಡಿ—

ಎಲೆ ಜೈನಾಧಮರಿರ ನಿಮ
ಗೊಲವಿಂದಾನಿತ್ತ ಭಾಷೆ ಸಂದುದೆನುತ್ತುಂ
ತಲೆದೂಗಿಸುತಖಿಳರನು
ಜ್ವಲಮತಿ ನುಡಿದಾರ್ದು ಚಿಮ್ಮುತಂ ಕರವಾಳಂ ೬೬

ಎಡಗೆಯ್ಯೊಳಾಂತ ಶಿರಮಂ
ಮುಡಿವಿಡಿದು ಕಬಂಧಕಂಧರಕ್ಕಂಟಿಸೆ ತ
ಳ್ತೊಡನೆಂದಿನಂತೆ ಪತ್ತಿದು
ದಿಡಿದತಿ ಮುದದಿಂದೆ ಪೊಗಳ್ದರಾ ಶಿವಶರಣರ್ ೬೭

ಕೊರಗೆ ಪರವಾದಿವದನಾಂ
ಬುರುಹಂ ನಲವೆಯ್ದೆ ಭಕ್ತನಯನೋತ್ಪಳಮೀ
ಶ್ವರಮತಸುಧಾಬ್ಧಿ ವರ್ಧಿಸೆ
ಕರಮೆಸೆದುದು ತನ್ಮುಖೇಂದು ನಗೆವೆಳ್ಗದಿರಿಂ ೬೮

ಗೊಳಿಸಿದ, ಸಮುದ್ರದೋಪಾದಿಯಲ್ಲಿ ಮಹಿಮೆಯುಳ್ಳ, ಭೂಲೋಕದ ರುದ್ರನೆನಿಸಿದ ಆ ಏಕಾಂತ ರಾಮಯ್ಯನು (ಶಿರವನ್ನು ಕತ್ತರಿಸಿಕೊಂಡ ಏಕಾಂತ ರಾಮಯ್ಯನು) ಸಂಭ್ರಮದಿಂದ ನಡೆದು ಬರುತ್ತಿದ್ದನು. ವ॥ ಈ ರೀತಿ ಹೆಚ್ಚಾದ ಸಂಭ್ರಮದಿಂದ ಲೋಕೈಕ ವೀರನಾದ ಏಕಾಂತ ರಾಮ ಪ್ರಭುವು ಕಲ್ಯಾಣ ಪಟ್ಟಣದ ಸೋಮ ಸೂರ್ಯ ಬೀದಿಗಳಲ್ಲಿ ಮೆರೆಯುತ್ತ ಈ ರೀತಿ ನಡೆದು ಬರುತ್ತ ಏಳು ದಿನಗಳು ಕಳೆದು ಮೊದಲಿನ ಶಿವಮಂದಿರಕ್ಕೆ ತಿರುಗಿ ಬಂದು ಅಲ್ಲಿ ಜೈನಮುನಿಗಳನ್ನು ನೋಡಿ ೬೬. ಎಲೈ ಪರಾಕ್ರಮ ದಿಂದ ನಿಂತ ಜೈನಾಧಮರುಗಳಿರಾ, ನಿಮಗೆ ಪ್ರೀತಿಯಿಂದ ನಾನು ಕೊಟ್ಟ ಶಪಥವು ನೆರವೇರಿತು ಎಂದೆನ್ನುತ್ತ ಉಜ್ವಲಮತಿಯಾದ ಅವನು ಎಲ್ಲರನ್ನೂ ತಲೆದೂಗಿಸಿ, ನುಡಿದು ಬೊಬ್ಬಿರಿದು ಖಡ್ಗವನ್ನು ಆಡಿಗೆಸೆದು, ಎಡಗೈಯಲ್ಲಿ ಹಿಡಿದ ಶಿರಸ್ಸನ್ನು ಜುಟ್ಟು ಹಿಡಿದು ಮುಂಡದ ಕುತ್ತಿಗೆಗೆ ಅಂಟಿಸಲಾಗಿ ಅದು ಅಂಟಿಕೊಂಡು ಎಂದಿನಂತೆ ಗಟ್ಟಿಯಾಗಿ ಹಿಡಿದು ಹತ್ತಿಕೊಂಡಿತು. ಆ ಶಿವಶರಣರೆಲ್ಲ ಸಂತೋಷದಿಂದ ಹೊಗಳಿದರು. ೬೮. ಪರವಾದಿಗಳ ಮುಖಕಮಲಗಳು ಕೊರಗಿದವು. ಭಕ್ತರುಗಳ ಉತ್ಪಲದಂತಿರುವ ಕಣ್ಣುಗಳು ಸಂತೋಷಗೊಂಡವು. ಶಿವಮತವೆಂಬ ಕ್ಷೀರಸಮುದ್ರವು ಉಕ್ಕಿತು. ಹೀಗೆ ಆ ಏಕಾಂತ ರಾಮಯ್ಯನ ಮುಖವೆಂಬ ಚಂದ್ರನು ನಗೆಯೆಂಬ

ಶರಣಾರ್ಥಿರವಂಗುಡುತುಂ
ಶರಣರ್ಗೆಸೆದಿರ್ಪ ರಾಮನಾಥನ ಚರಣಾಂ
ಬುರುಹಕ್ಕೆ ಸೋಲ್ತ ಜಿನಮತ
ಗುರುಗಳ್ಮಣಿದಿತ್ತರಲ್ಲಿ ಜಯಪತ್ರಿಕೆಯಂ ೧೯

ವ|| ಆ ಜಯಪತ್ರಿಕೆಯನಾ ನರೇಂದ್ರನ ಕೆಯ್ಯೊಳಿತ್ತು ತನಗೆ ಪೊಡಮಟ್ಟರ್ದ ಜಿನತಾಪಸರ ಪಣೆಗಳೊಳ್ನಂದಿಮುದ್ರೆಯನೊತ್ತಿ ಮತ್ತಮಿರದೆ—

ಪೆಸರ್ಗೊಂದುಂ ಜಿನಗೇಹಮಿಲ್ಲದವೊಲಾ ಕಲ್ಯಾಣದೊಳ್ ಜೈನಗೇ
ಹಸಮೂಹಂ ಬಯಲಾಗೆ ನುಗ್ಗಿಸಿ ಜಿನಾನೀಕಂ ಪಡಲ್ವಟ್ಟು ಮ
ಣ್ಮಸಿಯಪ್ಪಂತಿರೆ ಪೋಳ್ದು ಸೀಳ್ದುರುಪಿ ತೇಜಃಸ್ಫೂರ್ತಿ ಸತ್ಕೀರ್ತಿವೆ
ತ್ತೆಸೆದೇಕಾಂತದ ರಾಮದೇವವಿಭುವಿರ್ದಂ ಭಕ್ತವೃಂದಾನ್ವಿತಂ ೨೦

ಇಂತೊಲ್ದೇಕಾಂತರಾಮಪ್ರಭು ನೆಗಳ್ದ ಮಹಾಕಾರ್ಯದಾಶ್ಚರ್ಯಮಂ ಕಂ
ಡಂತಿಂತೆಂಬೂಹೆಗಿಂಬಾಗದ ಮುದದೊದವಂ ತಾಳ್ದು ಸದ್ಭಕ್ತಿಯುಕ್ತ
ಸ್ವಾಂತಂ ತತ್ಪಾದಪದ್ಮಕ್ಕೆಱಗಿ ಪೊಗಳ್ದವರ್ಗೊಡಿ ಸಂಪ್ರೀತಿಯಿಂ ಶು
ದ್ಧಾಂತಕ್ಕೇಳ್ತಂದು ಪೂಜಾರತಿಯೊಳೆಸೆದನುದ್ವೀತತಂದ್ರಂ ವೃಷೇಂದ್ರಂ ೨೧

ಬೆಳದಿಂಗಳಿನಿಂದ ಅತ್ಯಧಿಕವಾಗಿ ಶೋಭಿಸುತ್ತಿತ್ತು. ೧೯. ಶರಣರ ಸಮೂಹಕ್ಕೆ 'ಶರಣಾರ್ಥಿ' ಎಂಬ ಧ್ವನಿಯುನ್ನುಂಟು ಮಾಡುತ್ತ, ಶೋಭಿಸುತ್ತಿರುವ ಏಕಾಂತ ರಾಮಯ್ಯನ ಚರಣಕಮಲಗಳಿಗೆ ಸೋತ ಜೈನ ಮತದ ಗುರುಗಳು (ಆವನಿಗೆ) ನಮಸ್ಕಾರ ಮಾಡಿ, ಆಗ ಜಯ ಪತ್ರಿಕೆಯುನ್ನು (ಬರೆಯಿಸಿ) ಕೊಟ್ಟರು. ವ|| ಆ ಜಯ ಪತ್ರಿಕೆಯುನ್ನು ಆ ಬಿಜ್ಜಳ ನರೇಂದ್ರನ ಕೈಯಲ್ಲಿ ಕೊಟ್ಟು, ತನಗೆ ನಮಸ್ಕಾರ ಮಾಡಿದ ಜೈನ ಸನ್ಯಾಸಿಗಳ ಹಣೆಯ ಮೇಲೆ ನಂದಿಯ ಮುದ್ರೆಯನ್ನೊತ್ತಿ ಮತ್ತು ತಪ್ಪದೆ ೨೦. ಆ ಕಲ್ಯಾಣ ನಗರದಲ್ಲಿ ಹೆಸರಿಗೆ ಒಂದೂ ಕೂಡ ಜೈನ ಬಸದಿಗಳು ಉಳಿಯದಂತೆ ಮಾಡಿ, ಜೈನರ ಮನೆಗಳ ಸಮೂಹವು ಬಯಲಾಗಿ ಹೋಗುವಂತೆ ನುಗ್ಗು ಮಾಡಿಸಿ, ಜಿನ ಪ್ರತಿಮೆಗಳು ಚೆಲ್ಲಾಪಿಲ್ಲಿಗೊಂಡು ಮಣ್ಣುಮಸಿಯಾಗುವಂತೆ, ಹೋಳು ಮಾಡಿಸಿ, ಸೀಳಿಸಿ, ಉರಿಗೆ ಹಾಕಿಸಿ, ತೇಜಸ್ಸಿನ ಸ್ಫೂರ್ತಿಯಿಂದ ಯಶಶ್ಶರೀರಿಯಾಗಿ ಶಿವಭಕ್ತ ಸಮೂಹದೊಡನೆ ಏಕಾಂತದ ರಾಮದೇವ ವಿಭುವು ಇರುತ್ತಿದ್ದನು. ೨೧. ಹೀಗೆ ಒಲಿದು ಏಕಾಂತದ ರಾಮವಿಭುವು ಪ್ರಕಟಿಸಿದ ಮಹಾಕಾರ್ಯದ ಆಶ್ಚರ್ಯವನ್ನು ಕಂಡು ಹಾಗೆ ಹೀಗೆ ಎಂಬ ಊಹೆಗೆ ಕಾರಣವಾಗದ ಸಂತೋಷಾಧಿಕ್ಯವನ್ನು ನಿರಾಲಸ್ಯ ಭಾವದ ಬಸವೇಶ್ವರನು ಶ್ರೇಷ್ಠ ಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ, ಆ ರಾಮವಿಭುವಿನ ಪಾದಗಳಿಗೆ ನಮಸ್ಕರಿಸಿ ಹೊಗಳಿ, ಅವರೆಲ್ಲರನ್ನೊಡಗೊಂಡು, ಅತಿ ಪ್ರೀತಿಯಿಂದ ಅಂತಃಪುರಕ್ಕೆ ಹೊರಟು ಬಂದು ಶಿವಪೂಜಾ ಸಂಭ್ರಮದಲ್ಲಿ

ಮಾರುಡಿಗೆನಾಚಿದೇವಂ
ತೇರಸರೊಡಗೂಡಿ ಮೆಱೆದ ಸತ್ಕಥೆಯನಿದಂ
ಧಾರಿಣಿಯೊಳಾಲಿಪರ್ಗೆ ಪು
ರಾರಿ ಜಯಶ್ರೀಯನಮಿತಸುಖಮಂ ಮಾಳ್ಪಂ ೭೨

ಸೋಮನಾಥ ಸುಕಥಾಸುರದ್ರುಮಂ
ಭೂಮಿಯಲ್ಲಿ ಸಲೆ ಕೇಳ್ವ ಸದ್ಬುಧ
ಸ್ತೋಮದಿಷ್ಟಫಲಮೀಯೆ ನಾಣ್ಚಿ ದಿ
ವ್ಯಾಮರದ್ರುಮರವಟ್ಟುದೆನ್ನಿರೆ ೭೩

ವೈಜಕಾಂಬೆಯ ಮಹಾಚರಿತ್ರಮಂ
ವ್ಯಾಜಮಿಲ್ಲದೊಲವಿಂದೆ ಕೇಳ್ದವ
ಗ್ರೋಜೆವೆತ್ತು ಸಕಲೇಪ್ಸಿತಂಗಳಂ
ರಾಜರಾಜಸಖನೀವನೀಶ್ವರಂ ೭೪

ಏಕಾಂತರಾಮದೇವ ಮ
ಹಾಕಥನಮನಾವನೋದುವಂ ಭಕ್ತಿಯೊಳೊ
ಲ್ದಾಕರ್ಣಿಪನಾವನವಂ
ಲೋಕೋತ್ತರ ಸುಖಮನತುಳ ಯಶಮಂ ಪಡೆವಂ ೭೫

ಕರಿವರಗಮನೇ ಸುರಪರಶಮನೇ ನಿರವಧಿಕೀರ್ತಿಯುತೇ
ಪರಿನತಚರಣೇ ಸುರುಚಿರಭರಣೇ ಪರಮಶಿವಾನುಗತೇ

ಶೋಭಿಸಿದನು. ೭೨. ಮಾರುಡಿಗೆಯ ಮಾಚಿದೇವನು ತೇರಸರಿಂದೊಡ ಗೂಡಿ ಮೆರೆದ ಈ ಸತ್ಕಥೆಯನ್ನು ಲೋಕದಲ್ಲಿ ಕೇಳುವವರಿಗೆ ಪರಮೇಶ್ವರನು ಜಯಶ್ರೀಯನ್ನೂ ಅನಂತ ಸುಖವನ್ನೂ ಉಂಟು ಮಾಡುವನು. ೭೩. ಪುಲಿಗೆರೆಯ ಸೋಮನಾಥನ ಸತ್ಕಥೆಯೆಂಬ ಕಲ್ಪವೃಕ್ಷವು ಭೂಮಿಯಲ್ಲಿ ಇದನ್ನು ಕೇಳುವ ಶ್ರೇಷ್ಠ ವಿದ್ವಾಂಸ ಸಮೂಹದ ಇಷ್ಟವಾದ ಫಲವನ್ನು ಕೊಡುತ್ತಿರಲು ಸ್ವರ್ಗಲೋಕದ ಕಲ್ಪವೃಕ್ಷವು ನಾಚಿ ಮರವಾಯಿತು, ಎನ್ನಿರೇ! ೭೪. ವೈಜಕಾಂಬೆಯ ಮಹಾ ಚರಿತ್ರೆಯನ್ನು ಯಾವ ನೆಪವೂ ಇಲ್ಲದೆ ಪ್ರೀತಿಯಿಂದ ಕೇಳಿದವರಿಗೆ ಪ್ರಕಾಶಮಾನವಾದ ಸಕಲ ಇಷ್ಟಾರ್ಥಗಳನ್ನು ಕುಬೇರ ಮಿತ್ರನಾದ ಶಿವನು ಕೊಡುವನು. ೭೫. ಏಕಾಂತದ ರಾಮಯ್ಯನ ಮಹಾ ಕಥೆಯನ್ನು ಯಾವನು ಓದುವನೋ, ಭಕ್ತಿಯಿಂದ ಒಲಿದು ಯಾವನು ಕೇಳುವನೋ ಅವನು ಲೋಕೋತ್ತರವಾದ ಸುಖವನ್ನೂ ಅಸದೃಶ ಯಶಸ್ಸನ್ನೂ ಪಡೆಯುವನು. ೭೬. ಗಜ ಶ್ರೇಷ್ಠದ ನಡಿಗೆಯಂತೆ ನಡಿಗೆಯುಳ್ಳವಳೇ, ದೇವತೆಗಳ ಶತ್ರು

ವಿರಚಿತಭುವನೇ ಪರಿಹೃತಸವನೇ ಮುರರಿಪುಮುಖ್ಯನತೇ
ವರಗುಣಸರಸೀ ಪುರಹರನರಸೀ ಪೊರೆ ಗಿರಿರಾಜಸುತೇ ೭೬

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳೇಕಾಂತರಾಮದೇವವಿಜಯವರ್ಣನಂ

ಷಟ್ತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೬ಕ್ಕೆ ಪದಗಣನೆ ೨೮೮೩ಕ್ಕೆ ಮಂಗಳಮಹಾ ಶ್ರೀ॥

ಗಳಾದ ರಾಕ್ಷಸರನ್ನು ಶಮನಗೊಳಿಸಿದವಳೇ, ಇಂದ್ರನಿಂದ ನಮಸ್ಕರಿಸಿಕೊಂಡ ಚರಣವುಳ್ಳವಳೇ, ಮನೋಹರವಾದ ಆಭರಣವನ್ನು ಹೊಂದಿರುವವಳೇ, ಪರಮ ಶಿವನೊಡನೆ ಕೂಡಿ ಕೊಂಡಿರುವವಳೇ, ಸಮಸ್ತ ಭುವನಗಳನ್ನು ನಿರ್ಮಿಸಿದವಳೇ, ದಕ್ಷನ ಯಜ್ಞನಾಶಕ್ಕೆ ಕಾರಣಳಾದವಳೇ, ಮುರ ವೈರಿಯಾದ ವಿಷ್ಣುವೇ ಮೊದಲಾದವರಿಂದ ನಮಸ್ಕರಿಸಿಕೊಳ್ಳುವವಳೇ, ಶ್ರೇಷ್ಠ ಗುಣಗಳಿಗೆ ಸರೋವರ ಸದೃಶಳಾದವಳೇ, ಪರಮೇಶ್ವರನ ರಾಣಿಯೇ, ಗಿರಿರಾಜ ಪುತ್ರಿಯೇ ರಕ್ಷಿಸು.

ಮೂವತ್ತಾರನೆಯ ಆಶ್ವಾಸವು ಸಮಾಪ್ತವಾಯಿತು.

# ಸ ಪ್ತ ತ್ರಿಂ ಶಾ ಶ್ವಾ ಸಂ

## (ಸೊಡ್ಡಳ ಚಾಚರಸರ ಕಥೆ)

ಶ್ರೀವಿಮಳಹಿಮನಗೇಂದ್ರಸು
ತಾವಿಳಸಿತಹಸಿತರುಚಿ ಸುಧಾಧವಳಿತದಂ
ತಾವಳಚರ್ಮಾಂಬರನಖಿ
ಳಾವನನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಮತ್ತಮಾ ಕಲ್ಯಾಣಕಟಕದಲ್ಲಿ—

ಧೀರಂ ದಿವ್ಯಮಹತ್ವಸತ್ವಮಹಿತಂ ಭರ್ಗೋಪಮಂ ಭಾಸುರಾ
ಕಾರಂ ಕಾಮಹರಾಂಘ್ರಿಪದ್ಮಯುಗಳಧ್ಯಾನೈಕನಿಷ್ಠಂ ಶಿವಾ
ಚಾರಾಂಭೋರುಹಭಾಸ್ಕರಂ ಭವಹರಂ ಪ್ರಧ್ವಸ್ತಪಾಶಂ ಗುಣಾ
ಧಾರಂ ಶ್ರೀಗುರುಲಿಂಗಜಂಗಮಸಮಾನಪ್ರೇಮಪೂಜಾಪರಂ ೨

ಅಪುನರ್ಭವತಾಭವ್ಯಂ
ರಿಪುಷಡ್ವರ್ಗಪ್ರಹಾರಿ ಶಮದಮಸಾಂದ್ರಂ
ವ್ಯಪಗತತಂದ್ರಂ ಪರಮತ
ವಿಪಿನೋಗ್ರಕುಠಾರನತುಳ ಭುಜಬಳವಿಭವಂ ೩

ಉಗ್ರವಿಲೋಚನಂ ಭುವನಪೂರ್ಣಯಶಂ ಖಲಸಾಧುನಿಗ್ರಹಾ
ನುಗ್ರಹದಕ್ಷನಕ್ಷರನನಾಮಯಕಾಯನಜೇಯನೀಶಭ

## ಸೊಡ್ಡಳ ಬಾಚರಸರ ಕಥೆ

೧. ಮಂಗಳಕರಳಾದ ಹಿಮವಂತನ ಮಗಳ ಮನೋಹರವಾದ ಮುಗುಳು ನಗೆಯೆಂಬ ಸುಧಾ ಕಾಂತಿಯಿಂದ ಶುಭ್ರಗೊಳಿಸಲ್ಪಟ್ಟ ಆನೆಯ ಚರ್ಮ (ಶಿವನು ಉಟ್ಟ ಆನೆಯಚರ್ಮ)ದ ಉಡಿಗೆಯುಳ್ಳವನೂ, ಸಮಸ್ತವನ್ನು ರಕ್ಷಿಸುವವನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನು ಉಂಟುಮಾಡಲಿ. ವ॥ ಮತ್ತು ಆ ಕಲ್ಯಾಣ ನಗರದಲ್ಲಿ, ೨-೪. ಧೀರನೂ, ಶ್ರೇಷ್ಠವಾದ ಮಹಿಮೆಯ ಬಲದಿಂದ ಪೂಜ್ಯನೆನಿಸಿದವನೂ, ಶಿವನಿಗೆ ಸದೃಶನೆನಿಸಿದವನೂ, ಮನೋಹರವಾದ ಆಕಾರವುಳ್ಳವನೂ, ಶಿವನ ಪಾದಕಮಲಗಳನ್ನು ಧ್ಯಾನ ಮಾಡುವ ಏಕನಿಷ್ಠೆಯುಳ್ಳವನೂ, ಶಿವನ ಸಂಬಂಧವಾದ ಲಿಂಗಾಚಾರ, ಸಮಯಾಚಾರ, ಶಿವಾಚಾರ. ಗಣಾಚಾರ, ಭೃತ್ಯಾಚಾರಗಳೇ ಮೊದಲಾದ ಐದು ಆಚಾರಗಳೆಂಬ ಕಮಲಗಳಿಗೆ ಸೂರ್ಯಸ್ವರೂಪನೂ, ಜನನ ಮರಣಾತ್ಮಕ ಸಂಸಾರವನ್ನು ನಾಶಗೊಳಿಸಿದವನೂ, ಮಾಯಾ ಪಾಶವನ್ನು ನಾಶಗೊಳಿಸಿದವನೂ,

ಶ್ಲಾಗ್ರಣಿಯನ್ಯದೈವಪರಿಷಜ್ಜಳಭೃತ್ಕುಳಚಂಡಮಾರುತಂ
ವಾಗ್ರಮಣಾತಿದುರ್ಲಭ ಕಳಾನಿಧಿ ಸೊಡ್ಡಳ ಭಾಸ್ಕರಾಹ್ವಯಂ ೪

ನುತನಂದೀಶನ ಸರ್ವ
ಜ್ಞತೆ ಭೃಂಗಿಯ ಲಿಂಗನಿಷ್ಠೆ ವೀರನ ಶೌರ್ಯೋ
ನ್ನತಿ ಗೌತಮನ ದಧೀಚಿಯ
ತತ ತರ್ಕದ ಶಕ್ತಿ ಶಾಪದಧಟೆಂಬಿನಿತಂ ೫

ಗುರು ಸಂಪಾದಿಸಿ ನಿಜಕರ
ಸರಸಿರುಹದೊಳೊಂದುಗೂಡಿ ಪಡೆದಂ ನಿಜಮಿಃ
ಶರಣವರೇಣ್ಯನನೆಂದು
ರ್ವರೆ ಪೊಗಳೆ ವಿರಾಜಿಸಿರ್ದನತುಳಿತಮಹಿಮಂ ೬

ಸದ್ಗುಣಗಳಿಗೆ ಆಧಾರನೆನಿಸಿದವನೂ, ಮಂಗಳಕರರಾದ ಗುರುಲಿಂಗ–ಜಂಗಮದಲ್ಲಿ ಸಮಾನವಾದ ಪ್ರೇಮದಿಂದ ಪೂಜೆಮಾಡುವುದರಲ್ಲಿ ಆಸಕ್ತನಾದವನೂ, ಪುನಃ ಜನ್ಮ ತಾಳದೆ ಇರುವಿಕೆಯಿಂದ ಮಂಗಳಸ್ವರೂಪನೆನಿಸಿದ ವೈರಿಗಳೆನಿಸಿದ ಕಾಮ ಕ್ರೋಧ ಲೋಭ ಮದ ಮತ್ಸರಗಳೆನಿಸಿದ ಆರನ್ನೂ ನಾಶಗೊಳಿಸಿದವನೂ, ಮನಸ್ಸು ಮತ್ತು ಇಂದ್ರಿಯಗಳ ನಿಗ್ರಹದಿಂದ ಸಂಪೂರ್ಣನೂ, ಆಲಸ್ಯವನ್ನು ಪರಿಹರಿಸಿದವನೂ, ಪರಮತಗಳೆಂಬ ಮಹಾರಣ್ಯಕ್ಕೆ ಕೊಡಲಿಯಂತೆ ಇರುವವನೂ, ಅಸಮಾನವಾದ ಭುಜಬಲದ ಸಂಪತ್ತುಳ್ಳವನೂ, ಭಯಂಕರ ನೇತ್ರವುಳ್ಳವನೂ, ಭೂಮಂಡಲ ವನ್ನೆಲ್ಲ ತುಂಬಿದ ಯಶಸ್ಸುಳ್ಳವನೂ, ದುಷ್ಟಶಿಕ್ಷಣ, ಶಿಷ್ಟ ಪರಿಪಾಲನದಲ್ಲಿ ದಕ್ಷನೂ, ನಾಶರಹಿತನೂ, ರೋಗರಹಿತವಾದ ದೇಹವುಳ್ಳವನೂ, ಅನ್ಯರಿಂದ ಜಯಿಸಲ ಸಾಧ್ಯನೂ, ಈಶ್ವರ ಭಕ್ತರಲ್ಲಿ ಅಗ್ರಗಣ್ಯನೂ, ಅನ್ಯದೇವತೆಗಳ ಸಮೂಹವೆಂಬ ಮೋಡ ಗಳಸಮೂಹಕ್ಕೆ ಚಂಡಮಾರುತ ಸ್ವರೂಪನೂ, ಬ್ರಹ್ಮನಿಂದಲೂ ಹೊಂದಲಶಕ್ಯವಾದ ವಿದ್ಯೆಗಳಿಗೆ ನಿಧಿಯೆನಿಸಿದವನೂ ಆದ ಸೊಡ್ಡಭಾಸ್ಕರನೆಂಬ ಹೆಸರಿನವನು (ಇದ್ದನು).
೫-೬. (ಆ ಸೊಡ್ಡಳಬಾಚರಸನು) ಶ್ಲಾಘನಾದ ನಂದೀಶ್ವರನ ಸರ್ವಜ್ಞತೆ, ಭೃಂಗೀಶ್ವರನ ಲಿಂಗನಿಷ್ಠೆ, ವೀರಭದ್ರನ ಶೌರ್ಯದ ಉನ್ನತಿ, ಗೌತಮನ ವಿಸ್ತಾರವಾದ ತರ್ಕಶಕ್ತಿ, ದಧೀಚಿಯ ಶಾಪದಪರಾಕ್ರಮ ಎಂಬ ಇಷ್ಟನ್ನೂ ಸಂಪಾದಿಸಿ, ಸದ್ಗುರುವಿನ ನಿಜಕರ ಕಮಲದಲ್ಲಿ ಒಂದುಗೂಡಿದವನಾಗಿ (ಅಂದರೆ ಸದ್ಗುರುವಿನಿಂದ ಹಸ್ತಮಸ್ತಕ ಸಂಯೋಗ ದಿಂದ ಒಂದುಗೂಡಿದವನಾಗಿ) ಸತ್ಯ ಸಾಕ್ಷಾತ್ಕಾರವನ್ನು ಪಡೆದನು. ಈ ಶರಣಶ್ರೇಷ್ಠ ನೆಂದು ಸಮಸ್ತ ಭೂಮಂಡಲವೇ ಹೊಗಳುವಂತೆ ಅಸದೃಶ ಮಹಿಮೆಯಿಂದ ಕೂಡಿದ

ಶ್ರುತಿಸ್ಮೃತಿಪುರಾಣದೊಳ್ಶ್ರುತಿಷಡಂಗಶಾಸ್ತ್ರಂಗಳೊ
ಳ್ವಿತತವದಿತಿಹಾಸದೊಳ್ಪತಿಯುಮೀಶನೇ ನೋಳ್ಪೊಡ
ಚ್ಯುತಾಜಮುಖರೆಲ್ಲರುಂ ಪಶುಗಳಿಂತದೇ ಸತ್ಯಮೆಂ
ದತರ್ಕ್ಯಮತಿ ವಾದದೊಳ್ಜಯಿಸಿ ವಾದಿಸಂದೋಹಮಂ ೮

ಸರಿಯಿಲ್ಲಭವಂಗೆಂದುಂ
ಚರಾಚರೌಘಪ್ರಪಂಚದೊಳ್ಮಿಗಿಲಿಲ್ಲಂ
ಕರಮಿದೆ ನನ್ನಿಯೆನುತ್ತುಂ
ಬಿರುದಿನ ಪಳಯಿಗೆಯನೆತ್ತಿಸುತ್ತೆಸೆದಿರ್ದಂ ೯

ವ॥ ಮತ್ತಂ—

ಮದವದ್ವೈಷ್ಣವಕುಂಭಿಕುಂಭಿರಿಪು ಮಾಯಾವಾದಸರ್ಪೋರಗಾ
ರಿ ದುರಂತಭ್ರಮಬೌದ್ಧವಾರ್ಧಿಬಡಬಂ ಚಾರ್ವಾಕಗರ್ವೋರ್ವಿಭೃ
ದ್ಭಿದರಂ ಜೈನವನೋಗ್ರದಾವಶಿಖಿ ಪಾಷಂಡಾಬ್ಜಕುಂಜೇಭನು
ಬದಟಂ ತಾಳ್ದು ವಿಜೃಂಭಿಸಿರ್ದನನಿಶಂ ವಿಕ್ರಾಂತ ವಿಶ್ವಾಧಿಕಂ ೯

ಪ್ರತ್ಯಬ್ದಂ ಶಿವರಾತ್ರಿಗೆಯ್ದಿ ಘನಸೌರಾಷ್ಟ್ರಕ್ಕೆ ಸಂಪ್ರೀತಿಯಿಂ
ದತ್ಯಂತೋತ್ಸವಶಾಲಿ ಜಾಗರಣಮಿರ್ದೀಶಾರ್ಚನಂಗೆಯ್ದು ನಿ

ಆವನು ಶೋಭಿಸುತ್ತಿದ್ದನು. ೮-೯. ಶ್ರುತಿ, ಸ್ಮೃತಿ, ಪುರಾಣಗಳಲ್ಲಿಯೂ, ವೇದಗಳಿಗೆ ಆರು ಅಂಗಗಳೆನಿಸಿದ ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪಗಳಲ್ಲಿಯೂ, ಪ್ರಸಿದ್ಧಗಳೆನಿಸಿದ (ಮಹಾಭಾರತ, ರಾಮಾಯಣಾದಿ) ಇತಿಹಾಸಗಳಲ್ಲೂ ಪರಮೇಶ್ವರನೇ ಪತಿ, ವಿಚಾರಿಸಿ ನೋಡಿದರೆ ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ಪಶುಗಳು ಎಂದು ಸಾರಿರುವುದೇ ಸತ್ಯವಿಷಯ ಎಂದು ತರ್ಕಿಸಲಸಾಧ್ಯವಾದ ಬುದ್ಧಿಯುಳ್ಳ ಬಾಚರಸನು ವಾದಮಾಡಿ ಪ್ರತಿವಾದಿಗಳ ಸಮೂಹವನ್ನು ಜಯಿಸಿ, ಪರಮೇಶ್ವರನಿಗೆ (ಯಾರೂ) ಎಂದೂ ಸರಿಯಿಲ್ಲ, ಚರಾಚರ ಪ್ರಪಂಚಗಳ ಸಮೂಹದಲ್ಲಿ ಇವನಿಗೆ ಮಿಗಿಲಾದವನಿನ್ನೊಬ್ಬನಿಲ್ಲ ನಿಜವಾಗಿ ಇದು ಸತ್ಯ ಎಂದು ನ್ನುತ್ತ ಬಿರುದಿನ ಧ್ವಜವನ್ನು ಎತ್ತಿಸಿಕೊಂಡು (ಆ ಕಲ್ಯಾಣದಲ್ಲಿ) ಶೋಭಿಸುತ್ತಿದ್ದನು. ವ॥ ಮತ್ತು ೯. ಮದದಿಂದ ಕೂಡಿದ ವೈಷ್ಣವ ಧರ್ಮವೆಂಬ ಆನೆಗೆ ಸಿಂಹಪ್ರಾಯನಾದವನು, ಮಾಯಾವಾದವೆಂಬ ಸರ್ಪಕ್ಕೆ ಗರುಡ ಸದೃಶನಾದವನು, ಕೆಟ್ಟ ಭ್ರಾಂತಿಯಿಂದ ಕೂಡಿದ ಬೌದ್ಧರೆಂಬ ಸಮುದ್ರಕ್ಕೆ ಬಡಬಾಗ್ನಿ ಸದೃಶನಾದವನು, ಚಾರ್ವಾಕರೆಂಬ ಪರ್ವತಗಳಿಗೆ ವಜ್ರಾಯುಧಪ್ರಾಯನು, ಜೈನರೆಂಬ ಅರಣ್ಯಕ್ಕೆ ಭಯಂಕರವಾದ ಕಾಳ್ಗಿಚ್ಚಿನಂತಿರುವವನು, ವೇದಧರ್ಮ ಬಾಹಿರರೆಂಬ ಕಮಲಗಳ ಸಮೂಹಕ್ಕೆ ಆನೆಯಂತಿರುವವನು ಎಂಬ ಶೌರ್ಯವನ್ನು ಹೊಂದಿ ಪರಾಕ್ರಮ ವಿಷಯದಲ್ಲಿ ಪ್ರಪಂಚಕ್ಕೆಲ್ಲ ದೊಡ್ಡವನೆನಿಸಿ ಸತತವೂ ಆ ಸೊಡ್ಡಳಬಾಚರಸನು (ಕಲ್ಯಾಣನಗರದಲ್ಲಿ) ವಿರಾಜಿಸುತ್ತಿದ್ದನು. ೧೦. ಪ್ರತಿವರ್ಷವೂ ಶಿವರಾತ್ರಿ ಸಮಯದಲ್ಲಿ ಶ್ರೇಷ್ಠವಾದ ಸೌರಾಷ್ಟ್ರ ಸೋಮನಾಥನಲ್ಲಿಗೆ ಆ ಉತ್ಸಾಹ

ಪ್ರತ್ಯೂಹಂ ಮಿಗೆ ಬರ್ಪನಿಂತೆಸೆವುತಿರ್ದಂದೊರ್ಮೆ ತಾಂ ಬಂದೊಡಾ
ನೃತ್ಯಶ್ರೀಶಿವರಾತ್ರಿಯಾ ನಗರಿಗೆಯ್ದಲ್ಕುಜ್ಜುಗಂಗೆಯ್ವುತುಂ ೧೦

ವ॥ ಧರಣಿಪಂಗೆ ತಾಂ ಪೋಪುಜ್ಜುಗಮನಱಿಪೆ ಪಿರಿಯ ಕಣಜದ ಭತ್ತಮನಳೆವ ಕಜ್ಜಮುಂಟೆಮ್ಮ ಮಾಣೆಹವನಳಿದು ಪೋಗಲಾಗದೆರಡೆಡೆಯೋಲಗಮೆಂತಳವಡುಗುಂ ಬಿಲ್ಲುಮಂ ಬೆಳಗಾಯುಮನೊರ್ಕೆಯ್ಯೊಳಾಂಪಂತಿರೆಮ್ಮೋಲಗಮುಂ ಶಿವಭಕ್ತಿಯುಂ ನಿನಗೆರಡೂರ ಬಿರ್ದಂ ಪಾರ್ದ ಪಾರ್ವನೆಡೆಯಾಟದಂತೆ ನಗೆಗೆಡೆಯಕ್ಕುಮೆಂದು ಬಿಜ್ಜಳಂ ಮೀಱಿ ನುಡಿದು—

ನೀಂ ಪರಮಭಕ್ತನಾದೊಡಿ
ದೇಂ ಪಿರಿದೆ ಮಹೇಶನಿಲ್ಲಿಗೆಯ್ತರ್ಪುದು ಕೇ
ಳಾಂ ಪರಿಕಿಪೆನಂತೆಸಗಿ
ಲ್ಲಿಂ ಪೋಱಮಡಲೇಕೆ ಭಕ್ತ ನಿನ್ನಯ ಪೆಂಪಂ ೧೧

ಸೌರಾಷ್ಟ್ರ ಪತಿಯುನೀ ಪುರಿ
ಗೋರಂತಿರೆ ಬರಿಸಲಾಱದಿರ್ದೊಡೆ ಸೈತಿ
ರ್ದೂರೊಳಗೆಮ್ಮಯ ಕಜ್ಜಮ
ನೋರಣದಿಂದೆಸಗು ಬಿಡು ಬಿಡೆಯ್ದುವ ಬಗೆಯಂ ೧೨

ಶಾಲಿಯಾದ ಸೊಡ್ಡಳಬಾಚರಸನು ಅತಿ ಸಂತೋಷದಿಂದ ಹೋಗಿ, ಜಾಗರಣೆಮಾಡಿ, ಈಶ್ವರನ ಅರ್ಚನೆಗೆಯ್ದು ನಿರ್ವಿಘ್ನವಾಗಿ ಹಿಂತಿರುಗಿಬರುತ್ತಿದ್ದನು. ಹೀಗೆ ಶೋಭಿಸುತ್ತಿರುವಾಗ ಒಮ್ಮೆ ಆ ಶ್ಲಾಘ್ಯವಾದ ಶಿವರಾತ್ರಿಯ ಹಬ್ಬವು ಬರಲಾಗಿ, ಆ ಸೌರಾಷ್ಟ್ರ ನಗರಿಗೆ ಹೋಗುವುದಕ್ಕೆ ಪ್ರಯತ್ನಿಸುತ್ತ ವ॥ ಮಹಾರಾಜನಾದ ಬಿಜ್ಜಳನಿಗೆ ತಾನು ಹೋಗುವ ಕಾರ್ಯವನ್ನು ತಿಳಿಸಿದನು (ಅವನು) ದೊಡ್ಡ ಕಣಜದಲ್ಲಿರುವ ಬತ್ತವನ್ನು ಅಳೆಯುವ ಕೆಲಸವುಂಟು. (ಆದ್ದರಿಂದ) ನಮ್ಮಾಜ್ಞೆಯನ್ನು ಮಿಕ್ಕು ನೀನು ಹೋಗಲಾಗದು; ಎರಡು ಕಡೆಯ ಓಲಗದ ಸೇವೆಯು ಹೇಗೆತಾನೆ ಅಳವಡುವುದಕ್ಕೆ ಸಾಧ್ಯ ? ಬಿಲ್ವ ಫಲವನ್ನೂ ಬೇಲದ ಫಲವನ್ನೂ ಏಕ ಕಾಲದಲ್ಲಿ ಒಂದೇ ಕೈಯಲ್ಲಿ ಹಿಡಿಯುವವನ ಹಾಗಿರಲು ನಿನಗೆ ನಮ್ಮ ಓಲಗದ ಸೇವೆಯೂ, ಶಿವಭಕ್ತಿಯ ಸೇವೆಯೂ—ಎರಡು ಊರುಗಳಲ್ಲಿನ ಔತಣಕ್ಕೆ ಅಪೇಕ್ಷೆ ಪಟ್ಟ ಬ್ರಾಹ್ಮಣನ ಓಡಾಟದ ಹಾಗೆ ಹಾಸ್ಯಾಸ್ಪದವಾದೀತು ಎಂದು ಆ ಬಿಜ್ಜಳನು ಹದ್ದುಮಿಕ್ಕಿ ಮಾತನಾಡಿ ೧೧. ನೀನು ಶ್ರೇಷ್ಠಭಕ್ತನಾದರೆ ಆ ಮಹೇಶ್ವರನು ನೀನಿದ್ದಲ್ಲಿಗೇ ಬರುವಂತೆ ಮಾಡುವುದೇನು ನಿನಗೆ ಹೆಚ್ಚಿನದೇ! ನಿನ್ನ ಭಕ್ತಿಯ ಹಿರಿಮೆಯನ್ನು ನಾನು ಪರೀಕ್ಷಿಸುತ್ತೇನೆ. ಆ ದೇವರು ಇಲ್ಲಿಗೆ ಬರುವಂತೆ ಮಾಡು ಅಲ್ಲಿಗೆ ಹೋಗುವುದಾದರೂ ಏಕೆ ? ೧೨. ಸೌರಾಷ್ಟ್ರಪತಿಯನ್ನು ಈ ಪಟ್ಟಣಕ್ಕೆ ಚೆನ್ನಾಗಿ (ಕ್ರಮವಾಗಿ) ಬರಮಾಡಿಕೊಳ್ಳಲಾಗದಿದ್ದರೆ, ಸುಮ್ಮನೆ ಊರಲ್ಲಿದ್ದುಕೊಂಡು ನಮ್ಮ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಂಡಿರು. ಅಲ್ಲಿಗೆ ಹೋಗುವ

ವ॥ ಎಂದರಸನಾಕ್ಷೇಪೋಕ್ತಿಯಂ ಕೇಳ್ದು ಮುಗುಳ್ನಗೆ ನಕ್ಕು—

ಅರಸಂ ಪೋಗದಿರೆಂದು ನುಣ್ಗಟಕಿಯಾಡುತ್ತಿರ್ಪನೀ ಪರ್ವಕಾ
ನಿರದೆಂತೆಯ್ದುವೆನಂತದಿರ್ಕೆ ಕರುಣಾವಾರಾಶಿ ಸೌರಾಷ್ಟ್ರಮಂ
ದಿರವಾಸಂ ಬಿಡದೆನ್ನನೇಪರಿಯೊಳಂ ಕೊಂಡೊಯ್ವನಂತಲ್ಲದಂ[1]
ದೆರವಂ ಮಾಡದೆ ತಾನೆ ಬರ್ಪನಣವಾನಿರ್ದಲ್ಲಿಗೀ ರಾತ್ರಿಯೊಳ್ ೧೩

ಆವಂದದಿನಾದೊಡವಾ
ದೇವಂ ಮದ್ವ್ರತಮನೊಲ್ದು ಸಲಿಸುಗುಮಣಮೆಂ
ದಾ ವಿಭು ನಚ್ಚಿರೆ ಮನದೊಳು
ಮಾವರನವನಿರ್ದ ಮಂದಿರಕ್ಕೊಲವಿಂದಂ ೧೪

ಮೀಳಿರ್ಪ ವೃಷಭಧ್ವಜಂ ಕಂ
ಗೊಳಿಸಿರೆ ಬಲಗೆಯ್ಯೊಳೆಡದ ಕೆಯ್ಯೊಳ್ಪಿಡಿದು
ಜ್ವಳಲೇಖನಮಂ ಸಂದಣಿ
ಗೊಳುತುಂ ಜಿಮುಗುತ್ತೆ ಬಂದು ನಿಂದವನಿದಿರೊಳ್ ೧೫

ಪಳುಕುಮಣಿವೆರೆದ ಕಂಠದ
ವಿಳಸದ್ರುದ್ರಾಕ್ಷ ಮಾಲೆಪಳಿಯುಡೆ ಸುಲಿಪ
ಲ್ಲೊಳಪ ಲಲಾಟದ ಭಸಿತದ
ವಿಳೇಪನಂ ಮಿಸುಗೆ ನಿಂದು ನಗುತಿಂತೆಂದಂ ೧೬

ಇಚ್ಛೆಯನ್ನು ಬಿಟ್ಟುಬಿಡು. ವ॥ ಹೀಗೆಂದು ಬಿಜ್ಜಳ ಮಹಾರಾಜನು ಆಡಿದ ಆಕ್ಷೇಪದ ಮಾತುಗಳನ್ನು ಕೇಳಿ (ಸೊಡ್ಡಳ ಬಾಚರಸನು) ಮುಗುಳುನಗೆ ನಕ್ಕು ೧೩. ಮಹಾರಾಜನು ಹೋಗಬೇಡವೆಂದು ನಯವಾಗಿ ಮೂದಲಿಕೆಯ ಮಾತನ್ನಾಡುತ್ತಿದ್ದಾನೆ. ಈ ಹಬ್ಬಕ್ಕೆ (ಅಲ್ಲಿಗೆ) ನಾನು ತಪ್ಪದೆ ಹೇಗೆ ಹೋಗಲಿ? ಅದಿರಲಿ ; ಕರುಣಾಸಮುದ್ರನಾದ ಸೌರಾಷ್ಟ್ರ ಮಂದಿರವಾಸನಾದವನ ಶಿವನು ತಪ್ಪದೆ ನನ್ನನ್ನು ಯಾವರೀತಿಯಿಂದಲಾದರೂ ಕರೆದೊಯ್ಯುವನು. ಹಾಗಾಗದಿದ್ದರೆ (ನನಗೆ) ಭೇದವನ್ನು ಮಾಡದೆ ನಾನಿದ್ದಲ್ಲಿಗೆ ಈ ರಾತ್ರಿಯೇ ತಾನೇ ತಪ್ಪದೆ ಬರುವನು. ೧೪–೧೫. ಯಾವರೀತಿಯಿಂದಲಾದರೂ ಆ ದೇವನು ನನ್ನ ವ್ರತವನ್ನು ಪ್ರೀತಿಯಿಂದ ನಿಶ್ಚಯವಾಗಿ ಸಲ್ಲಿಸಿಕೊಳ್ಳುತ್ತಾನೆ ಎಂದು ಆ ಬಾಚರಸ ವಿಭುವು ಮನಸ್ಸಿನಲ್ಲಿ ನಂಬಿಕೊಂಡಿರಲು ಉಮಾಪತಿಯಾದ ಶಿವನು ಅವನು ವಾಸಿಸುವ ಮನೆಗೇ ಪ್ರೀತಿಯಿಂದ ಹಾರಾಡುತ್ತಿರುವ ವೃಷಭ ಧ್ವಜವು ಬಲಗೈಯಲ್ಲಿ ಶೋಭಿಸುತ್ತಿರಲು, ಎಡಗೈಯಲ್ಲಿ ಪ್ರಕಾಶಿಸುವ ಲೇಖನ (ಪತ್ರ)ವನ್ನು ಹಿಡಿದುಕೊಂಡು, ಸನ್ನದ್ಧನಾಗಿ. ಬೆವರಿದ ದೇಹದಿಂದ ಕೂಡಿ ಅವನೆದುರಿಗೆ ಬಂದು ನಿಂತನು. ೧೬. ಸ್ಫಟಿಕದ ಮಣಿಗಳನ್ನು ಮಧ್ಯೇ ಮಧ್ಯೇ ಪೋಣಿಸಿ ಕೊರಳಲ್ಲಿ ಹಾಕಿಕೊಂಡಿರುವ ರುದ್ರಾಕ್ಷ ಮಾಲೆ, ಉಟ್ಟವಸ್ತ್ರ, ಬೆಳ್ಳನೆಯ ಹಲ್ಲು, ಪ್ರಕಾಶಿಸುವ ಹಣೆಯಲ್ಲಿ ಧರಿಸಿರುವ ಭಸ್ಮ ಇವು ಶೋಭಿಸುತ್ತಿರಲು ನಿಂತುಕೊಂಡು (ಆ ಶಿವನು) ನಗುತ್ತ

1 ದಿಂ(ಚ, ಅ, ಗ)

ಕೇಳೆಲೆ ಭಕ್ತ ಬಂದಪನುಮಾಧಿಪನೀ ಶಿವರಾತ್ರಿಗೀ ಪೊಳ
ಲ್ಗೇಳೊಲವಿಂದೆ [1]ಸಂವ[1]ರಿಸು ಧಾನ್ಯನಿಕೇತನಮಂ ನಿಜಾಪ್ತಭೃ
ತ್ಯಾಳಿಗೆ ಪೇಳ್ದು ಸಿಂಗರಿಸು ವೀಧಿಗಳಂ ಗುಡಿಗಟ್ಟು ನಿನ್ನ ಸ
ಮ್ಮೇಳನಮೆಂತೊ ಬರ್ಪೆನೆನುತೋಲೆಯ ನಿನ್ನೆಡೆಗೀಶನಟ್ಟಿದಂ ೧೭

ವ॥ ಎಂದು ತಂದೋಲೆಯಂ ಕರತಳದೊಳೀಯೆ ಮಹಾಪ್ರಸಾದವೆಂದು ಕೆಯ್ಕೊಂಡೆಱಗಿ ತಲೆಯೊಳಿಟ್ಟೋದಿನೋಳ್ಪನಿತಱೊಳಾ ತಪಸ್ವಿಯದೃಶ್ಯನಾಗಿ ಮತ್ಪ್ರಾಣೇಶನೀರೂಪದಿನೆಳ್ತಂದಱಿದ ಮಂದಾನಂದಕಂದಳಿತಹೃದಯಾರವಿಂದನಾಗಿ ಭಕ್ತವರ್ಯಂ ಭವಾನಿಯರಸಂ ಬರ್ಪನೆಂಬ ಲೇಖನಾರ್ಥಮನಲ್ಲಿ ಪೇೞೆ ಶಿವಕಿಂಕರರ್ಕೇಳ್ದು ಸಡಗರಂ ಬೆತ್ತು ಬಸವರಸಂಗಱುಪಲೊಡನೆ—

ಪರಮಾನಂದಮನಾಳ್ದು ಬಂದು ಬಸವಂ ಕಂಡುರ್ವಿ ಕೊಂಡಾಡಿ ಭಾ
ಸ್ಕರದೇವಂಗೆಱಗುತ್ತೆ ಭಕ್ತಸಭೆಯೊಳ್ಕುಳ್ಳಿರ್ದು ನಣ್ಪಿಂದೆ ತ
ತ್ಪುರಮಂ ಸಿಂಗರಿಸಲ್ಕೆ ಪೇಳ್ದು ನಗರಾಧ್ಯಕ್ಷರ್ಗೆ ಸಲ್ಲೀಲೆವೆ
ತ್ತಿರೆ ನಾನಾವಿಧನಾಟಕಂ ನೆಗಳ್ದುದಾ ಸದ್ಭಕ್ತಸಂತಾನದೊಳ್ ೧೮

ಹೀಗೆ ಹೇಳಿದನು. ೧೭. ಎಲೈ ಭಕ್ತನೇ, ಉಮಾಪತಿಯಾದ ಶಿವನು ಈ ಶಿವರಾತ್ರಿಯಂದು ಈ ಪಟ್ಟಣಕ್ಕೆ ಬರುತ್ತಾನಂತೆ. ಏಳು ಪ್ರೀತಿಯಿಂದ (ನಿನ್ನ) ಧಾನ್ಯದ ಮನೆಯನ್ನು ಸಜ್ಜುಗೊಳಿಸು, ನಿನ್ನ ಆಪ್ತರಾದ ಸೇವಕರಿಗೆ ಹೇಳಿ ಬೀದಿಗಳನ್ನು ಶೃಂಗಾರಗೊಳಿಸು. ನಿನ್ನ ಸಮನಾದ ಭಕ್ತರ ಮೇಳವನ್ನು ಕೂಡಿಸು. ಹೇಗೋ ನಾನು ಬರುತ್ತೇನೆ ಹೀಗೆಂದು ಪತ್ರ ಬರೆದು ಕಳುಹಿಸಿದ್ದಾನೆ. ವ॥ ಹೀಗೆನ್ನುತ್ತ ತಂದ ಪತ್ರವನ್ನು ಬಾಚರಸನ ಕೈಯಲ್ಲಿ ಕೊಟ್ಟನು. 'ಮಹಾ ಪ್ರಸಾದ'ವೆಂದು ಬಾಚರಸನು ಅದನ್ನು ಸ್ವೀಕರಿಸಿ ನಮಸ್ಕಾರಮಾಡಿ, ತಲೆಯ ಮೇಲೆ ಹೊತ್ತು ಓದಿ, ನೋಡುವಷ್ಟರಲ್ಲಿ ಆ ತಪಸ್ವಿಯ ವೇಷದ ಶಿವನು ಮಾಯವಾದನು. ನನ್ನ ಪ್ರಾಣೇಶ್ವರನೇ ಈ ರೂಪದಿಂದ ಬಂದನೆಂದು ತಿಳಿದು ಬಾಚರಸನು ಅಪರಿಮಿತ ಆನಂದದಿಂದ ವಿಕಾಸಗೊಂಡ ಹೃದಯ ಕಮಲವುಳ್ಳವನಾದನು. ಆ ಭಕ್ತ ಶ್ರೇಷ್ಠನು ಭವಾನೀಪತಿಯಾದ ಶಿವನು ಬರುತ್ತಾನೆಂಬ ಲೇಖನದ ಅರ್ಥವನ್ನು ಆ ಕಲ್ಯಾಣ ಪಟ್ಟಣದಲ್ಲಿ ಹೇಳಲಾಗಿ, ಶಿವಭಕ್ತರುಗಳೆಲ್ಲ ಕೇಳಿ, ಸಂಭ್ರಮಗೊಂಡು, ಬಸವಣ್ಣನವರಿಗೆ ತಿಳಿಸಲು ಅವನು ಕೂಡಲೇ ೧೮. ಪರಮಾನಂದವನ್ನು ಹೊಂದಿ, (ಆ ಬಸವಣ್ಣನು) ಬಂದು, ಉಬ್ಬಿ ಕೊಂಡಾಡಿ ಆ ಬಾಸ್ಕರದೇವನಿಗೆ (ಬಾಚರಸನಿಗೆ) ನಮಸ್ಕಾರಮಾಡಿದನು. ಭಕ್ತರುಗಳ ಸಮೂಹದಲ್ಲಿ ಕುಳಿತುಕೊಂಡು ಚೆಲುವಾಗಿ ಕಾಣುವಂತೆ ಪಟ್ಟಣವನ್ನು ಶೃಂಗಾರಗೊಳಿಸುವುದಕ್ಕೆ ನಗರಾಧ್ಯಕ್ಷರಿಗೆ ಹೇಳಿದನು. (ನೆರೆದ) ಆ ಭಕ್ತರುಗಳ ಸಮೂಹದಲ್ಲಿ ವಿಶೇಷ ವಿನೋದದಿಂದ ಕೂಡಿದ ನಾನಾವಿಧವಾದ ನಾಟಕವು

---

1 ಸವ್ವ(ದ)

ಕೆಲರುತ್ಸಾಹದಿನೊಲ್ದು ಪಾಡೆ ಕೆಲರುದ್ಯದ್ವಾದ್ಯಸಂದೋಹಮಂ
ನಲವಿಂ ಬಾಜಿಸೆ ನಾಟ್ಯಮಂ ಕೆಲರುದಾಗಪ್ರೌಢಿಯಿಂದಾಡೆ ಭೃಂ
ಗಿಲಸದ್ವೇಷಮನಾಳ್ದು ನರ್ತಿಸೆ ಕೆಲರ್ಸೋಮೇಶಸಂಕೀರ್ತನಾ
ವಲಿಯಂ ಮತ್ತೆ ಕೆಲಂಬರುಗ್ಗಡಿಸೆ ಪೆಂಪಂ ತಾಳ್ದುದಾ ಸಂಭ್ರಮಂ ೧೯

ವ॥ ಶಿವವಾಸರದೊಳಾಗಳ್ಭಾನುಬಿಂಬಂ ಮಧ್ಯಾಂಬರಮಂ ಕಳಿದ ಪೊಳ್ತಿನೊಳ್—

ಮುಂಬರಿದಿಳಿದುದು ಭೋರೆಂ
ದಂಬರದಿಂ ಕುಸುಮವೃಷ್ಟಿ ಸುರಭೇರೀರಾ
ವಂ ಬಿಡದೊಗೆದುದು ಭಕ್ತಿಕ
ದಂಬಂ ಮುದವಾಳ್ದುದಾಗಳತಿ ಸಂಭ್ರಮದಿಂ ೨೦

ತೊಳತೊಳಪಂಗಕಾಂತಿ ರವಿರೋಚಿಯನೊತ್ತಿ ಪಳಂಚೆ ದಿವ್ಯಮಂ
ಗಳ ದಿವಿಜಾನಕಧ್ವನಿ ವಿಜೃಂಭಿಸೆ ಮುಂದೆ ವೃಷೇಂದ್ರಕೇತನಂ
ಮಿಳಿರೆ ಮಹೋತ್ಸವಂಬೆರಸು ಭಕ್ತರುಘೇಯೆನೆ ಬಂದು ನಂದಿಯಿಂ
ದಿಳಿದಿಳೆಗದ್ಭುತಂ ಮಸಗೆ ಧಾನ್ಯಗೃಹಸ್ಥಿತನಾದನೀಶ್ವರಂ ೨೧

ಶೋಭಿಸಿತು. ೧೯. ಕೆಲವರು ಉತ್ಸಾಹಗೊಂಡು ಸಂತೋಷದಿಂದ ಹಾಡಿದರು; ಕೆಲವರು ಶ್ರೇಷ್ಠವಾದ ವಾದ್ಯ ಸಮೂಹವನ್ನು ಪ್ರೀತಿಯಿಂದ ಬಾರಿಸತೊಡಗಿದರು; ಕೆಲವರು ಶ್ರೇಷ್ಠಪ್ರೌಢಿಮೆಯಿಂದ ನಾಟ್ಯವನ್ನಾಡಿದರು ; ಭೃಂಗಿಯ ಉತ್ತಮ ವೇಷ ಕಟ್ಟಿ ಕೆಲವರು ಕುಣಿದಾಡಿದರು ; ಕೆಲವರು (ಸೌರಾಷ್ಟ್ರದ) ಸೋಮೇಶ್ವರನ ನಾಮ ಸಂಕೀರ್ತನಗಳ ಸಮೂಹವನ್ನು ಹಾಡಿದರು ; ಕೆಲವರು (ಅವನ ಬಿರುದುಗಳನ್ನು) ಉಗ್ಗಡಿಸಿದರು. ಹೀಗೆ ಆ ಭಕ್ತರುಗಳ ಸಂಭ್ರಮವು ಘನತೆಯನ್ನು ಹೊಂದಿ ಶೋಭಿಸುತ್ತಿತ್ತು. ವ॥ ಮಂಗಳಕರವಾದ (ಆ ಶಿವರಾತ್ರಿಯ) ಹಗಲಿನಲ್ಲಿ ಸೂರ್ಯಬಿಂಬವು ಆಕಾಶ ಮಧ್ಯಭಾಗವನ್ನು ದಾಟಿದ ಹೊತ್ತಿನಲ್ಲಿ (ಮಧ್ಯಾಹ್ನಾತ್ಪರದಲ್ಲಿ) ೨೦. ಆಕಾಶದಿಂದ ಭೋರೆಂದು ಹೂವಿನ ಮಳೆಯು ಮುನ್ನುಗ್ಗಿ ಸುರಿಯುತ್ತಿತ್ತು. ದೇವದುಂದುಭಿಗಳ ಧ್ವನಿಯು ಒಂದೇ ಸಮನೆ ಹೊರಹೊಮ್ಮುತ್ತಿತ್ತು. ಭಕ್ತ ಜನರ ಸಮೂಹವು ಅತ್ಯಂತ ಸಂಭ್ರಮಗೊಂಡು ಸಂತೋಷದಲ್ಲಿ ಮುಳುಗಿತ್ತು. ೨೧. ಬೆಳ್ಳಗೆ ಬೆಳಗುತ್ತಿರುವ ದೇಹ ಕಾಂತಿಯು ಸೂರ್ಯಕಿರಣಗಳನ್ನು ಕೀಳುಮಾಡಿ ಮಿಂಚುತ್ತಿತ್ತು, ದೇವತೆಗಳು ನಗಾರಿಯನ್ನು ಶೋಭಾಮಯವಾಗಿ ಬಾರಿಸುತ್ತಿದ್ದರು; ಮುಂಭಾಗದಲ್ಲಿ ವೃಷಭ ಧ್ವಜವು ಹಾರಾಡುತ್ತಿತ್ತು; ಅತ್ಯಂತೋತ್ಸಾಹದಿಂದ ಕೂಡಿ ಭಕ್ತರು 'ಉಘೇ' ಎನ್ನುತ್ತಿದ್ದಂತೆ ಶಿವನು ನಂದೀಶ್ವರನಿಂದ ಭೂಮಿಗಿಳಿದು ಭೂಮಂಡಲಕ್ಕೆ ಇದು ಅದ್ಭುತವಾದ

ವ॥ ಅಂತು ಸೌರಾಷ್ಟ್ರಸೋಮೇಶ್ವರಂ ಭಕ್ತವ್ರತಪಾಲನನಿಮಿತ್ತಮೇಳ್ತಂದು ಪಿರಿಯ ಕಣಜಮನೊಡೆದು ಲಿಂಗಾಕೃತಿಯಿಂ ಧರೆಯೊಳ್ನೆಲಸಿ ನಿಲ್ವಿನಮಲ್ಲಿ ಬಿಜ್ಜಳಂ ಕಂಡು [1]ಕೌತುಕಂ[1]ಬಟ್ಟು ಬಾಚರಸಂಗೆ ಪೊಡಮಟ್ಟು ಪರಿಜನಸಹಿತಂ ಪೊಗಳುತ್ತಿರ್ದನಾಗಳ್—

ಪುಲಿಗೆಱೆ[3]ಗಂದೆಯ್ದಿಸಿದಂ
ನಲವಿಂ ಸೌರಾಷ್ಟ್ರಪತಿಯನಾದಯ್ಯಂ ಸೊ
ನ್ನಲಿಗೆಗಿರದೆಯ್ದಿಸಿದನು
ಜ್ವಲಮತಿಯಿಂ ಮಲ್ಲಿನಾಥನಂ ಸಿದ್ಧೇಂದ್ರಂ ೨೨

ಎಂದೆಂಬ ಕಥೆಯನಾಲಿಪೆ
ವಿಂದೀ ಸೌರಾಷ್ಟ್ರನಾಥ ಸೋಮೇಶ್ವರನಂ
ತಂದಂ ತಾನಿರ್ದೆಡೆಗೊಲ
ವಿಂದಂ ಭವಭಕ್ತವರ್ಯ ಭಾಸ್ಕರದೇವಂ ೨೩

ಹರನೇಳ್ತಂದು ಗಡ ಭಾ
ಸ್ಕರದೇವಂ ನೆನೆಯೆ ಲಂಕೆಗಾ ದಶಕಂಠಂ
ಬರವೇಳ್ದೊಡಮೇಂ ಬಂದನೆ
ನಿರುಪಾಧಿಕ ಭಕ್ತಿ[2]ಗಲ್ಲದೀಶ್ವರನೊಲಿಯಂ ೨೪

ದ್ದೆನ್ನುವಂತೆ ಧಾನ್ಯಗೃಹವನ್ನು ಹೊಂದಿದವನಾದನು. (ಪ್ರವೇಶಿಸಿದನು). ವ॥ ಹಾಗೆ ಭಕ್ತರ ವ್ರತಗಳನ್ನು ನಡೆಯಿಸಿ ಅನಿಮಿತ್ತವಾಗಿ ನಡೆಯಿಸಿಕೊಡುವವನಾದ ಆ ಸೌರಾಷ್ಟ್ರ ಸೋಮೇಶ್ವರನು (ಸೊಡ್ಡಳ ಬಾಚರಸನಿದ್ದ ಧಾನ್ಯದ ಮನೆಯ) ಹಿರಿಯ ಕಣಜವನ್ನು ಒಡೆದು ಲಿಂಗದ ಆಕಾರವನ್ನು ಧರಿಸಿ, ಭೂಮಿಯಲ್ಲಿ ನೆಲೆಗೊಂಡುನಿಲ್ಲಲಾಗಿ ಅಲ್ಲಿ (ಶಿವಲಿಂಗವು ಮೂಡಿರುವುದನ್ನು) ಬಿಜ್ಜಳನು ಕಂಡು, ಆಶ್ಚರ್ಯ ಪಟ್ಟು, ಬಾಚರಸನಿಗೆ ನಮಸ್ಕರಿಸಿ, ಪರಿವಾರ ಸಮೇತನಾಗಿ ಹೊಗಳುತ್ತಿದ್ದನು. ಆಗ ೨೨–೨೩. ಈ ಪೂರ್ವದಲ್ಲಿ ಆದಯ್ಯನು ಸೌರಾಷ್ಟ್ರಪತಿಯಾದ ಸೋಮೇಶ್ವರನನ್ನು ಪುಲಿಗೆರೆಗೆ ಪ್ರೀತಿಯಿಂದ ಬರುವಂತೆ ಮಾಡಿದನು. ಸಿದ್ಧ ಶ್ರೇಷ್ಠನಾದ ಉಜ್ವಲಮತಿಯ ಸಿದ್ಧರಾಮೇಶ್ವರನು ಶ್ರೀಶೈಲ ಮಲ್ಲಿಕಾರ್ಜುನನನ್ನು ಸೊನ್ನಲಿಗೆಗೆ ತಪ್ಪದೆ ಬರಮಾಡಿಕೊಂಡನೆಂಬ ಕಥೆಯನ್ನು ಕೇಳಿ ಬಲ್ಲೆವು. ಈ ದಿನ ಈ ಸೌರಾಷ್ಟ್ರನಾಥನಾದ ಸೋಮೇಶ್ವರನನ್ನು ಶಿವಭಕ್ತ ಶ್ರೇಷ್ಠನಾದ ಸೊಡ್ಡಳ ಬಾಚಿದೇವನು ತಾನಿರುವಲ್ಲಿಗೇ ಪ್ರೀತಿಯಿಂದ ಕರೆತಂದನು. ೨೪. ಭಾಸ್ಕರ ದೇವನು ನೆನೆದೊಡನೆಯೇ ಪರಮೇಶ್ವರನು ಹೊರಟು ಬಂದನಲ್ಲವೇ ! (ಪೂರ್ವದಲ್ಲಿ) ಆ ರಾವಣನು ನೆನೆದು ಲಂಕೆಗೆ ಬರಬೇಕೆಂದು ಕೇಳಿದಾಗ ಅಲ್ಲಿಗೆ ಶಿವನು ಬಂದನೇ ? ನಿರುಪಾಧಿಕ ಭಕ್ತಿಗಲ್ಲದೆ (ನಿಷ್ಕಾಪಟ್ಯದ ಭಕ್ತಿಗಲ್ಲದೆ) ಶಿವನು ಒಲಿಯನು

1 ಕಾತುರಂ(ಚ) 2 ಕ್ತ(ಚ)

ಹರನಿರ್ಪಲ್ಲಿಗೆ ಕಾಶಿಗೆಯ್ದಿ ಹರಿಮುಖ್ಯಾಮರ್ತ್ಯರುಂ ಸಂತತೋ
ಗ್ರರುಚಿಸ್ಫೂರ್ತಿ ತಪಸ್ತಪಸ್ವಿಗಳುಮತ್ಯಾಯಾಸದಿಂ ಪೂಜೆಯಂ
ಚಿರಕಾಲಂ ಸಮೆದಿಷ್ಟಸಿದ್ಧಿವಡೆದರ್ಭಕ್ತಾರ್ಯರ್ನಿರ್ದಲ್ಲಿಗೀ
ಶ್ವನನಂ ದಲ್ ಬರಿಸಿರ್ದನೀ ಶರಣನಂ ಪೋಲ್ವನ್ನರಾರ್ಧಾತ್ರಿಯೊಳ್ ೨೫

ಎಂದು ವೃಷೇಂದ್ರನುಗ್ಗಡಿಸಿ ಕೀರ್ತಿಸುತೊಪ್ಪಿರೆ ಹೇಮರತ್ನದಿಂ
ದಿಂದುಧರಂಗೆ ಬಲ್ಗುಡಿಯನಾಗಿಸಿ ಗೋಪುರವಪ್ರಮುಖ್ಯಮಂ
ಕುಂದದ ಸರ್ವಭೋಗವಿಭವಂಗಳುಮಂ ಶಿವರಾತ್ರಿಯರ್ಚನಾ
ನಂದಮನಾಳ್ದು ಭಕ್ತನಿಧಿ ಭಾಸುರ ಭಾಸ್ಕರದೇವನಿರ್ಪಿನಂ ೨೬

ಸೌರಾಷ್ಟ್ರವಲ್ಲಭಂ ಕೊ
ಟ್ಟಾರದ ಸೋಮೇಶನೆಂದೂ ಪೆಸರ್ವಡೆದೆಸೆದಂ

ತ್ತಾನೆಯೋ ? ೨೫–೨೭. ವಿಷ್ಣುವೇ ಮೊದಲಾದ ದೇವತೆಗಳೂ, ಸತತವೂ ಅತ್ಯುಗ್ರ ತೇಜೋವಿಶಿಷ್ಟವಾದ ಸ್ಫೂರ್ತಿಯಿಂದ ತಪಸ್ಸನ್ನು ಮಾಡಿ ತಪಸ್ವಿಗಳು ಹರನಿರುವ ಕಾಶಿಗೇ ಅತ್ಯಂತ ಆಯಾಸದಿಂದ ಹೋಗಿ ಅನಂತಕಾಲ ಪೂಜೆಯನ್ನುಮಾಡಿ ಇಷ್ಟಾರ್ಥ ಸಿದ್ಧಿಯನ್ನು ಮಾಡಿಕೊಂಡರು. ಭಕ್ತಶ್ರೇಷ್ಠನಾದ ಸೊಡ್ಡಳ ಬಾಚರಸನು ಇದ್ದಲ್ಲಿಗೇ ಈಶ್ವರನನ್ನು ಬರಮಾಡಿಕೊಂಡನು. ಈ ಶರಣ ನನ್ನು ಸರಿಗಟ್ಟುವವರು ಭೂಮಂಡಲದಲ್ಲಿ ಯಾರಿದ್ದಾರೆ ? ಹೀಗೆಂದು ಬಸವೇ ಶ್ವರನು ಗಟ್ಟಿಯಾಗಿ ಕೂಗುತ್ತ, ಸ್ತೋತ್ರ ಮಾಡುತ್ತ ಒಪ್ಪಿದನು. ಬಂಗಾರ ಮತ್ತು ರತ್ನಗಳಿಂದ ಪರಮೇಶ್ವರನಿಗೆ ಶ್ರೇಷ್ಠವಾದ ದೊಡ್ಡ ಗುಡಿಯೊಂದನ್ನು ನಿರ್ಮಾಣ ಮಾಡಿ ಅದಕ್ಕೆ ಗೋಪುರ ಪ್ರಾಕಾರಾದಿಗಳನ್ನು, ಕೊರತೆಯಿಲ್ಲದಂತೆ ಪಡಿ ನಂದಾ ದೀವಿಗೆಯೇ ಮೊದಲಾದ ಸಮಸ್ತ ಭೋಗ ಸಂಪತ್ತನ್ನು ಉಂಟುಮಾಡುತ್ತ ಶಿವ ರಾತ್ರಿಯ ಅರ್ಚನೆಯಿಂದುಂಟಾಗುವ ಆನಂದವನ್ನು ಹೊಂದಿ, ಭಕ್ತಿನಿಧಿಯೆನಿಸಿದ ಪ್ರಕಾಶಿಸುವ ಭಾಸ್ಕರದೇವನು ಇರುತ್ತಿರುವಾಗ ಸೌರಾಷ್ಟ್ರವಲ್ಲಭನಾದ ಸೋಮೇಶ್ವರನು 'ಕೊಟ್ಟಾರದ ಸೋಮೇಶ್ವರ ದೇವ' ಅಂದರೆ ಧಾನ್ಯದ ಮನೆಯ ಸೋಮೇಶ್ವರ ದೇವನೆಂಬ ಹೆಸರನ್ನು ಪಡೆದು ಸಮಸ್ತ ಜನಗಳೂ ಅರಿಯುವಂತೆ, ವಿದ್ವಾಂಸರು ಕೊಂಡಾಡುತ್ತಿರಲು, ಭಕ್ತನಾದ ಸೊಡ್ಡಳ ಬಾಚರಸಯ್ಯನ ಕೀರ್ತಿಯು ಭೂಮಂಡಲ ದಲ್ಲಿ ಪ್ರಸಾರಗೊಳ್ಳುವಂತೆ ಶೋಭಿಸುತ್ತಿದ್ದನು. [(ii)ಸರ್ವಭೋಗ :— ಪೂರ್ವಕಾಲ ದಲ್ಲಿದೇವಾಲಯಗಳನ್ನು ಕಟ್ಟಿದ ಮೇಲೆ ಆ ದೇವರ ಪ್ರತಿ ನಿತ್ಯದಪೂಜೆ, ನಂದಾದೀವಿಗೆ, ಅಮೃತಪಡಿ (ನೈವೇದ್ಯ) ಇತ್ಯಾದಿಗಳು ಮುಂದೆ ಸಾಂಗವಾಗಿ ನಡೆದುಕೊಂಡು ಬರಲು ದತ್ತಿಮೊದಲಾದ ವ್ಯವಸ್ಥೆ ಮಾಡುತ್ತಿದ್ದರು. ಇವನ್ನೇ ಸರ್ವಭೋಗ ಎಂದು ಕರೆಯು ತ್ತಾರೆ. (ii) ಕೊಟ್ಟಾರದ ಸೋಮೇಶ:—ಕೋಷ್ಠಾಗಾರ ಕೊಟ್ಟಾರ. ಧಾನ್ಯದ ಉಗ್ರಾಣ ವನ್ನೇ ಕೊಟ್ಟಾರ ಎಂದು ಕರೆಯಲಾಗುತ್ತಿದೆ. ಅಂಥ ಧಾನ್ಯದ ಉಗ್ರಾಣವಲ್ಲಿ ಶಿವನು

ಭೂರಿಜನಮಱಿಯೆ ಕೀರ್ತಿಸೆ
ಸೂರಿಜನಂ ಭಕ್ತಕೀರ್ತಿ ಪಸರಿಸೆ ಧರೆಯೊಳ್ ೨೭

ವ॥ ಇಂತು ನಿಜಮಹತ್ವಮಂ ಮೆಱೆದು ಪರಮತಕೋಲಾಹಲನೆಂಬ ಬಲ್ಬಿರಿದಾಂತು ಮೆಱೆವ ಭಾಸ್ಕರದೇವನ ಶೈವತೇಜಃಸ್ಫೂರ್ತಿಯಂ ಸೈರಿಸಲಾಱದೆ ರಾಜಕೌಶಿಕನೆನಿಪ ಬಿಜ್ಜಳಂ ಪರಸಮಯಜನಪರಿವೃತಂ ಪ್ರತಾಪನಾರಾಯಣನೆಂಬ ಪೆಸರಿಂದೊಂದು ವಿಷ್ಣು ವಿಗ್ರಹಮನರಮನೆಯ ಮುಂದೆ ವಿಚಿತ್ರಮಪ್ಪಭಿನವದೇವಾಲಯಮಂ ರಚಿಸಿ ಸುಮುಹೂರ್ತದೊಳ್ಪ್ರತಿಷ್ಠೆಗೆಯ್ದಾ ಗುಡಿಯ ರಂಗಮಂಟಪದೊಳೋಲಗಂಗೊಟ್ಟು ಸಕಲವಿನಿಯೋಗದರೋಲಗಿಸೆ ಗಾಡಿಯಿಂ ಕುಳ್ಳಿರ್ದು ಬಂದರೆಲ್ಲರಂ ನಿರೀಕ್ಷಿಸಿ ಭಾಸ್ಕರದೇವಂ ಬಾರದುದನಱಿದು ಬಸವರಾಜನಂ ನೋಡಿ—

ಎಲ್ಲರ್ಬಂದರ್ಭಾಸ್ಕರ
ನಿಲ್ಲಿಗದೇಂ ಬಂದನಲ್ತು ಶಿವಭಕ್ತಿಮದಂ
ನಿಲ್ಲದೆ ತಲೆಬೇಱಿತೊ ಬಳಿ
ಕೊಲ್ಲನೊ ಮತ್ಸಭೆಯನೆಮಗೆ ಬೆಸಕೆಯ್ವುದುಮಂ ೨೮

ವ॥ ಎಂದರಸಂ ರೋಷೋನ್ಮೀಷಿತಹೃದಯಂ ಬಸವರಾಜಂ ನುಡಿಯೆ ಮಾರ್ಕೊಂಡು—

ಮೂಡಿ ಬಂದದ್ದರಿಂದ ಆ ಹೆಸರು ಆಲಿಂಗಕ್ಕೆ ಬಂತು. ಕೊಟ್ಟು + ಆರದ ಅಂದರೆ ಭಕ್ತರ ಇಷ್ಟಾರ್ಥಗಳನ್ನು ಕೊಟ್ಟು ದಣಿವುಗೊಳ್ಳದ ಎಂದೂ ಅರ್ಥಾಂತರ ಗ್ರಹಿಸಬಹುದು.]

ವ॥ ಈ ರೀತಿ ತನ್ನ ಮಹತ್ವವನ್ನು ಪ್ರಕಟಿಸಿ ಅನ್ಯಮತ ಕೋಲಾಹಲನೆಂಬ ಗೌರವಾರ್ಹಬಿರುದನ್ನು ಹೊಂದಿ, ಮೆರೆಯುತ್ತಿರುವ ಸೊಡ್ಡಳ ಬಾಚಿದೇವನ ಶಿವಸಂಬಂಧವಾದ ತೇಜೋ ವಿಶೇಷದ ಸ್ಫೂರ್ತಿಯನ್ನು ತಡೆಯಲಾರದೆ, ರಾಜಶ್ರೇಷ್ಠ (ರಾಜರಿಗೆಲ್ಲ ಇಂದ್ರ)ನಾದ ಬಿಜ್ಜಳನು ಪರಸಮಯದ ಜನರುಗಳಿಂದ ಕೂಡಿಕೊಂಡು 'ಪ್ರತಾಪ ನಾರಾಯಣ' ಎಂಬ ಹೆಸರಿನ ಒಂದು ವಿಷ್ಣು ವಿಗ್ರಹವನ್ನು ಅರಮನೆಯ ಮುಂದೆ ವಿಚಿತ್ರವೆನಿಸುವ ರೀತಿಯಲ್ಲಿ ಕಟ್ಟಿಸಿದ ನೂತನ ದೇವಾಲಯದಲ್ಲಿ ಒಳ್ಳೆಯ ಮುಹೂರ್ತದಲ್ಲಿ ಪ್ರತಿಷ್ಠಾಪಿಸಿ, ಆ ಗುಡಿಯ ರಂಗಮಂಟಪದಲ್ಲಿ ಓಲಗವನ್ನು (ರಾಜ ಸಭೆಯನ್ನು ಅಥವಾ ದರಬಾರನ್ನು) ನೆರವೇರಿಸಿ, ಸಮಸ್ತ ಪರಿವಾರದವರು ಸೇರಿ ಸೇವೆ ಮಾಡುತ್ತಿರಲು ಠೀವಿಯಿಂದ ಕುಳಿತುಕೊಂಡಿದ್ದು ಬಂದವರೆಲ್ಲರನ್ನೂ ನೋಡುತ್ತ ಸೊಡ್ಡಳ ಬಾಚರಸನು ಬಾರದಿದ್ದುದನ್ನು ಕಂಡು ಬಸವೇಶ್ವರನ ಮುಖವನ್ನು ನೋಡಿ, ೨೮. (ಬಸವೇಶ್ವರರೇ,) ಎಲ್ಲರೂ (ಈ ಸಭೆಗೆ) ಬಂದರು, ಭಾಸ್ಕರನು ಏನು ಕಾರಣ ಇಲ್ಲಿಗೆ ಬರಲಿಲ್ಲ ? ಶಿವಭಕ್ತಿಯ ಮದವು ತಪ್ಪದೆ ತಲೆಗೆ ಏರಿತೋ ? ಅಥವಾ ಈ ನನ್ನ ಸಭೆಗೆ ಬಂದು ನಮ್ಮ ಅಪ್ಪಣೆಯನ್ನು ಪಾಲಿಸುವುದು ಬೇಡವಾಯಿತೋ ? ವ॥ ಹೀಗೆಂದು ಬಿಜ್ಜಳ ರಾಜನು ಕೋಪದಿಂದ ಆಧಿಕ್ಯಗೊಂಡ ಮನಸ್ಸುಳ್ಳವನಾಗಿ ಮಾತನಾಡಲು

ಸಲ್ಲದು ಕೋಪಂ ತಪ್ಪಿನಿ
ಸಿಲ್ಲದನೊಳ್ನೃಪ ನಿನ್ನನುಳಿದಾಹವದೊ
ಳ್ನಿಲ್ಲದೆ ಜಗುಳ್ದನೆ ನೆಗಳ್ದನೆ
ಪೊಲ್ಲದುದಂ ನಿನ್ನ ಬೆಸನನೇಂ ಮೀಱಿದನೇ ೨೯

ಅರಸಂಗೆ ಬಱಿದೆ ಮುಳಿಸು
ಬ್ಬರಿಸಿದೊಡಳಿಜಸಕೆ ಕಾರಣಂ ಗಡ ನಿನ್ನೊ
ಳ್ಪರಿಭಾವಿಪುದೆಮ್ಮಯ ಭಾ
ಸ್ಕರದೇವನೊಳಾದ ಕೊಱತೆಯುಂ ಪುಗದೆಂದುಂ ೩೦

ಶರಣರ್ಶಿವೈಕನಿಷ್ಠಾ
ಭರಣರ್ಪರದೈವನಿಳಯಮುಮಂ ಪುಗರೆಂತುಂ
ಪರಮವ್ರತಯುತರಜಹರಿ
ಸುರಪಾದ್ಯರನಲ್ಪ ಕಾಷ್ಠದಿಂ ಕಡೆಗಾಣ್ಬರ್ ೩೧

ಲಿಂಗೈಕನಿಷ್ಠನೆನಿಸುವ
ಭೃಂಗೀಶಂ ಶಕ್ತಿಯುಕ್ತಮೆನಿಪೀಶನ ವಾ
ಮಾಂಗಮನೆ ಪಿಂಗುತುಂ ಬಲ
ದಂಗಕೆ ಬಲಗೆಯ್ಯೊಳೆಱಗಿ ಭಜಿಸಿದನಲ್ತೇ ೩೨

ಹರನಾದಿಶಕ್ತಿ ಗಿರಿಶನ
ಪರಮಪ್ರಿಯೆಯೆನಿಪ ದೇವಿಯುಮನಾದೊಡಮೀ

ಬಸವಣ್ಣನವರು ಪ್ರತಿಯಾಗಿ ೨೯. ಮಹಾರಾಜಾ, ಸ್ವಲ್ಪವೂ ತಪ್ಪಿಲ್ಲದವನಲ್ಲಿ ಕೋಪವು ಸಲ್ಲದು. ಯುದ್ಧ ಭೂಮಿಯಲ್ಲಿ ನಿನ್ನನ್ನು ಬಿಟ್ಟು ಓಡಿಬಂದನೇ ? ಮಾಡಬಾರದುದನ್ನೇನಾದರೂ ಮಾಡಿದನೇ ? ನಿನ್ನ ಅಪ್ಪಣೆಯನ್ನೇನಾದರೂ ಮಿಕ್ಕಿದನೇ ? ೩೦. ಸುಮ್ಮನೆ ಕೋಪವು ಅರಸರಿಗೆ ಅಧಿಕ್ಯಗೊಂಡರೆ ಅದು ಅಪಯಶಸ್ಸಿಗೆ ಕಾರಣವಾಗುವುದಲ್ಲವೇ ! ನಿಮ್ಮ ವಿಷಯವಾಗಿ ನಮ್ಮ ಭಾಸ್ಕರ ದೇವನಲ್ಲಿ ಯಾವ ಕೊರತೆಯೂ ಇಲ್ಲವೆಂಬುದನ್ನು ನೀನೆ ಯೋಚಿಸಿ ತಿಳಿಯಬೇಕು. ೩೧. ಶರಣರಾದವರು ಶಿವನಲ್ಲಿ ಏಕನಿಷ್ಠೆಯೇ ಆಭರಣವಾಗಿ ಉಳ್ಳವರು. ಅವರು ಹೇಗೂ ಅನ್ಯದೇವತೆಯ ಗುಡಿಯನ್ನು ಪ್ರವೇಶಿಸುವುದಿಲ್ಲ. ಪರಮ ಶಿವಸಂಬಂಧವಾದ ವ್ರತ ನಿಯಮದಿಂದ ಕೂಡಿದ ಅವರು ವಿಷ್ಣು ಇಂದ್ರನೇ ಮೊದಲಾದ ದೇವತೆಗಳನ್ನು ಚಿಕ್ಕ ಕಡ್ಡಿಗಿಂತಲೂ ಕಡೆಯಾಗಿ ಕಾಣುವರು. ೩೨. ಲಿಂಗದಲ್ಲಿಟ್ಟ ಏಕೈಕ ನಿಷ್ಠೆಯುಳ್ಳವನೆನಿಸಿದ ಭೃಂಗೀಶ್ವರನು ಶಕ್ತಿ ಸಮೇತವಾದುದೆಂದು ಶಿವನ ಎಡಗಡೆಯ ದೇಹಾರ್ಧ ಭಾಗವನ್ನು ತೊರೆದು ಬಲಗಡೆಯ ದೇಹಾರ್ಧಕ್ಕೆ ಬಲಗೈಯಿಂದಲೇ ನಮಸ್ಕರಿಸಿ ಸ್ತೋತ್ರ ಮಾಡಲಿಲ್ಲವೇ ! ೩೩. ಹರನ ಆದಿಶಕ್ತಿಯೂ, ಪರಮೇಶ್ವರನ ಶ್ರೇಷ್ಠ ಪತ್ನಿಯೂ ಎನಿಸಿದ ದೇವಿಯನ್ನಾದರೂ ಈಶ್ವರನ ಭಕ್ತರು

ಶ್ವರಭಕ್ತರ್ಮನ್ನಿಸರೆನೆ
ಹರವಿಧಿ ಮುಖಸುರರನೆಂತುಮೇಂ ಲೆಕ್ಕಿಪರೇ ೩೩

ಅಸಮಗುಣನೊರ್ವನನ್ಯರ
ಪೆಸರಂದುಂ ಕಿವಿಯನಂಟಲಾಗದೆನುತ್ತುಂ
ಮಿಸುಗುವ ಘಂಟೆಗಳಂ ತಳೆ
ದೆಸೆಯನೆ ಕಿವಿಯಲ್ಲಿ ನೆಗಳ್ದ ಘಂಟಾಕರ್ಣಂ ೩೪

ವ॥ ಮತ್ತಂ ಮಹೇಂದ್ರಮಂಗಳಮೆಂಬ ಪೆಸರ ನಗರದೊಳಾರ್ಯಮನೆಂಬ ಭಕ್ತಂ ಪರ ದೈವಂಗಳಂ ಗಣಿಸದೆ ಶಿವೈಕಭಕ್ತಿಯಂ ನೆಗಳುತ್ತುಮಿರ್ದು—

ಹರನಾಮಮಲ್ಲದಿತರಾ
ಮರನಾಮಮನನ್ನ ಮುಂದೆ ನುಡಿದನ ತಲೆಯಂ
ಕರವಾಳಿಂ ತಱಿದಪೆನೆಂ
ದೆರಡಿಲ್ಲದೆ ಪೂಣ್ಕೆಗೆಯ್ದು ತಾನಿರ್ಪಿನೆಗಂ ೩೫

ಸುರುಚಿರರುದ್ರಸೂಕ್ತಮನೆ ಬೀದಿಯೊಳೋದುತೆ ಪಾರ್ವನೊರ್ವನಾ
ಗರಕಿರದೆಯ್ದೆ ಭಿಕ್ಷೆಗೆ ನಿರೀಕ್ಷಿಸಿ ಭೈಕ್ಷಮನಿಕ್ಕೆ ಭಕ್ತನಾ
ದರದೊಳೆ ತಾನೆ ಕೊಳ್ವೆಡೆಯೊಳೊಂದಗುಳೊಕ್ಕೊಡೆ ಕಂಡು ತದ್ವಿಜಂ
ಹರಿ ಹರಿಯೆಂಬಿನಂ ಪೊಡೆದು ಪುಟ್ಟನೊಳಿಕ್ಕಿದನಗ್ರಜನ್ಮನಂ ೩೬

ಮನ್ನಿಸುವುದಿಲ್ಲವೆನ್ನುವಾಗ ವಿಷ್ಣುಬ್ರಹ್ಮರೇ ಮೊದಲಾದ ದೇವತೆಗಳನ್ನು ಯಾವ ರೀತಿಯಿಂದಲಾದರೂ ಗಣನೆಗೆ ತಂದುಕೊಳ್ಳುವರೇ ? ೩೪. ಅಸದೃಶ ಸದ್ಗುಣ ಸಂಪನ್ನನೆನಿಸಿದ ಪ್ರಖ್ಯಾತ ಘಂಟಾಕರ್ಣನೆಂಬೋರ್ವ ಶಿವಭಕ್ತನು ಅನ್ಯದೈವದ ಹೆಸರು ಎಂದೂ ಕಿವಿಗೆ ಕೇಳದಿರಲೆಂದು ಶೋಭಿಸುವ ಗಂಟೆಗಳನ್ನು ಕಿವಿಯ ಮುಂದೆ ಕಟ್ಟಿಕೊಂಡು ಶೋಭಿಸಲಿಲ್ಲವೇ ? **ಆರ್ಯಮನಕಥೆ** : ವ॥ ಮಹೇಂದ್ರ ಮಂಗಳವೆಂಬ ಹೆಸರಿನ ನಗರದಲ್ಲಿ 'ಆರ್ಯಮ' ಎಂಬ ಹೆಸರಿನ ಭಕ್ತನು ಅನ್ಯದೈವಗಳನ್ನು ಲೆಕ್ಕಕ್ಕೆ ತಾರದೆ ಶಿವನೊಬ್ಬನಲ್ಲೇ ಇಟ್ಟ ಭಕ್ತಿಯನ್ನು ಪ್ರಕಟಿಸುತ್ತಿದ್ದು ೩೫–೩೬. ಆ ಆರ್ಯಮನು ಶಿವನಾಮವಲ್ಲದೆ ಇತರ ದೇವತೆಗಳ ಹೆಸರನ್ನು ನನ್ನ ಮುಂದೆ ನುಡಿದವನ ತಲೆಯನ್ನು ಕತ್ತಿಯಿಂದ ಹಿಂದೆ ಮುಂದೆ ನೋಡದೆ ಕತ್ತರಿಸಿ ಬಿಡುತ್ತೇನೆಂದು ಪ್ರತಿಜ್ಞೆಮಾಡಿ, ಇರುತ್ತಿರುವಾಗ–ಬೀದಿಯಲ್ಲಿ ಒಬ್ಬ ಬ್ರಾಹ್ಮಣನು ಮನೋಹರವಾದ ರುದ್ರಸೂಕ್ತವನ್ನು ಹೇಳುತ್ತ ಭಿಕ್ಷೆಗಾಗಿ ಮನೆಗೆಬರಲು ಅವನನ್ನು ನೋಡಿ, ಭಕ್ತನು ಆದರ ಪೂರ್ವಕವಾಗಿ ತಾನೇ ಬಂದು ಭಿಕ್ಷೆಯನ್ನು ಇಕ್ಕಲಾಗಿ (ಆ ದ್ವಿಜನು) ಭಿಕ್ಷೆಯನ್ನು ಸ್ವೀಕರಿಸುವಾಗ ಒಂದು ಅಗುಳು ಅನ್ನವು ಬೀಳಲು ಆ ಬ್ರಾಹ್ಮಣನು ಕಂಡು 'ಹರಿ ಹರಿ'

ವ॥ ಅಂತು ತಳ್ನಿದಿರೊಳನ್ಯಶಬ್ದಮನುಚ್ಚರಿಸಿದ ಪಾರ್ವನಂ ಮಡಿಪಲೊಡನದಂ ಕಂಡು ನೆರೆಯ ಭೂಸುರರೆಲ್ಲರ್ನೆರೆದು ಕಡುಮುಳಿಸೇಱಿ ಮೀಱಿ—

ತನಗುಳ್ಳೊಡನ್ನಮಿಕ್ಕುಗೆ
ಮನೆಗೇಳ್ತರೆ ಭಿಕ್ಷು ಭೈಕ್ಷಮಂ ತನಗಿಲ್ಲಾ
ಗೆ ನಿತಾಂತನಿಲ್ಲ ನಡೆಯೆಂ
ದೆನೆ ಸಾಲದೆ ಸದೆಯಲಕ್ಕುಮೇ ಭೂಸುರನಂ ೩೭

ಧರೆ ಪಳಿಗುಂ ಮುಳಿಗುಂ ಭೂ
ವರನೆಂಬುದನಿಂಬುಳೆಯ್ಯದಳ್ಕದೆ ನೆಗಳ್ದಂ
ದುರುಳನಿವಂ ಬೊಮ್ಮರೀತಿಯ
ನರಸಂಗ ಱಿಪಲ್ಕೆವೇಳ್ಕುಮೆಂದಾ ಪಾರ್ವರ್ ೩೮

ವ॥ ಎಂದು ನರೇಂದ್ರನೊಡನದೆಲ್ಲಮಂ ಪೇಳೆ ಕೇಳ್ದು ನೃಪಂ ಕುಪಿತನಾಗಿ—

ಬರಿಸಿದನಲ್ಲಿಗಾ[1]ರ್ಯಮನನಾರ್ಯಮನೋಜ್ಞಚರಿತ್ರನಂ ಧರಾ
ಮರನನದೇಕೆ ಕೊಂದೆ ನೆಗಳ್ದಾತನ ತಪ್ಪನಿದಿಂತುಟೆಂದು ಬಿ
ತ್ತರಿಸದನೀಕ್ಷಿಪೆಂ ನಿರಪರಾಧನನೋವದೆ ಕೊಂದೆಯಪ್ಪೊಡೀ
ಧರಣಿಯನೊರ್ಮೆ ನೀಂ ಬಗಿದು ಪೊಕ್ಕೊಡಮಿಕ್ಕದೆ ನಿನ್ನನಾಂ ಬಿಡೆಂ ೩೯

ಸದ್ವಂಶಜನಂ ಮಡಿಪಿದೆ
ವಿದ್ವಾಂಸನನಖಿಳವೇದವಿದನಂ ಮದನ

ಎಂದೆನ್ನಲಾಗಿ, ಹುಟ್ಟಿನಿಂದ ಹೊಡೆದು ಆ ಬ್ರಾಹ್ಮಣನನ್ನು ಕೊಂದನು. ವ॥ ಹೀಗೆ ತನ್ನ ಎದುರಿನಲ್ಲಿ ಅನ್ಯದೇವತಾನಾಮವನ್ನು ಉಚ್ಚರಿಸಿದ ಪಾರ್ವನನ್ನು ಸಾಯಿಸಲಾಗಿ, ಅದನ್ನು ಕಂಡ ಅಕ್ಕಪಕ್ಕದ ಬ್ರಾಹ್ಮಣರೆಲ್ಲ ಸೇರಿ, ಅತಿಕೋಪವೇರಿ ಮಿಕ್ಕು ೩೭. 'ತನ್ನಲ್ಲಿ ಅನ್ನವಿದ್ದರೆ ಮನೆಗೆಬಂದ ಭಿಕ್ಷುವಿಗೆ ಭಿಕ್ಷೆಯನ್ನಿಕ್ಕಲಿ. ಇಲ್ಲದಿದ್ದರೆ ನ್ಯಾಯವಾಗಿ ಇಲ್ಲ, ಮುಂದಕ್ಕೆ ಹೋಗಯ್ಯ ಎಂದರೆ ಆಯಿತು ! ಬ್ರಾಹ್ಮಣನನ್ನು (ಈ ರೀತಿ) ಹೊಡೆದು ಹಾಕಬಹುದೇ ?' ವ॥ ಹೀಗೆಂದು ಅರಸನೊಡನೆ ನಡೆದುದೆಲ್ಲವನ್ನೂ ಹೇಳಲಾಗಿ, ಅರಸನು ಕೇಳಿ ಕೋಪಗೊಂಡು ೩೯. ತಾನಿದ್ದಲ್ಲಿಗೆ ಶ್ರೇಷ್ಠಪುರುಷರಿಗೊಪ್ಪುವಂತಹ ಮನೋಹರ ಚರಿತ್ರೆಯುಳ್ಳ ಆರ್ಯಮನನ್ನು ಬರಮಾಡಿಕೊಂಡನು. 'ಎಲೈ ಬ್ರಾಹ್ಮಣ ನನ್ನು ಅದೇಕೆ ಕೊಂದೆ ? ಆತನು ಮಾಡಿದ ತಪ್ಪು ಇಂಥಾದ್ದೆಂದು ವಿವರಿಸು; ಅದನ್ನು ನಾನು ನೋಡುತ್ತೇನೆ ; ಅಪರಾಧವಿಲ್ಲದ ಅವನನ್ನು ಕೊಂದದ್ದೇ ಆದರೆ, ಈ ಭೂಮಿ ಯನ್ನು ಒಮ್ಮೆ ನೀನು ಬಗೆದುಹೊಕ್ಕರೂ ಕೂಡ ಕೊಲ್ಲದೆ ಬಿಡುವುದಿಲ್ಲ.' ೪೦. 'ವಿದ್ವಾಂಸನೂ, ಸಮಸ್ತ ವೇದಾರ್ಥವನ್ನು ತಿಳಿದವನೂ ಆದ ಶ್ರೇಷ್ಠವಂಶೋತ್ತಮ

1 ಗ(ಚ)

ಪ್ರದ್ವೇಷಿಭಕ್ತಜನಕಿದು
ಸದ್ವರ್ತನಮಕ್ಕುಮೇ ವಿಚಾರಿಪೊಡಿಳೆಯೊಳ್ ೪೦

ಎನೆ ಕೇಳ್ದಾ[1]ರ್ಯಮನೆಂದನಂದು ನಗುತುಂ ಭೂಪಾಲ ತಪ್ಪಿಲ್ಲದಾ
ತನನೇಂ ಕೊಂದೆನೆ ತಪ್ಪನೀಶ್ವರನೆ ಬಲ್ಲಂ ನಿನ್ನೊಳಾಂ ಪೇಳ್ವುದೇ
ನನಿಮಿತ್ತಂ ಸಲೆ ಕಾಯಲುಂ ಕೊಲಲುಮೆನ್ನಂ ಶಂಭುವೇ ಶಕ್ತನು
ರ್ಕಿನ ಮಾತಂ ಬಿಡು ಭರ್ಗಭೃತ್ಯನನದೇಂ ನೀಂ ದಂಡಿಸಲ್ದಕ್ಷನೇ ೪೧

ವ॥ ಎಂಬುದುಮರಸನತ್ಯಂತ ಕೋಪೋದ್ರೇಕಮಂ ತಾಳ್ದೀತನನೀಗಳೆ ಕೊಲ್ವುದೆಂದು ಭಟರ್ಗೆ ನಿಯಾಮಿಸಿ ಕಳುಪಲೊಡನವರೊಡನೆ ಭಕ್ತಂ ಬರುತ್ತುಮಿದಿರೊಳೊಂದು ಶಿವಾಲಯಮಿರೆ ಕಂಡೊಳಪೊಕ್ಕು ಲಿಂಗಾಲಿಂಗನಂಗೆಯ್ದು ಲಿಂಗಗರ್ಭದೊಳಗನೆ ಪೊಕ್ಕನಾಗಳ್ ಭಟರ್ಬೆನ್ನನೇಳ್ತಂದು ಪೋಗದಿರೆಂದು ಸೆಱಂಗನುಗಿದು ಸೆಳೆಯೆ—

ಸುಲಲಿತ ಚೇಲಾಂಚಲಮದು
ಕೆಲಕೊರ್ಮೊರ್ನಿೞ್ದು ಭಕ್ತಿಕೇತನಪಟದಂ
ತಲರ್ದಿರೆ ಧರೆ ಪೊಗಳೆ ಮಹೋ
ಜ್ವಲಲಿಂಗದೊಳಾ[2]ರ್ಯಮಾಂಕನೊಡವೆರೆದಿರ್ದಂ ೪೨

ನನ್ನು ಕೊಂದುಹಾಕಿದ್ದೀಯೆ. ವಿಚಾರಿಸಿ ನೋಡಿದರೆ ಈ ಲೋಕದಲ್ಲಿ ಮನ್ಮಥನನ್ನು ಧ್ವಂಸಗೊಳಿಸಿದ ಶಿವನಭಕ್ತ ಜನರಿಗೆ (ಈ ವ್ಯವಹಾರವು) ಉತ್ತಮ ವರ್ತನೆಯೆಂದೆನಿಸೀತೇ ?' ೪೧. ಹೀಗೆಂದು ಆ ರಾಜನು ಕೇಳಲು ಆರ್ಯಮನು ನಗುತ್ತ ಹೀಗೆಂದನು : ಮಹಾರಾಜಾ, ನಾನು ತಪ್ಪಿಲ್ಲದೆ ಕೊಂದೆನೇ ? ಅವನು ಮಾಡಿದ ತಪ್ಪನ್ನು ಈಶ್ವರನೇ ಬಲ್ಲನು. ನಿನ್ನಲ್ಲಿ ನಾನು ಹೇಳುವುದೇನು ? ನನ್ನನ್ನು ನಿಷ್ಕಾರಣವಾಗಿ ಕಾಯುವುದಕ್ಕೂ, ಕೊಲ್ಲುವುದಕ್ಕೂ ಶಂಭುವೇ ಸಮರ್ಥನು ; ಗರ್ವದಮಾತನ್ನು ಆಡಬೇಡ. ಶಿವಭಕ್ತನನ್ನು ದಂಡಿಸಲು ನಿನಗೇನು ಸಾಮರ್ಥ್ಯವಿದೆ ? ವ॥ ಹೀಗೆನ್ನಲಾಗಿ, ಅರಸನು ಮಿತಿಮೀರಿದ ಕೋಪದಿಂದ ಉದ್ರೇಕಗೊಂಡು, ಈತನನ್ನು ಈ ಕೂಡಲೆ ಕೊಲ್ಲಿರೆಂದು ಭಟರಿಗೆ ಆಜ್ಞಾಪಿಸಿ ಕಳಿಸಲಾಗಿ, ಅವರೊಡನೆ ಆ ಭಕ್ತನಾದ ಆರ್ಯಮನು ಬರುತ್ತಿರುವಾಗ, ಎದುರಿನಲ್ಲಿಯೇ ಇರುವ ಒಂದು ಶಿವಾಲಯವನ್ನು ಕಂಡು ಒಳಗೆಹೋಗಿ ಅಲ್ಲಿರುವ ಲಿಂಗಮೂರ್ತಿಯನ್ನು ತಬ್ಬಿಕೊಂಡು, ಲಿಂಗ ಗರ್ಭದೊಳಗೆ ಹೋಗುತ್ತಿದ್ದನು. ಆಗ ರಾಜಭೃತ್ಯರುಗಳು ಹಿಂಬಾಲಿಸಿಬಂದು (ಲಿಂಗ ಗರ್ಭದಲ್ಲಿ) ಹೋಗಬೇಡವೆಂದು ಅವನ ವಸ್ತ್ರದ ಸೆರಗನ್ನು ಹಿಡಿದೆಳೆಯಲು ೪೨. ಮನೋಹರವಾದ ಅವನ ಆ ಬಟ್ಟೆಯ ಸೆರಗು ಒಂದು ಮಾರುದ್ದ ಹೊರಭಾಗದಲ್ಲಿ ಉಳಿದು ಶಿವಭಕ್ತಿಯೆಂಬ ಪತಾಕೆಯ ಪಟದಹಾಗೆ ಅಗಲವಾಗಿ ಹರಡಿತು. ಲೋಕವೆಲ್ಲ ಹೊಗಳಿತು. ಅತ್ಯಂತ ಉಜ್ವಲವಾದ ಲಿಂಗ

[1] ರ್ಯ್ದ (ಚ) [2] ಳ(ಚ)

ಹರನಾ ಭಕ್ತನ ಬಗೆಯುಂ
ಧರೆಗಱಿಪಲ್ಸಲೆ ತದೀಯ ಚೇಲಾಂಚಲಮುಂ
ಕರಮಲ್ಲಿ ತೋರ್ಪನೀಗಳು
ಮರಿದೆನೆ ಸದ್ಭಕ್ತರೇಳ್ಗೆ ಸಾಧಾರಣಮೇ ೪೩

ವ॥ ಮತ್ತಂ ಕೇಳ್ವುದೆಂತೆನೆ—

ವೀರ ಶಂಕರದಾಸನೆಂಬ ಶಿವೈಕ್ಯನೊರ್ವನಪೂರ್ವವಿ
ಸ್ತಾರಭಕ್ತಿಸಮೇತನನ್ಯಮತಸ್ಥರಂ ಪರದೈವಮಂ
ಸಾರೆನೀಕ್ಷಿಸೆನಂಟೆನಾಂ ಸ್ವಪನಂಗಳಲ್ಲಿಯುಮಾ ದುರಾ
ಚಾರರೊಳ್ನುಡಿಯಾಡೆನೆಂದು ದೃಢಪ್ರತಿಜ್ಞೆಯಿನೊಪ್ಪಿದಂ ೪೪

ವ॥ ಅಂತು ವೀರಭಕ್ತಿಸಮಗ್ರಂ ತ್ರಿವಿಧಲಿಂಗಾರ್ಚನೆಯಿಂ ಕೆಲವಾನುಂ ದಿವಸಂಗಳಿಂದಿರ್ಪಿನ ಮೊಂದಿರುಳ ಕನಸಿನೊಳೊರ್ವಂ ಬೌದ್ಧಂ ಬಂದು ನಿಜಾಂಗಮಂ ಮುಟ್ಟಲೊಡನೆ ತೊಟ್ಟನೆಳ್ಚತ್ತು ಶುದ್ಧನಲ್ಲದ ಬೌದ್ಧನಂಟಿದನಿದಕ್ಕೆ ಶುದ್ಧಿಯಾವುದೆಂದಾಳೋಚಿಸಿ—

ಮಡಕೆಗೆ ವಿಶುದ್ಧಿಯಕ್ಕುಂ
ಸುಡೆ ವಹ್ನಿಯಿನದಱ ತೆಱದೆ ಸುಡೆ ಭವಿಯುಂಟಿ
ದೊಡಲನಿದು ಶುದ್ಧಭಾವಂ
ಬಡೆಗುಂ ದಿಟಮೆಂದು ಭಕ್ತನವಧರಿಸುತ್ತುಂ ೪೫

ಪಟುಶೌರ್ಯಂ ಧೈರ್ಯದಿಂ ಶ್ರೀಗಿರಿಗೆ ತಳರ್ದು ಭವೇಶ್ವರಾಖ್ಯಾತಲಿಂಗ
ಸ್ಫುಟಗೇಹಂಬೊಕ್ಕು ಮಿಕ್ಕುಜ್ಜ್ವಳಿಸಿದುರಿಗಳಿಂ ತಳ್ತ ಘೋರಾಗ್ನಿಯಿಂದು

ಗರ್ಭದಲ್ಲಿ ಆರ್ಯಮಾಂಕನು ಐಕ್ಯಗೊಂಡನು.—೪೩. ಶಿವಭಕ್ತನಾದ ಅವನ ಭಕ್ತಿಯು ರೀತಿಯನ್ನು ಇದು ಅಸಾಧ್ಯವಾದ ಭಕ್ತಿಯ ರೀತಿ ಎಂದು ಲೋಕಕ್ಕೆ ಸಾರುತ್ತ ಆ ಭಕ್ತನ ಬಟ್ಟೆಯು ಸೆರಗನ್ನು ಚೆನ್ನಾಗಿ ಈಗಲೂ ತೋರಿಸುತ್ತಿದ್ದಾನೆ. ಸದ್ಭಕ್ತರಾದವರ ಭಕ್ತಿಯ ಅತಿಶಯವು ಸಾಮಾನ್ಯವಾದುದೇ ? ವ॥ ಇನ್ನೂ ಕೇಳು : ಅದು ಹೇಗೆಂದರೆ ವೀರ ಶಂಕರದಾಸನ ಕಥೆ—೪೪. ಶಿವೈಕ್ಯಚಿತ್ತನಾದ ವೀರಶಂಕರದಾಸನೆಂಬ ಓರ್ವ ವಿಶೇಷವಾದ ಅಪೂರ್ವ ಶಿವಭಕ್ತಿಯಿಂದ ಕೂಡಿದ ಭಕ್ತನು (ಇದ್ದನು. ಅವನು) ಅನ್ಯ ಮತದವರನ್ನೂ, ಅನ್ಯರ ದೇವರುಗಳನ್ನೂ ಸಮೀಪಿಸೆನು ; ಮುಟ್ಟೆನು ; ಕನಸಿನಲ್ಲಿಯೂ ಆ ದುರಾಚಾರರೊಡನೆ ಮಾತನಾಡುವುದಿಲ್ಲ, ಎಂಬ ದೃಢ ಪ್ರತಿಜ್ಞೆಯಿಂದ ಶೋಭಿಸುತ್ತಿದ್ದನು. ವ॥ ಈ ರೀತಿ ವೀರಭಕ್ತಿ ಸಮನ್ವಿತನಾಗಿ ತ್ರಿವಿಧ ಲಿಂಗಾರ್ಚನೆ (ಗುರುಲಿಂಗ ಜಂಗಮಾರ್ಚನೆ)ಯಿಂದ ವ್ಯವಹರಿಸುತ್ತ ಅನೇಕ ದಿವಸಗಳಿಂದ ಇರಲಾಗಿ ಒಂದು ರಾತ್ರಿ ಕನಸಿನಲ್ಲಿ ಒಬ್ಬ ಬೌದ್ಧನು ಬಂದು, ತನ್ನ ಶರೀರವನ್ನು ಮುಟ್ಟಲಾಗಿ ಆ ಕೂಡಲೇ ಎಚ್ಚರಗೊಂಡು, ಅಶುದ್ಧನಾದ ಬೌದ್ಧನು ತನ್ನನ್ನು ಮುಟ್ಟಿಬಿಟ್ಟನು, ಇದಕ್ಕೆ ಶುದ್ಧಿಯಾವುದೆಂದು ಯೋಚನೆ ಮಾಡಿ ೪೫–೪೬. (ಅಶುದ್ಧವಾದ) ಮಡಕೆಯನ್ನು ಬೆಂಕಿಗೆ ಹಾಕಿ ಸುಟ್ಟರೆ ಅದು ಶುದ್ಧಿಗೊಳುವುದು, ಅದರಂತೆ ಭವಿಯು ಮುಟ್ಟಿದ ಈ

ತ್ಕಟಮೆತ್ತುಂ ಕಾದ ಪೆರ್ಗಾವಲಿಯ ನಡುವೆ ಕುಳ್ಳಿರ್ದು ವಿಕ್ರಾಂತದಿಂ ಧೂ
ರ್ಜಟಿಯುಂ ದಲ್ ಮೆಚ್ಚಿಸುತ್ತುಂ ಪಡೆದನಭವಸಾಯುಜ್ಯಮಂ ಭಕ್ತವರ್ಯಂ ೪೬

ಆಲಿಪುದಿನ್ನುಂ ಶಿವಪದ
ಲೋಲಂ ಶಿವಲೆಂಕ ಮಂಚಣಾರ್ಯನೆನಿಪ್ಪಂ
ಭೂಲೋಕವಿನುತ ಘನಮಹಿ
ಮಾಲಂಬನನಭವಗಣಪದಾಂಬುಜಭೃಂಗಂ ೪೭

ಶ್ರೀಕರವಿಳಸಿತ ವಿಪುಳ ಕ
ಳಾಕರನಕಳಂಕ ಗುಣಗಣಾಮಳಮಣಿರ
ತ್ನಾಕರನಹಿತಾಂಬುರುಹಸು
ಧಾಕರನಘತುಹಿನಘನವಿಭಾಕರನೆಸೆದಂ ೪೮

ಶ್ರೀಮಹೋತ್ತಮ ಕಾಶಿಯೊಳ್ಮೆಱೆವಂ ತ್ರಿಕಾಲಮುಮಾ ಪುರ
ಸ್ವಾಮಿಗರ್ಪಿಸಿ ವಿಶ್ವನಾಥ ಶಿವಂಗೆ ಪತ್ತು ಬೆರಲ್ಗಳಂ
ಪ್ರೇಮದಿಂ ಪಡೆದಂತೆ ತಾಂ ಮಗುಳ್ದೀವನಾತ್ಮಕರಾಂಗುಲಿ
ಸ್ತೋಮಮಂ ಪಡೆದಂತೆ ಗೆಯ್ವುದೆ ನೇಮಮಾಗೆ ವಿರಾಜಿಪಂ ೪೯

ದೇಹವನ್ನು ಸುಟ್ಟರೆ ನಿಜವಾಗಿ ಶುದ್ಧಿಯನ್ನು ಹೊಂದುವುದು ಎಂದು ಆ ಭಕ್ತನು ತಿಳಿದವನಾಗಿ ಸಮರ್ಥವಾದ ಶೌರ್ಯವುಳ್ಳ ಅವನು ಧೈರ್ಯದಿಂದ ಶ್ರೀಶೈಲ ಪರ್ವತಕ್ಕೆ ಬಂದು, (ಅಲ್ಲಿರುವ) 'ಭವರ್ಮೇಶ್ವರ' ಎಂಬಹೆಸರಿನ ಪ್ರಸಿದ್ಧವಾದ ಶಿವಾಲಯವನ್ನು ಹೊಕ್ಕು, ವಿಶೇಷವಾಗಿ, ಜಾಜ್ವಲ್ಯಮಾನವಾದ ಉರಿಯಿಂದ ಕೂಡಿ, ಘೋರವಾದ ಬೆಂಕಿಯಿಂದ ಕೆಂಪಾಗಿ ಕಾಯ್ದ ದೊಡ್ಡಲೋಹಪಾತ್ರೆ (ದೊಡ್ಡ ಓಡು)ಯ ನಡುವೆ ಧೈರ್ಯ ವಿಶಿಷ್ಟನಾಗಿ ಕುಳಿತು ಪರಮೇಶ್ವರನನ್ನು ಮೆಚ್ಚಿಸುತ್ತ ಶಿವಸಾಯುಜ್ಯವನ್ನು ಆಭಕ್ತ ಶ್ರೇಷ್ಠನಾದ ವೀರಶಂಕರದಾಸನು ಪಡೆದನು. ಮಂಚಣಾರ್ಯರ ಕಥೆ (ಮಂಚಣ್ಣ ಪಂಡಿತರ ಕಥೆ) ೪೭–೪೮. ಇನ್ನೂ ಕೇಳು : ಶಿವನ ಪಾದ ಭಕ್ತಿಯಲ್ಲಿ ಲೋಲನಾದ ವನೂ, ಶಿವನ ಭಂಟನೂ ಎನಿಸಿದ್ದ 'ಮಂಚಣಾರ್ಯ' ಎಂಬ ಹೆಸರಿನವನು ಭೂಲೋಕದ ಜನರಿಂದ ಶ್ಲಾಘಿಸಲ್ಪಡುವವನಾಗಿ, ಘನವಾದ ಮಹಾತ್ಮ್ಯೆಗೆ ಆಧಾರವೆನಿಸಿ, ಶಿವಗಣ ಗಳ ಪಾದಕಮಲ ಭೃಂಗನಾಗಿ, ಪ್ರಕಾಶಿಸುವ ಮೋಕ್ಷ ಸಂಪತ್ತನ್ನುಂಟುಮಾಡುವ, ಅಧಿಕವಾದ ಕಳೆಗಳಿಗೆ (ಶಿವಜೀವೈಕ್ಯಬೋಧಕವಾದ ಶೈವ ವಿದ್ಯೆಗಳಿಗೆ) ಆಕರನೆನಿಸಿ, ಕಲಂಕರಹಿತವಾದ ಶ್ರೇಷ್ಠ ಗುಣವೆಂಬ ರತ್ನಗಳಿಗೆ ಸಮುದ್ರನೆನಿಸಿ, ಅಹಿತರಾದ ಜನ ರೆಂಬ ಕಮಲಗಳಿಗೆ ಚಂದ್ರನೆನಿಸಿ, ಪಾಪಗಳೆಂಬ ಮಂಜಿಗೆ ಶ್ರೇಷ್ಠ ಸೂರ್ಯನೆನಿಸಿ ಶೋಭಿ ಸಿದ್ದನು. ೪೯. (ಅವನು) ಮಂಗಳಕರವಾದ ಉತ್ತಮೋತ್ತಮವೆನಿಸಿದ ಕಾಶಿಯಲ್ಲಿ ಮೆರೆಯುತ್ತಿದ್ದನು. ಮೂರು ಕಾಲದಲ್ಲೂ (ಪ್ರಾತಃ, ಮಧ್ಯಾಹ್ನ, ಸಾಯಂಕಾಲಗಳಲ್ಲೂ) ಆ ನಗರದ ಪ್ರಭುವೆನಿಸಿದ ವಿಶ್ವನಾಥನೆಂಬ ಹೆಸರಿನ ಶಿವನಿಗೆ ಪ್ರೇಮದಿಂದ ತನ್ನ ಹತ್ತೂ ಕೈಬೆರಳುಗಳನ್ನು ಸಮರ್ಪಣೆ ಮಾಡುವನು. ಆ ಶಿವನು ಪುನಃ ಆತನ ಬೆರಳು ಗಳನ್ನು ಕೊಡುವನು. ಈ ರೀತಿ ಪಡೆದು ಮಾಡುವ ಭಕ್ತಿಯೇ ಅವನ ನೇಮವಾಗಿ

ಪರಶಿವನೊರ್ವನಲ್ಲದಖಿಳಾಂಡಕದಂಬಕೆ ಬೇಱಧೀಶರೆಂ
ಬರುಮಣಮಿಲ್ಲೆನುತ್ತೆ ನಿಗಮಾಗಮಶಾಸ್ತ್ರದಿನುತ್ತರಂಗುಡು
ತ್ತಿರದಥಟಿಂದೆ ಗೆಲ್ದು ಸಲೆ ಸೋಲಿಸುತನ್ಯಮತಾಭಿಮಾನನಿ
ಷ್ಠುರನಕಳಂಕ ಪೂರ್ಣಸಿತಕೀರ್ತಿ ವಿಜೃಂಭಿಸೆ ಭೂತಳಾಗ್ರದೊಳ್ ೫೦

ಸಕಳ ಪರವಾದಿಜನನಾ
ಸಿಕಾಗ್ರಖಂಡನ ಕರಾಳಖಡ್ಗಂ ತಾನೆಂ
ದಕಳಂಕಮಹಿಮನೆತ್ತಿಸಿ
ಸುಕರಧ್ವಜಮುಂ ವಿರಾಜಿಸುತ್ತಿರೆ ಪುರದೊಳ್ ೫೧

ವ॥ ಆಗಳ್ ಪರಸಮಯಸ್ಥರೆಲ್ಲಂ ಗೆಲ್ಲಂಗೊಳಲೆಂದು ಕೃತಕಸಂಕೇತರಾಗಿ ಮಂತಣಂಗೊಂಡು ಮಂಟಪದೊಳ್ಕುಳ್ಳಿರ್ದು ಮಂಚಣಪಂಡಿತರಂ ಬರಿಸಿ ತಮ್ಮ ತಮ್ಮ ಶಾಸ್ತ್ರೋಕ್ತಿ[1]ಯುಕ್ತಿಯುಮರೆ ಬೇಱವೇಱ ಮಸಗಿ ಮಥಿಯಿಸೆ—

ಶ್ರುತಿ ಸೂತ್ರ ನ್ಯಾಯ ಸಮ
ನ್ವಿತಶಾಸ್ತ್ರಸ್ಮೃತಿಪುರಾಣ ತರ್ಕಾದಿಗಳಿಂ
ಪತಿ ಶಿವನೊರ್ವನೆ ಭುವನ
ಪ್ರತತಿಗೆ ಪೆಱನಿಲ್ಲೆನುತ್ತೆ ಪಟುಯುಕ್ತಿಗಳಿಂ ೫೨

ಬಾಯೆತ್ತದಂತೆ ನುಡಿವುತೆ
ಕಾಯಜರಿಪುಭಕ್ತನೆಲ್ಲರಂ ಗೆಲೆ ಸೋಲ್ತು

ಸಂತೋಷವಾಗಿ ಆ ಭಕ್ತಿ ಜೀವನವನ್ನು ಆಚರಿಸುತ್ತ ರಂಜಿಸುತ್ತಿದ್ದನು. ೫೦. ಸಮಸ್ತ ಬ್ರಹ್ಮಾಂಡ ಮಂಡಳಕ್ಕೆ ಪರಶಿವನಲ್ಲದೆ ಬೇರೆ ಒಡೆಯರೆಂಬುವರು ನಿಶ್ಚಯವಾಗಿ ಇಲ್ಲವೆನ್ನುತ್ತ, ವೇದ ಆಗಮಶಾಸ್ತ್ರಾಧಾರ ಪೂರ್ವಕವಾಗಿ ಪರಾಕ್ರಮದಿಂದ ಅನ್ಯಮತ ದವರನ್ನು ಸೋಲಿಸಿ ತಾನು ಗೆದ್ದು, ಸತ್ಯದ ವಿಷಯದಲ್ಲಿ ನಿಷ್ಠುರನೂ, ಕಳಂಕರಹಿತನೂ ಆಗಿ ಪರಿಪೂರ್ಣ ಶುಭ್ರ ಯಶಸ್ಸಿನಿಂದ ಭೂಮಂಡಲದಲ್ಲಿ ವಿರಾಜಿಸುತ್ತಿದ್ದನು. ೫೧. ಸಕಲ ಪರವಾದಿ (ಅನ್ಯಮತ ಶ್ರೇಷ್ಠತೆಯ ಬಗೆಗೆ ವಾದಿಸುವ) ಜನರ ಮೂಗಿನ ತುದಿ ಯನ್ನು ಕತ್ತರಿಸುವ ಭಯಂಕರ ಖಡ್ಗನೆಂದು, ಆ ಕಳಂಕರಹಿತವಾದ ಮಹಿಮಾತಿಶಯದ ಮಂಚಣಾರ್ಯನು ಆ ಕಾಶೀ ಪಟ್ಟಣದಲ್ಲಿ, ಸಮೀಚೀನವಾದ ಧ್ವಜವನ್ನೇರಿಸಿ ಶೋಭಿಸು ತ್ತಿದ್ದನು. ವ॥ ಆಗ ಪರಸಮಯದವರೆಲ್ಲರೂ ಈತನನ್ನು ಗೆಲ್ಲಬೇಕೆಂದು ಒಟ್ಟಾಗಿ ಸೇರಿ ಸಂಕಲ್ಪಮಾಡಿದವರಾಗಿ ಮಂಟಪದಲ್ಲಿ ಕುಳಿತುಕೊಂಡು ಮಂಚಣ ಪಂಡಿತರನ್ನು ಬರುವಂತೆ ಮಾಡಿ, ತಮ್ಮ ತಮ್ಮ ಶಾಸ್ತ್ರಗಳಲ್ಲಿ ಹೇಳಿದ ಮಾತುಗಳನ್ನೆಲ್ಲ ಬೇರೆ ಬೇರೆ ಯಾಗಿ ವಾದದ ಮೂಲಕ ಮಥನಗೊಳಿಸುತ್ತಿರಲಾಗಿ—೫೨-೫೩. ಶ್ರುತಿ, ಬ್ರಹ್ಮ ಸೂತ್ರ, ನ್ಯಾಯ ಸಮನ್ವಯಗೊಳಿಸಿ, ಶಾಸ್ತ್ರಗಳು, ಸ್ಮೃತಿ, ಪುರಾಣ ತರ್ಕಾದಿಗಳಿಂದ ಶಿವನೊಬ್ಬನೇ ಸಮಸ್ತ ಬ್ರಹ್ಮಾಂಡ ಸಮೂಹಕ್ಕೆ ಪತಿಯಲ್ಲದೆ ಬೇರೆ ಇನ್ನೊಬ್ಬ

[1] ಕ್ತ(ಚ)

ಮಾಯಾಜಡರೆಲ್ಲರ್ಗೆಲ
ಲಾಯುಂಗಾಣದೆ ಬಳಲ್ಕೆಯಿಂದಿಂತೆಂದರ್ ೫೩

ಎಲೆ ಶೈವ ಕಲ್ತ ವಿದ್ಯಾ
ಕಲಾಪದಿಂ ಗೆಲ್ವೊಡಕ್ಕುಮೇ ಸೋಲದಗುಂ
ದಲೆಯೆಮಗೆ ನಿದರ್ಶನಮುಂ
ಪಲಮಾತೇಂ ನೀನೇ ತೋಱಿ ಸೋಲಿಪುದೆಮ್ಮಂ ೫೪

ವ॥ ಎಂದವರ್ನುಡಿಯೆ ಕೇಳ್ದಂತೆಗೆಯ್ವೆನಿದಾವ ಗಹನಂ ನಿಮ್ಮೊಡೆಯನಪ್ಪ ಪೊಡೆಯುಲರನಂ ಮೃಡನಡಿಗಳ್ಗೆ ಪೊಡಮಡಿಪೆಂ ನೋಡಿಮೆಂದಲ್ಲಿಂದೆಳ್ದು ಚಕ್ರಧರನಾವಾಸದತ್ತಲ್ ನೋಡಿ ಶಿವಗಣ ಚರಣಾರವಿಂದಂಗಳಂ ಮನದೊಳ್ನೆನೆದು—

ಬಾರೆಲೆ ಚಕ್ರಿ ನಿನ್ನ ಪತಿಯೆಂದೆನಿಪಗ್ಗದ ಸರ್ವದೇವತಾ
ಧಾರಪದಂಗೆ ವಿಶ್ವಪತಿಗಿಂದೆಱಗಲ್ಕೆನೆ ಕೇಳ್ದು ನಾಡೆ ಕಂ
ಸಾರಿ ಮುದಂಬಡುತ್ತೆ ಪೊಱಮಟ್ಟೊಲವಿಂ ಪೊಡಮಟ್ಟು ಭಕ್ತವೃಂ
ದಾರಕ ಬಾಳ್ದೆನೆಂದು ನಡೆತಂದನಮಂದಿರೊಳಾಗೆ ಕೌತುಕಂ ೫೫

ವ॥ ಅಂತು ಶಿವಭಕ್ತಃ ಪ್ರಭುರ್ಮಮಯೆಂಬ ನಿಜೋಕ್ತಿಯನೆಲ್ಲರ್ಗಱಿಪಿ ಭಕ್ತವರ್ಯನ ಬೆನ್ನನೇಳ್ತಂದು ಬೇಗಂ ವಿಶ್ವಪತಿಗೆ ಪೊಡಮಡಲೊಡನೆ ಕಂಡು ಮಂಚಣಾರ್ಯಂಗೆ—

ಪತಿಯಿಲ್ಲೆಂದು ಸಮರ್ಥವಾದ ಮಾತುಗಳಿಂದ (ಪರವಾದಿಗಳು) ಬಾಯೆತ್ತದಂತೆ ಮನ್ಮಥಾರಿಯಾದ ಶಿವನಭಕ್ತ ಮಂಚಣ್ಣಪಂಡಿತರು ನುಡಿದು ಗೆಲ್ಲಲು, ಸೋತುಹೋದ ಆ ಮಾಯಾಜಡರು ಗೆಲ್ಲಲು ಯಾವ ಮಾರ್ಗವನ್ನೂ ಕಾಣದೆ ಬಳಲಿ ಹೋಗಿ ಹೀಗೆಂದರು : ೫೪. ಎಲೈ ಶೈವಭಕ್ತನೇ, ಕಲಿತ ವಿದ್ಯಾಸಮೂಹದಿಂದ ಗೆದ್ದರೆ ತೀರಿತೇ ? ಹಲವು ಮಾತಿನಿಂದೇನು ಪ್ರಯೋಜನ ? ಸೋಲಿನ ಅತಿಶಯವನ್ನು ನಮಗೆ ನೀನೇ ಒಂದು ನಿದರ್ಶನ ಪೂರ್ವಕ ತೋರಿಸಿ ನಮ್ಮನ್ನು ಸೋಲಿಸಬೇಕು. ವ॥ ಎಂದು ಅವರು ನುಡಿಯಲಾಗಿ, ಕೇಳಿ, ಹಾಗೇ ಮಾಡುತ್ತೇನೆ, ಇದಾವ ಗಹನ ವಿಚಾರ ! ನಿಮ್ಮ ಒಡೆಯನಾದ ವಿಷ್ಣುವನ್ನು (ಹೊಟ್ಟೆಯಲ್ಲಿ ಹೂವುಳ್ಳವನನ್ನು) ಈಶ್ವರನ ಪಾದಗಳಿಗೆ ನಮಸ್ಕಾರ ಮಾಡುವಂತೆ ಮಾಡುವೆನು. ನೋಡಿಕೊಳ್ಳಿರಿ . ಎಂದು ಅಲ್ಲಿಂದ ಎದ್ದು ವಿಷ್ಣುವಿನ ಮಂದಿರದತ್ತ ನೋಡಿ, ಶಿವಭಕ್ತಗಣಗಳ ಚರಣ ಕಮಲಗಳನ್ನೂ ಮನಸ್ಸಿನಲ್ಲಿ ಧ್ಯಾನಮಾಡಿ—೫೫. 'ಎಲೈ ಚಕ್ರಧರನೇ, ನಿನ್ನ ಪ್ರಭು ವೆನಿಸುವ, ಸಮಸ್ತ ದೇವತೆಗಳಿಗೆ ಆಧಾರಸ್ಥಾನನಾದ ವಿಶ್ವಪತಿಗೆ ಈಗಲೆ ನಮಸ್ಕಾರ ಮಾಡಲಿಕ್ಕೆ ಬಾ' ಎನ್ನಲು ಕೇಳಿ ಕಂಸಾರಿಯಾದ ವಿಷ್ಣುವು ವಿಶೇಷಾನಂದಗೊಂಡು, (ದೇವಾಲಯದಿಂದ) ಒಲವಿನಿಂದ ಹೊರಹೊರಟು ಬಂದು ನಮಸ್ಕರಿಸಿ, 'ಭಕ್ತಶ್ರೇಷ್ಠ ನಾದ ಮಂಚಣ್ಣ ಪಂಡಿತನೇ, ಬದುಕಿದೆನು' ಎಂದು ಬಂದು ಆ ಭಕ್ತಸಮೂಹದವರೊಡ ನೊಂದಾದನು. (ಇದು) ಆಶ್ಚರ್ಯ ! ವ॥ ಆ ರೀತಿ 'ಶಿವಭಕ್ತಃ ಪ್ರಭುರ್ಮಮ' ಎಂದರೆ 'ಶಿವಭಕ್ತನೇ ನನ್ನ ಪ್ರಭುವು' ಎಂಬ ತನ್ನ ಮಾತನ್ನು (ತಾನಾಡಿಕೊಂಡ ಮಾತನ್ನು) ಎಲ್ಲ ರಿಗೂ ತಿಳಿಸಿ, ಆ ಭಕ್ತ ಶ್ರೇಷ್ಠನನ್ನೇ ಅನುಸರಿಸಿ ಬಂದು, ಬೇಗ ವಿಶ್ವಪತಿಗೆ ನಮಸ್ಕಾರ

ಪರವಾದಿಗಳೆರ್ದೆ ಕಂಪಿಸು
ತಿರೆ ಭಯದಿಂ ಬಳ್ಕಿ ಮಣಿದರಾ ಪೌರಜನಂ
ಕಿರಿದಚ್ಚರಿಪಟ್ಟೆಱಗಿದು
ದರಸಂ ವಿಸ್ಮಯದೆ ನವಿಸಿ ಕೀರ್ತಿಸುತಿರ್ದಂ ೫೬

ಹರಿಯನಭವಂಗೆ ಮಣಿಯಿಸಿ
ಹರಿಭಕ್ತರೆನಿಪ್ಪ ವಾದಿಗಳ ಮದಮಂ ಸಂ
ಹರಿಸಿದನಹಿತಮತದ್ವಿಪ
ಹರಿ ಮಂಚಣಪಂಡಿತಾರ್ಯನಚಳಿತ ಶೌರ್ಯಂ ೫೭

ಈಗಳುಮಾ ವಿಶ್ವೇಶನ
ಬಾಗಿಲಮುಂಗಡೆಯೊಳಡ್ಡಬಿಳ್ದಿರ್ದಪನಾ
ನಾಗರಿಪುಕೇತು ಹರನ ಮ
ಹಾ ಗರಿಮೆಗೆ ತಾನೆ ಸಾಕ್ಷಿಯೆನಿಸುತ್ತೀಗಳ್ ೫೮

ಹರಿ ವಿಶ್ವಾಧಿಕನೆಂದು
ರ್ವರೆಯೊಳ್ಪರಚುವ ಜಡರ್ಕಳಾ ಹರಿಯನದೇ
ನಿರದೇಳಿಸಲಾರ್ತರೆ ದು
ರ್ನರರಿದನಱಿದಿರ್ದುಮೇಕೆ ವಾರಿಸಲೊಲ್ಲರ್ ೫೯

ಪರಮ ಶಿವಭಕ್ತರೊಲ್ದೊಡೆ
ಹರಿ ಬಾಳ್ವಂ ಮುಳಿದೊಡಳಿವನೆಂತೆನೆ ಕೇಳ್ಭೂ
ವರ ಮುನ್ನಮೆರಡನೆಯ ಶಂ
ಕರನೆಸೆ ಪೆಸರ್ವೆತ್ತು ಮಿಸುಪ ಶಂಕರದಾಸಂ ೬೦

ಮಾಡಲಾಗಿ, ಆ ಕೂಡಲೆ ಕಂಡು ಮಂಚಣಾರ್ಯರಿಗೆ —೫೬. ಕಂಪಿಸುವ ಎದೆಯುಳ್ಳವರಾಗಿ ಪರವಾದಿಗಳು ಭಯದಿಂದ ಬಳುಕಿ ನಮಸ್ಕರಿಸಿದರು. ಆ ಪಟ್ಟಣದ ಜನರೆಲ್ಲ ಅತಿಶಯ ಆಶ್ಚರ್ಯದಿಂದ ನಮಸ್ಕಾರ ಮಾಡಿದರು. ಅರಸನು ವಿಸ್ಮಯಗೊಂಡು ನಮಸ್ಕಾರಮಾಡಿ ಸ್ತೋತ್ರ ಮಾಡತೊಡಗಿದನು. ೫೭. ವೈರಿಗಳ ಮತವೆಂಬ ಆನೆಗೆ ಸಿಂಹಪ್ರಾಯನೂ ದೃಢವಾದ ಶೌರ್ಯವಂತನೂ ಆದ ಮಂಚಣಾರ್ಯನು ವಿಷ್ಣುವನ್ನು ಈಶ್ವರನಿಗೆ ನಮಸ್ಕಾರ ಮಾಡುವಂತೆ ಮಾಡಿ, ಹರಿಭಕ್ತರೆನಿಸಿದ ವಾದಿಗಳ ಮದವನ್ನು ಸಂಹರಿಸಿದನು—೫೮. ಈಗಲೂ ಹರನ ಮಹಾಘನತೆಗೆ ಸಾಕ್ಷಿಯೆಂದೆನಿಸುತ್ತ ಆ ವಿಶ್ವೇಶ್ವರ ದೇವಾಲಯದ ಬಾಗಿಲ ಮುಂಭಾಗದಲ್ಲಿ ಗರುಡ ಧ್ವಜನಾದ ವಿಷ್ಣುವು ಅಡ್ಡಬಿದ್ದಿದ್ದಾನೆ. ೫೯. ಹರಿಯೇ ವಿಶ್ವಕ್ಕೆ ಅಧಿಕನೆಂದು ಭೂಮಂಡಲದಲ್ಲಿ ಪರಚಾಡುತ್ತಿರುವ (ಕಿತ್ತಾಡುತ್ತಿರುವ) ಮಂದಮತಿಗಳು, ಆ ವಿಷ್ಣುವನ್ನು ತಪ್ಪದೆ ತಿರಸ್ಕರಿಸಲು ಸಮರ್ಥರಾಗುವರೇನು ? ದುಷ್ಟ ನರರು ಇದನ್ನು ಅರಿತಿದ್ದೂ ಕೂಡ ಏಕೆ ನಿವಾರಿಸುತ್ತಿಲ್ಲ ? ೬೦–೬೧. ಪರಮಶಿವಭಕ್ತರು ಒಲಿದರೆ ವಿಷ್ಣುವು ಬಾಳುವನು. ಮುಳಿದರೆ ಅವನು ಅಳಿಯುವನು. ಹೇಗೆಂದರೆ–ಮಹಾರಾಜಾ, ಕೇಳು : ಪೂರ್ವಕಾಲದಲ್ಲಿ ದ್ವಿತೀಯ

ಪರದೈವವ್ರಾತಮಂ ಭಂಗಿಸಿ ಮೆಱೆದಿರೆ ಮಾತ್ಸರ್ಯದಿಂ ವೈಷ್ಣವಪ್ರೋ
ತ್ಕರಯುಕ್ತಂ ವಿಷ್ಣುಭಕ್ತಂ ಬರಿಸುತೆ ಜಗದೇಕಾದ್ಯಮಲ್ಲೋರ್ವಿಪಂ ಭೀ
ಕರದೈತ್ಯಾರಾತಿಯಂ ನೋಡೆನೆ ಮುಳಿದಳಿಕಾಭೀಳನೇತ್ರಾಗ್ನಿಯಿಂ ಸು
ಟ್ಟುರುಪುತ್ತಂ ವಿಷ್ಣುವಂ ಭಂಗಿಸಿದನದಱ ಶೂನ್ಯಾಲಯಂ ಸಾಕ್ಷಿಯಲ್ತೇ ೬೧

ಹರಭಕ್ತರಳವನೆಣಿಸುವೊ
ಡುರಗೇಂದ್ರ ಚತುರ್ಮುಖಾದ್ಯರುಂ ನೆಱೆವರೆ ಭೂ
ವರ ನಿನ್ನ ಕಟಕಿಯಂ ಕೇ
ಳ್ದುರುತರ ಮಹಿಮಾಂಕನೆಮ್ಮ ಭಾಸ್ಕರದೇವಂ ೬೨

ಬರಿಸಿದನಾ ಸೌರಾಷ್ಟ್ರದ
ಪುರದರಸನನೆಮ್ಮ ಪುರಿಗೆ ಸರ್ವರ್ಪಿರಿದ
ಚ್ಚರಿವಡೆ ಕಂಡಱಿದಿರ್ದುಂ
ನರೇಂದ್ರ ತದ್ಘನಮಹತ್ವಮಂ ಮರುಳಪ್ಪೈ ೬೩

ಅಳೆದೀವಂ ಘನಧಾನ್ಯಕೋಶ ವಿಳಸದ್ಧಾನ್ಯಂಗಳಂ ಕೋಟಿಗ
ಗ್ಗಳ ಲೆಕ್ಕಂ ಬಡೆದಿರ್ದ ನಿನ್ನ ಭಟಸಂದೋಹಕ್ಕೆ ತನ್ನಾಮಸಂ
ಕುಳಮಂ ಸಂಪುಟದಲ್ಲಿ ತಾಂ ಬರೆಯನಾ ಪಂಚಾಕ್ಷರೀಮಂತ್ರಮಂ
ಬಳವಂತಂ ಬರೆವಂ ಬಳಿಕ್ಕೆ ಸರಿಲೆಕ್ಕಂಗಾಣಿಸುತ್ತೋದುವಂ ೬೪

ಶಂಕರನೆಂದು ಖ್ಯಾತಿವೆತ್ತ ಪ್ರಕಾಶಿಸುವ ಶಂಕರದಾಸನು–ಪರದೈವ ಸಮೂಹವನ್ನು ಭಂಗಗೊಳಿಸಿ ಮೆರೆಯುತ್ತಿರಲಾಗಿ, ಮಾತ್ಸರ್ಯದಿಂದ ವಿಷ್ಣುಭಕ್ತರ ಸಮೂಹದಿಂದ ಕೂಡಿದ ವಿಷ್ಣುಭಕ್ತನಾದ ಜಗದೇಕಮಲ್ಲನೆಂಬ ಮಹಾರಾಜನು ಭೀಕರ ದೈತ್ಯಾಕಾರಿ ಯಾದ ವಿಷ್ಣುವನ್ನು ಬರಮಾಡಿಕೊಂಡು ನೋಡು ಎಂದು ತೋರಿಸಲು, ಕೋಪಗೊಂಡ ಶಂಕರದಾಸಿಮಯ್ಯನವರು ಹಣೆಯಲ್ಲಿರುವ ಭಯಂಕರವಾದ ತನ್ನ ನೇತ್ರದ ಬೆಂಕಿಯಿಂದ ಸುಟ್ಟು ಬೂದಿಮಾಡಿ ವಿಷ್ಣುವನ್ನು ಭಂಗಿಸಿದನು. (ಇದಕ್ಕೆ) ವಿಗ್ರಹ ರಹಿತವಾದ (ಶೂನ್ಯ) ಗುಡಿಯೇ ಸಾಕ್ಷಿಯಲ್ಲವೇ ? ೬೨-೬೩. ಹರಭಕ್ತರ ಸಾಮರ್ಥ್ಯವನ್ನು ಎಣಿಸುವುದಕ್ಕೆ ಆದಿಶೇಷ, ಬ್ರಹ್ಮನೇ ಮೊದಲಾದವರು ಸಮರ್ಥರಾದಾರೇ ? ಮಹಾ ರಾಜಾ, ನಿನ್ನ ಚುಚ್ಚು ನುಡಿಯನ್ನು ಕೇಳಿ, ಶ್ರೇಷ್ಠ ಮಹಿಮಾಶಾಲಿಯಾದ ನಮ್ಮ ಸೊಡ್ಡಳ ಬಾಚರಸನು ಆ ಸೌರಾಷ್ಟ್ರಪುರದ ಸೋಮೇಶ್ವರನನ್ನು ಸರ್ವಜನರೂ ಆಶ್ಚರ್ಯ ಪಡುವಂತೆ ನಮ್ಮ ಪಟ್ಟಣಕ್ಕೆ ಬರುವಂತೆ ಮಾಡಿದನು. ಮಹಾರಾಜಾ, ಆತನ ಈ ಘನವಾದ ಮಹತ್ವವನ್ನು ಕಂಡು ಅರಿತೂ ಕೂಡ ಹುಚ್ಚನಾಗಿದ್ದೀ ಯಲ್ಲಾ ! ೬೪. ಕೋಟಿ ಸಂಖ್ಯೆಗೂ ಮಿಕ್ಕಿದ ಲೆಕ್ಕವುಳ್ಳ ನಿನ್ನ ಭಟರುಗಳ ಸಮೂಹಕ್ಕೆ ಘನವಾದ ಧಾನ್ಯದ ಕೋಶದಲ್ಲಿರುವ ಶ್ರೇಷ್ಠ ಧಾನ್ಯವನ್ನು ಅಳೆದಳೆದುಕೊಡುತ್ತಿದ್ದಾನೆ. ಅವರ ಹೆಸರನ್ನು ಮಾತ್ರ ಪುಸ್ತಕದಲ್ಲಿ ಬರೆಯುವುದಿಲ್ಲ. ಬಲಯುತವಾದ ಪಂಚಾಕ್ಷರೀ ಮಂತ್ರವನ್ನೇ ಬರೆಯುತ್ತಾನೆ. ಬಳಿಕ (ಲೆಕ್ಕವನ್ನೊಪ್ಪಿಸುವಾಗ) ಹೆಸರು ಗಾಣಿಸಿ

ಇಂತಪ್ಪ ಮಹಿಮೆಯಿಂದೆ ನಿ
ತಾಂತಂ ಬಗೆಗೊಳಿಪ ಭಾಸ್ಕರಾರ್ಯನ ಪೆಂಪಂ
ನೀಂ ತಿಳಿದುಮನ್ಯರಂ ಕಂ
ಡಂತಿರೆ ಕಂಡಿಂತು ನುಡಿವುದನುಚಿತಮಲ್ತೇ ೬೫

ವ॥ ಎಂದಿಂತು ಸಿದ್ಧಾಂತವಿದ್ಯಾಧರಂ ನುಡಿದಲ್ಲಿ ಚತುರಭಕ್ತರಂ ಕಳುಪಿ ವಿಜ್ಞಾಪನ ಪೂರ್ವಕಮಾ ಸಭೆಗೆ ಭಾಸ್ಕರದೇವನಂ ಕರೆಯಿಸಿ—

ವಾದಕ್ಕೆಂದುಜ್ಜುಗಿಸಿದ
ವಾದಿಗಳಂ ಜಯಿಸಲೆಂದು ಬಸವಾಧಿಪನಾ
ಮೋದಂ ಮಿಗೆ ಬರಲಟ್ಟಿದ
ನಾದಂ ಪೋಗಲ್ಕೆವೇಳ್ಕುಮೆಂದಾ ಕ್ಷಣದೊಳ್ ೬೬

ವ॥ ಪರವಾದಿಜನಭಂಜನನೆಂಬ ಬಿರಿ[1]ದಿನ ತೊಡರ್ಝಣಝಣೆಸಲೆಳ್ದು ವೀರಭಕ್ತಪರಿವೃತಂ ಸಂಪೂರ್ಣಸಂಭ್ರಮದಿಂ ತದಾಸ್ಥಾನಕ್ಕೆ ಬಂದಲ್ಲಿರ್ದ ಶಿವಗಣಾಂಘ್ರಿಗವನತನಾಗಿ ಬಿಜ್ಜಳನತ್ತಲಭೀಕ್ಷಿಪುದುಮಾಗಳ್—

ಖಲಜನದುರುಕ್ತಿಮರುದು
ಜ್ವಲಕೋಪಕೃಶಾನುಧೂಮದೂಷಿತಮುಖಮಂ

ಓದಿ ಲೆಕ್ಕವನ್ನು ಸರಿಯಾಗಿ ಒಪ್ಪಿಸುವನು. ೬೫. ಈ ರೀತಿಯ ಮಹಿಮಾತಿಶಯ ದಿಂದ ಕಂಗೊಳಿಸುತ್ತಿರುವ ಸೊಡ್ಡಳಬಾಚರಸನ ಹಿರಿಮೆಯನ್ನು ತಿಳಿದೂಕೂಡ ಅನ್ಯ ರನ್ನು (ಸಾಮಾನ್ಯನನ್ನು) ಕಂಡ ಹಾಗೆ ಈ ರೀತಿ ಕಂಡು (ತಿರಸ್ಕರಿಸಿ) ನುಡಿಯುವುದು ಅನುಚಿತವಾಗುವುದಿಲ್ಲವೇ ? ವ॥ ಹೀಗೆಂದು ಸಿದ್ಧಾಂತದಲ್ಲಿ ವಿದ್ಯಾಧರನಾದ ಬಸ ವೇಶ್ವರನು ನುಡಿದು ಅಲ್ಲಿನ ಚತುರರಾದ ಭಕ್ತರನ್ನು ಕಳಿಸಿ ವಿಜ್ಞಾಪನ ಪೂರ್ವಕವಾಗಿ ಆ ಸಭೆಗೆ ಭಾಸ್ಕರದೇವ (ಸೊಡ್ಡಳ ಬಾಚರಸ) ನನ್ನು ಕರೆಯಿಸಲಾಗಿ —೬೬. ವಾದ ಕ್ಕೆಂದು ಸಿದ್ಧರಾಗಿರುವ ವಾದಿಗಳನ್ನು ಜಯಿಸುವುದಕ್ಕೆಂದು ಬಸವರಾಜನು ಸಂತೋಷಾ ಧಿಕ್ಯದಿಂದ ಬರಬೇಕೆಂದು ಹೇಳಿಕಳುಹಿಸಿದ್ದಾನೆ, ನಿಶ್ಚಯವಾಗಿ ಹೋಗಲೇಬೇಕು, ಎಂದು ಆ ಕ್ಷಣದಲ್ಲಿ. ವ॥ ಪರವಾದಿ ಜನಗಳನ್ನು ಭಂಗಗೊಳಿಸುವವನೆಂಬ ಬಿರುದಿನ ಆಭರಣವು (ಬಿರುದಿನ ಬಳೆಯು) ಝಣ ಝಣ ಎಂದು ಝಣತ್ಕಾರಮಾಡು ತ್ತಿರುವಂತೆ ಎದ್ದು ವೀರರಾದ ಅನೇಕ ಜನ ಭಕ್ತರುಗಳಿಂದ ಸುತ್ತುವರಿಯಲ್ಪಟ್ಟವನಾಗಿ ಸಂಪೂರ್ಣ ಸಡಗರದಿಂದ ಬಿಜ್ಜಳ ಭೂಪಾಲನ ಆಸ್ಥಾನಕ್ಕೆ ಬಂದು ಅಲ್ಲಿದ್ದ ಶಿವಗಣಗಳ ಪಾದಗಳಿಗೆ ತಲೆಬಾಗಿದವರಾಗಿ, ಬಿಜಳನತ್ತ ನೋಟ ಬೀರಲು ಆಗ—೬೭. ದುಷ್ಟರಾದ ಜನರುಗಳ ಕೆಟ್ಟ ಮಾತುಗಳೆಂಬ ಗಾಳಿಯಿಂದ ಉಜ್ವಲಗೊಂಡ ಕೋಪವೆಂಬ ಬೆಂಕಿಯು

1 ರು(ಚ, ಮ)

ಡಲನಪಗತಮತಿಮದವಿ
ಹ್ವಲನರುಣತನೇತ್ರನೀಕ್ಷಿಸುತ್ತಿಂತೆಂದುಂ ೬೭

ಪುರಹರಭಕ್ತಿ ನಿನ್ನ ಶಿರದೊಳ್ಮೊಳೆದೋಱಿತೆ ಶೈವಸಾರಸ
ಚ್ಚರಿತಕೆ ನೀನೆ ಭಾಜನನೆ ಬಾರದೆ ಪೋದೆ ಸಮಸ್ತರೆಲ್ಲರುಂ
ಬರೆ ನೆಱೆ ಕಂಡುಮೀ ಭುವನಪಾಲಕ ವಿಷ್ಣುವ ಸುಪ್ರತಿಷ್ಠೆಯುಂ
ವಿರಚಿಪ ಕಾಲದೊಳ್ಸಭೆಗೆ ಕೇಳ್ನಿನಗೆನ್ನದೊ ಮಾನದೆಳ್ತರಂ ೬೮

ವ॥ ಎಂದರಸನ ವಿರಸೋಕ್ತಿಗೇಳ್ದು ಭಾಸ್ಕರಂ ನಿದಾಘಭಾಸ್ಕರನಂತೆ ಕಾಯ್ಪೇಱಿಮಸಗಿ—

ಭುವನಮನೆಲ್ಲಮಂ ಪದೆದು ಪಾಲಿಪನೀ ಹರಿಯೆಂದಪೈ ಧರಾ
ಧವ ಭವಭಾಳನೇತ್ರದುರಿಯಿಂದುರಿವಂದು ನಿಜಾತ್ಮಜಾತನೊ
ಪ್ಪುವ ನಿಜಶಕ್ತಿಯೆತ್ತ ಸರಿದತ್ತೊ ಜಗತ್ರಯಪಾಲನಾದವಂ
ಭವದೊಳೆ ಬಂದು ತಾನಳಿವನೇ ಶಿವನೊರ್ವನೆ ವಿಶ್ವಪಾಲಕಂ ೬೯

ಅಜನಖಿಳ ಚರಾಚರಮಂ
ಸೃಜಿಸುವನೆಂಬೊಡೆ ನಿಜೋತ್ತಮಾಂಗಮಮುಳಿವಂ
ಗಜರಿಪುವರಿದೊಡದು ತಾಂ
ಸೃಜಿಸಿಕೊಳಲ್ಕಾಱನೇಕೆ ನೋಡವನಿರವಂ ೭೦

ಹೊಗೆಯಿಂದ ಕಪ್ಪಿಟ್ಟ (ಕೊಳೆಯಾದ) ಮುಖ ಮಂಡಲವುಳ್ಳವನೂ, ಬುದ್ಧಿಯನ್ನು ಕಳೆದುಕೊಂಡು ಮದದಿಂದ ವ್ಯಾಕುಲಗೊಂಡವನೂ, ಕೆಂಪಾದ ಕಣ್ಣುಳ್ಳವನೂ ಆದ ಆ ಬಿಜ್ಜಳನು (ಬಾಚಿರಾಜನನ್ನು) ನೋಡಿ ಹೀಗೆಂದನು : ೬೮. 'ಹೇ ಬಾಚರಸನೇ ಕೇಳು : ಈ ಭೂಲೋಕ ಪಾಲಕನಾದ ವಿಷ್ಣುವಿನ ಶ್ರೇಷ್ಠವಾದ ಪ್ರತಿಷ್ಠಾಪನಾ ಮಹೋತ್ಸವದ ಸಭೆಗೆ ಸಮಸ್ತ ಜನರೂ ಬಂದರು. ಪರಮೇಶ್ವರನ ಭಕ್ತಿಯು ನಿನ್ನ ತಲೆಯಲ್ಲಿ ಮೊಳಕೆಯೊಡೆದಿರುವುದೋ ! ಶೈವಭಕ್ತಿಯ ಶ್ರೇಷ್ಠ ಚಾರಿತ್ರ್ಯಕ್ಕೆ ನೀನೊಬ್ಬನೇ ಭಾಜನನೋ ಎನ್ನುವಂತೆ ಗೊತ್ತಿದ್ದರೂ ಕೂಡ ಬಾರದೆಹೋದೆ. ಇದು ನಿನ್ನ ಗರ್ವದ ಆಧಿಕ್ಯವಲ್ಲವೇ ? ವ॥ ಹೀಗೆಂದು ನುಡಿದ ಅರಸನ ವಿರಸ ಪೂರ್ಣವಾದ ಮಾತನ್ನು ಕೇಳಿ, ಭಾಸ್ಕರನು ಬೇಸಿಗೆಯ ಸೂರ್ಯನಂತೆ ಕಾವೇರಿ ಕೋಪಗೊಂಡು —೬೯. 'ಮಹಾರಾಜಾ, ಈ ಹರಿಯು ಭುವನವನ್ನೆಲ್ಲ ಪ್ರೀತಿಯಿಂದ ರಕ್ಷಿಸುತ್ತಿದ್ದಾನೆಂದು ಹೇಳುತ್ತಿರುವೆಯೊ ! ಪರಮೇಶ್ವರನ ಹಣೆಗಣ್ಣಿನುರಿಯಿಂದ ತನ್ನ ಮಗನಾದ ಮನ್ಮಥನು ಉರಿಯುತ್ತಿದ್ದಾಗ ಶೋಭಿಸುವ ಅವನ ಶಕ್ತಿಯು ಎಲ್ಲಿಗೆ ಹೋಗಿತ್ತು ? ಮೂರು ಲೋಕಗಳ ಪಾಲಕನೆನಿಸುವವನು ಭವದಲ್ಲಿ ಹುಟ್ಟಿಬಂದು, ತಾನು ಸಾಯುವನೇ ? (ಆದ್ದರಿಂದ) ಶಿವನೊಬ್ಬನೇ ವಿಶ್ವಪಾಲಕನು.' ೭೦. 'ಬ್ರಹ್ಮನು ಸಮಸ್ತ ಚರಾಚರವನ್ನೆಲ್ಲ ಸೃಷ್ಟಿಸಿದನೆನ್ನುವುದಾದರೆ, ಗಜಾಸುರ ವೈರಿಯಾದ ಶಿವನು ಕೋಪಗೊಂಡು ಅವನ ಶಿರಸ್ಸನ್ನು ಕತ್ತರಿಸಿ ಹಾಕಲಾಗಿ, ತಾನೇ ಏಕೆ (ಹಾಗೆ ಕತ್ತರಿಸಿ ಹೋದ ತಲೆಯನ್ನು) ಸೃಷ್ಟಿಸಿಕೊಳ್ಳಲಿಲ್ಲ ? ಅವನ ಇರುವಿಕೆಯನ್ನು ನೋಡಬಾರದೇ ?'

ಜಿನಬುದ್ಧರ್ಕಳನೆಂತು ದೇವರೆನಲಕ್ಕುಂ ವೇದಬಾಹ್ಯರ್ಕಳಂ
ಮನುಜಾಕಾರದೊಳಿರ್ಪರಂ ಮಹಿಮೆಗೇವಂ ದೂರಮಾಗಿರ್ದರಂ
ತನು ಲೋಕಾಕೃತಿವೆತ್ತ ಮಾಯೆ ಜಡಮೆಂದುಂ ಮಾಯೆ ತಾಂ ದೈವಮ
ಲ್ತು ನಿತಾಂತಂ ಶ್ರುತಿ ಸೋಮಕಾಪಹೃತಮೆಂತುಂ ದೈವಮೇನಪ್ಪುದೇ ೭೧

ಬಗೆವೊಡೆ ಕರ್ಮಮೇ ಧರೆಗೆ ದೈವಮದೆಂಬೊಡೆ ದಕ್ಷ ಚಂಡರೊ
ಳ್ನೆಗಳ್ದ ಸುಕರ್ಮ ದುಷ್ಕೃತರ ಕರ್ಮಯುಗಂ ಫಲವೈಪರೀತ್ಯದಿಂ
ಜಗದೊಳದೆಂತು ತೋಱಿದುದೊ ಶಂಕರನಿಚ್ಛೆಯಿನಚ್ಯುತಾಜವ
ಜ್ರಿಗಳಭವಾಜ್ಞೆಯುಂ ಶಿರದೊಳಾಂತೆಸಪರ್ಸಲೆ ನೈಜ ಕರ್ಮಮಂ ೭೨

ಏಕ ಏವ ರುದ್ರಯೆಂಬಸದ್ವಿತೀಯಯೆಂಬ ಸು
ಶ್ಲೋಕವೇದವಾಕ್ಯದಿಂದಜಾಚ್ಯುತಾದಿ ನಿರ್ಜರಾ
ನೀಕ ಸರ್ವಜೀವಯುಕ್ತ ವಿಷ್ಟಪತ್ರಯಕ್ಕೆ ಗೌ
ರೀಕಳತ್ರನೆಮ್ಮ ಶಂಭುವೊರ್ವನಲ್ತೆ ವಲ್ಲಭಂ ೭೩

೭೧. ಜಿನ ಬುದ್ಧರುಗಳನ್ನು ದೇವರೆಂದು ಹೇಳಲು ಹೇಗಾದೀತು ! ವೇದಬಾಹ್ಯರನ್ನು, ಮನುಷ್ಯಾಕಾರದಿಂದಿರುವವರನ್ನು, ಮಹಿಮಾತಿಶಯಕ್ಕೆ ಯಾವಾಗಲೂ ದೂರವಾಗಿರುವವರನ್ನು ದೈವವೆನ್ನಬಹುದೇ ? ಲೋಕದಲ್ಲಿ ಆಕಾರಗೊಂಡ ತನುವು ಜಡವೆನಿಸಿ (ಅಜ್ಞಾನದಿಂದ ಕೂಡಿದುದೆನಿಸಿ) ಮಾಯಾತನುವಾಗುವುದು. ಆ ಮಾಯೆಯು ತಾನು ದೈವವಲ್ಲ. ಅಧಿಕವೆನಿಸಿದ ಶ್ರುತಿಯು ಸೋಮಕನೆಂಬ ರಾಕ್ಷಸನಿಂದ ಅಪಹರಿಸಲ್ಪಟ್ಟು ಹೇಗೂ ಅದು ದೈವವೆನಿಸೀತೇ ? ೭೨. ವಿಚಾರಮಾಡಿ ನೋಡಿದರೆ ಕರ್ಮವೇ ಭೂಲೋಕದಲ್ಲಿ ದೈವವೆಂದೆನ್ನುವೆಯಾದರೆ ದಕ್ಷನು ಮಾಡಿದ ಯಾಗವೂ ಚಂಡನೆಂಬ ಶಿವಶರಣನು ತಂದೆಯನ್ನು ಕೊಂದು ಮಾಡಿದ ದುಷ್ಕರ್ಮವೂ ಜಗತ್ತಿನಲ್ಲಿ ಫಲವೈಪರೀತ್ಯದಿಂದ ಹೇಗೆ ತೋರಿತು ? (ಅಂದರೆ ದಕ್ಷನು ಮಾಡಿದ ಯಜ್ಞವು ಸತ್ಕರ್ಮವೆನಿಸಿದರೂ ಅವನ ನಾಶಕ್ಕೆ ಕಾರಣವಾಯಿತು ; ಚಂಡನು ತನ್ನ ತಂದೆಯನ್ನೇ ಕೊಂದು ಕರ್ಮವು ಮೋಕ್ಷಕ್ಕೆ ಕಾರಣವಾಯಿತು. ಹೀಗೆ ಫಲದಲ್ಲಿ ವೈಪರೀತ್ಯ ಕಾಣಲಿಲ್ಲವೇ ?) ಶಂಕರನ ಇಚ್ಛೆಯನ್ನನುಸರಿಸಿ, ವಿಷ್ಣು ಬ್ರಹ್ಮ. ದೇವೇಂದ್ರಾದಿಗಳು ಅವನು ಮಾಡಿದ ಆಜ್ಞೆಯನ್ನು ಶಿರಸಾವಹಿಸಿ ನಿಜವಾದ ಕ್ರಿಯೆಗಳನ್ನು ಮಾಡುವವರಲ್ಲವೇ ! ೭೩. ರುದ್ರನೊಬ್ಬನೇ ಪರಬ್ರಹ್ಮನು, ಅವನಿಗಿಂತ ಭಿನ್ನವಾದ ಇನ್ನೊಬ್ಬ ಎರಡನೆಯವನಿಲ್ಲ, ಹೀಗೆನ್ನುವ ವೇದದ ಶ್ರೇಷ್ಠ ವಚನದಿಂದ ಬ್ರಹ್ಮ, ವಿಷ್ಣುಗಳೇ ಆದಿಯಾದ ದೇವತೆಗಳ ಸಮೂಹಕ್ಕೆ ಸಮಸ್ತ ಜೀವಕೋಟಿಯಿಂದ ಕೂಡಿದ ಸ್ವರ್ಗಮರ್ತ್ಯಪಾತಾಳಾದಿ ಮೂರು ಲೋಕಗಳಿಗೆ ಗೌರಿಯನ್ನೇ ವಧುವನ್ನಾಗಿ ಉಳ್ಳ ನಮ್ಮ ಶಂಭುವು ಒಬ್ಬನೇ ಗಂಡ

ಯಸ್ಮಾನ್ನಾಪರಮಸ್ತಿ ಕಿಂಚಿದೆನುತುಂ ವಿಶ್ವಾಧಿಕೋ ರುದ್ರ್ರಯೆಂ
ದಸ್ಮದ್ದೇವನನೇಳ್ಗೆಯಿಂದೆ ಶಿವ ಏಕೋ [1]ದೇವ[1]ಯೆಂದುರ್ವುತುಂ
ತಸ್ಮಾತ್ಸರ್ವಗತಃ ಶಿವಃ ಶ್ರುತಿಯುತಂ ವೇದಾಂತವಾಕ್ಯಾಳಿ ಸ
ರ್ವಸ್ಮಾರ್ತೋಕ್ತ್ಯುಪಬೃಂಹಿತಂ ಮೊಱೆಗುಮೆಲ್ಲಾ ಲೋಕದೊಳ್ಸಂತತಂ ೭೪

ಅದಱಿಂ ಶಿವನೊರ್ವನೆ ಜಗ
ದುದಯ ಸ್ಥಿತಿ ಲಯಕೆ ತಾನೆ ಕರ್ತಾರಂ ಕೇ
ಳ್ವಿದಿತವಿದು ಸರ್ವಶಾಸ್ತ್ರೌ
ಘದೊಳೀಶಂಗೆಣೆಯೆನಿಪ್ಪ ದೇವನುಮೊಳನೇ ೭೫

ಹರಿಮುಖರೀಶನ ಪಂಚಾ
ವರಣದೆ ಗುಡಿಯಲ್ಲಿ ನಿಂದು ಸೇವಿಪ ಭೃತ್ಯ
ರ್ಧರೆಯೆಲ್ಲಂ ಬಲ್ಲುದಿದಂ
ಕರಕಂಕಣವೀಕ್ಷಣಕ್ಕೆವೇಳ್ಕುಮೆ ಮುಕುರಂ ೭೬

ಸಲೆ ನಿತ್ಯಕರ್ಮರಹಿತಾ
ಮಲಿನಾಂಗ ಮಹೇಶ್ವರಂಗೆ ಸರಿವರ್ಪರೆ ಪೇ
ಳೆಲೆ ನಶ್ವರ ಕರ್ಮಾವಿಲ
ಮಲಿನಾಂಗಸಮೇತ ಶೌರಿಮುಖದಿವಿಜರ್ಕಳ್ ೭೭

(ಒಡೆಯ)ನಲ್ಲವೇ ! ೭೪. ಸತತವೂ ಎಲ್ಲಾ ಲೋಕಗಳಲ್ಲಿ ಯಾವನಿಗಿಂತ ಬೇರೆಯು ದಾದ ಇನ್ನೊಂದು ಸ್ವಲ್ಪವೂ ಇಲ್ಲ ಎಂದೆನ್ನುವ, ರುದ್ರನು ಪ್ರಪಂಚಕ್ಕೆಲ್ಲ ಅಧಿಕನು ಎಂದೆನ್ನುವ, ನನ್ನ ಆ ದೇವನಾದ ಶಿವನನ್ನು ಅತಿಶಯವಾಗಿ ಶಿವನೊಬ್ಬನೇ ದೇವ ನೆಂದು ಉಬ್ಬುಬ್ಬಿ ಹೇಳುವ, ಶಿವನು ಸರ್ವವನ್ನು ವ್ಯಾಪಿಸಿದವನು, ಎಂಬ ವೇದದಲ್ಲಿ ಸೇರಿರುವ ಉಪನಿಷತ್ ವಾಕ್ಯ ಸಮೂಹಗಳು, ಸಕಲ ಸ್ಮೃತಿ ಸಂಬಂಧವಾದ ವಚನ ಗಳು, ಉಪಬೃಂಹಣ ವಾಕ್ಯಗಳು ಕೂಗುತ್ತಿವೆಯಲ್ಲವೇ ! ೭೫. ಆದಕಾರಣ ಶಿವ ನೊಬ್ಬನೇ ಸೃಷ್ಟಿ, ಸ್ಥಿತಿ, ಲಯಗಳಿಗೆ ತಾನೇ ಕರ್ತಾರನು, ಕೇಳು : ನಾನು ಹೇಳುವ ಈ ಮಾತು ಪ್ರಸಿದ್ಧವಾದುದು. ಸಮಸ್ತ ಶಾಸ್ತ್ರ ಸಮೂಹದಲ್ಲಿ ಈಶ್ವರನಿಗೆ ಸಮಾನ ನೆನಿಸುವ ಇನ್ನೊಬ್ಬ ದೇವನಿದ್ದಾನೆಯೇ ? ೭೬. ವಿಷ್ಣು ಮೊದಲಾದವರು ಶಿವಾ ಲಯದ ವಿಸ್ತಾರವಾದ ಆವರಣದಲ್ಲಿ ನಿಂತುಕೊಂಡು ಸೇವಿಸುವ ಸೇವಕರು. ಈ ಮಾತನ್ನು ಲೋಕವೆಲ್ಲ ಬಲ್ಲುದು. ಕೈಯಲ್ಲಿರುವ ಕಂಕಣವನ್ನು ನೋಡಿಕೊಳ್ಳುವುದಕ್ಕೆ ಕನ್ನಡಿ ಬೇಕಾಗುವುದೇ ? ೭೭. ಎಲೈ ನರೇಶ್ವರನೇ, ಯಾವ ಪ್ರತಿನಿತ್ಯದ ದೇವತಾ ಉಪಾಸನೆಯೇ ಮೊದಲಾದ ನಿತ್ಯಕರ್ಮಗಳಿಲ್ಲದ ಪರಿಶುದ್ಧವಾದ ಶರೀರವುಳ್ಳ ಮಹೇಶ್ವರನಿಗೆ ಸ್ಥಿರವಲ್ಲದ (ಶಾಶ್ವತವಲ್ಲದ) ಕರ್ಮಾವಲಂಬಿಗಳೂ ಮಲಿನವಾದ ಅಂಗವುಳ್ಳವರೂ ಆದ ವಿಷ್ಣುವೇ ಮುಖ್ಯರಾದ ದೇವತೆಗಳು ಸರಿಯೆನಿಸುವರೇ ? ಹೇಳು.

1 ಧ್ಯೇಯ(ಚ, ಮು, ಜ, ಗ), ದೆಯ(ಅ)

ಭವಮರಣರಹಿತ ಪಶುಪಾ
ಶವಿಮೋಚಕ ಶಂಕರಂಗೆ ತೋಡಪ್ಪರೆ ಪೇ
ಳ್ಭವಮರಣಯುಕ್ತ ಪಾಶ
ಪ್ರವಿಬದ್ಧರ್ಪಶುಗಳೆಣೆಯೆ ಪಶುಪತಿಗನಿಶಂ ೭೮

ಲಯದೂರಂಗೆ ಲಯಾನ್ವಿತರ್ಸತತ ಪೂಜ್ಯಂಗೆಯ್ದೆ ತತ್ಪೂಜಕರ್
ಜಯಯುಕ್ತಂಗೆ ಪರಾಜಿತರ್ತ್ರಿಪುರದೈತ್ಯಧ್ವಂಸಕಂಗಾ ಪುರ
ತ್ರಯದೈತ್ಯಾಹತಶೌರ್ಯರುಗ್ರಗರಭಕ್ಷಂಗದ್ಭುತಕ್ಷ್ವೇಡಜ
ಕ್ಷಯಭೀತರ್ ಸರಿಯಕ್ಕುಮೇ ತೊಣೆಯೆ ಪೇಳ್ಕಾಮಾರಿಗಾ ಕಾಮುಕರ್ ೭೯

ಅಂಧಕ ಜಲಂಧರಾಸುರ
ಸಿಂಧುರ ಪಂಚಾನನಂಗೆ ದೊರೆಯಕ್ಕುಮೆ ಪೇ
ಳಂಧಕ ಜಲಂಧರಾಸುರ
ಬಂಧನ ಸಂಪ್ರಾಪ್ತಭೀತಸುರಸಂಜಾತಂ ೮೦

ಕಾಲಾರಿಗೆಣೆಯೆ ಕಾಲಕ
ರಾಲಾನನಮಗ್ನರಜಕಪಾಲಾಚ್ಯುತಕಂ

೭೮. ಹುಟ್ಟು ಸಾವುಗಳಿಲ್ಲದ, ಮಾಯೆಗೆ ಕಾರಣಗಳೆನಿಸಿದ ಪಶು–ಪಾಶಗಳನ್ನು ವಿಮೋಚನಗೊಳಿಸಿದ ಸುಖದಾಯಕನಾದ ಪಶುಪತಿಗೆ ಹುಟ್ಟು ಸಾವುಗಳುಳ್ಳವರೂ, ಮಾಯೆಯೆಂಬ ಪಾಶದಿಂದ ಕಟ್ಟಲ್ಪಟ್ಟವರೂ ಎನಿಸಿ ಪಶುಗಳೆನಿಸಿದ ದೇವತೆಗಳು ಸಮಾನರೆನಿಸಿ ಲೆಕ್ಕಕ್ಕೆ ಬರುವರೇ ಹೇಳು. ೭೯. ಲಯವಿಲ್ಲದವನಿಗೆ (ನಾಶವೇ ಇಲ್ಲದವನಿಗೆ) ನಾಶವನ್ನುಳ್ಳವರೂ, ಸತತವೂ ಪೂಜಿಸಲ್ಪಡುವುದಕ್ಕೆ ಯೋಗ್ಯನೆನಿಸಿದವನಿಗೆ, ಅವನನ್ನು ಪೂಜಿಸುವವರೂ, ಮೂರು ಪುರಗಳನ್ನು ನಾಶಮಾಡಿ ಅಲ್ಲಿನ ಮೂರುಜನ ರಾಕ್ಷಸರನ್ನೂ ಜಯಿಸಿದ ಪರಮೇಶ್ವರನಿಗೆ, ಅದೇ ಮೂರು ಪುರಗಳ ದೈತ್ಯರಾದ ತಾರಕಾಕ್ಷ, ಮಕರಾಕ್ಷ, ವಿದ್ಯುನ್ಮಾಲಿ ಎಂಬ ಮೂರು ಜನ ರಾಕ್ಷಸರಿಂದ ತಮ್ಮ ಪರಾಕ್ರಮವನ್ನು ನಾಶಗೊಳಿಸಿಕೊಂಡವರೂ, ಭಯಂಕರವಾದ ಕಾಲಕೂಟವಿಷದ ಭಕ್ಷಕನೆನಿಸಿದ ಶಿವನಿಗೆ ಅದ್ಭುತವಾದ ಆ ಕಾಲಕೂಟ ವಿಷದಿಂದಲೇ ನಾಶವಾಗುವೆವೆಂಬ ಹೆದರಿಕೆಯಿಂದ ಕೂಡಿದವರೂ, ಕಾಮನಿಗೆ ಶತ್ರುವೆನಿಸಿದ ಶಿವನಿಗೆ ಕಾಮುಕರಾದ ಆ ದೇವತೆಗಳೂ ಸರಿಯಾದಾರೇ ? ಸಾಮ್ಯವೆನಿಸುವರೇ ? ಹೇಳು. ೮೦. ಅಂಧಕಾಸುರ, ಜಲಂಧರಾಸುರರೆಂಬ ಆನೆಗಳಿಗೆ ಸಿಂಹನೆನಿಸಿದ ಶಿವನಿಗೆ ಆ ಅಂಧಕಾಸುರ, ಜಲಂಧರಾಸುರರಿಂದ ಬಂಧಿಸಲ್ಪಟ್ಟು ಯಾವ ದೇವತೆಗಳು ಭೀತಿಯಿಂದ ಕೂಡಿದವರಾದರೋ ಅಂಥವರು ಸಮಾನರಾಗುವರೇ ? ೮೧. ಯಮನಿಗೆ ವೈರಿಯಾದ ಶಿವನಿಗೆ ಯಮನ ಭಯಂಕರವಾದ ಮುಖದಲ್ಲಿ ಮುಳುಗಿಹೋಗಿರುವವರೂ, ಬ್ರಹ್ಮನ ಶಿರದ ಪಾತ್ರೆ (ಕಪಾಲ ಪಾತ್ರೆ)

ಕಾಲಧರಂಗಾ ವಿಧಿವನ
ಮಾಲಿಮುಖರ್ಸರಿಯೆ ಕಲ್ಪಕಾಲಾಂತಗತರ್ ೮೧

ಸರ್ವಜ್ಞನನಲ್ಪಜ್ಞ
ರ್ಸವಾರ್ಧೀಶನನನೀಶರುಪಗತವಿಲಸ
ತ್ಸರ್ವೈಶ್ವರ್ಯನನಪಗತ
ಸರ್ವೈಶ್ವರ್ಯರ್ಕ್ಕಳೆಂತುಮೋಂ ಪೋಲ್ವರೆ ಪೇಳ್ ೮೨

ಶ್ರೀಲಿಂಗಾಮಳಮೂರ್ತಿಗೆಮ್ಮಯ ಮಹಾಸೊಡ್ಡಾಳದೇವಂಗಸ
ಡ್ಡಾಳಾಮರ್ತ್ಯರದೇಂ ಸಮಾನರೆ ತದಂಗಾಂತಃಸ್ಥಿತರ್ವ್ಯರ್ಥವಾ
ದಾಳಾಪಂ ಸಲೆ ಸಾಲ್ಗುಮಚ್ಯುತನ ಕಣ್ಪಾದಾಬ್ಜದೊಳ್ಬೊಮ್ಮನಾ
ಭೀಳಂ ಪಂದಲೆ ಪಾಣಿಯೊಳ್ಪೊಳಗೆ ತಾಳ್ದಂಗಂತವರ್ಸಾಟಿಯೇ ೮೩

ಹರನುಗ್ರಂ ಪಶುಪತಿ ಶಂ
ಕರನಭವಂ ಕಾಮರಿಪು ಮಹಾದೇವನುಮೀ
ಶ್ವರನಮೃತಂ ಶಂಭು ಶಿವಂ
ಪರಮೇಶ್ವರನೆಂಬ ನಾಮಮನ್ಯರ್ಗೊಳವೇ ೮೪

ವಿಶ್ವಪತಿ ವಿಶ್ವನಾಥಂ
ವಿಶ್ವಾಧಿಕನೆಂಬ ನಾಮಮಭವಂಗೆಂದುಂ
ಶಾಶ್ವತಮಿದನಱಿದಿರ್ದುಂ
ವಿಶ್ವಾಸವಿಹೀನರನ್ಯರು ಸರಿಗಾಣ್ಬರ್ ೮೫

ಯನ್ನು, ವಿಷ್ಣುವಿನ ಬೆನ್ನಿನ ಮೂಳೆ (ಕಂಕಾಲ)ಯನ್ನು ಧರಿಸಿದ ಶಿವನಿಗೆ ಪ್ರಳಯ ಕಾಲದಲ್ಲಿ ನಾಶಹೊಂದಿದ ಆ ಬ್ರಹ್ಮ ವಿಷ್ಣುಗಳೇ ಮುಖ್ಯರಾದ ದೇವತೆಗಳು ಸರಿಯೆನಿಸುವರೇ ? ೮೨. ಸರ್ವಜ್ಞನೆನಿಸಿದ ಶಿವನನ್ನು, ಅಲ್ಪಜ್ಞರೆನಿಸಿದವರೂ, ಸರ್ವ ಬ್ರಹ್ಮಾಂಡಕ್ಕೆ ಒಡೆಯನೆನಿಸಿದ ಪರಮೇಶ್ವರನಿಗೆ ಸ್ವಾಮಿಗಳೇ (ಒಡೆಯರೇ) ಅಲ್ಲದವರೂ ಸಮಸ್ತ ಸಂಪತ್ತನ್ನು ಹೊಂದಿ ಪ್ರಕಾಶಿಸುವ ಈಶ್ವರನಿಗೆ, ಸಮಸ್ತ ಐಶ್ವರ್ಯವನ್ನು ಕಳೆದುಕೊಂಡವರೂ ಆದ ದೇವತೆಗಳು ಯಾವ ರೀತಿಯಿಂದಲಾದರೂ ಹೋಲುವರೇ ಹೇಳು ! ೮೩. ನಮ್ಮ ಮಂಗಳಕರವಾದ ಶಿವಲಿಂಗದ ಪರಿಶುದ್ಧಮೂರ್ತಿಗೆ, ಮಹಾಲಕ್ಷ್ಯವೆನಿಸಿದ ಮಹಾದೇವನಿಗೆ, ಅವನ ಅಂಗದಲ್ಲಿ ಅಂತರ್ಭಾವಗೊಂಡ ಅಸಡ್ಡಳ (ಅಲಕ್ಷ್ಯ) ರಾದ ದೇವತೆಗಳು ಸಮಾನರಾದರೇನು ? ವಿಷ್ಣುವಿನ ನೇತ್ರವು ಪಾದಕಮಲದಲ್ಲೂ, ಬ್ರಹ್ಮನ ಭಯಂಕರ ಹಸಿಯ ತಲೆ ಕೈಯಲ್ಲೂ ಪ್ರಕಾಶಿಸುವಂತೆ ಧರಿಸಿದವನಿಗೆ ಅವರು ಸಮಾನರೆನಿಸುವರೇ ? ಸಾಕು. ೮೪. ಹರ, ಉಗ್ರ, ಪಶುಪತಿ, ಶಂಕರ, ಅಭವ, ಕಾಮರಿಪು, ಮಹಾದೇವ, ಈಶ್ವರ, ಅಮೃತ, ಶಂಭು, ಶಿವ, ಪರಮೇಶ್ವರ–ಎಂಬ ಹೆಸರುಗಳು ಬೇರೆ ದೇವತೆಗಳಿಗೆ ಇರುವುವೇ ? ೮೫. ವಿಶ್ವಕ್ಕೆಲ್ಲ ಪತಿ, ವಿಶ್ವಕ್ಕೆಲ್ಲ ಒಡೆಯ, ವಿಶ್ವದಲ್ಲೆಲ್ಲ ಅಧಿಕನೆಂಬ ಹೆಸರುಗಳು ಪರಮೇಶ್ವರನಿಗೆ ಯಾವಾಗಲೂ ಶಾಶ್ವತವಾದವುಗಳು. ಇವನ್ನು ತಿಳಿದೂಕೂಡ, ವಿಶ್ವಾಸಹೀನರು ಅನ್ಯರಾದ ಬ್ರಹ್ಮ

ಪಶು ಪಶಿಯುಪ್ಪನೆ ಪತಿ ತಾಂ
ಪಶುವಪ್ಪನೆ ಪಶುಗಳಜಹರಿಪ್ರಮುಖರಣಂ
ಪಶುಪತಿಯೇ ಶಿವಂ ಶಿವನೇ
ವಿಶದ ಪರಬ್ರಹ್ಮವೆಂಬ ವಾಕ್ಯಮೆ ಸತ್ಯಂ ೮೬

ವರ ಸುಮತಿಸೂರಿಗಳ್ಸಲೆ
ಹರಪದಮಂ ವಿಷ್ಣುಪದದಿನಗ್ಗಳಗಾಣ್ಬ
ರ್ಪರಮಾರ್ಥಂ ತದ್ವಿಷ್ಣೋಃ
ಪರಮಂ ಪದಮೆಂಬ ವೇದಮಿದಜ್ಕೊಳ್ಪವಣಂ ೮೭

ಕಂತುಹರಂ ಸುರರ್ಗಧಿಕನೆಂದೆರ್ದೆಯೊಳ್ಸಲೆ ತಾಳ್ದರುಣ್ಬುದೇ
ಸಂತತ ಸಾರಮಪ್ಪಮರ್ದುಗೂಳದನೊಲ್ಲದ ಶಾಪದಗ್ಧದು
ರ್ಭ್ರಾಂತನರರ್ಕಳುಣ್ಬುದೆ ಪುರೀಷಮೆನುತ್ತಮೆ ವೇದಮಂತರಿ
ಚ್ಛಂತಿ ಮುಖೋಕ್ತಿಯಿಂ ದೊರೆಗುಮಿಂತಿದು ಸಾಲದೆ ಪೆರ್ಮೆಗೀಶನಾ ೮೮

ಪೆಂಕುಳಿವಾಲೀಂಟಿದರೊ ತ
ಮಂ ಕವಿಯೆ ಮರುಳ್ತನಕ್ಕೆ ಪಕ್ಕಾದರೊ ನಿಃ
ಶಂಕೆ ಮಿಗೆ ಮರ್ದುಕುಣಿಕೆಯು
ನೇಂ ಕೊಂಡರೊ ಶಂಭುಗಮರರೆಣೆಯೆಂಬಧಮರ್ ೮೯

ವಿಷ್ಣುಗಳನ್ನು ಸರಿಯೆಂದು ಕಾಣಹೋಗುತ್ತಾರೆ. ೮೬. ವಿಷ್ಣು ಬ್ರಹ್ಮಾದಿ ದೇವತೆಗಳೆಂಬ ಪಶುಗಳಿಗೆ ಪತಿಯೆನಿಸುವ ಶಿವನು ತಾನು ಪಶುವೆನಿಸುವನೇ ? ನಿಜವಾಗಿಯೂ ಬ್ರಹ್ಮ ವಿಷ್ಣುಗಳು ಪಶುಗಳು ; ಪಶುಪತಿಯೇ ಶಿವನು. ಶಿವನೇ ಸ್ಪಷ್ಟವಾಗಿ ಪರಬ್ರಹ್ಮನು ಎಂಬ ವಾಕ್ಯವೇ ಸತ್ಯವಾದದ್ದು. ೮೭. ಶ್ರೇಷ್ಠವಾದ ಸದ್ಬುದ್ಧಿಯುಳ್ಳ ವಿದ್ವಾಂಸರು ಶಿವನ ಸ್ಥಾನವನ್ನು, ವಿಷ್ಣುವಿನ ಸ್ಥಾನಕ್ಕಿಂತ ಶ್ರೇಷ್ಠವಾದದ್ದೆಂದು ತಿಳಿಯುವರು. 'ತದ್ವಿಷ್ಣೋಃ ಪರಮಂ ಪದಂ' ಎಂದರೆ ಆ ಶಿವನಸ್ಥಾನವು ವಿಷ್ಣುವಿನ ಸ್ಥಾನಕ್ಕಿಂತಲೂ ಉತ್ಕೃಷ್ಟವಾದದ್ದೆಂದು ಹೇಳುವ ವೇದವೇ ಈ ಮಾತಿಗೆ ಪ್ರಮಾಣ. ೮೮. ಮನ್ಮಥಹರನಾದ ಶಿವನು ದೇವತೆಗಳಿಗೆ ಅಧಿಕನಾದವನೆನ್ನುತ್ತ ತಮ್ಮ ಹೃದಯದಲ್ಲಿ ಚೆನ್ನಾಗಿ ನಂಬಿದವರು ಊಟಮಾಡುವುದು ಸತತವೂ ಸಾರತರವಾದದ್ದೆನಿಸುವ ಅಮೃತಾನ್ನ. ಅದನ್ನು ನಂಬಿದ ಗೌತಮಾದಿ ಶಾಪದಿಂದ ದಗ್ಧವಾದ ಕೆಟ್ಟ ಭ್ರಾಂತಿಯಿಂದ ಕೂಡಿದ ಮನುಷ್ಯರು ಉಣ್ಣುವುದೇ ಮಲ ಎನ್ನುವ ಮಾತು 'ಅಂತರಿಚ್ಛಂತಿ' ಎಂಬ ವೇದದ ಹೇಳುವಿಕೆಯಿಂದಲೇ ಸಿದ್ಧಗೊಳ್ಳುವುದು (ವೇದವೇ ಹೀಗೆ ಹೇಳುತ್ತಿದೆ). ಈಶ್ವರನ ಹಿರಿಮೆಗೆ ಈ ಮಾತೇ ಸಾಲದೇ ? ೮೯. ಶಂಭುವಿಗೆ ದೇವತೆಗಳು ಸಮಾನರೆನ್ನುವ ಅಧಮರುಗಳು ಭ್ರಮೆಗೊಂಡು ಹುಚ್ಚು ಹಿಡಿದವರ ಹಾಲನ್ನು ಕುಡಿದರೋ, ಅಜ್ಞಾನವು ಮುಸುಕಲಾಗಿ ಹುಚ್ಚುತನಕ್ಕೆ ಈಡಾದರೋ, ಮದ್ದು

ಜಾತೋ ಬೃಹನ್ನಪಿ ಶ್ರುತಿ
ಮಾತೇ ಹರಿಜನಿಯನುಸಃರ್ಗುಮಜನುದ್ಭವಮಂ
ಭೂತಸ್ಯ ಜಾತ ವಾಕ್ಯಮ
ಜಾತಶ್ರುತಿಯಭವನೊಗೆಯನೆಂಬುದನೊರೆಗುಂ ೯೦

ಭೃಗುಮುನಿಯ ಶಾಪದಿಂ ಪ
ನ್ನಗಶಯನಂ ಪತ್ತು ಯೋನಿಯೊಳ್ಪುಟ್ಟಿದನಾ
ನೆಗಳ್ದಜನ ಪಾಯುವೊಳ್ಪದೆ
ದೊಗೆದಾಂತನಧೋಕ್ಷಜಾಖ್ಯೆಯಂ ಕಮಳಾಕ್ಷಂ ೯೧

ವ॥ ಅಂತುಮಲ್ಲದೆಯುಂ—

ಕುಡಿವಾಗಳಮೃತಶರಧಿಯ
ನೆಡೆ ಸಿಲ್ಕಿರೆ ಸೆದಗೆಯಂತೆ ಕೊರಲೊಳ್ಕೃಷ್ಣಂ
ತಡೆಯದುಪಮನ್ಯುಮುನಿ ತ
ಜ್ಜಡರುಹಲೋಚನನನುಗುಳನೇ ವಸುಮತಿಯೊಳ್ ೯೨

ನರಹರಿರೂಪ ವಿಷ್ಣು ಮಡಿದು ಶರಭಾಕೃತಿ ವೀರಭದ್ರನಿಂ
ಪರಮ ದಧೀಚಿಯೊಳ್ಸೆಣಸಿ ಚಕ್ರಮನಕ್ರಮದಿಂದೆ ನೀಗಿ ತ
ನ್ನುರದೊಳೆ ತತ್ಪದಾಹತಿಯನಾಂತಗಿದೋಡಿದನಚ್ಯುತಂ ಮಹೇ
ಶ್ವರಮುನಿಯುಂಘ್ರಿಯಿಂದೊದೆಯೆ ಭಂಗಮನಾಂತನದೊರ್ಮೆ ಮಾಧವಂ ೯೩

ಗುಣಿಕೆಯ ಕಾಯನ್ನು ತಿಂದರೋ, (ಏನೋ) ೯೦. 'ಜಾತೋಬೃಹನ್ನಪಿ' ಎಂಬ ಶ್ರುತಿಯ ಮಾತು ವಿಷ್ಣುವಿನ ಜನ್ಮವನ್ನು ಹೇಳುವುದು ; 'ಭೂತಸ್ಯಜಾತ'ವೆಂಬ ವಾಕ್ಯವು ಬ್ರಹ್ಮನ ಹುಟ್ಟುವಿಕೆಯನ್ನು ಹೇಳುವುದು ; 'ಅಜಾತ'ವೆಂಬ ಶ್ರುತಿಯ ಮಾತು ಪರಮೇಶ್ವರನು ಹುಟ್ಟೇ ಇಲ್ಲದವನೆಂಬುದನ್ನು ಹೇಳುವುದು, ೯೧. ಭೃಗುಮುನಿಯ ಶಾಪದಿಂದ ವಿಷ್ಣುವು ಹತ್ತು ಯೋನಿಗಳಲ್ಲಿ ಹುಟ್ಟಿದನು. ಆ ಪ್ರಖ್ಯಾತನಾದ ಬ್ರಹ್ಮನ ಗುದದ್ವಾರದಿಂದ ಹೊರಬಂದ ಕಾರಣದಿಂದ 'ಅಧೋಕ್ಷಜ'ನೆಂಬ ಹೆಸರನ್ನು ಆ ವಿಷ್ಣುವು ಪಡೆದನು. ವ॥ ಅದೂ ಅಲ್ಲದೆ—೯೨. (ಶಿವನ ಅನುಗ್ರಹದಿಂದ) ಉಪಮನ್ಯು ಮುನಿಯು ಕ್ಷೀರಸಮುದ್ರವನ್ನು ಕುಡಿಯುತ್ತಿರುವಾಗ (ಆ ಕ್ಷೀರ ಸಮುದ್ರದಲ್ಲಿದ್ದ) ವಿಷ್ಣುವು ಕೊರಳಲ್ಲಿ ಒಂದು ಕಡ್ಡಿಯ ಹಾಗೆ ಸಿಕ್ಕಿಕೊಳ್ಳಲು ಆ ವಿಷ್ಣುವನ್ನು ಭೂಮಿಯ ಮೇಲೆ ಉಗುಳಲಿಲ್ಲವೇ ? ೯೩. ನರಹರಿಯ ರೂಪ ಧರಿಸಿದ (ಹಿರಣ್ಯನೆಂಬ ರಾಕ್ಷಸನನ್ನು ಕೊಲ್ಲಲು ನರಹರಿಯ ರೂಪ ಧರಿಸಿದ) ವಿಷ್ಣುವು ಶರಭಾಕೃತಿಯನ್ನು ಹೊಂದಿದ ವೀರಭದ್ರನಿಂದ ಸತ್ತನು. ಅತಿ ಪವಿತ್ರನೆನಿಸಿದ ದಧೀಚಿಮುನಿಯೊಡನೆ ಅಕ್ರಮವಾಗಿ ಯುದ್ಧಮಾಡಿ, ಚಕ್ರವನ್ನು ಕಳೆದುಕೊಂಡು, ತನ್ನ ಎದೆಯಮೇಲೆ ಆ ದಧೀಚಿಮುನಿಯ ಪಾದದ ಒದೆತದಿಂದ ಹೆದರಿ ಆ ಅಚ್ಯುತನು ಓಡಿಹೋದನು. ಹಾಗೆಯೇ ಒಮ್ಮೆ ಆ ಮಾಧವನು ಮಹೇಶ್ವರಮುನಿಯೆಂಬುವನು ಒದೆಯಲು ಭಂಗವನ್ನು ಹೊಂದಿದನು.

ಅಂದು ಜಲಂಧರಾಸುರನಹೀಶ್ವರಪಾಶದಿನೊತ್ತಿಕಟ್ಟಿ ಗೋ
ವಿಂದನನಿಟ್ಟನಾಗಸಕೆ ತಾರಕನೋಡಿಸಿದಂ ರಣಾಗ್ರದೊಳ್
ಕುಂದದೆ ದಂತಿದಾನವ ಮೃಗಾರಿಸುರಾರಿ ಮುಖಾಸುರರ್ಪೊಡ
ರ್ಪೊಂದಿರೆ ತಕ್ಕುಗುಂದಿಸಿ ಪೊಣರ್ಕೆಯೊಳಂಜಿಸುತುಂ ಮುಗುಳ್ಚಿದರ್ ೯೪

ಸೀತೆಯುನಾತ್ಮವಲ್ಲಭೆಯನುಯ್ದ ದಶಾಸ್ಯನನಂದು ಕೊಂದ ಬೊ
ಮ್ಮೇತಿಯು ನೀಗಲೆಂದು ಶಿವಲಿಂಗಮನೊಲ್ದು ನಿಜಾಭಿಧಾನದಿಂ
ಸೇತುಗೆ ಮುಂ ಪ್ರತಿಷ್ಠಿಸಿ ಸಮರ್ಚಿಸಿದಂ ರಘುರಾಮರೂಪಿನಿಂ
ಪ್ರೀತಿಯೊಳಂಬುಜೇಕ್ಷಣನಿದಂ ಸಲೆ ಬಲ್ಲುದು ಭೂರಿಭೂಜನಂ ೯೫

ಹರಿ ಮತ್ಸ್ಯರೂಪವಂ ತಾ
ಳ್ದರು ಲಂಕೆಯೊಳೊಲ್ದು ಮತ್ಸ್ಯಕೇಶ್ವರನಂ ತಾ
ನಿರದರ್ಚಿಸಿ ಸುಖದಿಂ ನಿ
ರ್ಜರರಿಪುವಂ ಸದೆದು ವೇದಮಂ ತೆಗೆತಂದಂ ೯೬

ಕಮಠಾವತಾರದೊಳ್ಹರಿ
ವಿಮಳ ಹರಿದ್ವಾರದಲ್ಲಿ ಕಮಠೇಶ್ವರನಂ
ಪ್ರಮುದದಿನರ್ಚಿಸಿ ಪಡೆಯನೆ
ಸುಮನೋರಥಮಂ ಮುರಾರಿ ಕೃಷ್ಣೇಶ್ವರನಂ ೯೭

೯೪. ಅಂದು (ಪೂರ್ವದಲ್ಲಿ) ಜಲಂಧರನೆಂಬ ರಾಕ್ಷಸನು ಆದಿಶೇಷನನ್ನೇ ಹಗ್ಗವನ್ನಾಗಿ ಮಾಡಿ, ಬಿಗಿಯಾಗಿ ಕಟ್ಟಿ, ವಿಷ್ಣುವನ್ನು ಆಕಾಶಕ್ಕೆ ಎಸೆದನು. ರಣರಂಗದಲ್ಲಿ ತಾರಕಾಸುರನು (ಸೋಲಿಸಿ) ಓಡಿಸಿಬಿಟ್ಟನು. ಯಾವ ಕುಂದನ್ನೂ ಲೆಕ್ಕಿಸದೆ ಗಜಾಸುರ, ವ್ಯಾಘ್ರಾಸುರ, (ಮೃಗಗಳಿಗೆ ಅರಿಯಾದ ವ್ಯಾಘ್ರನೆಂಬ ಹೆಸರಿನ ರಾಕ್ಷಸ), ಮುಖ್ಯರಾದ ರಾಕ್ಷಸರುಗಳು ಶೌರ್ಯದಿಂದ ಕೂಡಿ ಯುದ್ಧದಲ್ಲಿ (ವಿಷ್ಣುವಿನ) ಸಾಮರ್ಥ್ಯವನ್ನು ಕುಗ್ಗಿಸಿ ಹೆದರಿಸಿ ಓಡಿಸಿದರು. ೯೫. ವಿಷ್ಣುವು ರಘುರಾಮನ ರೂಪದಿಂದ (ಅವತಾರ ಮಾಡಿದ ಕಾಲದಲ್ಲಿ) ತನ್ನ ಆತ್ಮವಲ್ಲಭೆಯೆನಿಸಿದ ಸೀತೆಯನ್ನು ಕದ್ದುಕೊಂಡು ಹೋಗಿದ್ದ ರಾವಣನನ್ನು ಕೊಂದ ಕಾರಣ ಆ ಬ್ರಹ್ಮಹತ್ಯಾ ದೋಷವನ್ನು ನಿವಾರಿಸಿಕೊಳ್ಳಲು, ಸೇತುವೆಯ ಮುಂಭಾಗದಲ್ಲಿ ತನ್ನ ಹೆಸರಿನ (ರಾಮೇಶ್ವರವೆಂಬ) ಶಿವಲಿಂಗವನ್ನು ಪ್ರೀತಿಯಿಂದ ಪ್ರತಿಷ್ಠಾಪನೆಮಾಡಿ ಪೂಜೆ ಮಾಡಿದುದನ್ನು ಸಮಸ್ತ (ಲೋಕದ) ಜನವೆಲ್ಲ ತಿಳಿದ ವಿಚಾರವೇ ಆಗಿದೆ. ೯೬. ವಿಷ್ಣುವು ಮತ್ಸ್ಯರೂಪ (ಮೀನಿನರೂಪ) ವನ್ನು ಧರಿಸಿ, ಲಂಕೆಯಲ್ಲಿ ಭಕ್ತಿಯಿಂದ ಮತ್ಸ್ಯಕೇಶ್ವರನನ್ನು ತಾನು ತಪ್ಪದೆ ಅರ್ಚನೆ ಮಾಡಿ ಸುಖವಾಗಿ ದೇವತೆಗಳ ರಿಪುವಾದ ಸೋಮುಕಾಸುರನೆಂಬುವವನನ್ನು ಕೊಂದು ವೇದಗಳನ್ನು ಪಡೆದುಕೊಂಡು ಬಂದನು. [ಮತ್ಸ್ಯಕೇಶ್ವರನನ್ನು ಅರ್ಚನೆಮಾಡಿದುದರಿಂದಲೇ ಆ ರಾಕ್ಷಸನನ್ನು ಸೋಲಿಸುವ ಶಕ್ತಿಯುಂಟಾಯಿತೆಂದು ಭಾವ] ೯೭–೯೯. ಕೂರ್ಮಾವತಾರದಲ್ಲಿ ವಿಷ್ಣುವು ಶ್ರೇಷ್ಠವಾದ ಹರಿದ್ವಾರದಲ್ಲಿ ಕಮಠೇಶ್ವರನೆಂಬ

ದ್ವಾರವತಿಯಲ್ಲಿ ಭಜಿಸಿ ಕು
ಮಾರಾದ್ಯಭಿಮತಫಲಂಗಳಂ ಪಡೆದಂ ತಾ
ನೋರಂತೆ ಕೃಷ್ಣರೂಪಿಂ
ಸಾರಬ್ರಹ್ಮೇಶಲಿಂಗಮಂ ಧಾರಿಣಿಯೊಳ್ ೯೮

ಮಿಸುಗುವಲಂಪುರದೊಳ್ಪೂ
ಜಿಸಿ ಪಡೆದಂ ಬ್ರಹ್ಮನಿಷ್ಟಮಂ ಹರಿವಿಧಿ ಮು
ಖ್ಯಸುರಮುನಿಗಳ್ವಾರಾ
ಣಸಿಯೊಳ್ನಿಜನಾಮಲಿಂಗಮಂ ಪೂಜಿಸಿದರ್ ೯೯

ಹರಿ ಮೇಘರೂಪದಿಂದೀ
ಶ್ವರನಂ ಸಲೆ ಪೊತ್ತು ಸೇವಿಸಿದನೊಂದು ಯುಗಾಂ
ತರದೊಳ್ಮೋಹಿನಿಪೆಸರಿಂ
ತರುಣಿತ್ವಮನಾಳ್ದು ಹರನನೋಲಗಿಸಿರ್ದಂ ೧೦೦

ಧರೆಗಾವೇ ದೇವರೆಂದಾಡಿದ ನುಡಿಯಘದಿಂ ಪಂದಿ ಪರ್ದಾಗಿ ಪದ್ಮೋ
ದರನುಂ ವಾಣೀಶನುಂ ವಾದಿಸುತಡಿಮುಡಿಯಂ ಕಾಣದೇಳ್ತಂದು ಲಜ್ಜಾ
ಭರದಿಂ ಜ್ವಾಲಾಂಗಲಿಂಗಕ್ಕೆಱಗಿ ಪೊಗಳ್ದು ದೈನ್ಯೋಕ್ತಿಯಿಂ ಮೆಚ್ಚಿಸುತ್ತೀ
ಶ್ವರನಂ ತಮ್ಮಿಷ್ಟಮಂ ಮೇಣ್ಪಡೆದರಿದು ವಲಂ ಲೋಕವೇದ್ಯಪ್ರಸಿದ್ಧಂ ೧೦೧

ಹೆಸರಿನ ಶಿವಲಿಂಗವನ್ನು ಅತಿ ಸಂತೋಷದಿಂದ ಪೂಜೆಮಾಡಿ, ಇಷ್ಟಾರ್ಥಸಿದ್ಧಿಯನ್ನು ಪಡೆಯಲಿಲ್ಲವೇ ? ಕೃಷ್ಣಾವತಾರದಲ್ಲಿ (ವಿಷ್ಣುವು) ದ್ವಾರಕಾನಗರದಲ್ಲಿ ಕೃಷ್ಣೇಶ್ವರನೆಂಬ ಹೆಸರಿನ ಶಿವಲಿಂಗವನ್ನು ಸ್ತೋತ್ರಮಾಡಿ, ಪುತ್ರ ಪ್ರಾಪ್ತಿಯೇ ಮೊದಲಾದ ಇಚ್ಛಿಸಿದ ಫಲಗಳನ್ನು ಪಡೆದನು. ತಾನು ಒಂದೇ ಕ್ರಮವಾಗಿ (ಏಕಪ್ರಕಾರವಾಗಿ) ಕೃಷ್ಣರೂಪದಿಂದ ಶ್ರೇಷ್ಠವಾದ 'ಬ್ರಹ್ಮೇಶ' ಎಂಬ ಹೆಸರಿನ ಲಿಂಗವನ್ನು ಶೋಭಿಸುವ ಅಲಂಪುರವೆಂಬ ಹೆಸರಿನ ಪಟ್ಟಣದಲ್ಲಿ ಪೂಜೆಮಾಡಿ, ಬ್ರಹ್ಮನು ಇಷ್ಟಾರ್ಥಗಳನ್ನು ಪಡೆದನು. ವಿಷ್ಣು, ಬ್ರಹ್ಮರೇ ಮುಖ್ಯರಾದ ದೇವತೆಗಳೂ, ಮುನೀಶ್ವರರುಗಳೂ ಕಾಶಿಯಲ್ಲಿ ತಮ್ಮ ತಮ್ಮ ಹೆಸರಿನ ಶಿವಲಿಂಗಗಳನ್ನು ಪೂಜಿಸಿದರು. ೧೦೦. ಹರಿಯು ಮೇಘರೂಪದಿಂದ ಈಶ್ವರನನ್ನು ಹೊತ್ತು ಸೇವೆ ಮಾಡಿದನು. ಯುಗಾಂತರದಲ್ಲಿ ಮೋಹಿನಿಯೆಂಬ ಹೆಸರಿನಿಂದ ಸ್ತ್ರೀರೂಪ ಧರಿಸಿ ಈಶ್ವರನನ್ನು ಸೇವಿಸಿಕೊಂಡಿದ್ದನು. ೧೦೧. ಧರೆಗೆ ನಾವೇ ದೇವರು ಎಂದು ಆಡಿದ ಮಾತಿನ ಪಾಪದ ಕಾರಣ ವಿಷ್ಣುವು ಹಂದಿಯಾಗಿ, ಬ್ರಹ್ಮನು ಹದ್ದಾಗಿ ಪಣತೊಟ್ಟು (ಈಶ್ವರನ) ಪಾದವನ್ನೂ ತಲೆಯನ್ನೂ ಕಾಣಲಾರದೆ ಬಂದು ನಾಚಿಕೆಯ ಆಧಿಕ್ಯದಿಂದ ಉರಿಲಿಂಗಕ್ಕೆ (ಜ್ಯೋತಿಲಿಂಗಕ್ಕೆ) ನಮಸ್ಕಾರಮಾಡಿ, ಹೊಗಳಿ, ಮೃದುವಾದ ದೀನವಾಣಿಯಿಂದ ಪ್ರಸನ್ನಗೊಳಿಸಿಕೊಂಡು ಆ ಈಶ್ವರನಿಂದಲೇ ತಮ್ಮ ಇಷ್ಟಾರ್ಥವನ್ನು ಪಡೆದರು. ಈ ಮಾತು ಲೋಕವೆಲ್ಲ

ಮದಯುತಮತ್ಸ್ಯರೂಪಹರಿಯಂ ಹರನರ್ದಿಸಿ ಸುತ್ತಿದಂ ಜಟಾ
ಪದದೊಳೆ ಪೇಟ್ಟಿಯಂತೆಸೆವ ಬಾಲಮನಚ್ಯುತ ಕೂರ್ಮಕರ್ಪರಂ
ವಿದಿತ ಸುರಾರಿ ಮಸ್ತಕದ ಮಾಲೆಯ ಮಧ್ಯದೊಳೀಶವಕ್ಷದೊ
ಳ್ಪುದಿದೆಸೆದಿರ್ಕಮಿಕ್ಕಿ ನಡಸಿಂಹನ ಚರ್ಮಮನುಟ್ಟನೀಶ್ವರಂ ೧೦೨

ಹರಹಸ್ತಾಗ್ರದೊಳಿರ್ಕಮಾದ್ಯ ಕಿಟಿದಂಷ್ಟ್ರಂ ಮತ್ತಮಾ ಲೋಕಭೀ
ಕರನಂ ವಕ್ರಮತಿ ತ್ರಿವಿಕ್ರಮನನಾರ್ಪಿಂ ಸೀಳ್ದು ಕಂಕಾಳಮಂ
ಕರದಿಂ ತಾಳ್ದನನಂಗವೈರಿ ಖಲವಿಷ್ವಕ್ಸೇನನಂ ಶೂಲದಿಂ
ಭರದಿಂದಾರ್ದಿಱಿದೆತ್ತಿ ತನ್ನ ಪೆಗಲೊಳ್ಪೊತ್ತಂ ಕೃತಾಂತಾಂತಕಂ ೧೦೩

ಜಡಮತಿ ದಕ್ಷನಧ್ವರದ ಶಾಲೆಯೊಳೋಡು[1]ವ ಯಜ್ಞವಿಷ್ಣುವಂ
ತಡೆಯದೆ ವೀರಭದ್ರ ವಪುವಿಂ ತಲೆ ಕತ್ತರಿಪಂತಿರೆಚ್ಚು ತಾಂ
ಕೆಡಪಿದನಿಂತಿದಲ್ಲ ನಿಗಮಾಗಮಸಿದ್ಧಮದೊರ್ಮೆ ಶಂಕರಂ
ಪಿಡಿದ ಕಪಾಲದೊಳ್ಸುರಿದನಚ್ಯುತನಾತ್ಮಶಿರೋರುಣಾಂಬುವಂ ೧೦೪

ತಿಳಿದಿರುವಂತೆ ಪ್ರಸಿದ್ಧವಾದದ್ದಲ್ಲವೇ ? ೧೦೨. ಮತ್ಸ್ಯಾವತಾರವನ್ನು ಮಾಡಿದ ಮೇಲೆ ಮದದಿಂದ ಕೂಡಿದ ಆ ಮತ್ಸ್ಯರೂಪದ ವಿಷ್ಣುವನ್ನು ಶಿವನು ಕೊಂದು ಅದರ ಬಾಲವನ್ನು ರುಮಾಲಿನ ಹಾಗೆ ಜಡೆಯ ಸ್ಥಾನದಲ್ಲಿ ಸುತ್ತಿಕೊಂಡನು. ಅಚ್ಯುತನು ಕೂರ್ಮಾವತಾರ ಮಾಡಿದಾಗ ಅವನ ಆ ಬೆನ್ನಿನ ಚಿಪ್ಪನ್ನು ಪ್ರಸಿದ್ಧರಾದ ರಾಕ್ಷಸರ ರುಂಡಮಾಲೆಗಳ ಮಧ್ಯದಲ್ಲಿ ಪೋಣಿಸಿ ಎದೆಯ ಮೇಲೆ (ಹಾರದ ಮಧ್ಯದಲ್ಲಿ) ಶೋಭಿಸುವಂತೆ ಮಾಡಿಕೊಂಡನು. ನರಸಿಂಹಾವತಾರದ ವಿಷ್ಣುವನ್ನು ಕೊಂದು ಅವನ ಚರ್ಮವನ್ನು ಶಿವನು ಉಟ್ಟುಕೊಂಡನು. ೧೦೩. ವಿಷ್ಣುವು ವರಾಹಾವತಾರ ಮಾಡಿದಾಗ ಆ ಹಂದಿಯ ದಂಷ್ಟ್ರವನ್ನು ಶಿವನು ತನ್ನ ಕೈಯಲ್ಲಿ ಧರಿಸಿದನು ಮತ್ತು ತ್ರಿವಿಕ್ರಮಾವತಾರ ಮಾಡಿದ ವಿಷ್ಣುವು ಲೋಕಕ್ಕೆಲ್ಲ ಭಯಂಕರವೆನಿಸಿ ವಕ್ರ ಬುದ್ಧಿಯಿಂದ ವರ್ತಿಸುತ್ತಿದ್ದಾಗ ಅವನನ್ನು ಪರಾಕ್ರಮದಿಂದ ಸೀಳಿಹಾಕಿ ಅವನ ಬೆನ್ನಿನ ಮೂಳೆಯನ್ನು (ಕಂಕಾಳವನ್ನು) ಕೈಯಲ್ಲಿ ಧರಿಸಿದನು. ದುಷ್ಟ ವಿಷ್ವಕ್ಸೇನನೆಂಬ ಹೆಸರನ್ನು ಧರಿಸಿದ ವಿಷ್ಣುವನ್ನು ಶೂಲದಲ್ಲಿ ಶಕ್ತಿಯಿಂದ ತಿವಿದು ಮೇಲಕ್ಕೆತ್ತಿ ಯಮನಿಗೂ ಯಮನಾದ ಶಿವನು ತನ್ನ ಹೆಗಲಮೇಲೆ ಹೊತ್ತನು. ೧೦೪. ಮೂರ್ಖ ಬುದ್ಧಿಯ ದಕ್ಷನ ಯಜ್ಞಶಾಲೆಯಲ್ಲಿ ಯಜ್ಞಾರ್ಥವಾಗಿ ಬಂದಿದ್ದ ವಿಷ್ಣುವು ನಿಲ್ಲದೆ ಓಡುತ್ತಿರಲಾಗಿ ಆ ವೀರಭದ್ರನು ದೇಹದಿಂದ ಅವನ ತಲೆಯು ಕತ್ತರಿಸುವಂತೆ ಬಾಣ ಪ್ರಯೋಗಮಾಡಿ ನೆಲಕ್ಕೆ ಕೆಡವಿದನು. ಈ ರೀತಿಯೆಲ್ಲವೂ ವೇದಾಗಮ ಸಿದ್ಧವಾದದ್ದು. ಒಂದು ಸಲ ಶಂಕರನು ಹಿಡಿದ ಕಪಾಲದಲ್ಲಿ ವಿಷ್ಣುವು ತನ್ನ ಶಿರಸ್ಸಿನ ರಕ್ತವನ್ನೇ

1 ಂದು(ಅ)

ಪುರಹರನಂತಕಹರನಘ
ಹರನಂಗಜಹರನರಾತಿಹರನಧ್ವರಹಂ
ಹರನಂಧಕಹರನೆಂಬಂ
ತಿರೆ ಹರಿಹರನೆಂಬ ನಾಮಮುಭವಂಗೆಸೆಗುಂ ೧೦೫

ನೆರೆದೀ ನಿಜಾರ್ಥಮಂ ಬಿ
ತ್ತರದಿಂದೆ ಹರಿರ್ಹರಂ ತಮನುಯಾತಿಯೆಂಸು
ತ್ತೊರೆಗುಂ ಶ್ರುತಿ ಕುಮತಿಗಳಿದ
ನರವರಿಸದೆ ಬಾಯ್ಗೆ ಬಂದ ತೆಱದಿಂದುಲಿವರ್ ೧೦೬

ಪಂಕಜೇಕ್ಷಣ ಪಂಕಜಾಸನ ಪಾಕಶಾಸನಮುಖ್ಯರಾ
ಬಿಂಕಮಂ ತೃಣಮಿಟ್ಟು ಯಕ್ಷನ ರೂಪಿನಿಂ ಮುಱಿದಂ ಮಹೇ
ಶಂ ಕರಂ ಮದಿಸಿರ್ದ ಬೊಮ್ಮನ ಪಂಚಮಾಸ್ಯಮನಣ್ಮಿ ಮೀ
ನಾಂಕವೈರಿ ನಖಾಗ್ರದಿಂದೆ ಚಿವುಂಟಿದಂ ಧರಣೀಪತೀ ೧೦೭

ಮೃಗಿಯಾಗಿ ಪರಿವ ಸುತೆಯಂ
ಮೃಗರೂಪಿಂ ನೆರೆಯಲೆಳಸಿ ಬಳಿವರಿವಜನಂ
ಸೊಗಯಿಪ ಕಿರಾತರುದ್ರಂ
ಮಿಗೆ ತಚ್ಛಿರಮುರುಳೆ ಬಾಣದಿಂ ಪದೆದೆಚ್ಚಂ ೧೦೮

ಸುರಿಸಿದನು. ೧೦೫. ಪುರಹರ, ಅಂತಕಹರ, ಅಘಹರ, ಅಂಗಜಹರ, ಆರಾತಿಹರ, ಅಧ್ವರ ಸಂಹರ, ಅಂಧಕಹರ ಇವುಗಳ ಹಾಗೆಯೇ ಹರಿಯನ್ನು ಹರಣ ಮಾಡಿದವನು ಎಂಬರ್ಥದಲ್ಲಿ 'ಹರಿಹರ' ಎಂಬ ಹೆಸರು ಶಿವನಿಗೇ ಶೋಭಿಸುವುದು. ೧೦೬. ಪ್ರಸಿದ್ಧವಾದ ಈ ನಿಜಾರ್ಥವನ್ನು ವಿಸ್ತಾರಗೊಳಿಸಿ (ದೇವತೆಗಳು) ಹರಿಯನ್ನು ನಾಶಮಾಡಿದ ಆ ಶಿವನನ್ನು ಅನುಸರಿಸಿ ಹೋಗುತ್ತಾರೆ' ಎಂದು ಶ್ರುತಿಯು ಹೇಳುತ್ತಿದೆ. ದುರ್ಬುದ್ಧಿಯುಳ್ಳವರು ಇದನ್ನು ವಿಚಾರಮಾಡದೆ ಬಾಯಿಗೆ ಬಂದ ರೀತಿಯಲ್ಲಿ ಹೇಳುತ್ತಾರೆ. ೧೦೭. ಮಹಾರಾಜಾ, (ಎಲೈ ಬಿಜ್ಜಳನೇ), ವಿಷ್ಣು, ಬ್ರಹ್ಮ, ದೇವೇಂದ್ರರೇ ಮುಖ್ಯರಾದವರ ಗರ್ವವನ್ನು ಹುಲ್ಲುಕಡ್ಡಿಯನ್ನಿಟ್ಟು ಯಕ್ಷನ ರೂಪದಿಂದ ಶಿವನು ಮುರಿದು ಹಾಕಿದನು. ಹೆಚ್ಚಾಗಿ ಗರ್ವಗೊಂಡ ಬ್ರಹ್ಮನ ಐದನೆಯ ಮುಖವನ್ನು ಪರಾಕ್ರಮದಿಂದ ಮನ್ಮಥವೈರಿಯಾದ ಶಿವನು ಉಗುರಿನಿಂದ ಚಿವುಟಿ ಹಾಕಿದನು. ೧೦೮. ಹೆಣ್ಣು ಜಿಂಕೆಯಾಗಿ ಓಡುತ್ತಿರುವ ಸರಸ್ವತಿಯನ್ನು ಗಂಡು ಜಿಂಕೆಯಾಗಿ ಕೂಡಲು ಬಯಸಿ ಬೆನ್ನಟ್ಟಿದ್ದ ಬ್ರಹ್ಮನನ್ನು ಸೊಗಸಾದ ಬೇಡನ ಆಕಾರವನ್ನು ಧರಿಸಿದ ಶಿವನು (ಆ ಬ್ರಹ್ಮನ) ಶಿರಸ್ಸು ಚೆನ್ನಾಗಿ ಕತ್ತರಿಸಿಬೀಳುವಂತೆ ಬಾಣದಿಂದ ಇಚ್ಛೆಪಟ್ಟು ಹೊಡೆದನು.

ನೆಗಪೆ ನಿಜಾದ್ರಿಯಂ ದಶಶಿರಂ ಪದದುಂಗುಟದಿಂದವುಂಕಿ ತ
ನ್ನಗದಡಿ ಸಿಲ್ಕಿ ಬೇಳ್ಗರೆವಿನಂ ನೆಗಳ್ದಂ ಧರೆಗಾನೆ ಧನ್ವಿಯೆಂ
ದಗಲದ ಕೊರ್ವಿನಿಂ ಸೆಣಸಿದಂಗಜನಂಗಮನಾರ್ದು ಸುಟ್ಟನು
ರ್ವಿಗೆ ಘನ ಮೃತ್ಯುವಾನೆನುತಿದಿರ್ಚಿದ ಕಾಲನನಿಕ್ಕಿ ಮೆಟ್ಟಿದಂ ೧೦೯

ಧರಣಿಯೊಳಾನೆ ದಿವ್ಯ ಪುರುಷೋತ್ತಮನೆಂಬ ಸಗರ್ವಶೌರಿಯಂ
ಭರದೊಳೆ ಪೆಣ್ಣನಂಗೊಳಿಸಿದಂ ಕ್ರತುದಕ್ಷನೆನುತ್ತೆ ಹೋಮಮಂ
ವಿರಚಿಪ ದಕ್ಷನಂ ತಱಿದುರುಳ್ಚಿದನೆಲ್ಲಮನುಣ್ಬ ಶಕ್ತಿವೆ
ತ್ತರಿದೆನಿಪುರ್ಕ[1]ನಾಂತ ಶಿಖಿಯುಜ್ಜ್ವಳಜಿಹ್ವೆಯ ಕಿಳ್ತದಿರ್ಚಿದಂ ೧೧೦

ಭುವನಾಕ್ಷಿತ್ವದ ಬಿಂಕಮಾಳ್ದ ಭಗನಕ್ಷ್ಯುತ್ಪಾಟನಂಗೆಯ್ದು ಕೈ
ರವಮಿತ್ರಾಂಗಮನಂಘ್ರಿಯಿಂ ಪೊಸೆದು ಪೂಷಾದಿತ್ಯದಂತಂಗಳಂ
ಜವದಿಂ ಬಿಲ್ಗೊಲೆಯಿಂದುದಿರ್ಚಿ ಕೊಱೆದಾ ವಾಣೀಲಸದ್ಘ್ರಾಣಮಂ
ಪವನೋರುದ್ವಯಮಂ ಸುರೇಂದ್ರಭುಜಮಂ ತಾಂ ಖಂಡಿಸುತ್ತಣ್ಮನಿಂ ೧೧೧

೧೦೯. ರಾವಣನು ತನ್ನ ಪರ್ವತವಾದ ಕೈಲಾಸವನ್ನು ನೆಗುವಲು (ಎತ್ತಲು) ಪಾದದ ಹೆಬ್ಬೆರಳಿನಿಂದ ಮೆಟ್ಟಿ ಆ ಪರ್ವತದ ಅಡಿಯಲ್ಲಿ (ಆತನು) ಸಿಕ್ಕು ಗೋಳಾಡುವ ಹಾಗೆ ಮಾಡಿದನು. ಲೋಕದಲ್ಲಿ ನಾನೊಬ್ಬನೇ ಬಿಲ್ಗಾರನೆಂಬ ತೊಲಗದ ಗರ್ವದಿಂದ ಸೆಣಸಿದ (ಬಾಣಪ್ರಯೋಗಮಾಡಿದ) ಮನ್ಮಥನ ದೇಹವನ್ನು ಅಬ್ಬರಿಸಿ ಸುಟ್ಟುಹಾಕಿದನು. ಲೋಕಕ್ಕೆ ನಾನೇ ಘನವಾದ ಮೃತ್ಯುದೇವತೆಯೆನ್ನುತ್ತ ಎದುರಿಸಿದ ಯಮನನ್ನು ಕೊಂದುಹಾಕಿದನು. ೧೧೦. ಲೋಕದಲ್ಲಿ ನಾನೇ ದಿವ್ಯ ಪುರುಷಶ್ರೇಷ್ಠನೆಂಬ ಗರ್ವದಿಂದ ಕೂಡಿದ ವಿಷ್ಣುವನ್ನು ಬೇಗನೆ ಹೆಣ್ಣನ್ನಾಗಿ ಮಾಡಿದನು. (ನಾನೇ) ಯಜ್ಞ ಮಾಡುವಿಕೆಯಲ್ಲಿ ದಕ್ಷನಾದವನೆಂದೆನ್ನುತ್ತ ಯಜ್ಞವನ್ನು ಮಾಡಿದ ದಕ್ಷನನ್ನು ಕತ್ತರಿಸಿದನು. (ಕೊಂದುಹಾಕಿದನು). ಎಲ್ಲವನ್ನೂ ಉಣ್ಣುವ (ಸುಟ್ಟುಹಾಕುವ) ಶಕ್ತಿಯನ್ನು ಹೊಂದಿದ್ದೇನೆಂಬ ಗರ್ವವನ್ನು ಹೊಂದಿದ ಅಗ್ನಿಯ ಪ್ರಕಾಶಮಾನವಾದ ನಾಲಿಗೆಯನ್ನು ಕಿತ್ತು ಅದಿರಿಸಿಬಿಟ್ಟನು. ೧೧೧. ಲೋಕದ ಕಣ್ಣು ನಾನೇ ಎಂಬ ಗರ್ವವನ್ನು ಹೊಂದಿದ ಸೂರ್ಯನ ಕಣ್ಣನ್ನು ಕಿತ್ತು, ಚಂದ್ರನ ದೇಹವನ್ನು ಕಾಲಿನಿಂದ ಹೊಸಗಿ ಹಾಕಿ, ಪೂಷ, ಆದಿತ್ಯರೆಂಬುವರ ಹಲ್ಲುಗಳನ್ನು ಶೀಘ್ರವಾಗಿ ಬಿಲ್ಲಿನ ತುದಿಯಿಂದ ಮುರಿದು ಹಾಕಿ, ಸರಸ್ವತಿಯ ಶ್ರೇಷ್ಠ ಮೂಗನ್ನು ಕತ್ತರಿಸಿ, ವಾಯುವಿನ ಎರಡೂ ತೊಡೆಗಳನ್ನೂ, ದೇವೇಂದ್ರನ ಭುಜವನ್ನೂ ಪರಾಕ್ರಮದಿಂದ ಆ ಶಿವನು ಮುರಿದು ಹಾಕಿ

---

1 ರ್ಕ(ದ)

ಪರಮ ಸ್ವತಂತ್ರನಿಂತ
ಧ್ವರಕೆೞ್ತಂದಮರನಿವಹಮಂ ಭಂಜಿಸಿದಂ
ಶರಣೆಂದೊಡೆ ರಕ್ಷಿಸಿದಂ
ಪೊರೆಯಲ್ಕೊಲಲೀಶನೀಶನಲ್ಲದೆ ಪೆಱರಾರ್ ೧೧೨

ಗಗನಗ್ರಾಮಂಗಳಂ ಸುಟ್ಟುರುಪಿದನತುಳದ್ವೀಪಿ ದೈತ್ಯದ್ವಿಪೇಂದ್ರಾ
ರಿಗಳಂ ಸೀೞ್ದಿಕ್ಕಿದಂ ಮೆಟ್ಟಿದನಡಿಯಿನಪಸ್ಮಾರಮಂ ಕೊಂದನುನ್ಮಾ
ರ್ಗದ ದೈತೇಯರ್ಕಳಂ ನುಂಗಿದನಪಹೃತಲೋಕಪ್ರಜಕ್ಷ್ವೇಡಮಂ ಕೈ
ಯ್ಮೆಗೆ ತಾಳ್ದಂ ಭೂರಿ ಭೂಭಾರಮನೆ ತಳೆದ ಭೋಗೀಂದ್ರನಂ ಭೂತನಾಥಂ ೧೧೩

ಭುವನಮನೆಲ್ಲಮಂ ಸುೞಿಯೊಳೆತ್ತಿ ಮುಳುಂಗಿಪ ದೇವಗಂಗೆಯಂ
ತವೆ ತಳೆದಂ ಜಟಾಗ್ರದೊಳೆ ಮಲ್ಲಿಗೆಯಂ ತಳೆವಂತಿರಂಘ್ರಿಸಂ
ಭವನವಚಕ್ರದಿಂ ಖಿಲಜಲಂಧರ ಮಸ್ತಕಮಂ ಕಳಲ್ಚಿ ಶಾಂ
ಭವಿಯರಸಂ ಸುರಪ್ರೋಗಳೆ ತಾಳ್ದನುರಃಸ್ಥಿತ ರುಂಡಮಾಲೆಯೊಳ್ ೧೧೪

ಸುರನಾರೀಜನದೈರ[1]ದಾಳಿಗೆ ಚಿರಸ್ಥಾಯಿತ್ವಮಂ ಮಾಳ್ಪ ಶಂ
ಕರಪಾದಾಂಬುಜಜಾತಚಕ್ರಮನದಂ ತಾನರ್ಥಿಸುತ್ತಂಬುಜೋ

ದನು. ೧೧೨. ಈ ರೀತಿ ಪರಮ ಸ್ವತಂತ್ರನೆನಿಸಿದ ಶಿವನು ದಕ್ಷಯಜ್ಞಕ್ಕೆ ಬಂದ (ಸಮಸ್ತ) ದೇವತಾ ಸಮೂಹವನ್ನು ಭಂಗಗೊಳಿಸಿದನು. ಶರಣು ಎಂದವರನ್ನು ರಕ್ಷಿಸಿದನು. ರಕ್ಷಿಸಲಿಕ್ಕೂ ಸಂಹಾರ ಮಾಡುವುದಕ್ಕೂ ಈಶ್ವರನಲ್ಲದೆ ಬೇರೆಯವರು ಯಾರು ? ೧೧೩. ತಾರಕಾಸುರನ ಮಕ್ಕಳಾದ ತಾರಕಾಕ್ಷ, ಮಕರಾಕ್ಷ, ವಿದ್ಯುನ್ಮಾಲಿನಿಗಳೆಂಬ ಮೂವರು ರಾಕ್ಷಸರು ಆಕಾಶಮಾರ್ಗದಲ್ಲಿ ಕಟ್ಟಿದ ಮೂರು ಪಟ್ಟಣಗಳನ್ನು ಸುಟ್ಟು ಉರಿಸಿದನು. ಅನುಪಮಪರಾಕ್ರಮದ ವ್ಯಾಘ್ರಾಸುರ ಗಜಾಸುರರೆಂಬ ವೈರಿಗಳನ್ನು ಸೀಳಿ ಹಾಕಿದನು. ಪಾದದಿಂದ ಅಪಸ್ಮಾರವನ್ನು (ಅಪಸ್ಮಾರಾಭಿಮಾನಿ ದೇವತೆ ಅಥವಾ ಮಲರೋಗಾಭಿಮಾನಿ ದೇವತೆ ?) ಮೆಟ್ಟಿದನು. ಅತ್ಯಂತ ಮದೋನ್ಮತ್ತ ರಾಕ್ಷಸರನ್ನು ಕೊಂದನು. ಲೋಕ ಸಮೂಹವನ್ನೆಲ್ಲ ನಾಶಮಾಡುತ್ತಿದ್ದ ಹಾಲಾಹಲವನ್ನು ನುಂಗಿದನು. ಅಸಾಧ್ಯವಾದ ಸಮಸ್ತ ಭೂಮಂಡಲ ಭಾರವನ್ನು ಹೊತ್ತ ಉರಗ ಶ್ರೇಷ್ಠನಾದ ಆದಿಶೇಷನನ್ನು ಸಮಸ್ತಭೂತ (ಜೀವಿ)ಗಳಿಗೆ ಪ್ರಭುವಾದ ಶಿವನು (ಆಭರಣವಾಗಿ) ಧರಿಸಿದನು. ೧೧೪. ಪಾರ್ವತೀ ಪತಿಯಾದ ಶಿವನು ಸಮಸ್ತ ಭೂಮಂಡಲಗಳನ್ನು ತನ್ನ ಸುಳಿಯಲ್ಲಿ ಒತ್ತಿ ಮುಳುಗಿಸುವ ದೇವಗಂಗೆಯನ್ನು ಜಡೆಯ ತುದಿಯಲ್ಲಿ ಮಲ್ಲಿಗೆಯನ್ನು ಧರಿಸುವಹಾಗೆ ಮನೋಹರವಾಗಿ ಧರಿಸಿದನು. ಕಾಲಿನಿಂದ ಬರೆದ ನೂತನ ಚಕ್ರದಿಂದಲೇ ಜಲಂಧರನ ಶಿರಸ್ಸನ್ನು ಕತ್ತರಿಸಿ, ದೇವತೆಗಳೆಲ್ಲ ಸ್ತೋತ್ರ ಮಾಡುತ್ತಿರಲು ಆ ರುಂಡವನ್ನು ತನ್ನ ಎದೆಯ ಮೇಲಿರುವ ರುಂಡಮಾಲೆಯಲ್ಲಿ ಧರಿಸಿದನು. ೧೧೫. ದೇವತಾ ಸ್ತ್ರೀಯರುಗಳ ಮುತ್ತೈದೆತನ ಸೂಚಕವಾದ ಮಾಂಗಲ್ಯ

1 ರೆ(ಜ, ದ)

ದರನಂಭೋಜಸಹಸ್ರದಿಂ ಭಜಿಸುತಿರ್ದಂದೊಂದರಲ್ಕುಂದೆ ತ
ನ್ನರುನೇತ್ರಾಬ್ಜಮನೀಯೆ ಮೆಚ್ಚಿ ಮೃಡನಿತ್ತಂ ಚಕ್ರಿಗಾ ಚಕ್ರಮಂ ೧೧೫

ವಿಲಸದುಪಮನ್ಯುಮುನಿಯಿಂ
ಜಲಜಾಕ್ಷಂ ದೀಕ್ಷೆವಡೆದು ಹರಿನೀಲಮಯೋ
ಜ್ವಲಲಿಂಗಮನುರದೊಳ್ತಳೆ
ದೊಲವಿಂದಂ ಪೂಜೆಗೆಯ್ವನಾಗಮಮತದಿಂ ೧೧೬

ರಾಮಂ ಘಟಸಂಭವನಿಂ
ಪ್ರೇಮಂ ಮಿಗೆ ದೀಕ್ಷೆವಡೆದು ಶಿವಲಿಂಗಮನಾ
ರಾಮಗಿರಿಯಲ್ಲಿ ಪೂಜಿಸಿ
ಕಾಮಾರಿಯ ಕೆಯ್ಯ ಪಾಶುಪತಮಂ ಪಡೆದಂ ೧೧೭

ಪರಿಪೂರ್ಣನನಘನದ್ವಯ
ನುರುತರಮಹಿಮಾಂಕನಭವನೇ ಪತಿ ಲಕ್ಷ್ಮೀ
ಪರನೆಂದುಂ ಭೃತ್ಯಂ ಭೂ
ವರ ಭುವನಕೆ ಶಂಭುವಲ್ಲದಾಳ್ವರುಮೊಳರೆ ೧೧೮

ಇಂದುಮೌಲಿಯನೊಲ್ದು ಮನ್ನಿಸದೊಟ್ಟೆಯಾಗಿ ತೊಳಲ್ದನೋ
ರಂದದಿಂದೆ ಸನತ್ಕುಮಾರಕನಜ್ಞಭಾವದೆ ಕಾಶಿಯೊಳ್

ವನ್ನು ಶಾಶ್ವತಗೊಳಿಸುವ ಶಂಕರನ ಪಾದಕಮಲದಿಂದ ಹುಟ್ಟಿದ ಆ ಚಕ್ರವನ್ನು ವಿಷ್ಣುವು ತಾನು ಬೇಡುತ್ತ ಸಾವಿರ ಕಮಲಗಳಿಂದ ಪೂಜೆ ಮಾಡುತ್ತಿದ್ದನು. ಹೀಗೆ ಪೂಜಿಸುವಾಗ ಒಂದು ಹೂವು ಕಡಿಮೆಯಾಗಲು ತನ್ನ ಶ್ರೇಷ್ಠವಾದ ನೇತ್ರವೆಂಬ ಕಮಲವನ್ನೇ (ಈಶ್ವರನ ಪಾದಕ್ಕೆ) ಕೊಡಲು ಶಿವನು ಮೆಚ್ಚಿ ಆ ಚಕ್ರಿಗೆ (ವಿಷ್ಣುವಿಗೆ) ಚಕ್ರವನ್ನು ಕೊಟ್ಟನು. ೧೧೬. ಆಗಮದಲ್ಲಿ ಹೇಳಿರುವ ಪ್ರಕಾರ : ಶ್ರೇಷ್ಠನಾದ ಉಪಮನ್ಯುಮುನಿಯಿಂದ ವಿಷ್ಣುವು ಶಿವದೀಕ್ಷೆಯನ್ನು ಪಡೆದು, ಇಂದ್ರನೀಲಮಣಿಯಿಂದ ಮಾಡಿದ ಪ್ರಕಾಶಿಸುವ ಶಿವಲಿಂಗವನ್ನು ಎದೆಯಮೇಲೆ ಧರಿಸಿ ಒಲವಿನಿಂದ ಪೂಜೆಮಾಡುವನು. ೧೧೭. ಶ್ರೀರಾಮಚಂದ್ರನು ಅಗಸ್ತ್ಯಮಹರ್ಷಿಯಿಂದ ಅಧಿಕ ಸಂತೋಷದಿಂದ ಶಿವದೀಕ್ಷೆಯನ್ನು ಸ್ವೀಕರಿಸಿ, 'ರಾಮಗಿರಿ' ಎಂಬಲ್ಲಿ ಶಿವಲಿಂಗವನ್ನು ಪೂಜಿಸಿ ಪರಮೇಶ್ವರನ ಕೈಯಲ್ಲಿನ ಪಾಶುಪತಾಸ್ತ್ರವನ್ನು ಪಡೆದನು. ೧೧೮. ಹೇಮಹಾರಾಜನೇ, (ಬಿಜ್ಜಳನೇ) ಪರಿಪೂರ್ಣನೂ, ಪಾಪರಹಿತನೂ. ಅದ್ವಯನೂ, ಅತ್ಯಂತ ಶ್ರೇಷ್ಠ ಮಹಿಮಾಶಾಲಿಯೂ ಆದ ಪರಮೇಶ್ವರನೇ ಪತಿ (ಲೋಕಕ್ಕೆಲ್ಲ ಒಡೆಯ) ಲಕ್ಷ್ಮೀಪತಿಯಾದ ವಿಷ್ಣುವು ಯಾವಾಗಲೂ ಭೃತ್ಯನೇ. ಈ ಲೋಕಕ್ಕೆ ಶಂಭುವಲ್ಲದೆ ಬೇರೆ ಪರಮಾತ್ಮನೆಂಬುವನು ಉಂಟೇ ? ೧೧೯. ಪರಮೇಶ್ವರನನ್ನು ಭಕ್ತಿಯಿಂದ ಮನ್ನಿಸದೆ ಒಂಟಿಯಾಗಿ ಏಕಪ್ರಕಾರವಾಗಿ ಸನತ್ಕುಮಾರನು ತೊಳಲಿದನು. ಕಾಶೀ

ಕುಂದದಚ್ಯುತನೇ ಜಗತ್ಪತಿಯೆಂದು ಬಾಹುವನೆತ್ತುತುಂ
ನಂದಿಯಿಂದಲೆ ಬಾದರಾಯಣನಂದು ತೋಳ್ಗಳ ನೀಗಿದಂ ೧೧೯

ಆ ಮುನಿವರರುಂ ತಿಳಿಯರು
ಮಾಮಾನಿನಿಯರಸನಧಿಕ ಮಹಿಮೆಯುಮನೆನೆ ಹೋ
ಭೂಮಿಯೊಳೊಗೆದಡಗುವ ಮಾ
ಯಾಮಯ ವಿಭ್ರಾಂತಚಿತ್ತರೇನರಿದಪರೇ ೧೨೦

ಎಣಿಸಲ್ಕೆ ಗೋಚರಮೆ ಕಾ
ರಣಾಧಿಪತಿಗಳ್ಗೆ ಕಾರಣನ ಫಣಿರಾಡ್ಭೂ
ಷಣನ ಘನಮಹಿಮೆಯುಂ ಗುಣ
ಗಣಮುಂ ಪ್ರಥಿತಪ್ರತಾಪಮುಂ ಪೌರುಷಮುಂ ೧೨೧

ವ॥ ಅಭವನನನ್ಯಸಾಮಾನ್ಯಗುಣಗಣಂಗಳಂ ಪೇಳ್ವೊಡಾರ್ಗಮಜಕಲ್ಪಮುಂ ತೀರದದಂತಿರ್ಕೆ ಶಿವನಂಘ್ರಿಯುಂ ಭಜಿಸಿ ಭಾವಿಸಿ ಪೂಜಿಸಿ ನಮಿಸಿ ನುತಿಯಿಸಿ ಮಚ್ಚಿಸಿ ನಿಜೇಷ್ಟ [1]ಸಿದ್ಧಿಯಂ[1] ಪಡೆದರೊಳರದೆಂತೆನೆ—

ಪಟ್ಟಣದಲ್ಲಿ (ವಿಶ್ವೇಶ್ವರನ ಮುಂದೆ) ಬಾದರಾಯಣನು ಕುಂದಿಲ್ಲದಂತೆ ವಿಷ್ಣುವೇ ಜಗತ್ತಿಗೆಲ್ಲ ಒಡೆಯನೆನ್ನುತ್ತ ತನ್ನ ತೋಳುಗಳನ್ನು ಮೇಲಕ್ಕೆತ್ತಲು ನಂದೀಶ್ವರನಿಂದ ತನ್ನ ತೋಳುಗಳನ್ನು ನೀಗಿದನು (ಕತ್ತರಿಸಿಕೊಂಡನು) ೧೨೦. (ವೇದವ್ಯಾಸನಂತಹ) ಆ ಮುನೀಶ್ವರರೂ ಕೂಡ ಉಮಾಪತಿಯಾದ ಶಿವನ ಅಧಿಕವಾದ ಮಹಿಮೆಯನ್ನು ತಿಳಿಯುವುದಿಲ್ಲವೆನ್ನುವಾಗ ಓಹೋ ! ಈ ಭೂಮಿಯಲ್ಲಿ ಹುಟ್ಟಿ ಸಾಯುವ ಮಾಯೆಯಿಂದ ವಿಶೇಷ ಭ್ರಾಂತರಾದ ಮನಸ್ಸಿನವರು ಏನು ತಿಳಿದಾರು ! ೧೨೧. ದೇವತೆಗಳ ಮೂಲಕಾರಣಗಳಿಗೆ ಕಾರಣ ಪುರುಷನಾದ ಉರಗಪತಿಯನ್ನೇ ಭೂಷಣವಾಗಿ ಉಳ್ಳ ಪರಶಿವನ ಶ್ರೇಷ್ಠವಾದ ಮಹಿಮೆಯೂ, ಸದ್ಗುಣ ಸಮೂಹವೂ, ಪ್ರಸಿದ್ಧವಾದ ಪ್ರತಾಪ (ಶೌರ್ಯ)ವೂ, ಪೌರುಷವೂ ಎಣಿಸಲಿಕ್ಕೆ ಗೋಚರವಾದೀತೇ ? ವ॥ ಪರಮೇಶ್ವರನ ಅನ್ಯರಲ್ಲಿಲ್ಲದ ಅಸಾಧಾರಣ ಗುಣಗಳ ಸಮೂಹವನ್ನು ಹೇಳುವುದಕ್ಕೆ ಅಜಕಲ್ಪಕಾಲಾವಧಿ (ಬ್ರಹ್ಮನ ಜೀವಿತಾವಧಿಯ ಕಾಲಾವಧಿಯೂ) ಕೂಡ ತೀರದು ಅದೊತ್ತಟ್ಟಿಗಿರಲಿ. ಶಿವನಪಾದಗಳನ್ನು ಭಜಿಸಿ ಮನದಲ್ಲಿ ಭಾವಿಸಿ, ಪೂಜಿಸಿ, ನಮಸ್ಕರಿಸಿ. ಸ್ತೋತ್ರಮಾಡಿ, ಮೆಚ್ಚಿಸಿ, ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಪಡೆದವರು ಉಂಟು, ಅದು ಹೇಗೆಂದರೆ—

———

1 ಮಂ(ಮು)

ಕರಮುರಿದಿತ್ತು ಬಾಣಕವಿ ಪೂಜಿಸಿ ಕೀರ್ತಿಸಿ ಶಂಭುವಿಂದೆ ತ
ನ್ನೆರಡು ಕರಂಗಳಂ ಪಡೆದನಂದಹಿಮದ್ಯುತಿಯಿಂದೆ ಪೋಗದಾಂ
ತರ ನಿಜಕುಷ್ಠಮಂ ಪಱಿದನೀಶ್ವರನಂ ಪೊಗಳ್ದಲ್ಲಿ ಸಾರವಾ
ಗ್ವಿರಚನೆಯಂ ಮಯೂರನಭವಂಗೆ ಸಮರ್ಪಿಸಿ ತನ್ನ ಕಣ್ಗಳಂ ೧೨೨

ವಿಳಸಿತ ಕಾಳಿದಾಸಕವಿ ಮೆಲ್ನುಡಿಯಿಂ ನುತಿಗೆಯ್ದು ದಿವ್ಯಮಂ
ಜುಳನಯನಂಗಳಂ ಪಡೆದನಕ್ಷಿಗಳಂ ಶಿವನಾಗದೇವನು
ಜ್ವಳಮತಿ ಸೋಮವಾರದೊಳೆ ತಾಂ ಕಳೆದರ್ಚಿಸಿ ಶಂಕರಂಗೆ ನಿ
ರ್ಮಳ ನಿಜನೇತ್ರಮಂ ಪರಮನಿಂ ಪಡೆದೊಪ್ಪಿರೆ ತಾಳ್ದನುರ್ವಿಯೊಳ್ ೧೨೩

ಹರಿಯಿಂ ಪೋಗದ ಕುಷ್ಟ ದುಷ್ಟಗದಮಂ ಕಂಡಳ್ಕುತುಂ ದಂಡಿ ಶಂ
ಕರನಂ ತಾಂ ಮಱೆವೊಕ್ಕು ಕೀರ್ತಿಸುತದಂ ಪೋಗಾಡಿದಂ ಮಲ್ಹಣಂ
ಸರಸಾಲಾಪದಿನೊಲ್ದು ಬಣ್ಣಿಸೆ ಭವಾನೀವಲ್ಲಭಂ ವಾರಸೌಂ
ದರಿಯುಂ ಮುಕ್ತಿವಧೂಟಿಗೂಡಿ ಪದೆದಿತ್ತಂ ತಾನವಂಗಳ್ಕಱಿಂ ೧೨೪

ಪುರರಿಪು ಸಾಮವೇದಿಯ ಪೊಳಲ್ವೆರಸೊಯ್ಯನೆ ತನ್ನ ಲೋಕಕ
ಚ್ಚರಿಯೆನೆ ಘಂಟೆಗೂಡಿ ಮಿಸುಪೋಹಿಲನಂ ರಜತಾಚಲಕ್ಕೆ ಬಿ
ತ್ತರದೊಳೆ ಕೊಂಡುಪೋಗನೆ ಗುಹಾಪರಮೂರ್ತಿಯನಂಗವೊಂದುಗೂ
ಡಿರೆ ಶಿವಲಿಂಗದೊಳ್ಪುಗಿಸನೇ ಧರೆಯೊಳ್ಕರಿಕಾಲಚೋಳನಂ ೧೨೫

೧೨೨-೧೨೩. ಅಂದು ಬಾಣಕವಿಯು ತನ್ನ ಎರಡೂ ಕೈಗಳನ್ನು ಕತ್ತರಿಸಿಕೊಂಡು ಪೂಜಿಸಿ, ಸ್ತೋತ್ರಮಾಡಿ, ಶಂಭುವಿನಿಂದ ಆ ಕೈಗಳನ್ನು ಪಡೆದನು. ಮಯೂರ ಕವಿಯು ಸೂರ್ಯನಿಂದ ಪರಿಹಾರವಾಗದ ತನ್ನ ದೇಹದೊಳಗಿದ್ದ ಕುಷ್ಟರೋಗವನ್ನು ಈಶ್ವರನನ್ನು ಸಾರವತ್ತಾದ ಕವಿತಾ ರಚನೆ ಮಾಡಿ ಹೊಗಳಿ ಆ ಶಿವನಿಗೆ ಅರ್ಪಿಸಿ ಪರಿಹರಿಸಿಕೊಂಡನು. ಶ್ರೇಷ್ಠ ಕವಿಯಾದ ಕಾಳಿದಾಸನು ಪರಮೇಶ್ವರನಿಗೆ ತನ್ನ ಎರಡೂ ಕಣ್ಣುಗಳನ್ನು ಸಮರ್ಪಣೆಮಾಡಿ, ಅವನನ್ನು ಮೃದುವಾದ ಮಾತುಗಳಿಂದ ಸ್ತೋತ್ರಮಾಡಿ (ಕವಿತೆಯನ್ನು ಹಾಡಿ), ಮನೋಹರವಾದ ನೇತ್ರಗಳನ್ನು ಪಡೆದನು. ಉಜ್ವಲವಾದ ಬುದ್ಧಿಯುಳ್ಳ ಶಿವನಾಗದೇವನೆಂಬುವನು (ಒಂದು) ಸೋಮವಾರದ ದಿನ ತನ್ನ ಕಣ್ಣುಗಳನ್ನು ಕಿತ್ತು ಶಂಕರನಿಗೆ ಇತ್ತು ಅರ್ಚನೆಮಾಡಿ, ಆ ಪರಮನಿಂದಲೇ ನಿರ್ಮಲವಾದ ತನ್ನ ನೇತ್ರಗಳನ್ನು ಈ ಲೋಕದಲ್ಲಿ ಶೋಭಿಸುವಂತೆ ಪಡೆದು ಶೋಭಿಸುತ್ತಿದ್ದನು. ೧೨೪. ದಂಡಿಯು ಹರಿಯಿಂದಲೂ ಹೋಗದ ತನ್ನ ಕ್ರೂರವಾದ ಕುಷ್ಠರೋಗವನ್ನು ಕಂಡು ಭಯಗೊಂಡು ಶಂಕರನನ್ನು ಮರೆಹೊಕ್ಕು ಅವನನ್ನು ಸ್ತೋತ್ರ ಮಾಡಿ ಆ ರೋಗವನ್ನು ಹೋಗಲಾಡಿಸಿಕೊಂಡನು. ಮಲ್ಹಣ (ಮಲುಹಣ) ರಸಭರಿತವಾದ ಮಾತುಗಳಿಂದ ಪಾರ್ವತಿವಲ್ಲಭನನ್ನು ತನ್ನ ವೇಶ್ಯೆ ಸಮೇತವಾಗಿ ವರ್ಣಿಸಲಾಗಿ, ಶಿವನು ಅವನ ವರ್ಣನೆಗೆ ಮೆಚ್ಚಿ ಸಂತೋಷದಿಂದ ಮುಕ್ತಿಯೆಂಬ ಸ್ತ್ರೀಯನ್ನಿತ್ತನು. (ಮುಕ್ತಿಯನ್ನು ದಯಪಾಲಿಸಿದನು.) ೧೨೫-೧೨೬. ಪರ

ವಿಳಸದ್ಭಕ್ತಿಗೆ ಕೂರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊ
ನ್ಮಳೆಯಂ ಪೂಮಳೆಗೂಡಿ ತಾಂ ಕಱೆಯಿಸುತ್ತಾನಂದಮಂ ಬೀಱಿನೇ
ಕಳೆವೆತ್ತೊಪ್ಪುವ ಯೌವನಸ್ಥಿತಿಯನಾ ಶ್ರೀನೀಲಕಂಠಂಗವಂ
ಜ್ವಳ ತದ್ಭಾರ್ಯೆಗಮೀವುತುನ್ನತ ರತಿಶ್ರೀಭೋಗಮಂ ಸಾರ್ಚನೇ ೧೨೬

ನಲಿದು ತೆಲುಂಗಜೊಮ್ಮನ ಶರಾಹತಿಯಿಂ ಮೃತಿವೆತ್ತ ಭಲ್ಲಸಂ
ಕುಲಮು[1]ನಗೇಂದ್ರಕೊ[1]ಯ್ಯನೆ ನಿಜೋನ್ನತವಿಷ್ಟರಮೀಯನೇ ಮಹಾ
ಬಲಯುತ ಚೇ[2]ರಮಂಗೆ ನಿಜಲೋಕವ ನಿಂಬಿಗೆ ಸೂಱೆ[2]ಗೊಟ್ಟು ನಿ
ಶ್ಚಲಸುಖಮಿತ್ತು ಮನ್ನಿಸನೆ ದಾನಗುಣಾರ್ಣವನದ್ರಿಜಾಧವಂ ೧೨೭

ಅಕ್ಷಯನಿಧಿಯಂ ತಾನೊ
ಲ್ದಾಕ್ಷಣದೊಳ್ಕುಡನೆ ದಾಸದೇವಂಗೆ ಮೃಡಂ
ರಕ್ಷಿಸನೆ ಕದಿರರೇಮನ
ಮಕ್ಷದೊಳಳಿದಿರ್ದ ಸಪ್ತದಿವಸದ ಪೆಣನಂ ೧೨೮

ಮೇಶ್ವರನು ಸಾಮವೇದಿಯನ್ನು ಅವನ ಪಟ್ಟಣ ಸಮೇತವಾಗಿ ತನ್ನ ಲೋಕಕ್ಕೆ ಕರೆದೊಯ್ಯಲಿಲ್ಲವೇ ? ಆಶ್ಚರ್ಯವೆನ್ನುವಂತೆ ಶೋಭಿಸುತ್ತಿದ್ದ ಓಹಿಲಯ್ಯನನ್ನು ಅವನ ಗಂಟೆ ಸಮೇತವಾಗಿ ಕೈಲಾಸಪರ್ವತಕ್ಕೆ ವಿಸ್ತಾರವಾಗಿ ಕರೆದುಕೊಂಡು ಹೋಗಲಿಲ್ಲವೇ? ಕತ್ತರಿಸಿಹೋದ ಅಂಗಗಳನ್ನೆಲ್ಲ ಒಂದು ಗೂಡಿಸಿ ಗುಹಾಪರಮೂರ್ತಿಯನ್ನು ಶಿವಲಿಂಗ ದಲ್ಲಿ ಐಕ್ಯಗೊಳಿಸಲಿಲ್ಲವೇ ? ಭೂಮಂಡಲದಲ್ಲಿ ಕರಿಕಾಲ ಚೋಳಮಹಾರಾಜನ ಪ್ರಕಾಶ ಮಾನವಾದ ಭಕ್ತಿಗೆ ಮೆಚ್ಚಿ ಭೂಮಿಯೆಲ್ಲ ತುಂಬುವಂತೆ ಹೊನ್ನಿನ ಮಳೆಯನ್ನು ಹೂ ಮಳೆಯೊಡನೆ ಸುರಿಸುತ್ತ ಆನಂದವನ್ನುಂಟುಮಾಡಲಿಲ್ಲವೇ ? ತಿರುನೀಲಕಂಠನಿಗೂ ಅವನ ಹೆಂಡತಿಯಾದ ಮುತ್ತೈದೆಗೂ ಕಳಾವಿಶಿಷ್ಟರಾಗಿ ಶೋಭಿಸುವ ತಾರುಣ್ಯವನ್ನು ದಯಪಾಲಿಸಿ ಶ್ರೇಷ್ಠವಾದ ಭೋಗ ಸಂಪತ್ತನ್ನು ಉಂಟುಮಾಡಲಿಲ್ಲವೇ ? ೧೨೭. ದಾನಗುಣದಲ್ಲಿ ಸಮುದ್ರದೋಪಾದಿಯಲ್ಲಿರುವ ಗಿರಿಜಾಪತಿಯು ಪ್ರೀತಿಯಿಂದ ತೆಲುಗು ಜೊಮ್ಮಯ್ಯನ ಬಾಣದ ಹೊಡೆತದಿಂದ ಸತ್ತುಹೋದ ಕರಡಿಗಳ ಸಮೂಹವನ್ನು ಕೈಲಾಸಗಿರಿಗೆ ಒಯ್ಯಲಿಲ್ಲವೇ ? ಮಹಾಬಲವಂತನಾದ ಚೇರಮನಿಗೆ ತನ್ನ ಶ್ರೇಷ್ಠ ವಾದ ಪೀಠ (ಸಿಂಹ ಪೀಠ) ವನ್ನು ಕೊಡಲಿಲ್ಲವೇ ? ನಿಂಬಿಯಕ್ಕನಿಗೆ ತನ್ನ ಲೋಕವನ್ನೇ ಸೂರೆಗೊಟ್ಟು ಶಾಶ್ವತ ಸುಖವಿತ್ತು ಮನ್ನಣೆಗೊಳಿಸಲಿಲ್ಲವೇ ? ೧೨೮. ದೇವರ ದಾಸಿಮಯ್ಯನಿಗೆ ಶಿವನು ಒಲಿದು ಆ ಕ್ಷಣವೇ ಅಕ್ಷಯನಿಧಿಯನ್ನು ಕೊಡ ಲಿಲ್ಲವೇ ? ಕದಿರ ರೇಮಯ್ಯನ ಎದುರಿನಲ್ಲಿಯೇ ಸತ್ತು ಹೋಗಿದ್ದ ಏಳು ದಿನದ ಹೆಣ

1 ನಿಜಾದ್ರಿಗೊ(ಜ , ಮು) 2 ಚಾ(ಮ, ಚ)

ಮಲಯೋರ್ವೀನಾಥನಂ ಪುಷ್ಪಕದೊಳಿರಿಸಿ ಕೊಂಡೊಯ್ಯನೇ ಮುಕ್ತಿಯುಂ ಗ
ಲ್ಗಲನಾ ಪೆರ್ಮಾಡಿಗೊಲ್ದೀಯನೆ ಗಣಪದಮಂ ಸಾರ್ಚನೇ ಶಂಕರಯ್ಯಂ
ಗಲಘು ಸ್ವಾತಂತ್ರ್ಯದಿಂ ಗೂರ್ಜರವಿಭು ನಿಜಸೇನಾನ್ವಿತಂ ಪೋಗನೇ ನಿ
ಶ್ಚಲಗಾಣಾಪತ್ಯಕಾ ಷೋಡಶರ ಬಗೆಗೆ ತಾಂ ಮಚ್ಚನೇ ಬ್ರಹ್ಮನಾಥಂ ೧೨೯

ವೀರತೇರಸರುಗ್ರಶೌರ್ಯಕೆ ಮೆಚ್ಚಿ ಮನ್ನಿಸನೇ ಮನೋ
ಜಾರಿ ಬೇಂಟೆಯ ಕಜ್ಜದುಜ್ಜುಗಕೊಲ್ದು ಜಾಗರವಿರ್ದ ಕಾಂ
ತಾರಚಾರಿಗೆ ಶೈವರಾತ್ರಿಯ ಸತ್ಫಲಂಗುಡುತೋವಿ ತ
ನ್ನೂರನೆಯ್ದಿಸನೇ ಮಹೇಶ್ವರನಂತೆ ದಾನಿಯದಾವನೋ ೧೩೦

ಹರನಿಂತುಟಿತ್ತ ವರಮುಮ
ನಿರದೀ ಪರಿಯಿಂದೆ ಶಿವನ ಮೆಚ್ಚಿಸಿ ಸಂದಾ
ದ್ಯರ ಬಹುವಿಧ ಚರಿತಮುಮಂ
ಧರಣಿಯೊಳಿನಿತೆಂದು ಬಗೆದು ಬಣ್ಣಿಪರೊಳರೇ ೧೩೧

ಈಗಳುಮಿಲ್ಲಿ ಭಾಳನಯನಪ್ರತಿಮಾನನೆನಿಪ್ಪ ಶೈವವಿ
ದ್ಯಾಗುರು ಮಾಚಿದೇವವಿಭು ಕಿನ್ನರನಾಯಕ ಮುಖ್ಯ ಸಾರತೇ
ಜೋಗರಿಮಾಂಕ ಭಕ್ತತತಿಗಿಷ್ಟಮನಿತ್ತಪನಲ್ತೆ ದಾನಲೀ
ಲಾಗುಣಶಾಲಿ ಕಿಂಕರಸುಖಂಕರನೆಮ್ಮಯ ದಿವ್ಯ ಶಂಕರಂ ೧೩೨

ವನ್ನು ರಕ್ಷಿಸಲಿಲ್ಲವೇ ? ೧೨೯–೧೩೦. ಬ್ರಹ್ಮನಾಥಶಿವನು ಮಲಯರಾಜನನ್ನು ತನ್ನ ಪುಷ್ಪಕದಲ್ಲಿ ಕುಳ್ಳಿರಿಸಿಕೊಂಡು ಹೋಗಲಿಲ್ಲವೇ ? ಪೆರ್ಮಾಡಿಗೆ ಒಲಿದು ಬೇಗನೆ ಮುಕ್ತಿಯನ್ನು ಉಂಟು ಮಾಡಲಿಲ್ಲವೇ ? ಪಾಲಗುರ್ಜರ ಮಹಾರಾಜನು ತನ್ನ ಸೇನೆ ಸಮೇತವಾಗಿ ಶಾಶ್ವತವಾದ ಶಿವಗಣಾಧಿಪತ್ಯಕ್ಕೆ ಹೋಗಲಿಲ್ಲವೇ? ಷೋಡಶ (ಹದಿನಾರು ಜನ ಶಿವಭಕ್ತರ) ಭಕ್ತಿಗೆ ಮೆಚ್ಚಲಿಲ್ಲವೇ ? ಮನ್ಮಥದಾರಿಯಾದ ಶಿವನು ವೀರರಾದ ತೇರಸರು (ಹದಿಮೂರು ಜನ ವೀರ ಶಿವಭಕ್ತರು) ಗಳ ಉಗ್ರವಾದ ಶೌರ್ಯಕ್ಕೆ ಮೆಚ್ಚಿ ಮನ್ನಣೆ ಮಾಡಲಿಲ್ಲವೇ ? ಬೇಟೆಯಾಡುವ ಉದ್ಯೋಗಕ್ಕೆ ಒಲಿದು ಅದನ್ನಾಚರಿಸುತ್ತ ರಾತ್ರಿಯೆಲ್ಲ ಜಾಗರಣೆ ಮಾಡಿದ ಬೇಡನಿಗೆ (ಕಾಂತಾರಚಾರಿಗೆ) ಶಿವರಾತ್ರಿಯ ಪುಣ್ಯಫಲವನ್ನು ಕೊಡುತ್ತ ಪ್ರೀತಿಯಿಂದ ಕೈಲಾಸಕ್ಕೆ ಕರೆದೊಯ್ಯಲಿಲ್ಲವೇ ? ಪರಮೇಶ್ವರನ ಹಾಗೆ ದಾನಿಯು ಯಾವನಿರುವನೋ ! ೧೩೧. ಶಿವನು ಈ ರೀತಿ ಕೊಟ್ಟವರಗಳನ್ನೂ, ಈ ರೀತಿ ಶಿವನನ್ನು ಮೆಚ್ಚಿಸಿ ಮುಕ್ತಿಯನ್ನು ಪಡೆದ (ಕೈಲಾಸಕ್ಕೆ ಹೋದ) ಪುರಾತನರ ಅನೇಕ ಪ್ರಕಾರದ ಚರಿತ್ರೆಗಳನ್ನೂ ಲೋಕದಲ್ಲಿ ಇಷ್ಟೇ ಎಂದು ಯೋಚಿಸಿ ವರ್ಣಿಸುವವರೂ ಉಂಟೆ ? ೧೩೨. ದಾನ ಮಾಡುವ ಲೀಲೆಯೇ ಗುಣವಾಗಿ ಉಳ್ಳವನೂ, ತನ್ನ ಸೇವೆಯನ್ನು ಮಾಡುವವರಿಗೆ ಸುಖವನ್ನುಂಟುಮಾಡುವವನೂ ಆದ ನಮ್ಮ ಪವಿತ್ರ (ಶ್ರೇಷ್ಠ) ಶಂಕರನು ಈ ಕಲ್ಯಾಣನಗರದಲ್ಲಿ ಈಗಲೂ ಕೂಡ ಪರಮೇಶ್ವರ ಸದೃಶರಾದ ವೀರಶೈವ ತತ್ತ್ವ ವಿದ್ಯೆಯನ್ನು ಬೋಧಿಸುವಂತಹ ಮಡಿವಾಳ ಮಾಚದೇವವಿಭು, ಕಿನ್ನರಿಯ ಬೊಮ್ಮಯ್ಯ ಪ್ರಭುವೇ ಮುಖ್ಯರಾದ ಸಾರಭೂತವಾದ ವೀರಶೈವ ತೇಜಸ್ಸಿನ ಮಹತ್ವವೇ ಚಿಹ್ನೆಯಾಗುಳ್ಳ ಶಿವಭಕ್ತ ಸಮೂಹಕ್ಕೆ

ವ॥ ಎಂದಿಂತು ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿತ್ತರಿಸುತ್ತು ಮಿದುಕಾರಣಮೆಮ್ಮ ಶಿವಂಗೆ ಸದೃಶರೊಳರೆಂಬ ಪುಸಿ[1]ನುಡಿಗಳುಮಂ ಸರ್ವಮುಂ ಬೊಮ್ಮಮೆಂಬ ದ್ವೈತವಾದಮುಮಂ ಯಥಾ ಶಿವಮಯೋ ವಿಷ್ಣುಸ್ತಥಾ ವಿಷ್ಣುಮಯಃ ಶಿವಯೆಂಬ ಖಿಲವಾಕ್ಯದಿಂ ತ್ರಿಮೂರ್ತಿಗಳ್ಗಭೇದಮನುಸುರ್ದ ದುರುಕ್ತಿಗಳುಮನಷ್ಟಮೂರ್ತಿಗಳೆಲ್ಲಂ ಶಿವನಪ್ಪುವೆಂಬ ಕಾಳ್ಮಾತುಗಳುಮಂ ಶಿವಭಕ್ತರ್ಗೆ ಭವಿನರರ್ಸಮಾನರೆಂದು ಗಳಪುವಸಂಬದ್ಧಾಲಾಪಂಗಳುಮಂ ಬಗೆದಂದು ಕೇಳ್ದವರ್ಗೆ ದುರ್ಗತಿಯಕ್ಕುಮೆಂದು ಭಾಸ್ಕರದೇವನುದ್ಘೋಷಿಸಿ —

ಧರಣಿಪ ನೀನಿಂದೆಮ್ಮಂ
ಬರಿಸಿದೆ ಕಡುಗಜ್ಜಮಾವುದದನೊರೆ ಮಾಳ್ಪೆಂ
ಪುರಹರನಲ್ಲದ ದೇವಾಂ
ತರಮಂ ನಡೆ ನೋಳ್ಪುದೆಮಗೆ ಸಲ್ಲದು ನಿಜದಿಂ ೧೩೩

ವ॥ ಅಂತಾದೊಡಂ ನೋಡಲ್ವೇಳ್ಕುಮೆಂಬೆಯಪ್ಪೊಡೆ ನಿನ್ನಾದೇಶಂ ಬಿಡಿದು ನೋಳ್ಪೆನೆಂದಣಕಂ ಮಿಗೆ ನಿಂದು ಕಟಾಕ್ಷದಿನುತ್ಕಟಿಸಿ ನೋಡಲೊಡನೆ—

ಅವರವರ ಇಷ್ಟಾರ್ಥಗಳನ್ನು ಕೊಟ್ಟನಲ್ಲವೇ ! ವ॥ ಈ ರೀತಿಯಲ್ಲಿ ವೇದ, ಆಗಮ, ಪುರಾಣದ ಮಾತುಗಳ ಆಧಾರದಿಂದ ಸ್ವಭಾವ ಸಿದ್ಧವಾದ ಶಿವನ ಶ್ರೇಷ್ಠತೆಯನ್ನು (ಆಧಿಕ್ಯವನ್ನು) ವಿವರಿಸುತ್ತ ಈ ಈ ಕಾರಣದಿಂದ ಶಿವನಿಗೆ ಸಮಾನರಾದವರು ಇದ್ದಾರೆ ಎನ್ನುವ ಸುಳ್ಳು ನುಡಿಗಳನ್ನೂ, ಸರ್ವವೂ ಬ್ರಹ್ಮವೆಂಬ ಅದ್ವೈತವಾದವನ್ನೂ, 'ಯಥಾ ಶಿವಮಯೋ ವಿಷ್ಣುಸ್ತಥಾ ವಿಷ್ಣುಮಯಃ ಶಿವಃ' (ಹೇಗೆ ಹರಿಯೂ ಶಿವಸ್ವರೂಪನೋ ಹಾಗೆಯೇ ಶಿವನೂ ವಿಷ್ಣುಸ್ವರೂಪನು) ಎಂದೆನ್ನುವ ಜೊಳ್ಳು ಮಾತಿನಿಂದ ತ್ರಿಮೂರ್ತಿಗಳಿಗೆ ಅಭೇದವನ್ನು ಹೇಳುತ್ತಿರುವ ಕೆಟ್ಟಮಾತುಗಳನ್ನೂ ಪೃಥ್ವಿಯೇ ಮೊದಲಾದ ಅಷ್ಟಮೂರ್ತಿಗಳೆಲ್ಲ ಶಿವನೇ ಆಗುತ್ತವೆಂಬ ಕಾಡುಮಾತುಗಳನ್ನೂ ಶಿವಭಕ್ತರಿಗೆ ಭವಿನರರು ಸಮಾನರೆಂದು ವ್ಯರ್ಥವಾಗಿ ಮಾತನಾಡುವ ಅಸಂಬದ್ಧ ಮಾತುಗಳನ್ನೂ ಮನಸಿಟ್ಟುಕೊಳ್ಳುವವರಿಗೆ ದುರ್ಗತಿಯುಂಟಾಗುತ್ತದೆಂದು ಸೊಡ್ಡಳ ಬಾಚರಸದೇವನು ಉತ್ತರಸ್ವರದಿಂದ ಕೂಗಿ ತಿಳಿಸಿ (ಘೋಷಣೆ ಮಾಡಿ) ೧೩೩. ಬಿಜ್ಜಳ ಭೂಮಿಪಾಲನೇ, ನೀನು ಈ ದಿನ ನಮ್ಮನ್ನು ಕರೆಸಿದೆ. ಶ್ರೇಷ್ಠಕಾರ್ಯವಾವುದೋ ಅಂಥದನ್ನು ಹೇಳು ಮಾಡುತ್ತೇನೆ. ಪರಮೇಶ್ವರನಲ್ಲದೆ ಅನ್ಯ ದೈವವನ್ನು ನೋಡುವುದು ನನ್ನ ವ್ರತಕ್ಕೆ ನಿಜವಾಗಿಯೂ ಸಲ್ಲತಕ್ಕದ್ದಲ್ಲ. ವ॥ ಹೀಗಿದ್ದರೂ ನೋಡಲೇಬೇಕು ಎನ್ನುವುದಾದರೆ, ನಿನ್ನ ಆಜ್ಞೆಯಂತೆ ನೋಡುವೆನು ! (ಅಷ್ಟೆ !) ಎಂದು ವಿಶೇಷ ಪರಿಹಾಸದಿಂದ ಆ ವಿಷ್ಣುಪ್ರತಿಮೆ

1 + ಯ(ಚ,ಜ)

ಸಿಡಿದೊಡೆದು ಸೀಳ್ದು ಪೊಡವಿಯೊ
ಳಡೆಗೆಡೆದುದು ಜಡಜಲೋಚನಪ್ರತಿಮೆ ನೃಪಂ
ಬಿಡದದನೀಕ್ಷಿಸುತೆ ಭಯಂ
ಬಡೆದಂ ವಾದಿಗಳುಮಳ್ಕಿ ತಲೆವಾಗಿರ್ದರ್ ೧೩೪

ವ॥ ಆನಂತರಮರಸನಾ ಘನಮಹಿಮನ ಮಹಿಮೆಯಂ ಪೊಗಳ್ದೋಲಗಮಂ ವಿಸರ್ಜಿಸಿ ನಿಜಾಲಯಕ್ಕೆ ತಳರ್ದನಾ ಪ್ರಸ್ತಾವದೊಳ್—

ವಿತತಾನಂದಾಂತರಂಗಂ ವಿಮಳಮತಿ ಮಹಾಭಕ್ತಿಯಿಂ ಭಕ್ತವೃಂದಾ
ವೃತನಾಗಳ್ ಭಾಸ್ಕರಾರ್ಯಂಗೆಱಗಿ ಪೊಗಳ್ದು ತನ್ಮಂದಿರಕ್ಕೊಲ್ದು ಬೀಳ್ಕೊ
ಟ್ಟತುಳೋತ್ಸಾಹಪ್ರಭಾವಂ ಪಸರಿಸೆ ಮಿಗೆ ಕೊಂಡಾಡುತುಂ ತನ್ಮಹತ್ವ
ಸ್ಥಿತಿಯಂ ತಾಂ ಬಂದು ಪೊಕ್ಕಂ ನಿಜಗೃಹಮನುಮಾಕಾಂತಹೃತ್ಪದ್ಮಸದ್ಮಂ ೧೩೫

ಗುಣನಿಧಿ ಭಾಸ್ಕರಚರಿತಮ
ನಣಿಯರಮೀದನಾವನೋದುವಂ ಕೇಳ್ವನವಂ
ಪ್ರಣುತ ಸುಖಭೋಗಸಂಪದ
ಗಣಪದಮಂ ಪಡೆವನಭವಭಕ್ತರ ಕೃಪೆಯಿಂ ೧೩೬

ಯನ್ನು ತನ್ನ ಕಡೆಗಣ್ಣುಗಳ ತೀಕ್ಷ್ಣತೆಯಿಂದ ನೋಡಿದ ಕೂಡಲೇ ೧೩೪. ಆ ಕಮಲ ನೇತ್ರನಾದ ವಿಷ್ಣುವಿನ ಪ್ರತಿಮೆಯು ಸಿಡಿದು ಒಡೆದು ಸೀಳು ಬಿಟ್ಟು, ಭೂಮಿಯ ಮೇಲೆ ಬಿದ್ದಿತು, ಬಿಜ್ಜಳ ಮಹಾರಾಜನು ಹಾಗೆ ಬಿದ್ದ ಪ್ರತಿಮೆಯನ್ನು ನೋಡಿ, ಭಯಗೊಂಡನು. ಪ್ರತಿವಾದಿಗಳು ತಲೆ ತಗ್ಗಿಸಿದರು. ವ॥ ಅನಂತರ ಬಿಜ್ಜಳ ಭೂ ಪಾಲನು ಘನಮಹಿಮಾ ಶಾಲಿಯಾದ ಸೊಡ್ಡಳ ಬಾಚರಸನ ಮಹಿಮೆಯನ್ನು ಹೊಗಳಿ ಓಲಗವನ್ನು ಮುಕ್ತಾಯಗೊಳಿಸಿ, ತನ್ನ ಅಂತಃಪುರಕ್ಕೆ ಹೋದನು. ಆ ಸಮಯದಲ್ಲಿ ೧೩೫. ವಿಶೇಷವಾದ (ವಿಸ್ತಾರವಾದ) ಆನಂದದಿಂದ ಕೂಡಿದ ಹೃದಯವುಳ್ಳವನೂ, ಪರಿಶುದ್ಧ ಅಂತಃಕರಣವುಳ್ಳವನೂ, ಆದ ಬಸವೇಶ್ವರನು ಅತ್ಯಂತ ಭಕ್ತಿಯಿಂದ ಸಮಸ್ತ ಭಕ್ತವೃಂದದೊಡನೆ ಕೂಡಿ, ಆಗ ಸೊಡ್ಡಳ ಬಾಚರಸರಿಗೆ ನಮಸ್ಕಾರಮಾಡಿ, ಹೊಗಳಿ, ಅವರ ಮನೆಗೆ ಅವರನ್ನು ಕಳುಹಿಸಿಕೊಟ್ಟು ಅಸದೃಶವಾದ ಸಂತೋಷಾಧಿಕ್ಯದ ತೇಜಸ್ಸು ವ್ಯಾಪಕವಾಗುವಂತೆ ಆತನ ಮಹತ್ವದ ರೀತಿಯನ್ನು ಕೊಂಡಾಡುತ್ತ, ಉಮಾಪತಿ ಯಾದ ಪರಮೇಶ್ವರನ ಹೃದಯ ಕಮಲದಲ್ಲಿ ವಾಸಿಸುವಂತಹ ಆವನು ಬಂದು ತನ್ನ ಮನೆಯನ್ನು ಸೇರಿದನು. ೧೩೬. ಸದ್ಗುಣಗಳ ನಿಧಿಯಾದ ಬಾಚರಸದೇವನ ಚರಿತ್ರೆ ಯನ್ನು ಅತಿಶಯ ಪ್ರೀತಿಯಿಂದ ಯಾವನು ಓದುವನೋ, (ಮತ್ತು) ಕೇಳುವನೋ ಅವನು ಅತ್ಯಂತ ಶ್ಲಾಘ್ಯವಾದ ಸುಖ ಭೋಗವೆಂಬ ಸಂಪತ್ತೆನಿಸಿದ ಶಿವಗಣಸ್ಥಾನವನ್ನು

ಚಂಡದೀಧಿತಿ ಮಂಡಲಾಂತರಮಂದಿರೇ ಮುದಿತೇಂದಿರೇ
ಕುಂಡಲೀಶ್ವರ ಮಂಡನೇಶ್ವರ ವಲ್ಲಭೇ ಶ್ರುತಿದುರ್ಲಭೇ
ಕುಂಡಲದ್ಯುತಿಮಂಡಿತಾನನ ಭಾಸುರೇ ವಿಜಿತಾಸುರೇ
ಚಂಡಿ ನೀಂ ಪೊರೆ ಖಂಡಚಂದ್ರವಿಭೂಷಣೇ ಖಲಭೀಷಣೇ ೧೩೭

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಸೊಡ್ಡಳಬಾಚಿರಾಜವಾದಿ ವಿಜಯಕಥನಂ

ಸಪ್ತತ್ರಿಂಶಾಶ್ವಾಸಂ ಸಮಾಪ್ತಂ.

ಅಂತು ಆಶ್ವಾಸ ೩೭ಕ್ಕೆ ಪದಗಣನೆ ೩೦೨೦ಕ್ಕೆ ಮಂಗಳಮಹಾ ಶ್ರೀ॥

ಪರಮಾತ್ಮನ ಭಕ್ತರ ಕೃಪೆಯಿಂದ ಪಡೆಯುವನು. ೧೩೭. ಸೂರ್ಯನ ಮಂಡಲ ಮಧ್ಯವೇ ಮನೆಯಾಗಿ ಉಳ್ಳವಳೂ, ಲಕ್ಷ್ಮಿಯನ್ನು ಸಂತೋಷಪಡಿಸುವವಳೂ, ಆದಿ ಶೇಷನೇ ಅಲಂಕಾರವಾಗಿ ಉಳ್ಳ ಶಿವನ ಹೆಂಡತಿಯೂ, ವೇದಗಳ ಸ್ತೋತ್ರಕ್ಕೆ ನಿಲುಕದವಳೂ, ಕಿವಿಯಲ್ಲಿನ ಆಭರಣಗಳ ಕಾಂತಿಯಿಂದ ಅಲಂಕಾರಗೊಂಡ ಮುಖದಿಂದ ಪ್ರಕಾಶಿಸುವವಳೂ, ಅಸುರರನ್ನು ಜಯಿಸಿದವಳೂ, ಚಂದ್ರನ ಒಂದು ಕಲೆಯನ್ನು ಧರಿಸಿದವಳೂ, ದುಷ್ಟ ಜನರಿಗೆ ಭಯಂಕರಳೆನಿಸಿದವಳೂ, ಆದ ಚಂಡಿಯೇ ನೀನು (ನನ್ನನ್ನು) ರಕ್ಷಿಸು.

ಮೂವತ್ತೇಳನೆಯ ಆಶ್ವಾಸವು ಸಮಾಪ್ತವಾಯಿತು.

# ಅಷ್ಟತ್ರಿಂಶಾಶ್ವಾಸಂ

[ಶಿವನಾಗಮಯ್ಯನ ಕಥೆ]

ಶ್ರೀಧರವರತನಯಾಮಧು
ರಾಧರಪರಿಪಕ್ವಬಿಂಬಫಳರಾಜಶುಕಂ
ಸಾಧುಜನವರದನಮರನ
ದೀಧರನೆಮಗೀಗೆ ಸೌಖ್ಯಮಂ ಶಿವಲಿಂಗಂ ೧

ಕುಸುಮಾಸ್ತ್ರಾರಿಪದೈಕಭಕ್ತಿನಿರತಂ ಸ್ವಜ್ಞಾನವಿಸ್ತಾರಸಾ
ರಸದಾಚಾರಸಮನ್ವಿತಂ ಗುಣಗಣಾಲಂಕಾರನುದ್ಧೃತತಾ
ಮಸನತ್ಯಂತ ವಿಶುದ್ಧ ಚಿತ್ತನಭವಾಂಘ್ರಿಧ್ಯಾನಜಾತೋತ್ಸವಂ
ಮಿಸುಗಿರ್ದಂ ಶಿವನಾಗಯೋಗಿಯೆನಿಪೊರ್ವಂ ಭಕ್ತಿರತ್ನಾಕರಂ ೨

ಬಸವರಸನನುದಿನಂ ಸಂ
ತಸದಿಂ ಶಿವನಾಗದೇವಯೋಗೀಂದ್ರನ ಪೆಂ
ಪೆಸೆವ ಪದನಳಿನಮಂ ಪೂ
ಜಿಸುತುಂ ಸುಖಮೊಪ್ಪುತಿರ್ದನಿರ್ಪನ್ನೆವರಂ ೩

ಕಂಡದನಲ್ಲಿ ಮಟ್ಟಿಯ ಮರುಳ್ಗಳೆನಿಪ್ಪ ಮದಾಂಧವಿಪ್ರರು
ದ್ದಂಡತೆಯಿಂದೆ ಸೈರಿಸದೆ ಬಿಜ್ಜಳನಿರ್ದ ಸಭಾಂತರಕ್ಕೆ ಮುಂ

## ಶಿವನಾಗಮಯ್ಯನ ಕಥೆ

೧. ಮಂಗಳಕರವಾದ ಪಾರ್ವತೀ ದೇವಿಯ ಮಧುರವಾದ ಪಕ್ವಗೊಂಡ ತೊಂಡೆಯ ಹಣ್ಣಿನಂಥ ತುಟಿಗಳಿಗೆ ಅರಗಿಳಿಯಾದವನೂ, ಸಜ್ಜನರಿಗೆ ವರಗಳನ್ನು ದಯಪಾಲಿಸುವವನೂ, ದೇವ ಗಂಗಾನದಿಯನ್ನು (ಶಿರದಲ್ಲಿ) ಧರಿಸಿದವನೂ ಎನಿಸಿದ ಶಿವಲಿಂಗನು ನಮಗೆ ಸೌಖ್ಯವನ್ನುಂಟುಮಾಡಲಿ. ೨. ಮನ್ಮಥ ವೈರಿಯಾದ ಶಿವನ ಪಾದಗಳ ಏಕೈಕ ಭಕ್ತಿಯಲ್ಲಿ ನಿರತನಾದವನೂ, ಅಧಿಕವಾದ ಸುಜ್ಞಾನ, ಸದಾಚಾರ ಸಮನ್ವಿತನೂ ಸದ್ಗುಣ ಸಮೂಹವೇ ಅಲಂಕಾರವಾಗಿ ಉಳ್ಳವನೂ, ತಪೋಗುಣವನ್ನು ನಾಳಗೊಳಿಸಿದವನೂ, ಅತ್ಯಂತ ಪರಿಶುದ್ಧವಾದ ಮನಸ್ಸುಳ್ಳವನೂ, ಪರಮೇಶ್ವರನ ಪಾದ ಧ್ಯಾನದಿಂದ ಉಂಟಾದ ಸಂತೋಷದಿಂದ ಕೂಡಿದವನೂ, 'ಶಿವನಾಗಮಯ್ಯ ಯೋಗಿ' ಎಂಬ ಹೆಸರಿನ ಓರ್ವನು ಭಕ್ತಿಗೆ ಸಮುದ್ರ ಪ್ರಾಯನಾದವನು ಶೋಭಿಸುತ್ತಿದ್ದನು. ೩–೪. ಬಸವರಸನು ಪ್ರತಿ ದಿನವೂ ಸಂತೋಷದಿಂದ ಶಿವನಾಗ ದೇವಯೋಗಿ ಶ್ರೇಷ್ಠನ ಘನತೆಯಿಂದ ಶೋಭಿಸುವ ಪಾದ ಕಮಲವನ್ನು ಪೂಜಿಸುತ್ತ ಸುಖದಿಂದ ಒಪ್ಪುತ್ತಿದ್ದನು. ಹೀಗೆ ಇರುತ್ತಿರುವಲ್ಲಿ ಬಸವಣ್ಣನು ಹೀಗೆ ಶಿವನಾಗಮಯ್ಯನನ್ನು ಸೇವಿಸುತ್ತಿರುವುದನ್ನು

ಕೊಂಡೊಪಸೆಯ್ದು ನಿಂದು ಪಿಸುಣಾಡಿದರುರ್ವಿಪ ನಿನ್ನ ಮಂತ್ರಿ ಭೂ
ಮಂಡಲವಿಶ್ರುತಂ ಬಸವನಳ್ಕದೆ ಪೊಲ್ಲದು ಗೆಯ್ದನದ್ಭುತಂ ೪

ಪಿರಿಯ ಭಕ್ತನೆನುತ್ತೆ ವಂದಿಸುತಂತ್ಯಜಾತನ ಕಾಲ್ಗಳಂ
ಭರದೆ ತಾಂ ತೊಳೆದಂಘ್ರಿವಾರಿಯನೀಂಟಿ ಮಸ್ತಕದಲ್ಲಿ ತಾ
ಳ್ದಿರದೆ ತತ್ಪದಸೇವೆಗೆಯ್ದಪನಳ್ಕದೀ ಸಭೆಗೆಯ್ದುವಂ
ಪರಮಸಜ್ಜನನಂತಿರಂತಪುರಕ್ಕೆ ಪೊಕ್ಕಡೆಯಾಡುವಂ[1] ೫

ಕುಲಜಂಗಂತ್ಯಜನಂಗದುರ್ವಿದ ನೆಳಲ್ಮೈಸೋಂಕೆ ತದ್ದೋಷಮಂ
ಕೆಲನೂಂಕಲ್ ಶ್ರುತಿ ಪೇಳ್ಗುಮುಗ್ಗದ ಸಚೇಲಸ್ನಾನಮಂ ನೋಡೆ ಸ
ತ್ಕುಲಜಂ ತಾನೆನಿಸಿರ್ದುಮಂತ್ಯಜನ ಕಾಲಂ ಕರ್ಚಿ ತದ್ವಾರಿಯಂ
ನಲವೆತ್ತೀಂಟಿದನೆಂದೊಡೀ ಬಸವನಿನ್ನೇನೆಂಬೆವೀ ದೋಷಮಂ ೬

ದಾರಿವಿಡಿದೇಳ್ತರುತೆ ಕೆಲ
ಸಾರಂದ್ವಿಜರಿದಿರೊಳೆಯ್ದೆಯುಂ ಲೆಕ್ಕಿಸನೀ
ಪೌರರನಂತ್ಯಜಭಕ್ತಂ
ಭೀರುತ್ವಮನುಳಿದ ಗರ್ವದೊಳ್ಬೆಜೆತಿರ್ಪಂ ೭

ಕಂಡು ಮಣ್ಣಿನ (ಮಣ್ಣುಹುಯ್ದುಕೊಳ್ಳುವ) ಪಿಶಾಚಿಗಳಂತಿರುವ ಕೆಲವು ಮದೋನ್ಮತ್ತ ವಿಪ್ರರು ಔದ್ಧತ್ಯದಿಂದ ಸೈರಿಸಲಾರದವರಾಗಿ, ಬಿಜ್ಜಳನಿರುವ ಸಭಾಸ್ಥಾನಕ್ಕೆ ಆತುರಪಟ್ಟು ಆ ಕೂಡಲೇ ಬಂದು ನಿಂತುಕೊಂಡು, 'ಭೂಪಾಲನೇ, ಭೂಮಂಡಲದಲ್ಲೆಲ್ಲ ಪ್ರಸಿದ್ಧನಾದ ನಿನ್ನ ಮಂತ್ರಿ ಬಸವಣ್ಣನು ಸ್ವಲ್ಪವೂ ಹೇಸದೆ ಅದ್ಭುತವಾದ ಅಯೋಗ್ಯ ಕಾರ್ಯವನ್ನು ಮಾಡಿದ್ದಾನೆ' ಎಂದು ಚಾಡಿಯ ಮಾತನ್ನಾಡಿದರು. ೫. ಅಂತ್ಯ ಜಾತನಾದವನ (ಅಸ್ಪೃಶ್ಯನ)ನ್ನು ಹಿರಿಯ ಭಕ್ತನೆಂದು ಅನ್ನುತ್ತ ಸಂಭ್ರಮದಿಂದ ತಾನೇ ಆತನ ಪಾದಗಳನ್ನು ತೊಳೆದು ಆ ನೀರನ್ನು ಕುಡಿದು ತಪ್ಪದೆ ತಲೆಯ ಮೇಲೂ ಧರಿಸಿ, ಆತನ ಪಾದಸೇವೆಯನ್ನು ಮಾಡಿ, ಅಂಜದೆ ಈ ಸಭೆಗೆ ಬರುವನು. ಪರಮ ಸಜ್ಜನನಹಾಗೆ ಇದ್ದುಕೊಂಡು ಅಂತಃಪುರ (ರಾಜಾಂತಃಪುರ) ಕ್ಕೂ ಓಡಾಡುವನು. ೬. ಸತ್ಕುಲಪ್ರಸೂತನಾದವನಿಗೆ ಅಂತ್ಯಜನ ದೇಹದ ಮದದ ನೆಳಲು ಸೋಕಿದರೂ ಕೂಡ ಆ ದೋಷವನ್ನು ನಿವಾರಿಸಿಕೊಳ್ಳಲು, ಬಟ್ಟೆ ಸಮೇತವಾಗಿ ಸ್ನಾನ ಮಾಡಬೇಕೆಂದು ಶ್ರುತಿಯು ಹೇಳುತ್ತಿರುವುದು. ವಿಚಾರಮಾಡಿ ನೋಡಿದರೆ, ಸತ್ಕುಲದಲ್ಲಿ ಹುಟ್ಟಿದವನೆನಿಸಿಯೂ ಕೂಡ ಬಸವೇಶ್ವರನು ಅಂತ್ಯಜನಾದವನ ಕಾಲನ್ನು ತೊಳೆದು ಆ ನೀರನ್ನು ಪ್ರೀತಿಯಿಂದ ಕುಡಿದನೆಂದರೆ, ಈ ದೋಷಕ್ಕೆ ಏನು ಹೇಳಬೇಕು. ೭. ಈ ಅಸ್ಪೃಶ್ಯಭಕ್ತನು, ದಾರಿಯನ್ನು ಹಿಡಿದುಬರುವಾಗ ದೂರ ಸರಿದು ಬರುತ್ತಿಲ್ಲ; ಬ್ರಾಹ್ಮಣರು ಎದುರಿಗೆ ಬಂದರೂ ಲಕ್ಷ್ಯಕ್ಕೇ ತೆಗೆದುಕೊಳ್ಳುವುದಿಲ್ಲ ; ಗರ್ವದಿಂದ ಕೂಡಿದ ಅವನು ಭಯವನ್ನು ಬಿಟ್ಟು ಪಟ್ಟಣಿಗರೊಡನೆ ಬೆರೆತು ಬಿಡುವನು.

---

1 ಗು(ದ)

ಇನ್ನೆಲ್ಲಿಯ ವರ್ಣಾಶ್ರಮ
ಮಿನ್ನೆಲ್ಲಿಯ ಧರ್ಮಕರ್ಮಗತಿ ಭೂವರ ಕೇ
ಳಿನ್ನೆಲ್ಲಿಯ ವೈದಿಕಪಂಥ
ಮುನ್ನತಿ ಪೊಲೆಗಲಸಿ ಕೆಟ್ಟುದೀ ಕಲ್ಯಾಣಂ ೮

ಪುಳಿಯೊಳ್ಪಾಲ್ ಬಿಸದೊಳ್ಮಧು
ಕಳೆಯೊಳ್ಬೆಳೆ ಖಳನೊಳುತ್ತಮಂ ದುಷ್ಕುಲನೊ
ಳ್ವೆಳಸತ್ಕುಲಜಂ ಬೆರೆದೊಡೆ
ಪಳಿ ಪೊರ್ದುಗುಮಳಿಗುಮವರ ಸಹಜಗುಣಂಗಳ್ ೯

ನಾಡೊಳಗಾದ ದುರ್ನಯಮನಾಲಿಸುತಾಜ್ಞೆಯನಾತ್ಮಶಕ್ತಿಯಿಂ
ಮಾಡದ ಮೂಢ ಭೂಪತಿಗೆ ನಾಡಘಮಕ್ಕುಮದಂ ನೃಪಂಗೆ ಕಂ
ಡಾಡದ ತತ್ಪುರೋಹಿತನನಾ ನೃಪದೋಷಮುಮಂತೆ ಸಾರ್ಗುಮೆಂ
ದಾಡಿದೆವಲ್ತೆ ದೋಷಮೆಮಗಿನ್ನಣಮಿಲ್ಲೆನೆ ಕೇಳ್ದು ಭೂಭುಜಂ ೧೦

ವ॥ ಕುಪಿತನಾಗಿ ಬಸವರಸನಂ ಕರೆಯೆಂಬುದುಮರಸನನುಚರರ್ ಬಂದು ಕರೆಯಲೊಡನದೆಲ್ಲಮಂ ಸರ್ವಜ್ಞನಱಿದಾ ಶಿವನಾಗದೇವನಂ ಮಾಣಿಮಯಾಂದೋಳಮನೇಱಿಸಿ ಕೆಲದೊಳೋಲಗಿ

೮. ಮಹಾರಾಜ, ಇನ್ನೆಲ್ಲಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಾಶ್ರಮಧರ್ಮ! ಇನ್ನೆಲ್ಲಿಯ ಧರ್ಮ, ಕರ್ಮ, ಸದ್ಗತಿಗಳ ಮಾತು! ಇನ್ನೆಲ್ಲಿಯ ವೇದಮಾರ್ಗದ ಶ್ರೇಷ್ಠತೆ! (ಎಲ್ಲವೂ) ಹೊಲೆಯರೊಡನೆ ಕಲಸಿ (ವರ್ಣಸಾಂಕರ್ಯವುಂಟಾಗಿ) ಈ ಕಲ್ಯಾಣ ನಗರವು ಕೆಟ್ಟು ಹೋಯಿತು. ೯. ಹುಳಿಯಲ್ಲಿ ಹಾಲು, ವಿಷದಲ್ಲಿ ಅಮೃತ ಕಳೆಯಲ್ಲಿ (ಕೆಟ್ಟ ಹುಲ್ಲಿನಲ್ಲಿ) ಬೆಳೆ, ದುಷ್ಟನೊಡನೆ ಉತ್ತಮನು, ದುಷ್ಟಕುಲದಲ್ಲಿ ಹುಟ್ಟಿದವನೊಡನೆ ಸತ್ಕುಲದಲ್ಲಿ ಹುಟ್ಟಿದವನು ಹೀಗೆ ಬೆರೆತರೆ (ನಿನಗೆ) ನಿಂದೆಯುಂಟಾಗುವುದು. ಅವರವರ ಸಹಜವಾದ (ಜನ್ಮಸಿದ್ಧವಾದ) ಗುಣಗಳು ನಾಶಗೊಳ್ಳುವುವು. ೧೦. ತಾನಾಳುವ ನಾಡಿನಲ್ಲಿ ಉಂಟಾದ ಕೆಟ್ಟನೀತಿಯನ್ನು ಕೇಳುತ್ತ ಆತ್ಮಶಕ್ತಿಯಿಂದ ಆಜ್ಞೆಯನ್ನು ಮಾಡದ (ಆಜ್ಞೆಯನ್ನು ಮಾಡಿ ತಡೆಗಟ್ಟದ) ಮೂಢರಾಜನಿಗೆ ಅಧಿಕವಾದ ಪಾಪವು ಬರುವುದು. ಆ ವರ್ಣಸಾಂಕರ್ಯದೋಷವನ್ನು ಕಂಡು ಅರಸನಿಗೆ ಹೇಳದ ಆ ಪುರೋಹಿತನಿಗೂ ಅರಸನಿಗೆ ದೋಷವುಂಟಾಗುವ ರೀತಿಯಲ್ಲೇ ದೋಷವುಂಟಾಗುವುದು. ಈಗ ನಾವು ಹೇಳಿದೆವಲ್ಲವೇ! (ಆದ್ದರಿಂದ) ನಮಗೆ ಇದರಿಂದ ಸ್ವಲ್ಪವೂ ದೋಷವಿಲ್ಲ ಎನ್ನಲು ಆ ಮಾತನ್ನು ಕೇಳಿ ಮಹಾರಾಜನು ವ॥ ಕೋಪಗೊಂಡು 'ಬಸವರಾಜನನ್ನು ಕರೆ' ಎನ್ನಲು ರಾಜಭಟರುಗಳು ಬಂದು ಬಸವಣ್ಣನನ್ನು ಕರೆಯಲಾಗಿ (ನಡೆದ ಸರ್ವವಿಚಾರವನ್ನೂ) ಆ ಸರ್ವಜ್ಞನಾದ ಬಸವಣ್ಣನು ತಿಳಿದು ಆ ಶಿವನಾಗಮಯ್ಯ ದೇವನನ್ನು ರತ್ನ ಖಚಿತವಾದ ಪಲ್ಲಕ್ಕಿಯಲ್ಲಿ (ಮೇಣೆಯಲ್ಲಿ) ಕುಳ್ಳಿರಿಸಿಕೊಂಡು, ಅಕ್ಕಪಕ್ಕಗಳಲ್ಲಿ ಅವನ ಸೇವೆಯನ್ನು ಮಾಡುತ್ತ ಸಂಭ್ರಮದಿಂದ ಆ ಬಿಜ್ಜಳನ

ಸುತ್ತುಂ ಸಡಗರದಿನಾ ನೃಪಸಭೆಗೆ ಬಸವಂ ಬರ್ಪಾಗಳ್ಕಟ್ಟಿದಿರೊಳ್ಕುಪ್ಪಭೂಸುರರ್ಕಂಡರಸಂಗೆ ಬೆರಲೆತ್ತಿ ತೋಱಿ—

ಜನಪತಿ ನಿನ್ನತ್ತಣಿನೆ
ಳ್ಳನಿತುಂ ಭಯಮಿಲ್ಲದಂತ್ಯಜಾತನನಧಟಿಂ
ಕನಕಾಂದೋಳಮನೇಱಿಸಿ
ಬಿನದದಿನೀಯೆಡೆಗೆ ತಂದಪಂ ಗಡ ಬಸವಂ ೧೧

ವ॥ ಪೊಳಲಂ ಪೊಲೆಗಲಸಿದನಿತೆಯ್ದದೀ ಸಭೆಯುಮಂ ಪೊಲೆಗಲಸಲೆಯ್ದಿದಪನೆನೆ ಬಿಜ್ಜಳ ನತ್ತಲ್ನೋಡಿ ಕಾಯ್ದು ಮಸಗಿ ಶುದ್ಧಾಂತದೋಲಗಮನಿವಂ ಪುಗಲಾಗದೆಂದಲ್ಲಿಂದೆಳ್ದು ಪೊಱಗಣ ಮೊಗಸಾಲೆಯೊಳೋಲಗಂಗೊಟ್ಟು ಕುಳ್ಳಿರ್ಪುದುಮಲ್ಲಿಗೇಳ್ತಂದು ನೃಪನ ಕುಹಕಮನಱಿದು ಕುಜನ ಮದಭಂಜನಂ ತನ್ನುತ್ತರಾಂಶುಕದಿನುನ್ನತಾಸನಮಂ ರಚಿಸಿ ತಾಪಸೇಂದ್ರನಂ ಮೂರ್ತಿಗೊಳಿಸಿ ತತ್ಪಾದಸಮೀಪದೊಳ್ನೆಲಸಿರ್ಪನಂ ಬಿಜ್ಜಳಂ ನೋಡಿ —

ಶ್ರುತಿಮತಧರ್ಮದೊಳ್ನಡೆಯದಿಂತು ಮದೋದ್ಧತವೃತ್ತಿಯಿಂ ಪೊದ
ಳ್ದತಿಶಯವರ್ಣದಾಶ್ರಮದ ಪದ್ಧತಿಯಂ ತೊಱೆದಂತ್ಯಜಾತಿಸಂ
ಗತಿವಡೆದೈ ಮದೀಯ ನಗರಕ್ಕಮಮಂಗಳಮಂ ನೆಗಳ್ಚಿದೈ
ಸಿತಗಳಭಕ್ತಿ ನಿನ್ನ ಶಿರದಲ್ಲಿಯೆ ಪುಟ್ಟಿತೆ ಪೇಳ್ವೃಷಾಧಿಪಾ ೧೨

ಸಭೆಗೆ ಬಸವಣ್ಣನು ಬರುತ್ತಿರುವಾಗ ಎದುರಿಗೇ (ಶಿವನಾಗಮಯ್ಯನನ್ನು ಹೊತ್ತು ತರುತ್ತಿರುವ ಮೇಣೆಯನ್ನೂ) ಆ ಬ್ರಾಹ್ಮಣರು ಕಂಡು, ಅರಸನಿಗೆ ಬೆರಳುಮಾಡಿ ತೋರಿಸಿ ೧೧. 'ಮಹಾರಾಜಾ, ನಿನ್ನ ದೆಸೆಯಿಂದ ಎಳ್ಳಿನಷ್ಟೂ ಕೂಡ ಭಯವಿಲ್ಲದೆ ಅಂತ್ಯ ಕುಲದಲ್ಲಿ ಹುಟ್ಟಿದವನನ್ನು ಧೈರ್ಯದಿಂದ ಸುವರ್ಣಮಯ ಪಲ್ಲಕ್ಕಿಯಲ್ಲಿ ಹತ್ತಿಸಿ ಕೊಂಡು ಸಂತೋಷದಿಂದ ಬಸವಣ್ಣನು ಈ ರಾಜಾಸ್ಥಾನಕ್ಕೆ ತರುತ್ತಿದ್ದಾನೆ. ವ॥ ಪಟ್ಟಣವನ್ನು ಹೊಲೆಗಲಸಿದ್ದಷ್ಟೇ ಅಲ್ಲದೆ, ಈ ಸಭೆಯನ್ನೂ ಕೂಡ ಹೊಲೆಗಲಸಲಿಕ್ಕೆ ಬರುತ್ತಿದ್ದಾನೆ' ಎಂದರು. ಬಿಜ್ಜಳನು ಅತ್ತಕಡೆಗೆ ನೋಡಿ, ಅಧಿಕ ಕೋಪಗೊಂಡು, ಶುದ್ಧಿಯಿಂದ ಕೂಡಿದ ಈ ರಾಜ ಸಭೆಯನ್ನು ಇವನು ಪ್ರವೇಶಿಸಲಾಗದೆಂದು ಅಲ್ಲಿಂದ ಎದ್ದುಬಂದು ಹೊರಭಾಗದಲ್ಲಿರುವ ಹಜಾರದಲ್ಲಿ ರಾಜ ಸಭೆಯನ್ನೇರ್ಪಡಿಸಿ, ಕುಳಿತು ಕೊಳ್ಳಲಾಗಿ, (ಬಸವಣ್ಣನು) ಅಲ್ಲಿಗೆ ಬಂದು ಮಹಾರಾಜನ ಈ ಕುಯುಕ್ತಿಯನ್ನೂ (ಕಾಪಟ್ಯವನ್ನು) ತಿಳಿದುಕೊಂಡು ದುಷ್ಟಜನರ ಮದವನ್ನು ಮುರಿಯುವ ಆ ಬಸವಣ್ಣನು ತಾನು ಹೊದ್ದಿರುವ ಉತ್ತರೀಯದಿಂದ ಉನ್ನತಾಸನವನ್ನು ಮಾಡಿ, ತಾಪಸ ಶ್ರೇಷ್ಠನಾದ ನಾಗದೇವನನ್ನು ಕುಳ್ಳಿರಿಸಿ, (ತಾನು) ಆತನ ಪಾದದ ಸಮೀಪದಲ್ಲಿಯೇ ಕುಳಿತನು. ಬಿಜ್ಜಳನು (ಇದನ್ನು) ನೋಡಿ ೧೨. 'ವೃಷಾಧಿಪಾ, ವೇದ ಸಮ್ಮತವಾದ ಧರ್ಮದಲ್ಲಿ ವ್ಯವಹರಿಸದೆ ಈ ರೀತಿ ಗರ್ವದಿಂದ ಕೊಬ್ಬಿಹೋದ ವ್ಯವಹಾರದಲ್ಲಿ ಅತಿಶಯವಾಗಿ ಶೋಭಿಸುವ ಬ್ರಾಹ್ಮಣಾದಿ ವರ್ಣಾಶ್ರಮ ಪದ್ಧತಿಯನ್ನು ಬಿಟ್ಟು, ಅಂತ್ಯ ಜಾತಿಯವರೊಡನೆ ಕೂಡಿ ನಡೆಯುತ್ತಿರುವೆಯಾ ? (ನೀನು) ನನ್ನ ಕಲ್ಯಾಣ ಪಟ್ಟಣಕ್ಕೇ ಅಮಂಗಳವನ್ನುಂಟು ಮಾಡಿದೆ ! ನೀಲಕಂಠನ ಭಕ್ತಿಯೇನು ನಿನ್ನ ತಲೆಯಲ್ಲೇ ಹುಟ್ಟಿರು

ಮಳೆ ಸುರಿಗುಮೆ ನೀನಿರ್ದೀ
ಯಿಳೆ ಬೆಳೆಗುಮೆ ಪೂಜೆಗೊಳ್ಗುಮೇ ದೇವತೆಗಳ್
ಪಳಿಗಂಜದ ನಿನಗಂಜುವೆ
ಪಳಂಕೆಯಿಂ ನೀನೆ ಸುಖದೊಳಿರ್ಪುದು ಪೊಳಲೊಳ್ ೧೩

ವ॥ ಎಂದ ನರೇಂದ್ರನ ಕಟೂಕ್ತಿಗೇಳ್ದು ಮಹಿಮಾಕರಂ ಸರೋಷಹಸನಮುಖನಾಗಿ—

ಕೇಳೆಲೆ ಭೂಪ ನಿನ್ನಭಿಮತದ್ವಿಜರಂತ್ಯಜಕೃತ್ಯದಂದಮಂ
ಪಾಳಿಯಿನೆಲ್ಲರುಂ ಬಡಗಿ ಮಾಚಲದೇವಿಯನಿಂದು ಸತ್ಕುಲಂ
ದಾಳಿಪೆವೆಂದು ಹೇಮಮಯ ಧೇನುವನೊಂದನೊಡರ್ಚಿ ವಿತ್ತ ಸ
ಮ್ಮೇಳನದಿಂದೆ ತೀವಿ ಸುಧೆಯುಂ ಬಸಿಱೊಳ್ಪುಗಿಸುತ್ತೆ ಬಾಲೆಯುಂ ೧೪

ತೆಗೆದೀಗಳ್ಕುಲಯುಕ್ತೆಯಾದಳೆನುತುಂ ಮೆಯ್ಯಿಕ್ಕಿ ಪಾರ್ವರ್ವಧೂ
ಟಿಗೆ ನಣ್ಪಿಂದವಳಂಗದೆಂಜಲಮರ್ದಂ ತಾವೀಂಟುತುಂ ಮೇಣ್ಮನಂ
ಬುಗುವಾ ಕಾನಕಧೇನುವಂ ಕಡಿದು ಖಂಡಂಗೆಯ್ವುತುಂ ತೃಷ್ಣೆಕೆ
ಯ್ಮಿಗೆ ತಮ್ಮೊಳ್ಪರಿಕಲ್ಪಿಸುತ್ತೆ ನಿಱಿಸುತ್ತುಂ ಬೇಱೆ ಭಾಗಂಗಳಂ ೧೫

ಕಡೆಪಟ್ಟೀ ಪಣೆ ಸೋಮಯಾಜಿಗೆ ಮೊಗಂ ವೇದಾಂತಿಗಳ್ಗೀ ಕೊರಲ್
ಕಡುಪಾಂತೊಪ್ಪುವ ತಾರ್ಕಿಕರ್ಗೆ ಬಲವಕ್ಕಂ ಪಂಡಿತರ್ಗಕ್ಕೆ ತೋ
ರ್ಪೆಡವಕ್ಕಂ ನೆಗಳ್ದಶ್ವಮೇಧಿಗೆ ಬಸಿರ್ವೈಶೇಷಿಕರ್ಗಿತ್ತಲೀ
ನಡುಬೆನ್ವೇದಪಡಂಗವೇದಿಗಮುಪಾಧ್ಯಾಯರ್ಗೆ ಶೃಂಗದ್ವಯಂ ೧೬

ತುಂಗಾಧ್ವರಿಗೆರ್ದೆ ಬಾಲಂ
ಪಿಂಗದ ಋಗ್ವೇದಿಗಳ್ಗೆ ತೊಡೆಗಳ್ಸಂಗೋ

ವುದೇ ? ಹೇಳು ! ೧೩. (ಹೀಗಾದರೆ) ಮಳೆಸುರಿದೀತೆ ? ನೀನಿರುವ ಈ ಧರಣಿಯು ಬೆಳೆದೀತೇ ? ಪಿತೃದೇವತೆಗಳು ಪೂಜೆಗೊಳ್ಳುತ್ತಾರೆಯೋ ? ಪಾಪಕ್ಕೆ ಹೆದರದ ನಿನಗೆ (ನಾವು) ಭಯ ಪಡುತ್ತಿದ್ದೇವೆ. ಸ್ವೇಚ್ಛೆಯಾಗಿ ಈ ಪಟ್ಟಣದಲ್ಲಿ ನೀನೇ ಸುಖವಾಗಿ ಇದ್ದುಬಿಡು. ವ॥ ಹೀಗೆಂದ ರಾಜಶ್ರೇಷ್ಠನಾದ ಬಿಜ್ಜಳನ ನಿಷ್ಠುರದ ಮಾತನ್ನು ಕೇಳಿ, ಮಹಿಮಾಶಾಲಿಯಾದ ಬಸವೇಶ್ವರನು ರೋಷದಿಂದ ಕೂಡಿದ ನಗುಮುಖಮಾಡಿ ೧೪–೧೯. ಎಲೈ ಮಹಾರಾಜನೇ, ನಿನ್ನ ಅಭಿಮಾನದ ಈ ದ್ವಿಜರ ಹೊಲೆಗೆಲಸದ ರೀತಿಯನ್ನು ಕ್ರಮವಾಗಿ ಕೇಳು : ಎಲ್ಲರೂ ಸೂಳೆ (ಬಡಗಿ> ಬದಗಿ) ಯಾದ ಮಾಚಲದೇವಿಯೆಂಬ ನೀಚ ಜಾತಿಯ ಹೆಂಗಸನ್ನು ಸತ್ಕುಲವಂತಳನ್ನಾಗಿ ಅಂದರೆ ಕ್ಷತ್ರಿಯಳನ್ನಾಗಿ ಮಾಡುತ್ತೇವೆಂದು ಸುವರ್ಣದಿಂದ ಒಂದು ಹಸುವನ್ನು ನಿರ್ಮಿಸಿ, ಅದರ ಗರ್ಭದಲ್ಲಿ ಬಂಗಾರವನ್ನೂ ಹಾಲನ್ನೂ ತುಂಬಿ, ಆ ಬಾಲೆಯನ್ನು ಅದರ ಗರ್ಭದಲ್ಲಿ ಹೊಗಿಸಿ, ಹೊರತೆಗೆದು ಈಗ ಸತ್ಕುಲದವಳಾದೆಯೆಂದು, ಆ ಸ್ತ್ರೀಗೆ ಪಾರ್ವರು ನಮಸ್ಕರಿಸಿ ಪ್ರೀತಿಯಿಂದ ಅವಳ ದೇಹದ ಎಂಜಲ ಹಾಲನ್ನು ತಾವು ಕುಡಿದು, ಆಮೇಲೆ ಮನೋಹರವಾದ ಆ ಬಂಗಾರದ ಹಸುವನ್ನು ಕಡಿದು ತುಂಡು ತುಂಡಾಗಿ ಮಾಡಿ, ವಿಶೇಷ ಆಶೆಯಿಂದ ತಮ್ಮ ತಮ್ಮಲ್ಲಿ

ಷಾಂಗತ್ರಿವೇದಿಗಳ್ಗುಳಿ
ದಂಗಂ ವಿದ್ಯಾರ್ಥಿಗಳ್ಗೆನುತ್ತುಸವಸದಿಂ ೧೭

ಮೊದಲೊಳ್ಗೋತ್ರಮನದ
ಕೊದವಿಸಿ ಸಂಕಲ್ಪದಿಂದೆ ಪೂಜಿಸಿ ಮಗುಳ್ದಂ
ತದನೆ ಕಡಿದೊಯ್ದು ಪಾರ್ವ
ರ್ವಿದಿತಂ ಗೋಹತ್ಯೆಗಳ್ಕದತಿ ಪಾಪಯುತರ್ ೧೮

ಇಂತಪ್ಪ ಪಾಪಕರ್ಮರೊ
ಳೆಂತುಂ ಸರಿಗಟ್ಟಲಕ್ಕುಮೇ ಶಿವದೀಕ್ಷಾ
ಮಂತರೆನಿಸಿರ್ದ ಸುಚರಿತ
ಮಂತರನಘಹರನ ಭಕ್ತರಂ ಧಾರಿಣಿಯೊಳ್ ೧೯

ಸರಿಯಿಡಲಕ್ಕುಮೇ ಸುರಮಹೀರುಹರಾಜಿಗೆ ಮಿಕ್ಕ ಕಾಡಮು
ಳ್ಮರಗಳನಂಬುಜಾಕರಕದಂಬಕೆ ಬೆಂಚೆಗಳಂ ಪೊದಳ್ದ ಕೇ
ಸರಿನಿವಹಕ್ಕೆ ಕಾಳ್ನರಿಗಳಂ ಘನರಾಜಮರಾಳವೃಂದಕು
ರ್ವರೆಯ ಬಕಂಗಳಂ ಶರಣಸಂತತಿಗೀ ಪಳಿವೆತ್ತ ಪಾರ್ವರಂ ೨೦

ಮಾತನಾಡಿಕೊಂಡು ಬೇರೆ ಬೇರೆ ಭಾಗಗಳನ್ನು ಕ್ರಮವಾಗಿಟ್ಟು, ಕಡೆಗೊಂಡಿರುವ ಈ ಹಣೆ ಸೋಮಯಾಜಿಗೆ, ಮುಖವು ವೇದಾಂತಿಗಳಿಗೆ, ಈ ಕೊರಳು ಶೌರ್ಯ ವಿಶಿಷ್ಟರಾದ ತಾರ್ಕಿಕರಿಗೆ, ಬಲಗಡೆಯ ಪಕ್ಕೆ ಪಂಡಿತರಿಗಾಗಲಿ, ಈ ಕಾಣುವ ಎಡ ಪಕ್ಕ ಪ್ರಖ್ಯಾತ ನಾದ ಅಶ್ವಮೇಧಿಗೆ, ಹೊಟ್ಟೆ ವೈಶೇಷಿಕರಿಗೆ, ಇತ್ತ ಕಡೆಗಿರುವ ಈ ನಡುಬೆನ್ನು ವೇದ ಮತ್ತು ಆರುವೇದಾಂಗ ಬಲ್ಲಿದವರಿಗೆ, ಎರಡು ಕೋಡುಗಳು ಉಪಾಧ್ಯಾಯರಿಗೆ, ಎದೆ ತುಂಗಾಧ್ವರಿಗೆ, ಬಾಲವು ತಪ್ಪದೆ ಋಗ್ವೇದಿಗೆ, ತೊಡೆಗಳು ಅಂಗ ಉಪಾಂಗಸಹಿತ ತ್ರಿವೇದ ಬಲ್ಲವರಿಗೆ ಉಳಿದ ದೇಹಭಾಗಗಳು ವಿದ್ಯಾರ್ಥಿಗಳಿಗೆ ಎಂದೆನ್ನುತ್ತ ಆತುರಾತುರ ವಾಗಿ (ಹಂಚುವರು). ಮೊದಲು (ಆ ಸುವರ್ಣ ಹಸುವಿಗೆ) ಸಂಕಲ್ಪದಿಂದ ಗೋತ್ರ ವನ್ನಿಟ್ಟು ಮಾಡಿ, ಪೂಜೆ ಮಾಡಿ, ಪುನಃ ಈ ರೀತಿ ಅದನ್ನು ಕಡಿದು ಮನೆಗೊಯ್ದು ಪ್ರಸಿದ್ಧ ಗೋಹತ್ಯೆಗೆ ಅಂಜದ ಪಾಪಿಷ್ಠರು. ಇಂತಹ ಪಾಪಕರ್ಮರೊಡನೆ, ಶಿವಸಂಬಂಧ ವಾದ ದೀಕ್ಷೆಯನ್ನು ಹೊಂದಿದವರೆನಿಸಿದ ಸಚ್ಚಾರಿತ್ರ್ಯವುಳ್ಳ, ಪಾಪನಾಶಕರಾದ ಶಿವನ ಭಕ್ತರನ್ನೂ ಲೋಕದಲ್ಲಿ ಯಾವ ರೀತಿಯಿಂದಲಾದರೂ ಸರಿಗಟ್ಟಲಾದೀತೇ ? ೨೦. ಕಲ್ಪವೃಕ್ಷಗಳ ಸಾಲಿಗೆ ಕಾಡಿನ ಉಳಿದ ಮುಳ್ಳಿನ ಮರಗಳನ್ನು, ಸರೋವರಗಳ ಸಮೂಹಕ್ಕೆ ಹೊಂಡಗಳನ್ನು, ಪ್ರಸಿದ್ಧವಾದ ಸಿಂಹಗಳ ಗುಂಪಿಗೆ ಕಾಡುನರಿಗಳನ್ನು, ಶ್ರೇಷ್ಠ ರಾಜಹಂಸಗಳ ಸಮೂಹಕ್ಕೆ ಭೂಮಿಯ ಬಕಪಕ್ಷಿಗಳನ್ನು ಶರಣರುಗಳ

ಕುಲ ಜಾತಿಯೆಂಬಿವೆಲ್ಲಂ
ಸಲೆ ಮಾಯಾಬೀಜಜನಿತವೆಮ್ಮಯ ಶರಣಾ
ವಲಿಯ ಕುಲಮೀಶಜನಿತಂ
ಕಲುಷಿತಮದು ನಿಷ್ಕಲಂಕಮಿದು ನಿಜದಿಂದಂ ೨೧

ಪುಣ್ಯವಿಹೀನರ ಕಣ್ಗೆ ಹಿ
ರಣ್ಯಂ ಕಲ್ಲೆನಿಪ ತೆಱದೆ ಭವಚಕ್ರಮಹಾ
ರಣ್ಯಚರನರರ ಕಣ್ಗೆವ
ರೇಣ್ಯಂ ನರನಂತಿರಭವಭಕ್ತಂ ತೋರ್ಕುಂ ೨೨

ಪರಮ ಶಿವನಾಗದೇವಂ
ಗುರುತರ ಶಿವಯೋಗಭಾಸುರಂಗಧಮಧರಾ
ಮರರೆಣೆಯಲ್ಲಲ್ಲೆಲೆ ಭೂ
ವರ ಕೇಳದಱಿಂದಮೆಮ್ಮ ಶರಣರ ಪೆಂಪಂ ೨೩

ಶ್ರೀಪತಿಪಂಡಿತರ್ಪರಮ ಶೈವದೃಢವ್ರತನಿಷ್ಠರೊರ್ಮೆ ಧಾ
ತ್ರೀಪನನಂತಪಾಲನ ಸಭಾಂತರದೊಳ್ ದ್ವಿಜಕೋಟಿಯುಂ ಶಿವ
ಶ್ರೀಪದಭಕ್ತನೊರ್ವಗೆಣೆಯಲ್ತೆನುತಣ್ಮಿತೆ ಪೂಣ್ದು ಸತ್ಯ ಸ
ಲ್ಲಾಪಮುಮರ್ಚೆ ಕಟ್ಟಿಡರೆ ವಸ್ತ್ರದೊಳುಜ್ವಳಿಪಗ್ನಿಯುಂ ನೃಪಾ ೨೪

ಕ್ರತುನಾಥಂ ಹರಿಯೆಂದು ವಹ್ನಿ ಗುರುವೆಂದಾದಿತ್ಯನಂ ರುದ್ರಸಂ
ಗತ ಗಾಯತ್ರಿಗೆ ದೈವಮೆಂದಜನೆ ವೇದಕ್ಕಾಳ್ವನೆಂದುಂ ಜಗ

ಸಮೂಹಕ್ಕೆ ಈ ಪಾಪವನ್ನುಳ್ಳ ಪಾರ್ವರನ್ನು ಸರಿಗಟ್ಟಲಾದೀತೇ ? ೨೧. ಕುಲಜಾತಿಗಳೆನ್ನುವ ಈ ಎಲ್ಲವೂ ಅಜ್ಞಾನದ ಬೀಜದಿಂದ ಉದ್ಭವವಾದವುಗಳು. ಶರಣ ಸಮೂಹದ ಕುಲವು ಈಶ್ವರನಿಂದ ಉಂಟಾದುದು. ನಿಜವಾಗಿ ಅದು ಕಲುಷಿತ ; ಇದು ನಿಷ್ಕಲ್ಮಷವುಳ್ಳದ್ದು. ೨೨. ಪುಣ್ಯಹೀನರಾದವರ ಕಣ್ಣಿಗೆ ಬಂಗಾರವೂ ಕಲ್ಲಾದಹಾಗೆ ಹುಟ್ಟುಸಾವುಗಳೆಂಬ ಚಕ್ರಾಕಾರವಾದ ಮಹಾರಣ್ಯದಲ್ಲಿ ಸುತ್ತಾಡುವ ಮನುಷ್ಯರ ಕಣ್ಣಿಗೆ ಪರಮೇಶ್ವರನ ಶ್ರೇಷ್ಠವಾದ ಭಕ್ತರು ಮನುಷ್ಯಾಕಾರದಲ್ಲೆ ಕಾಣುವರು. ೨೩. ಮಹತ್ವಪೂರ್ಣವಾದ ಶಿವಯೋಗದಿಂದ ಪ್ರಕಾಶಮಾನವಾದ ಪವಿತ್ರ ಶಿವನಾಗದೇವನಿಗೆ ಅಧಮರಾದ ದ್ವಿಜರು ಸಮಾನರಲ್ಲವೇ ಅಲ್ಲ ; ಮಹಾರಾಜಾ ಆದ ಕಾರಣದಿಂದ ನಮ್ಮ ಶರಣರ ಹಿರಿಮೆಯನ್ನು ಕೇಳು : ೨೪. ಮಹಾರಾಜಾ, ಪರಮ ಶಿವ ಸಂಬಂಧವಾದ ನಿಶ್ಚಲವಾದ ವ್ರತ ನಿಯಮದಿಂದ ಕೂಡಿದ ಶ್ರೀಪತಿ ಪಂಡಿತರು ಒಮ್ಮೆ ಧಾತ್ರೀಶ್ವರನಾದ ಅನಂತಪಾಲನೆಂಬುವನ ಸಭಾಮಧ್ಯದಲ್ಲಿ, ಕೋಟಿ ಜನ ಬ್ರಾಹ್ಮಣರೂ ಶಿವನ ಪಾದಭಕ್ತಿಯಲ್ಲಿ ನಿರತನಾದ ಒಬ್ಬ ಶರಣನಿಗೆ ಸಮಾನನಲ್ಲವೆನ್ನುತ್ತ ಶೌರ್ಯದಿಂದ ಪ್ರತಿಜ್ಞೆ ಮಾಡಿ, ಸತ್ಯ ಸಂಭಾಷಣೆಯನ್ನು (ಸತ್ಯವಾದ ಚರ್ಚೆಯನ್ನು ಮಾಡಿ) ಬಟ್ಟೆಯಲ್ಲಿ ಜಾಜ್ವಲ್ಯ ಮಾನವಾದ ಬೆಂಕಿಯನ್ನು ಕಟ್ಟಿ ಇಡಲಿಲ್ಲವೇ ? ೨೫. ಚಂಡಾಲರೆನಿಸಿದ ಈ ಭೂಸುರರು, ಯಜ್ಞ ಪುರುಷನು ವಿಷ್ಣುವೆಂದು, ಬೆಂಕಿಯನ್ನು ಗುರುವೆಂದು,

ತ್ಪತಿ ಚಕ್ರಾಯುಧನೆಂದು ಸೋಮಲತೆ ವಿಶ್ವೋತ್ಪತ್ತಿ ಬೀಜಂ ದಲೆಂ
ದತುಳಬ್ರಹ್ಮಮೆ ಶೂನ್ಯಮೆಂದುಲಿಗುಮೀ ಚಂ[1]ಡಾಲರೀ ಭೂಸುರರ್ ೨೫

ಇಂತಪ್ಪ ಶಿವದ್ರೋಹಿಗ
ಳೆಂತುಂ ಪಶುಹತ್ಯೆಗಳ್ಕದಂತ್ಯಜಕರ್ಮ
ಭ್ರಾಂತರ್ಶಠರೀ ಪಾರ್ವ
ರ್ಕಂತುಹರಾರ್ಚಕರ ಮನೆಯ ಶುನಿಗಳ್ಗೆಣೆಯೇ ೨೬

ವ॥ ಮತ್ತಂ—

[ಹಾವಿನಹಾಳ ಕಲ್ಲಯ್ಯನ ಕಥೆ]

ಹಾವಿನಹಾಳೆನಿಪ್ಪ ಪುರಮೊಪ್ಪುಗುಮಲ್ಲಿ ಧರಾಮರವ್ರಜಂ
ತೀವಿ ವಿರಾಜಿಸಿರ್ಕುಮನಿಶಂ ಬಿಡದಾ ಪೊಳಲಲ್ಲಿ ಮೋಣ್ಮಹೀ
ಭಾವಜವೈರಿಯೊಂದೆನಿಸಿ ಕಂಗೊಳಿಸಿರ್ಪನತಿ ಪ್ರಭಾವದಿಂ
ಪಾವನ ಕಲ್ಲಿನಾಥನೆನಿಪ್ಪೊರ್ವನಖರ್ವ ಶಿವೈಕತತ್ಪರಂ ೨೭

ಆ ಪುರದಲ್ಲಿ ಘೋರಫಣಿ ನಟ್ಟಿರುಳೊಳ್ಮಗೆ ನಿದ್ರೆಗೆಯ್ದುರಂ
ಕೋಪದೆ ಕರ್ಚಿ ಕೊಲ್ವುದು [2]ಪಥಶ್ರಮ[2]ದಿಂ ನಡೆತಂದರು ಪೊದ

ಸೂರ್ಯನನ್ನು ರುದ್ರಪರವಾದ ಗಾಯತ್ರಿಗೆ ದೈವವೆಂದು, ಬ್ರಹ್ಮನೇ ವೇದಕ್ಕೆ ಪತಿಯೆಂದು, ಜಗತ್ತಿಗೆ ಪತಿಯು ವಿಷ್ಣುವೆಂದು, ಸೋಮರಸದ ಬಳ್ಳಿಯು ವಿಶ್ವೋತ್ಪತ್ತಿಯ ಬೀಜವೇ ನಿಜವೆಂದು, ಬ್ರಹ್ಮವೇ ಶೂನ್ಯವೆಂದು ನುಡಿಯುತ್ತಿರುವರು. ೨೬. ಇಂತಹ ಶಿವದ್ರೋಹಿಗಳು, ಪಶುಹತ್ಯೆಗೆ ಸ್ವಲ್ಪವೂ ಹೆದರದೆ ಅಂತ್ಯಜರಾದವರ ಕ್ರಿಯೆಯಿಂದ ಭ್ರಾಂತಿಗೊಂಡಿರುವ, ದುಷ್ಟರಾದ ಈ ದ್ವಿಜರುಗಳು ಪರಮೇಶ್ವರನ ಪಾದಪೂಜೆಯಲ್ಲಿ ನಿರತರಾದ ಭಕ್ತರ ಮನೆಯ ನಾಯಿಗಳಿಗೆ ಸಮಾನರೆನಿಸುವರೇ ? ವ॥ ಮತ್ತು **ಹಾವಿನ ಹಾಳ ಕಲ್ಲಯ್ಯನ ಕಥೆ** ೨೭. ಹಾವಿನ ಹಾಳ ಎಂಬ ಹೆಸರಿನ ಪಟ್ಟಣವು ಶೋಭಿಸುತ್ತಿರುವುದು, ಅಲ್ಲಿ ಬ್ರಾಹ್ಮಣರ ಸಮೂಹವು ತುಂಬಿ ಸದಾ ತಪ್ಪದೆ ಶೋಭಿಸುತ್ತಿರುವುದು. ಇಂಥ ಈ ಪಟ್ಟಣದಲ್ಲಿ ಮನ್ಮಥನ ವೈರಿಯೆನಿಸಿ, ಅತ್ಯಂತ ಪ್ರಭಾವ ವಿಶಿಷ್ಟನಾದವನೂ, ಪರಿಶುದ್ಧನೂ, ಮಹತ್ವ ಪೂರ್ಣವಾದ ಶಿವನೊಬ್ಬನ ಭಕ್ತಿಯಲ್ಲಿಯೇ ತತ್ಪರನಾದವನೂ ಆದ ಕಲ್ಲಿನಾಥನೆಂಬ ಹೆಸರಿನ ಶರಣನು ಶೋಭಿಸುತ್ತಿದ್ದನು. ೨೮. ಆ ಪಟ್ಟಣದಲ್ಲಿ ಒಂದು ಹಾವಿತ್ತು. ಅದು ಮಧ್ಯರಾತ್ರಿಯ ಸುಮಾರಿಗೆ ನಿದ್ರೆ ಮಾಡುತ್ತಿರುವವರನ್ನು ಕೋಪದಿಂದ ಕಚ್ಚಿ, ಕೊಲ್ಲುತ್ತಿತ್ತು. ಹೀಗೆ ಪ್ರಸಿದ್ಧಗೊಂಡ ಆ ಸಮರ್ಥವಾದ ಹಾವು ಒಂದು ಸಲ ದಾರಿಯನ್ನು ನಡೆದು ಆಯಾಸ

1 ಚಾಂ(ಅ) 2 ಪರಾಶ್ರಯ(ಅ)

ಳ್ದಾ ಪಟುಸರ್ಪನೊರ್ವಂ ಸುಖನಿದ್ರೆಯನಾಳ್ದಿಸೆದಿರ್ಪ ಶೈವವಿ
ದ್ಯಾಪರ ಕಲ್ಲಿದೇವನನೆ ಕರ್ಚೆ ಕರಂ ಮಡಿದತ್ತು ಬೇಗದಿಂ ೨೮

ಕರುಣಾಕರನೀಕ್ಷಿಸಿ ಮಡಿ
ದುರಗನನೇಳೇಳೆನುತ್ತೆ ಹರಣಮನಿತ್ತಾ
ದರದಿಂ ಕಳುಪುತೆ ಪುರಜನ
ಮರಿದೆಂದಡಿಗೆಱಗಿ ಕೀರ್ತಿಸುತ್ತಿರೆ ಮೆಱೆದಂ ೨೯

ವ॥ ಅಂತು ಕೆಲವಾನುಂ ದಿವಸ[1]ಮಲ್ಲಿ[1] ಕಲ್ಲಿನಾಥಂ ಸಲ್ಲಲಿತ ಶಿವಯೋಗದಿನೊಪ್ಪುತ್ತುಮಿರೆ ಪೆಱತೊಂದು ದಿವಸಂ—

ಕಲ್ಲಿನಾಥನ ಚೇಟಿಯರ್ಘ್ಯನವಾಂಬುವಂ ತರಲೆಂದು ಪೋ
ಪಲ್ಲಿ ಬೀದಿಯೊಳಂಟಿ ತದ್ಘಟಮಂ ದ್ವಿಜಂ ಬಳಿಕೊರ್ವನಾ
ಪಲ್ಲವಾಧರೆ ಮುಟ್ಟಿದಂ ಭವಿಯೆಂದು ಕಂಡದನುರ್ವಿಯೊ
ಳ್ನಿಲ್ಲದಂದೊಡೆಯಿಕ್ಕುತೋಡುಗಳಂ ಶುಚಿಸ್ಥಲದಿಂಬಿನೊಳ್ ೩೦

ಮಱೆಗೆಯ್ದು ತದ್ವಿಷಾದದಿ
ನುಱೆ ಭಸಿತಸ್ನಾನಮೆಸಗಿ ಶಿವ ಶಿವ ರವದಿಂ
ಪೆಱತೊಂದು ಘಟಮನಾಂತೆ
ಳ್ಗಱೆಗೊಳೆಯುತ್ತಿರೆ ನೀರಿಕ್ಷಿಸುತ್ತವಳಿರವಂ ೩೧

ನೋಡಿರೆ ತೊಳ್ತಿನುರ್ಬಟೆಯ ಕೊರ್ಬಿನ ಪರ್ಬುಗೆಯಂ ದ್ವಿಜನ್ಮನ
ನೋಡಿದೆ ಸೋಂಕಿದಂ ಘಟಮನೆಂದೊಡೆದಳ್ಳುಚಿವಿಪ್ರನನ್ಯರಂ

ಗೊಂಡು ಬಂದು ಸುಖನಿದ್ರೆಯಲ್ಲಿ ಮುಳುಗಿದ್ದ, ಶೈವಸಂಬಂಧವಾದ ತತ್ತ್ವ ವಿದ್ಯೆಯನ್ನು ಬಲ್ಲ ಕಲ್ಲಿನಾಥ ದೇವನನ್ನೇ ಚೆನ್ನಾಗಿ ಕಚ್ಚಿ ಆ ಕೂಡಲೇ ತಾನು ಸತ್ತು ಹೋಯಿತು. ೨೯. ಹೀಗೆ ಸತ್ತುಹೋದ ಹಾವನ್ನು ಕರುಣಾಮೂರ್ತಿಯಾದ ಹಾವಿನ ಹಾಳು ಕಲ್ಲಯ್ಯನು ಕಂಡು, ಅದಕ್ಕೆ ಜೀವದಾನ ಮಾಡಿ ಏಳೇಳು ಎನ್ನುತ್ತ ಎಬ್ಬಿಸಿ, ಪಟ್ಟಣದ ಜನರೆಲ್ಲ ಇದು ಅಸಾಧ್ಯಕಾರ್ಯವೆಂದು ಹೊಗಳುತ್ತಿರುವಂತೆ ಕಳುಹಿಸಿಕೊಟ್ಟು ಶೋಭಿಸುತ್ತಿದ್ದನು. ವ॥ ಆ ರೀತಿ ಹಲ ಕೆಲವು ದಿವಸ ಕಲ್ಲಿನಾಥನು ಅತ್ಯಂತ ಮನೋಹರವಾದ ಶಿವಯೋಗದಿಂದ ಶೋಭಿಸುತ್ತ ಒಪ್ಪುತ್ತಿರಲಾಗಿ ಮತ್ತೊಂದು ದಿವಸ ೩೦–೩೨. ಕಲ್ಲಿನಾಥನ ಸೇವಿಕೆಯೊಬ್ಬಳು ಶಿವಪೂಜಾರ್ಥವಾದ ಹೊಸ ನೀರನ್ನು ತರುವುದಕ್ಕೆಂದು ಬೀದಿಯನ್ನು ಹಿಡಿದು ಹೋಗುತ್ತಿದ್ದಾಗ ಓರ್ವ ದ್ವಿಜನು ಅವಳು ಹಿಡಿದು ತರುತ್ತಿದ್ದ ನೀರಿನ ಕೊಡವನ್ನು ಮುಟ್ಟಿದನು. ಆಗ ಆ ಚಿಗುರಿನಂತೆ ತುಟಿಯುಳ್ಳ ಸೇವಿಕೆಯು ಭವಿಯು ಕೊಡವನ್ನು ಮುಟ್ಟಿದನೆಂದು ತಿಳಿದು ಅದನ್ನು ಭೂಮಿಯ ಮೇಲೆ ಎತ್ತಿ ಹಾಕಿ, ಅದರ ಆ ತುಂಡುಗಳನ್ನು ಒಂದು ಪರಿಶುದ್ಧವಾದ

———

1 ಮಾ(ಮು)

ಪಾಡಳಿದಂಟಲಾಗದೆನುತಾಗಮಸಂತತಿ ಪೇಳ್ಗುಮಲ್ಲದೀ
ನಾಡಜನಾಳಿಗಗ್ರಜನ ಸೋಂಕಘಕಾರಣಮೆಂದು ಪೇಳ್ದುದೇ ೩೨

ಘಟಚೇಟಿ ಮೀರೆಗೆಟ್ಟಿಂ
ತಟಮಟಮಂ ನೆಗಳ್ದಳವಳ ಪಿಡಿತರಿಸಿ ಸಮು
ತ್ಕಟ ದಂಡಮೆಸಗಿದಲ್ಲದೆ
ಪಟುತರ ಮತ್ಕೋಪಮೆಂತುಮೇಂ ತೀರ್ದಪುದೇ ೩೩

ವ॥ ಎಂದು ಪಾರ್ವರೆಲ್ಲಂ ಮುಳಿದು ಗಳಪುತ್ತುಂ ತಾಮಿರ್ದಲ್ಲಿಗಾ ಕಲ್ಲಿದೇವನು ಬರಿಸಿ —

ಅಳಿದುರಗಂಗಸುವಿತ್ತು
ಜ್ವಳಮಹಿಮರ್ಪಿರಿಯರೆಂದು ಮನ್ನಿಪೆವೆಂದುಂ
ಪೊಳಲೊಳ್ನಿಮ್ಮಂ ಸದ್ಗುಣ
ಕಳಾಪ ನಿಮ್ಮಂತೆ ಸುಜನರುಂ ಪೆಱರೊಳರೇ ೩೪

ಎಲ್ಲರುಮೆಲ್ಲರ್ಗೊಳ್ಳಿದ
ರಿಲ್ಲಿ ವಲಂ ನಿಮ್ಮ ದಾಸರೀ ದಾಸಿ ಕರಂ

ಮರೆಯಾಗಿರುವ ಸ್ಥಳದಲ್ಲಿ ಮುಚ್ಚಿ ಹಾಕಿ ಆ ದ್ವಿಜನು ಮುಟ್ಟಿದ ಕಾರಣದಿಂದ ಚೆನ್ನಾಗಿ ಭಸ್ಮಸ್ನಾನ ಮಾಡಿ (ಭಸ್ಮವನ್ನು ಮೈಗೆಲ್ಲ ಬಳಿದುಕೊಂಡು ಶುದ್ಧಿಯನ್ನು ಹೊಂದಿ) ಶಿವ ಶಿವ ಎಂದೆನ್ನುವ ಧ್ವನಿಮಾಡಿ ಮತ್ತೊಂದು (ಘಟ) ಕೊಡವನ್ನು ತೆಗೆದುಕೊಂಡು ಎಚ್ಚರ ವಹಿಸಿ (ನೀರನ್ನು ತುಂಬಿಕೊಂಡು) ಬರುತ್ತಿರುವಾಗ ಅವಳ ರೀತಿಯನ್ನು ನೋಡುತ್ತ 'ಈ ತೊತ್ತಿನ ಶೌರ್ಯ ವಿಶಿಷ್ಟವಾದ ಗರ್ವದ ಹೆಚ್ಚುಗಾರಿಕೆಯನ್ನು ನೋಡಿದಿರಾ ! ತನ್ನ ಘಟವನ್ನು ವಿಪ್ರನು ಮುಟ್ಟಿದನೆಂದು ಒಡೆದು ಹಾಕಿದಳು. ಗತಿಗೆಟ್ಟ ಅನ್ಯರನ್ನು ಶುಚಿಯಾದ ಬ್ರಾಹ್ಮಣನು ಮುಟ್ಟಲಾಗದೆಂದು ಆಗಮ ಹೇಳುವುದೇ ಹೊರತು, ಈ ನಾಡಾಡಿ ಜನರಿಗೆ ಬ್ರಾಹ್ಮಣನಾದವನ ಸ್ಪರ್ಶ ಪಾಪ ಕಾರಣವೆಂದು (ಎಲ್ಲಿಯಾದರೂ) ಹೇಳಿರುವುದೇ ? ೩೩. ಕೊಡವನ್ನು ಹಿಡಿದು ತಂದಿದ್ದ ಈ ದಾಸಿಯು ಎಲ್ಲೆ ಕಟ್ಟುಮೀರಿ ಈ ರೀತಿ ಅವಾಂತರವನ್ನು (ಸುಳ್ಳು ವ್ಯವಹಾರವನ್ನು) ಮಾಡಿದ್ದಾಳೆ. ಅವಳನ್ನು ಹಿಡಿದು ತರಿಸಿ, ಅತ್ಯಂತ ಕಠಿಣವಾದ ಶಿಕ್ಷೆಯನ್ನು ಮಾಡಿದಲ್ಲದೆ ನನ್ನ ಅತ್ಯಧಿಕವಾದ ಸಿಟ್ಟು ಏನು ಮಾಡಿದರೂ ಕಡಿಮೆಯಾದೀತೇನು ! ವ॥ ಹೀಗೆಂದು ಬ್ರಾಹ್ಮಣರೆಲ್ಲರೂ ಕೋಪದಿಂದ ಕೂಗಾಡುತ್ತ ತಾವಿರುವಲ್ಲಿಗೇ ಆ ಹಾವಿನ ಹಾಳು ಕಲ್ಲಯ್ಯನನ್ನು ಬರಮಾಡಿಕೊಂಡು ೩೪. ಸತ್ತುಹೋದ ಹಾವಿಗೆ ಪ್ರಾಣವನ್ನು ಕೊಟ್ಟ ಪ್ರಕಾಶಮಾನವಾದ ಮಹಿಮರೂ, ಹಿರಿಯರೂ ಎಂದು ನಿಮಗೆ ಈ ಪಟ್ಟಣದಲ್ಲಿ ಸದಾ ನಾವು ಮನ್ನಣೆಕೊಡುತ್ತಿದ್ದೇವೆ. ಹೇ ಸದ್ಗುಣಗಳ ಸಮೂಹವುಳ್ಳ ಕಲ್ಲಿನಾಥನೇ ನಿಮ್ಮ ಹಾಗೆ ಸಜ್ಜನರಾದವರು ಯಾರಾದರೂ ಇರುವರೇ ? ೩೫. ಎಲ್ಲರೂ ಎಲ್ಲಾ ಜನರಿಗೆ ಒಳ್ಳೆಯವರಾಗಿರುವುದಿಲ್ಲವಷ್ಟೆ ; ನಿಮ್ಮ ಸೇವಕಿಯಾದ ಈ ತೊತ್ತು

ಕುಲ್ಲೆಯಿವಳಗಿಯುದೆಸಗಿದ
ಪೊಲ್ಲಮೆಯುಂ ಕೇಳ್ದಿರಲು ಪೇಳ್ದಪೆವೀಗಳ್ ೩೫

ಜಾವಳನೆವೇದಶಾಸ್ತ್ರಕ
ಳಾವಿದನವುಳಾಗ್ನಿಹೋತ್ರಿ ದಾವೋದರ ಭೂ
ದೇವಸುತಂ ಸುಚರಿತನೆ
ವ್ಮೀ ವಾವುನಸೋವುಯಾಜಿ ಪದೆದೇಳ್ತರುತುಂ ೩೬

ಕೊಡವೀದಿಯಲ್ಲಿ ತನ್ನಯ
ಕೊಡನಂ ಸೋಂಕಿದೊಡೆ ದೋಷವಾಯ್ತೆನುತಳಲಿಂ
ಕಡುವುುಳಿದು ಬೈದು ವಿಪ್ರನ
ನೊಡಬಡಿದಳ್ಕೊಡನನಿಳೆಗಿದಚ್ಚರಿಯಲ್ತೇ ೩೭

ಪೊಡವಿಯೊಳಾವಾಗಮುವುಂ
ನುಡಿವುದೆ ಸೋಂಕಿದೊಡೆ ವಿಪ್ರನಘವುಕ್ಕುಮೆನು
ತ್ತೊಡನಿದನಱಿಯಳೆ ಕೊಬ್ಬಿಂ
ದೊಡೆದಳ್ಗಡ ಘಟಮನೆಂತೊ ತೊಳ್ತಿನ ಬಿಂಕಂ ೩೮

ಹರವಿಯುಂನೊಡೆದಾ ತೊಳ್ತಿನ
ಶಿರವುಂ ಬಿಡದೊಡೆಯಲೆಳಸಿ ವುದ್ಬಾಲಕರಾ
ದುರ್ಱರವಣಿಸುತ್ತಿರೆ ನಿಮ್ಮಂ
ನಿರೀಕ್ಷಿಸಲ್ವೇಳ್ಕುಮೆಂದು ನಿಲಿಸಿದೆವಲ್ತೇ ೩೯

ಅತಿ ದುಷ್ಟಳು. ಇವಳು ಅಂಜದೆ ಮಾಡಿದ ದುಷ್ಕೃತ್ಯವನ್ನು ನೀವು ಕೇಳಿಲ್ಲ, ಈಗ ಹೇಳುತ್ತೇವೆ (ಕೇಳಿ); ೩೬–೩೭. ಹೇ ಸಚ್ಚರಿತ್ರನೇ, ವೇದ ಶಾಸ್ತ್ರಾದಿ ವಿದ್ಯೆಗಳನ್ನರಿತವನೂ, ಶ್ರೇಷ್ಠವಾದ ಅಗ್ನಿಹೋತ್ರವನ್ನು ಮಾಡಿರುವವನೂ, ಆದ ದಾಮೋದರನೆಂಬ ಭೂದೇವನ (ಬ್ರಾಹ್ಮಣನ) ಮಗನಾದ ಈ ನಮ್ಮ ವಾಮನ ಸೋಮಯಾಜಿಯು ಕೀಳು ಮನುಷ್ಯನೇ ? ಅವನು ಸಂತೋಷದಿಂದ ಕೊಳಕ್ಕೆ ಹೋಗಿಬರುವ ಬೀದಿಯಲ್ಲಿ ಬರುತ್ತಿರುವಾಗ ಅವನ ಕೊಡವು ಆ ನಿನ್ನ ದಾಸಿಯ ಕೊಡವನ್ನು ತಾಕಲಾಗಿ ದೋಷವಾಯಿತೆಂದು ಸಂಕಟಗೊಂಡು ಅತ್ಯಧಿಕ ಕೋಪದಿಂದ ಆ ಬ್ರಾಹ್ಮಣನನ್ನು ಬೈದು, ತನ್ನ ಕೊಡವನ್ನು ಒಡೆದು ಹಾಕಿದ್ದು ಲೋಕದಲ್ಲಿ ಆಶ್ಚರ್ಯವಲ್ಲವೇ ? ೩೮. ಲೋಕದಲ್ಲಿ ಯಾವಾಗಲಾದರೂ, ಬ್ರಾಹ್ಮಣನು ಮುಟ್ಟಿಸಿಕೊಂಡರೆ ಪಾಪವುಂಟಾಗುವುದೆಂದು (ಯಾರಾದರೂ) ಹೇಳುತ್ತಾರೆಯೇ ? ಈ ವಿಷಯವನ್ನು ಅವಳು ತಿಳಿಯಳೇ ? ಸೊಕ್ಕಿನಿಂದ ಕುಂಭವನ್ನೇ ಒಡೆದುಬಿಡುವುದೇ ? ಆ ತೊತ್ತಿನ ಗರ್ವ ಅದೆಷ್ಟೋ ? ೩೯. ಹೀಗೆ ಕೊಡವನ್ನು ಒಡೆದ ಆ ತೊತ್ತಿನ ಶಿರಸ್ಸನ್ನೇ ತಪ್ಪದೆ ಒಡೆದು ಹಾಕಬೇಕೆಂದು ಮನಸ್ಸುಮಾಡಿ ನಮ್ಮ ಹುಡುಗರು ಕೂಗಾಡಿ ಮುಂದುವರಿಯುತ್ತಿರುವಾಗ ನಿಮ್ಮ ಭೇಟಿಮಾಡಿ ಮಾತನಾಡಬೇಕೆಂದು ನಾವು ನಿಲ್ಲಿಸಿದೆ

ವ॥ ಎಂಬುದುಮಲ್ಲಿ ಕಲ್ಲಿದೇವಂ ಕಡು ಕನಲ್ದು—

ಫಣಿರಾಡ್ಭೂಷಣಭಕ್ತಮಂದಿರದ ಕೀಳಿಲ್ಗೊಂಡು ಪಟ್ಟಿರ್ಪ ಬ
ಲ್ಸೊಣಗಂಗಾದೊಡಮಾಗದಾಗದೆಲೆ ನಿಮ್ಮಂ ಸಾರ್ದು ಮುಟ್ಟಲ್ಕೆ ಮೇ
ಗಣ ಮಾತೇಂ ಮೃಡದೀಕ್ಷೆಯಾಂತ ಶಿವಭಕ್ತಾವಾಸದಾಸೀಜನಂ
ಗುಣಶೂನ್ಯಸ್ಥಿತಿವೆತ್ತ ನಿಮ್ಮನಿರದೆಂತುಂ ಮುಟ್ಟಲೇನಕ್ಕುಮೋ ೪೦

ವ॥ ಅದೇಂ ಕಾರಣಮೆಂಬಿರಪ್ಪೊಡೆ—

ವೇದಶಿರೋನಿರೂಪಿತಮೆನಿಪ್ಪ ವಿಭೂತಿಯನಕ್ಷಮಾಲೆಯಂ
ಸಾದರಮಾನಲೊಲ್ಲದೆಲೆ ಗೋಪಿಯ ದುರ್ಮಲಮಂ ಸರೋಜಬೀ

ವಲ್ಲಮೇ ? ವ॥ ಹೀಗೆಂದ ಮಾತನ್ನು ಕೇಳಿದ ಆ ಕಲ್ಲಿದೇವನು ವಿಶೇಷವಾಗಿ ಕೋಪಗೊಂಡು ೪೦. ಎಲೈ ವಿಪ್ರರೇ, ಫಣಿಪತಿಯಾದ ಆದಿಶೇಷನನ್ನೇ ಆಭರಣವಾಗಿ ಉಳ್ಳ ಪರಮೇಶ್ವರನ ಭಕ್ತರ ಮನೆಯಲ್ಲಿ ಆಶ್ರಯ ಹೊಂದಿ, ಮಲಗಿರುವ ದೊಡ್ಡ ನಾಯಿಯಾದರೂ ನಿಮ್ಮನ್ನು ಸೇರಿ ಮುಟ್ಟುವುದು ಆಗದು ಆಗದು, ಎನ್ನುವಾಗ ಮುಂದಿನ ಮಾತಿನಿಂದೇನು ಪ್ರಯೋಜನ! ಶಿವದೀಕ್ಷೆಯನ್ನು ಹೊಂದಿ, ಶಿವಭಕ್ತರಾದವರ ಮನೆಯಲ್ಲಿ ವಾಸವಾಗಿ ದಾಸಭಾವದಿಂದ ಸೇವೆ ಮಾಡುವ ಜನರು ಗುಣವಿಹೀನರಾದ ನಿಮ್ಮನ್ನು ತಪ್ಪದೆ ಮುಟ್ಟಿಸಿಕೊಳ್ಳುವುದು ಹೇಗೆ ತಾನೇ ಸಾಧ್ಯವಾದೀತು! ವ॥ ಇದಕ್ಕೆ ಕಾರಣವೇನೆಂದು ಅನ್ನುವುದಾದರೆ ೪೧.† ವೇದದ ಶಿರಸ್ಸೆನಿಸಿದ ಉಪನಿಷತ್ತಿನಲ್ಲಿ ಹೇಳಲ್ಪಟ್ಟರೆನಿಸುವ ವಿಭೂತಿ ರುದ್ರಾಕ್ಷ ಮಾಲೆಗಳನ್ನು ಭಕ್ತಿಪೂರ್ವಕವಾಗಿ (ಆದರ ಪೂರ್ವಕವಾಗಿ) ಧರಿಸುವುದನ್ನು ಬಿಟ್ಟು, ಗೋಪೀಚಂದನದ ದುಷ್ಟ ಹೊಲ

† ಭಸ್ಮ ರುದ್ರಾಕ್ಷಗಳು, ಪಾದೋದಕ ಪ್ರಸಾದ ಬಗೆಗೆ ಉಪನಿಷತ್ತಿನ ಈ ಕೆಳಗಿನ ಕೆಲವು ಶ್ಲೋಕಗಳನ್ನು ಲಕ್ಷ್ಯದಲ್ಲಿಟ್ಟು ಕವಿ ಈ ವಿಷಯವನ್ನು ಪ್ರಸ್ತಾಪಿಸುತ್ತಾನೆ : ೧. 'ಭೂತ್ಯೈನಪ್ರಮದಿತವ್ಯಂ! ಸರ್ವಂ ಹ ವಾ ಇದಂ ಭಸ್ಮ। ಪವಿಷಭಸ್ಮಜ್ಯೋತಿಃ। ತಿರ್ಯಕ್ತಿಸ್ರೋರೇಖಾಃ ಪ್ರಕುರ್ವೀತ ವ್ರತಮೇತಚ್ಛಾಂಭವಂ'॥ ಇವು ಭಸ್ಮ ಮತ್ತು ಅದನ್ನು ಧರಿಸುವುದರ ಪ್ರಾಶಸ್ತ್ಯಬೋಧಕಗಳು ೨. 'ರುದ್ರಸ್ಯನಯನಾದುತ್ಪನ್ನಾ ರುದ್ರಾಕ್ಷಾ ಇತಿಲೋಕೇಖ್ಯಾಯಂತೇ ಸದಾಶಿವಸ್ಸಂಹಾರಕಾಲೇ, ಸಂಹಾರಂ ಕೃತ್ವಾ, ಸಂಹಾರಾಕ್ಷಂ ಮುಕುಳೀಕರೋತಿ, ತನ್ನಯನಾತ್‌ಜಾತಾರುದ್ರಾಕ್ಷಇತಿಹೋವಾಚತಸ್ಮಾತ್ ರುದ್ರಾಕ್ಷತ್ವಂಇತಿ ರುದ್ರಾಕ್ಷೇವಾಗ್ವಿಷಯೇ ಕೃತೇ, ದಶಗೋಪ್ರದಾನೇನ ಯತ್ಫಲಮವಾಪ್ನೋತಿ ತತ್ಫಲಮಶ್ನುತೇ' ಇತ್ಯಾದಿ ಬೃಹಜ್ಜಾಬಾಲಾದಿ ಉಪನಿಷತ್ ವಾಕ್ಯಗಳು ರುದ್ರಾಕ್ಷಿಗಳ ಪ್ರಾಶಸ್ತ್ಯವನ್ನು ಹೇಳತಕ್ಕವುಗಳು.

೨. 'ರುದ್ರೇಣ ಆತ್ತಂ ಅಶ್ನಂತಿ, ರುದ್ರೇಣಪೀತಂ ಪಿಬಂತಿ, ರುದ್ರೇಣಘ್ರಾತಂ ಜಿಘ್ರಂತಿ। ತಸ್ಮಾತ್ ಬ್ರಾಹ್ಮಣಾಃ ಪ್ರಶಾಂತ ಮನಸೋ ವಿದ್ವಾಂಸೋ ನಿರ್ಮಾಲ್ಯ ಮೇವ ಭಕ್ಷಯಂತಿ ನಿರ್ಮಾಲ್ಯಮೇವಾಶ್ನೀಯಾತ್'—ಎಂಬ ಜಾಬಾಲೋಪನಿಷತ್ ವಾಕ್ಯವೂ—'ತ್ರಿ ಗುಪ್ತಾನ್ನತಮಶ್ನೀಯಾದ್ಯದಿಪಾಪಾಚ್ಛಿಪಾನರ್ಪಿತಂ ಭುಂಕ್ಷ್ವತದೇನೋ ಭುಂಕ್ಷಕ್ರಿಮಿಂ ಭುಂಕ್ಷ್ವ, ಲಂಭುಂಕ್ಷ್ವ, ಅಘಂ ಭುಂಕ್ಷ್ವಾಽಧೋಗಚ್ಛತ್ಯಧೋಗಚ್ಛತಿ—ಎಂಬ ಕಠವಲ್ಲ್ಯುಪನಿಷದಾದಿ ವಚನಗಳು ಶಿವಪ್ರಸಾದ ಪಾದೋದಕ ಪ್ರಾಶಸ್ತ್ಯಬೋಧಕಗಳು.

ಜಾದಿಮಣಿಸ್ರಜಂಗಳನೆ ತಾಳ್ದಪಿರಾ ಶ್ರುತಿಸಿದ್ಧಶಂಭುಪಾ
ದೋದಕ ಸುಪ್ರಸಾದಮನಣಂ ತೊಱೆದುಂಡಪಿರನ್ಯಶೇಷಮಂ ೪೧

ಶಿವ ಏಕೋ [1][ದೇವ][1]ಯೆನು
ತ್ತವಿಕಲ ವೇದೋಕ್ತಿಯುಲಿಗುಮಭವನನುಳಿದೀ
ಭವಭಾರಿದೇವತತಿಯಂ
ತವೆ ಜಾನಿಪಿರೇಕೆ ನಿಮಗೆ ವೈದಿಕನಾಮಂ ೪೨

ಬ್ರಾಹ್ಮಣನಪ್ಪಂ ಜಗದೊ
ಳ್ಬ್ರಹ್ಮಮನಱಿದಾತನಭವನೇ ಬಗೆಯೆ ಪರ
ಬ್ರಹ್ಮಂ ಬ್ರಹ್ಮಣಿ ಚರತಿ
ಬ್ರಾಹ್ಮಣಯೆಂಬಾಗಮೋಕ್ತಿಯಿಂದಿದು ಸತ್ಯಂ ೪೩

ಉಮೆಯಾಳ್ಮಂ ಪರಬೊಮ್ಮಮೆಂಬುದು ಋತಂ ಸತ್ಯಂ ಪರಬ್ರಹ್ಮಮು
ತ್ರಮಿಂದುಂ ವೇದಶಿರಃಸಹಾಯಬಲದಿಂ ತತ್ಕಾರಣಂ ಬ್ರಹ್ಮವಿ

ಸನ್ನು, ಕಮಲದ ಬೀಜವೇ ಮೊದಲಾದ ಮಣಿಗಳ ಮಾಲಿಕೆಗಳನ್ನು ಧರಿಸುತ್ತೀರಿ. ಶ್ರುತಿಯಲ್ಲಿ ಸಿದ್ಧಾಂತ ಪಡಿಸಿದಂತೆ ಶಂಭುವಿನ ಪಾದೋದಕ ಮತ್ತು ಶ್ರೇಷ್ಠವಾದ ಪ್ರಸಾದವನ್ನು ಪೂರ್ಣವಾಗಿ ತಿರಸ್ಕರಿಸಿ, ಅನ್ಯ ಶೇಷವನ್ನು (ಪ್ರಸಾದ ಶೇಷವನ್ನು) ಸ್ವೀಕಾರ ಮಾಡುತ್ತೀರಿ. ೪೨. ಶಿವನೊಬ್ಬನೇ (ಬ್ರಹ್ಮಾಂಡಕ್ಕೆಲ್ಲ) ದೇವನೆನ್ನುತ್ತ ನ್ಯೂನತೆಯಿಲ್ಲದೆ ವೇದದ ಮಾತು ಹೇಳುತ್ತಿದೆ. ಅಂಥ ಆ ಭವನನ್ನು ತೊರೆದು ಈ ಹುಟ್ಟು ಸಾವುಗಳ್ಳುಳ್ಳ ದೇವತೆಗಳ ಸಮೂಹವನ್ನು ಚೆನ್ನಾಗಿ ಧ್ಯಾನ ಮಾಡುತ್ತೀರಿ. ಇಂಥ ನಿಮಗೆ ವೈದಿಕರೆಂಬ ಹೆಸರೇಕೆ ?* ೪೩. ಜಗತ್ತಿನಲ್ಲಿ ಬ್ರಹವನ್ನು ಅರಿತವನೇ ಬ್ರಾಹ್ಮಣನೆನಿಸುವನು. ಆ ಪರಶಿವನೇ ವಿಚಾರ ಮಾಡಿ ನೋಡಿದರೆ ಪರಬ್ರಹ್ಮನೆನಿಸುವನು. (ಅಂಥ) ಬ್ರಹ್ಮನ ವಿಷಯದಲ್ಲಿ ವ್ಯವಹರಿಸುವವನೇ ಬ್ರಾಹ್ಮಣನೆನಿಸುವನೆಂಬ ಆಗ ಮೋಕ್ತಿಯಿಂದ ಇದು ಸತ್ಯವೆನಿಸುವುದು.[1] ೪೪. ಉಮಾಪತಿಯಾದ ಶಿವನೇ ಪರಬ್ರಹ್ಮನೆಂಬುದು 'ಋತಂ ಸತ್ಯಂ ಪರಬ್ರಹ್ಮ'ವೆಂಬ ಈ ಮಂತ್ರದ ಸಹಾಯದ ಬಲದಿಂದ ಸಿದ್ಧವಾಗುವುದು. ಆದ ಕಾರಣ ಬ್ರಹ್ಮವಿಷ್ಣು ಮುಖ್ಯರಾದ ದೇವತೆಗಳಿಗೆ

1 ಧ್ಯೇಯ(ಅ, ದ,ಚ, ಮ, ಜ, ಗ)

*'ಕಾರಣಂತು ಧ್ಯೇಯಸ್ಸರ್ವೈಶ್ವರ್ಯ ಸಂಪನ್ನಶ್ಶಂಭುರಾ ಕಾಶಮಧ್ಯೇಧ್ರುವಂ। ಶಿವಏಕೋಧ್ಯೇಯ ಶಿವಂಕರಸ್ಸರ್ವ ಮನ್ಯತ್ ಪರಿತ್ಯಜ್ಯ'—ಎಂದು ಅಥರ್ವಶಿಖಾವಚನವು ಸರ್ವದೇವತಾಪೇಕ್ಷಯಾ ಶಿವಪಾರಮ್ಯವನ್ನು ಹೇಳುವುದು.

(1) 'ಯೇವಿದುಃ ಬ್ರಹ್ಮವಾಚ್ಯಂ ಶ್ರೀರುದ್ರಂ ತೇ ಬ್ರಾಹ್ಮಣಾಃ' ಎಂಬ ಆಗಮದ ಮಾತಿನಂತೆ ಯಾವನು ಬ್ರಹ್ಮವನ್ನು ಅರಿತವನೋ ಅವನೇ ಬ್ರಾಹ್ಮಣ ನೆಂಬಮಾತೇ ಪ್ರಮಾಣವೆಂದು ಕವಿಯ ಆಶಯ.

ಷ್ಣುಮುಖರ್ಜೀವರುಮೀಶನೊರ್ವನೆ ಪರಬ್ರಹ್ಮಂ ದಲೆಂಬೀ ವಿವೇ
ಕಮುದೆಂದು ನಿಮಗಿಲ್ಲದಿರ್ಪ ಕತದಿಂ ಬ್ರಾಹ್ಮಣ್ಯಮೆಂತಕ್ಕುಮೋ ೪೪

ಪರಮಾತ್ಮಂ ಪರಬೊಮ್ಮಂ
ಪರಮೇಶನೆನಿಪ್ಪನನ್ಯ ಸಾಧಾರಣ ಭಾ
ಸುರಪರಮನಾಮಮುಖಿಳಾ
ಮರಪಶುಪತಿ ಶಂಭುಗಲ್ಲದನ್ಯರ್ಗೊಳವೇ ೪೫

ಭಾವಿಪೊಡಾ ವೇದಂ ತ್ವಂ
ದೇವೇಷು ಬ್ರಾಹ್ಮಣೋಸಿ ಯೆಂಬುದಱಿಂ ಗೌ
ರೀವರನಾದಿ ಬ್ರಾಹ್ಮಣ
ನಾ ವಿಭುವಂ ಬ್ರಾಹ್ಮಣಂಗೆ ಸೇವಿಪ್ಪುದುಚಿತಂ ೪೬

ಇದನುಳಿದಧಮಾಮರರಂ
ಪದೆದರ್ಚಿಪ ಶಂಭುನಿಷ್ಠ ಗಾಯತ್ರಿಯನೊ
ರ್ಮೊದಲರ್ಕಪರಮನೆಸಗುವ
ಕುದುಕುಳಿಗಳ್ನಿಮಗೆ ಸಲ್ವುದೇ ಬ್ರಾಹ್ಮಣ್ಯಂ ೪೭

ಈಶ್ವರನೊಬ್ಬನೇ ನಿಶ್ಚಯವಾಗಿ ಪರಬ್ರಹ್ಮನೆಂಬ ವಿವೇಕವು ಎಂದೂ ನಿಮಗೆ ಇಲ್ಲದಿರುವ ಕಾರಣದಿಂದ ನಿಮಗೆ ಬ್ರಾಹ್ಮಣ್ಯವೆಂಬುದು ಹೇಗೆ ಸಿದ್ಧಿಸುವುದು ?[2] ೪೫. ಪರಮಾತ್ಮ ಪರಬ್ರಹ್ಮ, ಪರಮೇಶ್ವರ ಎಂದೆನ್ನುವ ಅನ್ಯರಿಗೆ ಎಷ್ಟು ಮಾತ್ರದಿಂದಲೂ ಅನ್ವಯಿಸದ ಶೋಭಿಸುವ ಪವಿತ್ರ ಹೆಸರು ಸಮಸ್ತ ದೇವತೆಗಳ ಪತಿಯಾದ ಶಂಭುವಿಗಲ್ಲದೆ ಬೇರೆ ಯಾರಿಗಾದರೂ ಉಂಟೇ ? ೪೬. ವಿಚಾರ ಮಾಡಿ ನೋಡಿದರೆ ಆ ವೇದವು 'ತ್ವಂ ದೇವೇಷು ಬ್ರಾಹ್ಮಣೋಽಸಿ' ಎಂಬುವ ಮಾತಿನಿಂದ ಅಂದರೆ ನೀನು ದೇವತೆಗಳಲ್ಲಿ ಬ್ರಾಹ್ಮಣನಾಗಿದ್ದೀಯೆ ಎಂಬ ಮಾತಿನಿಂದ ಗೌರೀಪತಿಯಾದ ಶಿವನೇ ಅನಾದಿ ಬ್ರಾಹ್ಮಣನು, ಆ ಪ್ರಭುವನ್ನು ಬ್ರಾಹ್ಮಣನೆಂದು ಸೇವಿಸುವುದೇ ಉಚಿತವಾದುದ್ದು.[3] ೪೭. ಇದನ್ನು ಬಿಟ್ಟು ಉಳಿದ ಕೀಳುದರ್ಜೆಯ ದೇವತೆಗಳನ್ನು ಪ್ರೀತಿಯಿಂದ ಅರ್ಚಿಸುವ, ಗಾಯತ್ರೀ ಮಂತ್ರದಿಂದ ಮೊದಲು ಅರ್ಕನೇ (ವಿಷ್ಣುವೇ) ಪರಮನೆಂದು ವ್ಯವಹರಿಸುವ ಹೊಟ್ಟೆ ಕಿಚ್ಚಿನ (ಮಾತ್ಸರ್ಯದ) ಸ್ವಭಾವವುಳ್ಳ ನಿಮಗೆ ಬ್ರಾಹ್ಮಣ್ಯವು

---

(2) 'ಋತಂ ಸತ್ಯಂ ಪರಬ್ರಹ್ಮಂ । ಪುರುಷಂ ಕೃಷ್ಣ ಪಿಂಗಳಂ ।
ಊರ್ಧ್ವ ರೇತಂ ವಿರೂಪಾಕ್ಷಂ । ವಿಶ್ವರೂಪಾಯ ವೈನಮಃ ॥ ಎಂಬ ಮಾತು ಶಿವನೇ ಪರಬ್ರಹ್ಮನೆಂಬ ಮಾತಿಗೆ ಪ್ರಮಾಣವೆಂದು ಕವಿಯ ಆಶಯ.

(3) 'ತ್ವಂದೇವೇಷು ಬ್ರಾಹ್ಮಣೋಽಸ್ಯಹಂ ಮನುಷ್ಯೇಷು ಬ್ರಾಹ್ಮಣಃ। ಬ್ರಾಹ್ಮಣೋಮೇ ಬ್ರಾಹ್ಮಣಮುಪಧಾವಂತ್ಯುಪಧಾವಾಮಿ' —ಎಂಬ ಸಾಮವೇದದ ಮಾತೇ ಇದಕ್ಕೆ ಪ್ರಮಾಣವೆಂದು ತಿಳಿಯಬೇಕು.

ವ॥ ತತ್ಕಾರಣಂ "ಶಿವಭಕ್ತಚರಾಗಾರದಾಸಿ ಭುಕ್ತೋಜ್ಝಿತಾಶನಾಃ । ಶುನಕಾಃ ಸೂಕರಾ ಯಾಂತಿ ಯಾಯಜೂಕಕ್ರಿಯಾಗತಿಂ" ಎಂಬ ಮಕುಟಾಗಮ ಶಿವವಚನಪ್ರಮಾಣದಿಂ ಶಿವಭಕ್ತಗೃಹ ದಾಸೀಜನಮುಂಡುಳಿದುದಂ ಕೊಂಡದಱಿನೊಗೆದ ಶುದ್ಧಬುದ್ಧಿಯನಾಳ್ದ ಶುನಕನೆಂತು ನಿಮ್ಮಂ ಮುಟ್ಟುಗುಮೆನೆ ಕೇಳ್ದು ಶಾಪಾಗ್ನಿದಗ್ಧರ್ಮಗುಳ್ದು ಕೋಪಾಗ್ನಿದಗ್ಧರಾಗಿ—

ಆಡಿದೆ ಲೇಸನಿಂದಮವು ಮೂರ್ಖಶಿಖಾಮಣಿ ನಾಯ್ಗಳಿಂದೆ ಕೀ
ಳ್ಮಾಡಿದೆಯೆಮ್ಮನಾಗಮವಿದಗ್ರಜರು ನೆಱೆ ನಿನ್ನ ತೊಳ್ತು ಮುಂ

ಸಲ್ಲುವುದೇ ? ವ॥ ಆದ ಕಾರಣ ಶಿವಭಕ್ತರಾದ ಜಂಗಮರುಗಳ ಮನೆಯಲ್ಲಿರುವ ಸೇವಕ ವರ್ಗದವರು ಊಟ ಮಾಡಿ ಉಳಿಸಿದ ಅನ್ನವನ್ನು ಊಟ ಮಾಡಿದ ನಾಯಿ ಹಂದಿ ಯಜ್ಞ ಮಾಡಿದವನಿಗೆ ಗತಿಯುಂಟಾಗುವುದೋ ಆ ಗತಿಯನ್ನು ಹೊಂದುತ್ತದೆ. ಹೀಗೆನ್ನುವ ಮಕುಟಾಗಮದಲ್ಲಿ ಹೇಳಿದ ಶಿವನ ವಚನದ ಆಧಾರದಿಂದ ಶಿವಭಕ್ತರ ಮನೆಯಲ್ಲಿನ ದಾಸೀಜನಗಳು ಉಂಡುಳಿಸಿದುದುದನ್ನು ಸ್ವೀಕರಿಸಿ, ಅದರಿಂದುಂಟಾದ ಶುದ್ಧ ಬುದ್ಧಿಯನ್ನು ಹೊಂದಿದ ನಾಯಿಯು ಹೇಗೆ ನಿಮ್ಮನ್ನು ಮುಟ್ಟಿಸಿಕೊಂಡೀತು ? ಎಂದು ಆ ಹಾವಿನ ಹಾಳು ಕಲ್ಲಿನಾಥನು ಹೇಳಲು, (ಗೌತಮರ) ಶಾಪದ ಅಗ್ನಿಯಿಂದ ದಗ್ಧರಾದ † ಆ ವಿಪ್ರರು ಕೋಪವೆಂಬ ಬೆಂಕಿಯಿಂದ ಸುಡಲ್ಪಟ್ಟವರಾಗಿ ೪೮. ಎಲೈ ಮೂರ್ಖಶಿಖಾಮಣಿಯಾದ ಕಲ್ಲಿನಾಥ, ಅಮಮ ! ಸರಿಯಾಗಿ ಮಾತನಾಡಿದೆ ! ಆಗಮ

† ಶಾಪಾಗ್ನಿದಗ್ಧರ್ :—ಕವಿಯಿಲ್ಲಿ ಈ ಕೆಳಗಿನ ಪುರಾಣಕಥೆಯೊಂದನ್ನು ಲಕ್ಷ್ಯದಲ್ಲಿಟ್ಟು ಹೀಗೆ ಹೇಳಿದನೆನ್ನಲಾಗಿದೆ. ಆ ಕಥೆ ಹೀಗೆ : ಪೂರ್ವದಲ್ಲಿ ಒಮ್ಮೆ ೧೨ ವರ್ಷಗಳ ಕ್ಷಾಮ ತಲೆದೋರಿದಾಗ ಗೌತಮ ಮಹರ್ಷಿಗಳು ಈಶ್ವರನನ್ನು ಕುರಿತು ತಪಸ್ಸುಮಾಡಿ ತಮ್ಮಾಶ್ರಮದ ಸುತ್ತ ಮಳೆ ಬೆಳೆಗಳಾಗುವಂತೆ ವರ ಪಡೆದು ತಮ್ಮ ಆಶ್ರಮ ಭೂಮಿಯಲ್ಲಿ ಸಮೃದ್ಧ ಮಳೆ ಬೆಳೆ ಪಡೆದರಂತೆ. ಆಗ ಅನೇಕ ಮನುಷ್ಯರೂ ಪ್ರಾಣಿಗಳೂ ಅವರ ಆಶ್ರಮದ ಆಶ್ರಯ ಪಡೆದು ಸುಖಿಸಿ ಕ್ಷಾಮ ಮುಗಿದು ಸುಭಿಕ್ಷವಾದ ಮೇಲೆ ಎಲ್ಲರೂ ತಮ್ಮ ತಮ್ಮ ಮೂಲ ಸ್ಥಳಗಳಿಗೆ ಹೋಗಲೆತ್ನಿಸುತ್ತಿದ್ದರು. ಅಲ್ಲಿದ್ದ ಕೆಲವು ದ್ವಿಜರು ಗೌತಮರ ಮೇಲಿನ ಹೊಟ್ಟೆಕಿಚ್ಚಿನಿಂದ (ಅವರು ಶಿವಭಕ್ತರೆಂಬ ಹೊಟ್ಟೆಕಿಚ್ಚಿನಿಂದ) ಇವರ ಮೇಲೆ ಏನಾದರೂ ದೋಷವನ್ನು ಹೊರಿಸಬೇಕೆಂದು ಒಂದು ಮಾಯಾ ಹಸುವನ್ನು ಸೃಷ್ಟಿಸಿ ಅದು ಅವರ ಹತ್ತಿರಕ್ಕೆ ಬರುವಂತೆ ಮಾಡಿದರು. ಹಾಗೆ ಆ ಹಸುವು ಬರಲು ಗೌತಮರು ಅದರ ಮೈಮೇಲೆ ಕಯ್ಯಾಡಿಸಿದ ಕಾರಣವೇ ಅದು ಸತ್ತು ಹೋಯಿತು. ದ್ವಿಜರೆಲ್ಲ ಗೌತಮರ ಮೇಲೆ ಗೋಹತ್ಯಾ ದೋಷವನ್ನು ಆರೋಪಿಸಿ ಆಶ್ರಮ ಬಿಟ್ಟು ಹೊರಡಲಾರಂಭಿಸಿದರು. ಇದನ್ನು ಜ್ಞಾನದೃಷ್ಟಿಯಿಂದ ಅರಿತ ಗೌತಮರು—ಆ ನೀಚ ದ್ವಿಜರಿಗೆ ಹೀಗೆ ಶಾಪ ಕೊಟ್ಟರು : ಸೂತ ಸಂಹಿತೆಯ ಪ್ರಕಾರ :—

'ವಿಷ್ಣ್ವಾದಿ ದೇವತಾಸ್ಸರ್ವಾ ವಿಶಿಷ್ಟಾಶ್ಶಂಕರಾದಿತಿ । ಭ್ರಾಂತಿ ವಿಜ್ಞಾನ ಸಂಪನ್ನಾ ಭವೇತ ಬ್ರಾಹ್ಮಣಾಧಮಾಃ । ವೇದಬಾಹ್ಯೇಷು ತಂತ್ರೇಷು ಪಾಂಚರಾತ್ರಾದಿಷು ದ್ವಿಜಾಃ । ಭವೇತ ದೀಕ್ಷಿತಾ ಯೂಯಂ ಯುಷ್ಮಾಕಂ ಪಿತರಸ್ತಥಾ । ಮಹಾದೇವಸ್ಯ ಚೋತ್ಕರ್ಷೇ ತ್ರಿಪುಂಡ್ರೋದ್ಧೂಳನಾದಿಷು । ರುದ್ರಾಕ್ಷಧಾರಣೇ ರುದ್ರಲಿಂಗಸ್ಯೈವತು ಪೂಜನೇ । ರುದ್ರಾಲಯಾದಿವೃಕ್ಷಾಯಾಂ ರುದ್ರಯಾತ್ರಾದಿ ಕರ್ಮಸು । ಯದ್ಯತ್ತು ರುದ್ರಸಂಬಂಧಿ ತತ್ರತತ್ರಾಪಿ ದುರ್ಜನಾಃ । ಭವೇತವಿಮುಖಾ ಯೂಯಂ ಸರ್ವದಾ ಬ್ರಾಹ್ಮಣಾಧಮಾಃ ॥ ಇತ್ಯಾದಿ ಇತ್ಯಾದಿ—ಗೌತಮರು ಅತ್ಯಂತ ಶೈವಭಕ್ತಿ ಸಂಪನ್ನರಾಗಿದ್ದರೆಂದು ಶೈವರ ಗ್ರಹಿಕೆ—

ಮಾಡಿದ ತಪ್ಪನೋಸರಿಸಿ ನಿನ್ನೊಡವೇಳ್ದೊಡೆ ತತ್ಕಟೂಕ್ತಿಯಿಂ
ನೀಡೆನೆ ನಿಷ್ಠುರೋಕ್ತಿಗಳನೆಂದೆ ಗಡೆಲ್ಲರ ಮುಂದೆ ಕೊರ್ವಿನಿಂ ೪೮

ಬಿಸಿಲುಪಟಳಮಂ ಕಳೆಯ
ಲ್ಪೊಸ ಬನಮಂ ಪುಗೆ ದವಾಗ್ನಿ ಕೊಂಡವೊಲಾದ
ತ್ರಸುರಲದೇಂ ಬಱುವಾತಿನ
ಪಸರಂ ಮಾಣ್ಗೆಮ ಸಮಸ್ತರುಂ ಕೇಳ್ವಿನೆಗಂ ೪೯

ಓದಿಸು ನಿನ್ನಯ ಸೊಣಗನಿ
ನಾದಂ ಪದಪಾಳಿ ಜಟೆಗಳಮರ್ದಿರೆ ವಿಸುಪಾ
ವೇದಮನೀಕ್ಷಿಪೆವೆನೆ ಸ
ಮ್ಮೋದಂ ಮಿಗೆ ನಗುತೆ ಶರಣನಂದೀತೆಂದಂ ೫೦

ಇದು ಗಹನಮೆ ಮದ್ಭಕ್ತರ
ಸದನಮನೆಡೆವಿಡದೆ ಕಾವ ಕುರ್ಕುರ ತತಿಗು
ರ್ವಿದ ವೇದಮೊನಕೆವಾಡ
ಪ್ಪುದಱಿಂದೀ ಶುನಿಗೆ ವೇದಮೋದುವ ಕಜ್ಜಂ ೫೧

ವ॥ ಎಂದು ಗುರುಧ್ಯಾನಪರಾಯಣನಾಗಿ ನಿಜಗೃಹದ್ವಾರದೊಳ್ಪಟ್ಟಿರ್ದ ಜಾಯಿಲನಂ ಪ್ರಸನ್ನದೃಷ್ಟಿಯಿಂ ನೋಡಿ ವೇದಪಿತಾಮಹನೆಂಬ ಪೆಸಱಿನಂಗುಲಿಯ ಚಿಟುಂಕನಿಟ್ಟು ಕರೆದು—

ಜ್ಞಾನವುಳ್ಳವರಲ್ಲಿ ಶ್ರೇಷ್ಠರಾದ ನಮ್ಮನ್ನು ನಾಯಿಗಿಂತಲೂ ಕೀಳು ಮಾಡಿ ಮಾತನಾಡಿದೆ ! ನಿನ್ನ ತೊತ್ತು ಈ ಪೂರ್ವದಲ್ಲಿ (ನಮ್ಮ ವಿಷಯದಲ್ಲಿ) ಮಾಡಿದ ಅಧಿಕವಾದ ತಪ್ಪನ್ನು ನಿನ್ನಲ್ಲಿ ಹೇಳಿದರೆ ಆ ತಪ್ಪನ್ನು ಒಂದು ಕಡೆ ತಳ್ಳಿಹಾಕಿ, ಅವಳ ಕಠಿಣೋಕ್ತಿಗಳಿಗಿಂತಲೂ ಹೆಚ್ಚೋ ಎನ್ನುವಂತೆ ನಿಷ್ಠುರವಾದ ಮಾತುಗಳನ್ನು ಎಲ್ಲರ ಮುಂದೆ ಆಡಿದೆಯಲ್ಲವೇ ! ೪೯–೫೦. ಬಿಸಿಲಿನ ಉಪಟಳವನ್ನು ಕಳೆಯಬೇಕೆಂದು ನೂತನವಾಗಿ ಚಿಗಿತವನವನ್ನು ಹೊಕ್ಕರೆ, ಕಾಡ್ಗಿಚ್ಚು ಆಹುತಿಕೊಂಡ ಹಾಗೆ ಆಯಿತು. ಮಾತಾಡಿ ಪ್ರಯೋಜನವೇನು ? ಒಣ ಮಾತಿನ ಮಾಲೆ ಸಾಕು ! ಸಮಸ್ತರೂ ಕೇಳುವ ಹಾಗೆ ನಿನ್ನ ನಾಯಿಯಿಂದ ಉದಾತ್ತ, ಅನುದಾತ್ತ, ಸ್ವರಿತ ಧ್ವನಿ ವಿಶೇಷದ ವೇದಾಧ್ಯಯನ ಕ್ರಮ ವಿಶೇಷವಿರುವ ಹಾಗೆ ಶೋಭಿಸುವ ಆ ವೇದವನ್ನು ಓದಿಸು, ನೋಡುತ್ತೇವೆ ; ಎನ್ನಲು, ಅತ್ಯಂತ ಸಂತೋಷಗೊಂಡ ಕಲ್ಲಿನಾಥ ಶರಣನು ನಗುತ್ತ ಹೀಗೆ ಹೇಳಿದನು : ೫೧. ನನ್ನ ಭಕ್ತರ ಮನೆಯನ್ನು ಎಡವಿಡದಂತೆ ಕಾಯ್ದುಕೊಂಡಿರುವ ನಾಯಿಗಳ ಸಮೂಹಕ್ಕೆ ಶ್ರೇಷ್ಠವಾದ ವೇದವು ಒನಕೆಪಾಡೆನಿಸುವುದು (ಕುಟ್ಟುವಾಗ ಹಾಡುವ ತ್ರಿಪದಿ ಹಾಡಿದ್ದ ಹಾಗೆನಿಸುವುದು), ಆದ್ದರಿಂದ ನಾಯಿಯ ಮುಖದಿಂದ ವೇದವನ್ನೋದಿಸುವ ಈ ಕಾರ್ಯ ಯಾವ ಗಹನ ವಿಚಾರ ! ವ॥ ಹೀಗೆಂದು ಗುರುಧ್ಯಾನಪರಾಯಣನಾಗಿ, ತನ್ನ ಮನೆಯ ಬಾಗಿಲ ಮುಂದೆ ಮಲಗಿದ್ದ ನಾಯಿಯನ್ನು ಪ್ರಸನ್ನಮುದ್ರೆಯಿಂದ ನೋಡಿ, 'ಹೇ ವೇದಪಿತಾಮಹನೇ', ಎಂದು ಬೆರಳಿನಿಂದ ಚುಟಿಕೆ ಹಾಕಿ

[1]ಉಚ್ಚಿ[1] ಶಿವಪ್ರಸಾದಪರಿಲಬ್ಧಿ ಜಪಾವನಭಾವಪೂರ್ಣ ಭಾ
ಸ್ವಚ್ಚಿದಖಂಡಸುಪ್ರಣವಮಂಗಳವಿಗ್ರಹ ಲಿಂಗಭಾವನಾ
ಸಚ್ಚರಿತಪ್ರಸನ್ನ ಸಕಳಶ್ರುತಿರತ್ನಸಮುದ್ರ ಬರ್ಪುದು
ಚ್ಚುಚ್ಚಿರೆಯೆಂದು ತಾಂ ಕರೆದನಂತದನಾ ಮದನಾರಿಸನ್ನಿಭಂ ೫೨

ವ॥ ಎಂದು ಕರೆವುದುಮಾ ಸೊಣಗನೇಳ್ಗೆಂದು ಪರವಾದಿಜನಮಂ ಬಡಿಯಲ್ಕಶೆಯಂ ಚಾ[2]ಲಿಪಂತೆ ಬಾಲಮನಾಡಿಸುತ್ತುಂ ಭಕ್ತಿಭರದಿನಡಿಗೆಱಗಿ ನಿಲ್ವಿನಮದಱ ಮೊಗಮನಾಮಹಿಮಾಕರಂ ನೋಡಿ ನಿಜಕೃಪಾತರಂಗಿಣಿಯೊಳೋಲಾಡಿಸುತ್ತುಮಾವ ವೇದದೊಳಾದೊಡಮೊಂದೆಡೆಯೊಳೊಂದು ವಾಕ್ಯಮನೆತ್ತಿ ತಳ್ವದೋದೆಂಬುದುಮಾಗಳಾ ರುದ್ರಾಂಶಸಂಭೂತಂ ಪದ್ಮಾಸನಮನವಷ್ಟಂಭಿಸಿ ಋಜುಭಾವದಿಂ ಕುಳ್ಳಿರ್ದು ಹೃದಯಕಮಳಕರ್ಣಿಕಾಗ್ರದೊಳ್ಗುರುಸ್ವರೂಪ ಪರಶಿವನಂ ಜಾನಿಸಿ ಮೂಲಾಧಾರಾಕುಂಚನಂಗೆಯ್ದು—

ಕರೆದು ೫೨. ಆ ಮನ್ಮಥಾರಿ ಸಮಾನನಾದ ಕಲ್ಲಿನಾಥನು (ನಾಯಿಯನ್ನು ಕುರಿತು) ಶ್ರೇಷ್ಠವಾದ ಶಿವನ ಪ್ರಸಾದದಿಂದ ಲಬ್ಧವಾದ ಶಿವಮಂತ್ರಾನುಷ್ಠಾನದ ಪೋಷಣೆಯಿಂದ ತುಂಬಿಹೋದ ಮನೋಭಿಪ್ರಾಯದಿಂದ ಕೂಡಿದ ಶುನಕನೇ, ಪ್ರಕಾಶಮಾನವಾದ ಅಖಂಡ ಜ್ಞಾನಸ್ವರೂಪದ ಶ್ರೇಷ್ಠ ಓಂಕಾರ ಪ್ರಣವದಿಂದ ಮಂಗಳಕರವಾದ ಶರೀರವುಳ್ಳದ್ದೇ, ಲಿಂಗ ಸಂಬಂಧವಾದ ಭಾವನಾ ವಿಶೇಷದಿಂದ (ಧ್ಯಾನ ವಿಶೇಷದಿಂದ) ಕೂಡಿ ಶ್ರೇಷ್ಠ ಚರಿತ್ರೆಯಿಂದ ಸಂತೋಷಗೊಂಡಿರುವಂತಹುದೇ, ಸಮಸ್ತ ಶ್ರುತಿಗಳೆಂಬ ರತ್ನಗಳಿಗೆ ಸಮುದ್ರೋಪಾದಿಯಲ್ಲಿರುವಂತಹುದೇ, ಬರಬೇಕು. ಚುಚ್! ಚುಚ್! (ನಾಯಿಯನ್ನು ಕರೆಯುವ ರೀತಿ) ಎಂದು ಅವನು ಆ ನಾಯಿಯನ್ನು ಕರೆದನು.

ವ॥ ಹೀಗೆಂದು (ಕಲ್ಲಿನಾಥನು) ಆ ನಾಯಿಯನ್ನು ಕರೆಯಲಾಗಿ, ಆ ನಾಯಿಯು ಎದ್ದು ಬಂದು, ಪರವಾದಿ ಜನಗಳನ್ನು ಬಡಿಯುವುದಕ್ಕೆ ಬಡಿಯನ್ನು ಅಲ್ಲಾಡಿಸುವಂತೆ ಬಾಲವನ್ನಾಡಿಸುತ್ತ, ಭಕ್ತಿಯ ಆಧಿಕ್ಯದಿಂದ ಕೂಡಿ ಆ ಕಲ್ಲಿನಾಥನ ಅಡಿಗಳಿಗೆ ನಮಸ್ಕರಿಸಿ ನಿಂತಿತು. ಮಹಿಮಾಕರನಾದ ಕಲ್ಲಿ ನಾಥನು ಅದರ ಮುಖವನ್ನು ನೋಡಿ, ತನ್ನ ಕೃಪಾರಸವೆಂಬ ನದಿಯಲ್ಲಿ ಅದನ್ನು ಈಸಾಡಿಸುತ್ತ '(ಎಲೈ ಶುನಕನೇ,) ಯಾವ ವೇದದಿಂದಲಾದರೂ ಒಂದುಸ್ಥಳದಿಂದ (ಒಂದು ಅಧ್ಯಾಯದಿಂದ) ಒಂದು ವಾಕ್ಯವನ್ನು ಎತ್ತಿಕೊಂಡು ತಡಮಾಡದೆ ಓದು' ಎನ್ನಲಾಗಿ ಆಗ ಆ ರುದ್ರಾಂಶ ಸಂಭವಗೊಂಡ (ನಾಯಿಯು) ಪದ್ಮಾಸನ ಹಾಕಿ, ಸಾತ್ವಿಕಭಾವದಿಂದ ಕುಳಿತುಕೊಂಡು, ಹೃದಯವೆಂಬ ಕಮಲದ ಮಧ್ಯದಲ್ಲಿರುವ ಕರ್ಣಿಕಾರದ ಮೇಲುಭಾಗದಲ್ಲಿ (ಮನಸ್ಸನ್ನು ತಂದು) ಗುರುಸ್ವರೂಪನಾದ ಪರಶಿವನನ್ನು ಧ್ಯಾನಮಾಡುತ್ತ, ಮೂಲಾಧಾರ ಚಕ್ರವನ್ನು

1 ಉಚ್ಚ(ಅ) 2 ಚಾ(ಜ, ಅ)

ರವಿಶಶಿಗತಿಯಂ ತಡೆದಾ
ಪವನನನಾ ಮಧ್ಯಮಾರ್ಗದೊಳ್ಪತ್ತಿಸಿ ಬಿಂ
ದುವಿಮಳನಾದಲಯಾನ್ವಿತ
ಸವಿಶೇಷಪ್ರಣವಮಂ ಸಮುಚ್ಚರಿಸುತ್ತುಂ ೫೩

ಪಿರಿದಾಶ್ಚರ್ಯದೆ ಪೊಗಳು
ತ್ತಿರೆ ಭೂಸುರತತಿಯುದಾತ್ತಮನುದಾತ್ತಮುಮಾ
ಸ್ವರಿತಂ ಪ್ರಚಯಸ್ವರಮುಮ
ರ್ದಿರೆ ಪದಪಾಳೀಕ್ರಮಂಗಳಂ ಪರಿವಿಡಿಯಿಂ ೫೪

ತಿಳಿದನು[1]ಯೋಗಿಸಿ ರಾಗಿಸಿ[1]
ವಿಳಾಸದಿಂ ತಪ್ಪದಂತೆ ನಾಲ್ಕುಂ ವೇದಂ
ಗಳೊಳೋರೊಂದೆಡೆಯ ಸಮು
ಜ್ವಳವಾಕ್ಯಮನೆತ್ತಿ ಸೊಣಗನೋದಿದುದಾಗಳ್ ೫೫

ವ|| ಅದಂ ಕೇಳ್ದು ವಿಪ್ರರೆಲ್ಲಂ ತಲೆಯಂ ತೂಗಿ—

ನುತಮಹಿಮ ನಿಮ್ಮ ಮಹಿಮೋ
ನ್ನತಿಯಂ ಶಿವನೋರ್ವನಲ್ಲದುಳಿದವನಾರ್ಬಲ್ಲರೆನು

ಬಗ್ಗಿಸಿ, (ಕುಂಡಲಿನೀ ಶಕ್ತಿಯನ್ನು ಜಾಗೃತಗೊಳಿಸಿ)—೫೩-೫೫. ಸೂರ್ಯಚಂದ್ರ ನಾಡಿಗಳ ಗತಿಯನ್ನು ತಡೆದು ನಿಲ್ಲಿಸಿ, ಗಾಳಿಯನ್ನು (ವಾಯುವನ್ನು) ಅವೆರಡರ ಮಧ್ಯಮಾರ್ಗದಲ್ಲಿ ಏರಿಸಿ ಅಕಾರ ಉಕಾರ ಮಕಾರದಿಂದ ಕೂಡಿದ ವೈಶಿಷ್ಟಪೂರ್ಣವಾದ ಓಂಕಾರವನ್ನು, ಬಿಂದು, ಪರಿಶುದ್ಧ ನಾದ ಮತ್ತು ಲಯಕ್ಕೆ ಅನುಗುಣವಾಗಿ ಉಚ್ಚಾರ ಮಾಡುತ್ತ ಭೂಸುರ ಸಮೂಹವೆಲ್ಲ ಅತ್ಯಂತ ಆಶ್ಚರ್ಯದಿಂದ ಹೊಗಳುತ್ತಿದ್ದ ಹಾಗೆ ಉದಾತ್ತ (ಧ್ವನಿಯನ್ನೇರಿಸಿ,) ಅನುದಾತ್ತ (ಧ್ವನಿಯನ್ನು ತಗ್ಗಿಸಿ) ಸ್ವರಿತ (ಸಮಧ್ವನಿಯಲ್ಲಿ) ಸಮೂಹದಿಂದ (ಅದು ಹೇಳುತ್ತಿರುವ ಧ್ವನಿಯು) ಕೂಡಿ, ಪದಪಾಳಿಕ್ರಮವನ್ನು ಅನುಕ್ರಮವಾಗಿ ತಿಳಿದು ಹೊಂದಿಸಿಕೊಂಡು ರಾಗಗೂಡಿಸಿ, ಸಂಭ್ರಮದಿಂದ (ಸ್ವಲ್ಪವೂ) ತಪ್ಪದ ಹಾಗೆ ನಾಲ್ಕುವೇದಗಳಲ್ಲಿ ಒಂದು ಕಡೆಯ ಅತ್ಯಂತ ಪ್ರಕಾಶಮಾನವಾದ ವಾಕ್ಯವನ್ನು ಉದ್ಧರಿಸಿ (ಎತ್ತಿಕೊಂಡು) (ಆ ನಾಯಿಯು, ಆಗ ಓದಿತು. ವ|| (ಹೀಗೆ ನಾಯಿಯು ವೇದವನ್ನು ಓದುತ್ತಿರುವ) ಅದನ್ನು ವಿಪ್ರರೆಲ್ಲರೂ ಕೇಳಿ ತಲೆಯನ್ನು ತೂಗುತ್ತ ೫೬. 'ಶ್ಲಾಘ್ಯವಾದ ಮಹಿಮಾಶಾಲಿಯೇ, ನಿಮ್ಮ ಅತ್ಯುನ್ನತ ಮಹಿಮೆಯನ್ನು ಶಿವನೊಬ್ಬನೇ ಬಲ್ಲನಲ್ಲದೆ ಉಳಿದವರಾರು

1 ರಾಗಿಸಿ ಯೋಗಿಸಿ (ದ)

ತ್ತತಿಶಯ ಭಯಚಕಿತರ್ವಿ
ಸ್ಮಿತಚಿತ್ತರ್ಕಲ್ಲಿನಾಥನಡಿಗೆಱಗಿರ್ದರ್ ೫೬

ವ॥ ಆಗಳ್ಮಂದಸ್ಮಿತಾಸ್ಯನಾಗಿ ವಾದಿವಾಗ್ಭಂಜನನಾ ಜಾಯಿಲನಂ ನೋಡಿ—

ಪೋ ಮಾಣ್ಬಾಲ್ಸುಗಂ ವೇದಪಿ
ತಾಮಹ ವೇದಂಗಳೋದೆನುತ್ತುಂ ನಿಲಿಸು
ತ್ತಾ ಮಹಿಮಾಕರನದನಾ
ಭೂಮೀಸುರರಾಸ್ಯಮಂ ನಿರೀಕ್ಷಿಸುತೆಂದಂ ೫೭

ಭೂಸುರರೆಲ್ಲರೀಕ್ಷಿಸಿದಿರೇ ಶಿವಭಕ್ತರ ಪೆರ್ಮೆಯಂ ಬಳಿ
ಕ್ಕೀ ಸೊಣಗಂ ಸುವರ್ಣಪುರದಗ್ಗದ ಸದ್ಗುರುಸಿದ್ಧರಾಮನಾ
ವಾಸದ ವೇದದೇಶಿಕನೆನಿಪ್ಪಭಿಧಾನಮನಾಳ್ದು ಘೇರವೋ
ದ್ಭಾಸಿತವಕ್ತ್ರನಪ್ಪ ಶುನಿಗಳ್ಕಱಿ ಶಿಷ್ಯನೆನಿಪ್ಪುದುರ್ವಿಯೊಳ್ ೫೮

ವ॥ ಎಂದು ಪೇಳ್ದು ಮತ್ತಮಿಂತೆಂದಂ—

ಧರಣೀದೇವರ್ಕಳೊಳ್ವಾದಿಸಿ ನಿಗಮಮನಾರ್ಪಿಂದೆ ಜಂಬೂರೊಳಂ ಕು
ರ್ಕುರನಿಂದಂ ಮಾಣದುಂದೋದಿಸನೆ ಸಭೆಯೊಳಾದಂ ಮಹಾಕಾಳಿದೇವಂ
ಹರಭಕ್ತಾವಾಸಮಂ ಸೇವಿಪ ಶುನಕನಿಕಾಯಕ್ಕೆ ಮೇಣಂತಱಿಂದಂ
ಸರಿಯಲ್ತೀ ವಿಪ್ರವೃಂದಂ ಶರಣಮಹಿಮೆಯಂ ಕೇಳ್ವುದಿನ್ನುಂ ನಿತಾಂತಂ ೫೯

ಬಲ್ಲರು !'ಎನ್ನುತ್ತ ಅತಿಶಯ ಭಯದಿಂದ ಚಕಿತರೂ, ಆಶ್ಚರ್ಯಚಿತ್ತರೂ ಆದ ಅವರೆಲ್ಲರೂ ಕಲ್ಲಿನಾಥನ ಪಾದಗಳಿಗೆ ನಮಸ್ಕಾರಮಾಡಿದರು. ವ॥ ಆಗ ವಾದಿ ಜನಗಳ ವಾದವನ್ನು ಭಂಗಗೊಳಿಸುವವನಾದ ಕಲ್ಲಿನಾಥನು ಮುಗುಳು ನಗೆಯಿಂದ ಕೂಡಿದ ಮುಖವುಳ್ಳವನಾಗಿ ಆ ನಾಯಿಯನ್ನು ನೋಡುತ್ತ—೫೭. ಹೋ ! ವೇದ ಪಿತಾಮಹನೇ, ವೇದಗಳ ಓದನ್ನು ಸಾಕು ನಿಲ್ಲಿಸು, ಎಂದು ನಿಲ್ಲಿಸಿ ಮಹಿಕುಮಾರನಾದ ಕಲ್ಲಿನಾಥನು ಆ ನಾಯಿಯ ಮುಖವನ್ನೂ ಬ್ರಾಹ್ಮಣರುಗಳ ಮುಖವನ್ನೂ ನೋಡುತ್ತ, ಹೀಗೆ ಹೇಳಿದನು. ೫೮. ಶಿವಭಕ್ತರಾದವರ ಘನತೆಯನ್ನು ಭೂದೇವತೆಗಳಾದ ನೀವೆಲ್ಲ ನೋಡಿದಿರಾ ! ಈನಾಯಿಯು (ಸೊನ್ನಲಾಪುರ) ದ ಶ್ರೇಷ್ಠ ಸದ್ಗುರುವಾದ ಸಿದ್ಧ ರಾಮೇಶ್ವರನ ಮನೆಯಲ್ಲಿ ವೇದಾಚಾರ್ಯನೆಂಬ ಹೆಸರನ್ನು ಹೊಂದಿರುವ 'ಉಘೇ' ಎಂಬ ಧ್ವನಿ ವಿಶೇಷದಿಂದ ಪ್ರಕಾಶಿಸುವ ಮುಖವುಳ್ಳ ನಾಯಿಗೆ ಅಕ್ಕರೆಯ ಶಿಷ್ಯನೆಂದು ಭೂಮಿಯಲ್ಲಿ ಪ್ರಸಿದ್ಧಿಯನ್ನು ಹೊಂದಿರುವುದು. ವ॥ ಎಂದು ಹೇಳುತ್ತ ಪುನಃ ಹೀಗೆಂದನು. ೫೯. ಜಂಬೂರೆಂಬ ಹೆಸರಿನ ಊರಲ್ಲಿದ್ದ ಮಹಾಕಾಳಿ ದೇವ (ಕಾಳಯ್ಯ) ನೆಂಬುವವನು ಬ್ರಾಹ್ಮಣರುಗಳೊಡನೆ ಪರಾಕ್ರಮದಿಂದ ವಾದಮಾಡಿ. ಈ ಪೂರ್ವದಲ್ಲಿ ಸಭೆಯೊಳಗೆ ನಾಯಿಯಿಂದ ವೇದವನ್ನು ಚೆನ್ನಾಗಿ ತಪ್ಪದೆ ಓದಿಸಲಿಲ್ಲವೇ ? ಹರ ಭಕ್ತರಾದವರ ಮನೆಯಲ್ಲಿ ಸೇವೆಮಾಡಿಕೊಂಡಿರುವ ನಾಯಿಗಳ ಸಮೂಹಕ್ಕೆ ಯಾವರೀತಿಯಿಂದಲೂ ಈ ವಿಪ್ರ ಸಮೂಹವು ಸರಿಸಮವಲ್ಲ ; ಹೆಚ್ಚಾ

ಶಿವಚಿತ್ತಯ್ಯನೆನಿಪ್ಪನಿರ್ವನಭವಶ್ರೀಪಾದಭಕ್ತಂ ಮಹೋ
ತ್ಸವದಿಂ ಧಾತ್ರಿಯೊಳಾತನೊರ್ವಂ ಸರಿಯಲ್ತೊರ್ವಂಗೆ ಕೋಟಿ ದ್ವಿಜ
ರ್ಶಿವಭಕ್ತಂಗೆನುತಣ್ಮಿ ಪಾರ್ವರೊಳೆ ವಾದಂಗೆಯ್ದು ವೇದಾಗಮಾ
ದಿ ವಿಶೇಷೋಕ್ತಿಗಳಿಂದೆ ತಾಂ ಜಯಿಸೆ ಸೋಲ್ತಿಂತೆಂದರಾ ಭೂಸುರರ್ ೬೦

ನುಡಿಜಾಣ್ಮೆಯಿಂದೆ ಜಯಮಂ
ಪಡೆವಳವಂತಿರ್ಕೆ ದೃಷ್ಟಮಂ ತೋರ್ಪಧಟಿ
ಳ್ದೊಡೆ ತೋಱಿ ಗೆಲ್ವುದೆನೆ ಕಡು
ಸಡಗರದಿಂ ಪೂಣ್ದು ತೋರ್ಪೆನೆಂದಾ ಕ್ಷಣದೊಳ್ ೬೧

ಪಿರಿಯ ಭಕ್ತರ ಪಾದರಕ್ಷೆಯನೇಕಪಾತ್ರೆಯೊಳಿಟ್ಟು ಪಾ
ರ್ವರನನೇಕರನೇಕಪಾತ್ರೆಯೊಳಿಟ್ಟು ತಾಂ ತೊಲೆದೂಗೆ ಸ
ರ್ವರುಮಣಂ ತಲೆದೂಗೆ ಚಿತ್ರಮಧಃಸ್ಥಿತಂ ಗುರುವಾದುದಾ
ಚರಣರಕ್ಷೆ ಸಮುನ್ನತಂ ಲಘುವಾಯ್ತು ಭೂಸುರಸಂಕುಳಂ ೬೨

ಅದಱಿಂದಭವನ ಭಕ್ತರ
ಪದರಕ್ಷೆಗೆ ಸರಿಯೆ ಪಾರ್ವರೆಂದವರಂ ತ
ಳ್ವದೆ ತಲೆವಾಗಿಸಿ ಮೆಱೆದಂ
ಪದಪಿಂದಂ ಕಲ್ಲಿದೇವನಮಳಿನಭಾವಂ ೬೩

ಗಿರುವ ಶರಣರ ಮಹಿಮೆಯನ್ನು ಇನ್ನೂ ಕೇಳು. ೬೦. ಪರಮೇಶ್ವರನ ಪಾದಭಕ್ತ ನೆನಿಸಿದ 'ಶಿವಚಿತ್ತಯ್ಯ' ನೆಂಬ ಹೆಸರಿನವನು ಇದ್ದನು. ಅವನು ಒಮ್ಮೆ ಮಹೋತ್ಸಾಹ ಭರಿತನಾಗಿ ಈ ಭೂಮಿಯಲ್ಲಿ ಓರ್ವ ಶಿವಭಕ್ತನಿಗೆ ಒಂದು ಕೋಟಿ ದ್ವಿಜರೂ ಸಮಾನವಲ್ಲವೆಂದು ಪರಾಕ್ರಮವಿಶಿಷ್ಟವಾಗಿ ದ್ವಿಜರಲ್ಲಿ ವಾದವಿವಾದ ಮಾಡಿದನು. ವೇದಾಗಮಗಳಲ್ಲಿ ಹೇಳಿರುವ ವಿಶೇಷ ವಾಕ್ಯಾಧಾರದ ಮೂಲಕ ವಾದದಲ್ಲಿ ಗೆದ್ದನು. ಸೋತ ಆ ದ್ವಿಜರು ಹೀಗೆ ಹೇಳಿದರು : ೬೧. 'ಮಾತಿನ ಜಾಣತನದಿಂದ ಜಯವನ್ನು ಪಡೆಯುವ ಸಾಮರ್ಥ್ಯವು ಅದು ಹಾಗಿರಲಿ ! ಏನಾದರೂ ಪ್ರತ್ಯಕ್ಷ ಪ್ರಮಾಣವನ್ನು ತೋರಿಸುವ ಸಾಮರ್ಥ್ಯವಿದ್ದರೆ ತೋರಿಸಿ ಗೆಲ್ಲಲಿ' ಎನ್ನಲಾಗಿ, 'ತೋರಿಸುತ್ತೇನೆ' ಎಂದು ಅತ್ಯಂತ ಸಡಗರದಿಂದ ಪ್ರತಿಜ್ಞೆಮಾಡಿ, ಆ ಕ್ಷಣವಲ್ಲಿ ಹಿರಿಯ ಶಿವಭಕ್ತರೆನಿಸಿದ ಓರ್ವರ ಪಾದರಕ್ಷೆಯನ್ನು ತಕ್ಕಡಿಯ ಒಂದು ಪರಡಿಯಲ್ಲಿಟ್ಟು. ಮತ್ತೊಂದು ಪರಡಿಯಲ್ಲಿ ಅನೇಕ ಜನ ದ್ವಿಜರುಗಳನ್ನು ಕುಳ್ಳಿರಿಸಿ. ತಾನೇ ತಕ್ಕಡಿಯ ತೊಲೆಯನ್ನು ಹಿಡಿದು ತೂಗಲು ಈ ವಿಚಿತ್ರಕ್ಕೆ ಸರ್ವರೂ ತಲೆದೂಗುತ್ತಿರುವಂತೆ, ಶಿವಭಕ್ತನ ಪಾದರಕ್ಷೆಯೇ ಭಾರವುಳ್ಳದ್ದಾಗಿ ಪರಡಿಯು ನೆಲದಲ್ಲಿ ಉಳಿಯಿತು : ಮತ್ತೊಂದು ಪರಡಿಯು ಮೇಲಕ್ಕೆದ್ದು ಭೂಸುರರ ಸಮೂಹವು ಹಗುರಾದುದಾಯಿತು. ೬೨. ಆದ್ದರಿಂದ ಪರಮೇಶ್ವರನ ಭಕ್ತರೆನಿಸಿದವರ ಪಾದರಕ್ಷೆಗೆ ಈ ದ್ವಿಜರು ಸಮಾನವಾದಾರೇ ? ಎಂದು ಅವರನ್ನು ತಡಮಾಡದೆ ತಲೆಬಾಗಿಸುವಂತೆ ಮಾಡಿ, ಆ ಪರಿಶುದ್ಧ ಭಾವದ ಕಲ್ಲಿನಾಥ

ವ॥ ಮತ್ತಂ—

[ಬಿಬ್ಬ ಬಾಚಯ್ಯನ ಕಥೆ]

ಪದಪಿಂ ಧಾರುಣಿಯಲ್ಲಿ ಕಂಗೊಳಿಪ ಗೊಬ್ಬೂರೆಂಬ ಸಾರಾಗ್ರಹಾ
ರದೊಳೊಪ್ಪಂಬಡೆದಿರ್ಪನದ್ಭುತಚರಿತ್ರಂ ವೀರಶೈವವ್ರತಾ
ಸ್ಪದನತ್ಯೂರ್ಜಿತ ಭಕ್ತಿಭಾಸುರನದೀರತ್ನಾಕರಂ ವಾದಿವಾ
ರಿದಝಂಝಾನಿಲನಪ್ರತರ್ಕ್ಯಮಹಿಮಂ ಶ್ರೀಬಿಬ್ಬಬಾಚಾಹ್ವಯಂ ೬೪

ನುತ ಜಂಗಮಪ್ರಸಾದಾ
ಮೃತಸಂವರ್ಧಿತ ನಿಜಾಸುಲಿಂಗಂ ಲಿಂಗೋ
ನ್ನತಭಾವನೆಯಿಂ ಜಂಗಮ
ತತಿಯಂ ಕಂಡೆಱಗಿ ಪೂಜೆಗೆಯ್ವನಜಸ್ರಂ ೬೫

ವ॥ ಅಂತು ಶುದ್ಧಸಿದ್ಧಪ್ರಸಿದ್ಧ ಪ್ರಸಾದತ್ರಯಮೆ ನಿಜಪ್ರಾಣವಾಗೆ ಕೆಯ್ಕೊಂಡು ಪರಮಾನಂದಂಬೆರಸು—

ಶರಣರ ಪಾದುಕಾಶಕಲದಿಂ ಸಮೆದಾಭರಣಂಗಳಂ ಕರೋ
ದರ ಭುಜ ಕಂಠ ಕರ್ಣಯುಗ ಮಸ್ತಕ ವಕ್ಷಮೆನಿಪ್ಪ ತಾಣದೊಳ್
ಧರಿಯಿಸಿ ಜಂಗಮಾಂಘ್ರಿಯ ರಜಂಗಳಿನಂಗದೊಳಂಗರಾಗಮಂ
ವಿರಚಿಸುತುಂ ಚರಾವಳಿಯ ಬೀಳುಡೆಯಂ ಪೊದೆದೊಲ್ದು ಗಾಡಿಯಿಂ ೬೬

ದೇವನು ಉತ್ಸಾಹ ಪೂರ್ಣನಾಗಿ ಶೋಭಿಸಿದನು. ವ॥ ಬಿಬ್ಬ ಬಾಚಯ್ಯನ ಕಥೆ ೬೪. ಪ್ರಸಿದ್ಧವಾಗಿ ಭೂಮಿಯಲ್ಲಿ ಶೋಭಿಸುತ್ತಿದ್ದ 'ಬೊಬ್ಬೂರು' ಎಂಬ ಸಾರವತ್ತಾದ ಅಗ್ರಹಾರದಲ್ಲಿ ಅದ್ಭುತವಾದ ಚರಿತ್ರೆಯುಳ್ಳವನೂ, ವೀರಶೈವ ವ್ರತಕ್ಕೆ ಆಸ್ಪದವಾದವನೂ, ಅತ್ಯಂತ ಊರ್ಜಿತಗೊಂಡು ಪ್ರಕಾಶಿಸುವ ಶಿವಭಕ್ತಿಯೆಂಬ ನದಿಗಳಿಗೆ ಸಮುದ್ರಪ್ರಾಯನಾದವನೂ, ವಾದ ಮಾಡುವ ಜನರುಗಳೆಂಬ ಮೋಡಗಳಿಗೆ ಪ್ರಚಂಡವಾಯುವಿನಂತಿರುವವನೂ (ಬಿರುಗಾಳಿಯಂತಿರುವವನೂ) ಊಹಿಸಲಸಾಧ್ಯವಾದ ಮಹಿಮಾ ವಿಶೇಷದಿಂದ ಕೂಡಿದವನೂ ಆದ 'ಬಿಬ್ಬಬಾಚಯ್ಯ'ನೆಂಬ ಹೆಸರಿನ ಶರಣನು ಮನೋಹರವಾಗಿ ಕಂಗೊಳಿಸಿದ್ದನು. ೬೫. ಅವನು ಸತತ ಶ್ಲಾಘ್ಯರಾದ ಜಂಗಮರುಗಳ ಪ್ರಸಾದವೆಂಬ ಅಮೃತದಿಂದ ಸಂವರ್ಧನೆಗೊಳಿಸಿಕೊಂಡ ಪ್ರಾಣ ಲಿಂಗಿಯೆನಿಸಿ, ಉನ್ನತವಾದ ಶಿವಲಿಂಗ ಭಾವವನ್ನ ಮನಸ್ಕನಾಗಿ ಜಂಗಮ ಸಮೂಹವನ್ನು ಕಂಡು ನಮಸ್ಕರಿಸಿ ಪೂಜಿಸುತ್ತ ಇದ್ದನು. ವ॥ ಈ ರೀತಿ (ಗುರುಲಿಂಗ ಜಂಗಮದ ಭುಕ್ತ ಶೇಷ ಪ್ರಸಾದವೆನಿಸಿದ) ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದತ್ರಯವೇ ತನ್ನ ಪ್ರಾಣವೆಂದು ಸ್ವೀಕಾರಮಾಡಿ ಪರಮಾನಂದ ಭರಿತನಾಗಿ (ಇದ್ದನು). ೬೬. ಶರಣ ಜನರ ಪಾದುಕೆಗಳ ತುಂಡಿನಿಂದ ಮಾಡಿದ ಆಭರಣಗಳನ್ನು ತನ್ನ ಕೈ, ಹೊಟ್ಟೆ, ಭುಜ, ಕುತ್ತಿಗೆ, ಎರಡೂ ಕಿವಿ, ತಲೆ, ಎದೆಗಳೆನಿಸುವ ಸ್ಥಾನಗಳಲ್ಲಿ ಧರಿಸಿದವನಾಗಿ, ಜಂಗಮರ ಪಾದಧೂಳಿಯೆಂಬ ಸುಗಂಧದ್ರವ್ಯವನ್ನು ದೇಹಕ್ಕೆ ತೊಡೆದುಕೊಂಡವನಾಗಿ, ಜಂಗಮ ಸಮೂಹವು ಉಟ್ಟು ಬಿಸಾಡಿದ

ಮಿಳಿರ್ವ ಪಟಂಗಳಿಂ ಮೆಱೆವ ನಂದಿಪತಾಕೆಯು ಕಟ್ಟಿ ಬಿಟ್ಟ ಪೂ
ಗಳ ಪೊಸ ಬಾಸಿಗಂಗಳ ವಿಚಿತ್ರವಿತಾನದ ಚಾರುಚಾಮರಾ
ವಳಿ ಮಣಿದರ್ಪಣಪ್ರಕರ ತೋರಣಮಾತಪವಾರಣಂಗಳು
ಜ್ವಳತೆಯನಾಳ್ದ ಪೊಂಗಳಸದಂದಮೊಡಂಬಡೆ ಲಿಂಗಮುದ್ರೆಯಂ ೬೭

ತಳೆದರ್ಕಚಂದ್ರಬಿಂಬಂ •
ಗಳನಣಕಿಪ ಕಾಂತಿವೆತ್ತ ನಾಲ್ಕುಂ ಚಕ್ರಂ
ಗಳ ಸೊಬಗು ಮಿಸುಗೆ ವೃಷಭೋ
ಜ್ವಳತೆಯನೊಳಕೆಯ್ದು ಮೆರೆವ ಪೊನ್ನಂದುಗೆಯಿಂ ೬೮

ವಿಳಸದ್ರುದ್ರಾಕ್ಷಮಾಲಾಭರಣದೆ ಕೊರಲೊಳ್ತಳ್ತ ಪೊಂಗಂಟೆಯಿಂ ಕಂ
ಗೊಳಿಪುದ್ಯತ್ಪುಷ್ಪಮಾಲ್ಯೌಘದೆ ಝಣ ಝಣರಾವಸ್ಫುರತ್ಕಿಂಕಿಣೀಮಂ
ಜುಳಮಾಲಾಜಾಲದಿಂ ಚಾಮರದಿನಮರ್ದ ಶೃಂಗಂಗಳಿಂ ಭಾಳಮಧ್ಯ
ಸ್ಥಳಬದ್ಧಸ್ವರ್ಣಪಟ್ಟಾಂಕನದಿನೆಸೆವ ಪೇರೆತ್ತುಗಳ್ಪೆರ್ಮೆಯಿಂದಂ ೬೯

ಪೆಗಲಿತ್ತು ಪೊತ್ತು ಜವದಿಂ
ಮಿಗೆ ಪರಿಯೆ ವಿರಾಜಿಸಿರ್ಪ ಗೋರಥಮಂ ಪೆಂ
ಪಗಲದೊಡನೇಱಿ ಸಂಭ್ರಮ
ದೊಗುಮಿಗೆಯಿನುಘೇಯುಘೇಯೆನುತ್ತಾದೋಲವಿಂ ೭೦

ಬಟ್ಟೆಗಳನ್ನು ಹೂದೆದು ಸಂಭ್ರಮಗೊಂಡವನಾಗಿ, (ಶೋಭಿಸುತ್ತಿದ್ದನು). ೬೭-೭೦. ಹಾರಾಡುತ್ತಿರುವ ಪಟಗಳಿಂದ ಶೋಭಿಸುವ ನಂದೀ ಧ್ವಜವನ್ನು ಕಟ್ಟಿ, ಹೂವುಗಳಿಂದ ಮಾಡಿದ ಹೊಸ ಬಾಸಿಂಗಗಳು (ಹೂ ದಂಡೆಗಳು), ವಿಚಿತ್ರವಾದ ಮೇಲುಕಟ್ಟುಗಳು, ಮನೋಹರವಾದ ಚಾಮರಗಳು, ರತ್ನದಿಂದ ಮಾಡಿದ ಕನ್ನಡಿಗಳು, ತೋರಣಗಳು, ಬೀಸಣಿಕೆಗಳು, ಹೊಳೆಯುತ್ತಿರುವ ಬಂಗಾರದ ಕಳಶದ ಚೆಲುವು, ಇವೆಲ್ಲ ಮನಸ್ಸಿಗೆ ಒಪ್ಪುತ್ತಿರಲು, ಲಿಂಗಮುದ್ರೆಯನ್ನು ಹಾಕಿ, ಸೂರ್ಯಚಂದ್ರಬಿಂಬಗಳನ್ನು ತಿರಸ್ಕರಿಸುವಂತಿರುವ ನಾಲ್ಕು ಗಾಲಿಗಳ ಸೌಂದರ್ಯವು ಶೋಭಿಸುತ್ತಿರಲು, ಉಜ್ವಲ ಶಕ್ತಿಯ ಎತ್ತು (ವೃಷಭ)ಗಳನ್ನು ಅವನ ಬಂಡಿಯು ಒಳಗೊಂಡಿತ್ತು. (ಆ ವೃಷಭಗಳು) ಧ್ವನಿ ಮಾಡುವ ಬಂಗಾರದ ಕಾಲು ಕಡಗಗಳಿಂದ, ಶೋಭಿಸುವ ರುದ್ರಾಕ್ಷ ಮಾಲೆಗಳ ಆಭರಣದಿಂದ, ಕಂಗೊಳಿಸುವ ಶ್ರೇಷ್ಠವಾದ ಹೂಮಾಲೆಗಳ ಸಮೂಹದಿಂದ, ಝಣಝಣ ಎಂಬ ಧ್ವನಿ ಮಾಡುವ ಸಣ್ಣ ಹುರುಗೆಜ್ಜೆಗಳ ಮಂಜುಳವಾದ ಮಾಲೆಗಳ ಸಮೂಹದಿಂದ, ಚಾಮರಗಳನ್ನು ಕಟ್ಟಿದ ಕೋಡುಗಳಿಂದ, ಹಣೆಯ ಮಧ್ಯಪ್ರದೇಶದಲ್ಲಿ ಕಟ್ಟಿದ ಬಂಗಾರದ ಪಟ್ಟದ ಗುರುತಿನಿಂದ ಶೋಭಿಸುವ ದೊಡ್ಡ ಎತ್ತುಗಳು ಹೆಮ್ಮೆಯಿಂದ ಕೂಡಿದ್ದವು. ಇವುಗಳು ಹೆಗಲುಗೊಟ್ಟು ವೇಗವಾಗಿ ಓಡುತ್ತಿರಲು ರಂಜಿಸುವ ಎತ್ತಿನ ರಥವನ್ನು ಹೆಮ್ಮೆಯಿಂದ ಕೂಡಿದವನಾಗಿ ಹತ್ತಿದನು. ಸಂಭ್ರಮದ ಆಧಿಕ್ಯದಿಂದ

ಅಱುಗಾವುದದಳವಿಯೊಳುಮೆ
ಯೆಱೆಯುನ ಭಕ್ತರ್ಕಳೆಸಗೆ ಗಣಪರ್ವಮನ
ಲ್ಲಱೊಳಲ್ಲಿಗೆ ತದ್ರಥಮಂ
ನೆಱೆ ಪರಿಯಿಸುತೆಯ್ದಿ ಕಂಡು ಭಕ್ತಾವಳಿಯಂ ೭೧

ದಂಡಪ್ರಣಾಮಮೆಸಗುತ
ಖಂಡಸುಖಂಬಡೆದು ತತ್ಪದಾಂಬುಜರಜದೊಳ್
ಬಂಡುಣಿಯವೊಲೋಲಾಡುತೆ
ಮಂಡೆಯೊಳಾಂತವರ ಚರಣವಿಮಳೋದಕಮಂ ೭೨

ಘನರುಚಿ ತನ್ಮುಖೋದಿತವಚಃಸುಧೆಯಿಂ ತಣಿವೇಱೆ ಮೀಱೆ ಮ
ತ್ತನಿತಱೊಳಲ್ಲಿ ಭಕ್ತಚರಸಂತತಿಯುಂಡುಳುಪಿರ್ದ ಸಿದ್ಧಪಾ
ವನತರ ಸುಪ್ರಸಾದಮನದಂ ಮೊಗೆದೆತ್ತಿ ಶಿವಾಯ ತೇ ನಮೋ
ಯೆಂನುತೆಱಗುತ್ತೆ ತೀವಿ ಶಕಟಾಂತರದೊಳ್ನೆಱೆ ತಂದು ಲೀಲೆಯಿಂ ೭೩

ಅನುಭವಿಸುತ್ತನುದಿನಮಿಂ
ತನುನಯದಿಂ ಬಿಬ್ಬಭಾಸ್ಕರಂ ಸುಖಮಿರೆ ಕಂ
ಡನಪದ್ಯನಿರವನಾ ಪುರ
ಜನಮೆಲ್ಲಂ ನೆಱೆ ಕನಲ್ದು ಗುಜುಗುಜಿಸುತ್ತುಂ ೭೪

ಉಘೇ ! ಉಘೇ ! ಎಂದು ಪ್ರೀತಿಯಿಂದ ಕೂಗುತ್ತ ಅರ್ಧಗಾವುದ ದೂರದಲ್ಲಿ ಶಿವಭಕ್ತರು ಗಣ ಪರ್ವವನ್ನು ಮಾಡುತ್ತಿರಲು, ಅಲ್ಲಿಗೆ ಬಂಡಿಯನ್ನು ಚೆನ್ನಾಗಿ ಓಡಿಸಿ ಕೊಂಡು ಹೋಗಿ, ಅಲ್ಲಿನ ಭಕ್ತರ ಸಮೂಹವನ್ನು ಕಂಡು, ದಂಡವತ್ ಪ್ರಣಾಮವನ್ನು ಮಾಡಿ, ಅಖಂಡ (ಪರಿಪೂರ್ಣ) ಸುಖವನ್ನು ಪಡೆದು, ಅವರುಗಳ ಪಾದಕಮಲಗಳ ಧೂಳಿಯಲ್ಲಿ ದುಂಬಿಯಹಾಗೆ ಓಲಾಡುತ್ತ, ಅವರ ಪರಿಶುದ್ಧಪಾದೋದಕವನ್ನು ತಲೆಯಲ್ಲಿ ಧರಿಸಿದವನಾದನು. ೭೩–೭೪. (ಅವನು) ವಿಶೇಷಪ್ರೀತಿಯಿಂದ ಆ ಶಿವಶರಣರುಗಳ ಮುಖದಿಂದ ಹೊರಬಂದ ಮಾತುಗಳೆಂಬ ಅಮೃತದಿಂದ ಮಿತಿಮೀರಿ ತೃಪ್ತಿಗೊಳ್ಳುತ್ತಿದ್ದನು. ಅಷ್ಟರಲ್ಲಿ ಆ ಸ್ಥಳದಲ್ಲಿ ಶಿವಭಕ್ತರಾದ ಜಂಗಮದ ಸಮೂಹವು ಊಟ ಮಾಡಿ ಉಳಿಸಿದ ಗುರುಭಕ್ತಶೇಷವಾದ, ಪರಿಶುದ್ಧ ವಾದ, ಶ್ರೇಷ್ಠ ಪ್ರಸಾದವಾದ ಅದನ್ನು ಮೊಗೆದುಕೊಂಡು ಎತ್ತಿ ಬಂಡಿಯ ಮೇಲೆ ಹೇರಿಕೊಂಡು ಶಿವನೇ ನಿನಗೆ ನಮಸ್ಕಾರಗಳು (ಶಿವಾಯ ತೇ ನಮಃ)ಎಂದು ನಮಸ್ಕಾರ ಮಾಡಿ, ಲೀಲೆಯಿಂದ ಮನೆಗೆ ತಂದು, ಅನುದಿನವೂ ಸೇವಿಸುತ್ತ ಪ್ರೀತಿಯಿಂದ ಬಿಬ್ಬ ಬಾಚಯ್ಯನು ಸುಖದಿಂದ ಇರುತ್ತಿದ್ದನು. ಆ ಊರಿನ ಜನವೆಲ್ಲ ನಿರ್ದುಷ್ಟನಾದ ಬಿಬ್ಬ ಬಾಚಯ್ಯನ ಈ ರೀತಿಯ ಜೀವನವನ್ನು ಕಂಡು (ಅರಿಯದೆ) ವಿಶೇಷವಾದ ಸಿಡುಕಿನಿಂದ ಕೂಡಿದವರಾಗಿ ಗುಜು ಗುಜು ಎಂದುಕೊಳ್ಳತೊಡಗಿದರು. (ನಿಂದಿಸ

ಪಲವಂದದೆ ನಿಂದಿಸುತಿರೆ
ಜಲರುಹರಿಪುವಮೌಲಿಭಕ್ತನಾ ಗೊಬ್ಬೂರೊ
ಳ್ನಲವೇಱಿ ಪಿರಿಯ ಭಕ್ತನ
ನಿಲಯದ ಪರ್ವಕ್ಕೆ ತಳರ್ದನತಿ ಸಂಭ್ರಮದಿಂ ೭೫

ಚರಲಿಂಗಶ್ರೇಣಿಯಂ ಕಂಡೆಱಗಿ ಚರಣದೊಳ್ಮೀಱಿದಾನಂದದಿಂ ಭ
ಕ್ತಿರಸಂ ಮೈದುಂಬಿ ತುಳ್ಕುತ್ತಿನಿಸೆ ಸುಖಜಳಂ ನೇತ್ರದೊಳ್ತತ್ಪ್ರಸಾದೋ
ತ್ಕರಮಂ ಕೆಯ್ಕೊಂಡು ತೀವುತ್ತೆಸೆವ ಶಕಟದೊಳ್ಮುಂದೆ ಮಾಹೇಶ್ವರರ್ಬಿ
ತ್ತರದಿಂದಂ ಪಾಡುತಾಡುತ್ತೆಸೆಯೆ ಹರಹರಧ್ವಾನಮಂ ಬೀಱುತಾಗಳ್ ೭೬

ಮಿಳಿರುತ್ತಿರೆ ಪಳಯಿಗೆಗಳ್
ತೊಳಗುತ್ತಿರೆ ಮೇಲೆ ಸತ್ತಿಗೆಗಳೆತ್ತಂ ಮಂ
ಗಳ ತೂರ್ಯತ್ರಯರವಮು
ಗ್ಗಳಿಸುತ್ತಿರೆ ಬಿಡದುಘೇವುಘೇಯೆನು[1]ತೊಲ[1]ವಿಂ ೭೭

ರಥವಂ ತನ್ನಯ ಸುಮನೋ
ರಥಮಂ ತರ್ಪಂತೆ ತಗುತಮಿರೆ ಪುರದೊಳ್ತ
ತ್ಪಥಮಂ ತಡೆದಿದಿರೊಳ್ತ
ತ್ಪೃಥುವಾಗ್ಬಳವಿಪ್ರರಣ್ಮನಿಂದಿಂತೆಂದರ್ ೭೮

ತೊಡಗಿದರು) ೭೫. ಹೀಗೆ ಹಲವಾರು ಬಗೆಯಲ್ಲಿ ನಿಂದಿಸುತ್ತಿರುವಾಗ (ಒಂದು ದಿನ) ಆ ಶಿವಭಕ್ತನಾದ ಬಾಚಯ್ಯನು ಆ ಬೊಬ್ಬೂರಿನಲ್ಲಿಯ ಹಿರಿಯ ಭಕ್ತನೋರ್ವನ ಮನೆಯಲ್ಲಿ ಆಚರಿಸುವ ಗಣಪರ್ವಕ್ಕೆ ಪ್ರೀತಿಯಿಂದ ಉಬ್ಬಿ ಅತ್ಯಂತ ಸಡಗರದಿಂದ ಹೊರಟನು. ೭೬. ಅಲ್ಲಿದ್ದ ಜಂಗಮ ಪಙ್ತಿಯನ್ನು ಕಂಡು ಅವರ ಪಾದಗಳಿಗೆ ನಮಸ್ಕಾರ ಮಾಡಿ, ಮಿತಿ ಮೀರಿದ ಆನಂದದಿಂದ ಭಕ್ತಿರಸವೇ ಮೈದುಂಬಿ ತುಳುಕಾಡು ತ್ತಿದೆಯೋ ಎನ್ನುವಂತೆ ಕಣ್ಣಲ್ಲಿ ಆನಂದ ಬಾಷ್ಪಗಳನ್ನು ತುಂಬಿಕೊಂಡು ಅವರುಗಳ ಶ್ರೇಷ್ಠ ಪ್ರಸಾದ ಸಮೂಹವನ್ನು ಸ್ವೀಕಾರ ಮಾಡಿ, ತನ್ನ ಬಂಡಿಯಲ್ಲಿ ತುಂಬಿದನು. (ಬಂಡಿಯ) ಮುಂಭಾಗದಲ್ಲಿ ಮಾಹೇಶ್ವರುಗಳ ಸಮೂಹವು ವಿಸ್ತಾರಗೊಂಡು ಹಾಕು ತ್ತಲೂ, ಆಡುತ್ತಲೂ, 'ಹರಹರ' ಎಂಬ ಧ್ವನಿಯನ್ನು ಬೀರುತ್ತಲೂ ಶೋಭಿಸುತ್ತಿತ್ತು. ೭೭–೭೮. ಧ್ವಜಪತಾಕೆಗಳು ಹಾರಾಡುತ್ತಿದ್ದವು; ಮೇಲ್ಭಾಗದಲ್ಲಿ ಕಟ್ಟಿದ್ದ ಛತ್ರಿಗಳು ಪ್ರಕಾಶಿಸುತ್ತಿದ್ದವು; ಎಲ್ಲ ಕಡೆಗೂ ಮಂಗಳ ತೂರ್ಯತ್ರಯ (ಗೀತ, ವಾದ್ಯ, ನೃತ್ಯ) ಶಬ್ದವು ಮೊರೆಯುತ್ತಿತ್ತು; ತಪ್ಪದೆ ಉಘೇ! ಉಘೇ! ಎನ್ನುತ್ತ ಉತ್ಸಾಹದಿಂದ ಬಂಡಿಯನ್ನು (ಆ ತನ್ನ ರಥವನ್ನು) ಶ್ರೇಷ್ಠ ಮನೋರಥವನ್ನೇ ತರುವಂತೆ ಬಾಚಯ್ಯನು ಹೊಡೆದುಕೊಂಡು ಬರುತ್ತಿರಲು, ಪಟ್ಟಣದಲ್ಲಿ ಅವನು ಬರುವ ಮಾರ್ಗ ವನ್ನು ನಿಲ್ಲಿಸಿ, ವಿಶೇಷವಾದ ಮಾತಿನ ಶಕ್ತಿಯುಳ್ಳ ವಿಪ್ರರು ಪರಾಕ್ರಮವನ್ನು

1 ತಾರ್ದೊ(ಜ)

ಪುಗದಿರ್ಪುಗದಿರ್ನಿಲ್ನಿಲ್
ನಗರಮನಿದನೇನಿದದ್ಭುತಂ ಪೇಳ್ಪೇಳ್ಕೆ
ಮ್ಮಗೆ ಸಡಗರಮಂ ನೆಗಳ್ದಪೆ
ಮಿಗೆ ನೀಂ ಕಡುಗೂರ್ತಧೂರ್ತಸಖಸಂಕುಳದೊಳ್ ೭೯

ಪಳಯಿಗೆಯೇನಿದು ಕೆಲವಲ
ದೊಳೆ ಕೈವಾರಿಪ ವಿಡಾಯಮೇನಿದು ಮೇಲು
ಜ್ವಳಿಪಾತಪತ್ರಮೇನಿದು
ಕಳಕಳವೇನಿದು ಪೊದಳ್ದ ತೂರ್ಯತ್ರಯದಾ ೮೦

ಮದುವೆಯ ಪೆಸರೊಸಗೆಯೊ ಪೆಂ
ಪೊದವಿದ ಹರಭಕ್ತನಳಿದನೋ ಬಲ್ಪಗೆಯಂ
ಸದೆದತಿಶಯ ಶೌರ್ಯವೊ ತ
ಳ್ವದೆ ಚೇರಮನಂತೆ ಶಿವನ ಪುರಿಗೆಯ್ದುವೆಯೋ ೮೧

ಅಲಸದೆ ಶೂದ್ರಾಂತ್ಯಜರೆಂ
ಜಲನುಂಡದಱೊಳ್ಮುಳುಗಿದನಿತೆಯ್ದದೆ ಗ
ಲ್ಗಲನೀ ಪಾರ್ವರ ಪೊಳಲಂ
ಪೊಲೆಗಲಸಲ್ತರ್ಪ ಶಕಟದೊಳ್ಸಡಗರದಿಂ ೮೨

ನೆಲನಾಳ್ವ ಭೂಪನೆರ್ದೆಯೊ
ಳ್ಮೊಲೆಗಂಡೆಯೊ ಬಳ್ಕದಳ್ಕದೋಸರಿಸದೆ ದು

ತೋರಿಸುತ್ತ ಹೀಗೆ ಹೇಳಿದರು : ೭೯–೮೧. (ಎಲೈ) ಈ ನಗರವನ್ನು ಹೊಗಬೇಡ ಹೊಗಬೇಡ ನಿಲ್ಲು ನಿಲ್ಲು ! ಈ ಅದ್ಭುತವೇನಿದು ? ಹೇಳು ಹೇಳು ! ಸುಮ್ಮ ಸುಮ್ಮನೆ (ನಿನ್ನನ್ನು) ವಿಶೇಷವಾಗಿ ಪ್ರೀತಿಸುವ ಈ ಮಹಾಧೂರ್ತರಾದ ಸ್ನೇಹಿತರ ಗುಂಪಿನಲ್ಲಿ ಸೇರಿ ಸಡಗರವನ್ನು ಪ್ರದರ್ಶಿಸುತ್ತಿದ್ದೀಯೆ. ಈ ಕಟ್ಟಿರುವ ಧ್ವಜ ಪಟ್ಟವೇನು ? ಅಕ್ಕ ಪಕ್ಕದಲ್ಲಿ ಕೈಯೆತ್ತಿ ಹೊಗಳುತ್ತಿರುವ ಗರ್ವದ ನಡೆಯಿದೇನು ? ಮೇಲ್ಭಾಗದಲ್ಲಿ ಉಜ್ವಲಗೊಂಡಿರುವ ಈ ಛತ್ರಿಗಳೇನು ? ಆ ಕಳ ಕಳ ಧ್ವನಿ ಮಾಡುವ ವಾದ್ಯ ಗೀತ ನೃತ್ಯಗಳಿವೇನು ? ಮದುವೆಯ ಹೆಸರಾಂತ ಸಂಭ್ರಮವೋ ? (ಅಥವಾ) ಹಿರಿತನದಿಂದ ಕೂಡಿದ ಹರಭಕ್ತನಾವನಾದರೂ ಸತ್ತನೋ ? ಮಹಾ ಶತ್ರುವನ್ನು ನಾಶಮಾಡಿ ಬಂದ ಅತಿಶಯವಾದ ಶೌರ್ಯದ ಪ್ರದರ್ಶನವೋ ? ತಡಮಾಡದೆ ಚೇರಮನ ಹಾಗೆ ಶಿವ ಲೋಕಕ್ಕೆ ಹೋಗುವೆಯೋ ? ೮೨. ಹೇಸದೆ ಶೂದ್ರರ, ಅಂತ್ಯಜರ ಎಂಜಲನ್ನುಂಡು ಅದರಲ್ಲಿಯೇ ಮುಳುಗಿ ಹೋದುದೇ ಸಾಲದೆ ಗಳ ಗಳನೆ ಈ ಬ್ರಾಹ್ಮಣರ ನಗರವನ್ನು (ಅಗ್ರಹಾರವನ್ನು) ಹೊಲೆಗಲಸಲು ಬಂಡಿಯಲ್ಲಿ ಸಡಗರದಿಂದ (ಆ ಎಂಜಲು ಗೂಳನ್ನು) ತರುತ್ತಿರುವೆಯಾ ? ೮೩. ಈ ನೆಲವನ್ನಾಳುವ ಅರಸನ ಎದೆಯಲ್ಲಿ ಮೊಲೆಯನ್ನೇನಾದರೂ ಕಂಡೆಯೋ ? (ರಾಜನನ್ನು ಸ್ತ್ರೀಯೆಂದೇನಾದರೂ ಭಾವಿಸಿ

ಷ್ಕುಲರೆಂಜಲನೀ ಸದ್ವಿಜ
ನಿಲಯಂಗಳ ಮುಂದೆ ತರ್ಪೆಯೆನ್ನದೊ ಬಿಂಕಂ ೮೩

ಮಾನಂಗೆಡದೆಮ್ಮಿಂದಂ
ನೀನತಿಶಯ ಬುದ್ಧಿಶಾಲಿಯಾದೊಡೆ ತೊಲಗೆಂ
ದಾ ನೆರೆದ ಪಾರ್ವರೆನೆ ಕೇ
ಳ್ದಾನುತ ಮಹಿಮಾಬ್ಧಿ ರೋಷಭೀಷಣನಾದಂ ೮೪

ಎಲೆ ಎಲೆ ಪಾಪಕರ್ಮರಿರ ದುರ್ಮದ ದುಷ್ಟರಿರಾ ದುರಂತದು
ರ್ಮಲ ಮಲಿನಾತ್ಮಧೂರ್ತರಿರ ಶಾಂಭವಭಕ್ತಿಯ ಬಟ್ಟೆದಪ್ಪಿ ಕೋ
ಟಲೆಗೊಳಗಾದ ಖೂಳರಿರ ಮೇಲಱಿದಾಡದೆ ಕೊರ್ಬಿನುರ್ಬಿನಿಂ
ದುಲಿದಪಿರೇಕೆ ಜಾವಳರ ಭಕ್ತರಿಳಾತಳಾಗ್ರದೊಳ್ ೮೫

ಕುಲಹೀನರೆಂಬಿರಗ್ಗ[1]ದ
ಮಲಹರಚರಣಾಬ್ಜಭಕ್ತರಂ ನೀಮೀಗ
ಳ್ಕುಲಹೀನೆಯಾದ ಗೋಪಿಯ
ಮಲಮಂ ಪಣೆಯಲ್ಲಿ ತಾಳ್ದಿರಚ್ಚರಿಯಲ್ತೇ ೮೬

ದೆಯೋ) ಬಳುಕದೆ, ಹೆದರದೆ, ಹೇಸದೆ ದುಷ್ಕುಲದಲ್ಲಿ ಹುಟ್ಟಿದವರ ಎಂಜಲನ್ನು ಈ ಶ್ರೇಷ್ಠ ದ್ವಿಜರುಗಳ ಮನೆಯ ಮುಂದೆ ತರುತ್ತಿರುವೆ. ಇದು ನಿನ್ನ ಗರ್ವವಲ್ಲವೇ ? ೮೪. ನೀನು ಅತ್ಯಂತ ಬುದ್ಧಿಶಾಲಿಯಾಗಿದ್ದರೆ, ನಮ್ಮಿಂದ ಮಾನವನ್ನು ಕಳೆದುಕೊಳ್ಳದೆ (ಆಚೆ) ತೊಲಗು ; ಎಂದು ಆ ಗುಂಪು ಗೂಡಿದ ದ್ವಿಜರು ಅನ್ನಲು, ಪ್ರಸಿದ್ಧನೂ ಮಹಿಮಾ ಸಮುದ್ರನೂ ಆದ ಬಾಚಯ್ಯನು ಕೇಳಿ, ಕೋಪದಿಂದ ಭಯಂಕರ ನಾದನು. ೮೫–೮೬. ಎಲೆ ಎಲೇ ಪಾಪಕರ್ಮರಿರಾ, ದುಷ್ಟ ಮದದಿಂದ ಕೂಡಿದ ದುಷ್ಟರಿರಾ, ಅಂತ್ಯವಿಲ್ಲದ ಕೆಟ್ಟ ಮಲದಿಂದ ಮಲಿನಗೊಂಡ ಹೃದಯವುಳ್ಳ ಧೂರ್ತರಿರಾ, ಈಶ್ವರ ಭಕ್ತಿಯ ಮಾರ್ಗದಪ್ಪಿ, ಸಂಕಟಕ್ಕೊಳಗಾದ ನೀಚರುಗಳಿರಾ, ಮುಂದಾಲೋಚನೆ ಮಾಡದೆ ಗರ್ವದ ಆಧಿಕ್ಯದಿಂದ ಏಕೆ ಮಾತನಾಡುತ್ತಿದ್ದೀರಿ ! ಈಶ್ವರನ ಭಕ್ತರು ಲೋಕದಲ್ಲಿ ಕೀಳುಮಟ್ಟದವರೇ ? ಪವಿತ್ರರಾದ ಮಲಹರವೆನಿಸಿದ ಶಿವನ ಚರಣ ಕಮಲ ಭಕ್ತರನ್ನು ಕುಲಹೀನರೆಂದೆನ್ನುತ್ತಿರುವಿರಾ ! ನೀವೇ ಈಗ ಕುಲ ಹೀನೆಯಾದ ಗೋಪಿಯ ಮಲವನ್ನು (ಗೋಪೀಚಂದನವೆಂಬ ಮಲವನ್ನು) ಹಣೆಯಲ್ಲಿ

1 ರ್ಗ(ಮು)

ಗುರುಕರಜಾತರೊಳೆಂದುಂ
ಪರಭಕ್ತರೊಳಿಲ್ಲಪೂರ್ವ ಕುಲ ಜಾತಿ ಭವ
ದ್ಗುರುವಾದ ಬಾದರಾಯಣ
ವರಮುನಿಯಕುಲೀನನೆಂದೊಡೇವೇಳ್ದಪಿರೋ ೮೭

ಅಪಿ ವಾಯಶ್ಚಂಡಾಲೋ
ಲ್ಲಪಿತಶ್ರುತಿ ಶಿವನ ಭಕ್ತರೊಳ್ಕುಲಮಿಲ್ಲೆಂ
ದುಪದೇಶಿಪುದಿದನಱಿದುಂ
ಚಪಳತೆಯಿಂ ಬಾಯ್ಗೆ ಬಂದವೋಲ್ನುಳಪುವುದೇ ೮೮

ಗುರುಚರಹರಪ್ರಸಾದಮ
ನಿರದೆಂಜಲೆನುತ್ತೆ ತೆಗಳ್ವ ನರನಾವನಂ
ನರಕಾಗ್ನಿಯೊಳಜಕಲ್ಪಂ
ಬರೆಗಂ ಬೇವಂ ದಲೆಂಬುದಾಗಮವಚನಂ ೮೯

ಧರಿಸುತ್ತಿದ್ದೀರಿ ಇದು ಆಶ್ಚರ್ಯವಲ್ಲವೇ ? ೮೭. ಸದ್ಗುರುವಿನ ಹಸ್ತದಿಂದ ಹುಟ್ಟಿದ (ಅಂದರೆ ಗುರುವು ತನ್ನ ಹಸ್ತವನ್ನು ಶಿಷ್ಯನಮಸ್ತಕದ ಮೇಲಿಟ್ಟು ಹಸ್ತ ಮಸ್ತಕ ಸಂಯೋಗಗೊಳಿಸಿ ಆತನ ಕರದಿಂದ ಹುಟ್ಟಿಧ) ಹರಭಕ್ತರಲ್ಲಿ ಪೂರ್ವದ ಕುಲ, ಜಾತಿಗಳು ಎಂದೂ ಇಲ್ಲ. ನಿಮ್ಮ ಗುರುವಾದ ಬಾದರಾಯಣನೆಂಬ ಶ್ರೇಷ್ಠ ಮುನಿ (ವ್ಯಾಸಮುನಿ) ಯನ್ನು ಅಕುಲೀನನೆಂದರೆ ಏನು ಹೇಳುತ್ತೀರಿ ?† ೮೮. 'ಅಪಿವಾಯು ಶ್ಚಾಂಡಾಲೋಲ್ಲಪಿತ' ಶ್ರುತಿಯು ಶಿವನ ಭಕ್ತರಲ್ಲಿ ಕುಲವಿಲ್ಲವೆಂದು ಉಪದೇಶಿಸು ವುದೆಂಬುದನ್ನು ತಿಳಿದೂ ಕೂಡ (ಮಾತಿನ) ಚಾಪಲ್ಯದಿಂದ ಬಾಯಿಗೆ ಬಂದ ಹಾಗೆ ಗಳಪುವುದೇ.* ೮೯. ಗುರು ಜಂಗಮಲಿಂಗ ಪ್ರಸಾದವನ್ನು ಎಂಜಲೆನ್ನುತ್ತ ತೆಗಳು ತ್ತಿರುವ ಮನುಷ್ಯನಾವನೋ ಅವನು ನರಕದ ಬೆಂಕಿಯಲ್ಲಿ ಬ್ರಹ್ಮನ ಕಲ್ಪಪರ್ಯಂತವಾಗಿ (ಬ್ರಹ್ಮನ ಆಯುಷ್ಯ ಪ್ರಮಾಣದ ಕಾಲದವರೆಗೆ) ಬೇಯುತ್ತಾನೆಯಲ್ಲವೇ ! ಹೀಗೆ

---

† ಗುರುಕರಜಾತರು :—ಗುರುವಾದವನು ತನ್ನಲ್ಲಿ ಶಿವಕಳೆಯನ್ನು ಮಸ್ತಕದ ಮೇಲೆ ಕೈ ಯಿಟ್ಟು ತನ್ನ ಅಂತಃಕರಣ ಗ್ರಂಥಿಯನ್ನು ಬಿಚ್ಚಿ ಶಿಷ್ಯನ ಅಂತಃಕರಣದ ಮೇಲೆ ಸುರಿದು ಅವನಲ್ಲಿ ನೂತನ ಪ್ರಕಾಶವನ್ನುಂಟುಮಾಡಿ ಪುನರ್ಜ್ಞಾತನನ್ನಾಗಿಮಾಡುವನು. ಅವನಲ್ಲಿರುವ ಆಣವ, ಮಾಯಾ, ಕಾರ್ಮಿಕ ಮಲತ್ರಯಗಳನ್ನು ನಾಶಮಾಡುವನು. ಇಂಥ ಪುನರ್ಜಾತನಾದ ಶಿಷ್ಯನೇ ಗುರುಕರಸಂಜಾತನು. ಇವನಿಗೆ ತನ್ನ ಪೂರ್ವಾಶ್ರಮದ ಜಾತಿ, ಕುಲ, ಮತ, ಧರ್ಮಗಳಾವುವೂ ಸಂಬಂಧವಿಲ್ಲ.

* ಸಾಮವೇದದಲ್ಲಿ ಹೇಳಿರುವ ಮಾತೇ 'ಅಪಿವಾಯುಶ್ಚ....' ಎಂಬ ಶ್ರುತಿ :—

'ಅಪಿವಾಯುಶ್ಚಂಡಾಲ ಶಿವೇತಿ ವಾಚಂ ವದೇತ್ತೇನ ಸಹ ಸಹಸಂವದೇತ್ತೇನ ಸಹಸಂವಸೇತ್ತೇನ ಸಹಸಂವಿಶೇತ್ತೇನ ಸಹಭುಂಜೀತ. (ಚಾಂಡಾಲನಾದರೂ ಶಿವಭಕ್ತನೊಡನೆ ಮಾತನಾಡಲು, ವಾಸಮಾಡಲು, ಕುಳಿತುಕೊಳ್ಳಲು, ಊಟಮಾಡಲು ಭೇದವೆಣಿಸಬಾರದು)

ಹರಭಕ್ತಿಯುಳ್ಳವರ್ಗಿದು
ಪರಮಾಮೃತಮಲ್ಲದರ್ಗೆ ಲಯವಹ್ನಿಯಿದಂ
ಕರಮಿಂತು ತೆಗಳ್ವ ಬಡಪಾ
ರ್ವರೆ ನಿಮ್ಮಂ ಕೊಲ್ವುದೆಮಗಿದೇಂ ಪೌರುಷಮೋ ೯೦

ತುಂಗಪ್ರಸಾದದೀಪಪ
ತಂಗತ್ವಮನಾಳದತ್ತ ತೊಲಗಿಮೆನುತ್ತುಂ
ಜಂಗಮಲಿಂಗಪದಾಂಬುಜ
ಭೃಂಗಂ ಘನ ಬಿಬ್ಬಭಾಸ್ಕರಂ ನುಡಿಯಲೊಡಂ ೯೧

ವ॥ ಕೇಳ್ದಾ ಪಾರ್ವರ್ಕಡು ಕನಲ್ದು ಮಹಾಮಸಕಂ ಮಸಗಿ—

ಬಿಡು ಬಿಡಿದೇನನೆಂಪಪೆ ವಿಡಾಯ-ದೆ ಭೀತಿಯನಿಂತು ಬೀಜಿ ನಿ
ನ್ನೊಡೆಯರೆನಿಪ್ಪ ಕೀಳ್ಗೊರವರೆಂಜಲದೇಂ ಫಣಿಯೋ ಮದೇಭಮೋ
ಸುಡುಗರಮೋ ಗಜಾರಿಯೊ ಮೃಗಾರಿಯೊ ಕಾಲನೊ ಕಾಲಕೂಟಮೋ
ಸಿಡಿಲೊ ಮೃಗೇಂದ್ರವೈರಿಯೊ ದವಾನಳನೋ ಲಯಕಾಲವಹ್ನಿಯೋ ೯೨

ವ॥ ಎಂದು ಗಳಪುತ್ತುಂ ತಮ್ಮಿದಿರ್ವರಿವ ನಿರ್ಭಯಭಕ್ತರಾಟೋಪಮಂ ಕಂಡು ಕನಲ್ದು ಕೈಗರಗಂಗಳುಮಂ ದರ್ಭೆವೆರಸೊಂದೆಡೆಯೊಳಿಳುಪಿ ಜನ್ನಿವರದುನೇಱಕಟ್ಟಿದೋವತಿಯಂ ಮಲ್ಲಗಾಸೆಯನುಟ್ಟು ಯಟ್ಟಿಗಳಂ ಕೆಯ್ಕೊಂಡು ಕದನಕ್ಕೆ ಕಡಂಗಿನಿಂದು—

ಆಗಮವು ಹೇಳುತ್ತದೆ. ೯೦. ಹರಭಕ್ತರಾದವರಿಗೆ ಇಂಥ ಪ್ರಸಾದತ್ರಯವು ಪರಮ ಅಮೃತ ಪ್ರಾಯವಾದದ್ದು ; ಹರಭಕ್ತಿಯಿಲ್ಲದವರಿಗೆ ಪ್ರಳಯಕಾಲದ ಅಗ್ನಿಯಿದ್ದ ಹಾಗೆ. ಇಂಥ ಪ್ರಸಾದವನ್ನು ಈ ರೀತಿ ತಿರಸ್ಕರಿಸುವ ಬಡ ಹಾರುವರೇ, ನಿಮ್ಮನ್ನು ಕೊಲ್ಲುವುದು ನಮಗೆ ಇದೇನು ಪೌರುಷವೇ. (ನಿಮ್ಮನ್ನು ಆ ಬೆಂಕಿಯೇ ಕೊಲ್ಲುವುದು ನಾವು ಪೌರುಷ ತೋರಿಸಲೇ ಬೇಕಾಗಿಲ್ಲವೆಂದು ಭಾವ) ೯೧. ಉನ್ನತವಾದ ಶೇಷ ಪ್ರಸಾದವೆಂಬ ದೀಪಕ್ಕೆ ಪತಂಗದಂತೆ ಆಗದೆ ಅತ್ತ ತೊಲಗಿರಿ' ಎನ್ನುತ್ತ ಆ ಜಂಗಮ ಲಿಂಗದ ಪಾದಕಮಲಗಳಲ್ಲಿ ಭೃಂಗದೋಪಾದಿಯಲ್ಲಿರುವ ಶ್ರೇಷ್ಠ ಬಿಬ್ಬಬಾಚಯ್ಯನು ನುಡಿಯಲಾಗಿ ವ॥ ಆ ಬ್ರಾಹ್ಮಣರು ಕೇಳಿ, ವಿಶೇಷವಾಗಿ ಉರಿದೆದ್ದು ಕೋಪಾಧಿಕ್ಯ ವನ್ನು ಹೊಂದಿ ೯೨. ತೋರಿಕೆಯ ಈ ರೀತಿಯ ಭೀತಿಯನ್ನು ಬೀರುವೆಯ ಬಿಡು ಬಿಡು! ಇದೇನೆನ್ನುವೆ! ನಿನ್ನ ಒಡೆಯರೆನಿಸುವ ಕೀಳು ಜಂಗಮರ (ಸಂನ್ಯಾಸಿಗಳ ಎಂಜಲು ಅದೇನು ಹಾವೋ; ಮದ ವಿಶಿಷ್ಟವಾದ ಆನೆಯೋ, ಸುಡುವ ವಿಷವೋ, ಸಿಂಹವೋ, ಯಮನೋ, ಕಾಲಕೂಟ ವಿಷವೋ, ಸಿಡಿಲೋ, ಶರಭ ಪಕ್ಷಿಯೋ, ಕಾಡ್ಗಿಚ್ಚೋ, ಪ್ರಳಯಕಾಲದ ಅಗ್ನಿಯೋ ? ವ॥ ಎಂದು ವ್ಯರ್ಥವಾಗಿ ಮಾತನಾಡಿ. ತಮ್ಮ ಎದುರಿಗೇ ಹೋಗುತ್ತಿರುವ ನಿರ್ಭಯರಾದ ಭಕ್ತ ಜನರ ದರ್ಪವನ್ನು ಕಂಡು ಸಿಡಿಮಿಡಿ ಗೊಂಡು, ಕೈಯಲ್ಲಿರುವ ಚಿಕ್ಕ ಬಿಂದಿಗೆಯನ್ನು ದರ್ಭೆ ಸಹಿತ ಒಂದು ಕಡೆಯಿಟ್ಟು, ಜನಿವಾರವನ್ನು ಏರಿಸಿ ಕಟ್ಟಿ, ಉಟ್ಟ ಪಂಜೆಯನ್ನು ವೀರಗಾಸೆ ಕಟ್ಟಿ ದೊಣ್ಣೆಗಳನ್ನು

ಪಿಡಿಪಿಡಿಯೆಳ್ತನಚ್ಯುತ ಗದಾಧರ ಜೊತ್ತಗೆಗಳ್ತು ಪೋರಿಯಂ
ಬಿಡು ಬಿಡು ದುಷ್ಟ ಕೇಶವ ಕೊರಲ್ನೊಗಮಂ ಕಡಿ ಯಟ್ಟಿಗೊಂಡು ನೀಂ
ಬಡಿ ಬಡಿ ಬಂಡಿಯಂ ಕರಿಯ ರಾಘವ ಮಾಧವ ಮುಂದೆ ಬರ್ಪರಂ
ತಡೆ ತಡೆ ಕೂಚಿಗಾ ಮಿಳಿರ್ವ ಕೇತನಮಂ ಪಱಿದಿಕ್ಕು ಬೇಗದಿಂ ೯೩

ಎಲೆ ದಾಮೋದರ ಪೊಡೆ ಪೊಡೆ
ಕಲಶಮನೆಲೆ ಜನ್ನ ಜಂತ್ರಮಂ ಪಱಿ ಪಱಿ ವಿ
ಠ್ಠಲಕಟ್ಟಿದ ತೋರಣಮಂ
ತೊಲಗದೆ ಕಿಳ್ತಿಡು ಮುರಾರಿ ಮುಱಿ ಸತ್ತಿಗೆಯಂ ೯೪

ವ॥ ಎಂದು ಗರ್ಜಿಸಿ ಮೇಲ್ವರಿವ ದುಷ್ಟದ್ವಿಜರಂ ಕಂಡು ಬಿಬ್ಬ ಭಾಸ್ಕರಂ ನಕ್ಕು ನಿಜಕರಂಗಳಿಂ ಸಿದ್ಧಪ್ರಸಾದಮಂ ಮೊಗೆದೆತ್ತುತ್ತುಮೀ ಪೊಳಲಂ ದಹಿಪುದೆಂದು ಘಳಿಲನೆ ಕೆದಱಲೊಡನೆ—

ಘುಳಿಘುಳಿಸುತ್ತೆ ಚಂಡರುಚಿರೋಚಿಯನಾಳ್ದು ಪೊದಳ್ದು ಪೊಣ್ಮಿ ಬಾಂ
ದಳಕೊಗೆದುರ್ಬಿ ಪರ್ಬಿ ಕಿಡಿ ಸೂಸೆ ಚಿಳಿಚ್ಛಿಟಿಲೆಂದು ಮೀಱಿ ಪ
ಜ್ವಳಿಪುರಿಮಾಲೆ ದಳ್ಳಿಸೆ ಪುರತ್ರಯಮಂ ಮಿಗೆ ಮುತ್ತಿದುಗ್ರನು
ಜ್ವಳ ನಯನಾಗ್ನಿಯಂತೆಸೆದು ಮುತ್ತಿದುದಾ ಪೊಳಲಂ ಕ್ಷಣಾರ್ಧದೊಳ್ ೯೫

ಕೈಯಲ್ಲಿ ಹಿಡಿದು ಯುದ್ಧಕ್ಕೆ ಕೋಪದಿಂದ ನಿಂತುಕೊಂಡು ೯೩. ಅಚ್ಯುತ, ಎತ್ತುಗಳನ್ನು ಹಿಡಿಹಿಡಿ ! ಗದಾಧರನೇ, ಕೊರಳ ಪಟ್ಟಿಕೆಗಳನ್ನ ಕಿತ್ತು ಹೋರಿಗಳನ್ನು (ಬಂಡಿಯಿಂದ) ಬಿಡುಬಿಡು ! ಎಲೈ ದುಷ್ಟ ಕೇಶವನೇ, ಕೊರಳ ಮೇಲಿರುವ ನೊಗವನ್ನು ಕಡಿದು ಹಾಕು ! ಆ ಕಟ್ಟಿಗೆ ಹಿಡಿದು ನೀನು ಬಂಡಿಯನ್ನು ಬಡಿಬಡಿ ! ಹೇ ಕರಿಯ ರಾಘವನೇ, ಮಾಧವಾ, ಮುಂದೆ ಬರುವವರನ್ನು ತಡೆತಡೆ ! ಕೊಚಿಗನೇ ಹಾರಾಡುವ ಧ್ವಜವನ್ನು ಬೇಗ ಹರಿದು ಹಾಕು. ೯೪. ಎಲೈ ದಾಮೋದರನೇ, ಕಲಶವನ್ನು ಹೊಡೆ ಹೊಡೆ ! ಮೂಕಿಗೆ ಕಟ್ಟಿದ ಹಗ್ಗವನ್ನು ಹರಿ ಹರಿದು ಹಾಕು ; ವಿಠ್ಠಲಾ ಕಟ್ಟಿರುವ ತೋರಣವನ್ನು ಅತ್ತ ಹೋಗದೆ ಕಿತ್ತು ಬಿಸಾಡು. ಮುರಾರೀ, ಛತ್ರಿಗಳನ್ನು ಮುರಿದು ಹಾಕು. ವ॥ ಹೀಗೆಂದು ಗದರಿಸಿ ಗರ್ಜನೆ ಮಾಡಿ, ಮೇಲೆ ಬೀಳುತ್ತಿರುವ ದುಷ್ಟ ದ್ವಿಜರುಗಳನ್ನು ಕಂಡ ಬಿಬ್ಬಬಾಚರಸನು ನಕ್ಕು, ತನ್ನ ಕೈಗಳಿಂದ ಗುರುಪ್ರಸಾದವನ್ನು ಬಾಚಿ ಎತ್ತಿ ಹಿಡಿದು ಈ ಪಟ್ಟಣವನ್ನು (ಈ ಪ್ರಸಾದವು) ಸುಡುವುದು ಎಂದು ಒಮ್ಮಿಂದೊಮ್ಮೆಲೆ ಹರಡಲಾಗಿ ೯೫. ಕ್ಷಣಾರ್ಧದಲ್ಲಿಯೇ ಘುಳು ಘುಳು ಧ್ವನಿ ಮಾಡುತ್ತ ಸೂರ್ಯನಂತೆ ತೇಜಸ್ಸನ್ನು ಪಡೆದು ಸುತ್ತಲೂ ಹಬ್ಬಿ, ಆಕಾಶಕ್ಕೆ ನೆಗೆದು, ಉತ್ಸಾಹಗೊಂಡು ಹಬ್ಬಿ, ಕಿಡಿಗಳನ್ನು ಸೂಸುತ್ತ, ಚಿಳ್ ಛಿಟಿಲ್ ಎಂದು ಮಿತಿಮೀರಿ ಪ್ರಜ್ವಲಿಸುವ ಉರಿಗಳ ಸಾಲು ಹಿಂದೆ ತ್ರಿಪುರಗಳನ್ನು ವಿಶೇಷವಾಗಿ ಮುತ್ತಿದ ಪರಮೇಶ್ವರನ ಭಯಂಕರ ಹಣೆಗಣ್ಣಿನ ಬೆಂಕಿಯಂತೆ ಪ್ರಕಾಶಿಸುತ್ತ ಆ ಪಟ್ಟಣವನ್ನು ಮುತ್ತಿತು.

ವ॥ ಅಂತು ಮುತ್ತಿ ಮುಂಬರಿದು ಕಾಲಾಗ್ನಿಯಂತೆ ಕವಿತರ್ಪ ತದಗ್ನಿಯಂ ಕಂಡು –

ಎಲೆ ಎಲೆ ಕಿರ್ಚು ಪರಿಯಿಟ್ಟುದು ಸುಟ್ಟುದು ಕೆಟ್ಟೆವಕ್ಕಟಾ
ನಿಲಯಮನುರ್ಬಿ ಪರ್ಬಿದುದಕಾಲಲಯಂ ಮಸಗಿತ್ತು ಮೃತ್ಯು ಬಂ
ದಲೆದುದು ಪೋಗು ಪೋಗು ಪರಿದೋಡಿರದೆದೋಡು ಜಲಾಶಯಂಗಳ
ತ್ತಲೆ ತೆಗೆ ಮಕ್ಕಳಂ ಜವದಿನೆಂಬ ರವಂ ಪಿರಿದಾಯ್ತು ಪಾರ್ವರೊಳ್ ೯೬

ಪ್ರಮಥರ್ಜಗವಮಂ ಕಲ್ಪಾಂ
ತ ಮಹಾಶಿಖಿಯುಳುರೆ ನೋಡಿ ನಲಿವವೊಲಾ ಜಂ
ಗಮಸುಪ್ರಸಾದಶಿಖಿ ದು
ರ್ದಮರೂರಂ ಮುತ್ತೆ ಭಕ್ತರುತ್ಸವಮಾಂತರ್ ೯೭

ವ॥ ಆಗಳ್—

ಶ್ರುತಿಯೆ ಪುರಾಣೌಘಮೆ ಭಾ
ರತಿಯೆ ಶತಮುಖನೆ ಮಖಸಂ
ತತಿಯೇ ಮಾಣಿಪುದು ಸುಡುವ ಶಿಖಿಯುಪಟಳಮಂ ೯೮

ವ॥ ಎಂದು ಪುಯ್ಯಲ್ಚಿ ಮೊಱೆಯಿಟ್ಟು ಮಱುಗುತ್ತುಂ ಪರಿವ ಪುರೋಹಿತರುಂ ನಿಚ್ಚ
ಮುಂ ನಿನ್ನನಾಶ್ರಯಿಸಿದೆಮ್ಮಂ ದಹಿಸುತ್ತುಮಾಶ್ರಯಾಶನಾಮಮಂ ಸಾರ್ಥಕಂ ಮಾಡದಿರೆಂದನಳಂಗೆ

ವ॥ ಆ ರೀತಿ (ಬಿಬ್ಬ ಬಾಚಯ್ಯನ ಸಂಬಂಧದ ಉರಿ) ಮುತ್ತಿ ಮುಂದಕ್ಕೆ ಹರಿದು, ಪ್ರಳಯಕಾಲದ ಅಗ್ನಿಯಂತೆ ಕವಿಯುತ್ತಿರುವ ಆ ಬೆಂಕಿಯನ್ನು ಕಂಡು, ೯೬. ಎಲೆ ಎಲೈ ಕಿಚ್ಚು ಕಿಚ್ಚು ! ಹರಿದು ಬಂತು : ಉತ್ಸಾಹದಿಂದ ಮನೆಗಳನ್ನು ಸುಟ್ಟಿತು. ಅಯ್ಯೋ ಕೆಟ್ಟೆವು ! ಉರಿ ಹರಡಿಕೊಂಡಿತು ! ಅಕಾಲದ ಪ್ರಳಯವು ಮುತ್ತಿತು ! ಮೃತ್ಯುವೇ ಬಂದಿತು ! ಹೋಗು ಹೋಗು ! ವೇಗವಾಗಿ ಓಡು ! ನಿಲ್ಲದೆ ಜಲಾಶಯಗಳತ್ತ ಓಡು ! ಶೀಘ್ರವಾಗಿ ಮಕ್ಕಳುಗಳನ್ನು ತೆಗೆ! ಎಂಬ ಧ್ವನಿಯು ಆ ದ್ವಿಜರಲ್ಲಿ ಅಧಿಕಗೊಂಡಿತು. ೯೭. ಶಿವಲೋಕದ ಪ್ರಮಥರುಗಳು ಪ್ರಳಯ ಕಾಲದ ಬೆಂಕಿಯು ಹೊತ್ತಿ ಜಗತ್ತು ಉರಿಯುತ್ತಿರುವುದನ್ನು ಕಂಡು ನಲಿದಾಡುವ ಹಾಗೆ ಜಂಗಮರ ಸುಪ್ರಸಾದ ಕಾರಣದಿಂದುದ್ಭವಿಸಿದ ಅಗ್ನಿಯು ದುಷ್ಟ ಮದದಿಂದ ಕೂಡಿದ ದ್ವಿಜರ ಊರನ್ನು ಮುತ್ತಲಾಗಿ ಭಕ್ತರು ಸಂತೋಷಗೊಂಡರು. ವ॥ ಆಗ ೯೮. ಶ್ರುತಿಗಳೇ, ಪುರಾಣಗಳ ಸಮೂಹವೇ, ಭಾರತವೇ (ಮಹಾಭಾರತವೇ), ಸೂರ್ಯನೇ, ಬ್ರಹ್ಮನೇ, ವಿಷ್ಣುವೇ, ಸರಸ್ವತಿಯೇ, ದೇವೇಂದ್ರನೇ, ಯಜ್ಞಗಳ ಸಮೂಹವೇ, ಸುಡುತ್ತಿರುವ ಈ ಬೆಂಕಿಯ ಉಪಟಳವನ್ನು ನಿವಾರಿಸಿರಿ ! ವ॥ ಹೀಗೆ ನ್ನುತ್ತ ಕೂಗಿಕೊಂಡು, ಚೀರಾಡಿ. ಸಂಕಟಪಡುತ್ತ ಓಡುತ್ತಿರುವ ಪುರೋಹಿತರುಗಳೂ, ನಿತ್ಯವೂ ನಿನ್ನನ್ನು ಆಶ್ರಯಿಸಿಕೊಂಡಿರುವ ನಮ್ಮನ್ನು ಸುಡುತ್ತ ಆಧಾರವಸ್ತುವನ್ನೇ

ಬಾಯ್ವಿಟ್ಟು ಬೀಱುತೋಡುವ ಸೋಮಯಾಜಿಗಳುಂ ಪೊತ್ತಗೆಯ ನಿಱುಂಕಿ ಮಕ್ಕಳಂ ಪೆಗಲೊಳ್ಪೊತ್ತು ಪೆಂಡಿರ್ಗೂಡಿ ನಡುಗುತ್ತುಂ ಪಾಱುವ ಪಂಡಿತರುಂ ಬೊಮ್ಮಮೆಮ್ಮನಗ್ನಿರೂಪಿಂ ಕೊಲಲೆೞ್ತಂದುದೇಗೆಯ್ವೆವೆಂದಟ್ಟಿಸುಡುವಗ್ಗಿಗಗಿದು ಮಡುವೊಳಾಳ್ವ ವೇದಾಂತಿಗಳುಂ ಕಟ್ಟಿದಿರೊಳ್ನಿಂದಕ್ಷತೆಯುನಭಿಮಂತ್ರಿಸುತಿಟ್ಟು ವಾರುಣ ಜಪಂಗೆಯ್ವಾಗಳುಟ್ಟುದುಮಂ ಸುಟ್ಟು ಶಿಖಾಶ್ಮಶ್ರುಗಳನಗ್ನಿಯುರುಪೆ ನಗ್ನಾಂಗರಾಗಿ ಜೈನದೀಕ್ಷೆವೆತ್ತರಂತೆ ಬಿಗುರ್ತು ದೆಸೆದೆಸೆಗೆ ಪಾಯ್ವ ಮಂತ್ರವಾದಿಗಳುಂ ಪಾಲ್ದುಪ್ಪಮುಂ ಪಾತ್ರೆಯೊಳ್ತೀವಿ ತಮ್ಮಂಗದಾಹುತಿಗಾಪೋಶನಮನೆಱೆವಂತೆಱೆದು ಸಂದಿಸಲ್ಕೆಱೆಯದುರಿಯ ಕೋಳ್ಗೆ ಸೈರಿಸಲಾಱದೆ ಸೈವರಿವ ಶಾಸ್ತ್ರವೇದಿಗಳುಂ ಗರಿಗರಿಲನಾಲಯಂ ಮುರಿಯೆ ನೆರಪಿದ ಭಕ್ಷ್ಯಭೋಜ್ಯಮೆಲ್ಲಮುಸಕಳಿದುದೆಂದೊಡಲುರಿಗೊಂಡು ಬಿಕ್ಕಿಬಿರಿದಳುತುಂ ತಳರ್ವ ತರುಣ[1]ದ್ವಿಜರುಮಲ್ಲದ ಪೊೞ್ತಿನೊಳ್ಪವರಕ್ಕೆ ಪೊಱಮಟ್ಟ ಫಲಂ ಸಿದ್ಧಿಸಿದುದೆಂದು ಶಿಖಿಯ ಸೆಕೆಯಿಂ ಕಂದಿ ಕುಂದಿ ಮೊಱೆಯಿಡುತುಂ ಗಳಿಗೆವಟ್ಟಲೊಡೆಯೆ ಗಳಿಲನೆ ಕೆಡೆವ ಜೋಯಿಸರುಂ ಶಿರೋವೇ

ತಿನ್ನುವಂತಹುದೆಂಬ ನಿನ್ನ ಹೆಸರನ್ನು ಸಾರ್ಥಕಗೊಳಿಸಿ ಕೊಳ್ಳದಿರು,' ಎಂದು ಅಗ್ನಿಗೆ ಬಾಯಿಬಿಟ್ಟು ಹೇಳುತ್ತ ಓಡುವ ಸೋಮಯಾಜಿಗಳೂ, ಪುಸ್ತಕಗಳನ್ನು ಬಗಲಲ್ಲಿ ತಬ್ಬಿಕೊಂಡು ಹೆಗಲ ಮೇಲೆ ಮಕ್ಕಳನ್ನು ಹೊತ್ತುಕೊಂಡು ಹೆಂಡಿರೊಡನೆ ನಡುಗುತ್ತ ಹಾರುತ್ತಿರುವ ಪಂಡಿತರುಗಳೂ, 'ಪರಬ್ರಹ್ಮನೇ ನಮ್ಮನ್ನು ಅಗ್ನಿಯ ರೂಪದಿಂದ ಕೊಲ್ಲಲು ಹೊರಟುಬಂದಿದ್ದಾನೆ, ಏನು ಮಾಡೋಣ'ವೆಂದು ಬೆನ್ನಟ್ಟಿಸುತ್ತಿರುವ ಬೆಂಕಿಗೆ ಹೆದರಿ, ಮಡುಗಳಲ್ಲಿ ಬೀಳುತ್ತಿರುವ ವೇದಾಂತಿಗಳೂ' (ಬೆಂಕಿಯ) ನೇರ ಎದುರಿನಲ್ಲಿಯೇ ನಿಂತು, ಅಕ್ಷತೆಗಳನ್ನು ಅಭಿಮಂತ್ರಿಸಿ ತೂರುತ್ತ ಅಗ್ನಿಯ ಪ್ರಾಬಲ್ಯವನ್ನು ತಗ್ಗಿಸುವುದಕ್ಕೆ ಸಂಬಂಧಿಸಿದ ಜಪವನ್ನು ಮಾಡುವಾಗ ಉಟ್ಟ ಬಟ್ಟೆಯೆಲ್ಲ ಸುಟ್ಟುಹೋಗಿ, ಜಂಡಿಕೆ, ಮೀಸೆಗಳನ್ನು ಅಗ್ನಿಯು ಸುಡಲಾಗಿ, ಬತ್ತಲೆಯಾಗಿ ಜೈನದೀಕ್ಷೆಯನ್ನು ಪಡೆದವರಂತೆ (ದಿಗಂಬರ ದೀಕ್ಷೆಯನ್ನು ಪಡೆದವರಂತೆ) ಭಯಪಟ್ಟು ದಿಕ್ಕುದಿಕ್ಕಿಗೆ ಹರಿದು ಓಡುವ ಮಂತ್ರವಾದಿಗಳೂ, ಹಾಲು ಮತ್ತು ತುಪ್ಪಗಳನ್ನು ಪಾತ್ರೆಗಳಲ್ಲಿ ತುಂಬಿಕೊಂಡು, ತಮ್ಮ ದೇಹದ ಆಹುತಿಗೆ ಆಪೋಶನವನ್ನು ಎರೆಯುವ ಹಾಗೆ (ಊಟಕ್ಕೋಸ್ಕರ ಆಹಾರವನ್ನು ಇಟ್ಟು ಕಡೆಗೆ ನೀರನ್ನು ಕೊಡುತ್ತಿರುವ ಹಾಗೆ) ಸಂಧಿಸುವುದಕ್ಕೆ ಶಕ್ಯವಿಲ್ಲದ ಉರಿಯ ಬಾಧೆಗೆ ಸೈರಿಸಲಾರದೆ ಓಡಿಹೋಗುತ್ತಿರುವ ಶಾಸ್ತ್ರಗಳನ್ನು ಬಲ್ಲವರೂ, ಗರಿಗರಿಲೆಂದು ಮನೆಯು ಸುಟ್ಟುಹೋಗಲು ಸಿದ್ಧಪಡಿಸಿದ ಭಕ್ಷ್ಯಭೋಜ್ಯವೆಲ್ಲ ಹಾಳಾಗಿ ಹೋಯಿತೆಂದು ಒಡಲುರಿಗೊಂಡವರಾಗಿ, ಬಿಕ್ಕಿಬಿಕ್ಕಿ ಬಾಯಿಬಿಟ್ಟು ಅಳುತ್ತ ಓಡುವ ತರುಣಬ್ರಾಹ್ಮಣರೂ, ಹೊತ್ತಲ್ಲದ ಹೊತ್ತಿನಲ್ಲಿ ಯುದ್ಧಕ್ಕೆ ಯುದ್ಧಕ್ಕೆ ಹೊರಹೊರಟ ಫಲವು ಸಿದ್ಧಸಿದ ಹಾಗಾಯಿತೆಂದು ಬೆಂಕಿಯ ಸೆರೆಯಿಂದ ಕಂದಿ ಕುಂದಿ ಚೀರಾಡುತ್ತ, ಗಳಿಗೆಬಟ್ಟಲು ಒಡೆದು ಹೋಗುವಂತೆ ದೊಪ್ಪನೆ ನೆಲಕ್ಕೆ ಬೀಳುತ್ತಿರುವ ಜ್ಯೋತಿಷಿಗಳು, ತಲೆಗೆಸುತ್ತಿದರುಮಾಲಕ್ಕೆ ಬೆಂಕಿಯು ಹತ್ತಲು ಅದನ್ನು ಶೀಘ್ರವಾಗಿ

———

1 ಣಾ(ಚ,ಗ)

ಪ್ಪಿಯಮುರಿ ಪತ್ತೆ ಭೋಂಕನೆ ಕಳೆದು ಬಿಸುಟು ತಲ್ಲಣಿಸಿ ತಲೆವಡಪ್ಪುತೇಳ್ತಂದು ಶಿವಾಗಾರದ ಪಿಂದಣ ಜಲಕುಂಡದೊಳ್ಪಡಲಿಡುವುಪಾಧ್ಯಾಯರುಮಾ ಗೊಬ್ಬೂರೊಳ್ ಶಿವದೂಷಕರ್ಬನ್ನಂಬಟ್ಟು ಗೋಳುಂಡೆಗೊಂಡಳ್ಕಿ ಬಳ್ಕಿ ಬಿಬ್ಬ ಭಾಸ್ಕರದೇವನಂಘ್ರಿಗಳೆಡೆಗೆ ಪರಿತಂದು ಪಲ್ಗಿಱಿದು ಶರಣ್ಬೊಕ್ಕು ಸಾಷ್ಟಾಂಗವೆಱಗಿ—

ಶರಣಗಣಾಗ್ರಗಣ್ಯ ಕರುಣಾಮೃತಪೂರ್ಣಕಟಾಕ್ಷ ಕಾಲಸಂ
ಹರನವತಾರ ನಿಮ್ಮಯ ಮಹತ್ವಮದೇಂ ಜಡಬುದ್ಧಿಗಳ್ಗೆ ಗೋ
ಚರಿಸುವೆ ಮುನ್ನಮಾಮಱಿಯದಂದೆಸಗಿರ್ದಪರಾಧಮೆಲ್ಲಮಂ
ವರ ಗುಣಶಾಲಿ ಸೈರಿಪುದು ನಂದಿಪುದಿಂದೆಮಗಾದ ತಾಪಮಂ ೯೯

ಪರಮಪ್ರಸಾದಶಿಖಿ ಸು
ಟ್ಟುರುಪಿದುದೆಮ್ಮಗ್ರಹಾರಮಂ ದ್ವಿಜರೆಲ್ಲಂ
ಕರಮೆ ದವಾಗ್ನಿಗೆ ಸಿಲ್ಕಿದ
ತರುಣದ್ವಿಜವೃಂದದಂತೆ ಕರಿಮುರಿವೋದರ್ ೧೦೦

ಬೆಂದುದು ದೇವಮಾಧವನ ಪೆರ್ಮನೆ ರಾಘವನಾಲಯಾಳಿ ಗೋ
ವಿಂದನ ಗೇಹಮಚ್ಯುತನ ಸದ್ಮಮನಂತನ ಬೀಡು ದೇವಕೀ

ತೆಗೆದು ಬಿಸಾಡಿ, ಸಂಕಟಪಟ್ಟು, ತಲೆಯನ್ನು ಸವರಿ ಕೊಳ್ಳುತ್ತ, ಎಡವುತ್ತ ಓಡಿಬಂದು ಶಿವಾಲಯದ ಹಿಂಭಾಗದಲ್ಲಿರುವ ನೀರಿನ ತೊಟ್ಟಿಯಲ್ಲಿ ಬೀಳುತ್ತಿರುವ ಉಪಾಧ್ಯಾಯರು ಗಳು—ಹೀಗೆ ಎಲ್ಲ ಜನರೂ ಆ ಬೊಬ್ಬೂರಿನಲ್ಲಿರುವ ಶಿವನಿಂದಕರೆಲ್ಲ ಭಂಗಪಟ್ಟು ಗೊಳೋಎನ್ನುತ್ತ ಹೆದರಿ, ಬಳುಕುತ್ತ ಬಿಬ್ಬ ಬಾಚರಸದೇವನ ಪಾದಗಳ ಬಳಿಗೆ ಓಡಿ ಬಂದು ಹಲ್ಲುಕಿರಿದು ಶರಣುಹೊಕ್ಕು ಸಾಷ್ಟಾಂಗನಮಸ್ಕಾರಮಾಡಿ–೯೯. 'ಶರಣರಲ್ಲಿ ಅಗ್ರಗಣ್ಯನೇ, ಕರುಣವೆಂಬ ಅಮೃತದಿಂದ ತುಂಬಿರುವ ಕಟಾಕ್ಷವುಳ್ಳವನೇ, ಪ್ರಳಯ ಕಾಲದ ಸಂಹಾರರುದ್ರನ ಅವತಾರನೇ, ನಿಮ್ಮ ಮಹತ್ವವು ಅಜ್ಞಾನ ಬುದ್ಧಿಯವರಿಗೆ ಅದೇನು ಗೊತ್ತಾದೀತೇ ? ಈ ಪೂರ್ವದಲ್ಲಿ ತಿಳಿಯದೆ ನಾವು ಮಾಡಿದ ಅಪರಾಧ ವನ್ನೆಲ್ಲ ಶ್ರೇಷ್ಠ ಸದ್ಗುಣಶಾಲಿಯಾದ ನೀನು ಕ್ಷಮಿಸಬೇಕು, ನಮಗಾದ ತಾಪವನ್ನು ಹೋಗಲಾಡಿಸುವುದು.' ೧೦೦. 'ಶ್ರೇಷ್ಠವಾದ ಪ್ರಸಾದ ಸಂಬಂಧ ಬೆಂಕಿಯು ನಮ್ಮ ಅಗ್ರಹಾರವನ್ನು ಸುಟ್ಟು ಉರಿಸಿತು. ಇಲ್ಲಿನ ಬ್ರಾಹ್ಮಣರೆಲ್ಲ ಚೆನ್ನಾಗಿಯೇ ಕಾಡುಗಿಚ್ಚಿಗೆ ಸಿಕ್ಕ ಪಕ್ಷಿಗಳ ಮರಿಗಳಂತೆ ಕರಿಮುರಿಗೊಂಡು ಹೋದರು.' ೧೦೧. ಮಾಧವದೇವನ ದೊಡ್ಡಮನೆ, ರಾಘವನ ಮನೆಗಳಸಾಲು, ಗೋವಿಂದನ ಮನೆ, ಅಚ್ಯುತನ ಭವನ, ಅನಂತನ ಬೀಡು, ದೇವಕೀನಂದನನ ಮನೆ, ಹರಿಪುರೋಹಿತನ ಮನೆ, ಅರ್ಕಭಟ್ಟನ ಅತ್ತ ಕಡೆಯಮನೆ, ಆದಿವಿಠ್ಠಲನ ಮನೆ, ಕೂಚಿಯಮನೆ ಎಲ್ಲವೂ ಸುಟ್ಟುಹೋದವು. ವ॥ ಹೀಗೆಂದು ಕಾಲಕೂಟವಿಷಾಗ್ನಿಯಿಂದ ನೊಂದು ಹೋದ ದೇವತೆಗಳು ಪರಮೇ ಶ್ವರನ ಎದುರಿನಲ್ಲಿ ದೈನ್ಯದಿಂದ ಹೇಳಿಕೊಳ್ಳುವಂತೆ, (ಪ್ರಸಾದದ) ಬೆಂಕಿಯು ಉರಿಯಿಂದ

ನಂದನನಾಗರಂ ಹರಿಪುರೋಹಿತನಾಶ್ರಯಮರ್ಕಭಟ್ಟನಾ
ಮಂದಿರಮಾದಿವಿಶ್ಮಲನ ಚೌರಿಗೆ ಕೂಚಿಯು ಸನ್ನಿಕೇತನಂ ೧೦೧

ವ॥ ಎಂದು ಗರಳದುರಿಯಿಂ ನೊಂದ ಸುರರಭವನಿದಿರೊಳ್ದೈನ್ಯಂಬಡುವಂತನಳನುರಿಯಿಂ ನೊಂದ ಭೂಸುರರ್ಘನಮಹಿಮನಿದಿರೊಳ್ಬಾಯ್ಬಿಟ್ಟು ದೈನ್ಯಂಬಟ್ಟು ಕಾರುಣ್ಯಮಂ ಪಾರ್ದು ಸಾರ್ದು—

ಅಳಿಪರಭಿಮಾನಹೀನ
ರ್ಖಳರೆನಿಪೆಮ್ಮಲ್ಲಿ ಗುಣಮನಱಸದೆ ನಿಮ್ಮು
ಜ್ವಳಗುಣಮಂ ಮೆಱೆದೆಮ್ಮಂ
ವಿಳಾಸದಿಂ ಪೊರೆವುದೆಂದು ಮಗುಳ್ದೆಱಗಲೊಡಂ ೧೦೨

ಅಭಯಮನಿತ್ತು ವಿಪ್ರತತಿಗಾಕ್ಷಣದೊಳ್ಕರಕಂಜಯುಗ್ಮಮಂ
ಶುಭಮತಿ ನೀಡಿ ತಾಂ ಬರಿಸಿ ಪಾವಕರೂಪಿನ ಸುಪ್ರಸಾದಮಂ
ವಿಭವದೆ ತಾಳ್ದು ತತ್ಪುರಮನೆಂದಿನವೋಲ್ನೆಗಳುತ್ತೆ ಶಂಭುಪ
ನ್ನಿಭನಳಿದರ್ಗೆ ಕೊಟ್ಟಸುವನಾ ದ್ವಿಜರಂ ಪೊರೆದಂ ಗುಣಾಧಿಕಂ ೧೦೩

ಮದದಿಂದಿದಿರ್ಚೆ ಮುನ್ನಂ
ಸದೆದಂ ಮದಮಳಿದು ತನ್ನ ಮಱೆವುಗೆ ಕಾದಂ
ವಿದಿತ ಸ್ವತಂತ್ರನಾ ದ್ವಿಜ
ಕದಂಬಮಂ ನೃಪತಿ ಬಿಬ್ಬ ಭಾಸ್ಕರದೇವಂ ೧೦೪

ನೊಂದುಹೋದ ದ್ವಿಜರೆಲ್ಲ ಘನಮಹಿಮಾಶಾಲಿಯಾದ ಬಿಬ್ಬಬಾಚಯ್ಯನ ಎದುರಿನಲ್ಲಿ ಅಳುತ್ತ ದೈನ್ಯಭಾವಗೊಂಡು ಅವನ ಕಾರುಣ್ಯವನ್ನು ಎದುರುನೋಡುತ್ತ ಹತ್ತಿರಕ್ಕೆ ಹೋಗಿ— ೧೦೨–೧೦೩. ದುರುಳರೂ, ಅಭಿಮಾನ ಹೀನರೂ, ಮೂರ್ಖರೂ ಎಂದೆನಿಸುವ ನಮ್ಮಲ್ಲಿ ಸದ್ಗುಣವನ್ನು ಹುಡುಕದೆ ನಿಮ್ಮ ಶ್ರೇಷ್ಠ ಗುಣವನ್ನು ಪ್ರಕಟಿಸಿ, ನಮ್ಮನ್ನು ಪ್ರೀತಿಯಿಂದ ರಕ್ಷಿಸಬೇಕೆಂದು ಪುನಃ ನಮಸ್ಕಾರಮಾಡಲಾಗಿ ಮಂಗಳಕರ ಬುದ್ಧಿಯುಳ್ಳ ಆ ಬಿಬ್ಬಬಾಚಯ್ಯನು ಬ್ರಾಹ್ಮಣ ಸಮೂಹಕ್ಕೆ ಅಭಯವನ್ನು ಕೊಟ್ಟು ಆ ಕ್ಷಣದಲ್ಲಿಯೇ ತನ್ನ ಕರಕಮಲಗಳೆರಡನ್ನೂ, ಮುಂದಕ್ಕೆ ಚಾಚಿ, ಅಗ್ನಿರೂಪದಿಂದಿರುವ ಶ್ರೇಷ್ಠ ಪ್ರಸಾದವನ್ನು ಹಿಂದಕ್ಕೆ ಬರಮಾಡಿಕೊಂಡು, ವೈಭವದಿಂದ ಪುನಃ ಅದನ್ನು ಹೊಂದಿದವನಾಗಿ, ಆ ಬೆಬ್ಬೂರು ಪಟ್ಟಣವನ್ನು ಎಂದಿನಹಾಗೆ ಮಾಡಿ, ಸತ್ತವರಿಗೆಲ್ಲ ಪ್ರಾಣದಾನವನ್ನು ಆ ಶಿವ ಸ್ವರೂಪನೂ, ಅಧಿಕ ಗುಣಶಾಲಿಯೂ ಆದ ಬಿಬ್ಬಬಾಚಯ್ಯನು ಕೊಟ್ಟ ಬ್ರಾಹ್ಮಣರನ್ನೆಲ್ಲ ರಕ್ಷಿಸಿದನು. ೧೦೪. ಹೇ ಮಹಾರಾಜನಾದ ಬಿಜ್ಜಳನೇ, ಲೋಕಪ್ರಸಿದ್ಧ ಸ್ವತಂತ್ರ ಮತಿಯಾದ ಬಿಬ್ಬಬಾಚಯ್ಯನು ಮೊದಲು ಮದದಿಂದ ಎದುರಿಸಲಾಗಿ ಕೊಂದುಹಾಕಿದನು ; ಆ ಮದವೆಲ್ಲ ಅಳಿದುಹೋಗಿ ತನ್ನ

ಪರಭಕ್ತಿಯಿಲ್ಲದೊಡೆ ಭೂ
ಸುರನಧಮಂ ಶ್ವಪಚನಿಂ ಶ್ವಪಾಕಂ ಸಲೆ ಶಂ
ಕರಭಕ್ತಿಯುಳ್ಳೊಡಾತನೆ
ಪಿರಿಯಂ ದ್ವಿಜರಿಂದೆ ಸತ್ಯಮಿದು ಮನುಜೇಂದ್ರಾ ೧೦೫

ಹರಭಕ್ತಿಗೆಟ್ಟ ದಕ್ಷನ
ಶಿರಮಂ ತಱಿದಿತ್ತನಲ್ತೆ ಕುಱಿದಲೆಯಂ ಮಾ
ದರ ಚೆನ್ನಯನೊಡನುಂಡಂ
ಪರಮೇಶಂ ನೃಪತಿ ಕೇಳ್ದು ನೀನಱಿಯದುದೇ ೧೦೬

ಗುರು ದೇವತೆ ನಿಗಮಾಗಮ
ಪರಮಂತ್ರಂ ಮಿಥ್ಯೆಯೆಂದು ಪುಸಿವುದಱಿಂ ಪಾ
ರ್ವರೆ ಪೊಲೆಯರಲ್ತೆ ಧಾತ್ರೀ
ವರ ಪುಸಿವನೆ ಪೊಲೆಯನೆಂಬ ವಚನದಿನಿಳೆಯೊಳ್ ೧೦೭

ಶಿವಭಕ್ತನಾದ ಪೊಲೆಯಂ
ಗವನೀಸುರರೆಣೆಯೆ ಭಕ್ತಿರಹಿತರ್ಕೇಳ್ಭೂ
ಧವ ಮತ್ತಂ ದೂಡಯನೆಂ
ಬವಿಕಲ ಮೃಡಭಕ್ತನಿರ್ಪನೀ ಧಾರುಣಿಯೊಳ್ ೧೦೮

ಆ ಮಾದರ ದೂಡಯ್ಯನ
ಸೀಮಾತೀತಪ್ರಭಾವಮೆಂತೆನೆ ಪೇಳ್ವೆಂ

ಬೆನ್ನುಬೀಳಲು ಆ ಬ್ರಾಹ್ಮಣ ಸಮೂಹವನ್ನೆಲ್ಲ ರಕ್ಷಿಸಿದನು. ೧೦೫. ಹೇ ನರಪತಿಯೇ, ಹರಭಕ್ತಿಯಿಲ್ಲದಿದ್ದರೆ ಬ್ರಾಹ್ಮಣನಾಗಿದ್ದರೂ ಅವನು ಕೀಳು ಜಾತಿಯವನಿಗಿಂತಲೂ ಅಧಮನು ; ಶಂಕರಭಕ್ತಿಯುಳ್ಳ ನಾಯಿಯ ಮಾಂಸ ಭಕ್ಷಕನೂ ಕೂಡ ಆ ದ್ವಿಜರಿಗಿಂತ ಅಧಿಕನು ಇದು ಸತ್ಯ ವಿಷಯ. ೧೦೬. ಹೇ ಮಹಾರಾಜಾ, ಹರಭಕ್ತಿಯಿಂದ ದೂರನಾದ ದಕ್ಷನ ಶಿರಸ್ಸನ್ನು (ಶಿವನು ವೀರಭದ್ರನ ರೂಪದಿಂದ) ಕತ್ತರಿಸಿ ಕುರಿಯ ತಲೆಯನ್ನು ಕೊಟ್ಟನಲ್ಲವೇ ! (ಪರಭಕ್ತಿ ವಿಶಿಷ್ಟನಾದ) ಮಾದಾರ ಚೆನ್ನಯ್ಯನೊಡನೆ ಶಿವನು ಊಟ ಮಾಡಿದನಲ್ಲವೇ ! ಇದನ್ನು ನೀನು ಕೇಳಿತಿಳಿದಿಲ್ಲವೇ ! ೧೦೭. ಭೂಪಾಲನೇ, ಸುಳ್ಳು ಹೇಳುವವನೇ ಹೊಲೆಯನೆಂಬ ಮಾತಿನಂತೆ ಭೂಮಂಡಲ ಗುರುಗಳು, ದೇವತೆಗಳು, ವೇದ, ಆಗಮಗಳು, ಶ್ರೇಷ್ಠ ಶಿವಮಂತ್ರ ಇವು ಮಿಥ್ಯೆಯೆಂದು ಸುಳ್ಳುಮಾತು ಮಾತಾಡುವುದರಿಂದ (ಅಂಥ) ದ್ವಿಜರೇ ಹೊಲೆಯರೆನಿಸುವುದಿಲ್ಲವೆ ? ೧೦೮. ಮಹಾ ರಾಜಾ ಕೇಳು : ಶಿವಭಕ್ತನಾದ ಹೊಲೆಯನಿಗೆ ಈ ಶಿವಭಕ್ತಿರಹಿತರಾದ ದ್ವಿಜರುಗಳು ಸಮಾನರೇ ? ಈ ಭೂಮಂಡಲವಲ್ಲಿ ದೂಡಯ್ಯನೆಂಬ ಹೆಸರಿನ ವಿಕಾರರಹಿತನಾದ ಮನಸ್ಸಿನ ಶಿವಭಕ್ತನಿದ್ದನು. **ಮಾದರ ದೂಡಯ್ಯನ ಕಥೆ** ೧೦೯–೧೧೦. ಆ ಮಾದರ

ಭೂಮೀಸುರನೊರ್ವಂ ಕು
ಷ್ಠಾಮಯಮಯಕಾಯನಿರುಳೊಳುರ್ಬಿದ ತಮದೊಳ್ ೧೦೯

ಅಱಸುತ್ತುಂ ಧೇನುವಂ ಭಕ್ತನ ಗೃಹನಿಕಟಸ್ಥಾನಕೇಳ್ತಂದು ಮುಂದೆ
ಳ್ವಱದಾತಂ ಮಿಂದ ನೀರ್ದುಂಬಿದ ಕುಳಿಯೊಳೆ ಕಾಲಿಟ್ಟೊಡಾಜಾನುಪಂಕಂ
ನೆಱೆ ತೀವಿತ್ತಂತದಂ ತಾಂ ತೊಳೆದು ಜಳದಿನಾತ್ಮಾಲಯಕ್ಕೆಯ್ದುತಂ ನೇ
ಸಱಬಿಂಬಂ ಮೂಡುವಂದೀಕ್ಷಿಸೆ ಪದವೆಸೆದತ್ತುಜ್ವಳಂ ಸ್ವರ್ಣತೇಜಂ ೧೧೦

ಅದನೊಲ್ದೀಕ್ಷಿಸಿ ವಿಸ್ಮಯಂಬಡೆ[1]ದು ವಿಪ್ರಂ ಬಂದು ತದ್ವಾರಿ ತೀ
ವಿದ ತತ್ಕೂಪದೊಳಾಳ್ದು ಕುಷ್ಠರುಜೆಯಂ ಪೋಗಾಡಿ ದಿವ್ಯಾಂಗನಾ
ಗಿ ದಯಾವಾರಿ[2]ಧಿ ದೂಡದೇವನಡಿಯೊಳ್ ಮೆಯ್ಯಿಕ್ಕಿ ಕೊಂಡಾಡಿ ತ
ಳ್ವದೆ ತತ್ಸಾರಕೃಪಾರಸಂಬಡೆದು ಗೇಹಂಬೊಕ್ಕನಾನಂದದಿಂ ೧೧೧

ಅದು ದೂಡದೇವಮಜ್ಜನ
ದುದಕಂ ಜಳಮಲ್ತು ಸಿದ್ಧರಸಮಭಿನವಮ
ಪ್ಪುದು ತಪ್ಪದು ಮೇಣಲ್ಲದೊ
ಡೊದವಿಕುಮೆ ವಿವರ್ಣತನು ಸುವರ್ಣತೆಯನಣಂ ೧೧೨

ದೂಡಯ್ಯನ ಮೋರೆ ಮೀರಿದ ಪ್ರಭಾವವು ಹೇಗೆಂಬುದನ್ನು ಹೇಳುತ್ತೇನೆ ಕೇಳು : ಓರ್ವಬ್ರಾಹ್ಮಣನು ಕುಷ್ಟರೋಗದಿಂದ ತುಂಬಿದ ದೇಹವುಳ್ಳವನಾಗಿ (ಒಂದು ದಿನ) ದಟ್ಟವಾಗಿ ಹಬ್ಬಿದ ಕತ್ತಲೆಯಲ್ಲಿ ಕಳೆದುಹೋದ ತನ್ನ ಹಸುವನ್ನು ಹುಡುಕುತ್ತ ಆ ಭಕ್ತನಾದ ದೂಡಯ್ಯನ ಮನೆಯ ಸಮೀಪದ ಸ್ಥಾನಕ್ಕೆ ಬಂದು, ಆ ಭಕ್ತನು ಸ್ನಾನ ಮಾಡಿದ ಬಚ್ಚಲ ನೀರಿನ ಗುಂಡಿಯಲ್ಲಿ ಮುಂದೆ ಏನಿದೆಯೆಂಬುದನ್ನು ಅರಿಯದೆ ಕಾಲಿಟ್ಟನು. (ಆಗ) ಮೊಳಕಾಲವರೆಗೂ (ಆ ಬಚ್ಚಲ ಗುಂಡಿಯು) ಕೆಸರು ಚೆನ್ನಾಗಿ ಅಂಟಿಕೊಂಡಿತು. ಹಾಗೆ ಹತ್ತಿದ ಕೆಸರನ್ನು ತನ್ನ ಮನೆಗೆ ಬಂದು ನೀರಿನಿಂದ ತೊಳೆದು ಕೊಂಡನು. ಸೂರ್ಯೋದಯವಾದಮೇಲೆ ನೋಡಲಾಗಿ ಕಾಲುಗಳೆರಡೂ ಬಂಗಾರದ ಉಜ್ವಲವಾದ ತೇಜಸ್ಸಿನಿಂದ ಶೋಭಿಸುತ್ತಿದ್ದವು. ೧೧೧. ಹೀಗಾದುದನ್ನು ಸಂತೋಷ ದಿಂದ ನೋಡಿ, ಆಶ್ಚರಪಟ್ಟು, (ಪುನಃ) ಆ ಬ್ರಾಹ್ಮಣನು ದೂಡಯ್ಯನ (ಬಚ್ಚಲು ಗುಂಡಿಯ ಬಳಿಗೆ) ಬಂದು ನೀರಿನಿಂದ ತುಂಬಿದ ಆ ಗುಂಡಿಯಲ್ಲಿ ಮುಳುಗಿ (ತನಗುಂಟಾ ಗಿದ್ದ) ಕುಷ್ಟರೋಗವನ್ನು ಹೋಗಲಾಡಿಸಿಕೊಂಡು, ದಿವ್ಯ ಶರೀರಿಯಾದನು. ದಯಾ ಸಮುದ್ರನಾದ ದೂಡಯ್ಯ ದೇವನ ಪಾದಗಳಲ್ಲಿ ನಮಸ್ಕರಿಸಿ ಹೊಗಳುತ್ತ, ತಡ ಮಾಡದೆ, ಆತನ ಕೃಪಾರಸವನ್ನು ಹೊಂದಿ ಆನಂದದಿಂದ ಬಂದು ತನ್ನ ಮನೆಯನ್ನು ಪ್ರವೇಶಿಸಿದನು. ೧೧೨. ಆ ದೂಡದೇವನ ಸ್ನಾನದ ನೀರು ನೀರಲ್ಲ : ನೂತನವಾದ ಸಿದ್ಧರಸವಲ್ಲದೆ ಬೇರಲ್ಲ ! ಬೇರಲ್ಲ !! ಅಥವಾ ಹಾಗಾಗದಿದ್ದರೆ (ಸಿದ್ಧರಸವಾಗದಿದ್ದರೆ ಬಣ್ಣಗೆಟ್ಟ ದೇಹವನ್ನು ಸುವರ್ಣಕಾಂತಿಯಿಂದ ಕೂಡಿದ ದೇಹವನ್ನಾಗಿ ಮಾಡುತ್ತಿ

1 ಡ(ಗ) 2 ರು(ಮು)

ಶಿವದಾಸಭೀಮಯ್ಯಂ ಭೂ
ದಿವಿಜರ ಕುಷ್ಠಮನೆ ಪಱಿದನೆಂಬವರ್ಗಳಿನ್ನುಂ
ಜವದಿಂ ದೂಡಯ್ಯನೀ ವಿ
ಪ್ರವರನ ಕುಷ್ಠಮನೆ ಪಱಿದನೀಗಳ್ಧರೆಯೊಳ್ ೧೧೩

ವ॥ ಎಂದಿಂತು ಸರ್ವರುಂ ಕೀರ್ತಿಸುತ್ತಮಿರ್ಪಿನಮಲ್ಲಿ ತದ್ವಾರ್ತೆಗೇಳ್ದಾ ದೇಶದೊಳಿರ್ದೇಳುನೂಱು ಕುಷ್ಠಿಗಳಾದ ಪಾರ್ವರೆಲ್ಲಂ ಬಂದು ತನ್ಮಜ್ಜನಜಲಾಪೂರ್ಣಕುಂಡದೊಳ್ಮುಳುಂಗಿ—

ಪರಿಶುದ್ಧಕಾಯರಾಗು
ತ್ತಿರದಾಗಳ್ದೂಡಿದೇವನಂಘ್ರಿಗೆ ಪೊಡಮ
ಟ್ಟುರುತರ ತತ್ಕರುಣಾಮೃತ
ಶರಧಿಯೊಳೋಲಾಡಿ ಬಾಳ್ದರಿಳೆಯಱಿವಿನೆಗಂ ೧೧೪

ವ॥ ಮತ್ತಂ

ಪುರಹರವಿದ್ವೇಷಿದ್ವಿಜ
ಶಿರೋಬ್ಜಕುಂಜರನೆನಿಪ್ಪ ಬಿರಿದಾಂತೆಸೆವಂ[1]
ವರ ಡೋಹರ ಕಕ್ಕಯ್ಯಂ
ಚರ ಗುರು ಶಿವಲಿಂಗಭಕ್ತನೀ ವಸುಮತಿಯೊಳ್ ೧೧೫

ವ॥ ಆ ಘನಮಹಿಮನವನಿಪನೊಲ್ವಗ್ರಹಾರದೊಳೊರ್ವಂ ಪುರಾಣಭಟ್ಟನೆಂಬ ಪಾರ್ವಂ ದುಷ್ಟದ್ವಿಜರ್ಗೆ ಪುರಾಣಮನುಸುರ್ವುದಂ ಕೇಳುತ್ತುಮಿರ್ಪಿನಮಾ ಪುರಾಣಭಟ್ಟಂ ಸಡಗರಂ ಮಿಕ್ಕು—

ತ್ತೇನು ? ೧೧೩. ಹಿಂದೆ (ಪೂರ್ವದಲ್ಲಿ) ಶಿವನದಾಸನೆನಿಸಿದ್ದ ಭೀಮಯ್ಯನೆಂಬುವವನು ದ್ವಿಜರುಗಳ ಕುಷ್ಠರೋಗವನ್ನು ನಿವಾರಣೆ ಮಾಡಿದನೆನ್ನುವರು ಲೋಕದಲ್ಲಿ ಈಗ ದೂಡಯ್ಯನು ಶೀಘ್ರವಾಗಿ ಈ ಬ್ರಾಹ್ಮಣ ಶ್ರೇಷ್ಠನ ಕುಷ್ಠರೋಗವನ್ನು ಪರಿಹರಿಸಿದನು. ವ॥ ಈ ರೀತಿ ಸರ್ವರೂ ಹೊಗಳುತ್ತಿರಲಾಗಿ ಅಲ್ಲಿಗೆ ಆ ವಾರ್ತೆಯನ್ನು ಕೇಳಿ ಆ ದೇಶದಲ್ಲಿದ್ದ ಏಳುನೂರು ಜನ ಕುಷ್ಠರೋಗದ ಬ್ರಾಹ್ಮಣರುಗಳು ಬಂದು, ಆ ಮಜ್ಜನ ಜಲದಿಂದ ತುಂಬಿ ನೀರಿನ ಗುಂಡಿಯಲ್ಲಿ ಮುಳುಗಿ—೧೧೪. ಪರಿಶುದ್ಧ ದೇಹಿಗಳಾಗಿ ತಪ್ಪದೆ ದೂಡಯ್ಯ ದೇವನ ಪಾದಗಳಿಗೆ ನಮಸ್ಕಾರಮಾಡಿ, ಶ್ರೇಷ್ಠವಾದ ಅವನ ಕರುಣವೆಂಬ ಅಮೃತ ಶರಧಿಯಲ್ಲಿ ಈಸಾಡಿ ಲೋಕವೆಲ್ಲ ಅರಿಯುವಂತೆ ಬಾಳಿದರು. ವ॥ ಮತ್ತು **ಡೋಹರ ಕಕ್ಕಯ್ಯನ ಕಥೆ** ೧೧೫. ಪರಮೇಶ್ವರನನ್ನು ದ್ವೇಷಿಸುವ ದ್ವಿಜರುಗಳ ಶಿರಸ್ಸುಗಳೆಂಬ ಕಮಲಗಳಿಗೆ ಆನೆ ಎಂಬ ಬಿರುದನ್ನು ಧರಿಸಿದ ಶ್ರೇಷ್ಠನಾದ ಡೋಹರ ಕಕ್ಕಯ್ಯನು ಗುರುಲಿಂಗ ಜಂಗಮಭಕ್ತನೆನಿಸಿ ಭೂಮಂಡಲದಲ್ಲಿ ಶೋಭಿಸುತ್ತಿದ್ದನು. ವ॥ ಆ ಘನ ಮಹಿಮನು ರಾಜನು ಪ್ರೀತಿಸುವ ಒಂದು ಅಗ್ರಹಾರದಲ್ಲಿದ್ದ ಪುರಾಣಭಟ್ಟನೆಂಬ ಹೆಸರಿನ ಒಬ್ಬ ದ್ವಿಜನು ದುಷ್ಟ ದ್ವಿಜರನೇಕರಿಗೆ ಪುರಾಣ ಹೇಳುವುದನ್ನು ಕೇಳುತ್ತ ಇರುವಾಗ ಪುರಾಣಭಟ್ಟನು

1 ದಂ(ಚ)

ಮೃಡನಬ್ಜಭವನ ಶಿರಮಂ
ಪಿಡಿವುತೆ ತಿರಿದುಂಡನೆಂಬನಧಟಿಂದೀಶಂ
ತಡೆಯದೆ ವಿಷ್ವಕ್ಸೇನನ
ಜಡಿದಿಱಿದಂ ತಿಸುಳದಿಂದವೆಂಬುದನುಸುರಂ ೧೧೬

ನರಹರಿಯಾ ಹಿರಣ್ಯಕಸುರಾರಿಯನಿಕ್ಕಿದನೆಂದು ಪೇಳ್ವನಾ
ನರಹರಿಯಂಗಮಂ ಶರಭರೂಪಿನ ರುದ್ರನಡುರ್ತು ಸೀಳ್ದನೆಂ
ದಿರದುಸುರಂ ತ್ರಿವಿಕ್ರಮನ ಕಾಲ್ನಭಮಂಟಿದುದೆಂಬನಲ್ಲದೀ
ಶ್ವರನವನಸ್ಥಿಯಂ ಮುಱಿದು ತಾಳ್ದನೆನುತ್ತೊರೆಯಂ ದ್ವಿಜಾಧಮಂ ೧೧೭

ಹರಿ ಮತ್ಸ್ಯಾಕೃತಿದಾಳ್ದು ಸೋಮಕನ ಕೊಂದಾಮ್ನಾಯಮಂ ತಂದನೆಂ
ದೊರೆವಂ ಬಾಲಮನೊತ್ತಿ ಸುತ್ತಿದನದಂ ಕೊಂಡುತ್ತಮಾಂಗಕ್ಕೆ ಶಂ
ಕರನೆನ್ನಂ ಕಿಟಿರೂಪಿನಿಂ ನೆಗಪಿದಂ ದೈತ್ಯಾರಿ ತಾನೆಂಬನೀ
ಧರೆಯಂ ತತ್ಕಿಟಿಯಂ ಗುಹಂ ಸದೆದುದಂ ಪೇಳಂ ಪುರಾಣಾರ್ಥಮಂ ೧೧೮

ದಕ್ಷನಧ್ವರದಗ್ರಪೂಜೆಯನಾಳ್ದನಚ್ಯುತನೆಂಬನಾ
ತ್ರ್ಯಕ್ಷನಾ ಪರಿಮಸ್ತಕಂಗಡಿದಂದಮಂ ಬಿಡದೋದನ

ಅತ್ಯಂತ ಸಂಭ್ರಮದಿಂದ ೧೧೬. ಶಿವನು ಬ್ರಹ್ಮನ ಶಿರಸ್ಸನ್ನು ಕೈಯಲ್ಲಿ ಹಿಡಿದು ಭಿಕ್ಷಾಟನೆ ಮಾಡಿ ಉಂಡನು ಎನ್ನುವನು, ಪರಾಕ್ರಮದಿಂದ ಈಶ್ವರನು ತಡೆಯದೆ ವಿಷ್ವಕ್ಸೇನನನ್ನು ತ್ರಿಶೂಲದಿಂದ ಒತ್ತಿ ಇರಿದನು ಎನ್ನುವುದನ್ನು ಹೇಳಲಿಲ್ಲ. ೧೧೭. ವಿಷ್ಣುವು ನಾರಸಿಂಹಾವತಾರಮಾಡಿ ಹಿರಣ್ಯಕಶ್ಯಪನೆಂಬ ರಾಕ್ಷಸನನ್ನು ಕೊಂದನೆಂದು ಹೇಳುವನು. ಆ ನರಹರಿಯ ಶರೀರವನ್ನು ಶರಭಾವತಾರಮಾಡಿ ರುದ್ರನು ಮೇಲೆ ಬಿದ್ದು ಸೀಳಿದನೆಂಬುದನ್ನು ಹೇಳುತ್ತಿದ್ದಿಲ್ಲ ; ತ್ರಿವಿಕ್ರಮನ ಕಾಲು ಆಕಾಶವನ್ನು ವ್ಯಾಪಿಸಿತೆಂದು ಹೇಳುವನಲ್ಲದೆ ಈಶ್ವರನು ಅವನ ಮೂಳೆಯನ್ನು ಮುರಿದು ಕಂಕಾಳಧರನೆನಿಸಿದನೆಂಬುದನ್ನು ಆ ದ್ವಿಜಾಧಮನು ಹೇಳುತ್ತಿದ್ದಿಲ್ಲ. ೧೧೮. ವಿಷ್ಣುವು ಮತ್ಸ್ಯಾವತಾರ ಮಾಡಿ, ಸೋಮುಕ (ಸೋಮಕ)ನೆಂಬ ರಾಕ್ಷಸನನ್ನು ಕೊಂದು ವೇದಗಳನ್ನು ತಂದನೆನ್ನುವನಲ್ಲದೆ, ಆ ಮತ್ಸ್ಯದ ಬಾಲವನ್ನು ಶಿವನು ಕತ್ತರಿಸಿಹಾಕಿ ತನ್ನ ತಲೆಗೆ ಸುತ್ತಿಕೊಳ್ಳುವ ರುಮಾಲವನ್ನಾಗಿ ಮಾಡಿಕೊಂಡನೆಂಬುದನ್ನು ಹೇಳುತ್ತಿದ್ದಿಲ್ಲ ; ವಿಷ್ಣುವು ವರಾಹ (ಹಂದಿ) ರೂಪದಿಂದ ಅವತಾರ ಮಾಡಿ ಭೂಮಿಯನ್ನು ಎತ್ತಿದನು ಎಂದು ಹೇಳುವನಲ್ಲದೆ, ಆ ಹಂದಿಯನ್ನು ಷಣ್ಮುಖನು ಸದೆಬಡಿದನೆಂಬ ಪುರಾಣದ ಅರ್ಥವನ್ನು ಹೇಳುತ್ತಿದ್ದಿಲ್ಲ. ೧೧೯. ಅಚ್ಯುತನು ದಕ್ಷಾಧ್ವರದಲ್ಲಿ (ಮೊದಲ ಪೂಜೆ) ಯನ್ನು ಪಡೆದನೆಂದು ಹೇಳುವನು. (ಆದರೆ) ತ್ರಿಣೇತ್ರನು (ವೀರಭದ್ರನಾಗಿ) ಹರಿಯ ಮಸ್ತಕವನ್ನು ಕತ್ತರಿಸಿದ ರೀತಿಯನ್ನು ಓದುತ್ತಿದ್ದಿಲ್ಲ : ಕಮಲನೇತ್ರನಾದ ವಿಷ್ಣುವೇ ಜಗತ್ತಿಗೆ ಮೂಲಶಕ್ತಿಯೆಂದು ಪೇಳುತ್ತಿದ್ದನು. ಆ

ಬ್ಜಾಕ್ಷನೇ ಜಗದಾದಿಶಕ್ತಿಯೆನುತ್ತೆ ಪೇಳ್ವನವಂಗೆ ದಿ
ವ್ಯೋಕ್ಷರಾಡ್ಧ್ವಜನಾಳ್ದನೆಂದುಸುರಂ ವೃಷಾಪರಭಾಷಣಂ ೧೧೯

ಸರ್ವಂ ವಿಷ್ಣುಮಯಂ ದಲೆಂದು ನುಡಿವಂ ಕಲ್ಪಾಂತದೊಳ್ವಿಷ್ಣುವಂ
ಶರ್ವಂ ಮರ್ದಿಪನೆಂಬುದಂ ನುಡಿಯನಾ ವ್ಯಾಸಂ ಮಹಾಕಾಶಿಯೊಳ್
ಸರ್ವರ್ನೋಡೆ ಮುಕುಂದನೇ ಪರಮೆನುತ್ತಂದೆತ್ತಿದಂ ತೋಳನೆಂ
ದುರ್ವೃತ್ತೆಂಬನದಂ ಕರಂ ಮುರಿದನಾ ನಂದೀಶನೆಂಬರ್ಥಮಂ ೧೨೦

ಒಡೆಯಂ ಹರಿಯಂ ತವೆ ಸಂ
ಹರಿಸಿದ ಕತದಿಂದೆ ಪುರಹರಂ ಸ್ಮರಹರನ
ಧ್ವರಹರನೆಂಬಂತಿರೆ ಹರಿ
ಹರನೆನಿಸುಗುಮೆಂಬ ನೈಗಮಾರ್ಥಮನುಸುರಂ ೧೨೧

ವ॥ ಇಂತೆಂದೊರೆವ ದುರ್ದಾಂತನ ದುರ್ಭಾಷಣಮಂ ಕೇಳ್ದು ಕಕ್ಕಯ್ಯಂ ಕಾಲಾಗ್ನಿರುದ್ರನಂತೆ ಕಾಯ್ಪನೊಳಕೊಂಡು——

ಪುಸಿಕನಿವಂ ಪುರಾಣಸಹಜಾರ್ಥಮನೆನ್ನದೆ ವಂಚಿಸುತ್ತೆ ಪೆ
ರ್ಚಿಸಿಯನೆ ಪೇಳ್ದಪಂ ಶಿವನ ಪೆರ್ಮೆಗೆ ಸೈರಿಸಲೊಲ್ಲದಾತನಂ

ವಿಷ್ಣುವಿಗೆ ದಿವ್ಯವಾದ ವೃಷಭನನ್ನೇ ಧ್ವಜದಲ್ಲುಳ್ಳ ಶಿವನು ಯಜಮಾನನೆಂದು ಆ ಸುಳ್ಳುಮಾತಿನವನಾದ ಪುರಾಣಭಟ್ಟನು ಹೇಳುತ್ತಿರಲಿಲ್ಲ. ೧೨೦–೧೨೧. ಸಮಸ್ತ ಬ್ರಹ್ಮಾಂಡವು ನಿಶ್ಚಯವಾಗಿ ವಿಷ್ಣುಮಯವಾದದ್ದೆಂದು ನುಡಿಯುತ್ತಿದ್ದನು ; ಪ್ರಳಯ ಕಾಲದಲ್ಲಿ ವಿಷ್ಣುವನ್ನು ಶಂಭುವು ಮರ್ದಿಸಿದನೆಂಬುದನ್ನು ನುಡಿಯಲಿಲ್ಲ ; ವೇದ ವ್ಯಾಸನು ಶ್ರೇಷ್ಠ ಕಾಶೀ ನಗರದಲ್ಲಿ ಸರ್ವರೂ ನೋಡುವಂತೆ ವಿಷ್ಣುವೇ ಶ್ರೇಷ್ಠ ನೆನ್ನುತ್ತ ಅಂದು ತನ್ನ ತೋಳುಗಳನ್ನು ಎತ್ತಿದನೆಂದು ಉಬ್ಬುಬ್ಬಿ ಹೇಳುವನು. ಆ ತೋಳುಗಳನ್ನು ಚೆನ್ನಾಗಿ ನಂದೀಶ್ವರನು ಮುರಿದನೆಂಬ ಅರ್ಥವನ್ನು ಹೇಳುತ್ತಿದ್ದಿಲ್ಲ. ವಿಷ್ಣುವನ್ನು ಚೆನ್ನಾಗಿ ಸಂಹಾರ ಮಾಡಿದ ಕಾರಣದಿಂದ (ಶಿವನಿಗೆ) ಪುರಹರ, ಸ್ಮರಹರ, ಅಧ್ವರಹರ ಎನ್ನುವಹಾಗೆ ಹರಿಹರ (ಅಂದರೆ ಹರಿಯನ್ನು ಕೊಂದವನು) ನೆಂದೆನಿಸುವನೆಂಬ ವೇದದ ಅರ್ಥವನ್ನು (ನೈಗಮಾರ್ಥಮಂ) ಹೇಳುತ್ತಿರಲಿಲ್ಲ. ವ॥ ಹೀಗೆ ಪುರಾಣವನ್ನು ಹೇಳುವ ದುಷ್ಟನಾದ ಆ ಪುರಾಣ ಭಟ್ಟನ ಕೆಟ್ಟ ಭಾಷಣ ವನ್ನು ಕೇಳಿ ದೋಹರಕ್ಕಯ್ಯನು ಪ್ರಳಯ ಕಾಲದ ರುದ್ರನಂತೆ ಕೋಪಗೊಂಡವನಾಗಿ: ೧೨೨. ಸುಳ್ಳನಾದ ಈ ಭಟ್ಟನು ಪುರಾಣದ ಸಹಜವಾದ ಅರ್ಥವನ್ನು ಹೇಳದೆ, ವಂಚನೆ ಮಾಡಿ, ವಿಶೇಷವಾದ (ಹೆಚ್ಚಾದ) ಸುಳ್ಳನ್ನೇ ಹೇಳುತ್ತಿದ್ದಾನೆ. ಶಿವನ ಹಿರಿಮೆಗೆ ಸೈರಿಸಲಾರದ ದುರಾತ್ಮನಾದ ಅವನನ್ನು ತೀಕ್ಷ್ಣವಾಗಿ ಮಸೆದ ಖಡ್ಗದಿಂದ

ಮಸೆದಲಗಿಂ ಕಱುತ್ತಱಿವುದಾತನ ಪೊತ್ತ[1]ಗೆಗಳ್ಳು ಸುಟ್ಟುದಂ
ಪೊಸೆವುದು ವೀರಭಕ್ತವಿಹಿತಂ ಗಡ ಧಾತ್ರಿಯೊಳೀ ದುರಾತ್ಮನಂ ೧೨೨

ತಱಿಸಂದು ಕೊಲ್ವೆನೆನುತಂ
ನೆಱೆ ಗುಡುಗುಡಿಸುತ್ತೆ ಸಬಳದಿಂದವನೆರ್ದೆಯಂ
ಮಱುವೊನೆ ಪಾಯ್ತರೆ ಮುಳಿಸಿಂ
ದಿಱಿದಂ ತಲೆದಱಿದು ಕೆಡಪಿದಂ ದೂಷಕನಂ ೧೨೩

ವ॥ ಆಗಳೆಲ್ಲರುಂ ಪಾರ್ವನನಿಱಿಯಲಕ್ಕುಮೆಯೆನೆ ಪಾರ್ವನಲ್ಲಿವಂ ಪರಮ ಪಾತಕನಂತದಕ್ಕೆ ದೃಷ್ಟಾಂತಮಂ ನೋಡಿಮೆನೆ ನೆರೆದಖಿಳರುಂ ನೋಳ್ಪಾಗಳ್—

ಜುಱುಜುಱಿಪ ಕೀವುನೆತ್ತ
ರ್ಗೆಱಗುತೆ ಝುಮ್ಮೆಂದು ಮೊರೆವ ನೊಣವಿರೆ ಜವದಿಂ
ನೆಱೆ ವಿಲಿವಿಲಿಸುವ ಪುಳುಗ
ಳ್ಪೊಱಗೊಳಗಾ ಪೆಣದೊಳಿಡಿದು ತೀವಿದುವೆತ್ತಂ ೧೨೪

ಇದನೆಲ್ಲರ್ಕೇಳ್ದುಮೀ ಭೂಸುರರಱಿಯರೆ ಧಾತ್ರೀಶ ಮೇಣಿಂತು ಗೆಯ್ದು
ಗ್ಗದ ಪೆಂಪಂ ತಾಳ್ದ ಕಕ್ಕಯ್ಯನನಧಮಕುಲೋದ್ಭೂತನೆಂದಾಡಲೇಂ ತ

ಕತ್ತರಿಸಿ ಹಾಕುವುದೂ, ಅವನ ಹೊತ್ತಿಗೆಗಳನ್ನು ಸುಟ್ಟು ಅದನ್ನು ಹೊಸೆದು ಹಾಕುವುದೂ, ಲೋಕದಲ್ಲಿ ವೀರಭಕ್ತರಾದವರಿಗೆ ಯೋಗ್ಯಕಾರ್ಯವಲ್ಲವೇ! ೧೨೩. ದೃಢ ಸಂಕಲ್ಪದಿಂದ ಇವನನ್ನು ಕೊಲ್ಲುತ್ತೇನೆನ್ನುತ್ತ ವಿಶೇಷವಾಗಿ ಆರ್ಭಟಿಸುತ್ತ, ಭರ್ಚಿಯಿಂದ (ಈಟಿಯಿಂದ) ಎದೆಯನ್ನು ಬೆನ್ನಿನಲ್ಲಿ ನಾಟಿ ಹೊರಬರುವಂತೆ ತಿವಿದು ಕೋಪದಿಂದ ತಲೆಯನ್ನು ಕತ್ತರಿಸಿ ಆ ದೂಷಕನನ್ನು ನೆಲಕ್ಕೆ ಕೆಡವಿದನು. ವ॥ ಆಗ ಎಲ್ಲರೂ ಬ್ರಾಹ್ಮಣನನ್ನು ಇರಿಯುವುದು ಯೋಗ್ಯವೇ ? ಎನ್ನಲು ಕಕ್ಕಯ್ಯನು ಇವನು ಬ್ರಾಹ್ಮಣನಲ್ಲ, ಪರಮ ಪಾಪಿಷ್ಠನು. ಈ ಮಾತಿಗೆ ದೃಷ್ಟಾಂತವನ್ನು ನೋಡಿರಿ, ಎನ್ನಲು ನೆರೆದ ಸಮಸ್ತರೂ ನೋಡುತ್ತಿದ್ದಂತೆ ೧೨೪. ಜುರು ಜುರು ಎಂದು ಕೀವು ನೆತ್ತರು ಒಸರುತ್ತ ಝುಮ್ಮೆಂದು ನೊಣಗಳು ಮುತ್ತಿ ಮೊರೆಯುತ್ತಿರಲು, ಶೀಘ್ರವಾಗಿ ವಿಲಿವಿಲಿಯೆನ್ನುತ್ತಿರುವ ಹುಳುಗಳು (ಕ್ರಿಮಿಗಳು) ಆ ಹೆಣದ ಒಳಗೂ ಹೊರಗೂ ಎಲ್ಲ ಕಡೆಗೂ ತುಂಬಿದವು. ೧೨೫. ಮಹಾರಾಜನಾದ ಬಿಜ್ಜಳನೇ, ಈ ವೃತ್ತಾಂತವನ್ನು ಈ ದ್ವಿಜರೆಲ್ಲ ಕೇಳಿ ತಿಳಿದಿಲ್ಲವೇ ? ಈ ರೀತಿ ಮಾಡಿ ಶ್ರೇಷ್ಠವಾದ ಹಿರಿಮೆಯನ್ನು ಹೊಂದಿದ ಕಕ್ಕಯ್ಯನನ್ನು ನೀಚ ಕುಲದಲ್ಲಿ ಹುಟ್ಟಿದವನೆಂದು ಆಡುವುದೇನು ಯೋಗ್ಯವಾದದ್ದೇ ? ನೀನೇ ಹೇಳು ಎಂದು ಹಿಂದೆ ಆಗಿ ಹೋದ ಅನುಪಮವಾದ ಶರಣರುಗಳ ಚರಿತ್ರೆಯನ್ನು ಹೇಳುತ್ತ, ದುಷ್ಟಮತಗಳೆಂಬ ಪರ್ವತಗಳಿಗೆ ದೇವೇಂದ್ರನೋಪಾದಿ

1 ಳ್ತ(ಜ) ತ್ತು(ಮಂ)

ಕ್ಕುದೆ ಪೇಳ್ನೀನೆಂದು ಸಂದಪ್ರತಿಮ ಶರಣಚಾರಿತ್ರಮಂ ಪೇಳುತುಂ ಸ
ಮ್ಮುದದಿಂದೊಪ್ಪಿರ್ದನಾಸ್ಥಾನದೊಳ್ ಕುಮತಭೂಭೃನ್ಮಹೇಂದ್ರಂ ವೃಷೇಂದ್ರಂ ೧೨೫

ಶ್ರೀ ಕಲ್ಲಿನಾಥಚರಿತಮ
ನಾಕರ್ಣಿಪ ಪೇಳ್ವ ಸುಜನರಿಳೆಯೊಳಜಸ್ರಂ
ಲೋಕೋತ್ತರಪೂರ್ಣಸುಖಾ
ನೀಕಮನಗಜಾಧಿನಾಥನೊಲವಿಂ ಪಡೆವರ್ ೧೨೬

ವರ ಬಿಬ್ಬಭಾಸ್ಕರಾರ್ಯನ
ಚರಿತಮನಾಕರ್ಣಿಪರ್ಗೆ ಪೇಳ್ವರ್ಗೆ ಸುಧಾ
ಕರಧರನೀವಂ ನಿಜ ಭಾ
ಸುರಸುಖಕರಣಪ್ರಸಾದಸಿದ್ಧಿಯನಿಳೆಯೊಳ್ ೧೨೭

ಘನತರ ಮಾದರ ದೂಡ
ಯ್ಯನ ಪರಮತಮದವಿದಳನ ಡೋಹರ ಕಕ್ಕ
ಯ್ಯನ ಪುಣ್ಯಚರಿತಮಂ ಕೇ
ಳ್ದನಘರ್ಗಭಿಮತ ಸಮಸ್ತ ಸಂಪದಮಕ್ಕುಂ ೧೨೮*

ಭರ್ಮಗಿರಿಮಂದಿರೆ ಹವಿರ್ಮುಖವರಾರ್ಚಿತೆ ಯ
ಜುರ್ಮಿಳಿತಮಂತ್ರಮಯೆ ಗೀರ್ಮಹಿತವಾಣೀ

ಯಲ್ಲಿರುವ ಬಸವೇಶ್ವರನು ಆ ಬಿಜ್ಜಳನ ಆಸ್ಥಾನದಲ್ಲಿ ಉಲ್ಲಾಸದಿಂದ ಶೋಭಿಸುತ್ತಿದ್ದನು. ೧೨೬. ಕಲ್ಲಿನಾಥನ ಚರಿತ್ರೆಯನ್ನು ಕೇಳುವ, ಹೇಳುವ, ಸಜ್ಜನರು ಭೂಮಿಯಲ್ಲಿ ಸತತವೂ ಲೋಕೋತ್ತರ ಪೂರ್ಣವಾದ ಸುಖಗಳ ಸಮುದಾಯವನ್ನು ಪರಮೇಶ್ವರನ ಕೃಪೆಯಿಂದ ಪಡೆಯುವರು. ೧೨೭. ಭೂಮಿಯಲ್ಲಿ ಶ್ರೇಷ್ಠನಾದ ಬಿಬ್ಬ ಬಾಚಯ್ಯನ ಚರಿತ್ರೆಯನ್ನು ಕೇಳುವವರಿಗೆ ಹೇಳುವವರಿಗೆ ಚಂದ್ರಧರನಾದ ಶಿವನು ತನ್ನ ಪ್ರಕಾಶಮಾನವಾದ ಸುಖವನ್ನುಂಟು ಮಾಡುವ ಪ್ರಸಾದದ ಸಿದ್ಧಿಯನ್ನು ಕೊಡುವನು. ೧೨೮. ಶ್ರೇಷ್ಠನೆನಿಸಿದ ಮಾದರ ದೂಡಯ್ಯನ ಮತ್ತು ಪರಮತಗಳ ಮದವನ್ನು ಕತ್ತರಿಸಿ ಹಾಕುವ ಡೋಹರ ಕಕ್ಕಯ್ಯನ ಪುಣ್ಯ ಪ್ರದವಾದ ಚರಿತ್ರೆಯನ್ನು ಕೇಳಿದ ಶ್ರೇಷ್ಠ ಭಕ್ತರಿಗೆ ತಮ್ಮ ಇಷ್ಟಾರ್ಥರೂಪವಾದ ಸಮಸ್ತ ಐಶ್ವರ್ಯವೂ ಉಂಟಾಗುವುದು. ೧೨೯. ಸುವರ್ಣಗಿರಿಯೆನಿಸಿದ ಮೇರು ಪರ್ವತವೇ ಮನೆಯಾಗಿ ಉಳ್ಳ,

---

* ಈ ಪದ್ಯದ ತರುವಾಯ 'ದ' ಪ್ರತಿಯಲ್ಲಿ ಈ ಕೆಳಗಣ ಪದ್ಯವಿದೆ.

ಶಿವನಾಗದೇವಚರಿತಮ
ಭೂಮಿಯೊಳಾಕರ್ಣಿಸರ್ಗೆ ಪೇಳ್ವ ಶಿವಾ
ಧವ ಶರಣರ್ಗಭೆಯೊಳ್ಸುಖಾ
ರ್ಣವ ಪಡೆದರ್ ಸಮಸ್ತ ಸಂಪದಂಗಳನಿಳೆಯೊಳ್

ನಿರ್ಮಿತಜಗತ್ರಯೆ ಷಡೂರ್ಮಿಗಣವರ್ಜಿತೆ ಸು
ಕರ್ಮಯಮಿವಂದ್ಯೆ ಶಿವಧರ್ಮಹೃದಯಾಬ್ಜೇ
ಕೂರ್ಮನಿಭಪಾದೆ ಯಮಧರ್ಮಮದಮರ್ದಿನಿ ಸು
ಘರ್ಮಕರಸದ್ರುಚಿವಪುರ್ಮೃಡಮನೋಜ್ಞೇ
ನಿರ್ಮದೆ ನಿರಸ್ತತತದುರ್ಮತೆ ಗಿರೀಂದ್ರಸುತೆ
ಪೆರ್ಮೆಯಿಗೆ ಪಾಲಿಪುದು ಶರ್ಮದೆ ಭವಾನೀ ೧೨೯

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಕಲಿನಾಥ ಬಿಬ್ಬಭಾಸ್ಕರಾದಿಕಥಾವಿವರಣಂ

ಅಷ್ಟತ್ರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೮ಕ್ಕೆ ಪದಗಣನೆ ೨೧೯೪ಕ್ಕೆ ಮಂಗಳಮಹಾ ಶ್ರೀ॥

ಹವಿಸ್ಸಿನ ಮುಖವುಳ್ಳ ದೇವತಾ ಶ್ರೇಷ್ಠರಿಂದ ಪೂಜಿಸಲ್ಪಡುವ, ಯಜುರ್ವೇದದಲ್ಲಿ ವಿಳಿತಗೊಂಡ ಮಂತ್ರಾಧಿ ದೇವತೆಯೆನಿಸಿದ, ಮಾತುಗಳಿಂದ ಪೂಜ್ಯಳೆನಿಸಿದ (ವಾಗಭಿಮಾನಿದೇವತೆಯಾದ) ಸರಸ್ವತಿಯುನ್ನುಳ್ಳ (ಸರಸ್ವತಿ ಶಕ್ತಿಯನ್ನು ತನ್ನಲ್ಲಿಯೇ ಧರಿಸಿರುವ) ಮೂರುಲೋಕಗಳನ್ನು ಸೃಷ್ಟಿಸಿದ. ಕ್ಷುತ್, ಪಿಪಾಸೆ, ದುಃಖ, ಮೋಹ, ಜರಾ, ಮರಣಾದಿ ಆರು ಊರ್ಮಿ (ತೆರೆ)ಗಳಿಂದ ದೂರಳಾದ, ಸತ್ಕರ್ಮನಿರತರಾದ ಋಷಿಗಳಿಂದ ನಮಸ್ಕರಿಸಿಕೊಳ್ಳಲು ಯೋಗ್ಯಳೆನಿಸಿದ, ಶಿವನ ಧರ್ಮವನ್ನೇ ಹೃದಯವೆಂಬ ಕಮಲದಲ್ಲಿ ತಾಳಿದವಳಾದ, ಆಮೆಯ ಚಿಪ್ಪಿನಂತೆ ಮಧ್ಯದಲ್ಲಿ ಸ್ವಲ್ಪ ಎತ್ತರಗೊಂಡ ಪಾದಗಳನ್ನುಳ್ಳ, ಯಮನ ಗರ್ವವನ್ನು ಮುರಿದ, ಬಿಸಿ ಕಿರಣನಾದ ಸೂರ್ಯನ ಶ್ರೇಷ್ಠವಾದ ಕಾಂತಿಯಂತಿರುವ ದೇಹಕಾಂತಿಯಿಂದ ಕೂಡಿರುವ, ಪರಮೇಶ್ವರನ ಹೃದಯಕ್ಕೆ ಆಪ್ಯಾಯಮಾನಳಾದ, ಮದದಿಂದ ದೂರಳಾದ, ವಿಪುಲವಾದ ದುಷ್ಟ ಮತಗಳನ್ನು ನಾಶಗೊಳಿಸಿದವಳಾದ, ಸುಖಕರಳಾದ, ಪರ್ವತರಾಜನ ಪುತ್ರಿಯಾದ ಭವಾನಿಯೇ (ರಕ್ಷಿಸು).

ಮೂವತ್ತೆಂಟನೆಯ ಆಶ್ವಾಸವು ಸಮಾಪ್ತವಾಯಿತು.

# ಏಕೋನಚತ್ವಾರಿಂಶಾಶ್ವಾಸಂ

## [ಕೆಂಬಾವಿ ಭೋಗಯ್ಯನ ಕಥೆ]

ಶ್ರೀರಮಣೀಯನಗೇಂದ್ರಸು
ತಾರಮಣಂ ತಾರಕಾರಿ ಗಜಮುಖಜನಕಂ
ತಾರಾದ್ರಿಮಂದಿರಂ ಜಿತ
ಮಾರಂ ಮಾಳ್ಕೆಮಗೆ ಸೌಖ್ಯಮಂ ಶಿವಲಿಂಗಂ ೧

॥ವ॥ ಮತ್ತಂ—

ಭೂವಳಯದೊಳೊಪ್ಪುವ ಕೆಂ
ಬಾವಿಯೆನಿಪ್ಪಗ್ರಹಾರದೊಳ್ಕಂಗೊಳಿಪಂ
ಭಾವಜಹರಭಕ್ತಂ ಚರ
ಸೇವಾಪರನರರೆ ಭೋಗನೆಂಬ ಮಹಾತ್ಮಂ ೨

ವ॥ ಅಂತು ಚರಚರಣಸಪರ್ಯಾಪರಾಯಣನೊಪ್ಪಿರೆ ಶಂಕರಂ ತದ್ಭಕ್ತಿಯೇಳ್ಗೆಯನಿಳೆಯೊಳ್ಮೆಱೆ ಯಲೆಳಸಿ—

ಪೆಗಲಲ್ಲಿ ಸತ್ತ ಕಱುವಂ
ಮಿಗೆ ಪೊತ್ತಂತ್ಯಜನ ಪರಿಜನಾಳ್ದಳಿಕಗ್ರೀ
ವೆಗಳೊಳ್ಪಸಿತಂ ಲಿಂಗಂ
ಸೊಗಯಿಸೆ ರುದ್ರಾಕ್ಷೆಯವನ ಗೃಹಕೇಳ್ತಂದಂ ೩

### ಕೆಂಬಾವಿ ಭೋಗಣ್ಣನ ಕಥೆ

೧. ಮಂಗಳಕರಳೂ, ಮನೋಹರಳೂ ಹಿಮಗಿರಿಸುತೆಯೂ ಆದ ಪಾರ್ವತೀ ದೇವಿಯ ರಮಣನೂ, ತಾರಕಾಸುರಾರಿಯಾದ ಷಣ್ಮುಖ, ಗಣಪತಿಯರ ತಂದೆಯೂ, ಬೆಳ್ಳಿಯ ಬೆಟ್ಟವೇ ಮನೆಯಾಗಿ ಉಳ್ಳವನೂ, ಮನ್ಮಥನನ್ನು ಗೆದ್ದವನೂ ಆದ ಶಿವಲಿಂಗನು ನಮಗೆ ಸೌಖ್ಯವನ್ನೀಟು ಮಾಡಲಿ. ವ॥ ಮತ್ತು ೨. ಭೂಮಂಡಲದಲ್ಲಿ ಶೋಭಿಸುವ 'ಕೆಂಬಾವಿ' ಎಂಬ ಹೆಸರಿನ ಅಗ್ರಹಾರದಲ್ಲಿ ಕಂಗೊಳಿಸುವ ಭೋಗಯ್ಯ ನೆಂಬ ಶಿವಭಕ್ತನು, ಅಬ್ಬಾ ! ಅವನು ಜಂಗಮ ಸೇವಾ ಪರನೆನಿಸಿದ್ದನು ! ವ॥ ಈ ರೀತಿ ಜಂಗಮ ಪಾದ ಸೇವಾ ಧುರಂಧರನು ಶೋಭಿಸುತ್ತಿರಲು ಶಂಕರನು ಅವನ ಭಕ್ತಿಯ ಅಧಿಕ್ಯವನ್ನು ಭೂಮಂಡಲದಲ್ಲಿ ಮೆರೆಸಬೇಕೆಂದು ಇಚ್ಛಿಸಿ ೩. ಹಣೆಯಲ್ಲಿ ಭಸ್ಮ, ಕೊರಳಲ್ಲಿ ಶಿವಲಿಂಗವನ್ನು ರುದ್ರಾಕ್ಷಿಗಳನ್ನು ಸೊಗಸಾಗಿ ಧರಿಸಿ ಶಂಕರನು ಅಂತ್ಯಜನೊಬ್ಬನ ವೇಷವನ್ನು ಧರಿಸಿ, ಹೆಗಲ ಮೇಲೆ ಸತ್ತ ಕರುವೊಂದನ್ನು ಹೊತ್ತು,

ಕಂಡಧಿಕ ಭಕ್ತಿಯಿಂ ಮುಂ
ಕೊಂಡೆಱಗುತ್ತವನ ಪೆಗಲ ಕಱುವಂ ತಾಂ ಕೆ
ಯ್ಕೊಂಡಾಂತು ತನ್ನ ಪೆಗಲೊ
ಳ್ಮಂಡಿತಮತಿ ತಂದನಾತ್ಮಮಂದಿರಕವನಂ ೪

ತೊಳೆದವನಂಘ್ರಿಯಂ ತಳೆದು ತತ್ಪದವಾರಿಯನುತ್ತಮಾಂಗದೊ
ಳ್ಪಳೆದನುರಾಗದಿಂ ಪಣಿದ ಭಕ್ತನನೀಕ್ಷಿಸಿ ತನ್ನ ವಕ್ತ್ರದೊ
ಳ್ಮೊಳೆನಗೆಯುಣ್ಮೆ ಕೇಳೆಮಗೆ ವತ್ಸದ ಮಾಂಸಮನುಣ್ಬ ನೇಮಮೀ
ಗಳೆ ಕಱುವಂ ಕರಂ ಕೊಱೆದು ಮಾಂಸಮನಟ್ಟುಣಲಿಕ್ಕು ಬೇಗದಿಂ ೫

ಎನ್ನ ನೇಮಮನಾಗಿಸಲ್ಕಱವಾಂತು ಜೇ[1]ಡರ ದಾಸನಂ
ನಿನ್ನೆ ಪೋಗಿ ಕಡಂಗಿ ಬೇಡಿದೊಡಾತನಾತ್ಮವಧೂಟಿಯಂ
ಮುನ್ನ ಕೇಳ್ದಪೆನೆಂದು ತಾಂ ಮನೆಗೆಯ್ದಿ ಬಾರದೆ ತಳ್ವಿದಂ
ನಿನ್ನ ಗೇಹಕೆ ಬಂದೆನಿಂದೆಲೆ ಭಕ್ತ ಮಾಡು ಮದಿಷ್ಟಮಂ ೬

ವ॥ ಎನೆ ಮಹಾಪ್ರಸಾದಮಂತೆಗೆಯ್ವೆನೆಂದು

ಭೋಗಯ್ಯನ ಮನೆಗೆ ಬಂದನು. ೪. (ಇಂಥ ಅಂತ್ಯಜನಾಕಾರದ ಶಿವನನ್ನು ಭೋಗಯ್ಯನು) ಕಂಡು ಭಕ್ತಿಯ ಆಧಿಕ್ಯದಿಂದ ಎದುರುಗೊಂಡು ನಮಸ್ಕರಿಸಿ, ಅವನ ಹೆಗಲ ಮೇಲಿನ ಕರುವನ್ನು ತಾನೇ ಇಸಿದುಕೊಂಡು ತನ್ನ ಹೆಗಲ ಮೇಲೆ ಹೊತ್ತು ಶ್ರೇಷ್ಠ ಬುದ್ಧಿಯ ಆತನು ತನ್ನ ಮನೆಗೆ ಅವನನ್ನು ಕರೆತಂದನು. ೫. (ಮನೆಯಲ್ಲಿ) ಆತನ ಪಾದಗಳನ್ನು ಭೋಗಯ್ಯನು ತೊಳೆದು ಆ ಪಾದೋದಕವನ್ನು ತಲೆಯ ಮೇಲೆ ಸಿಂಪಡಿಸಿಕೊಂಡನು. ಆಧಿಕ್ಯಗೊಂಡ ಅನುರಾಗದಿಂದ ನಮಸ್ಕಾರ ಮಾಡಿದ ಭಕ್ತನನ್ನು (ಆ ವೇಷಧಾರಿಯಾದ ಶಿವನು) ನೋಡಿ, ತನ್ನ ಮುಖದಲ್ಲಿ ಎಳೆ ನಗೆ ಮಿಂಚುತ್ತಿರಲು 'ಅಯ್ಯಾ ಕೇಳು : ನಮಗೆ ಕರುವಿನ ಮಾಂಸವನ್ನು ಊಟ ಮಾಡುವ ನೇಮವುಂಟು. ಈಗಲೇ ಈ ಕರುವನ್ನು ಕತ್ತರಿಸಿ ಬೇಗನೆ ಇದರ ಮಾಂಸದಿಂದ ಅಡಿಗೆಯನ್ನು ಮಾಡಿ ಊಟಕ್ಕಿಕ್ಕು ೬. ನಿನ್ನೆಯ ದಿನ ನನ್ನ ಈ ನೇಮವನ್ನು ನಡೆಸಿಕೊಡಬೇಕೆಂದು ಕರುವನ್ನು ಹೊತ್ತುಕೊಂಡು ಜೇಡರದಾಸಿಮಯ್ಯನನ್ನು ಕಂಡು ಉತ್ಸಾಹಗೊಂಡು ಕೇಳಿದೆನು. ಅವನು ತನ್ನ ಹೆಂಡತಿಯನ್ನು ಮೊದಲು ಕೇಳಬೇಕೆಂದು ಹೇಳಿ ಮನೆಗೆ ಹೋಗಿ ತಿರುಗಿಬಾರದೆ ತಡಮಾಡಿ ಬಿಟ್ಟನು. (ಆದ್ದರಿಂದ) ಎಲೈ ಭಕ್ತನೇ ಈಗ ನಿನ್ನ ಮನೆಗೆ ಬಂದಿದ್ದೇನೆ. ನನ್ನ ಇಷ್ಟಾರ್ಥವನ್ನು ನಡೆಸು' ವ॥ ಎನ್ನಲಾಗಿ ಮಹಾ

1 ಚೇ (ಗ)

ಖಾರಾಮ್ಲಲವಣಮುಖ ಸಂ
ಭಾರಂಗಳ್ವೆರಸಿ ಮಾಂಸಮಂ ಪಚಿಯಿಸಿ ಸ
ತ್ಸೌರಭಮೆಸೆವಡಗಂ ಗುಣ
ವಾರಿಧಿಯುಣಲಿಕ್ಕಿ ತಣಿಪಿದಂ ತಾಪಸನಂ ೭

ವ॥ ಆಗಳಾ ಗ್ರಾಮವಾಸಿಗಳಾದ ಪಾರ್ವರದಂ ಕಂಡು ಕುಪಿತರಾಗಿ—

ಘುಡುಘುಡಿಸುತ್ತೆ ಕಲ್ದಡಿಗಳಂ ತಳೆದಾರ್ದಿಳಿವೆಳ್ದು ಪೌಳಿಯಂ
ನಡೆ ನಡೆ ಕೇರ್ಗಳಂ ಕೆಡಪು ಬಲ್ಪಡೆಯಂ ಮುರಿದು ಪೊಕ್ಕು ಗೇಹದೊ
ಳ್ಪುಡುಕು ನಿರೀಕ್ಷಿಸಂತ್ಯಜನ ಪೆರ್ದಡಿಯಿಂ ಪೊಡೆ ಪೋಗಲೀಯದಿ
ರ್ಕಡೆಗೆನುತುರ್ಬಿ ಬೊಬ್ಬಿರಿದು ಮುತ್ತಿದರಾ ಗೃಹಮಂ ದ್ವಿಜಾಧಮರ್ ೮

ವ॥ ಅಂತು ಮುತ್ತಿ ಮುಂಬರಿದು ನೋಳ್ಪಾಗಳಾ ತಪಸ್ವಿಯದೃಶ್ಯಮಪ್ಪುದುಮನಿತ ಱೊಳಾ ಕುಮತಿಗಳ ಕಳಕಳಮಂ ಭೋಗಯ್ಯಂ ಕಂಡು ಕಡುಕನಲ್ದು—

ಎಲೆ ಎಲೆ ಭೂಸುರಾಧಮರಿರಾ ಹರಭಕ್ತನಿವೇಶ್ಯಮಪ್ಪ ಮ
ನ್ನಿಲಯಮಶಕ್ಯಮೊರ್ಮೆ ನಿಮಗಂ ಪುಗಲಗ್ರಜರಾದವರ್ಗೆ ನಿ
ಶ್ಚಲ ಧೃತಿಯಿಂದವೆಂದೆನೆ ದಲಂತ್ಯಜನೆಂತೊಳಪೊಕ್ಕಪಂ ಮಹೋ
ಜ್ವಲ ಶಿವಮೂರ್ತಿ ಪೊಕ್ಕನವನಂ ತಿಳಿವಿಲ್ಲದೆ ನಿಂದೆಗೆಯ್ವುದೇ ೯

ಪ್ರಸಾದ ಹಾಗೇ ಮಾಡುತ್ತೇನೆ, ಎಂದು ೭. ಕಾರ, ಹುಳಿ, ಉಪ್ಪುಗಳೇ ಮುಖ್ಯವಾದ ಸಂಬಾರಗಳನ್ನು ಬೆರಸಿ, ಮಾಂಸವನ್ನು ಬೇಯಿಸಿ, ಒಳ್ಳೆಯ ಸುವಾಸನೆಯಿಂದ ಶೋಭಿಸುವ ಮಾಂಸಾಹಾರವನ್ನು ಸದ್ಗುಣಗಳಿಗೆ ಸಮುದ್ರದೋಪಾದಿಯಲ್ಲಿರುವ ಭೋಗಯ್ಯನು ಊಟಕ್ಕಿಕ್ಕಿ ಆ ತಾಪಸನನ್ನು ತಣಿಸಿದನು. ವ॥ ಆಗ ಆ ಅಗ್ರಹಾರ ವಾಸಿಗಳಾದ ಬ್ರಾಹ್ಮಣರು ಅದನ್ನು ಕಂಡು ಕೋಪಗೊಂಡು ೮. ಆ ದ್ವಿಜಾಧಮರು ಆರ್ಭಟಿಸುತ್ತ ಕೈಯಲ್ಲಿ ಕಲ್ಲುಗಳನ್ನೂ ದೊಣ್ಣೆಗಳನ್ನೂ ಹಿಡಿದು ತೂಗಾಡುತ್ತ (ಮನೆಯ) ಪೌಳಿಯನ್ನು ಕೆಡವಿ (ಒಡೆದು ಹಾಕಿ), ನಡೆ ನಡೆಯಿರಿ ಮನೆಯ ಗೋಡೆ ಗಳನ್ನು ಕೆಡವಿರಿ. ದಪ್ಪನಾದ ಕದದ ಪಡಕುಗಳನ್ನು ಮುರಿದು ಒಳಗೆ ಹೊಕ್ಕು ಅಂತ್ಯಜ ನನ್ನು ಹುಡುಕು, ಅತ್ತ ಇತ್ತ ಓಡಿಹೋಗಲು ಅವಕಾಶ ಕೊಡದೆ ಹುಡುಕಿ ದಪ್ಪನಾದ ದೊಣ್ಣೆಯಿಂದ ಹೊಡೆಯಿರಿ ಎನ್ನುತ್ತ ಬೊಬ್ಬೆ ಹಾಕುತ್ತ ಉಬ್ಬಿದವರಾಗಿ ಆ ಮನೆಯನ್ನು ಮುತ್ತಿದರು. ವ॥ ಆ ರೀತಿಯಿಂದ ಮನೆಯನ್ನು ಮುತ್ತಿ, ಮುಂದಕ್ಕೆ ನಡೆದು ನೋಡುತ್ತಿರುವಾಗ ಆ ತಪಸ್ವಿಯು ಮಾಯವಾಗಲಾಗಿ, ಅಷ್ಟರಲ್ಲಿ ಆ ದುರ್ಬುದ್ಧಿಯ ಜನರ ಕೋಲಾಹಲವನ್ನು ಭೋಗಯ್ಯನು ಕಂಡು ಅತಿ ಕೋಪಗೊಂಡು ೯. ಎಲೆಲೇ, ದ್ವಿಜಾಧಮರುಗಳಿರಾ, ನಿಶ್ಚಲವಾದ ಧೈರ್ಯದಿಂದ ಅಗ್ರಜರನಿಸಿದ ನಿಮಗೇ ಹರಭಕ್ತನಾದವನ ವಾಸಸ್ಥಳವಾದ ನನ್ನ ಈ ಗೃಹವನ್ನು ಒಂದು ಸಲವೂ ಪ್ರವೇಶ ಮಾಡಲಶಕ್ಯವಾಗದಿರುವಾಗ, ಅಂತ್ಯಜನಾದವನು ಹೇಗೆ ಒಳ ಹೋಗಲು ಶಕ್ಯ ? ಹೊಕ್ಕವನು ಅತ್ಯಂತ ಉಜ್ವಲನಾದ ಶಿವಮೂರ್ತಿಯು, ಅರಿವಿಲ್ಲದೆ, ನಿಂದೆ

ಪುರಹರಭಕ್ತದೂಷಣಪರಾಯಣರೆಂದೆನಿಸಿರ್ದ ನಿಮ್ಮನಾ
ದರದೊಳೆ ನೋಡಲುಂ ನುಡಿಯಿಸಲ್ಕೆಮಗಕ್ಕುಮೆ ಸಾಲ್ಗುಮೀ ಪುರಾಂ
ತರದೊಳಗಿರ್ಪುದಿನ್ನೆಮಗೆ ಮದ್ಗೃಹವೃತ್ತಿಯನಿಲ್ಲಿ ನೀಮೆ ಕೊಂ
ಡಿರಿಮೀರದೆಮ್ಮ ಸಾಮಿ[1]ಗಳ ಪಿಂದನೆ ಪೋದಪೆವಿಂದು ಬೇಗದಿಂ ೧೦

ಭೋಗಯ್ಯಂ ನಿಶ್ಚಲಮತಿ
ಯಾಗಳೆ ಪೊಱಮಟ್ಟು ಪೊಳಲನೆಯ್ದುವ ಪದದೊ
ಳ್ದೇಗುಲದೊಳ್ಶೈವದ್ವಿಜ
ರಾಗರದೊಳ್ನೆಲಸಿ ನಿಂದ ಘನಲಿಂಗಂಗಳ್ ೧೧

ಉಳಿದುದ್ಯತ್ಪೀಠಮಂ ಕೆತ್ತಿಸೆವ ಪೃಥುಕವಾಟಂಗಳಂ ನುರ್ಗುತುಂ ಕೇ
ರ್ಗಳನಾಗಳ್ಬೀಳ್ವಿನಂ ಪಾಯ್ದೊಡೆವುತಿದಿರ ಪೂಗಲ್ಗಳಂ ನೂಂಕುತಂ ಮಂ
ಜುಳಪಕ್ಷದ್ವಾರದಿಂದಂ ನುಸುಳುತೆ ಪೊಱಮಟ್ಟುರ್ವಿಗತ್ಯದ್ಭುತಂ ಸಂ
ಗಳಿಪನ್ನಂ ಭಕ್ತಮಾರ್ಗಂಬಿಡಿದು ಬಳಿಯನೇಳ್ತಂದವಾನಂದದಿಂದಂ ೧೨

ವ॥ ಮತ್ತಮಲ್ಲಿ—

ನಲಿವುತ್ತುಂ ಪೋಪ ಲಿಂಗಪ್ರತತಿಯುರುಳ್ವ ಲಿಂಗಪ್ರತಾನಂ ನಭೋಮಂ
ಡಲದೊಳ್ ಪಾಯ್ತುರ್ಪ ಲಿಂಗಪ್ರಕರಮಿಳೆಯೊಳಲ್ಲಲ್ಲಿ ನಿಂದೆಯ್ದುತಿರ್ಪ

ಮಾಡುವುದೇ ? ೧೦. ಪರಮೇಶ್ವರನನ್ನು ದೂಷಣೆಯಲ್ಲಿ ಆಸಕ್ತರೆನಿಸಿರುವ ನಿಮ್ಮನ್ನು ಆದರ ಭಾವದಿಂದ ನೋಡಲೂ, ನುಡಿಸಲೂ ಕೂಡ ನಮಗೆ ಸಾಧ್ಯವಾದೀತೇ ? ಈ ಪಟ್ಟಣ ಮಧ್ಯದಲ್ಲಿ ಇನ್ನು ನಮಗೆ ಇರಲು ಶಕ್ಯವಿಲ್ಲ. ನನ್ನ ಈ ಮನೆಯನ್ನು ನೀವೇ ತೆಗೆದುಕೊಂಡು ವಾಸ ಮಾಡಿಕೊಂಡು ಇರಿ. ಈಗಲೇ ಬೇಗನೆ ತಪ್ಪದೆ ನಾವು ನಮ್ಮ ಸ್ವಾಮಿಗಳ ಹಿಂದೆ ಹೋಗುತ್ತೇವೆ. ೧೧–೧೨. (ಹೀಗೆಂದು) ನಿಶ್ಚಲ ಭಾವದ ಭೋಗಯ್ಯನು ಆ ಕೂಡಲೇ ಪಟ್ಟಣವನ್ನು ಬಿಟ್ಟು ಹೊರ ಹೊರಡುತ್ತಿರುವ ಸಮಯದಲ್ಲಿ ದೇಗುಲಗಳಲ್ಲಿಯೂ. ಶೈವ ಬ್ರಾಹ್ಮಣರ ಮನೆಗಳಲ್ಲಿಯೂ ನೆಲಸಿ ನಿಂತಿದ್ದ ಶ್ರೇಷ್ಠವಾದ ಲಿಂಗಗಳು ಎತ್ತರವಾದ ಪೀಠಗಳನ್ನು ತ್ಯಜಿಸಿ, ಮುಚ್ಚಿಕೊಂಡಿರುವ ಶೋಭಿಸುವ ದೊಡ್ಡ ದೊಡ್ಡ ಕದಗಳನ್ನು ನುಚ್ಚು ನುರಿ ಮಾಡಿ, ಗೋಡೆಗಳು ಉರುಳಿ ಬೀಳುವಂತೆ ಹಾಯ್ದು ಒಡೆಯುತ್ತ, ಎದುರಿನಲ್ಲಿರುವ ಹೂವು ಕೆತ್ತಿದ ಕಲ್ಲುಗಳನ್ನು ತಳ್ಳುತ್ತ, ಮನೋಹರವಾದ ಪಕ್ಕದ ಬಾಗಿಲಿನಿಂದ ನುಗ್ಗುತ್ತ, ಹೊರ ಹೊರಟು ಭೂಮಂಡಲದಲ್ಲಿ ಇದು ಅತ್ಯದ್ಭುತವೆಂದೆನಿಸುವಂತೆ ಆನಂದದಿಂದ ಭಕ್ತನಾದ ಭೋಗಯ್ಯನು ಹೋದ ಮಾರ್ಗವನ್ನೇ ಹಿಡಿದು ಆತನ ಹತ್ತಿರಕ್ಕೆ ಬಂದವು. ವ॥ ಮತ್ತು ಅಲ್ಲಿ ೧೩–೧೪. ನಲಿದಾಡುತ್ತ ಹೋಗುವ ಲಿಂಗ ಸಮೂಹ,

[1] ಸ್ವಾ(ಮು)

ಜ್ವಲಲಿಂಗಶ್ರೇಣಿ ಬೇಗಂ ಪರಿವ ವಿಮಳ ಲಿಂಗವ್ರಜಂ ಸೋಂಕದೊಳ್ಪಿಂ
ನೆಲನಂ ಚೊಟ್ಟುದ್ದದೊಳ್ಕುಪ್ಪಳಿಸಿ ಕುಣಿವ ಲಿಂಗೋತ್ಕರಂ ಮಾಣದಾಗಳ್ ೧೩

ಒಲೆದೊಲೆದು ನಡೆವ ಲಿಂಗಾ
ವಳಿ ಮುಂದಕ್ಕೋಡಿ ನಿಲ್ವ ಲಿಂಗಸಮೂಹಂ
ಕೆಲಬಲಕೆ ನಿಮಿರ್ದು ತಳರ್ವ
ಜ್ವಲಲಿಂಗಪ್ರಸರಮೇಂ ಮನಂಗೊಳಿಸಿದುದೋ ೧೪

ಭೋಗಯ್ಯನೊಳೊದವಿರ್ದನು
ರಾಗದಿನೊಡವೋಪ ಲಿಂಗತತಿಯೊಡಗೂಡು
ತ್ತಾಗಳೆ ಪೊಳಲ ಸುಭಕ್ತರ
ಪೂಗಂ ಪೊಱಮಟ್ಟು ತಳರ್ದುದತಿ ಸಂಭ್ರಮದಿಂ ೧೫

ಆಡುತ್ತುಂ ಕೇಳಿಕೆಯೊಡ
ಗೂಡುತ್ತುಂ ತಳರ್ವ ಲಿಂಗತತಿಯನಲಂಪಿಂ
ನೋಡುತ್ತುಂ ಮೃಡನಂಘ್ರಿಯ
ಪಾಡುತ್ತುಂ ನಡೆದುದಲ್ಲಿ ಶರಣಸಮೂಹಂ ೧೬

ವ॥ ಇಂತು ಕಡು ಸಡಗರಂ ಮಿಗೆ ಭೋಗಿದೇವಂ ಗಮಿಯಿಸುತ್ತುಮಿರ್ಪಿನಮಿತ್ತಲ್—

ಉರುಳುತ್ತ ಹೋಗುವ ಲಿಂಗಗಳ ಗುಂಪು, ಆಕಾಶ ಮಂಡಲದಲ್ಲಿ ಹರಿದು ಬರುತ್ತಿರುವ-ಲಿಂಗಗಳ ಪ್ರಕರ, ಭೂಮಿಯಲ್ಲಿ ಅಲ್ಲಲ್ಲಿ ನಿಂತುಕೊಂಡು ಹೋಗುತ್ತಿರುವ ಲಿಂಗಗಳ ಶ್ರೇಣಿ, ವೇಗವಾಗಿ ಓಡುತ್ತಿರುವ ಪರಿಶುದ್ಧ ಲಿಂಗಗಳ ಸಮೂಹ, ನೆಲವನ್ನು ಮುಟ್ಟದೆಯೇ ಚೆಂದವಾಗಿ ಚೊಟ್ಟುದ್ದಕ್ಕೆ ಕುಪ್ಪಳಿಸುತ್ತ ಕುಣಿದಾಡಿ ಹೋಗುತ್ತಿರುವ ಲಿಂಗಗಳ ಸಮೂಹ, ತಪ್ಪದೆ ಆಗ ತೂಗಾಡುತ್ತ ತೂಗಾಡುತ್ತ ನಡೆಯುತ್ತಿರುವ ಲಿಂಗಗಳ ಸಾಲು, ಮುಂದಕ್ಕೆ ಓಡಿ ನಿಲ್ಲುವ ಲಿಂಗಗಳ ಅಕ್ಕ ಪಕ್ಕಕ್ಕೆ ನಿಗುರಿಕೊಂಡು ಸಾಗುತ್ತಿರುವ ಉಜ್ವಲವಾದ ಲಿಂಗಗಳ ಸಮೂಹವು ಅದೇನು ಮನೋಹರವಾಗಿತ್ತೋ! ೧೫. ಭೋಗಯ್ಯನಲ್ಲಿ ಉಂಟಾದ ಅನುರಾಗದಿಂದ ಅವನನ್ನು ಅನುಸರಿಸಿ ಹೋಗುವ ಲಿಂಗಸಮೂಹದೊಡನೆ ಕೂಡಿಕೊಂಡು ಆ ಕೆಂಬಾವಿಯಲ್ಲಿದ್ದ ಸದ್ಭಕ್ತರ ಸಮೂಹವೂ ಅತ್ಯಂತ ಸಂಭ್ರಮದಿಂದ ಬೆನ್ನು ಹತ್ತಿ ಹೊರಟಿತು. ೧೬. ಆಡುತ್ತಾ, ಕುಣಿದಾಟದಲ್ಲಿ ತಾವೂ ಕೂಡಿಕೊಳ್ಳುತ್ತ ಹೋಗುತ್ತಿರುವ ಲಿಂಗಗಳ ಸಮೂಹವನ್ನು ಸಂಭ್ರಮದಿಂದ ನೋಡುತ್ತ, ಪರಶಿವನ ಪಾದಗಳನ್ನು ಸ್ತೋತ್ರ ಮಾಡುತ್ತ ಶರಣರುಗಳ ಸಮೂಹವು ಅಲ್ಲಿ ನಡೆದಿತ್ತು. ವ॥ ಹೀಗೆ ಅತ್ಯಂತ ಸಂಭ್ರಮಾತಿಶಯದಿಂದ ಭೋಗಯ್ಯನು

ಕೆಱೆ ಬಾವಿ ತೊಱೆಯ ನೀರ್ಗ
ಳ್ಬಱತುವು ನಳಿನೋತ್ಪಳಾಳಿ ಕೊಱಗಿದುವೆತ್ತಂ
ಬಿಱುಗಾಳಿ ಬೀಸಿದುದು ಪಶು
ವಱಚಿದುವು ಬಳಲ್ದು ಬಾಡಿದುವು ಸಸ್ಯಂಗಳ್ ೧೭

ಮೊಳಗಿದುದಂಬರಂ ಪಗಲೊಳಂಧತಮಂ ಕವಿದತ್ತು ಕಂಪಿಸಿ
ತ್ತಿಳೆ ನರಿಯುಳ್ದುವಾಗಸದೊಳೇಳ್ದುವು ಭೋಂಕನೆ ಧೂಮಕೇತುಗ
ಳ್ಪುೞಿತುದು ಭಕ್ಷ್ಯಭೋಜ್ಯತತಿ ಬೊಬ್ಬಿಱಿದಾರ್ದುದು ಕಂಭಮಲ್ಲಿ ಸೂ
ರ್ಗಳೊಳೊಗೆದತ್ತು ಪೆರ್ವೊಗೆ ಪುರಾಧ್ವದೊಳುರ್ವಿದುದುಜ್ವಳಾನಳಂ ೧೮

ವ॥ ಇಂತು ನೆಗಳ್ದುತ್ಪಾತಶತಮನಾ ವಿಪ್ರರ್ಕಂಡು ಕಡು ಭೀತರಾಗಿ ಕಂಪಿಸಿ ಭೋಗಯ್ಯನವಜ್ಞಾನಿಮಿತ್ತಮೀ ವಿಪರೀತಮೊಗೆದುದಾತನಂ ಶರಣ್ಬೊಕ್ಕೊಡಲ್ಲದೆಮಗೆ ಬಾಳ್ತೆಯಿಲ್ಲೆಂದೆಲ್ಲರ್ನೆರೆದಾ ಲಿಂಗಸಂಘಸಮಾವೃತನಿರ್ದೆಡೆಗೆ ಪರಿತಂದು ಸಾಷ್ಟಾಂಗಮೆಱಗಿ ಪಲ್ಗಿಱಿದು ಪುಲ್ಗಚ್ಚಿ ಕಾರ್ಪಣ್ಯಂದೋಱಿ ಕೆಯ್ಮುಗಿದು ನಿಂದು—

ಎಲೆ ಕರುಣಾಬ್ಧಿ ಕಾವುದು ಮದಾಂಧರನಲ್ಪರನಜ್ಞಭಾವಸಂ
ಕಲಿತರನನ್ಯಥಾ ಗತಿವಿಹೀನರನೆಮ್ಮನೆನುತ್ತೆ ನೋಡದಿ

ಹೋಗುತ್ತಿರುವಾಗ ಈ ಕಡೆಗೆ ೧೭. ಕೆರೆ, ಬಾವಿ, ಹೊಳೆಗಳ ನೀರುಗಳು ಬತ್ತಿದವು; ಕಮಲಗಳ, ಕನ್ನೈದಿಲೆಗಳ ಸಮೂಹವು ಬತ್ತಿ ಹೋದವು; ಎಲ್ಲ ಕಡೆಗೂ ಬಿರುಗಾಳಿಯು ಬೀಸಿತು: ಪಶುಗಳು ಕಿರಿಚಾಡತೊಡಗಿದವು; ಸಸ್ಯಗಳೆಲ್ಲ ಬಳಲಿ ಬತ್ತಿ ಹೋದವು. ೧೮. ಆಕಾಶವು ಕೂಗಿಕೊಂಡಿತು; ಹಗಲಿನಲ್ಲಿ ದಟ್ಟವಾದ ಕತ್ತಲೆ ಕವಿಯಿತು; ಭೂಮಿ ನಡುಗಿತು; ನರಿಗಳು ಕೂಗತೊಡಗಿದವು; ಆಕಾಶದಲ್ಲಿ ಒಮ್ಮಿಂದೊಮ್ಮೆಗೆ ಧೂಮಕೇತುಗಳು ಮೂಡಿದುವು; ಭಕ್ಷ್ಯ ಭೋಜ್ಯಗಳ ಸಮೂಹವೆಲ್ಲ ಹುಳುತುವು. (ಹುಳು ಬಿದ್ದವು) ಮನೆಯ ಕಂಬಗಳು ಬೊಬ್ಬೆ ಹಾಕುತ್ತ ಚೀರಾಡಿದವು; ಮನೆಯ ಸೂರುಗಳಲ್ಲಿ ಭಾರಿ ಹೊಗೆ ಕವಿಯಿತು. ಪಟ್ಟಣದ ಬೀದಿಗಳಲ್ಲಿ ಉಜ್ಜ್ವಳವಾದ ಬೆಂಕಿಯು ಹೆಚ್ಚಾಯಿತು ವ॥ ಈ ಪ್ರಕಾರವಾಗಿ ಉಂಟಾದ ನೂರಾರು ಅಪಶಕುನಗಳನ್ನು ಆ ಕೆಂಬಾವಿಯ ಬ್ರಾಹ್ಮಣರು ಕಂಡು, ಅತಿ ಭಯಗೊಂಡು, ನಡುಗುತ್ತ, ಭೋಗಯ್ಯನ ಅವಹೇಳನದ ಕಾರಣವಾಗಿ ಈ ವಿಪರೀತ (ತಿರುಗುಮುರುಗು) ಪರಿಸ್ಥಿತಿಯುಂಟಾಯಿತು. ಆತನನ್ನು ಶರಣು ಹೊಕ್ಕಲ್ಲದೆ ನಮಗೆ ಜೀವನವೇ ಇಲ್ಲ; ಎಂದು ಎಲ್ಲ ದ್ವಿಜರೂ ಸೇರಿ, ಆ ಲಿಂಗ ಸಮುದಾಯದಿಂದ ಸುತ್ತುವರಿಯಲ್ಪಟ್ಟ ಭೋಗಯ್ಯನು ಇದ್ದ ಸ್ಥಳಕ್ಕೆ ಓಡಿಬಂದು ಸಾಷ್ಟಾಂಗಪೂರ್ವಕ ನಮಸ್ಕಾರಮಾಡಿ, ಹಲ್ಲನ್ನು ಕಿರಿದು ಬಾಯಲ್ಲಿ ಹುಲ್ಲು ಕಡ್ಡಿಯನ್ನು ಕಚ್ಚಿ, ಕಾರ್ಪಣ್ಯ ಭಾವವನ್ನು ತೋರಿಸಿಕೊಂಡು, ಕೈಗಳನ್ನು ಮುಗಿದು ನಿಂತು ೧೯. ಎಲೈ ಕರುಣಾ ಸಮುದ್ರನಾದ ಭೋಗಯ್ಯನೇ, ಮದದಿಂದ ಕಣ್ಣು ಕಾಣದವರೂ, ಅಲ್ಪರೂ, ಅಜ್ಞಾನಭಾವದಿಂದ ಕೂಡಿದವರೂ, (ನಿನ್ನನ್ನು ಬಿಟ್ಟು) ಬೇರೆ ಗತಿಯಿಲ್ಲದವರೂ, ಆದ

ಖಿಲರೆನಿಪೆಮ್ಮ ತಪ್ಪುಗಳನಿಂದಭಯಂಗುಡು ದೇವ ನೀನೆನು
ತ್ತುಲರ್ದತಿ ದೈನ್ಯದಿಂ ಪೊಗಳೆ ಕೇಳ್ದು ಮುಗುಳ್ನಗೆ ನಕ್ಕು ಭೋಗಯಂ ೧೯

ಕರುಣಾನಿಧಿಯಭಯಂಗುಡು
ತಿರದೆ ಧರಾಮರಕದಂಬಕೊಡವರೆ ಲಿಂಗೋ
ತ್ಕರಮರಿದೆನೆ ಸರಭಸಮಾ
ಪುರಿಗೆಯ್ದಿದನಪ್ರತರ್ಕ್ಯ ಮಹಿಮಾಧಾರಂ ೨೦

ವ॥ ಅಂತೆಯ್ದಿ ನಿಜಭವನಮಂ ಪುಗುವಾಗಳಾ ಕೆಂಬಾವಿವೊಳಲ ಲಿಂಗಂಗಳಸವಸದಿಂ ತಂತಮ್ಮ ಗುಡಿಗಳುಮಂ ಪೀಠಂಗಳುಮಂ ಪಲ್ಲಟಿಸಿ—

ಭೀಮೇಶ್ವರಲಿಂಗಂ ಘನ
ರಾಮೇಶ್ವರಲಿಂಗಪೀಠದೊಳ್ನೆಲಸಿದುದಾ
ರಾಮೇಶ್ವರಲಿಂಗಂ ಘನ
ಭೀಮೇಶ್ವರಲಿಂಗಪೀಠದೊಳಮತಿ ರಯದಿಂ ೨೧

ಸುರಪೂಜ್ಯಲಿಂಗತತಿ ಸಿದ್ಧಪೂಜ್ಯಭಾ
ಸುರಲಿಂಗಪೀಠದೊಳೆ ದೇವಪೂಜ್ಯಂ ಬಂ
ಧುರಲಿಂಗಪೀಠದೊಳೆ ಸಿದ್ಧಪೂಜ್ಯ ಸೌಂ
ದರಲಿಂಗರಾಜಿ ನೆಲಸಿರ್ದುವದ್ಭುತಂ ೨೨

ನಮ್ಮನ್ನು ರಕ್ಷಿಸು ! ದುಷ್ಟರೆನಿಸಿರುವ ನಮ್ಮ ತಪ್ಪುಗಳನ್ನು ಎಣಿಸಬೇಡ (ನೋಡಬೇಡ) ದೇವ. ನೀನು ಈಗಲೇ ನಮಗೆ ಅಭಯವನ್ನು ಕೊಡು ! ಎನ್ನುತ್ತ ಅತಿ ದೈನ್ಯೋಕ್ತಿಗಳಿಂದ ಹೊಗಳಲಾಗಿ ಭೋಗಯ್ಯನು ಕೇಳಿ ಮುಗುಳು ನಗೆ ನಗುತ್ತಿದ್ದನು. ೨೦. ಕರುಣಾನಿಧಿಯೂ, ಊಹಿಸಲಶಕ್ಯವಾದ ಮಹಿಮೆಗಳಿಗೆ ಆಧಾರ ಭೂತನೂ ಆದ ಆ ಭೋಗಯ್ಯನು ಅವರೆಲ್ಲರಿಗೂ ಅಭಯವನ್ನು ಕೊಡುತ್ತ, ಆ ಬ್ರಾಹ್ಮಣರುಗಳ ಸಮೂಹವೆಲ್ಲ ಬೆನ್ನುಹತ್ತಿ ಬರಲು, ಲಿಂಗಗಳ ಸಮೂಹವೂ ಕೂಡ ಇದು ಅಸಾಧ್ಯವೆನ್ನುವಂತೆ ಬೆನ್ನುಹತ್ತಿ ಬರುತ್ತಿರಲು ಅತಿ ವೇಗದಿಂದ ಕೆಂಬಾವಿ ಪಟ್ಟಣಕ್ಕೆ ಬಂದನು. ವ॥ ಆ ರೀತಿ ಬಂದು, ತನ್ನ ಮನೆಯನ್ನು ಪ್ರವೇಶಿಸುವಾಗ ಆ ಕೆಂಬಾವಿಪಟ್ಟಣದ ಲಿಂಗಗಳು ಆತುರದಲ್ಲಿ ತಮ್ಮ ತಮ್ಮ ಗುಡಿಗಳನ್ನೂ ಪೀಠಗಳನ್ನು ಅದಲು ಬದಲುಮಾಡಿಕೊಂಡು ೨೧. ಭೀಮೇಶ್ವರಲಿಂಗವು ರಾಮೇಶ್ವರಲಿಂಗದ ಪೀಠದ ಮೇಲೆ ಬಂದು ಕುಳಿತು ಕೊಂಡಿತು; ಆ ರಾಮೇಶ್ವರ ಲಿಂಗವು ಭೀಮೇಶ್ವರ ಲಿಂಗದ ಪೀಠದ ಮೇಲೆ ಅತಿಶೀಘ್ರವಾಗಿ ಕುಳಿತಿತು. ೨೨. ದೇವತೆಗಳು ಪೂಜಿಸುವ ಲಿಂಗಗಳ ಸಮೂಹವು, ಸಿದ್ಧರುಗಳು ಪೂಜೆಮಾಡುವ ಪ್ರಕಾಶಿಸುವ ಪೀಠದಮೇಲೂ, ದೇವತೆಗಳು ಪೂಜಿಸುವ ಭದ್ರವಾದ ಲಿಂಗ ಪೀಠದಲ್ಲಿ ಸಿದ್ಧರುಗಳು ಪೂಜಿಸುವ ಸುಂದರವಾದ ಲಿಂಗಗಳ ಸಮೂಹವೂ ಅದ್ಭುತ

ಲಿಂಗಂಗಳ್ಭೋಗಯ್ಯನ
ಪಿಂಗಡೆಯೊಳ್ ತಳರ್ದ ತಮ್ಮ ಪರಿಯಱಿಪಲ್ಕೆಂ
ದಂಗವಿಸಿ ಜಗಕೆ ನಿಜಪೀ
ಠಂಗಳ ಪಲ್ಲಟಿಸಿ ನೆಲಸುತೀಗಳುಮೆಸೆಗುಂ ೨೩

ಪುರಮೆಂದಿನಂತೆ ಮಂಗಳ
ತರಮಾದುದು ಜಂಗಮಾಂಘ್ರಿಪೂಜಾಸುಖದಿಂ
ಕರಮೆಸೆದಂ ಭೋಗಯ್ಯಂ
ಪರಿದೆಣ್ದೆಸೆದೀವೆ ತಮ್ಮ ಜಸಮಾ ಪೊಳಲೊಳ್ ೨೪

ಹರಭಕ್ತನಾದ ಜಾತಿಯೊ
ಳಿರುತಿರ್ದೊಡಮವನೆ ಪೂಜ್ಯನಖಿಳರ್ಗೆಂದೀ
ಶ್ವರನಱಿಪಿದನಂತದಱಿಂ
ನರೇಂದ್ರ ಕೇಳ್ಭಕ್ತರಲ್ಲಿ ಕುಲಮಱಸುವುದೇ ೨೫

ವ॥ ಮತ್ತಂ—

ಶ್ವಪಚಯ್ಯನೆಂಬ ಭಕ್ತಂ
ವಿಪಿನಾಂತರಶುದ್ಧದೇಶದೊಳ್ ಶಂಭುಗೆ ತಾ
ನುಪಹಾರಮನೆಸಗುತ್ತುಂ
ಸುಪವಿತ್ರಚರಿತ್ರನಿರ್ದನಿರ್ಪನ್ನೆವರಂ ೨೬

ವೆನ್ನುವಂತೆ ನೆಲಸಿದವು. ೨೩. ಲಿಂಗಗಳು ಭೋಗಯ್ಯನ ಹಿಂದುಗಡೆಯಲ್ಲಿ ಹರಿದು ಬಂದ ತಮ್ಮ ರೀತಿಯನ್ನು ಜಗತ್ತಿಗೆ ತಿಳಿಸುವುದಕ್ಕೆಂದು ಇಷ್ಟಪಟ್ಟು ತಮ್ಮ ತಮ್ಮ ಪೀಠಗಳನ್ನು ಪಲ್ಲಟಗೊಳಿಸಿ ನೆಲಸುತ್ತ ಈಗಲೂ ಶೋಭಿಸುತ್ತಿರುವುವು. ೨೪. ಕೆಂಬಾವಿ ಪಟ್ಟಣವು ಎಂದಿನ ಹಾಗೆ ಮಂಗಳಕರವಾಯಿತು; ಭೋಗಯ್ಯನು ಜಂಗಮಪಾದ ಪೂಜಾ ಸುಖದಿಂದ ತನ್ನ ಯಶಸ್ಸು ಎಂಟುದಿಕ್ಕಿನಲ್ಲೂ ಹರಿದು ತುಂಬುವಂತೆ, ಆ ಪಟ್ಟಣವಲ್ಲಿ ಚೆನ್ನಾಗಿ ಶೋಭಿಸುತ್ತಿದ್ದನು. ೨೫. ಮಹಾರಾಜನೇ, ಕೇಳು : ಹರಭಕ್ತನಾದವನು ಯಾವ ಜಾತಿಯೊಳಗೆ ಇರುತ್ತಿದ್ದರೂ ಅವನೇ ಸಮಸ್ತರಿಗೂ ಪೂಜ್ಯನೆಂದು ಈಶ್ವರನೇ ತಿಳಿಸಿದ್ದಾನೆ. ಆದ್ದರಿಂದ ಭಕ್ತರಲ್ಲಿ ಕುಲವನ್ನು ಹುಡುಕುವುದೇ ? * ವ॥ ಮತ್ತು ಶ್ವಪಚಯ್ಯನ ಕಥೆ ೨೬–೨೮. ಶ್ವಪಚಯ್ಯನೆಂಬ ಮಹಾ ಭಕ್ತನು ಅರಣ್ಯ ಮಧ್ಯದ ಪರಿಶುದ್ಧ ಸ್ಥಳದಲ್ಲಿ, ಪರಮೇಶ್ವರನಿಗೆ ತಾನು ಆಹಾರ ಪದಾರ್ಥಗಳನ್ನು ಸಿದ್ಧಗೊಳಿಸುತ್ತ ಅತ್ಯಂತ ಪವಿತ್ರ ಚರಿತ್ರನೆನಿಸಿ ಇದ್ದನು. ಹೀಗೆ ಇರುತ್ತಿರಲಾಗಿ ಸಾಮವೇದಿಯೆಂ

---

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಶ್ಶೂದ್ರೋವಾಪ್ಯಂತ್ಯಜಾತಿಜಃ । ಶಿವಭಕ್ತಸ್ಸದಾಪೂಜ್ಯಸ್ಸರ್ವಬ್ರಾಹ್ಮಣೋತ್ತಮಃ ॥ ಈ ಆಗಮ ಶ್ಲೋಕವೇ ಈ ಮಾತಿಗೆ ಆಧಾರವೆಂದು ತೋರುತ್ತದೆ.

ಸಾಮವೇದಿಯೆನಿಪ್ಪ ಭೂಸುರವರ್ಯನಾವನದೇಶದೊಳ್
ವ್ಯೋಮಮಾರ್ಗದೊಳೇಳ್ತರುತ್ತಿರೆ ಲೀಲೆಯಿಂದವನಂಗುಣಾ
ರಾಮನೀಕ್ಷಿಸಿ ಬೋನಮಂ ಭವಿ ಕಾಣ್ಗುಮೆಂದತಿ ವೇಗದಿಂ
ವಾಮಪಾದುಕೆಯಿಂದೆ ಮುಚ್ಚಿದನಾಗಳಂತದನಾ ದ್ವಿಜಂ ೨೭

ಕಂಡು ನಗೆನಗುತಮಿವನು
ದ್ದಂಡತೆಯಿಂ ಶ್ವಪಚನಡುವ ಬೋನದ ವಿಳಸ
ದ್ಭಾಂಡಮನೆನ್ನೀಕ್ಷಣರುಚಿ
ಕೊಂಡಪುದೆಂಬಲ್ತೆ ಮುಚ್ಚಿದಂ ಪಾದುಕೆಯಿಂ ೨೮

ಕಡುದುರುಳನೆನ್ನ ಮಹಿಮೆಯ
ಪೊಡರ್ಪನಿವನಱಿಯದಿಂತು ನೆಗಳ್ದಂ ಧರೆಯೊ
ಳ್ನುಡಿಯಲದೇಂ ದುಷ್ಕುಲಜರ
ನಡೆವಳಿ ಬೇಱೊಂದು ಗರ್ವದಿಂ ನುಡಿಯಲೊಡಂ ೨೯

ಅಳಿದುದು ಮಂತ್ರಶಕ್ತಿ ಬಿಸಿಲೊಂದದವೊಲ್ಲಿ ಜವಕ್ತ್ರಕಲ್ಲಿ ಬಾಂ
ದಳದೊಳೆ ಬರ್ಪ ವಸ್ತ್ರಮುದು ಧಾತ್ರಿಗೆ ಬೀಳ್ದುದದಂ ನಿರೀಕ್ಷಿಸು
ತ್ತಿಳಿದತಿ ಭೀತಿಯಿಂದೆಱಗಿದಂ ಶ್ವಪಚಾರ್ಯನ ಪಾದಪದ್ಮಕು
ಜ್ಜ್ವಳಮತಿ ಸಾಮವೇದಿ ವಿತತಾತಪತಪ್ತ ನಿಜಾನನಾಂಬುಜಂ ೩೦

ದೆನ್ನುವ ಬ್ರಾಹ್ಮಣಶ್ರೇಷ್ಠನು ಆ ವನಪ್ರದೇಶದಲ್ಲಿ ಆಕಾಶಮಾರ್ಗದಲ್ಲಿ ಬರುತ್ತಿರಲಾಗಿ, ಲೀಲೆಯಿಂದ ಹಾಗೆ ಬರುತ್ತಿರುವ ಸಾಮವೇದಿಯನ್ನು ಸದ್ಗುಣಗಳಿಗೆ ಆಶ್ರಯನೆನಿಸಿದ ಶ್ವಪಚಯ್ಯನು ನೋಡಿ, (ತಾನು ಮಾಡಿದ) ಅನ್ನವನ್ನು ಭವಿಯು ನೋಡುವನೆಂದು ಅತಿ ಭರದಿಂದ ಆ ಅನ್ನವನ್ನು ತನ್ನ ಎಡಗಾಲಿನ ಕೆರದಿಂದ ಮುಚ್ಚಿದನು. ಆಗ ಅನ್ನವನ್ನು ಆ ರೀತಿ ಮುಚ್ಚಿದುದನ್ನು ಸಾಮವೇದಿಯು ನೋಡಿ, ನಗೆ ನಗುತ್ತ ಅತ್ಯಂತ ಗರ್ವದಿಂದ ಈ ಶ್ವಪಚನು ಬೇಯಿಸುವ ಅನ್ನದ ಭಾಂಡವನ್ನು ನನ್ನ ಕಣ್ಣಿನ ಕಾಂತಿಯು ಸ್ವೀಕರಿಸುವುದೆಂದಲ್ಲವೇ ಕೆರದಿಂದ ಮುಚ್ಚಿದ್ದು ! (ಎಂದುಕೊಂಡನು). ೨೯–೩೦. ಮಹಾ ಮೂರ್ಖನಾದ ಇವನು ನನ್ನ ಮಹಿಮೆಯ ಅತಿಶಯವನ್ನು ಅರಿಯದೆ ಈ ರೀತಿ ಮಾಡಿದನು. ಈ ಲೋಕದಲ್ಲಿ ನೀಚಕುಲದಲ್ಲಿ ಹುಟ್ಟಿದವರ ನಡೆವಳಿಕೆಯ ರೀತಿಯೇ ಒಂದು ಬಗೆ. ಅದನ್ನು ಮಾತನಾಡಿ ಏನು ! ಎಂದು ಗರ್ವದಿಂದ ನುಡಿದೊಡನೆಯೇ ಅವನ ಮಂತ್ರಶಕ್ತಿಯು ನಾಶವಾಯಿತು. ಅವನ ಮುಖದ ಮೇಲೆ ಬಿಸಿಲು ಬೀಳದ ಹಾಗೆ ಅವನ ಮೇಲ್ಭಾಗದಲ್ಲಿ ಆಕಾಶದಲ್ಲಿಯೇ ಬರುತ್ತಿದ್ದ ವಸ್ತ್ರವು ಭೂಮಿಗೆ ಬಿತ್ತು. ಅದನ್ನು ನೋಡುತ್ತ ಭೂಮಿಗಿಳಿದು ಭೀತಿಯಿಂದ ಶ್ವಪಚಯ್ಯನ ಪಾದ ಕಮಲಗಳಿಗೆ ವಿಶೇಷವಾದ ಬಿಸಿಲಿನಿಂದ ಕಾಯ್ದು ಹೋದ ತನ್ನ ಮುಖ ಕಮಲವುಳ್ಳ ಪ್ರಕಾಶಿಸುವ ಬುದ್ಧಿಶಕ್ತಿಯುಳ್ಳ ಆ ಸಾಮವೇದಿಯು ನಮಸ್ಕರಿಸಿದನು. [ಸಾಮವೇದಿಯ ಮಂತ್ರಶಕ್ತಿಯಿಂದ ಅವನ ಮುಖದ ಮೇಲೆ ಬಿಸಿಲುಬೀಳಬಾರದೆಂದು ಒಂದು ವಸ್ತ್ರವು ಅವನನ್ನು ಅನುಸರಿಸಿಯೇ ಆಕಾಶದಲ್ಲಿ ಛತ್ರಿಯೋಪಾದಿಯಲ್ಲಿ ಹರಿದು ಬರುತ್ತಿತ್ತು. ಶ್ವಪಚಯ್ಯ

ವ॥ ಅಂತೆಱಗಿ ಕೆಯ್ಮುಗಿದು ಕೊಂಡಾಡಿ ತತ್ಕಾರುಣ್ಯದಿಂ ಶಿವದೀಕ್ಷೆಯಂ ಪಡೆದು ಶಿವಾಚಾರದೊಳ್ನಂದು ಕೆಲವಾನುಂ ದಿವಸಮಿರ್ದನಂತರಮದ್ಭುತ ಭಕ್ತಿಯಿಂಶಿವನಂ ಮೆಚ್ಚಿಸಿ ಮನ್ನಣೆವೆತ್ತು—

ಮೂವತ್ತಾಱುಂ ಪೊಳಲ ಜ
ನಾವಳಿವೆರಸುತ್ತೆ ಶಿವನ ಪುರಿಗೆಯ್ದಿದನಂ
ದಾ ವಿಭುವವಱಿಂ ಕೇಳೆಲೆ
ಭೂವರ ಶಿವಭಕ್ತರೊರೆಗೆ ಬರ್ಪರೆ ಪಾರ್ವರ್ ೩೧

ಆಲಿಪುದಿನ್ನುಂ ಭೋಜನೃ
ಪಾಲಂ ಪದೆದಾಳ್ವ ವಲ್ಲಕೀಪುರದೊಳ್ಸ
ಲ್ಲೀಲೆಯೊಳೆಸೆವಂ ಸದ್ಗುಣ
ಶೀಲ ಕಲಾಶಾಲಿ ಶರಣನುದ್ಭಟದೇವಂ ೩೨

ಶಿವದೀಕ್ಷೆಯಿತ್ತು ತಿಳುಪುತೆ
ಶಿವತತ್ವಮನಾ ನೃಪಂಗೆ ಗುರುವಾಗಿ ಮಹಾ
ಶಿವಯೋಗಿ ನೃಪಸಪರ್ಯೋ
ತ್ಸವಮಂ ಕೆಯ್ಕೊಂಡು ವೇದಶಾಸ್ತ್ರಾಗಮದಿಂ ೩೩

ನನ್ನು ತಿರಸ್ಕಾರಮಾಡಿದ್ದರಿಂದ ಅವನ ಮಂತ್ರಶಕ್ತಿ ನಷ್ಟವಾಗಿ ಆ ವಸ್ತ್ರವು ಭೂಮಿಯ ಮೇಲೆ ಬಿತ್ತು; ಅಂತೆಯೇ ಶ್ವಪಚಯ್ಯನೂ ಕೂಡ ತನ್ನ ಆಕಾಶಗಮನ ಶಕ್ತಿಯನ್ನೂ ಕಳೆದುಕೊಂಡು ಭೂಮಿಗೆ ಇಳಿದನೆಂದು ಭಾವ.] ವ॥ ಆ ರೀತಿ ನಮಸ್ಕರಿಸಿ, ಕೈ ಮುಗಿದು ಕೊಂಡಾಡುತ್ತ ಆತನ ಕಾರುಣ್ಯದಿಂದ ಶಿವದೀಕ್ಷೆಯನ್ನು ಹೊಂದಿ, ಶಿವಾಚಾರದಲ್ಲಿ ವ್ಯವಹರಿಸಿ, ಅನೇಕ ದಿವಸಗಳು ಇದ್ದನಂತರ (ತನ್ನ) ಅದ್ಭುತ ಶಕ್ತಿಯಿಂದ ಶಿವನನ್ನು ಮೆಚ್ಚಿಸಿ ಮನ್ನಣೆ ಪಡೆದು ೩೧. ಎಲೈ ಮಹಾರಾಜನೇ, ಕೇಳು : ಮೂವತ್ತಾರು ಪಟ್ಟಣಗಳ ಜನರೊಡನೆ ಸೇರಿ ಆ ಸಾಮವೇದಿ ಪ್ರಭುವು ಆಗ ಶಿವನ ಕೈಲಾಸ ಪಟ್ಟಣಕ್ಕೆ ಹೋದನು. ಆದ ಕಾರಣ ಶಿವಭಕ್ತರ ಸಮಾನಕ್ಕೆ ದ್ವಿಜರು ಬರುವರೇ ? [ಶಿವಭಕ್ತರಿಗೆ ದ್ವಿಜರು ಸಮಾನರೇ ಎಂದು ಭಾವ] **ಉದ್ಭಟಯ್ಯನ ಕಥೆ** ೩೨. (ಮಹಾರಾಜಾ), ಇನ್ನೂ ಕೇಳು : ಭೋಜ ಭೂಪಾಲನು ಸಂಭ್ರಮದಿಂದ ಆಳುತ್ತಿದ್ದ 'ವಲ್ಲಕಿ' ಎಂಬ ಪಟ್ಟಣದಲ್ಲಿ ಸದ್ಗುಣಗಳೇ ಶೀಲವಾಗಿ ಉಳ್ಳ, ವಿದ್ಯಾ ಸಂಪನ್ನನಾದ, ಉದ್ಭಟ ದೇವನೆಂಬ ಶರಣನು ಶ್ರೇಷ್ಠವಾದ ಲೀಲೆಯಿಂದ ಶೋಭಿಸುತ್ತಿರುವನು. ೩೩–೩೪. ಆ ನೃಪಾಲನಾದ ಭೋಜನಿಗೆ ಶಿವದೀಕ್ಷೆಯನ್ನುಕೊಟ್ಟು, ಶಿವತತ್ವಗಳನ್ನು ತಿಳಿಸುತ್ತ, ಅವನಿಗೆ ಗುರುವಾಗಿ, ಆ ಮಹಾಶಿವಯೋಗಿಯು ರಾಜನಿಂದ ಮಾಡಲ್ಪಟ್ಟ ಪೂಜೋತ್ಸವಾದಿಗಳನ್ನು ಸ್ವೀಕರಿಸುತ್ತ, ವೇದ, ಶಾಸ್ತ್ರ, ಆಗಮಸಮ್ಮತವಾಗಿ ವಾದ

ವಾದಂಗೆಯ್ದುಣ್ಮಿದ ಪರ
ವಾದಿಗಳಂ ಗೆಲ್ದು ಜಸಮನಾಳ್ದಿರುತುಂ ಸ
ಮ್ಮೋದದೆ ಪಸೆನೀದಂ ಮಹಿ
ಮೋದಧಿ ಜೊಮ್ಮಬ್ಬೆಯೆಂಬ ಕಾಂತಾಮಣಿಯೊಳ್ ೩೪

ವ॥ ಅಂತು ಪರಮ ಶಿವಭಕ್ತೆಯಾದ [1]ಗಾನ[1]ವಿದ್ಯಾವಿಶಾರದೆಯೆನಿಪ ಜೊಮ್ಮಬ್ಬೆಯುಂ ವಿವಾಹವಾಗಿ ಬೆರಸಿರ್ಪಿನಮಾದಂ ಕಂಡು ಪೌರಜನಮಚ್ಚರಿವಡೆ ಪರಸಮಯಿಗಳರಸನೆಡೆಗೆಯ್ದೆಂದು ಸಂದಣಿಸಿ ನಿಂದು—

ಎಲೆ ನರಪಾಲ ನಿನ್ನ ಗುರುವೆಂದೆನಿಪುದ್ಭಟದೇವನಜ್ಞನ
ಲ್ಲಲಘು ಕಲಾವಿದಂ ಪಿರಿಯನಗ್ರಜನಂತ್ಯಜೆಯಾದ ಕಾಂತೆಯೊ
ಳ್ನಲಿದೊಡಗೂಡಿ ತನ್ನ ಕುಲಧರ್ಮವನಿರ್ಕಡಿಗೆಯ್ದನದ್ಭುತಂ
ಸಲೆ ಮರುಳಾದನೆಂದು ಪಿಸುಣಾಡಿದರಾದ್ವಿಜರಾನರೇಂದ್ರನೊಳ್ ೩೫

ವ॥ ಆ ಮಾತನರಸನೇಳಿದಂಗೇಳ್ದೆಂದಿನಂತೆ ನಿಜಗುರುವಂ ಭಕ್ತಿಭಾವದಿಂ ಸೇವಿಸುತ್ತು ಮಿರೆ ಪಿಶುನರೆಲ್ಲಂ ನಾಣ್ಚಿ ಸರಿಯೆ ಕೆಲವಾನುಂ ದಿವಸಂ ಕಳಿಯೆ—

ನಿಜಭಟನಾದುದ್ಭಟನಂ
ತ್ಯಜೆಯೊಡಗೂಡಿರ್ದನೆಂಬರಂ ನಾಣ್ಚಿಸಲಂ

ಮಾಡಿ ಗರ್ವಿಷ್ಠರಾದ ಪರವಾದಿ ಜನಗಳನ್ನು ಗೆದ್ದು, ಯಶಸ್ಸನ್ನು ಸಂಪಾದಿಸಿ ಇರುತ್ತಿರಲು, ವಿಶೇಷಮೋಹದಿಂದ ಆ ಮಹಿಮಾ ಸಮುದ್ರನಾದ ಉದ್ಭಟ ದೇವನ 'ಜೊಮ್ಮಬ್ಬೆ' ಎಂಬ ಸ್ತ್ರೀರತ್ನದೊಡನೆ ವಿವಾಹವಾದನು. ವ॥ ಆ ರೀತಿ ಪರಮ ಶಿವ ಭಕ್ತೆಯೆನಿಸಿದ, ಗಾನವಿದ್ಯಾವಿಶಾರದೆಯೆನಿಸಿದ ಜೊಮ್ಮಬ್ಬೆಯನ್ನು ಲಗ್ನವಾಗಿ, ಕೂಡಿ ಇರುತ್ತಿರಲು, ಅದನ್ನು ಕಂಡು ಪಟ್ಟಣದ ಜನರು ಆಶ್ಚರ್ಯ ಪಡುವಂತೆ ಪರಸಮಯದ ವರು ಅರಸನ ಹತ್ತಿರಕ್ಕೆ ಬಂದು ಗುಂಪಾಗಿ ಸೇರಿ ನಿಂತು ೩೫. ಎಲೈ ನರಪಾಲನೇ, ನಿನ್ನ ಗುರುದೇವನೆನಿಸಿದ ಉದ್ಭಟದೇವನು ಅಜ್ಞನಲ್ಲ; ವಿಶೇಷವಾದ ವಿದ್ಯಾ ಸಂಪನ್ನನು; ಹಿರಿಯನು; ಬ್ರಾಹ್ಮಣಕುಲದಲ್ಲಿ ಹುಟ್ಟಿದವನು (ಆದರೆ) ಅಂತ್ಯಜೆಯೆನಿಸಿದ ಕಾಂತೆಯೊಡನೆ ಒಲಿದು ಒಡಗೂಡಿ, ಅದ್ಭುತವೆನ್ನುವಂತೆ ತನ್ನ ಕುಲಧರ್ಮವನ್ನೆ ತುಂಡುಮಾಡಿದನು (ಛೇದಿಸಿಬಿಟ್ಟನು). ಚೆನ್ನಾಗಿ ಹುಚ್ಚನೇ ಆಗಿ ಹೋದನು. ಹೀಗೆಂದು ಆ ದ್ವಿಜರುಗಳು ಮಹಾರಾಜನಲ್ಲಿ ಚಾಡಿಯ ಮಾತನ್ನಾಡಿದರು. ವ॥ ಆ ಮಾತನ್ನು ಅರಸನು ತಿರಸ್ಕರಿಸಿ, ಎಂದಿನಂತೆ ತನ್ನ ಗುರುವನ್ನು ಭಕ್ತಿಭಾವದಿಂದ ಸೇವಿಸುತ್ತಿರಲು, ಚಾಡಿಯವರೆಲ್ಲ ನಾಚಿ ದೂರವಾಗಲು ಕೆಲವಾರುದಿನಗಳು ಕಳೆದ ಮೇಲೆ ೩೬. ತನ್ನ ಭೃತ್ಯನಾದ ಉದ್ಭಟದೇವನು ಅಂತ್ಯಜೆಯೊಡನೆ ಕೂಡಿ ಕೊಂಡಿದ್ದಾನೆಂಬುವವರನ್ನು ನಾಚಿಗೆ

1 ನಾನಾ(ಮು)

ಗಜರಿಪು ತನಹಿಮೆಯುನೆ
ಯ್ದೆ ಜಗಕ್ಕಱಿಪಲ್ಕೆ ನೆನೆದು ಬರಿಸಿದನವನಂ ೩೬

ವ॥ ಅಂತು ಶಿವಂ ನಿಜಲೋಕಕ್ಕೆ ತಱಿಸಂದುದ್ಭಟನಂ ಬರಿಸೆ ತತ್ಕಳೇವರಮನಾಪ್ತ ರೊಯ್ದೊಂದು ವಟವಿಟಪಿಯ ಕೆಳಗೆ ಸುಡಲೊಡನೆ—

ಮಂಗಳಮಯನಂಗದ ಪೊಗೆ
ಪಿಂಗದೆ ತನುಸೋಂಕೆ ತದ್ವಟಸ್ಥಿತ ಬಹುಭೂ
ತಂಗಳ್ಕೈಲಾಸಕ್ಕೆ ಕ
ಡಂಗುತ್ತುಂ ಪೋದುವಿತ್ತಲುಳಿದೊಂದು ಮರುಳ್ ೩೭

ನಡೆನೋಡುತ್ತೆ ವಟಾವನೀರುಹಮನಾ ಭೂತಂಗಳಂ ಕಾಣದಿ
ಟ್ಟೆಡೆಯೊಳ್ಸಿಲ್ಕಿದ ದಂತಿಯಂತೆ ಪಿರಿದುಂ ಘೀಳಿಟ್ಟು ಧಾತ್ರೀತಳಂ
ಬಿಡದಲ್ಲಾಡೆ ಗಜಾಶ್ವರಾಜಿ ಪೆಳರ್ದೆತ್ತಂ ಹಮ್ಮದಂಬೋಗೆ ಘೋ
ಳಿಡುತುಂ ಪೆರ್ದನಿ ಮೀಱೆ ನಿಂದಳೆ ನೃಪಾಲಂ ಕೇಳ್ದನಾ ಘೋಷಮಂ ೩೮

ವ॥ ಅಂತು ಕೇಳ್ದೀಯದ್ಭುತ ರೋದನಮನಾನೆ ಪರೀಕ್ಷಿಪೆನೆಂದಾಸ್ಥಾನದಿನೆಳ್ದು ಸಮಸ್ತ ಸಾಮಂತಮಂತ್ರಿಮಂಡಳಿಕದಂಡನಾಥರ್ವೆರಸು ಪೊಳಲ ಪೊಱವಳಯದ ವಟಭೂರುಹದ ಬಳಿ ಗೇಳ್ತಂದು ಭೋಜರಾಜಂ ನಿಂದು ನೋಳ್ಪಿನಮಲ್ಲಿ—

ಗೊಳಿಸಲು ಪರಮೇಶ್ವರನು ಆತನ ಮಹಿಮೆಯನ್ನು ಜಗತ್ತಿಗೆ ತೋರಿಸಿಕೊಡಬೇಕೆಂದು ಇಚ್ಛಿಸಿ, ಅವನನ್ನು (ತನ್ನಲ್ಲಿಗೆ) ಬರಮಾಡಿಕೊಂಡನು. ವ॥ ಆ ರೀತಿ ಶಿವನು ತನ್ನ ಲೋಕಕ್ಕೆ ನಿಶ್ಚಯಿಸಿ ಉದ್ಭಟ ದೇವನನ್ನು ಬರಮಾಡಿಕೊಳ್ಳಲು, (ಇತ್ತ ಭೂಲೋಕ ದಲ್ಲಿ) ಅವನ ಹೆಣವನ್ನು ಆಪ್ತ ಜನರು ಒಯ್ದು ಒಂದು ಆಲದ ಮರದ ಕೆಳಗೆ ಸುಡಲು ಆ ಕೂಡಲೇ ೩೭-೩೮. ಮಂಗಳಮಯನಾದ ಉದ್ಭಟ ದೇವನ (ಸುಡುತ್ತಿರುವ) ದೇಹದ ಹೊಗೆ ಚೆನ್ನಾಗಿ ಆ ವೃಕ್ಷದಲ್ಲಿರುವ ಅನೇಕ ಭೂತಗಳ ದೇಹವನ್ನು ಸೋಂಕ ಲಾಗಿ ಅವು ಉತ್ಸಾಹಗೊಂಡು ಕೈಲಾಸಕ್ಕೆ ಹೋದವು. ಇಲ್ಲಿಯೇ ಉಳಿದ ಒಂದು ಭೂತವು ವಟವೃಕ್ಷವನ್ನು ದಿಟ್ಟಿಸಿ ನೋಡುತ್ತ ಭೂತಗಳನ್ನು ಕಾಣದೆ ಇಕ್ಕಟ್ಟಿನಲ್ಲಿ ಸಿಕ್ಕಿದ ಆನೆಯ ಹಾಗೆ ಅಧಿಕವಾಗಿ ಘೀಳಿಟ್ಟು (ಕೂಗಿಕೊಂಡು) ಭೂತಳವೇ ಅಲ್ಲಾಡು ವಂತೆ, ಕುದುರೆಗಳ ಸಮೂಹವು ಹೆದರಿ ಎಲ್ಲ ಕಡೆಗೂ ಮೂರ್ಛೆಗೊಂಡು ಬೀಳುವಂತೆ ಘೂಳೋ ಎಂದು ದೊಡ್ಡ ದನಿಯೆತ್ತಿ ನಿಂತು ಅಳಲು ಅರಸನಾದ ಭೋಜರಾಜನು ಆ ಧ್ವನಿಯನ್ನು ಕೇಳಿದನು. ವ॥ ಹಾಗೆ ಕೇಳಿ ಈ ಅದ್ಭುತವಾದ ಅಳುವನ್ನು ನಾನೇ ಪರೀಕ್ಷಿಸುತ್ತೇನೆಂದು ಆಸ್ಥಾನದಿಂದ ಎದ್ದು, ಸಮಸ್ತ ಸಾಮಂತ ಮಂತ್ರಿಮಂಡಳಿಕ ದಂಡನಾಯಕರೊಡನೆ ಸೇರಿ ಪಟ್ಟಣದ ಹೊರಭಾಗದಲ್ಲಿರುವ ವಟ (ಆಲ)ವೃಕ್ಷದ ಬಳಿಗೆ

ಕಡು ನಿಡಿದಾದ ಕಾರೊಡಲ ಕೇಸುರಿದೊಂಗಲ ಪೋಲ್ವ ಕೇಶದೊ
ಳ್ಗಿಡಿ ಸುರಿತರ್ಪ ಕೆಂಡದವೊಲೊಪ್ಪುವ ಕಂಗಳ ನೀಳ್ದು ಬಾಗಿ ಮುಂ
ಗಡೆಗುಜ್ಜುಗಿರ್ಪ ಪಲ್ಗಳ ಮಹಾಗುಹೆಯಂದದ ಬಾಯ ಬತ್ತಿ ಬೆಂ
ಗಡರ್ದ ನರಂ ಪಗಿಲ್ತುಬಸುರ್ಪೊಂದಿರಭಾಸುರವಾಗೆ ನಿಂದುದಂ ೩೯

ಗುಡುಗುಡನೆ ಸುರಿಯೆ ಕಣ್ಬನಿ
ನಿಡುದನಿಯಿಂದಳ್ವ ಭೂತಮಂ ಕಂಡರಸಂ
ಕಡು ಚೋದ್ಯಮನಾಳ್ದಾಗ
ಳ್ನುಡಿಯಿಸಿದಂ ನೀನಿದೇಕೆ ಪಳಯಿಪೆಯೆನುತುಂ ೪೦

ವ॥ ಎನೆ ಪಿಶಾಚಮರಸನಿದಿರ್ಗೆವಂದು —

ಎಲೆ ನೃಪತಿ ಕೇಳ್ವುದೊಂದು
ಜ್ವಲ ಕಥೆಯುಂ ಕೇಳ್ದು ಮುಂದೆ ನೀನೆಸಗೆ ನಿರ
ರ್ಗಲ ಪರಹಿತಮಂ ನಿನಗ
ತ್ಯಲಘುತರಂ ಪದವಿ ಸಾರ್ಗುಮೆಂತೆನೆ ಪೇಳ್ವೆಂ ೪೧

ವಿಲಸತ್ಕೈಲಾಸಭೂಭೃತ್ಕಟಕದೊಳೆಸೆಗುಂ ಸಾರಮುಂದ್ರೋದಮೆಂಬು
ಜ್ವಲ ಕಾಸಾರಂ ತದಬ್ಜಾಕರದ ತಟದೊಳಿರ್ಪಂ ತಪಂಗೆಯ್ವುತುಂ ನಿ

ಬಂದು ಭೋಜರಾಜನು ನಿಂತು ನೋಡುತ್ತಿರಲು ಅಲ್ಲಿ ೩೯–೪೦. ಅತಿ ದೊಡ್ಡದಾದ (ಉದ್ದವಾದ) ಕರಿಯ ಹೊಟ್ಟೆಯ, ಕೆಂಪಾದ ಉರಿಯ ಜ್ವಾಲೆಯ ಸಮೂಹವನ್ನು ಹೋಲುವ ಕೂದಲು, ಒಳ್ಳೆಯ ಕಿಡಿಗಳನ್ನು ಸುರಿಸುತ್ತಿರುವ ಕೆಂಡದ ಹಾಗೆ ಶೋಭಿಸುವ ಕಣ್ಣುಗಳ, ಉದ್ದವಾಗಿ ಬಾಗಿ ಮುಂಭಾಗಕ್ಕೆ ಹಾಯ್ದಿರುವ ಹಲ್ಲುಗಳ, ದೊಡ್ಡ ಗುಹೆಯಂತಿರುವ ಬಾಯಿಯ, ಬತ್ತಿ ಬೆನ್ನಿಗೆ ಹತ್ತಿ, ನರಗಳು ಹಬ್ಬಿರುವ ಹೊಟ್ಟೆಯನ್ನು ಹೊಂದಿ, ಭಯಂಕರವಾಗಿ ನಿಂತಿರುವ ಗಳಗಳನೆ ಕಣ್ಣೀರು ಸುರಿಯುತ್ತಿರುವ, ದೊಡ್ಡ ದನಿಯಿಂದ ಅಳುವ ಭೂತವನ್ನು ಅರಸನು ಕಂಡು ಅತ್ಯಂತಾಶ್ಚರ್ಯಗೊಂಡನು. ಆಗ (ಅವನು) ನೀನು ಅದೇಕೆ ಅಳುತ್ತಿದ್ದೀಯೆ ? ಎನ್ನುತ್ತ ಮಾತನಾಡಿಸಿದನು. ವ॥ ಹೀಗೆ ನುಡಿಸಲು ಅರಸನೆದುರಿಗೆ ಆ ಪಿಶಾಚಿಯು ಬಂದು ೪೧. ಎಲೈ ಅರಸನೇ;' ಒಂದು ಉಜ್ವಲವಾದ ಕಥೆಯನ್ನು ಕೇಳೋಣವಾಗಲಿ; ಅದನ್ನು ಕೇಳಿ ಮುಂದೆ ನೀನು ನಿರರ್ಗಳ (ತಡೆಯಿಲ್ಲದ) ಪರಹಿತವನ್ನು ಮಾಡಿದರೆ, ಅತ್ಯಂತ ಘನವಾದ ಪದವಿಯು ನಿನಗೆ ಲಭ್ಯವಾಗುವುದು. ಅದು ಹೇಗೆಂದರೆ ; ಹೇಳುತ್ತೇನೆ : ೪೨ ಪ್ರಕಾಶಿಸುವ ಕೈಲಾಸಪರ್ವತದ ತಪ್ಪಲು ಪ್ರದೇಶದಲ್ಲಿ 'ಸಾರಮುಂದ್ರೋದ' ಎಂಬ ಪ್ರಕಾಶಮಾನವಾದ ಸರೋವರವು ಶೋಭಿಸುತ್ತಿದೆ. ಆ ಸರೋವರದ ದಂಡೆಯಲ್ಲಿ ತಪಸ್ಸನ್ನು ಮಾಡುತ್ತ ಪರಿಶುದ್ಧನಾದ ಮಾರ್ಕಂಡೇಯನೆಂಬ ಮುನಿ ಇದ್ದಾನೆ. ಆ ಸರೋವರಕ್ಕೆ

ರ್ಮಲ ಮಾರ್ಕಂಡೇಯನೆಂಬಂ ಮುನಿಯುದಱೊಳೆ ಗಂಧರ್ವರೇಳ್ತಂದು ತಾರಾ
ಚಲನಾಥಾಸ್ಥಾನದಿಂದುಟ್ಟುದನೆ ಕಳೆದು ಪೊಕ್ಕಲ್ಲಿ[ಯೊ][1]ಸಾಡುತಿರ್ದರ್ ೪೨

ವ॥ ಅಂತು ಜಲಕೇಳಿಯಂ ತೀರ್ಚಿ—

ಪರಿಮಳಿಸುವ ಕೆಂದಾವರೆ
ಯರಲನವರ್ಮುಱಿಯೆ ಕಂಡು ಮುನಿ ಮುನಿದರುಣ
ಸ್ಫುರಿತೇಕ್ಷಣದಿಂ ನಗ್ನಾಂ
ಗರನಾ ಗಂಧರ್ವರು ಸಮಂತೀಕ್ಷಿಸಿದಂ ೪೩

ವ॥ ಅಂತು ಕಾಯ್ದೀಕ್ಷಿಸಿ ಸಪ್ತಶತಸಂಖ್ಯಾಕರಂ ಜಡಿದು ಝುಂಕಿಸಿ ನುಡಿದು—

ಸತತ ಶಿವಸ್ನಾನೋಚಿತ
ನುತ ಜಲಮಂ ಕದಡಿ ಶಂಭುಪೂಜೋಚಿತಮಂ
ಶತದಳಮಂ ಪಱಿದುದಱಿಂ
ಕ್ಷಿತಿಯುಲ್ಲಿ ಪಿಶಾಚರಾಗಿಮೆಂದಂ ಮುನಿಪಂ ೪೪

ಎನೆ ಕೇಳ್ದು ಪೆಳರ್ದು ತತ್ಪದ
ವನರುಹದೊಳ್ಕೆಡೆದು ಜವದೆ ಶಾಪವಿಮೋಕ್ಷಂ
ಜನಿಯಿಪುದಂ ದಯೆಯಿಂದೆಲೆ
ಮುನೀಂದ್ರ ಬೆಸಸೆಂದು ಬೇಡಿಕೊಂಡರ್ಮುನಿಯಂ ೪೫

ಕೈಲಾಸನಾಥನಾದ ಶಿವನ ಆಸ್ಥಾನದಿಂದ ಗಂಧರ್ವರು ಬಂದು ಉಟ್ಟುದನ್ನೆಲ್ಲ ಕಳೆದು ಈಸಾಡುತ್ತಿದ್ದಾರೆ. ವ॥ ಅವರು ಆ ರೀತಿ ಜಲಕ್ರೀಡೆಯನ್ನು ಮುಗಿಸಿ ೪೩. ಪರಿಮಳದಿಂದ ಕೂಡಿದ ಕೆಂದಾವರೆಯ ಹೂವನ್ನು ಮುರಿಯಲಾಗಿ ಆ ಮುನಿಯು (ಅದನ್ನು) ಕಂಡು ಕೋಪಗೊಂಡು ಪ್ರಕಾಶಿಸುವ ಕೆಂಪಾದ ಕಣ್ಣುಗಳಿಂದ ಬರಿ ಬತ್ತಲೆಯ ಶರೀರದ ಆ ಗಂಧರ್ವವನ್ನು ಚೆನ್ನಾಗಿ ನೋಡಿದನು. ವ॥ ಆ ರೀತಿ ಕೋಪದಿಂದ ಏಳು ನೂರು ಸಂಖ್ಯೆಯ ಅವರನ್ನು (ಆ ಗಂಧರ್ವರನ್ನು) ನೋಡಿ ಭಯಪಡಿಸಿ ಗದರಿಸಿ ನುಡಿದು ೪೪. ಸತತವೂ ಶಿವನ ಸ್ನಾನಕ್ಕೆ ಉಚಿತವಾದ ಶ್ಲಾಘ್ಯ ಜಲವನ್ನು ಕದಡಿ, ಶಂಭುವಿನ ಪೂಜೆಗೆ ಯೋಗ್ಯವಾದ ಕಮಲವನ್ನು ಹರಿದುದರಿಂದ (ಕಿತ್ತುದರಿಂದ) ಭೂಮಿಯಲ್ಲಿ ಪಿಶಾಚಿಗಳಾಗಿ ಹುಟ್ಟಿರೆಂದು ಆ ಮುನಿಯು ಅಂದನು (ಶಾಪವಿತ್ತನು) ೪೫. ಹೀಗೆನ್ನಲು ಕೇಳಿ, ಹೆದರಿ, ಅವನ ಪಾದಕಮಲಗಳಲ್ಲಿ ಬಿದ್ದು, ಶೀಘ್ರವಾಗಿ ಶಾಪ ವಿಮೋಚನೆಯುಂಟಾಗುವುದನ್ನು ಎಲೆ ಮುನೀಂದ್ರನೆ, ದಯೆಯಿಂದ ಅಪ್ಪಣೆ ಮಾಡು,

---

1 ನೀ(ಅ, ಗ, ಚ, ಜ, ದ, ಮು)

ವ॥ ಎನೆ ಕೇಳ್ದು—

ನಿಟಿಲಲೋಚನಭಕ್ತನುದ್ಭಟಯೋಗಿ ತತ್ತ್ವವಿಶಾರದಂ
ಕುಟಿಲವಾದಿವಿಭಂಜನಂ ಶಿವಮೂರ್ತಿ ತಾಂ ಚಿರಕಾಲಮುಂ
ನಟಿಯಿಸಿರ್ದಿಳೆಯೊಳ್ವಿಮುಕ್ತಿಯನೆಯ್ದೆ ತತ್ತನುದಾಹಸಂ
ಘಟಿತ ಧೂಮದ ಸೋಂಕಿನಿಂ ನಿಮಗಕ್ಕೆ ಶಾಪವಿಮೋಚನಂ ೪೬

ವ॥ ಎಂದು ಋಷಿ ಪೇಳ್ದನನಿತಱೊಳಾವೆಲ್ಲರುಂ ಪಿಶಾಚರೂಪಮಂ ತಾಳ್ದೀ ವಟವಿಟಪಿಯನಾಶ್ರಯಿಂಗೆಯ್ದು ಪನ್ನಿಚ್ಛಾಸಿರಬರಿಸಂಬರಮೆತ್ತಲುಂ ತೊಲಗದವನಳಿವಂ ಪಾರ್ದು ನೆಲಸಿರ್ದೆವಿಂದಿನುದಯದೊಳಾನೊರ್ವನೆ ಪಸಿವಂ ತಾಳಲಾಱದಾಹಾರಂಗೊಳಲೆಂದೆಲ್ಲರಂ ಬಿಟ್ಟು ಪೊಱಮಟ್ಟು ಪೋದೆನಾಂ ಬರ್ಪುದಱಿಂ ಮುನ್ನಮೆ—

ಪೋದರ್ಗಡ ಪುಣ್ಯಾಧಿಕ
ರಾ ದೇವನ ದೇಹದಾಹಧೂಮದ ಸೋಂಕಿಂ
ದಾದಮುಳಿದಿರ್ದೆನಾನೆ
ನ್ನೀ ದೌರ್ಭಾಗ್ಯಪ್ರಭಾವಮೆನ್ನದೊ ನೃಪತೀ ೪೭

ಒಡನಾಡಿಗಳೆಲ್ಲರ ಸಂ
ಗಡಮಿರದೀ ಪೊಳ್ತೆ ಪಸಿವಿನುರವಣೆಯಿಂ ಬೆಂ
ದೊಡಲಂ ಪೊರೆಯಲ್ಪೋದೆಂ
ಕಡೆಸಿಲ್ಕಿದೆನದಱಿನಿಂತು ಪಳಯಿಪೆನರಸಾ ೪೮

ಎಂದು ಆ ಮುನಿಯನ್ನು ಬೇಡಿಕೊಂಡರು. ವ॥ ಹೀಗೆ ಬೇಡಿಕೊಳ್ಳಲು ಕೇಳಿ ೪೬. ಅಗ್ನಿನೇತ್ರನಾದ ಶಿವನ ಭಕ್ತನೂ ಶಿವತತ್ತ್ವವನ್ನುಬಲ್ಲವನೂ, ಕುಟಿಲರಾದ ವಾದಿ ಜನಗಳನ್ನು ಮುರಿದು ಹಾಕಿದವನೂ, ಮಂಗಳಮೂರ್ತಿಯೂ ಆದ ಉದ್ಭಟದೇವನು ತಾನು ಚಿರಕಾಲದ ವರೆಗೆ ಜೀವಿಸಿದ್ದ (ವ್ಯವಹರಿಸಿದ್ದ) ಭೂಮಿಯಲ್ಲಿ ಮುಕ್ತಿಯನ್ನು ಹೊಂದಲು ಆತನ ದೇಹವನ್ನು ಸುಡುವಾಗ ಸೇರಿದ ಹೊಗೆಯ ಸೋಂಕಿನಿಂದ ನಿಮಗೆ ಶಾಪ ವಿಮೋಚನವಾಗುವುದು. ವ॥ ಹೀಗೆಂದು ಋಷಿಯು ಹೇಳಿದನು. ಅಷ್ಟರಲ್ಲಿ ನಾವೆಲ್ಲರೂ ಪಿಶಾಚಿಗಳ ರೂಪಧಾರಣೆಮಾಡಿ, ಈ ಆಲದ ಮರವನ್ನು ಆಶ್ರಯಮಾಡಿಕೊಂಡು, ಹನ್ನೆರಡು ಸಾವಿರ ವರ್ಷಗಳಿಂದ ಎತ್ತಲೂ ತೊಲಗದೆ ಆತನ ಸಾವನ್ನೇ ಎದುರು ನೋಡುತ್ತ ನೆಲಸಿದ್ದೆವು. ಇಂದಿನ ಉದಯಕಾಲದಲ್ಲಿ ನಾನೊಬ್ಬನೇ ಹಸಿವನ್ನು ತಾಳಲಾರದೆ ಆಹಾರವನ್ನು ಸ್ವೀಕರಿಸಲೆಂದು ಎಲ್ಲರನ್ನೂ ಬಿಟ್ಟು ಹೊರ ಹೊರಟು ಹೋದೆನು. ನಾನು ಬರುವುದಕ್ಕಿಂತ ಮೊದಲೇ ೪೭. ಮಹಾರಾಜಾ, ಆ ಉದ್ಭಟ ದೇವನ ದೇಹವನ್ನು ಸುಡುವುದರಿಂದುಂಟಾದ ಹೊಗೆಯು ಸೋಂಕಿನಿಂದ ಅಧಿಕ ಪುಣ್ಯಶಾಲಿಗಳಾದ ಅವರೆಲ್ಲರೂ ಹೋದರಲ್ಲವೇ ! ನಾನೊಬ್ಬನೇ ಉಳಿದಿರುವೆನು. (ಇದು) ನನ್ನ ಈ ದೌರ್ಭಾಗ್ಯದ ಫಲವು ಎಂಥದೋ ! ೪೮. ಅರಸನೇ, ಒಡನಾಡಿಗಳೆಲ್ಲರ ಸಂಗಡಲೇ ಇರದೆ ಈ ದಿವಸವೇ ಹಸಿವಿನ ಹೆಚ್ಚಳದಿಂದ ಬೆಂದು ಹೋದ ಹೊಟ್ಟೆಯನ್ನು ಹೊರೆಯಲು ಹೋದೆನು (ನಾನೊಬ್ಬನೇ) ಕೊನೆಗೆ ಉಳಿದೆನು ಆದ ಕಾರಣ

ಅರೆಬೆಂದ ಕೊಳ್ಳಿಗಳುಮಂ
ಪರೆದಿರ್ದ ತದಸ್ಥಿಶಕಲಮುಮನೊಡನಿಟ್ಟೊ
ಲ್ದುರಿವೊತ್ತಿಸೆನ್ನಮೇಲಣ
ಕರುಣದಿನೆಲೆ ನೃಪತಿ ಪೋಪೆನಾಂ ಪೊಗೆಯಿಂದಂ ೪೯

ಕುಱುಪಾವುದು ನೀಂ ಪೋಪುದ
ಕಱುಪಿಂದೆಮಗೆಂಬೆಯಪ್ಪೊಡೀ ವಟತರುವಂ
ನೆಱೆ ಕಿಳ್ತು ಬೇರ್ವೆರಸಿ ನೆಲ
ನಱಿವುತ್ತಿರೆ ರಜತಗಿರಿಗೆ ಕೊಂಡಾಂ ಪೋಪೆಂ ೫೦

ವ॥ ಎಂದ ಮರುಳ ಮಾತಂ ಮನದೆಗೊಂಡರಸನಾಶ್ಚರ್ಯಮಾನಸ[1]ನಂತೆ[1]ಗೆಯ್ವೆನೆಂದು ಕಡೆಗೊಳ್ಳಿಗಳುಮನಸ್ಥಿಶಕಲಮುಂ ಪುಂಜಿಸಿ ಚಂದನೇಂಧನಂಗಳನಾಜ್ಯದೊಳ್ನಾಂದ ದಿವ್ಯಾಂಭರಂಗಳು ಮನವರ್ಚೆ ಚಿತಾಗ್ನಿಯುಂ ಪೊತ್ತಿಸೆ ಪೊಗೆ ನೆಗೆದು ನಿಜಾಂಗಮಂ ಸೋಂಕಲೊಡನೆ—

ತೊಳಪ ಕಿರೀಟಮುಜ್ವಳ ಲಸನ್ಮಣಿಕುಂಡಲಮುಟ್ಟ ದಿವ್ಯಮಂ
ಜುಳವಸನಂ ಮನೋಜ್ಞತರಹಾರಮುದಂಚಿತ ರತ್ನಕಂಕಣಂ
ಪೊಳೆವ ಮುಖೇಂದುಮಂದಹಸನಂ ನಿಡುಗಣ್ಮಲರೊಪ್ಪೆ ಮೆಯ್ಯ ನು
ಣ್ಬೆಳಗೆಳೆಮಿಂಚನೇಳಿಸೆ ಪಿಶಾಚತೆ ಪಿಂಗಿದನೊಪ್ಪಿ ತೋಱಿದಂ ೫೧

ದಿಂದ ಪ್ರಳಾಪಿಸುತ್ತಿದ್ದೇನೆ. ೪೯. ಎಲೈ ಮಹಾರಾಜ, ಅರೆಬೆಂದ ಕೊಳ್ಳಿಗಳನ್ನೂ, ಹರಡಿಕೊಂಡಿರುವ ಆ ಹೆಣದ ಮೂಳೆಗಳನ್ನೂ ಒಲಿದು ಕೂಡಿಸಿಹಾಕಿ, ನನ್ನ ಮೇಲಣ ಕರುಣದಿಂದ ಉರಿಯನ್ನು ಹೊತ್ತಿಸು. ಉಂಟಾದ ಹೊಗೆಯಿಂದ ನಾನೂ ಹೊರಟು ಹೋಗುತ್ತೇನೆ. ೫೦. ನೀನು ಹೋಗುವುದಕ್ಕೆ ಗುರುತೇನು ? ಅದನ್ನು ನಮಗೆ ತಿಳಿಸು ಎಂದು ನೀನು ಅನ್ನುವೆ ಯಾದರೆ, ಈ ಆಲದ ಗಿಡವನ್ನು ಬೇರು ಸಹಿತವಾಗಿ ಕಿತ್ತು, ಲೋಕವೆಲ್ಲ ತಿಳಿಯುವಂತೆ ನಾನು ಕೈಲಾಸಗಿರಿಗೆ ಹೋಗುತ್ತೇನೆ. ವ॥ ಹೀಗೆಂದ ಭೂತದ ಮಾತನ್ನು ಮನಸ್ಸಿಗೆ ತೆಗೆದುಕೊಂಡ ಅರಸನು ಆಶ್ಚರ್ಯ ಚಿತ್ತನಾಗಿ (ಹಾಗಾದರೆ) ಹಾಗೇ ಮಾಡುತ್ತೇನೆಂದು ಅರ್ಧಸುಟ್ಟುಳಿದ ಕೊಳ್ಳಿಗಳನ್ನೂ ಎಲುವಿನ ತುಂಡುಗಳನ್ನೂ ರಾಶಿಮಾಡಿ, ಚಂದನದ ಕಟ್ಟಿಗೆಗಳನ್ನು ತುಪ್ಪದಲ್ಲಿ ಅದ್ದಿದ ಬಟ್ಟೆಗಳಿಂದ ಸುತ್ತಿ, ಚಿತಾಗ್ನಿಯನ್ನು (ಹೆಣವನ್ನು ಸುಡುವ ಬೆಂಕಿ) ಹೊತ್ತಿಸಲಾಗಿ ಹೊಗೆಯೆದ್ದು ಆ ಭೂತದ ದೇಹವನ್ನು ಸೋಂಕಿದ ಕೂಡಲೇ ೫೧. ಪ್ರಕಾಶಿಸುವ ಕಿರೀಟ, ಉಜ್ವಲವಾಗಿ ಪ್ರಕಾಶಿಸುವ ರತ್ನಖಚಿತವಾದ ಕುಂಡಲಗಳು (ಕರ್ಣಾಭರಣಗಳು) ದಿವ್ಯವೂ ಮನೋಹರವೂ ಆದ ವಸ್ತ್ರ, ಚಿತ್ತಾಕರ್ಷಕವಾದ ಹಾರ, ಶ್ರೇಷ್ಠ ರತ್ನಖಚಿತ ಮುಂಗೈಬಳೆ, ಹೊಳೆಯುತ್ತಿರುವ ಮುಖಚಂದ್ರ, ಮುಗುಳು ನಗೆ, ಉದ್ದವಾದ ಕಣ್ಣುಗಳು, ಇವೆಲ್ಲ ಶೋಭಿಸುತ್ತಿರಲು, ದೇಹದ ನುಣ್ಣನೆಯ ಹೊಳಪು ಎಳೆ ಮಿಂಚನ್ನು ತಿರಸ್ಕರಿಸುವಂತಿರಲು, ಪಿಶಾಚತೆ ತೊಲಗಿ (ಗಂಧರ್ವ

1 ನಾಗಿಯುಂತೆ(ಚ)

ವ॥ ಆಗಳ್—

ಅರಸಂ ಬೇಗದೆ ಮಂತ್ರಿಮಂಡಳಿಕ ಸಾಮಂತಾಪ್ತಪುತ್ರಾಂಗನೋ
ತ್ಕರಯುಕ್ತಂ ಪದೆದೇಱುತುಂ ಛಟಛಟಪ್ರಧ್ವಾನಮಿಂಬಾಗೆ ಬೇ
ರ್ವೆರಸುತ್ತಾಂ ಸುರಸೊತ್ತಿ ಕಿಳ್ತ ಪಟಮುಂ ತತ್ಸಂಯುತಂ ಭೂಮಿಗ
ಚ್ಚರಿಯಪ್ಪಂತಿರುಘೇರವಂಗುಡುತೆ ಪೊಕ್ಕಂ ಬಂದು ಕೈಲಾಸಮಂ ೫೨

ವ॥ ಇನ್ನುಂ ಪೇಳ್ವೆನದೆಂತೆನೆ—

ನಾಮಿಂದಮೆಂಬ ಪೊಳಲೊ
ಳ್ಭಾವಜಹರಭಕ್ತೆ ಚೆನ್ನಯ್ಯಾನ್ವಯಭವೆ ಕು
ಷ್ಠಾವೇಷ್ಟಿತತನು ಗುಡ್ಡಾ
ದೇವಿಯೆನಿಪ್ಪೊರ್ವಳಿರ್ಪಳೆಲೆ ಮನುಜೇಂದ್ರಾ ೫೩

ವ॥ ಆ ಪೊಳಲ ಪಾರ್ವರ್ಪುರವೀಥಿಯೊಳ್ಬರ್ಪ ವಿಶೀರ್ಣನಾಸಾಕರಚರಣನಖಾಗ್ರವಣಾವೃತಶರೀರಿಣಿಯಪ್ಪ ಗುಡ್ಡಾಂಬಿಕೆಯಂ ಕಂಡು ಮೆಯ್ಗೆಟ್ಟಂತ್ಯಜೆಯಾದ ನಿನ್ನಂ ನೋಳ್ಪುದೆಮಗತ್ಯಂತಾನುಚಿತಮೀಗಳೆ ಪೊಱಮಡೆಂದಾ ಪೊಳಲಂ ಪೊಱಮಡಿಸೆ ದೃಢವ್ರತಭಕ್ತೆ ಧೃತಿಗೆಡದಾ ನಗರಮನುಳಿದು ಮನ್ನಾಥನಪ್ಪ ಸೌರಾಷ್ಟ್ರಪತಿಯಿಂ ಸಾರತೇಜೋಮಯಶರೀರಂಬಡೆದಪೆನೆಂದು ತಱಿಸಂದು ತತ್ಪುರಾಭಿಮುಖಿಯಾಗಿ—

ರೂಪದಿಂದ) ಅವನು ಮನೋಹರವಾಗಿ ಕಂಡನು. ವ॥ ಆಗ ೫೨. ಅರಸನು ಶೀಘ್ರವಾಗಿ ಮಂತ್ರಿಗಳು, ಮಾಂಡಳಿಕರು, ಸಾಮಂತ ರಾಜರು, ಆಪ್ತರು ಪುತ್ರ, ಹೆಂಡತಿಯರೇ ಮೊದಲಾದ ಸಮೂಹದೊಡನೆ ಸಂತೋಷದಿಂದ ಮರವನ್ನೇರಿದನು. ಛಟ ಛಟ ಎಂಬ ಧ್ವನಿ ವಿಶೇಷವುಂಟಾಗಲಾಗಿ, ಬೇರು ಸಮೇತವಾಗಿ ಆ ಗಂಧರ್ವನು ಮರವನ್ನು ಕಿತ್ತನು. ಅವರೆಲ್ಲರೊಡನೆ ಭೂಲೋಕಕ್ಕೆಲ್ಲ ಆಶ್ಚರ್ಯವನ್ನುಂಟು ಮಾಡುತ್ತ ಉಘೇ ಉಘೇ ಎಂಬ ಧ್ವನಿಯನ್ನು ಮಾಡುತ್ತ ಹೊರಟು ಬಂದು ಕೈಲಾಸವನ್ನು ಹೊಕ್ಕನು. ವ॥ ಇನ್ನೂ ಹೇಳುವೆನು-ಅದೆಂತೆಂದರೆ ಗುಡ್ಡಾದೇವಿಯ ಕಥೆ ೫೩. ಎಲೈನರೇಂದ್ರನೇ, ನಾಮಿಂದವೆಂಬ ಪಟ್ಟಣದಲ್ಲಿ ಈಶ್ವರ ಭಕ್ತೆಯೂ, ಚೆನ್ನಯ್ಯನ ವಂಶದಲ್ಲಿ ಹುಟ್ಟಿದವಳೂ, ಕುಷ್ಠರೋಗದಿಂದ ವ್ಯಾಪ್ತವಾದ ತನುವುಳ್ಳವಳೂ ಆದ, 'ಗುಡ್ಡಾದೇವಿ' ಎಂಬುವವಳೊಬ್ಬಳಿದ್ದಳು. ವ॥ ಆ ಪಟ್ಟಣದ ಬ್ರಾಹ್ಮಣರು, ಬೀದಿಯಲ್ಲಿ ಬರುತ್ತಿದ್ದ (ಕುಷ್ಠರೋಗ ಕಾರಣದಿಂದ) ಶಿಥಿಲವಾದ ಮೂಗು, ಕೈಕಾಲು, ಉಗುರುತುದಿಗಳಲ್ಲಿರುವ ಹುಣ್ಣುಗಳಿಂದ ಕೂಡಿದ ಶರೀರವುಳ್ಳ ಆ ಗುಡ್ಡಾದೇವಿಯನ್ನು ಕಂಡು, ಮೈಗೆಟ್ಟು ಹೋದ ಶ್ವಪಚೆಯಾದ ನಿನ್ನನ್ನು ನೋಡುವುದು ನಮಗೆ ಅತ್ಯಂತ ಅನುಚಿತವಾದದ್ದಾಗಿದೆ. ಈಗಲೇ ಇಲ್ಲಿಂದ ಹೊರಡು, ಎಂದು ಆ ಪಟ್ಟಣದಿಂದ ಹೊರ ಹೊರಡಿಸಲು, ದೃಢವಾದ ಶಿವವ್ರತದ ಭಕ್ತೆಯಾದ ಅವಳು ಧೈರ್ಯಗೆಡದೆ, ಆ ಪಟ್ಟಣವನ್ನು ತ್ಯಜಿಸಿ ನನ್ನ ಪ್ರಭುವಾದ ಸೌರಾಷ್ಟ್ರ ಸೋಮನಾಥನೆಂಬ ಒಡೆಯನಿಂದ ಸಾರವತ್ತಾದ ತೇಜೋಮಯವಾದ ಶರೀರವನ್ನು ಪಡೆಯುತ್ತೇನೆಂದು, ಪ್ರತಿಜ್ಞೆಮಾಡಿ, ಆ

ನಡೆತಂದಳ್ ಧೃತಿಯಿಂದೆ ಕಾಲ್ನಡೆಯೊಳಿತ್ತಂ ಸೂಸೆ ರಕ್ತಾಂಬು ತ
ನ್ನಡಿಯಿಂ ಘಾಯಸಮನ್ವಿತಂ ಕಿಱಿದುದೂರಂ ಕಾಲ್ಗಳಾ ಮಾರ್ಗದೊ
ಳ್ಕಡಿವೋಗುತ್ತಿರೆ ಜಾನುವಿಂ ತಳರ್ದಳಾ ಜಾನುದ್ವಯಂ ಬೀಳೆ ಕೀ
ಲುಡಿದಾಗಳ್ಪೊರಳುತ್ತೆ ನೆತ್ತರುಗೆ ಮೆಯ್ಯಿಂ ಭಕ್ತೆಯುದ್ವೇಗದಿಂ ೫೪

ಬರುತಿರ್ದಳಲ್ಲಿ ನಿರುಪಮ
ವರದಂ ಸೌರಾಷ್ಟ್ರಸೋಮನಾಥಂ ತಾನಿ
ನ್ನಿರಲಾಗದೆಂದು ಬಂದಾ
ದರದಿಂ ನಿಜರೂಪುದೋಱುತಿದಿರೊಳ್ನಿಂದಂ ೫೫

ಜೆಡೆಮುಡಿ ಶಶಿಕಳೆ ಬಾಂಬೊಳೆ
ಕಿಡಿಗಣ್ಫಣಿಭರಣಮಸಿತಕಂಠಂ ಮೆಯ್ಯೊ
ಳ್ತೊಡೆದ ಭಸಿತಂ ದ್ವಿಪಾಜಿನ
ದುಡೆ ತಿಸುಳಂ ಮಿಸುಗೆ ಮೆಱೆದನಗಪುತ್ರೆಯರಸಂ ೫೬

ವ॥ ಅಂತೆಸೆದು ಭವರೋಗವೈದ್ಯಂ ನಿಜಭಕ್ತೆಯಂ ಕರುಣಾರ್ದ್ರಕಟಾಕ್ಷದಿನೀಕ್ಷಿಪುದು
ಮಾಗಳೆ ಸರ್ವಾಂಗಮನಿತುಂ ಸಂಪೂರ್ಣಮಾಗಿ ತಪ್ತಸುವರ್ಣವರ್ಣಮುಂ ತಳೆಯೆ ನಿರುಪಮ

ಪಟ್ಟಣದತ್ತ ಮುಖಮಾಡಿ ೫೪-೫೫. ಧೈರ್ಯದಿಂದ ಕಾಲುನಡಿಗೆಯಲ್ಲಿ (ಸೌರಾಷ್ಟ್ರ ಸೋಮೇಶ್ವರನತ್ತ) ಹೊರಟಳು. ಗಾಯದಿಂದ ಕೂಡಿದ ಅವಳ ಕಾಲಿನಿಂದ ರಕ್ತವು ಎಲ್ಲಕಡೆಗೂ ಹೊರಸೂಸುತ್ತಿತ್ತು ಸ್ವಲ್ಪದೂರ ಹೋಗುವುದರೊಳಗಾಗಿ ಎರಡೂ ಕಾಲುಗಳೂ, ಮಾರ್ಗದಲ್ಲಿ ಕತ್ತರಿಸಿಹೋಗಲಾಗಿ, ಮೊಂಡೆಗಳಿಂದಲೇ ನಡೆದಳು; ಆ ಎರಡೂ ಮೊಳಕಾಲುಗಳು ಕೀಲು ಮುರಿದು ಉದುರಿ ಹೋಗಲು, ಮೆಯ್ಯಿಂದ ನೆತ್ತರು ಸುರಿಯುತ್ತಿರಲು ಭಕ್ತೆಯು ಉದ್ವೇಗದಿಂದ ಉರುಳುತ್ತಲೇ ಬರತೊಡಗಿದಳು. ಅಲ್ಲಿ ಅಸದೃಶವರವನ್ನು ಕೊಡುವ ಸೌರಾಷ್ಟ್ರ ಸೋಮನಾಥನು ತಾನು ಇನ್ನು (ಇವಳನ್ನು ನೋಡುತ್ತ) ಇರಬಾರದೆಂದು, ಹೊರಟು ಬಂದು ಪ್ರೀತಿಯಿಂದ ತನ್ನ ರೂಪವನ್ನು ತೋರಿಸುತ್ತ ಎದುರಿಗೆ ನಿಂತನು. ೫೬. (ಹೀಗೆ ಆ) ಪಾರ್ವತೀಪತಿಯು ಜಡೆಮುಡಿ, ಚಂದ್ರಕಳೆ, ಶಿರದಲ್ಲಿನ ದೇವಗಂಗಾನದಿ, ಅಗ್ನಿನೇತ್ರ, ಆ ಹಾವುಗಳ ಆಭರಣ, ನೀಲಕಂಠ, ಮೈಯಲ್ಲಿ ಧರಿಸಿದ ಭಸ್ಮ, ಆನೆಯ ತೊಗಲಿನ ಉಡಿಗೆ, ತ್ರಿಶೂಲ ಇತ್ಯಾದಿಗಳು ಶೋಭಿಸುತ್ತಿರಲು ಶೋಭಿಸಿದನು. ವ॥ ಈ ರೀತಿ ಶೋಭಿಸುತ್ತ ಆ ಜನನ ಮರಣಾತ್ಮಕವಾದ ಸಂಸಾರವೆಂಬ ರೋಗದ ವೈದ್ಯನಂತಿರುವ ಶಿವನು ತನ್ನ ಭಕ್ತೆಯಾದ ಗುಡ್ಡಾದೇವಿಯನ್ನು, ಕರುಣೆಯಿಂದ ಆರ್ದ್ರಗೊಂಡ ಕಡೆಗಣ್ಣುಗಳಿಂದ ನೋಡಿದೊಡನೆಯೇ (ಅವಳು) ಸಮಸ್ತ ಅಂಗಗಳೂ ಸಂಪೂರ್ಣವಾದವಳಾಗಿ, ಕಾಯ್ದ ಬಂಗಾರದ ಬಣ್ಣವನ್ನು ಹೊಂದಿದಳು. ಅಸದೃಶ ಸೌಂದರ್ಯದಿಂದ ಕೂಡಿ ಶಿವನ ಪಾದಗಳಿಗೆ ನಮ

ಸೌಂದರ್ಯಮನಾಳ್ದು ತನ್ನಡಿಗೆ ಪರಮಾನಂದದಿನೆಱಗಿರ್ದ ಭಕ್ತೆಗೆ ಮೆಚ್ಚಿ ನೀಂ ವರಮಂ ಬೇಳ್ಪುದೆನೆ ಕರಾರವಿಂದಮಂ ಮುಗಿದು—

ಪರಮ ಕೃಪಾನಿಧಿ ನಿಮ್ಮಯ
ಚರಣಾಬ್ಜಮನಿಂದು ಕಂಡೆನದಱಿಂದನ್ಯಂ
ವರಮಾವುದೊ ಬೇಳ್ಪೊಡೆ ಸಲೆ
ಕರುಣಿಸು ನಿಮ್ಮಂಘ್ರಿಭಜನಮೊಂದನೆ ಮುದದಿಂ ೫೭

ವ॥ ಎನೆ ಶಿವಂ ಮೆಚ್ಚಿ ನಿಜಭಕ್ತಿಸುಖಮನವರ್ಚಿ ಗುಡ್ಡಾದೇವಿಯುಂ ಪೊರೆದು—

ಅವಳಂ ದೂಷಿಸಿದವನೀ
ದಿವಿಜರ ತನುವೆಲ್ಲ ಕುಷ್ಠಮಯಮಪ್ಪವೊಲಾ
ಭವಹರನೊಡರ್ಚಿದಂ ಭೂ
ಧವ ಜನಮಚ್ಚರಿಯನಾಳ್ವಿನಂ ವಸುಮತಿಯೊಳ್ ೫೮

ವಾರ್ತೆಯಿದು ಜಗದೊಳಿನ್ನುಂ
ವರ್ತಿಪುದಲೆ ನೃಪತಿ ಪರಮ ಶಿವಭಕ್ತಿಲಸ
ದ್ವರ್ತನರ ಪೂರ್ವಜಾತಿಯ
ನಾರ್ತಡೆಯದೆ ನುಡಿವರವರಘಕ್ಕೊಳಗಪ್ಪರ್ ೫೯

ಸಾಂಗಕ್ರಿಯಾಪ್ರತಿಷ್ಠಿತ
ಲಿಂಗದೊಳೆ ಶಿಲಾತ್ವಮೊಳವೆ ಪರಶಿವದೀಕ್ಷಾ

ಸ್ಕರಿಸಿದಳು. ಹೀಗೆ ತನ್ನ ಪಾದಗಳಿಗೆ ನಮಸ್ಕರಿಸಿದ ಭಕ್ತೆಗೆ ಮೆಚ್ಚಿ, (ಶಿವನು) ನೀನು ಏನಾದರೂ ವರವನ್ನು ಬೇಡುವುದು ಎಂದನು. ಆಗ ಅವಳು ತನ್ನ ಕರಕಮಲಗಳನ್ನು ಜೋಡಿಸಿ ೫೭. ಪರಮಕೃಪಾ ನಿಧಿಯೇ, ನಿನ್ನ ಚರಣ ಕಮಲವನ್ನು ಈ ದಿವಸ ನೋಡಿದೆನು. ಅದಕ್ಕಿಂತಲೂ ಬೇರೆಯದಾದ ವರವು ಬೇಡುವುದಕ್ಕೆ ಇನ್ನಾವುದಿದೆ ? ಚೆನ್ನಾಗಿ ನಿಮ್ಮ ಪಾದದ ಸ್ತೋತ್ರಮಾಡುತ್ತಿರುವುದೊಂದನ್ನೇ ಪ್ರೀತಿಯಿಂದ ಕರುಣಿಸು ವ॥ ಎನ್ನಲು ಶಿವನು ಮೆಚ್ಚಿ, ತನ್ನ ಸಂಬಂಧವಾದ ಭಕ್ತಿಸುಖವನ್ನು ಉಂಟುಮಾಡಿ, ಆ ಗುಡ್ಡಾದೇವಿಯನ್ನು ಸಂರಕ್ಷಿಸಿ—೫೮. ಎಲೈ ಬಿಜ್ಜಳ ಮಹಾರಾಜನೇ, ಭೂಲೋಕದ ಜನರೆಲ್ಲ ಆಶ್ಚರ್ಯಗೊಳ್ಳುವಂತೆ ಯಾವ ಬ್ರಾಹ್ಮಣರುಗಳು ಅವಳನ್ನು ಕುಷ್ಟರೋಗದವಳೆಂದು ದೂಷಿಸಿದ್ದರೋ ಅವರ ದೇಹವೆಲ್ಲ ಕುಷ್ಟರೋಗದಿಂದ ತುಂಬಿ ಹೋಗುವಂತೆ ಆ ಈಶ್ವರನು ಉಂಟುಮಾಡಿದನು. ೫೯. ಎಲೈ ನೃಪತಿಯೇ, ಈ ಸುದ್ದಿಯು ಲೋಕದಲ್ಲಿ ಇನ್ನೂ ವರ್ತಿಸಿರುವುದು. ಪವಿತ್ರವಾದ ಶೋಭಿಸುವ ಶಿವಭಕ್ತಿಯನ್ನು ಆಚರಿಸುವವರ ಪೂರ್ವಜಾತಿಯನ್ನು ಯಾರು ತಡೆಯದೆ ನುಡಿಯುವರೋ ಅವರು ಪಾಪಕ್ಕೊಳಗಾಗುವರು. ೬೦. ಮಹಾರಾಜಾ, ಯಥಾವತ್ತಾದ ವಿಧಿಗಳನ್ನನುಸರಿಸಿ ಪ್ರತಿಷ್ಠೆಗೊಳಿಸಿದ ಲಿಂಗದಲ್ಲಿ ಶಿಲೆಯ ಭಾವವುಂಟೆ ? ಪರಶಿವನ ದೀಕ್ಷೆಯಿಂದ ಕೂಡಿ

ಸಂಗತನೊಳಂತ್ಯಜತೆಯುಮ
ಸಂಗಂ ಸಮನಿಪ್ಪುದೆ ಪೇಳ್ಧರಾಧಿಪ ನಿಜಮಂ ೬೦

ಶರಧಿಯೊಡವೆರೆದ ನದಿಗ
ಳ್ಶರಧಿಯ ರೂಪಪ್ಪ ತೆಱದಿನವನಿಪ ವಿಲಸ
ದ್ಗುರುಕರಕಮಳಸ್ಪರ್ಶನ
ದಿರವಿಂ ನರರಕ್ಕುಮಲ್ತೆ ಗುರುರೂಪಧರರ್ ೬೧

ಭ್ರಮರಾವಲಂಬಿಕೀಟಂ
ಭ್ರಮರಂ ತಾನೆನಿಸಿ ಕೀಟಮಪ್ಪುದೆ ಶಿವಲಿಂ
ಗಮನಪ್ಪಿ ಲಿಂಗಭಾವಂ
ಸಮನಿಸಿದ ನರಂ ನರೇಂದ್ರ ನರನಕ್ಕುಮೆ ಪೇಳ್ ೬೨

ಜಲಧರದ ಮಱೆಯ ದಿನಮಣಿ
ಮಲಿನಾಂಬರಬದ್ಧಮಣಿ ಧರಿತ್ರಿಯ ಮಱೆಯೊ
ಳ್ನೆಲಸಿದ ನಿಧಿಯೆನಿಪಂ ದು
ಷ್ಕುಲಸಂಭವನ್ನಂ ಪುರಾರಿಭಕ್ತಂ ಧರೆಯೊಳ್ ೬೩

ಪುಟ್ಟದೆ ಮುತ್ತು ಶುಕ್ತಿಯೊಳೆ ಪುಟ್ಟದೆ ಪಂಕದೊಳಂಬುಜಾತಮೇಂ
ಪುಟ್ಟದೆ ಕಲ್ಲೊಳೇಂ ವಿಸುನಿ ಪುಟ್ಟದೆ ಕಾಷ್ಠದೊಳಗ್ನಿ ಪಟ್ಟುತಾಂ

ದವನಲ್ಲಿ ಅಂತ್ಯಜನೆಂಬ ಭಾವವು ನಿಜವಾಗಿ (ಅಂತ್ಯಜತ್ವದಿಂದ ಕೂಡಿರುವಿಕೆಯು) ಕೂಡಿರುವುದು ಶಕ್ಯವೇ ?† ೬೧. ಸಮುದ್ರದೊಡನೆ ಐಕ್ಯಗೊಂಡ ನದಿಗಳೆಲ್ಲ ಸಮುದ್ರ ರೂಪವೇ ಆಗುವ ರೀತಿಯಲ್ಲಿ, ಮಹಾರಾಜನೇ, ಪ್ರಕಾಶಮಾನನಾದ ಗುರುವಿನ ಕೈಗಳೆಂಬ ಕಮಲದ ಸ್ಪರ್ಶದ ಕಾರಣದಿಂದ ನರರುಗಳು ಗುರುರೂಪ ಧರಿಸಿದವರೇ ಆಗುವರಲ್ಲವೇ ! ೬೨. ನರೇಂದ್ರನೇ, ಭ್ರಮರದ (ಕಡಜದ) ಆಶ್ರಯದಲ್ಲಿರುವ ಕೀಟವು ತಾನೂ ಭ್ರಮರವೇ ಎನಿಸಿ (ಪುನಃ) ಕೀಟವಾಗುವುದೇ ? ಶಿವಲಿಂಗವನ್ನು ಅಪ್ಪಿ (ಆಶ್ರಯಿಸಿ) ಲಿಂಗ ಭಾವವೇ ಉಂಟಾದ ನರನು ನರನೆನಿಸುವನೇ ಹೇಳು ! ೬೩. ಮೋಡದ ಮರೆಯ ಸೂರ್ಯ, ಮಲಿನವಾದ ಬಟ್ಟೆಯಲ್ಲಿ ಕಟ್ಟಲ್ಪಟ್ಟ ರತ್ನ, ಭೂಮಿಯ ಮರೆಯಲ್ಲಿ ಅಡಗಿರುವ ದ್ರವ್ಯರಾಶಿಗಳಂತೆ ಲೋಕದಲ್ಲಿ ದುಷ್ಕುಲ ಸಂಭವನಾದ ಪರಮೇಶ್ವರ ಭಕ್ತನು ಎನಿಸುವನು. (ತೋರುವನು) ೬೪. ಶುಕ್ತಿಯಲ್ಲಿ (ಕಪ್ಪೆಚಿಪ್ಪಿನಲ್ಲಿ) ಮುತ್ತು ಹುಟ್ಟುವುದಿಲ್ಲವೇ ? ಕೆಸರಿನಲ್ಲಿ ಕಮಲವು ಹುಟ್ಟುವುದಿಲ್ಲವೇ ? ಕಲ್ಲಿನಲ್ಲಿ ಬಂಗಾರವು ಹುಟ್ಟು

---

†ಶಿವದೀಕ್ಷಾಭಿ ಜಾತಸ್ಯ ಪೂರ್ವಜಾತಿನಚಿಂತಯೇತ್ !
ಸುಪ್ರತಿಷ್ಠಿತಲಿಂಗೇತು ನಯಥಾ ಪೂರ್ವಭಾವನಾ ॥ ಹೀಗೆನ್ನುವ ಶಿವಪುರಾಣವಾಕ್ಯದೊಡನೆ ಈ ಪದಾರ್ಥವನ್ನು ಹೋಲಿಸಿ.

ಪುಟ್ಟದೆ ಕೀಟದೊಳ್ಧರೆಗೆ ಪೂಜ್ಯತೆದಾಳವೆ ಮೇಣವಂತೆ ದಲ್
ಪುಟ್ಟಿದಡೇನೊ ದುಷ್ಕುಲದೊಳೀಶ್ವರಭಕ್ತನೆ ಪೂಜ್ಯನುರ್ವಿಯೊಳ್ ೬೪

ಮಾತೆ ಗೌರಿ ಪಿತನಲ್ತೆ ರುದ್ರನೀ[1]
ಖ್ಯಾತಮಾದ ಭುವನತ್ರಯಕ್ಕೆ ತ
ಜ್ಜಾತ ಸರ್ವಜಗತೀಜನಂಗಳೊ
ಳ್ಜಾತಿಭೇದಮಣಮುಂಟೆ ಧಾತ್ರಿಪಾ ೬೫

ವ॥ ಅಂತುಮಲ್ಲದೆಯುಂ—

ಭೂಸುರಕುಲಗುರು ವೇದ
ವ್ಯಾಸಂ ಕಬ್ಬಿಲಿತಿಯಲ್ಲಿ ಪುಟ್ಟಿದನಧಿಕೋ
ಲ್ಲಾಸಂ ಮಾತಂಗಿಯೊಳಾ
ಭಾಸುರ ಮಾತಂಗ ಮುನಿವರಂ ಜನಿಯಿಸಿದಂ ೬೬

ಒಗೆದಂ ವಶಿಷ್ಟಮುನಿ ವೇ
ಶ್ಯೆಗೆ ಸೂತಂ ಜನನಮಾಂತನಂತ್ಯಜನಿಂ ಪ
ನ್ನಗಧರಭಕ್ತಿಸ್ಥಿತಿಯು
ಜ್ಜುಗದಿಂ ದ್ವಿಜಮುಖ್ಯರಾದರಿವರೀ ಧರೆಯೊಳ್ ೬೭

ವುದಿಲ್ಲವೇ ? ಕಟ್ಟಿಗೆಯಲ್ಲಿ ಅಗ್ನಿಯು ಹುಟ್ಟದೇ ? ರೇಷ್ಮೆಯು (ಪಟ್ಟು) ತಾನು ಕೀಟದಿಂದ ಹುಟ್ಟುವುದಿಲ್ಲವೇ ! ಇವೆಲ್ಲ ಧರೆಯಲ್ಲಿ ಪೂಜ್ಯತೆಯನ್ನು ಹೊಂದುವುದಿಲ್ಲವೇ ? ಇವುಗಳ ಹಾಗೆ ದುಷ್ಕುಲದಲ್ಲಿ ಹುಟ್ಟಿದರೇನೋ ಈಶ್ವರ ಭಕ್ತನು (ಯಾವಕುಲದಲ್ಲಿ ಹುಟ್ಟಿದರೂ) ಲೋಕದಲ್ಲಿ ಪೂಜ್ಯನೆನಿಸುವನು.† ೬೫. ಎಲೈ ಧಾತ್ರೀಶನೇ, ಈ ಪ್ರಸಿದ್ಧವಾದ ಮೂರುಲೋಕಗಳಿಗೂ ತಾಯಿಯೇ ಗೌರಿ; ತಂದೆಯೇ ರುದ್ರ; ಅಲ್ಲವೆ? ಅವನಿಂದ ಹುಟ್ಟಿದ ಜಗತ್ತಿನ ಸಕಲ ಜನರುಗಳಲ್ಲಿ ಸ್ವಲ್ಪವಾದರೂ ಜಾತಿಭೇದವು ಉಂಟೆ ? ವ॥ ಅದೂ ಅಲ್ಲದೆ ೬೬–೬೭. ಬ್ರಾಹ್ಮಣರುಗಳ ಕುಲಗುರುವಾದ ವೇದವ್ಯಾಸನು ಕಬ್ಬಿಲಗಿತ್ತಿ (ಬೆಸ್ತರವಳ)ಯ ಹೊಟ್ಟೆಯಲ್ಲಿ ಹುಟ್ಟಿದನು. ಅತಿಶಯ ಉಲ್ಲಾಸದಿಂದ ಶ್ರೇಷ್ಠನಾದ ಮತಂಗಮಹರ್ಷಿಯು ಅಂತ್ಯಜೆ (ಮಾದಿಗಗಿತ್ತಿ)ಯ ಗರ್ಭದಿಂದ ಹುಟ್ಟಿದನು. ವಶಿಷ್ಠ ಮಹರ್ಷಿಯು ವೇಶ್ಯೆಯಿಂದ ಹುಟ್ಟಿದನು. (ದೇವತೆಗಳ ಸೂಳೆಯಾದ ಊರ್ವಶಿಯಲ್ಲಿ ಹುಟ್ಟಿದನು). ಇವರೆಲ್ಲ ಲೋಕದಲ್ಲಿ ಪರಮೇಶ್ವರನ

---

1 ಏ(ಅ,ದ)

†ಯಥಾಪಂಕೇ ಸರೋಜಂ ಸ್ಯಾದ್ಯಥಾಕಾಷ್ಠೇಹುತಾಶನಃ ।
ಯಥಾಸುವರ್ಣಂ ಪಾಷಾಣೇ ಭಕ್ತಶ್ಚಾಂಡಾಲ ವಂಶಜಃ ॥
ಸ್ತ್ರೀಪಾ ಪುರುಷಷಂಡಶ್ಚಂಡಾಲೋದ್ವಿಜವಂಶಜಃ ।
ನಜಾತಿಭೇದೋಲಿಂಗಾರ್ಚಾಸ್ಸರ್ವೇರುದ್ರಗಣಾ ಸ್ಮೃತಾಃ

(ಎಂಬ ಶಿವಪುರಾಣವಾಕ್ಯಗಳೊಡನೆ ಹೋಲಿಸಿರಿ.)

ವಿದಿತಮಿದು ಸಕಲ ಭುವನದೊ
ಳಿದನಱಿದುಂ ನುಡಿಯಲೇಕೆ ದುಷ್ಕುಲಭವರೆಂ
ದೊದವಿದ ಮದದಿಂ ಕುಲಮಿ
ಲ್ಲದ ಶಿವಭಕ್ತರ್ಕಳಲ್ಲಿ ಕುಲಜಾತಿಗಳುಂ ೬೮

ವ॥ ಎಂದಿಂತು ನುಡಿದ ಮಹಿಮಾಕರನ ಮಾತನೇಳಿದಂಗೇಳ್ದರಸಂ ಕುಪಿತನಾಗಿ—

ಬಸವರಸ ಪೂರ್ವಕಥೆಗಳ
ವಿಸರಮನುಳಿ ಸರ್ವಜನವಿರೋಧೋಕ್ತಿಗಳಂ
ಪಸರಿಸದಿರೆಮ್ಮೊಳೋದಿನ
ಗಸಣಿಗಳೇಕಿನಿತು ಸಾಲ್ಗುಮೊಪ್ಪದು ಬಿಂಕಂ ೬೯

ಹರಭಕ್ತರಧಿಕರೆಂದೆಂ
ದೊರೆದಪೆ ತತ್ಕಾಯಮಂ ಚಿವುಂಟಿದೊಡಮದೇಂ
ಸುರಿತರ್ಪುದೆ ಸುಧೆ ಪಾರ್ವರ
ಶರೀರದಿಂ ರಕ್ತಮೊಕ್ಕಪುದೆ ಪೇಳ್ದಿಟಮಂ ೭೦

ವ॥ ಎಂಬುದುಂ ಭಕ್ತಿರತ್ನಾಕರಂ ಕನಲ್ದು ಘಳಿಲನೆಳ್ದುನಿಂದು—

ವಿಮಳ ಶಿವಭಕ್ತಮಾರ್ಗಮೆ
ಸುಮಾರ್ಗಮುಳಿದಪರಮಾರ್ಗಮದುವೆ ಕುಮಾರ್ಗಂ
ಕುಮತಿಜನಮೆಂತುಮೇನಱಿ
ಗುಮೆ ಪೇಳಿದನತುಳದುರಿತಪೂರಿತಹೃದಯಂ ೭೧

ಭಕ್ತಿಯ ರೀತಿಯನ್ನು ಆಚರಿಸುವುದರ ಮೂಲಕ ದ್ವಿಜಶ್ರೇಷ್ಠರಾದರು. ೬೮. ಈ ವಿಷಯವೆಲ್ಲ ಭೂಮಂಡಲಕ್ಕೇ ತಿಳಿದಿರುವಂತಹುದು. ಇದನ್ನು ತಿಳಿದೂ ಕೂಡ ಮದದಿಂದ ಕೂಡಿ ಕೆಟ್ಟಕುಲದಲ್ಲಿ ಹುಟ್ಟಿದವರೆಂದು ಕುಲವೇ ಇಲ್ಲದ ಶಿವಭಕ್ತರಲ್ಲಿ ಕುಲಜಾತಿಗಳನ್ನು ಏಕೆ ಮಾತಾಡಬೇಕು ? ವ॥ ಈ ಪ್ರಕಾರವಾಗಿ ನುಡಿದ ಮಹಿಮಾಕರನಾದ ಬಸವಣ್ಣನ ಮಾತುಗಳನ್ನು ತಿರಸ್ಕಾರಮಾಡಿ, ಅರಸನಾದ ಬಿಜ್ಜಳನು ಕೋಪಗೊಂಡವನಾಗಿ ೬೯. ಬಸವರಸನೇ, ಪೂರ್ವದ ಕಥೆಗಳ, ಸಮೂಹನ್ನು ಬಿಡು. ನಮ್ಮಲ್ಲಿ ಇಷ್ಟೊಂದು ನಿನ್ನ ಓದಿನ ಚಾತುರ್ಯಗಳು ಏಕೆ ? (ಶಾಸ್ತ್ರ ಪುರಾಣಾಭ್ಯಾಸದಿಂದ ಉಂಟಾದ ಚತುರತೆ ಬೇಡ). ಸರ್ವಜ್ಞರುಗಳ ವಿರೋಧೋಕ್ತಿಗಳನ್ನು ಪ್ರಸಾರಗೊಳಿಸಬೇಡ, ಇಷ್ಟೇಸಾಕು, ಗರ್ವವು ನಿನಗೆ ತಕ್ಕದ್ದಲ್ಲ. ೭೦. ಹರನ ಭಕ್ತರೇ ಶ್ರೇಷ್ಠರೆಂದು ಹೇಳುತ್ತಿದ್ದೀಯೆ. ಆ ಶಿವಭಕ್ತರ ದೇಹವನ್ನು ಚಿವುಟಿದರೆ ಹಾಲೇನಾದರೂ ಸುರಿಯುವುದೇ? ಬ್ರಾಹ್ಮಣರ ಶರೀರದಿಂದ ರಕ್ತವು ಹೊರ ಹೊರಡುವುದೇ?. ಸತ್ಯವನ್ನು ಹೇಳು ವ॥ ಹೀಗೆನ್ನಲು ಭಕ್ತಿಗೆ ಸಮುದ್ರದೋಪಾದಿಯಲ್ಲಿರುವ ಬಸವಣ್ಣನು ಕೋಪಗೊಂಡು ಒಮ್ಮೆಲೇ ಮೇಲಕ್ಕೆದ್ದುನಿಂತು ೭೧. ಶ್ರೇಷ್ಠರಾದ ಶಿವಭಕ್ತರು ಹೋಗುವ ಮಾರ್ಗವೇ ಶ್ರೇಷ್ಠವಾದ ಮಾರ್ಗ ; ಉಳಿದವರು ಹೋಗುವ ಆ ಮಾರ್ಗವೇ ದುರ್ಮಾರ್ಗ. (ಇದನ್ನು) ಅಸದೃಶವಾದ ಪಾಪದಿಂದ ತುಂಬಿಹೋದ ಹೃದಯವುಳ್ಳ ದುಷ್ಟಬುದ್ಧಿಯ

ಖಲರಾಶಾಪಾಶಯುಕ್ತರ್ದುರುಳರತಿದುರಾತ್ಮರ್ಶಿವದ್ರೋಹಿಗಳ್ಚಂ
ಚಲಚಿತ್ತರ್ಸೋಮಪಾನಚ್ಛಲರಚಿತಸುರಾಪಾನರಾನೀತಗೋಪೀ
ಮಲಘಾಲರ್ವೇದಭಾರೋದ್ವಹನಖರರುಪಾತ್ತಾನ್ಯದೋಷರ್ಸಜೀವೋ
ಜ್ವಲಪಶ್ವೌಘಪ್ರಹಿಂಸಾಪರರಮರಪುರೀಚೇಟಿಕಾಭೋಗಲೋಲರ್ ೭೨

ಹರಭಕ್ತದ್ವೇಷಿಗಳ್ಭಕ್ಷಿತಪಶುಪಲಲರ್ಕರ್ಮಚಂಡಾಲರನ್ಯಾ
ಯರತರ್ವಿತ್ತೌಘದತ್ತಾರ್ಜಿತನಿಜಸುಕೃತರ್ದಂಭಮಾತ್ಸರ್ಯಮಾಯಾ
ಪರಿಣದ್ಧರ್ಪಾಶಬದ್ಧರ್ಪರಮಮುನಿದಧೀಚಾದಿಶಾಪಾಗ್ನಿದಗ್ಧ
ರ್ಗುರುದೀಕ್ಷಾಶೈವಪಂಚಾಕ್ಷರಜಪರಹಿಭ್ರರ್ದಿವೌಕೋವರಾಕರ್ ೭೩

ಎನಿಪೀ ದುರ್ದ್ವಿಜರೊಡನೆಮ
ಗನುವಲ್ಲುತ್ತರಮನೀವುದಂತಾದೊಡಮಾಂ
ಘನಶಿವಮಹತ್ವಮತದಾ
ರ್ಢ್ಯನಿಮಿತ್ತಂ ತೋಱುವೆಂ ನಿದರ್ಶನಮನಣಂ ೭೪

ಜನವು ಯಾವ ರೀತಿಯಿಂದಲಾದರೂ ತಿಳಿಯಲು ಶಕ್ಯವೇ ? ಎಂದನು. ೭೨–೭೪. ದುಷ್ಟರೂ, ಆಸೆಯೆಂಬ ಹಗ್ಗದಿಂದ ಬಂಧಿಸಲ್ಪಟ್ಟವರೂ, ದುರುಳರೂ, ಅತ್ಯಂತ ದೋಷವುಳ್ಳ ಹೃದಯುದವರೂ, ಶಿವನಲ್ಲಿ ದ್ರೋಹ ಬಗೆಯುವವರೂ, ಚಪಲಚಿತ್ತ ವುಳ್ಳವರೂ, ಸೋಮಪಾನದ ನೆಪದಿಂದ ಮದ್ಯಪಾನ ಮಾಡುವವರೂ, ಗೋಪಿಚಂದನ ವೆಂಬ ಮಲದಿಂದ ಕೂಡಿದ ಹಣೆಯುಳ್ಳವರೂ, ವೇದಗಳ ಭಾರವನ್ನು ಹೊತ್ತ ಕತ್ತೆಗಳೂ ಅನ್ಯರ ದೋಷಗಳನ್ನು ಹೊಂದುವವರೂ, ಜೀವಸಹಿತವಾದ ಉಜ್ವಲ ಪಶುಗಳ ಸಮೂ ಹವನ್ನು ಹಿಂಸಿಸುವವರೂ, (ಕೊಲ್ಲುವವರೂ), ದೇವೇಂದ್ರನ ಪಟ್ಟಣದ ದಾಸಿಯರ ಭೋಗದಲ್ಲಿ ಆಸಕ್ತರೂ, ಶಿವನ ಭಕ್ತರನ್ನೂ ದ್ವೇಷಿಸುವವರೂ, ಪಶುಗಳ (ಗೋವುಗಳ) ಮಾಂಸವನ್ನು ಭಕ್ಷಿಸುವವರೂ, ಚಾಂಡಾಲ ಕರ್ಮವುಳ್ಳವರೂ, ಅನ್ಯಾಯದಲ್ಲಿ ಆಸಕ್ತ ರಾದವರೂ, ವಿಶೇಷ ಹಣವನ್ನು ಕೊಟ್ಟವರಿಗೆ ತಾವು ಸಂಪಾದಿಸಿದ ಪುಣ್ಯವನ್ನೇ ಧಾರೆ ಯೆರೆಯತಕ್ಕವರೂ, ಕಾಪಟ್ಯ, ಮಾತ್ಸರ್ಯ, ಭ್ರಮೆ (ಅಜ್ಞಾನ) ಗಳಿಂದ ಪರಿಣತರಾದ ವರೂ, (ವಿಸ್ತಾರಗೊಂಡವರೂ), ಮುನಿ ಶ್ರೇಷ್ಠರಾದ ದಧೀಚಿಯೇ ಮೊದ ಲಾದವರ ಶಾಪವೆಂಬ ಬೆಂಕಿಯಿಂದ ಸುಡಲ್ಪಟ್ಟವರೂ ಗುರುದೀಕ್ಷೆ, ಶಿವಪಂಚಾ ಕ್ಷರೀ ಮಂತ್ರ ಜಪದಿಂದ ದೂರವಾದವರೂ, ಆದ ದ್ವಿಜರೆಂಬ ನೀಚರೂ ಎನಿಸಿದ ದುಷ್ಟದ್ವಿಜರೊಡನೆ ಉತ್ತರಕೊಡುವುದು ನಮಗೆ ತರವಲ್ಲದ್ದು. ಹಾಗಾ ದರೂ ನಾನು ಘನವಾದ ಶೈವವೆಂಬ ಮಹತ್ವವುಳ್ಳ ಮತದ ದೃಢತೆಯ ಕಾರಣ

ವ॥ ಎಂದು ಸತ್ಯಶೌರ್ಯಸಮಗ್ರಂ ಪೂಣ್ದು ನುಡಿದು ನೀನೆಂದಂತೆ ಶಿವನಾಗಯ್ಯೋಗಿಯಂಗದೊಳಮರ್ದಂ ತೋರ್ಪೆನೀ ನಿನ್ನ ನಚ್ಚಿನ ಸೋಮಯಾಜಿಯಂಗದೊಳ್ಸಲಿಲಮನಾದೊಡಂ ಸೀಳ್ದು ತೋರ್ಪುದಿದಕ್ಕೆ ನಿಂದು ಸೋಲ್ತೊಡೀ ಪಾರ್ವರಂಗದೊಳ್ಸುನ ಕಾಂಘ್ರಿಮುದ್ರೆಯುಮನೊತ್ತಿಸಿ ಶಿಖೋಪವೀತಂಗಳನಿಳಿಪಿ ನಿಜಮತಕ್ಕೆ ಪೊಜಿಗಾಗಿ ಪೋಪಂತೆ ಮಾಳ್ಪುದೆಂಬುದನಪ್ಪುಕೆಯ್ಸಿ—

ಮನುಜೇಂದ್ರಂ ಸಭೆಗೂಡಿ ನೋಡುತಿರೆ ನಣ್ಪಂ ತನ್ಮಹಾಯೋಗಿಪ
ದ್ವನಜಕ್ಕಾನತನಾಗಿ ತನ್ನ ಕರದಿಂ ತತ್ಪಾಣಿಪಂಕೇಜಮಂ
ಬಿನದಂ ಕೆಯ್ಮಿಗೆ ಮೆಲ್ಲನೊತ್ತಿ ಪಿಡಿದಾಗಳ್ನೀವಿದಂ ಭಕ್ತಿಪಾ
ವನಧೇನುಸ್ತನಸನ್ನಿಭಾಂಗುಲಿಗಳಂ ದುರ್ದಾಂತವಾಗ್ಭಂಜನಂ ೭೫

ವ॥ ಅಂತು ನೀವಿದಾಗಳ್—

ಇಡಿದಡಸಿ ಪಾಱೆ ಪಾಲ್ವನಿ
ಯುಡುರಾಜಿಯು ತೆಱದಿನಿಂದುವಿಂ ಜೊನ್ನಂ ಮುಂ
ಗಡೆಗುರ್ವುವಂತೆ ಪಸರಿಸು
ತೊಡನಿಳಿದುದು ದುಗ್ಧಧಾರೆ ತತ್ಕರದಿಂದಂ ೭೬

ದಿಂದ ಪ್ರತ್ಯಕ್ಷ ನಿದರ್ಶನವನ್ನು ಸ್ವಲ್ಪತೋರಿಸುವೆನು. ವ॥ ಎಂದುಕೊಂಡು ಸತ್ಯದಿಂದ ಕೂಡಿದ ಸಮಗ್ರ ಶೌರ್ಯವುಳ್ಳ ಬಸವೇಶ್ವರನು ಪ್ರತಿಜ್ಞೆಮಾಡಿ ಮಾತನಾಡಿ, (ಮಹಾರಾಜಾ), ನೀನು ಮಾತನಾಡಿದ ಹಾಗೆ ಶಿವಯೋಗಿ ನಾಗಮಯ್ಯನ ದೇಹದಲ್ಲಿ ಹಾಲನ್ನೇ ತೋರಿಸುವೆನು; ಈ ನಿನ್ನ ಪ್ರೀತಿಯ ಸೋಮಯಾಜಿಯ ಶರೀರದಲ್ಲಿ ನೀರನ್ನಾದರೂ ಸೀಳಿ ತೋರಿಸು. ಈ ಪಂಥಕ್ಕೆ ನಿಂತು(ಸಿದ್ಧರಾಗಿನಿಂತು) ಸೋತರೆ ಈ ದ್ವಿಜರ ದೇಹದಲ್ಲಿ ನಾಯಿಯ ಕಾಲಿನ ಮುದ್ರೆಯನ್ನು ಒತ್ತಿಸಿ, ಜುಂಡಿಕೆ ಜನಿವಾರಗಳನ್ನು ಕಿತ್ತುಹಾಕಿ ತಮ್ಮ ಮತಕ್ಕೆ ಹೊರಗಾಗಿ ಹೋಗುವಂತೆ ಮಾಡಬೇಕು, ಎಂಬ ಮಾತನ್ನು ಒಡಂಬಡಿಸಿ—೭೫. ಬಿಜ್ಜಳಮಹಾರಾಜನು ಸಭೆಯವರೆಲ್ಲರೊಡನೆ ಕೂಡಿ ನೋಡುತ್ತಿರುವಂತೆ, ನಂಬಿ (ಶಿವನನ್ನು ನಂಬಿ) ಆ ಮಹಾಯೋಗಿಯಾದ ನಾಗಮಯ್ಯನ ಪಾದಕಮಲಕ್ಕೆ ನಮಸ್ಕಾರಮಾಡಿ ತನ್ನಕೈಯಿಂದ ಆತನ ಕಮಲದಂತಿರವ ಕೈಗಳನ್ನು ಅಧಿಕವಾದ ವಿನೋದದಿಂದ ಮೆಲ್ಲನೆ ಒತ್ತಿಹಿಡಿದು ಭಕ್ತಿಯೆಂಬ ಪವಿತ್ರ ಹಸುವಿನ ಮೊಲೆಗಳಿಗೆ ಸದೃಶವಾದ ಬೆರಳುಗಳನ್ನು ದುಷ್ಟರ ದುರ್ಭಾಷೆಗಳನ್ನು ಭಂಗಗೊಳಿಸುವ ಬಸವೇಶ್ವರನು ನೀವಿದನು. ವ॥ ಹಾಗೆ ನೀವಲಾಗಿ—೭೬. ತುಂಬಿಕೊಂಡು ರಭಸದಿಂದ ಹಾಲಿನ ಹನಿಗಳು ಹೊರಚಿಮ್ಮಿ, ನಕ್ಷತ್ರಗಳ ಸಾಲಿನಂತೆ, ಚಂದ್ರನಿಂದ ಬೆಳದಿಂಗಳು ಮುಂಭಾಗಕ್ಕೆ ಉಬ್ಬಿಬರುವಂತೆ ಆಕರದಿಂದ ಹಾಲಿನ ಧಾರೆಯು

ಉಗುರ್ವೆಳಗು ಬಳ್ಳಿವರಿದಂ
ತೊಗುಮಿಗೆ ತತ್ಕರದ ಸುಧೆಯ ಧಾರೆಗಳೆತ್ತಂ
ಮಿಗೆ ಭೋರ್ಭೋರೆನುತಿಳಿತಂ
ದಗಲದೆ ಪೊನಲಾಗಿ ಪರಿದುದಾಸ್ಥಾಯಿಕೆಯೊಳ್ ೭೭

ವ|| ಅಂತಪ್ಪ ಭಕ್ತಮಹತ್ವಮಂ ಕಣ್ಣಾರೆ ಕಂಡು—

ಆ ಸಭಾಸದರೆಲ್ಲರಚ್ಚರಿವಟ್ಟು ವಂದಿಸುತಿರ್ದರಾ
ಭೂಸತೀಪತಿಯುಂ ವಿಚಿತ್ರಮಿದೆಂದು ಭೀತಿಸಮನ್ವಿತಂ
ದಾಸಭಾವಮನಾಳುತುಂ ಶಿವನಾಗಯೋಗಿವರೇಣ್ಯನು
ದ್ಭಾಸಿತಾಂಘ್ರಿಸರೋಜಯುಗ್ಮಕೆ ಮೆಯ್ಯನಿಕ್ಕಿದನಳ್ಕಱಿಂ ೭೮

ಕರಿಕಾಲಚೋಳನೃಪತಿಗೆ
ಪುರರಿಪು ಪೊಮ್ಮಳೆಯನಂದು ಕಱೆಯಿಸಿದಂ ಮೇ
ಣರದಿಂದು ಬಸವರಾಜಂ
ಗುರುಕರಪೀಯೂಷವರ್ಷಮಂ ಕಱೆಯಿಸಿದಂ ೭೯

ವ|| ಎಂದು ಮತ್ತಮಿರದೆ—

ಮಲರಹಿತ ದಿವ್ಯ ಶಿವಮಯ
ವಿಲಸಿತ ಶುಭಕಾಯನೀ ಮಹಾಮಹಿಮನೆನು
ತ್ತಲರ್ದು ಶಿವನಾಗದೇವನ
ನಲಘುಬುಧರ್ಮಣಿದು ಭಕ್ತಿಯಿಂ ಕೀರ್ತಿಸಿದರ್ ೮೦

ವಿಸ್ತಾರಗೊಂಡು (ಅರ್ಘಗೊಂಡು) ಆ ಕೂಡಲೆ ಇಳಿಯಲಾರಂಭಿಸಿತು. ೭೭. ಉಗುರಿನ ಕಾಂತಿಯೇ ಮುಂದುವರಿದಿದೆಯೋ ಎಂಬಂತೆ ಮಿತಿಮೀರಿ ಹೊರಸೂಸಿ, ಆ ಕೈಯ ಹಾಲಿನ ಧಾರೆಗಳು ಎಲ್ಲಕಡೆಗೂ, ಭೋರ್ಭೋರೆಂದು ವಿಚ್ಛಿತ್ತಿಯಿಲ್ಲದೆ (ಧಾರಾಕಾರವಾಗಿ) ಸುರಿದು ಪ್ರವಾಹವಾಗಿ ಆಸ್ಥಾನದ ಒಳಭಾಗಕ್ಕೆ ಹರಿಯಿತು. ವ|| ಅಂತಹ ಭಕ್ತನ ಮಾಹಾತ್ಮ್ಯೆಯನ್ನು ಕಣ್ಣಾರ ಕಂಡು—೭೮. ಆ ಸಭೆಯಲ್ಲಿ ನೆರೆದಿದ್ದವರೆಲ್ಲ ಆಶ್ಚರ್ಯಪಟ್ಟು ನಮಸ್ಕಾರ ಮಾಡತೊಡಗಿದರು. ಆ ಬಿಜ್ಜಳ ಮಹಾರಾಜನೂ ಕೂಡ ಇದು ವಿಚಿತ್ರವಾದದ್ದೆಂದು ಭೀತಿಯಿಂದಕೂಡಿ ದಾಸಭಾವವನ್ನು ಹೊಂದಿ, ಆ ಶಿವನಾಗಮಯ್ಯ ಯೋಗಿಶ್ರೇಷ್ಠನ ಪ್ರಕಾಶಮಾನವಾದ ಪಾದಕಮಲ ದ್ವಯಕ್ಕೆ ಪ್ರೀತಿಯಿಂದ ನಮಸ್ಕಾರ ಮಾಡಿದನು, ೭೯. ಕರಿಕಾಲ ಚೋಳ ಮಹಾರಾಜನಿಗೆ ಪರಮೇಶ್ವರನು ಹಿಂದೆ ಹೊನ್ನಿನ ಮಳೆಯನ್ನು ಸುರಿಸಿದನು. ಈಗ ತಪ್ಪದೆ ಬಸವೇಶ್ವರನು ಗುರುವಾದ ನಾಗಮಯ್ಯನ ಕೈಯಿಂದ ಅಮೃತದ ಮಳೆಯನ್ನೇ ಸುರಿಸಿದನು, ವ|| ಎಂದು ಮತ್ತೂ ತಪ್ಪದಂತೆ—೮೦. ಪಾಪರಹಿತನಾದ ಶ್ರೇಷ್ಠ ಶಿವಮಯನಾದ ಪ್ರಕಾಶಿಸುವ ಶುಭ ಶರೀರಿಯಾದ ಈ ಶಿವನಾಗಮಯ್ಯನು ಮಹಾಮಹಿಮಾಶಾಲಿಯೆಂದು ಸಂತೋಷಗೊಂಡು ಮಹಾಜ್ಞಾನಿಗಳೆಲ್ಲ ನಮಸ್ಕಾರಮಾಡಿ, ಹೊಗಳಿದರು.

ಜಸದಿಂ ಸೊದೆಯಿಂ ಸೋಲದಿ
ನೆಸೆವೆಣ್ದೆಸೆಯುಂ ಧರಿತ್ರಿಯುಂ ವಾದಿಮುಖ
ಪ್ರಸರಮುಮನೊರ್ಮೆ ಬೆಳ್ಪೇ
ಱಿಸಿದಂ ಗಡ ಬಸವನೆಸಕಮೇನತಿಶಯಮೋ ೮೧

ವ॥ ಎಂದು ಬಿಜ್ಜಳಂ ಬಗೆದಂದು ಪೊಗಳುತ್ತುಮಿರ್ದನಲ್ಲಿ ಪರವಾದಿಗಳೆಲ್ಲರ್ನಾಣ್ಚಿ ತಲೆವಾಗಿ ಕಾರ್ಪಣ್ಯಂ ದೋಱಿ ಕೆಯ್ಗಳಂ ಮುಗಿದು—

ಪರಮರಹಸ್ಯಮೀ ಮತಮಹತ್ವಮಿದೆಮ್ಮ ಕುಬುದ್ಧಿಗಳ್ಗೆ ಗೋ
ಚರಿಕುಮೆ ದೇವ ಮುನ್ನಱಿಯದೆಂದಪರಾಧಮನೊರ್ಮೆ ಸೈರಿಸ
ಜ್ಞರನಭಿಮಾನಹೀನರನಿಳಾಜನದೂಷ್ಯರನೆಮ್ಮನೊಲ್ಮೆಯಿಂ
ಪೊರೆ ಭವದೀಯ ದಿವ್ಯಗುಣಮಂ ಮೆಱೆ ಭವ್ಯದಯಾಸುಧಾಂಬುಧೀ ೮೨

ವ॥ ಎಂದು ಶಿವನಾಗದೇವನಿದಿರೊಳ್ಪೊಡಮಟ್ಟು ಸೊರ್ಕಳಿದು ಶರಣ್ಬೊಕ್ಕಭಯಮಂ ಬೇಡುವ ಧರಾಮರರ್ಗಭಯಮಂ ದಯೆಗೆಯ್ದು ಪೊರೆದು—

೮೧. ಯಶಸ್ಸಿನಿಂದ ದಶದಿಕ್ಕುಗಳನ್ನು, ಅಮೃತದಿಂದ (ಹಾಲಿನಿಂದ) ಭೂಮಿಯನ್ನು, ಸೋಲಿಸುವಿಕೆಯಿಂದ ವಾದಮಾಡುವ ಜನರ ಮುಖಗಳ ಸಮೂಹವನ್ನು, ಒಮ್ಮೆಲೇ ಬಿಳುಪುಗೊಳಿಸಿದನಲ್ಲವೇ ; ಬಸವಣ್ಣನ ಈ ಕ್ರಿಯೆಯು (ಉದ್ಯೋಗವು) ಅದೇನು ಅತಿಶಯವಾದುದೋ ! (ವಾದಿಜನರ ಮುಖವನ್ನು ಬಿಳುಪು ಮಾಡಿದನೆಂದರೆ ಈ ಮಾಹಾತ್ಮ್ಯಗೆ ಭಯಗೊಂಡು ಬಿಳಿಚಿಕೊಂಡು ಮುಖವುಳ್ಳವರಾದರೆಂದು ಭಾವ) ವ॥ ಹೀಗೆಂದು ಬಿಜ್ಜಳನು ಮನಸ್ಸಿನಲ್ಲಿ ಭಾವಿಸಿ, ಹೊಗಳತೊಡಗಿದನು, ಪರವಾದಿಗಳೆಲ್ಲರೂ ನಾಚಿ, ತಲೆತಗ್ಗಿಸಿ, ಕಾರ್ಪಣ್ಯಭಾವವನ್ನು ತೋರಿಸಿ, ಕೈಗಳನ್ನು ಜೋಡಿಸಿ

೮೨. ಅತ್ಯಂತ ರಹಸ್ಯದಿಂದ ಕೂಡಿದ ಈ ವೀರಶೈವ ಮತದ ಮಾಹಾತ್ಮ್ಯೆಯು ಕುತ್ಸಿತ ಬುದ್ಧಿಗೆ ತೋಚೀತೇ ? ದೇವ ಹೇ ಭವ್ಯವಾದ ದಯೆಯೆಂಬ ಅಮೃತ ಸಮುದ್ರ ಸದೃಶನೇ, ಈ ಪೂರ್ವದಲ್ಲಿ ಅರಿಯದೆ ಮಾತನಾಡಿದ ನಮ್ಮ ಅಪರಾಧವನ್ನು ಇದೊಂದು ಸಲ ಕ್ಷಮಿಸು (ತಡೆದುಕೋ). ಅಜ್ಞಾನಿಗಳೂ, ಅಭಿಮಾನ ಹೀನರೂ, ಭೋಜನದಿಂದ ದೂಷಿಸಿಕೊಳ್ಳುವವರೂ ಆದ ನಮ್ಮನ್ನು ಪ್ರೀತಿಯಿಂದ ರಕ್ಷಿಸು, ನಿನ್ನಶ್ರೇಷ್ಠವಾದ ಗುಣಗಳನ್ನು (ನಮ್ಮನ್ನು ಕ್ಷಮಿಸಿ ರಕ್ಷಿಸುವುದರ ಮೂಲಕ) ಮೆರೆಯಿಸು. ವ॥ ಹೀಗೆಂದು ಶಿವನಾಗದೇವನ ಎದುರಿಗೆ ನಮಸ್ಕಾರ ಮಾಡಿ ಸೊಕ್ಕನ್ನೆಲ್ಲ ನಾಶಗೊಳಿಸಿಕೊಂಡು, ಶರಣಾಗತರಾಗಿ ಅಭಯವನ್ನು ಬೇಡುವ ದ್ವಿಜ

ವಿಳಸದ್ದಂತಾವಳಸ್ಕಂಧದ ಮಣಿಮಯಪೀಠಾಗ್ರದೊಳ್ತನ್ನ ಪೆಂಪ
ಗ್ಗಳಿಪನ್ನಂ ಮೂರ್ತಿಗೊಳ್ವಂತೆಸಗಿ ವಿಸುಪ ನಾಗಾರ್ಯನಂ ಪಿಂತೆ ತಾನುಂ
ಕಳಿವೆತ್ತೇರಂತೆ ಕುಳ್ಳಿರ್ದತುಳವಿಭವದಿಂ ಮಂದಿರಂಬೊಕ್ಕು ತನ್ನಂ
ಜಃಳಪಾದಾಂಭೋಜಪೂಜೋತ್ಸವದಿನೆಸೆದನಾನಂದಸಾಂದ್ರಂ ವೃಷೇಂದ್ರಂ ೮೩

ಕೆಂಬಾವಿಭೋಗಚರಿತವು
ನಿಂಬಾಗಿರೆ ಪೇಳ್ವ ಕೇಳ್ವ ಸುಜನರ್ಗಿಳೆಯೊ
ಳ್ಸಾಂಬಶಿವನೀವನತಿ ಕೃಪೆ
ಯಿಂ ಬಹುಸುಖಮಂ ಗಣೇಂದ್ರಪದಸಂಪದಮಂ ೮೪

ಶ್ವಪಚೋದ್ಭಟಗುಡ್ಡಾಂಬಾ
ವಿಪುಳಚರಿತ್ರಮನೊಲಿದು ಕೇಳ್ವ ನರರ್ಗೊ
ಲ್ದಪರಿಮಿತ ಸುಖಮನೀವಂ
ಕಪರ್ದಿ ಕರುಣಾಳುವೈಹಿಕಾಮುಷ್ಮಿಕಮಂ ೮೫

ಶಿವನಾಗಯೋಗಿ ಸುಕಥಾಸುಧಾರಸಂ
ಸವಿದರ್ಗೆ ಮಾಳ್ಕುಮಜರಾಮರತ್ವಮಂ
ಕಿವಿಯಿಂದಮೆಂದು ಮಿಗೆ ನಾಣ್ಚಿ ನಾಕಮಂ
ತವೆ ಪೊಕ್ಕಡಂಗಿದುದು ನಿರ್ಜರಾಮೃತಂ ೮೬

ಸಮೂಹಕ್ಕೆಲ್ಲ ಅಭಯವನ್ನು ಕರುಣಿಸಿ ರಕ್ಷಣೆಮಾಡಿ—೮೩. ಶೋಭಿಸುವ ಆನೆಯ ಹೆಗಲಿನ ರತ್ನಖಚಿತವಾದ ಅಂಬಾರಿಯ ಮೇಲೆ ಶೋಭಾಮೂರ್ತಿಯಾದ ನಾಗ ಮಯ್ಯನನ್ನು ತನ್ನ ಘನತೆಯು ಹೆಚ್ಚಾಗುವಂತೆ ಮೂರ್ತಿಮತ್ತಾಗಿ ತೋರುವಂತೆ ಕುಳ್ಳಿರಿಸಿ, ಹಿಂಭಾಗದಲ್ಲಿ ತಾನೂ ಉತ್ಸಾಹಗೊಂಡು ಕ್ರಮವಾಗಿ ಕುಳಿತುಕೊಂಡು ಅಸದೃಶ ವೈಭವದಿಂದ ತನ್ನ ಮನೆಯನ್ನು ಪ್ರವೇಶಿಸಿ ಆತನ ಮನೋಹರ ಪಾದ ಕಮಲಗಳನ್ನು ಪೂಜಾಮಹೋತ್ಸವದಿಂದ ಆನಂದದಿಂದ ತುಂಬಿದ ಆ ಬಸವೇಶ್ವರನು ಶೋಭಿಸುತ್ತಿದ್ದನು. ೮೪. ಕೆಂಬಾವಿ ಭೋಗಣ್ಣನ ಚರಿತ್ರೆಯನ್ನು ವಿಸ್ತಾರವಾಗಿ (ಕೂಲಂಕಷವಾಗಿ) ಹೇಳುವ ಕೇಳುವ ಸಜ್ಜನರಿಗೆ ಭೂಮಿಯಲ್ಲಿ ಸಾಂಬಶಿವನು ಅನೇಕ ಸುಖಗಳನ್ನೂ, ಶಿವಗಣ ಶ್ರೇಷ್ಠತೆಯ ಸಂಪತ್ತನ್ನೂ ಕೃಪೆಯಿಂದ ದಯಪಾಲಿಸುವನು. ೮೫. ಶ್ವಪಚಯ್ಯ, ಉದ್ಭಟದೇವ, ಗುಡ್ಡಾಂಬೆಯರ ವಿಸ್ತಾರವಾದ ಚರಿತ್ರೆಯನ್ನು ಸಂತೋಷದಿಂದ ಕೇಳುವ ಮನುಷ್ಯರಿಗೆ ಕರುಣಾಳುವಾದ ಪರಮೇಶ್ವರನು ಅಪರಿಮಿತ ವಾದ ಐಹಿಕ ಮತ್ತು ಆಮುಷ್ಮಿಕ ಸುಖವನ್ನು ಪ್ರೀತಿಯಿಂದ ಕೊಡುವನು. ೮೬. ಶಿವನಾಗಯೋಗೀಶ್ವರ ಸತ್ಕಥೆಯೆಂಬ ಅಮೃತರಸವನ್ನು ಕಿವಿಯಿಂದ ಕುಡಿದವರಿಗೆ ಅಜರಾಮರತ್ವವನ್ನು (ಮುಪ್ಪುಸಾವುಗಳಿಲ್ಲದಿರುವಿಕೆಯನ್ನು) ಉಂಟುಮಾಡುವನೆಂದು ಹೆಚ್ಚಾಗಿ ನಾಚಿಕೆಗೊಂಡು ದೇವಲೋಕದ ಅಮೃತವು ಸ್ವರ್ಗಲೋಕವನ್ನು ಚೆನ್ನಾಗಿ

ಹರಿವಿಧಿಸುರಪತಿನತಪದವನಜೇ
ಕರತಳಚಳದಸಿಹ್ನತಖಲದನುಜೇ
ವರವಿತರಣಜಿತದಿವಿಸದವನಿಜೇ
ಪೊರೆ ಶರಣಜನರ ನಗವರತನುಜೇ ೮೭

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಶಿವನಾಗಿದೇವಮಹತ್ವಕಥನಂ
ಏಕೋನಚತ್ವಾರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೩೯ಕ್ಕೆ ಪದಗಣನೆ ೩೨೩೬ಕ್ಕೆ ಮಂಗಳಂ ಮಹಾಶ್ರೀ॥

ಹೊಕ್ಕು ಅಡಗಿ ಕೊಂಡಿತು ೮೭. ವಿಷ್ಣು, ಬ್ರಹ್ಮ, ದೇವೇಂದ್ರರಿಂದ ನಮಸ್ಕರಿಸಿ ಕೊಳ್ಳಲ್ಪಡುವ ಪಾದಕಮಲವುಳ್ಳವಳೇ, ಕೈಯಲ್ಲಿ ಚಲಿಸುತ್ತಿರುವ ಖಡ್ಗದಿಂದ ನಾಶ ಮಾಡಲ್ಪಟ್ಟ ದುಷ್ಟರಾಕ್ಷಸರ ಸಮೂಹವುಳ್ಳವಳೇ, ವರಗಳನ್ನು ದಾನಮಾಡುವುದರಲ್ಲಿ ದೇವಲೋಕದ ಕಲ್ಪವೃಕ್ಷವನ್ನು ಗೆದ್ದವಳೇ, ಪರ್ವತ ಶ್ರೇಷ್ಠನಾದ ಹಿಮವಂತನ ಪುತ್ರಿಯೇ, ಶರಣ ಜನರನ್ನು ರಕ್ಷಿಸು.

ಮೂವತ್ತೊಂಬತ್ತನೆಯ ಆಶ್ವಾಸವು ಸಮಾಪ್ತವಾಯಿತು

# ಚತ್ವಾರಿಂಶಾಶ್ವಾಸಂ

## [ಚಂಡಪುತ್ರ ವಿವಾದ]

ಶ್ರೀರುಚಿರಗಿರಿಸುತಾಕಚ
ಭಾರಪಯೋಧರಮಯೂರನನುಪಮಸುಗುಣಾ
ಧಾರನಘದೂರನತಿಗಂ
ಭೀರಂ ಪೊರೆಗೆಮ್ಮನಾವಗಂ ಶಿವಲಿಂಗಂ ೧

ಘನಮಾಧ್ವಧ್ವಾಂತ ವಿಧ್ವಂಸನಖರಕಿರಣಂ ಪಾಂಚರಾತ್ರೋರ್ವಿಭೃದ್ಭೇ
ದನಶಂಬಂ ಚಂಡ ಜೈನಪ್ರಕಟಕರಟಿಕಂಠೀರವಂ ದುಷ್ಟಚಾರ್ವಾ
ಕನಗಪ್ರೋದ್ಯತ್ಕುಠಾರಂ ಕುಟಿಲಮತಿಯುತಾಬದ್ಧಬೌದ್ಧಾವಳೀಕಾ
ನನದಾವಂ ದೃಪ್ಯದದ್ವೈತಮತಜಳದಝಂಝಾನಿಲಂ ಶ್ರೀವೃಷೇಂದ್ರಂ ೨

ಒರ್ಮೆ ಚರಪೂಜನದಿನೊರ್ಮೆಹರನರ್ಚನೆಯಿ
ನೊರ್ಮೆ ಶಿವಮಂತ್ರಜಪದುಜ್ಜುಗದ ನಣ್ಪಿಂ
ದೊರ್ಮೆ ಗಣಸೇವನೆಯಿನೊರ್ಮೆ ಮೃಡಭಾವನೆಯಿ
ನೊರ್ಮೆಚರಪಾದಜಲಸೇಚನೆಯಲಂಪಿಂ

### ಚಂಡಪುತ್ರ ವಿವಾದ

೧. ಮಂಗಳಕರಳೂ ಮನೋಹರಳೂ ಆದ ಪಾರ್ವತೀದೇವಿಯ ಕೇಶ ಸಮುದಾಯವೆಂಬ ಮೋಡಕ್ಕೆ ನವಿಲಿನಂತಿರುವವನೂ, ಅಸದೃಶವಾದ ಸದ್ಗುಣಗಳಿಗೆ ಆಧಾರಭೂತನೂ, ಪಾಪರಹಿತನೂ, ಅತ್ಯಂತ ಗಂಭೀರನೂ ಆದ ಶಿವಲಿಂಗನು ನಮ್ಮನ್ನು ರಕ್ಷಿಸಲಿ. ೨-೩. ಘನವಾದ ಮಾಧ್ವಸಿದ್ಧಾಂತ ವೆಂಬ ಕತ್ತಲೆಯನ್ನು ಹೋಗಲಾಡಿಸುವುದರಲ್ಲಿ ಸೂರ್ಯ ನಂತಿರುವವನೂ, ಪಾಂಚರಾತ್ರಮತವೆಂಬ ಪರ್ವತ ಗಳನ್ನು ಭೇದಿಸತಕ್ಕ ವಜ್ರಾಯುಧ ಪ್ರಾಯನೂ, ಸಮರ್ಥರಾದ ಜೈನಮತಸ್ಥರೆಂಬ ಪ್ರಸಿದ್ಧ ಆನೆಗಳಿಗೆ ಸಿಂಹಪ್ರಾಯನಾದವನೂ, ದುಷ್ಟರಾದ ಚಾರ್ವಾಕರೆಂಬ ಅರಣ್ಯಕ್ಕೆ ದೊಡ್ಡದಾದ ಕೊಡಲಿಯಂತಿರುವವನೂ, ಕುಟಿಲಬುದ್ಧಿಯಿಂದ ಕೂಡಿದ, ಶಾಸ್ತ್ರ ಬದ್ಧರೆಂಬ ಕಾನನಕ್ಕೆ ದಾವಾನಳಸ್ವರೂಪನೂ, ಗರ್ವದಿಂದ ಕೂಡಿದ ಅದ್ವೈತ ಮತ ವೆಂಬ ಮೋಡಗಳಿಗೆ ಬಿರುಗಾಳಿಯಂತಿರುವವನೂ ಆದ ಬಸವೇಶ್ವರನು ಒಮ್ಮೆ ಜಂಗಮ ಪೂಜೆಯಲ್ಲಿ, ಒಮ್ಮೆ ಶಿವಲಿಂಗಪೂಜಾ ಕಾರ್ಯದಲ್ಲಿ, ಒಮ್ಮೆ ಶಿವಮಂತ್ರವನ್ನು ಜಪಿಸುವ ಕಾರ್ಯದಲ್ಲಿನ ಪ್ರೀತಿಯಲ್ಲಿ, ಒಮ್ಮೆ ಶಿವಗಣಗಳ ಸೇವೆಮಾಡುವಿಕೆಯಲ್ಲಿ, ಒಮ್ಮೆ ಶಿವ ಭಾವದಲ್ಲಿ, ಒಮ್ಮೆ ಜಂಗಮರ ಪಾದೋದಕವನ್ನು ಸೇಚನೆಗೊಳಿಸಿ ಕೊಳ್ಳುವಿಕೆಯ ಸೊಗಸಿನಲ್ಲಿ, ಒಮ್ಮೆ ಪರಮತವಾದಿಗಳನ್ನು ಭಂಗಗೊಳಿಸುವಿಕೆಯಲ್ಲಿ, ಒಮ್ಮೆ ಶಿವಗಣ

ದೊರ್ವೆ ಪರಭಂಜನದಿನೊರ್ವೆ ಗಣರಂಜನದಿ
ನೊರ್ವೆ ಶಿವಸತ್ಕಥೆಯನಾಲಿಸುವ ಪೆಂಪಿಂ
ದೊರ್ವೆ ಚರತುಷ್ಟಿಗಳಿನೊರ್ವೆ ಗಣಗೋಷ್ಠಿಗಳಿ
ನೊರ್ವೆ ಶಿವಗೀತರಸದಿಂ ಮೆಱೆವುತಿರ್ದಂ ೩

ಅನುದಿನಮಿಂತೆಸೆವುತೆ ಜನ
ಪನ ಸಭೆಯೊಳ್ಗೆಲ್ದು ವಾದಿಸುವ ವಾದಿಗಳಂ
ಘನದೃಷ್ಟಪ್ರತ್ಯಯಮಂ
ಮನದೊಲವಿಂ ತೋಱಿ ಜಯಮನಾಳ್ದೊಪ್ಪಿರ್ದಂ ೪

ಶರಣರ ಚಿಂತಾಮಣಿ ಸ
ತ್ಪುರುಷರ ಸುರಧೇನು ಬುಧರ ಭಾಗ್ಯೋದಯಮು
ರ್ವರೆಯ ಪೊಸಸೈಪು ಭಕ್ತರ
ವರನಿಧಿ ಭಾವಕರ ಮುಕುರಮಾ ವೃಷಭೇಂದ್ರಂ ೫

ನೆನೆದನೆ ದೇವನೀಕ್ಷಿಸಿದನೇ ದಿವಿಪತ್ಪತಿ ತತ್ಪದಾಂಬುಜ
ಕ್ಕನುನಯದಿಂದೆ ಬಂದೆಱಗಿದಾತನೆ ಸಿದ್ಧನಲಂಪುವೆತ್ತು ಕೀ
ರ್ತನೆಯನೊಡರ್ಚಿದಾತನೆ ಗಣಾಗ್ರಣಿ ತತ್ಕರುಣಾರ್ದ್ರನೇತ್ರಪಾ
ವನರುಚಿಯಂ ಕರಂ ಪಡೆದನೇ ನಿಜಮುಕ್ತನಶೇಷ ಲೋಕದೊಳ್ ೬

ವ॥ ಎಂಬಸದೃಶ ಪ್ರಶಸ್ತಿಗಡರ್ಪಾಗಿ ಮಹಿಮಾಕರಂ ರಂಜಿಸಿರೆ ಮತ್ತಮಾ ಕಲ್ಯಾಣ ಕಟಕದಲ್ಲಿ—

ಸಮೂಹವನ್ನು ರಂಜನೆಗೊಳಿಸುವಿಕೆಯಲ್ಲಿ, ಒಮ್ಮೆ ಶಿವಸಂಬಂಧದ ಕಥೆಗಳನ್ನು ಕೇಳುವ ಹಿರಿಮೆಯಲ್ಲಿ, ಒಮ್ಮೆ ಜಂಗಮರನ್ನು ಸಂತುಷ್ಟಿಗೊಳಿಸುವಿಕೆಯಲ್ಲಿ, ಒಮ್ಮೆ ಶಿವಗಣಗಳ ಗೋಷ್ಠಿಯಲ್ಲಿ ಒಮ್ಮೆ ಶಿವಗೀತೆಗಳ ರಸದಲ್ಲಿ (ಕಾಲಯಾಪನೆಮಾಡುತ್ತ) ಶೋಭಿಸುತ್ತಿದ್ದನು. ೪. ಪ್ರತಿ ದಿನವೂ ಹೀಗೆ ಶೋಭಿಸುತ್ತ ರಾಜನಸಭೆಯಲ್ಲಿ ವಾದಮಾಡುವ ವಾದಿಜನಗಳನ್ನು ಗೆದ್ದು, ಶ್ರೇಷ್ಠವಾದ ಪ್ರತ್ಯಕ್ಷ ಪ್ರಮಾಣ (ಪವಾಡ) ಗಳನ್ನು ಮನಃಪೂರ್ವಕವಾಗಿ ತೋರಿಸಿ ಜಯವನ್ನು ಸಂಪಾದಿಸಿ ಒಪ್ಪಿದ್ದನು. ೫. ಶರಣಜನರ ಚಿಂತಾರತ್ನ, ಸತ್ಪುರುಷರ ಕಾಮಧೇನು, ಜ್ಞಾನಿಗಳ ಭಾಗ್ಯದ ಉದಯ, ಭೂಲೋಕದ ನೂತನವಾದ ಪುಣ್ಯ, ಭಕ್ತ ಜನರ ಶ್ರೇಷ್ಠ ಐಶ್ವರ್ಯ, ಧ್ಯಾನ ಮಾಡುವವರ ಕನ್ನಡಿ–ರೂಪನಾಗಿ ಆ ಬಸವೇಶ್ವರನಿದ್ದನು. ೬. ಸಮಸ್ತ ಲೋಕದಲ್ಲಿ (ಇಂಥ ಬಸವೇಶ್ವರನನ್ನು) ನೆನೆದವನೇ ದೇವತೆಯು ; ನೋಡಿದವನೇ ದೇವಲೋಕದ ಒಡೆಯನಾದ ದೇವೇಂದ್ರ ; ಅವನ ಪಾದಕಮಲಗಳಿಗೆ ಪ್ರೀತಿಯಿಂದ ಬಂದು ನಮಸ್ಕರಿಸಿದವನೇ ಸಿದ್ಧಪುರುಷನು ; ವೈಭವದಿಂದ ಕೂಡಿ ಸ್ತೋತ್ರವನ್ನು ಮಾಡಿದ ವನೇ ಶಿವಗಣ ಶ್ರೇಷ್ಠನು ; ಆತನ ಕರುಣಾರಸದಿಂದ ಆರ್ದ್ರಗೊಂಡ ನೇತ್ರಗಳ ಪವಿತ್ರ ಕಾಂತಿಯನ್ನು ಚೆನ್ನಾಗಿ ಪಡೆದವನೇ ಮುಕ್ತನೆನಿಸುವನು. ವ॥ ಹೀಗೆನ್ನುವ ಅಗಣಿತ ಕೀರ್ತಿಗೆ ಆಶ್ರಯನಾಗಿ ಮಹಿಮೆಗಳಿಗೆ ಆಗರನಾದ ಬಸವೇಶ್ವರನು ಶೋಭಿಸುತ್ತಿರಲು

ಕರುಣಾಳುಗಳನಘರ್ಗುರು
ಚರಶಿವಲಿಂಗೈಕನಿಷ್ಠರಮಳಿನಭಾವ
ರ್ಪರಮತಜಯಶೀಲರ್ಭಾ
ಸುರಗುಣರಪ್ರತಿಮವಿಭವರಭವನ ಶರಣರ್ ೭

ಮಾಚಯ್ಯಂ ಕೇಶಿರಾಜಂ ಮೊರಟದ ಕಲಿಬಂಕಯ್ಯನಾ ರುದ್ರದೇವಂ
ಕಾಚಯ್ಯಂ ಮಾಯಿಭಟ್ಟರ್ವಿಮಳಕದಿರ ರೇಮಯ್ಯನುಂ ಕಿನ್ನರಯ್ಯಂ
ಬಾಚಯ್ಯಂ ಮಲ್ಲಿನಾಥಂ ಮಧುವರಸನುಮಾದಯ್ಯನುಂ ಗೋಣಿ ಮಾರಂ
ಬೀಚಯ್ಯಂ ಭೋಗಿದೇವಂ ಕಲಿಗೆಲಸದ ಸೋಮ[1]ಣ್ಣನಾ ಮಾದಿರಾಜಂ ೮

ಗಂಡಗತ್ತರಿ ನಾಚನಲ್ಲಮದೇವನರ್ಘ್ಯದ ಹೊನ್ನಯಂ
ಮುಂಡು ಬೊಮ್ಮಯನಪ್ಪಿದೇವನಮಾತ್ಯ ಮಲ್ಲಯನೈಚಯಂ
ಮಿಂಡ ಬೊ[2]ಮ್ಮಯನಜ್ಜ[3]ದಾಸಯನಾರ್ಯಮಂ ಕಲಕೇತಯಂ
ಪಂಡಿತಯ್ಯನುಮುತ್ತಮಾಂಗದ ಕೇಶಿ ಜೇಡರ ದಾಸಯಂ ೯

ಲಕ್ಕಯ್ಯಂ ಕಲಿ ಡೋಹರ
ಕಕ್ಕಯ್ಯಂ ಕಲ್ಲಿದೇವನುದರರದ ರಾಮಂ
ಚಿಕ್ಕಯ್ಯಂ ಧೂರ್ಜಟಿಯಾ
ಯ್ದಕ್ಕಿಯ ಮಾರಯ್ಯನುರಗರಾಯಂ ಧವಳಂ ೧೦

ಸುರಗಿಯ ಚೌಡಯ್ಯಂ ಮಾ
ದರ ದೂಡಯ್ಯಂ ತೆಲುಂಗ ಜೊಮ್ಮಯ್ಯಂ ಡಿಂ
ಗರಿ ಮಲ್ಲಯ್ಯಂ ಕಾಲಾ
ಗ್ನಿರುದ್ರನೇಕಾಂತರಾಮಯಂ ಕಪಿಲೇಶಂ ೧೧

ಆ ಕಲ್ಯಾಣನಗರದಲ್ಲಿ—೭–೧೯. ಕರುಣಾಶಾಲಿಗಳೂ, ಪಾಪಗಳಿಂದ ದೂರರಾದವರೂ, ಗುರು-ಲಿಂಗ-ಜಂಗಮ ಏಕನಿಷ್ಠಾಪರರೂ, ಪರಿಶುದ್ಧವಾದ ಭಾವವುಳ್ಳವರೂ, ಅನ್ಯ ಮತಗಳನ್ನು ಜಯಿಸುವುದೇ ಶೀಲವಾಗಿ ಉಳ್ಳವರೂ, ಪ್ರಕಾಶಮಾನವಾದ ಸದ್ಗುಣಗಳಿಂದ ಕೂಡಿದವರೂ, ಅಸದೃಶ ವೈಭವ ಸಂಪನ್ನರೂ ಪರಮೇಶ್ವರನ ಶರಣರೂ ಆದ ಮಡಿವಾಳ ಮಾಚಯ್ಯ, ಕೇಶಿರಾಜ, ಮೊರಟದ ಶೂರಬಂಕಯ್ಯ, ಆ ರುದ್ರದೇವ, ಕಾಚಯ್ಯ, ಮಾಯಿಭಟ್ಟರೂ, ಪರಿಶುದ್ಧ ಕದಿರ ರೇಮಯ್ಯ, ಕಿನ್ನರಿಬೊಮ್ಮಯ್ಯ, ಬಿಬ್ಬ ಬಾಚರಸ, ಮಲ್ಲಿನಾಥ, ಮಧುವರಸ, ಮಾದಯ್ಯ, ಗೋಣಿಯ ಮಾರಯ್ಯ, ಬೀಚಯ್ಯ, ಭೋಗಿದೇವ, ಶೂರಕಾರ್ಯನಿರತನಾದ ಸೋಮಣ್ಣ, ಮಾದಿರಾಜ, ಗಂಡುಗತ್ತರಿ ನಾಚಯ್ಯ, ಅಲ್ಲಮದೇವ, ಅಗ್ಗವಣಿ ಹೊನ್ನಯ್ಯ, ಮುಂಡು ಬೊಮ್ಮಯ್ಯ, ಅಪ್ಪಿದೇವ, ಅಮಾತ್ಯ ಮಲ್ಲಯ್ಯ. ಐಚಯ್ಯ, ಮಿಂಡ ಬೊಮ್ಮಯ್ಯ, ಅಜ್ಜ ದಾಸಯ್ಯ, ಆರ್ಯಮ, ಕಲಕೇತ ಬೊಮ್ಮಯ್ಯ, ಪಂಡಿತಯ್ಯ, ಉತ್ತಮಾಂಗದ ಕೇಶಿ, ಜೇಡರ

1 ಮ(ದ) 2 ಜೊ(ದ) 3 ಬ್ಬ(ಅ)

ಶಿವರಾತ್ರಿಯ ಸಂಕಣ್ಣಂ
ಕವಿಲೆಯ ಬೊಮ್ಮಯ್ಯನಮರಗುಂಡದ ದೇವಂ
ಚವರದ ಚಿಕ್ಕಯ್ಯಂ ಪ
ಲ್ಲವರಾಯಂ ಸಿಂಗಿ ಬೊಪ್ಪಯಂ ಶಿವದೇವಂ ೧೨

ಪಡಿಯಱಿರುತ್ತಯಂ ಮೊಱನ ವೇಮಯಸಂಕದ ವೀರಸಂಗಯಂ
ಬಡವರ ಬೊಮ್ಮಯಂ ನಗೆಯ ಮಾರಯನುಂ ಗಣದಾಸ ಭೀಮಯಂ
ನಿಡುಗುಡಿ ಮಾರನಂಬಿಗರ ಚೌಡಯನಿಂಡೆಯ ಬೊಮ್ಮನಪ್ಪಯಂ
ಗೊಡಲದ ಮಲ್ಲಯಂ ಬೆರಲ ಮಾರಯನೆಳ್ಚಱ ಮುಕ್ತಯಾಹ್ವಯಂ ೧೩

ಮುಸುಟಿಯ ಚೌಡಯ್ಯಂ ಬಾ
ಣಸ[1]ಭೀಮಯ್ಯಂ ನಿರಾಳದೇವಂ ಶಾಂತಂ
ದಸರಯ್ಯಂ ಗೊಗ್ಗಯ್ಯಂ
ಮಸಣಯ್ಯಂ ಮಲ್ಲಿನಾಥನಿಂಡೆಯ ಶಾಂತಂ ೧೪

ಕೂಗಿನ ಮಾರಯ್ಯಂ ಶಿವ
ನಾಗಯ್ಯಂ ಶಂಕರಯ್ಯನಡಪದ ರೇಚಂ
ರಾಗದ ಮಾರಂ ವೀರಂ
ಯೋಗದ ಶಾಂತಯ್ಯನಮೃತನಾಥಂ ಸಕಳಂ ೧೫

ದಾಸಯ್ಯ, ಲಕ್ಕಯ್ಯ, ಕಲಿಯಾದ ಡೋಹರ ಕಕ್ಕಯ್ಯ, ಕಲ್ಲಿದೇವ, ಉದರದ ರಾಮಯ್ಯ, ಚಿಕ್ಕಯ್ಯ, ಧೂರ್ಜಟಿ, ಆಯ್ದಕ್ಕಿಯ ಮಾರಯ್ಯ, ಉರಗರಾಯ. ಧವಳಯ್ಯ, ಸುರಗಿಯ ಚೌಡಯ್ಯ, ಮಾದರ ನೂಡಯ್ಯ, ತೆಲುಗು ಬೊಮ್ಮಯ್ಯ, ಡಿಂಗರಿ ಮಲ್ಲಯ್ಯ, ಕಾಲಾಗ್ನಿರುದ್ರ, ಏಕಾಂತದ ರಾಮಯ್ಯ, ಕಪಿಲೇಶ, ಶಿವರಾತ್ರಿಯ ಸಂಕಣ್ಣ, ಕವಿಲೆಯ ಬೊಮ್ಮಯ್ಯ, ಅಮರಗುಂಡದ (ಮಲ್ಲಿಕಾರ್ಜುನ) ದೇವ, ಚವರದ ಚಿಕ್ಕಯ್ಯ, ಪಲ್ಲವರಾಯ, ಸಿಂಗಿಬೊಪ್ಪಯ್ಯ, ಶಿವದೇವ, ಪಡಿಹಾರಿ ಉತ್ತಣ್ಣ, ಮೊರನ ವೇಮಯ್ಯ, ಅಂಕದ ವೀರಸಂಗಯ್ಯ, ಬಡವರ ಬೊಮ್ಮಯ್ಯ, ನಗೆಯ ಮಾರಯ್ಯ, ಗಣದಾಸ ಭೀಮಯ್ಯ, ನಿಡುಗುಡಿ ಮಾರಯ್ಯ, ಅಂಬಿಗರ ಚೌಡಯ್ಯ, ಇಂಡೆಯ ಬೊಮ್ಮಯ್ಯ, ಅಪ್ಪಯ್ಯ, ಗೊಡಲದ ಮಲ್ಲಯ್ಯ, ಬೆರಲಮಾರಯ್ಯ, ಎಚ್ಚರ ಮುಕ್ತಯ್ಯ ಎಂಬ ಹೆಸರಿನವನು, ಮುಸುಟಿಯ ಚೌಡಯ್ಯ, ಬಾಣಸದ ಭೀಮಯ್ಯ, ನಿರಾಳದೇವ, ಶಾಂತಯ್ಯ, ದಸರಯ್ಯ, ಗೊಗ್ಗಯ್ಯ, ಮಸಣಯ್ಯ, ಮಲ್ಲಿನಾಥ, ಇಂಡೆಯ ಶಾಂತಯ್ಯ, ಕೂಗಿನ ಮಾರಯ್ಯ, ಶಿವನಾಗಯ್ಯ, ಶಂಕರಯ್ಯ, ಅಡಪದ ರೇಚಯ್ಯ, ರಾಗದ ಮಾರಯ್ಯ, ವೀರಯ್ಯ, ಯೋಗದ ಶಾಂತಯ್ಯ, ಅಮೃತನಾಥ, ಸಕಳೇಶ ಮಾದರಸ,

---

1 ಸು(ಗ)

ಶಂಕರದಾಸಂ ಸುಂಕದ
ಬಂಕಯ್ಯಂ ಕನ್ನಬೊಮ್ಮನೆಲ್ಲೇಶ್ವರ ಕೇ
ತಂ ಕಾಳಿಮರಸನುಂ ಶಿವ
ಲೆಂಕಯ್ಯಂ ನುಲಿಯ ಚಂದಯಂ ಗಣನಾಥಂ ೧೬

ಗುರುಭಕ್ತಂ ಗೋಡೆಮಲ್ಲಂ ಧರಣಿಯರಸನುಂ ಮಂಚಣಂ ಪೋತಿದೇವಂ
ಕರವಾಳ ಬ್ರಹ್ಮದೇವಂ ಸಗರದ ಕಲಿನಾಚಯ್ಯನುಂ ರೇವಯಂ ಭಾ
ಸ್ಕರದೇವಂ ಜಟ್ಟಿಮಾರಂ ಸುಗುಣಿ ಸಿಗುರ ಚಂದಯ್ಯನುಂ ರಾಮಯಂ ಶ್ರೀ
ಗಿರಿನಾಥಂ ವಿಶ್ವನಾಥಂ ಶಿಖರದರಸಮಲ್ಲಯ್ಯನಾ ರಾಚಮಲ್ಲಂ ೧೭

ವರಮರುಳ ಶಂಕರಂ ಜೋ
ದರ ಮಾಯಣ್ಣಂ ದಯಾಳು ಮೋಳಿಗೆ ಮಾರಂ
ಗುರುಲಿಂಗಯ್ಯ ಮು[1]ದ್ದಯ
ನುರುಲಿಂಗಂ ಪೆದ್ದಿ ವೀರಸೊಡ್ಡಳ ಬಾಚಂ ೧೮

ಅನಘರಿವರ್ಮೊದಲಾದತಿ
ಘನಮಹಿಮರ್ಭಕ್ತಚರಿತದೆಳ್ತರದಿರವಂ
ದಿನದಿನಮುಮೀಕ್ಷಿಸುತೆ ಪೆಂ
ಪಿನ ಮುದಮಂ ತಾಳ್ದು ಸುಖದಿನೊಪ್ಪುತ್ತಿರ್ದರ್ ೧೯

ಪರಮಶಿವಲೋಕಸುಖದಿಂ
ಪಿರಿದೀ ಸುಖಮೆಂದು ಮಾಣದಾ ಶರಣಸಮು

ಶಂಕರ ದಾಸಿಮಯ್ಯ, ಸುಂಕದ ಬಂಕಯ್ಯ, ಕನ್ನದ ಬೊಮ್ಮಯ್ಯ, ನೆಲ್ಲೇಶ್ವರ, ಕೇತಯ್ಯ, ಕಾಳಿಮರಸ, ಶಿವಲೆಂಕಯ್ಯ, ನುಲಿಯ ಚಂದಯ್ಯ, ಗಣನಾಥ, ಗುರುಭಕ್ತ, ಗೋಡೆ ಮಲ್ಲ, ಧರಣಿಯ ಅರಸ, ಮಂಚಣ್ಣ, ಪೋತಿದೇವ, ಕರವಾಳ ಬ್ರಹ್ಮದೇವಯ್ಯ, ಸಗರದ ಕಲಿನಾಚಯ್ಯ, ರೇವಯ್ಯ, ಭಾಸ್ಕರದೇವ (ಬಾಚರಸದೇವ), ಜಟ್ಟಿಮಾರಯ್ಯ, ಸದ್ಗುಣಿಯಾದ ಸಿಗುರ ಚಂದಯ್ಯ, ರಾಮಯ್ಯ, ಶ್ರೀಗಿರಿನಾಥ, ವಿಶ್ವನಾಥ, ಶಿಖರದರಸನಾದ ಮಲ್ಲಯ್ಯ, ಆ ರಾಚಮಲ್ಲಯ್ಯ, ಶ್ರೇಷ್ಠ ಮರುಳಶಂಕರದೇವ, ಜೋದರ ಮಾಯಣ್ಣ, ದಯಾಳುವಾದ ಮೋಳಿಗೆ ಮಾರಯ್ಯ, ಗುರುಲಿಂಗಯ್ಯ, ಮುದ್ದಯ್ಯ, ಉರಿಲಿಂಗಪೆದ್ದಿ, ವೀರನಾದ ಸೊಡ್ಡಳ ಬಾಚರಸ—ಇವರೇ ಮೊದಲಾದ ಪಾಪರಹಿತರೆನಿಸಿದ ಅತ್ಯಂತ ಘನಮಹಿಮಾಶಾಲಿಗಳು ಬಸವಣ್ಣನು ಶಿವಭಕ್ತಿ ಮಾರ್ಗಾಚರಣೆಯಲ್ಲಿ ಉತ್ಕೃಷ್ಟತೆಯಿಂದ ಕೂಡಿ ಇರುವಿಕೆಯನ್ನು ದಿನದಿನವೂ ನೋಡುತ್ತ ಹಿರಿದಾದ ಸಂತೋಷವನ್ನು ಹೊಂದಿ ಸುಖದಿಂದ ಶೋಭಿಸುತ್ತಿದ್ದರು. ೨೦. ಶ್ರೇಷ್ಠವಾದ ಶಿವಲೋಕದ ಸುಖಕ್ಕಿಂತಲೂ, ಈ ಸುಖವೇ ಹಿರಿದಾದುದೆಂದು ತಪ್ಪದೆ ಈ ಎಲ್ಲ ಶರಣ ಸಮುದಾಯ

1 ಮು(ದ, ಗ)

ತ್ಕರದೊಡನಾಡುತೆ ಪಾಡುತೆ
ವರಭಕ್ತಿ ಸುಧಾಬ್ಧಿರಂಜಿಸಿರ್ದಂ ಬಸವಂ ೨೦

ವ॥ ಇಂತು ಶರಣಸೌಖ್ಯದಿಂದಿರ್ಪಿನಮಲ್ಲಿ ಪೆಱತೊಂದು ದಿವಸಂ—

ಪಂಡಿತವರ್ಯರ್ಭಸಿತಸು
ಮಂಡಿತ ರುದ್ರಾಕ್ಷಭೂಷಿತಾಂಗರ್ಗಿರಿಕೋ
ದಂಡಸ್ತುತಿಪಾಠಕರು
ದ್ದಂಡರ್ಚಂಡೇಶ್ವರೌಜಸರ್ವಾಕ್ಪಟುಗಳ್ ೨೧

ಪರಮ ಶ್ರೀಕಂಠ ಶಿವ
ಗುರುಲಿಂಗ ಶಿವರ್ಮಹೇಶ ಶಿವರತಿಬಳ ಶಂ
ಕರ ಶಿವರೀಶಾನ ಶಿವ
ಗಿರಿಶ ಶಿವರ್ಲೋಕನಾಥ ಶಿವರೀಶ ಶಿವರ್ ೨೨

ವರಪಶುಪತಿ ಶಿವರಂಗಜ
ಹರ ಶಿವರಾ ನೀಲಕಂಠ ಶಿವರುಂ ಗಂಗಾ
ಧರ ಶಿವರುಗ್ರಾಂಬಕ ಶಿವ
ರುರುಸದ್ಯೋಜಾತಮೂರ್ತಿ ಶಿವರಭವ ಶಿವರ್ ೨೩

ಹರ ಶಿವರುಂ ತ್ರಿಲೋಚನ ಶಿವರ್ಪರಮಾತ್ಮ ಶಿವರ್ಶಶಾಂಕಶೇ
ಖರ ಶಿವರಧ್ವರಾರಿ ಶಿವರಂಜಿತಶಂಭು ಶಿವರ್ಗಜಾಜಿನಾಂ
ಬರ ಶಿವರಧ್ವನಾಥಶಿವರುದ್ಯದಘೋರಶಿವರ್ಕೃತಾಂತ ಸಂ
ಹರ ಶಿವರುಗ್ರಭೂತಿ ಶಿವರಂಧಕವೈರಿ ಶಿವರ್ಮಹಾಶಿವರ್ ೨೪

ದೊಡನೆ ವ್ಯವಹರಿಸುತ್ತ, ಶಿವಸ್ತೋತ್ರಾದಿಗಳನ್ನು ಮಾಡುತ್ತ ಶ್ರೇಷ್ಠ ಶಿವಭಕ್ತಿಯೆಂಬ ಕ್ಷೀರ ಸಮುದ್ರದೋಪಾದಿಯಲ್ಲಿರುವ ಬಸವಣ್ಣನು ಶೋಭಿಸುತ್ತಿದ್ದನು. ವ॥ ಈ ರೀತಿ ಶರಣರೆಲ್ಲ ಆ ಕಲ್ಯಾಣ ನಗರದಲ್ಲಿ ಸುಖದಿಂದ ಇರುತ್ತಿರುವಾಗ ಬೇರೊಂದು ದಿವಸ—೨೧–೨೪. ಪಂಡಿತ ಶ್ರೇಷ್ಠರೂ, ಭಸ್ಮಧಾರಣದಿಂದ ಅಲಂಕಾರಗೊಂಡವರೂ, ರುದ್ರಾಕ್ಷಿಗಳ ತೊಡಿಗೆಯಿಂದ ಭೂಷಣಗೊಂಡ ಶರೀರವುಳ್ಳವರೂ, ಪರಶಿವನ (ಮೇರು ಪರ್ವತವನ್ನೇ ಬಿಲ್ಲಾಗಿ ಉಳ್ಳವನ) ಸ್ತೋತ್ರವನ್ನೂ ಪಠಿಸುವವರೂ, ಬಹು ಶ್ರೇಷ್ಠವಾದ ಚಂಡೇಶ್ವರನೋಪಾದಿಯಲ್ಲಿ ಪರಾಕ್ರಮವುಳ್ಳವರೂ. ಮಾತನಾಡುವುದರಲ್ಲಿ ಸಮರ್ಥರೂ ಆದ ಪವಿತ್ರ, ಶ್ರೀಕಂಠಶಿವ, ಗುರುಲಿಂಗಶಿವ, ಮಹೇಶಶಿವ, ಅತಿ ಬಲವಂತರಾದ ಶಂಕರಶಿವ, ಈಶಾನಶಿವ, ಗಿರೀಶ ಶಿವ, ಲೋಕನಾಥ ಶಿವ, ಶ್ರೇಷ್ಠ ಪಶುಪತಿ ಶಿವ, ಮನ್ಮಥನಾಶಕ ಶಿವ, ಆ ನೀಲಕಂಠಶಿವ, ಗಂಗಾಧರ ಶಿವ, ಉಗ್ರಾಂಬಕ ಶಿವ, ಶ್ರೇಷ್ಠ ಸದ್ಯೋಜಾತಮೂರ್ತಿ ಶಿವ, ಅಭವಶಿವ, ಹರಶಿವ, ತ್ರಿಲೋಚನ ಶಿವ, ಪರಮಾತ್ಮ ಶಿವ, ಶಶಾಂಕಶೇಖರ ಶಿವ, ಅಧ್ವರಾರಿ ಶಿವ, ರಂಜಿತ ಶಂಭುಶಿವ, ಗಜ

ಪರಮಾನಂದ ಶಿವರ್ತ
ತ್ಪುರುಷ ಶಿವರ್ವಾಮದೇವ ಶಿವರಮಳ ಶಿವ
ರ್ಪುರರಿಪು ಶಿವರಘಹರ ಶಿವ
ರುರುನಿಷ್ಕಲಶಿವರಜಾತ ಶಿವರಮೃತಶಿವರ್ ೨೫

ವ॥ ಎಂಬಿವರ್ಮೊದಲಾದ ಶೈವಶಾಸನಧರರೆಲ್ಲರ್ನೆರೆದು ಬಿಜ್ಜಳೇಂದ್ರನೆಡೆಗೆಯ್ತಂದು ಸಂದಣಿಸಿ ನಿಂದು—

ಮಾನವಪತಿ ಕೇಳ್ಧರ್ಮಾಯ
ಶೋನಿಧಿ ನೀನರಸುಗೆಯ್ವ ಕಾಲದೊಳೊದವಿ
ತ್ತೀನಗರದೊಳನ್ಯಾಯಮ
ನೂನಮಿದಂ ನೀನೆ ನೆಱೆ ವಿಚಾರಿಪುದೀಗಳ್ ೨೬

ಧರೆಯೊಳಗೆ ಸಲ್ವುದೆಮಗೀ
ಪುರಹರನ ಘನಪ್ರಸಾದಮೆಮ್ಮಯ ಚಂಡೇ
ಶ್ವರನಿದನೀಶ್ವರನಿಕಟದೊ
ಳಿರದಂದೆಮಗಿತ್ತನೆಮ್ಮ ಸೊಮ್ಮಿದು ನೃಪತೀ ೨೭

ಪರಮ ಬ್ರಾಹ್ಮಣನಿಂದೆ ಪುಟ್ಟಿದನವಂ ಚಂಡೇಶ್ವರಂ ಚಂಡ ಭಾ
ಸ್ಕರತೇಜಂ ಜನಕಾಜ್ಞೆಯಿಂ ಪಶುಗಳಂ ತಾಂ ಕಾವುತಿರ್ದಳ್ಕಱೊಂ
ದಿರೆ ಭಾಸ್ವತ್ತಟನೀತಟಂಬಿಡಿದು ಬಂದೋರಂತೆ ತದ್ವಾಲುಕೋ
ತ್ಕರದಿಂ ನಿರ್ಮಿಸಿ ಲಿಂಗಮಂ ಕಱೆದನಾ ಗೋವೃಂದದಿಂ ಪಾಲ್ಗಳಂ ೨೮

ಚರ್ಮಾಂಬರ ಶಿವ, ಅಧ್ವನಾಥ ಶಿವ, ಶ್ರೇಷ್ಠ ಅಘೋರಶಿವ, ಯಮಸಂಹಾರ ಶಿವ, ಉಗ್ರಭೂತಿ ಶಿವ, ಅಂಧಕವೈರಿ ಶಿವ, ಮಹಾಶಿವ, ಪರಮಾನಂದ ಶಿವ, ತತ್ಪುರುಷ ಶಿವ, ವಾಮದೇವ ಶಿವ, ಅಮಳ ಶಿವ, ಪುರರಿಪುಶಿವ, ಅಘಹರಶಿವ, ಶ್ರೇಷ್ಠ ನಿಷ್ಕಲ ಶಿವ, ಅಜಾತ ಶಿವ, ಅಮೃತ ಶಿವ ವ॥ ಎಂಬುವವರೇ ಮೊದಲಾದ ಶಿವಶಾಸನವನ್ನು ಧರಿಸಿದವರಾದವರೆಲ್ಲರೂ ಸೇರಿ, ಬಿಜ್ಜಳ ಭೂಪಾಲನಲ್ಲಿಗೆ ಹೊರಟುಬಂದು ಗುಂಪಾಗಿ ನಿಂತುಕೊಂಡು—೨೬. ನರೇಂದ್ರನೇ ಕೇಳು, ಧರ್ಮದಿಂದುಂಟಾಗುವ ಯಶಸ್ಸೇ ಸಂಪತ್ತೆಂದು ಭಾವಿಸಿರುವ ನೀನು ರಾಜ್ಯಭಾರ ಮಾಡುವ ಕಾಲದಲ್ಲಿ ಈ ಕಲ್ಯಾಣ ನಗರದಲ್ಲಿ ವಿಶೇಷವಾದ ಅನ್ಯಾಯವು ಉಂಟಾಗಿರುವುದು. ಇದನ್ನು ನೀನೇ ಈಗ ಚೆನ್ನಾಗಿ ವಿಚಾರಮಾಡಬೇಕು. ೨೭. ಮಹಾರಾಜಾ, ಪರಮೇಶ್ವರನ ಶ್ರೇಷ್ಠ ಪ್ರಸಾದವು ಈ ಭೂಮಿಯಲ್ಲಿ ನಮಗೇ ಸಲ್ಲಬೇಕು. ನಮ್ಮ ಚಂಡೇಶ್ವರನೆಂಬುವನು ಶಿವನ ಸಮೀಪದಲ್ಲಿದ್ದಾನೆ. ಅವನು ನಮಗೆ ತಪ್ಪದೆ ಈ ಪ್ರಸಾದವನ್ನು ಕೊಟ್ಟಿದ್ದಾನೆ. ಆದ್ದರಿಂದ (ಈ ಪ್ರಸಾದವು) ನಮ್ಮ ಸೊತ್ತಾಗಿದೆ. ೨೮. ಆ ಚಂಡೇಶ್ವರನು ಶ್ರೇಷ್ಠ ಬ್ರಾಹ್ಮಣನಿಂದ ಹುಟ್ಟಿದವನು. ಪ್ರಚಂಡ ಸೂರ್ಯ ತೇಜಸ್ಸಿನಿಂದ ಕೂಡಿದ ತಂದೆಯ ಆಜ್ಞೆಯಂತೆ ಆ ಚಂಡೇಶ್ವರನು ಪ್ರೀತಿಯಿಂದ ನದಿಯ ತೀರದಲ್ಲಿ ಪಶುಗಳನ್ನು ಕಾಯುತ್ತಿದ್ದನು. ಅಲ್ಲಿ ಏಕಪ್ರಕಾರವಾಗಿ (ಪ್ರತಿದಿವಸವೂ) ಮಳಲ ಲಿಂಗವನ್ನು ನಿರ್ಮಾಣ ಮಾಡಿ, ಆ ಲಿಂಗದ ಮೇಲೆ ತನ್ನ ಗೋವುಗಳ ಹಾಲನ್ನು ಕರೆಯುತ್ತಿದ್ದನು.

ವ॥ ಅಂತು ಕಱೆದಾ ಲಿಂಗಕ್ಕಭಿಷೇಕಂಗೆಯ್ದು ಪೂಜಿಸುತ್ತುಮಿರ್ಪಿನಮೊಂದುದಿನಂ ಜನಕ ನಲ್ಲಿಗೇಳ್ತಂದದಂ ಕಂಡು ಸೈರಿಸಲಾಱದೆ—

ಮದದಿಂ ದ್ವಿಜನಾ ಲಿಂಗಮ
ನೊದೆಯೆ ಕರಂ ಕಂಡು ಕಾಯ್ದು ಕೆಯ್ಕೊಡಲಿಯಿನಾ
ರ್ದೊದಱುತ್ತುಂ ಕೆಡೆ ಕೆಡೆಯೆನು
ತದಟಿಂ[1] ತಲೆಗಡಿದುರುಳ್ಚಿದಂ ನಿಜಪಿತನಂ ೨೯

ಸುರಿದುದು ಪೂಮಳೆ ಸುರಪಟ
ಹರವಂ ಪೊಣ್ಮಿದುದು ಮೆಚ್ಚಿ ಮನವೊಲ್ದು ಮಹೇ
ಶ್ವರನಾಗಳ್ನಿಜರೂಪಂ
ಧರಿಯಿಸಿ ಗಿರಿಜಾಸಮೇತನೀಕ್ಷಿಸಿ ದಯೆಯಿಂ ೩೦

ದಂಡಪ್ರಣಾಮಮೆಸಗಿದ
ಚಂಡೇಶಂಗಿಂದಿರೇಂದ್ರವಾಣೀರಮಣಾ
ಖಂಡಲದುರ್ಲಭಮೆನಿಸುವ
ಖಂಡರುಚಿ ನಿಜಪ್ರಸಾದಮಂ ಕರುಣಿಸಿದಂ ೩೧

ವ॥ ತತ್ಪ್ರಸಾದಾಸ್ವಾದನಜನಿತಘನಮಹತ್ವದಿಂ ಹರಿಚತುರ್ಮುಖ ಮುಖ್ಯ ಹವಿರ್ಮುಖರಿಂ ವಂದ್ಯಮಾನನಾದ ಚಂಡೇಶ್ವರನ ರೋಮಾಂಚಕಂಚುಕಿತಾಂಗದ ರೋಮಕೂಪಂಗಳಿನದ್ಭುತಮಾಗೆ

ವ॥ ಈ ರೀತಿ ಆಕಳುಗಳ ಹಾಲನ್ನು ಕರೆದು ಲಿಂಗಕ್ಕೆ ಅಭಿಷೇಕಮಾಡಿ, ಪೂಜಿಸುತ್ತಿರುವಾಗ ಒಂದು ದಿನ ಆತನ ತಂದೆಯು ಅಲ್ಲಿಗೆ ಬಂದು, (ಮಗನ ಈ ರೀತಿಯನ್ನು) ಕಂಡು ತಡೆಯಲಾರದೆ—೨೯. ಆ ಬ್ರಾಹ್ಮಣನು ಗರ್ವದಿಂದ, (ಮಳಲ) ಲಿಂಗವನ್ನು ಒದ್ದನು. ಇದನ್ನು ಕಂಡು ಚಂಡೇಶನು ನೆಲಕ್ಕೆ ಬೀಳು ಬೀಳೆನ್ನುತ್ತ ಗಟ್ಟಿಯಾಗಿ ಗರ್ಜಿಸುತ್ತ ಪರಾಕ್ರಮ ವಿಶಿಷ್ಟನಾಗಿ ಕಯ್ಯಲ್ಲಿರುವ ಕೊಡಲಿಯಿಂದ ತಂದೆಯ ತಲೆಯನ್ನು ಕಡಿದು ಉರುಳಿಸಿದನು. ೩೦. ಆಗ ದೇವಲೋಕದಿಂದ ಹೂಮಳೆ ಕರೆಯಿತು. ದೇವ ದುಂದುಭಿಗಳ ಧ್ವನಿಯು ಹೊರಹೊಮ್ಮಿತು. ಗಿರಿಜಾ ಸಮೇತನಾಗಿ ಪರಮೇಶ್ವರನು ತನ್ನ ರೂಪವನ್ನು ತೋರಿಸಿ, (ಚಂಡೇಶನನ್ನು) ದಯೆಯಿಂದ ನೋಡಿದನು. ೩೧. ದೀರ್ಘದಂಡ ಪ್ರಣಾಮವನ್ನು ಮಾಡಿದ ಚಂಡೇಶನಿಗೆ ಲಕ್ಷ್ಮೀ ರಮಣನಾದ ವಿಷ್ಣು, ಸರಸ್ವತೀ ರಮಣನಾದ ಬ್ರಹ್ಮ, ದೇವೇಂದ್ರಾದಿ ದೇವತೆಗಳಿಗೂ ಕೂಡ ಲಭ್ಯವಾಗಲು ಅಸಾಧ್ಯನೆನಿಸಿದ ಅಖಂಡ ತೇಜೋವಿಶಿಷ್ಟನಾದ ಪರಮೇಶ್ವರನು ತನ್ನ ಪ್ರಸಾದವನ್ನು ಕರುಣಿಸಿದನು. ವ॥ ಪರಶಿವನ ಪ್ರಸಾದ ಸೇವನೆಯ ಶ್ರೇಷ್ಠ ಮಾಹಾತ್ಮ್ಯೆಯಿಂದ ವಿಷ್ಣು ಬ್ರಹ್ಮರೇ ಮುಖ್ಯರಾದ ದೇವತೆಗಳಿಂದ (ಆಗ) ಆ ಚಂಡೇಶ್ವರನು ನಮಸ್ಕಾರ

---
1 ಟಿಂ(ಮು)

ಕೆಲಂಬರ್ಗಣಂಗಳೊಗೆದು ಲಲಿತಪದಪ್ರಸನ್ನಸಂದರ್ಭ ಪ್ರೌಢಚಿತ್ರಾರ್ಥಗರ್ಭಿತ ಗದ್ಯಪದ್ಯಂಗಳಿಂ ಪೊಗಳೆ ಸಂತುಷ್ಟನಾಗಿ ಹರದತ್ತನಿಜಪ್ರಸಾದಮನವರ್ಗೆ ಚಂಡೇಶ್ವರನಿತ್ತನನಂತರಂ—

ತನ್ನಂ ಪೊಗಳ್ವನಿತಜರೊಳವ
ರುನ್ನತ ವಾಕ್ಪಟುತೆಗೊಲ್ದು ನಿಜವಂದಿತೆಯಂ
ಪನ್ನಗಭರಣಂ ಕರುಣಿಸಿ
ದನ್ನಿಜವಮುಂದಿಂದೆ ಶಿವನ ವಂದಿಗಳಾದರ್ ೩೨

ಶಿವನವರ್ಗೆ ಮತ್ತಮಿತ್ತಂ
ಜವದಿಂ ಪುರಗೇಹಲಿಂಗಭಜಕತ್ವಮನೊ
ಪ್ಪುವ ಕಾಳೀ ಗಣಪತಿ ಭೈ
ರವರಂ ಪೂಜಿಸುವ ಕಜ್ಜಮುಮನೆಲ್ಲೆಡೆಯೊಳ್ ೩೩

ಜನಿಯಿಸಿದೆವವರ ವಂಶದೊ
ಳನಿಸುಂ ಕೇಳದಜನಿಮ್ಮ ಸೊಮ್ಮುಪ್ಪುದು ಪಾ
ವನತರ ಶಿವಪ್ರಸಾದಂ
ಮನುಜಾಧಿಪ ವೀರಶೈವರೀ ಪುರವರದೊಳ್ ೩೪

ಕುಡದೆವಗೆ ತಾವೆ ಭುಂಜಿಪ
ರೆಡೆಯುಡುಗದೆ ಬಿಜ್ಜಳೇಂದ್ರ ಬಸವನ ಬಲದಿಂ

ಮಾಡಿಸಿಕೊಂಡನು. ಅವನ ದೇಹವು ಅದ್ಭುತವೆನ್ನುವಂತೆ ರೋಮಾಂಚನಗೊಂಡು ಅದೇ ಅವನ ದೇಹಕ್ಕೆ ಕವಚವೋ ಎನ್ನುವಂತಾಯಿತು. ಕೆಲವು ಜನ ದೇವಗಣಗಳು ಆಗ ಹುಟ್ಟಿ, ಲಲಿತವಾದ ಶಬ್ದಗಳಿಂದ ಮನಾನಂದಗೊಳಿಸುವ ಆ ಸಂದರ್ಭವನ್ನು ಪ್ರೌಢವೂ, ವಿಚಿತ್ರವೂ, ಅರ್ಥಗರ್ಭಿತವೂ ಆದ ಗದ್ಯಭಾಗದಿಂದಲೂ, ಪದ್ಯಭಾಗ ದಿಂದಲೂ ಹೊಗಳಿದರು. ಇದರಿಂದ ಸಂತೋಷಗೊಂಡ ಚಂಡೇಶನು ಪರಮೇಶ್ವರ ನಿಂದ ತನಗೆ ಕೊಡಲ್ಪಟ್ಟ ಪ್ರಸಾದವನ್ನು ಅವರೆಲ್ಲರಿಗೂ ಕೊಟ್ಟನು. ಅನಂತರ—
೩೨. ಶಿವನು ತನ್ನನ್ನು ಹೊಗಳಿದನಂತರ (ಹೊಗಳಿದ) ಅವರ ಉತ್ಕೃಷ್ಟವಾದ ಮಾತು ಗಳ ಸಾಮರ್ಥ್ಯಕ್ಕೆ ಸಂತೋಷಗೊಂಡು ತನ್ನ ಸ್ತುತಿ ಪಾಠಕರಾಗಿರುವಂತೆ ಕರುಣಿಸಿದನು. ಅಂದಿನಿಂದ ಅವರು ಶಿವನ ಕೈಲಾಸ ಮಂದಿರದ ಸ್ತುತಿಪಾಠಕ (ವಂದಿ) ರೆನಿಸಿದರು.
೩೨. ಇದಲ್ಲದೆ ಅವರಿಗೆ ಶಿವನು ಶೀಘ್ರವಾಗಿ ಎಲ್ಲ ಕಡೆಯೂ ಪಟ್ಟಣಗಳಲ್ಲಿರುವ ಶಿವಾಲಯಗಳಲ್ಲಿನ ಶಿವಲಿಂಗಗಳ ಪೂಜಿಸುವ ಕಾರ್ಯವನ್ನೂ, ಶೋಭಿಸುವ, ಕಾಳಿಕಾ ದೇವಿ, ಗಣಪತಿ, ಭೈರವ ದೇವತೆಗಳ ಪೂಜಿಸುವ ಕಾರ್ಯವನ್ನು ದಯಪಾಲಿಸಿದನು.
೩೪–೩೫. ನಾವೆಲ್ಲರೂ ಅಂಥ ಶಿವನಿಂದಲೇ ನೇಮಿಸಲ್ಪಟ್ಟ ಪೂಜಾರಿಗಳ ವಂಶದಲ್ಲಿ ಹುಟ್ಟಿದವರು. ಮಹಾರಾಜಾ ಕೇಳು : ಪವಿತ್ರವಾದ ಆ ಶಿವಪ್ರಸಾದವೆಲ್ಲ ನಿಜವಾಗಿ ನಮ್ಮ ಸೊತ್ತಾದುದಾಗಿದೆ. ವೀರಶೈವರು ಈ ಶ್ರೇಷ್ಠವಾದ ಕಲ್ಯಾಣನಗರದಲ್ಲಿ

ನುಡಿಯಲಱಿದೆಮಗೆ ಭಕ್ತರ
ಕಡುಬಿಂಕಮನಿಂದು ನೀನೆ ಕುಡಿಸೆನೆ ಜನಪಂ ೩೫

ವ॥ ಬಸವರಸನಾನನಮಂ ನಿರೀಕ್ಷಿಸುತ್ತುಮಿವರ ಸೊಮ್ಮಪ್ಪ ಶಿವಪ್ರಸಾದಮನಿವರ್ಗಿ ಯದೆ ನೀಮೆ ಭುಂಜಿಪುದನ್ಯಾಯಮೆಂಬುದುಮಾ ವೃಷಭೇಂದ್ರನಾ ಚಂಡಪುತ್ರರ್ಗಭಿಮುಖನಾಗಿ—

ಚಂಡಕುಲಪ್ರಭೂತರಿರ ಕೇಳಿರೆ ನಿಮ್ಮಯ ಶೌರ್ಯಮಿರ್ಕೆ ಭೂ
ಮಂಡಲದೊಳ್ನರಾಮರಮುನಿಪ್ರವರಾಬ್ಜಭವಪ್ರತಿಷ್ಠಿತೋ
ದ್ದಂಡ ಗಿರೀಶಲಿಂಗತತಿಯೊಳ್ಸಲೆ ಸಲ್ವುದು ತತ್ಪ್ರಸಾದಮಾ
ಚಂಡಗಣೇಶ್ವರಂಗುಳಿದ ಲಿಂಗಸಮೂಹದೊಳೆಂತು ಸಲ್ವುದೋ ೩೬

ಚರಲಿಂಗ ಬಾಣಲಿಂಗ
ಸ್ಫುರಿತ ಸುವರ್ಣಾದಿಲಿಂಗ ಮಣಿಲಿಂಗ ಸಮು
ತ್ಕರ ದೊಳ್ಸ್ವಯಂಭುವಿನೊಳಂ
ದೊರೆಯದು ಚಂಡಂಗೆ ತತ್ಪ್ರಸಾದವಿಭುತ್ವಂ ೩೭

ಬಾಣಲಿಂಗೇ ಚರೇ ಲೋಹೇ ರತ್ನಲಿಂಗೇ ಸ್ವಯಂಭುವಿ
ಪ್ರತಿಮಾಸು ಚ ಸರ್ವಾಸು ನ ಚಂಡೋಽಧಿಕೃತೋ ಭವೇತ್ ॥

ಅಂಥಪ್ರಸಾದವನ್ನು ಬಸವಣ್ಣನ ಬಲದಿಂದ ನಮಗೆ ಸ್ವಲ್ಪ ಪಡೆಯಲಿಕ್ಕೆ ಅವಕಾಶ ಕೊಡದ ಹಾಗೆ ತಾವು ತಾವೇ ಪಡೆದುಕೊಳ್ಳುತ್ತಿದ್ದಾರೆ. ಇಲ್ಲಿನ ಭಕ್ತರಲ್ಲಿರುವ ಮಹಾ ಗರ್ವವು ನಮಗೆ ಮಾತನಾಡಲು ಶಕ್ಯವಿಲ್ಲದುದಾಗಿದೆ. ಬಿಜ್ಜಳೇಂದ್ರನೇ, ನಮಗೆ ನಮ್ಮ ಆ ಪ್ರಸಾದವನ್ನು ನೀನೇ ಕೊಡಿಸಬೇಕು ಎಂದರು. ಆಗ ಬಿಜ್ಜಳನು ವ॥ ಬಸವ ರಸನ ಮುಖವನ್ನು ನೋಡುತ್ತ (ಬಸವೇಶ್ವರನೇ,) ಇವರ ಸೊತ್ತಾಗಿರುವ ಶಿವಪ್ರಸಾದ ವನ್ನು ಇವರಿಗೆ ಕೊಡದೆ ನೀವುಗಳೇ ಭುಂಜಿಸುತ್ತಿರುವುದು ಅನ್ಯಾಯ ಎನ್ನಲಾಗಿ ಆ ಬಸವೇಶ್ವರನು ಆ ಚಂಡೇಶ ಪುತ್ರರೆನಿಸಿದವರ ಎದುರಿಗೆ ಮುಖ ತಿರುಗಿಸಿ ೩೬. ಎಲೈ ಚಂಡೇಶನ ವಂಶದಲ್ಲಿ ಜನಿಸಿದವರೇ, ನಿಮ್ಮ ಈ ಶೌರ್ಯವು ಒತ್ತಟ್ಟಿಗಿರಲಿ ಕೇಳಿರಿ, ಈ ಭೂಮಂಡಲದಲ್ಲಿ ಮನುಷ್ಯರು, ದೇವತೆಗಳು, ಮುನಿಶ್ರೇಷ್ಠರು, ಬ್ರಹ್ಮನೇ ಮೊದ ಲಾದವರಿಂದ ಸ್ಥಾಪಿಸಲ್ಪಟ್ಟ ಉತ್ಕೃಷ್ಟವಾದ ಶಿವಲಿಂಗಗಳ ಸಮೂಹದಲ್ಲಿನ ಶಿವ ಪ್ರಸಾದವು ಆ ಚಂಡೇಶ್ವರನಿಗೆ ನಿಜವಾಗಿ ಸಲ್ಲುವುದು. ಉಳಿದ ಲಿಂಗಸಮೂಹಗಳ ಪ್ರಸಾದ ಹೇಗೆ ಸಿಗುವುದಕ್ಕೆ ಸಾಧ್ಯ. ೩೭. ಜಂಗಮಲಿಂಗ, ಬಾಣಲಿಂಗ, ಪ್ರಕಾಶಿಸುವ ಸುವರ್ಣವೇ ಮೊದಲಾದ ಲೋಹಗಳಿಂದ ಮಾಡಿದಲಿಂಗಗಳಲ್ಲಿ. ರತ್ನ ನಿರ್ಮಿತಲಿಂಗಗಳ ಸಮೂಹದಲ್ಲಿ, ತಾನಾಗಿ ಪಡಿಮೂಡಿದ ಲಿಂಗದಲ್ಲಿ ಚಂಡೇಶ್ವರನಿಗೆ ಆ ಪ್ರಸಾದ ಸ್ವಾಮಿತ್ವವು ಲಭ್ಯವಾಗುವುದಿಲ್ಲ. ॥ವ॥ ಮತ್ತು ॥ಶ್ಲೋಕ ॥—ಶೈವಾಗಮದಲ್ಲಿ

ವ॥ ಇಂತೆಂಬ ಶೈವಾಗಮವಚನವಿಂದಱಿೞ್ವಣಮದು ಕಾರಣಮಾವೆಡೆಯೊಳ್ಚಂಡಂ ಗಧಿಕಾರಮಾಯೆಡೆಯೊಳ್ನಿಮಗೆ ಶಿವಪ್ರಸಾದಂ ಸಲ್ಗುಮುಳಿದೆಡೆಯೊಳೆಂತುಂ ಸಲ್ಲದೆನೆ ಚಂಡಪುತ್ರರ ವಕ್ಕೆ ವಾರ್ಕೊಂಡು—

ದ್ರಾಕ್ಷಾರಾಮ ಶ್ರೀಗಿರಿ
ಲಕ್ಷಿತಕಾಂಚೀಲಸಚ್ಚಿದಂಬರಪುರಮು
ಖ್ಯಕ್ಷೇತ್ರಂಗಳೊಳೆಮಗ
ಧ್ಯಕ್ಷತೆಯೊಳವೀ ವಿಶೇಷಭೋಜನವಿಧಿಯೊಳ್ ೩೮

ಅದಱಿಂ ಸಲ್ಗುಂ ಪೊದಳ್ದಿಲ್ಲೆಡೆಯೊಳೆಮಗೆ ಲಿಂಗಪ್ರಸಾದಂ ಭವಲ್ಲಿಂ
ಗದ ಶೇಷಂ ಸಲ್ಲದೇಂ ಪೋಕುಮು ಬಸವ ಬಲಾತ್ಕಾರದಿಂದೆಮ್ಮ ಸೊಮ್ಮ
ಪ್ಪುದನಿಂದೋರಂತೆ ನೀನೀಯದೊಡೆ ಬಿಡುವೆವೀ ಪ್ರಾಣಮಂ ಮಾಣದೆಂದಾ
ಡಿದರಾ ಮಾತಿಂಗೆ ತಾಂ ಮಾರ್ನುಡಿದನಭವಸಿದ್ಧಾಂತವಿದ್ಯಾಂತರಂಗಂ ೩೯

ನ್ಯಾಯಮದಿಲ್ಲದೆ ಬಿಟ್ಟಪಿ
ರಾಯುವನೇತಮಮ ನಿಮ್ಮ ಬಿಱುನುಡಿಗಳ್ಕಂ
ಮಾಯಾರಿಶರಣನುಚಿತ
ನ್ಯಾಯಪರಂ ಗಾಳಿಯುಲೆಯೆ ಗಿರಿ ಚಲಿಯಿಕುಮೇ ೪೦

'ಬಾಣಲಿಂಗ, ಜಂಗಮಲಿಂಗ, ಲೋಹಗಳಿಂದ ಮಾಡಿದಲಿಂಗ, ಸ್ವಯಂಭುಲಿಂಗವಾಗಿ ಮೂರ್ತಿಗೊಂಡಿರುವ ಲಿಂಗ-ಇತ್ಯಾದಿ ಸರ್ವಲಿಂಗಗಳಲ್ಲಿ ಚಂಡೇಶ್ವರನು ಅಧಿಕಾರವುಳ್ಳ ವನಾಗಿ ಆಗಲಾರನು,' ಹೀಗೆಂದು ಹೇಳಿರುವ ಮಾತೇ ಇದಕ್ಕೆ ಪ್ರಮಾಣ, ಆದ್ದರಿಂದ ಯಾವಕಡೆಗಳಲ್ಲಿ ಚಂಡೇಶನಿಗೆ ಪ್ರಸಾದದ ಅಧಿಕಾರವಿದೆಯೋ, ಆ ಕಡೆಯಲ್ಲಿ ನಿಮಗೆ ಶಿವಪ್ರಸಾದವನ್ನು ಪಡೆಯುವ ಹಕ್ಕುಂಟು, ಉಳಿದಕಡೆಗಳಲ್ಲಿ ಯಾವರೀತಿಯಿಂದಲೂ ಸಲ್ಲತಕ್ಕದ್ದಾಗಿರುವುದಿಲ್ಲ. ಎನ್ನಲು ಚಂಡೇಶನ ವಂಶಜರು ಆ ಮಾತಿಗೆ ಪ್ರತಿಯಾಗಿ– ೩೮. ದ್ರಾಕ್ಷಾರಾಮ, ಶ್ರೀಶೈಲ, ಪ್ರಸಿದ್ಧವಾದ ಕಾಂಚಿ, ಶೋಭಿಸುವ ಚಿದಂಬರ ನಗರವೇ ಮೊದಲಾದ ಪ್ರಮುಖ ಶಿವಲಿಂಗಕ್ಷೇತ್ರಗಳೊಳಗೆ ಶಿವಪ್ರಸಾದವನ್ನು ಭುಂಜಿಸುವ ವಿಧಾನದಲ್ಲಿ ನಮಗೇ ಪ್ರಾಮುಖ್ಯತೆಯುಂಟು. ೩೯. ಆದುದರಿಂದ ಪ್ರಸಿದ್ಧವಾದ ಎಲ್ಲ ಶಿವಕ್ಷೇತ್ರಗಳಲ್ಲಿಯೂ ಲಿಂಗಪ್ರಸಾದವು ನಮಗೆ ಸಲ್ಲುತ್ತಿರುವಾಗ ನಿಮ್ಮಲಿಂಗದ ಪ್ರಸಾದವು ನಮಗೆ ಸಲ್ಲದೆ ಹೋಗುತ್ತದೆಯೇ ? ಬಸವಣ್ಣ, ಬಲಾತ್ಕಾರ ದಿಂದ ನಮ್ಮ ಸೊತ್ತಾಗಿರುವ (ನಮ್ಮಹಕ್ಕಿಗೆ ಒಳಪಟ್ಟಿರುವ) ಲಿಂಗಪ್ರಸಾದವನ್ನು ಸುಮ್ಮನೆ ನಮಗೆ ಕೊಡದಿದ್ದಪಕ್ಷದಲ್ಲಿ, ತಪ್ಪದೆ ನಾವು ಈ ಪ್ರಾಣವನ್ನೇ ಬಿಡುವೆವು, ಎಂದು ಆಡಿದರು. ಅವರ (ಈ ರೀತಿಯ) ಮಾತಿಗೆ ಶಿವಸಿದ್ಧಾಂತ ವಿದ್ಯೆಯಲ್ಲಿ ನಿಷ್ಣಾತನಾದ ಬಸವೇಶ್ವರನು ಹೀಗೆ ಉತ್ತರಿಸಿದನು : ೪೦. ನಿಯಮತಪ್ಪಿ ಪ್ರಾಣವನ್ನು ಹೇಗೆನೀವು ಬಿಡುತ್ತೀರಿ ? ಅಮಮ ! ಯೋಗ್ಯವಾದ ನ್ಯಾಯಪರನೂ, ಮಾಯೆಗೆಶತ್ರು ಎನಿಸಿದ ಶಿವಶರಣನೂ ಆದ ಈ ಬಸವಣ್ಣನು ನಿಮ್ಮ ಈ ಕಠಿಣೋಕ್ತಿಗಳಿಗೆ ಹೆದರು

ನಯಮಿದು ಶಾಸ್ತ್ರಾನುಭವ
ದ್ವಯದೊಳವೊಂದಱೊಳೆ ಸಿದ್ಧಮಾದರ್ಥದೊಳಾ
ರಯೆ ವರ್ತಿಪ ಬಗೆಯುದನುಳಿ
ದಯಥಾರ್ಥಂಬಿಡಿದೊಡವನೆ ನಿಂದ್ಯಂ ಧರೆಯೊಳ್ ೪೧

ಪೇಳಿರೆ ಶಾಸ್ತ್ರಮದುಳ್ಳೊಡೆ
ಪಾಳಿಯಿನನುಭವಮೆ ಪವಣಮೆಂಬೊಡೆ ನಿಮಗಾ
ಭಾಳೇಕ್ಷಣ ಪ್ರಸಾದಮ
ನಾಳೋಚಿಸದಿತ್ತ ವೀರಮಾಹೇಶ್ವರರಾರ್ ೪೨

ನಯಮುಮುಱೆ ತೋಱೆ ಶಾಸ್ತ್ರೋ
ಕ್ತಿಯೊಳಾದೊಡಮನುಭವಾಪ್ತಿಯಿಂದಾದೊಡಮ
ನ್ನೆಯಮಿಲ್ಲದೆ ಕೊಳ್ವುದು ಸಂ
ಶಯಮಳಿದು ಮದೀಯಲಿಂಗಶೇಷಮನೀಗಳ್ ೪೩

ಸುಮ್ಮನೆ ಕೊಂಡಪೆವೆನೆ ಕುಡೆ
ಮೆಮ್ಮಯ ಲಿಂಗಪ್ರಸಾದಮಂ ನಿಮಗೆ ವಲಂ
ತಿಮ್ಮಸಪ ರಸನೆಯೆಸಕಮ
ದೆಮ್ಮೊಡನೇಕಿನಿತು ಬಿಡಿಮಿದೇತಱ ಬಿಂಕಂ ೪೪

ಏತೆಱದಿಂದಮಾದೊಡಮುಮಾಧಿಪಲಿಂಗದ ಸುಪ್ರಸಾದಮಂ
ನೀತಿಯದಿಲ್ಲದುಣ್ಬೆವೆನುತಾಗ್ರಹಮಂ ಪಿಡಿದಪ್ಪಿರಪ್ಪೊಡೇ

ವುದಿಲ್ಲ, ಗಾಳಿಬೀಸಿದರೆ ಪರ್ವತವು ಅಲ್ಲಾಡುವುದೇ ? ೪೧. ಈ ನೀತಿಯು ಶಾಸ್ತ್ರ ಮತ್ತು ಅನುಭವವೆರಡರಲ್ಲಿ ವಿಚಾರಿಸಿ ನೋಡಿದರೆ ಒಂದರಲ್ಲಿ ಸಿದ್ಧವಾದ ಅರ್ಥದಲ್ಲಿ ವರ್ತನೆಮಾಡುವ ರೀತಿ. ಅದನ್ನುಬಿಟ್ಟು ಯಥಾರ್ಥವಲ್ಲದ್ದನ್ನು (ಸುಳ್ಳನ್ನು) ಅನುಸರಿಸಿದರೆ, ಅವನು ಜಗತ್ತಿನಲ್ಲಿ ನಿಂದೆಗೆ ಗುರಿಯಾಗುವನು. (ಅರ್ಥಸ್ಪಷ್ಟ ಆದರೆ ಭಾವ ಅಸ್ಪಷ್ಟ). ೪೨–೪೩. (ಇದಕ್ಕೆ) ಶಾಸ್ತ್ರವೇನಾದರೂ ಇದ್ದರೆ (ನೀವೆಲ್ಲ) ಸರದಿಯಂತೆ ಹೇಳಿರಯ್ಯಾ ! ಅನುಭವವೇ ನಿಮಗೆ ಪ್ರಮಾಣವೆನ್ನುವುದಾದರೆ ಆ ಪರಮೇಶ್ವರನ ಪ್ರಸಾದದ ವಿಷಯವನ್ನು ಆಲೋಚನೆಮಾಡವೆ ಇದರಲ್ಲಿ ವೀರಮಾಹೇಶ್ವರರು ಯಾರುಂಟೊ ಅವರು ನ್ಯಾಯವಾದ ರೀತಿಯಲ್ಲಿ ಶಾಸ್ತ್ರೋಕ್ತಿಯಿಂದಲಾದರೂ, ಅನುಭವಿಸುವಿಕೆಯಿಂದಲಾದರೂ ಅನ್ಯಾಯವಿಲ್ಲದೆ ಸಂಶಯವಿಲ್ಲದಂತೆ ನನ್ನ ಸಂಬಂಧದ ಲಿಂಗಶೇಷ ಪ್ರಸಾದವನ್ನು ಸ್ವೀಕರಿಸಿರಿ. ೪೪. ಸುಮ್ಮ ಸುಮ್ಮನೆ (ಪ್ರಸಾದವನ್ನು) ಸ್ವೀಕರಿಸುತ್ತೇವೆಂದರೆ, ನಿಮಗೆನಮ್ಮ ಲಿಂಗಪ್ರಸಾದವನ್ನು ನಿಜವಾಗಿ ಕೊಡುವುದಿಲ್ಲ. ನಿಮ್ಮ ನಾಲಿಗೆಯ ಚಾಪಲ್ಯ(ತೀಟೆ)ದ ಪ್ರದರ್ಶನವು ನಮ್ಮ ಕೂಡ ಇಷ್ಟೇಕೆ ? ಈ ನಿಮ್ಮಗರ್ವವನ್ನು ಬಿಟ್ಟುಬಿಡಿ. ೪೫. ಯಾವರೀತಿಯಿಂದಲಾದರೂ ಶಿವಲಿಂಗದ ಶ್ರೇಷ್ಠಪ್ರಸಾದವನ್ನು ಅನ್ಯಾಯವಾಗಿ ಊಟಮಾಡಲೇ

ಮಾತೊ ಪುರಾರಿಗುಗ್ರಗರಮಂ ಪದೆದರ್ಪಿಪೆನಂತದಂ ಮನಃ
ಪ್ರೀತಿಯೊಳುಣ್ಬುದೀಗಳೆನೆ ಕೇಳ್ದತಿ ರೋಷಮನಾಳ್ದರಾ ದ್ವಿಜರ್ ೪೫

ವ॥ ಅಂತು ರೋಷೋನ್ಮಿಷಿತ ಹೃದಯರಾಗಿ —

ಅರಿದರಿದು ನಿನ್ನ ನುಡಿಗಳ
ಪರಿಯೆಮ್ಮೊಳ್ಬಸವ ಲೇಸನಾಡಿದೆ ನೀಂ ದಿ
ವ್ಯರಸಾಮೃತಾನ್ನಮಂ ಕೊಂ
ಡಿರದೆಮಗಿಂದೀವೆ ಗಡ ಮೃಡಾರ್ಪಿತವಿಷಮಂ ೪೬

ಪರಮೇಶ್ವರ ಪ್ರಸಾದಮ
ನೆರೆದಪರಿವರೆಂದುಪಾಯದಿಂದಮ್ಮಂ ನಿ
ಷ್ಠುರವಿಷಮನಿಕ್ಕಿ ಕೊಲಲೋ
ಸರಿಸದೆ ನೀಂ ನೆನೆದೆ ನಿನ್ನ ಬಗೆ ಪೊಸತಲ್ತೇ ೪೭

ಎಮಗೀವ ಶಿವಾರ್ಪಿತಗರ
ಳಮನೀಗಳ್ನೀಮೆ ಕೊಂಡು ಬಾಳ್ದೊಡೆ ಗೆಲ್ಲಂ
ನಿಮಗಕ್ಕುಮೆಮಗೆ ಸೋಲಂ
ಸಮನಿಪ್ಪುದಿದೇ ಪ್ರಮಾಣಮೆಮಗಂ ನಿಮಗಂ ೪೮

ಬೇಕೆಂದು ನೀವು ಹಟವನ್ನು ತಾಳಿದವರೇ ಆದದ್ದಾದರೆ, ಇನ್ನೂ ನಿಮಗೆ ಹೆಚ್ಚಿಗೆ ಹೇಳುವುದಾದರೂ ಏನಿದೆ ? ಪರಮೇಶ್ವರನಿಗೆ ಭಯಂಕರ ವಿಷವನ್ನು ಪ್ರೀತಿಯಿಂದ ಅರ್ಪಿಸುತ್ತೇನೆ. ಅಂಥ ಆ ಪ್ರಸಾದವನ್ನು ನೀವು ಮನಃಪೂರ್ವಕವಾಗಿ ಈಗಲೇ ಊಟಮಾಡಬೇಕು, ಎನ್ನಲು ಆ ಬ್ರಾಹ್ಮಣರು ಕೇಳಿ ಅತ್ಯಂತ ರೋಷಗೊಂಡರು. ವ॥ ಹಾಗೆ ಅತ್ಯಂತ ಕೋಪದಿಂದ ಕೂಡಿದ ಮನಸ್ಸುಳ್ಳವರಾಗಿ–೪೬. ಬಸವಣ್ಣ, (ನಮ್ಮ ವಿಷಯದಲ್ಲಿ) ನಿನ್ನ ಮಾತಿನರೀತಿ ಅಸಾಧ್ಯ ; ಅಸಾಧ್ಯ ಸರಿಯಾಗಿಯೇ ಮಾತನಾಡಿದಂತಾಯಿತು, ನೀನು ರುಚಿಕರವಾದ ಅಮೃತಾನ್ನವನ್ನುಂಡು (ಹಾಲು ಅನ್ನವನ್ನುಂಡು) ನಮಗೆ ತಪ್ಪದೆ ಈಗ ಮೃಡನಿಗೆ ಅರ್ಪಿಸಿದ ವಿಷವನ್ನು ಕೊಡುವೆಯಲ್ಲವೇ ? ೪೭. ಇವರು ಪರಮೇಶ್ವರನ ಪ್ರಸಾದವನ್ನು ಬೇಡುತ್ತಿದ್ದಾರೆಂದು ಕೊಂಡು, ಉಪಾಯದಿಂದ ನಮ್ಮನ್ನು ಉಗ್ರವಿಷವಿಕ್ಕಿ ಕೊಲ್ಲಲು ಹಿಂದೆಮುಂದೆನೋಡದೆ ಚಿಂತನೆ ಮಾಡಿದ್ದೀಯೆ. ಈ ನಿನ್ನ ಯೋಚನೆ ಹೊಸದಲ್ಲವೇ ! ೪೮. ನಮಗೆ ನೀಡುವ ಶಿವಾರ್ಪಿತ ವಿಷವನ್ನು ಈಗ ನೀವೇ ಸ್ವೀಕಾರಮಾಡಿ ಬದುಕಿದರೆ ನಿಮಗೇ ಗೆಲುವಾ

ವ॥ ಎನೆ ಕೇಳ್ದು ಮಹಿಮಾಕರನಂತೆ ಮಾಳ್ಪೆನಿದಾವಗಹನಮೆಂದರಸನಂ ಸಾಕ್ಷಿಗೆಯ್ದಲ್ಲಿಂದೆಳ್ದು ಸಡಗರಂ ಮಿಗೆ ಭಕ್ತಗಣಪರಿವೃತಂ ಸಂಗಮೇಶ್ವರನ ಮಂದಿರದ ಬಹಿರ್ದ್ವಾರದ ಮಂಟಪಕ್ಕೇಳ್ತಂದಾಗಳ್—

ಶರಣರ ಬಿರಿದಂ ಪಾಡಿಸು
ತುರುತರ ವೈಭವದ ತಮ್ಮ ಚರಲಿಂಗಸಮು
ತ್ಕರದೊಡನೆ ಬಂದರಂದೆ
ಳ್ತರದಿನಸಂಖ್ಯಾತ ಭಕ್ತರತಿ ಸಂಭ್ರಮದಿಂ ೪೯

ವ॥ ಅಂತೇಳ್ತಂದ ಭಕ್ತರ್ಗೆ ಭಕ್ತಿಯಿಂ ಮಣಿದು ಬಸವರಸಂ ಪರಮೋತ್ಸವದಿಂ ಮೂರ್ತಿಗೊಳಿಸಿ ಸತ್ಕ್ರಿಯೆಗಳಂ ನೆಗಳ್ಚುತಿರ್ಪಿನಮಲ್ಲಿ—

ವಿತತಾದ್ಭುತಮತಿ ಬಿಜ್ಜಳ
ನತಿಶಯ ಸಾಮಂತರಾಜಸುತಸಚಿವಪುರೋ
ಹಿತಯುತನೇಳ್ತಂದಿರ್ದಂ
ಪ್ರತಿವಾದಿಕದಂಬಮೆಯ್ದೆ ವಂದತ್ತಾಗಳ್ ೫೦

ವೀರಕ ವೀರಭದ್ರಕ ಮುಖಪ್ರಮಥಪ್ರಕರಾನ್ವಿತಂ ಮನೋ
ಜಾರಿನಗೇಂದ್ರಪುತ್ರಿಯೊಡನಂಬರದೊಳ್ಪಗೆಗೊಂಡು ಸಾರತೇ

ದಂತೆ; ನಮಗೆ ಸೋಲಾದಹಾಗೆ. ನಮಗೂ ನಿಮಗೂ ಇದೇ ಪಣ! ವ॥ ಹೀಗೆಂದು ಅನ್ನಲು, ಮಹಿಮಾಶಾಲಿಯಾದ ಬಸವಣ್ಣನು ಕೇಳಿ, ಹಾಗೆಯೇ ಮಾಡುತ್ತೇನೆ. ಇದಾವ ಅಸಾಧ್ಯಕಾರ್ಯ! ಎಂದು ಬಿಜ್ಜಳ ರಾಜನನ್ನೇ ಈ ವಿಷಯದಲ್ಲಿ ಸಾಕ್ಷಿಯನ್ನಾಗಿ ಇಟ್ಟು, ಅಲ್ಲಿಂದ ಅತಿ ಸಡಗರದಿಂದ ಮೇಲೆದ್ದು, ಭಕ್ತಸಮೂಹದಿಂದ ಸುತ್ತುವರಿಯಲ್ಪಟ್ಟವನಾಗಿ, ಹೊರಟು ಬಂದು ಸಂಗಮೇಶ್ವರನ ಮಂದಿರದ ಮಹಾದ್ವಾರದ ಮಂಟಪಕ್ಕೆ ಬಂದನು, ಆಗ ೪೯. ಅತಿ ಸಂಭ್ರಮಗೊಂಡು ಅಸಂಖ್ಯಾತ ಭಕ್ತರುಗಳ ಸಮೂಹವು ಶರಣರ ಬಿರುದುಗಳನ್ನು ಘೋಷಿಸುತ್ತ, ಅತ್ಯಂತ ವೈಭವದಿಂದ ಜಂಗಮ ಮೂರ್ತಿಗಳ ಸಮೂಹದೊಡನೆ ಆ ಕೂಡಲೇ (ಬಸವಣ್ಣನ ಹಿಂದೆ) ಹೆಮ್ಮೆಯಿಂದ ಕೂಡಿ ಬಂದರು. ವ॥ ಹಾಗೆ ಬಂದ ಭಕ್ತರುಗಳಿಗೆ ಬಸವಣ್ಣನು ಭಕ್ತಿಯಿಂದ ನಮಸ್ಕಾರ ಮಾಡಿ, ಅತ್ಯಂತ ಸಂತೋಷದಿಂದ ಕುಳ್ಳಿರಿಸಿ, (ತನ್ನ) ಸತ್ಕ್ರಿಯೆಗಳನ್ನು ಮಾಡುತ್ತಿರಲಾಗಿ, ಅಲ್ಲಿ ೫೦. ವಿಶೇಷವಾದ ಅದ್ಭುತ ಬುದ್ಧಿಶಕ್ತಿಯುಳ್ಳ ಬಿಜ್ಜಳನು, ಅನೇಕ ಸಾಮಂತರಾಜ ಪುತ್ರರು, ಸಚಿವರು, ಪುರೋಹಿತರುಗಳಿಂದ ಕೂಡಿ ಬರುತ್ತಿದ್ದನು. ಪ್ರತಿವಾದಿಗಳ ಸಮೂಹವೂ ಆಗ ಬಂದಿತು. ೫೧. ವೀರಭದ್ರನೇ ಮೊದಲಾದ ಪ್ರಮಥರುಗಳ ಸಮೂಹದೊಡನೆ, ದೇವತೆಗಳಿಂದ ಸೇವಿಸಲ್ಪಡುವ ಪರಮೇಶ್ವರನು ಪಾರ್ವತಿಯೊಡನೆ ಆಕಾಶದಲ್ಲಿ ಮನೋಹರವಾಗಿ ಸಾರವತ್ತಾದ ತೇಜಸ್ಸಿ

ಜೋರಮಣೀಯ ದಿವ್ಯಮಣಿಪುಷ್ಪಕದೊಳ್ಕುಳಿಸಿರ್ದು ಭಕ್ತವಿ
ಸ್ತಾರಮಹತ್ವವೀಕ್ಷಣಸಮುತ್ಸುಕನೊಪ್ಪಿರೆ ದೇವಸೇವಿತಂ ೫೧

ಪರಿಜನಮುಂ ಪುರಜನಮುಂ
ನೆರೆದೀಕ್ಷಿಸೆ ಕನಕರೌಪ್ಯತಾಮ್ರಾದಿಯ ಕೊ
ಪ್ಪರಿಗೆಗಳನಗಣಿತಂಗಳ
ನಿರದಲ್ಲಿಗೆ ತರಿಸಿ ಬಸವನನುಚರರಿಂದಂ ೫೨

ಕುಳಿಕನ ತಕ್ಷಕನ ಮಹಾ
ಬಳ ಕರ್ಕೋಟಕನ ಘೋರತರ ವಿಷದಿಂದ
ಗ್ಗಳವೆನಿಪ ಕಾಲಕೂಟಂ
ಗಳನಧಟಿಂ ನೆನೆ[1]ದು ಬರಿಸಿ ಬೆರಸುತ್ತದಱೊಳ್ ೫೩

ಭರದಿಂದಂ ಪತ್ಸನಾಭಿಪ್ರಮುಖ ಬಹುವಿಷವ್ರಾತಮಂ ಕೂಡಿ ಸರ್ವೋ
ರ್ವರಿಗತ್ಯಾಶ್ಚರ್ಯಮಂ ತಾನೆಸಗುತಱಯಿಸುತ್ತಿರ್ದನಾವೇಳೆಯೊಳ್ತ
ದ್ಗರಳಾಭೀಳಸ್ಫುರತ್ಸೌರಭವಃಲೆಯೆ ಧರಾಜೀವಿಗಳ್ಜೀವಮಂ ಬಿ
ಟ್ಟ[2]ರದೆತ್ತಂ ಪಕ್ಷಿವೃಂದಂ ಕೆಡೆದಸುಗಳೆದತ್ತಭ್ರದಿಂ ಪೇಳ್ವೆನೇನಂ ೫೪

ನಿಂದ ರಮಣೀಯವೆನಿಸಿದ ಪುಷ್ಪಕವಿಮಾನದಲ್ಲಿ ಕುಳಿತುಕೊಂಡು ಭಕ್ತನಾದ ಬಸವಣ್ಣನ ಅತ್ಯಧಿಕ ಮಹಾತ್ಮೆಯನ್ನು ನೋಡಬೇಕೆಂಬ ವಿಷಯದಲ್ಲಿ ಉತ್ಸಾಹಗೊಂಡವನಾಗಿ ಒಪ್ಪಿದ್ದನು. ೫೨. ಸೇವಕ ವರ್ಗದವರೂ, ನಾಗರಿಕ ಜನರುಗಳೂ ಗುಂಪುಗೂಡಿ ನೋಡುತ್ತಿದ್ದರು. ಬಂಗಾರ, ಬೆಳ್ಳಿ, ತಾಮ್ರಗಳೇ ಮೊದಲಾದ ಲೋಹಗಳ ಅಸಂಖ್ಯಾತ ಕೊಪ್ಪರಿಗೆಗಳನ್ನು ಬಸವಣ್ಣನು ತನ್ನ ಅನುಚರರುಗಳಿಂದ ಅಲ್ಲಿಗೆ ತರಿಸಿ ಕೊಂಡನು. ೫೩. ಪ್ರಸಿದ್ಧ ಎಂಟು ಸರ್ಪಗಳಲ್ಲಿ ಮುಖ್ಯವಾದ ಕುಳಿಕನೆಂಬ ಹೆಸರಿನ ಹಾವಿನ, ತಕ್ಷಕನೆಂಬ ಹಾವಿನ, ಬಹಾಬಳನೆಂಬ ಹೆಸರಿನ ಹಾವಿನ, ಕಾರ್ಕೋಟಕನೆಂಬ ಹೆಸರಿನ ಹಾವಿನ ಘೋರವಾದ ವಿಷಕ್ಕಿಂತ ಹೆಚ್ಚಿನದೆಂದೆನಿಸುವ ಕಾಲಕೂಟವೆಂಬ ಹೆಸರಿನ ವಿಷಗಳನ್ನು ಶೌರ್ಯ ವಿಶಿಷ್ಟವಾಗಿ ನೆನೆದು ಬರಮಾಡಿಕೊಂಡು, ಆ ಕೊಪ್ಪರಿಗೆ ಗಳಲ್ಲಿ ಕೂಡಿಸಿ ಹಾಕಿದನು. ೫೪. ಕೃಷ್ಣಸರ್ಪ ಮೊದಲಾದ ಇನ್ನಿತರ ಹಾವುಗಳ ವಿಷ ಸಮೂಹವನ್ನು (ಆ ಕೊಪ್ಪರಿಗೆಯ ವಿಷದಲ್ಲಿ) ಕೂಡಿಸಿ, ಸರ್ವರಿಗೂ ಆಶ್ಚರ್ಯ ವನ್ನು ಆ ಬಸವಣ್ಣನು ಉಂಟುಮಾಡುತ್ತ ತಿರುವುವುದಕ್ಕೆ (ಅರೆಸುವುದಕ್ಕೆ) ತೊಡಗಿ ದನು. ಆ ಸಮಯದಲ್ಲಿ ಆ ವಿಷದ ಭಯಂಕರವಾಗಿ ಪ್ರಕಾಶಿಸುವ ಸುಗಂಧವು (ವಾಸನೆಯು) ಹೊರಹೊರಟು ಬರುತ್ತಿರಲು ಭೂಮಿಯ ಮೇಲಿನ ಜೀವಿಗಳು ಜೀವವನ್ನು ಬಿಡತೊಡಗಿದವು. ಪಕ್ಷಿಗಳ ಸಮೂಹವು ಆಕಾಶದಿಂದ ಎಲ್ಲ ಕಡೆಗೂ

1 ಗೆ(ದ) 2 ಟ್ಟೆ(ಅ)

ಗರಳಮುಸಜಿೀವ ನರರ್ಕಳ
ಕರುಳದು ಕಡಿ ಖಂಡಮಾಗಿ ಪಡಲಿಡೆ ಪಿರಿದ
ಚ್ಚರಿವಟ್ಟಿದನಾಂಪರದಾ
ರ್ಧರೆಯೊಳೆನುತ್ತಗಿದು ಕೆಲಕೆ ಜಗುಳ್ದರ್ಶೈವರ್ ೫೫

ವ॥ ಆಗಳಾಭೀಕರಾಕಾರ ವಿಷಮುಂ ಬಸಮಂ ತೈಲರಸದೊಳ್ಪಿರಿದುಂ ಮರ್ದಿಸಿ ಕೂಷ್ಮಾಂಡ ಪರಿಪ್ರಮಾಣಕಬಳಂಗೆಯ್ದು ಕಟಾಹಂಗಳೊಳ್ಪ್ರತ್ಯೇಕಮಿರಿಸಿ ಮಗುಳ್ದು ತೈಲಂಬೊಯ್ದು ಕಲಸಿ ದರ್ವೀಕರನಿಭದರ್ವಿಯಿಂದೊತ್ತಿ ತೊಳಸಲೊಡನೆ ಕಡುಕಾಯ್ದುಮುಸಗಿ —

ಬಡಬಾಗ್ನಿ ದಾವಶಿಖಿ ಬಿಳಿ
ಸಿಡಿಲುರಿ ಕಲ್ಪಾಂತವಹ್ನಿ ಮುಸಕಂಗೊಂಡೊಂ
ದೆಡೆ ನಿಂದವೆಂಬ ಭಾವಮ
ನೊಡರ್ಚೆ ಘುಳುಘುಳಿಪ ಗರಳ ಪಟುಪಾವಕನಿಂ ೫೬

ಪೊಗೆ ನೆಗೆದೊತ್ತಿ ಪೊಯ್ಯೆ ಗಗನಾಗಮುದುದ್ಗಮರಾಜಿ ಸೂಸಿದುಂ
ತೊಗುಮಿಗೆ ಕಳ್ಕನೊಕ್ಕುದುಡುರಾಜಿ ಕುಳಾಚಳವೃಂದಮುಂಜನಾ

ನೆಲಕ್ಕೆ ಬಿದ್ದು ಪ್ರಾಣ ಕಳೆದುಕೊಂಡವು. ಅದನ್ನು ಏನೆಂದು ಹೇಳಲಿ! ೫೫. ವಿಷವನ್ನು ಅರೆಯುತ್ತಿರುವ ಮನುಷ್ಯರ ಕರುಳುಗಳು ಚೂರು ಚೂರಾಗಿ ಹರಡಿ ಬಿದ್ದವು. ಶೈವರು ಅತ್ಯಂತ ಆಶ್ಚರ್ಯಗೊಂಡವರಾಗಿ, ಈ ಮಹಾ ವಿಷವನ್ನು ಧರಿಸುವವರು ಭೂಮಂಡಲದಲ್ಲಿ ಯಾರಿದ್ದಾರೆ? ಎನ್ನುತ್ತ ಹೆದರಿ ಪಕ್ಕಕ್ಕೆ ದೂರ ಸರಿದರು. ವ॥ ಆಗ ಆ ಭಯಂಕರಾಕಾರದ ವಿಷವನ್ನು ಎಳ್ಳೆಣ್ಣೆಯಲ್ಲಿ ಹೆಚ್ಚಾಗಿ ತಿರುವಿಸಿ, ಕುಂಬಳಕಾಯಿ ಗಾತ್ರದ ತುತ್ತುಗಳನ್ನು ಮಾಡಿ, ಕೊಪ್ಪರಿಗೆಗಳಲ್ಲಿ ಬೇರೆ ಬೇರೆ ಇಟ್ಟು, ಪುನಃ ಎಣ್ಣೆಯನ್ನು ಸುರುವಿ ಕಲಸಿ, ಸರ್ಪಸದೃಶವಾದ ಸೌಟಿನಿಂದ ಒತ್ತಿ ಮೇಲೆ ಕೆಳಗೆ ಮಾಡಲು (ಆ ವಿಷವು) ವಿಶೇಷವಾಗಿ ಉಷ್ಣತೆಯನ್ನು ಹೊಂದಿತು. ೫೬–೫೭. ಸಮುದ್ರ ಮಧ್ಯದ ಬೆಂಕಿ, ಅರಣ್ಯದ ಬೆಂಕಿ, ಘೋರ ಸಿಡಿಲಿನ ಬೆಂಕಿ, ಪ್ರಳಯಕಾಲದ ಅಗ್ನಿ ಇವೆಲ್ಲ ಕೋಪಗೊಂಡು ಒಂದು ಕಡೆ ಸೇರಿ ನಿಂತಿರುವುವೋ ಎಂಬ ಭಾವವನ್ನುಂಟು ಮಾಡುತ್ತ ಘುಳು ಘುಳು ಎಂಬ ವಿಷದ ಸಮರ್ಥವಾದ ಬೆಂಕಿಯಿಂದ ಹೊಗೆಯು ಮೇಲೆದ್ದು ಗಟ್ಟಿಯಾಗಿ ಅಪ್ಪಳಿಸಲು ಆಕಾಶವೆಂಬ ವೃಕ್ಷದ ಪುಷ್ಪಗಳ ಸಮೂಹವು ಉದುರುವಹಾಗೆ ಅತ್ಯಧಿಕವಾಗಿ ನಕ್ಷತ್ರಗಳ ಸಮೂಹವು ಒಮ್ಮೆಂದೊಮ್ಮೆಲೆ ಉದುರಿತು. ಸಪ್ತ ಕುಲಾಚಲ ಪರ್ವತಗಳು ಅಂಜನಾದ್ರಿ ಬೆಟ್ಟದ ರೀತಿಯನ್ನು (ಅಂದರೆ ಕಪ್ಪಾಗುವಿಕೆಯನ್ನು) ಹೊಂದಿದವು. ಸೂರ್ಯನ ರಥಕ್ಕೆ ಕಟ್ಟಿದ ಕುದುರೆಗಳು ಬೆಚ್ಚಿದವು. ಸಮುದ್ರ, ಕೆರೆಬಾವಿಗಳ ನೀರು ತಪ್ಪದೆ ನೀಲವರ್ಣವುಳ್ಳವುಗಳಾದುವು. ೫೭. ಸಮಸ್ತ ನದೀನದಗಳು ಕುದ್ದು ಉಕ್ಕತೊಡಗಿದವು.

ದ್ರಿಗಣದ ಮೊಳ್ಕೆಯುಂ ತಳೆದುದರ್ಕವರೂಥದ ವಾಜಿ ಬೆರ್ಚಿದ
ತ್ತಗಲದೆ ನೀಲನೀರಮಯಮಾದುವು ಸಿಂಧುತಟಾಕವಾಪಿಗಳ್ ೫೭

ಕುದಿದುರ್ಕಿದುವಖಿಳನದೀ
ನದಂಗಳುರಿದತ್ತು ತರುಕುಲಂ ಗಿರಿತತಿ ಸೀ
ಳ್ದುದು ಗರಳಶಿಖಿಯ ಸೆಕೆ ಸೋಂ
ಕಿದ ಗಾಳಿಯ ಕೋಳ್ಗೆ ಬಳ್ಕಿದರ್ದಿಕ್ಪತಿಗಳ್ ೫೮

ಭೂತಳದೊಳ್ಪುಟ್ಟಿದುದು
ತ್ಪಾತಲಯಾನಲನಿದಾವಕಾಲಮೆನುತ್ತ
ಬ್ಜಾತಭವಂ ಲಯಕಾಲ
ವ್ರಾತಮನೆಣಿಸುತ್ತುಮಿರ್ದನತಿಚಕಿತಮನಂ ೫೯

ಜಲಧಿಯೊಳಂದೊಗೆದ ಹಲಾ
ಹಲದಿಂದಸಿತಾಂಗನಾದೆನಿಂದೊಗೆದತ್ತು
ಜ್ವಲ ವಿಷಮಿದಱಿಂದೇಂ ಕ್ಷೋ
ಟಲೆ ಬರ್ಪುದೊ ಮಾಣದೆಂದು ಹರಿ ಚಿಂತಿಸಿದಂ ೬೦

ಕೊರಲ ಗರಲಾಗ್ನಿ ಕಡೆಗೋ
ಸರಿಸಿದುದಿಂದೆಂಬ ಶಂಕೆಯಿಂ ದರ್ಪಣಮಂ
ತರಿಸಿ ನಿಜರಮಣಿಯಿಂ ಕಂ
ಧರಮಂ ನಡೆ ನೋಡುತಿರ್ದನಗಜಾರಮಣಂ ೬೧

ವಾಣಿಯುಮಮಾ ಲಕುಮಿಯುಮಿಂ
ದ್ರಾಣಿಯುಮೆಮ್ಮೈರೆದಾಳಿಯುಂ ಕಾವುದು ಶ

ಗಿಡಗಳ ಸಮೂಹವೆಲ್ಲ ಹೊತ್ತಿಕೊಂಡು ಉರಿಯತೊಡಗಿದವು. ಬೆಟ್ಟಗಳ ಸಮೂಹವು ಸೀಳು ಬಿಟ್ಟಿತು. ವಿಷದ ಬೆಂಕಿಯ ಸೆಕೆಯ ಸೋಂಕಿನಿಂದ ಬೀಸುವ ಗಾಳಿಯ ಬಾಧೆಯಿಂದ ಅಷ್ಟದಿಕ್ಪಾಲಕರು ನಡುಗಿದರು. ೫೮. ಅಜ್ಜಭವನಾದ ಬ್ರಹ್ಮನು ಭೂಮಿಯಲ್ಲಿಯೇ ಅಶುಭಸೂಚಕ ಪ್ರಳಯಕಾಲದ ಬೆಂಕಿಯು ಹುಟ್ಟಿತು. ಇದು ಯಾವ ಕಾಲ ? ಎಂದು ಕೊಳ್ಳುತ್ತ ಅತ್ಯಂತಾಶ್ಚರ್ಯಗೊಂಡು ಪ್ರಳಯಕಾಲದ ಸಮೂಹವನ್ನು ಲೆಕ್ಕ ಹಾಕ ತೊಡಗಿದನು. ೬೦. ವಿಷ್ಣುವು ಹಿಂದೆ ಸಮುದ್ರದಿಂದ ಹುಟ್ಟಿದ ಹಾಲಾಹಲ ವಿಷ ದಿಂದ ಕಪ್ಪು ಬಣ್ಣದ ಶರೀರವುಳ್ಳವನಾದೆನು. ಈ ದಿನ ಭಯಂಕರವಾದ ವಿಷವು ಹೊರಹೊರಟಿತು. ಈ ವಿಷದಿಂದ ಅದಾವ ತೊಂದರೆಯು ಬಿಡದೆ ಬರುವುದೋ ಎಂದು ಚಿಂತೆಗೊಳಗಾದನು. ೬೧. ಆಗ ಪರಮೇಶ್ವರನು ಕುತ್ತಿಗೆಯಲ್ಲಿರುವ ವಿಷದ ಬೆಂಕಿಯೇನಾದರೂ ಹೊರಗೆ ಹೊರಟು ಬಂದಿರುವುದೋ ಎಂಬ ಸಂಶಯದಿಂದ ಪಾರ್ವತಿಯಿಂದ ಕನ್ನಡಿಯನ್ನು ತರಿಸಿ, ತನ್ನ ಕುತ್ತಿಗೆಯನ್ನು ಚೆನ್ನಾಗಿ ನೋಡಿಕೊಳ್ಳ ತೊಡಗಿದನು. ೬೨. ಸರಸ್ವತಿಯೂ, ಲಕ್ಷ್ಮಿಯೂ, ಶಚೀದೇವಿಯೂ, ಪಾರ್ವತೀ

ಪ್ರಾಣೇಶ ಶರಣೆನುತ್ತುಂ
ಪ್ರಾಣದೆ ವಿಷಕಳ್ಕಿ ಶಂಭುವಂ ಮಱೆವೊಕ್ಕರ್ ೬೨

ವ॥ ಇಂತು ಮಹಾಭಯಾದ್ಭುತಂ ಮಸಗಲೊಡನೆ ಸಂಭ್ರಮದಿಂ ಬಸವಂ ಗಣನಿವಹಮಂ ತರಂಬಿಡಿದು ಮೂರ್ತಿಗೊಳಿಸಿ ಸಾಂಗಮೆನೆ ಲಿಂಗಾರ್ಚನಂಗೆಯ್ದು ಸಾಷ್ಟಾಂಗ ಮೆಱಗಿ ಜಯಜಯ ಧ್ವಾನದಿನುಘೇರವಂ ತಡಂಗಲಿಸಿ ವಿಜೃಂಭಿಸಿ ನಲವೆರ್ಚೆ ಪೊಗಳ್ದು ಸರ್ವರುಮಚ್ಚರಿ ಮಿಗೆ ನಿರೀಕ್ಷಿಸುತ್ತುಮಿರೆ ಬಹುಕಟಾಹಸ್ಥಿತ ವಿಷರಸಮಂ ಕರತಳದಿಂ ತುಳುಂಕಿ ಪೊಂಗಳಸಂಗಳಿಂ ಮೊಗೆಮೊಗೆದು ಶಿವಗಣಾವಳಿ ಕೆಯ್ಕೊಳ್ವುದೆಂದು ಮುಂದೆ ಗಡಣಿಸಿರ್ದ ಪರಿಯಣಂಗಳೊಳ್ವಿಸಟಂ[1]ಬರಿದೆಱೆಯೆ ಭಕ್ತಗಣಮೀಕ್ಷಿಸಿ ಪೊರೆಯೇಱಿರಾಗಿಸಿ ಗರಳರಸಮಂ ಗರಳಧರಂಗೆ ಸಮರ್ಪಿಸಿ ತತ್ಪ್ರಸಾದಮಂ ಸವಿವಾಗಳ್ ಶರಣಗಣದ ಸಂಭ್ರಮೋಕ್ತಿಗಳ್ನೆಗಳ್ದವೆಂತೆನೆ—

ಮೆಲ್ಲನೆ ಕುಳ್ಳಿರಿಲ್ಲಿ ಕಲಿದೇವ ಸದಾಶಿವದೇವ ಬಂದೆ ನೀಂ
ಗೆಲ್ಲಮನಾಸಲಿಂದರರೆ ಶಂಕರದೇವ ಸಮರ್ಥನಕ್ಕುಮಿಂ
ತಿಲ್ಲಿಗೆ ನೀನೆ ಲಿಂಗಸುಖಿದೇವ ಕಡಾಗಿ ಶಿವಪ್ರಸಾದಮಂ
ನಿಲ್ಲದೆ ಕೊಳ್ವೆಯಿಂದಮಮ ಭುಂಜಿಪುದಲ್ಲಮದೇವ ರಾಗದಿಂ ೬೩

ರಮಣನೇ, ನಮ್ಮ ಮಾಂಗಲ್ಯವನ್ನು ಕಾಪಾಡಬೇಕು. (ನಿನಗೆ) ಶರಣು ಎನ್ನುತ್ತ, ತಪ್ಪದೆ ಆ ವಿಷಕ್ಕೆ ಹೆದರಿ ಪರಮೇಶ್ವರನ ಬೆನ್ನು ಬಿದ್ದರು. ವ॥ ಈ ರೀತಿ ಘೋರವಾದ ಭಯವೂ ಅದ್ಭುತವೂ ಉಂಟಾಗಲಾಗಿ ಬಸವಣ್ಣನು ಸಂಭ್ರಮದಿಂದ ಶಿವಗಣ ಸಮೂಹವನ್ನೆಲ್ಲ ಸಾಲುಸಾಲಾಗಿ ಕುಳ್ಳಿರಿಸಿ, ಯಥಾಸಾಂಗವಾಗಿ ಶಿವಪೂಜೆಯನ್ನು ಮಾಡಿಸಿ, ಸಾಷ್ಟಾಂಗ ನಮಸ್ಕಾರ ಮಾಡಿದನು. ಜಯ ಜಯ ಎಂಬ ಧ್ವನಿ ವಿಶೇಷದಿಂದ ಉಘೇರವವನ್ನು ಉದ್ಘೋಷಿಸಿ ಉತ್ಸಾಹದೋರಿ, ಪ್ರೀತಿಯಿಂದ ಹೊಗಳಿ, ಎಲ್ಲರೂ ಅತ್ಯಂತಾಶ್ಚರ್ಯಗೊಂಡು ನೋಡುತ್ತಿದ್ದ ಹಾಗೆ ಕೊಪ್ಪರಿಗೆಗಳಲ್ಲಿದ್ದ ವಿಷದ ರಸವನ್ನು ಕೈಯಿಂದಲೇ ಮುಟ್ಟಿ, ಬಂಗಾರದ ಚಂಬುಗಳಲ್ಲಿ ತುಂಬಿ ತುಂಬಿ ಶಿವಶರಣರ ಸಮೂಹವನ್ನು ಸ್ವೀಕರಿಸಬೇಕು, ಎಂದು ಅವರ ಮುಂಭಾಗದಲ್ಲಿ ಸಿದ್ಧಪಡಿಸಿಟ್ಟಿದ್ದ ತಟ್ಟೆಗಳಲ್ಲಿ ಯಥೇಚ್ಛವಾಗಿ ಸುರಿದನು. (ಇದನ್ನು) ಶಿವಭಕ್ತ ಸಮೂಹವು ನೋಡಿ, ಉತ್ಸಾಹಾಧಿಕ್ಯದಿಂದ ಹೊಗಳಿ, ಆ ವಿಷದ ರಸವನ್ನು ವಿಷಧರನಾದ ಶಿವನಿಗೆ ನೈವೇದ್ಯ ಮಾಡಿ ಆ ಶಿವಪ್ರಸಾದವನ್ನು ಸ್ವೀಕರಿಸುವಾಗಿನ ಆ ಶರಣ ಸಮೂಹದ ಸಂಭ್ರಮದ ಖ್ಯಾತಿವೆತ್ತ ಮಾತುಗಳು ಹೊರಹೊಮ್ಮಿದುವು. ಅವು ಹೇಗಿದ್ದವೆಂದರೆ ೬೩–೬೫. 'ಕಲಿದೇವನೇ, ಇಲ್ಲಿ ಮೆಲ್ಲಗೆ ಕುಳಿತುಕೊಳ್ಳಿರಿ. ಇಂದು ಗೆಲುವನ್ನು ಪಡೆಯಲು ಸದಾಶಿವದೇವ ನೀನು ಬಂದೆ. ಅಬ್ಬಾ! ಶಂಕರದೇವನೇ, ಇಲ್ಲಿನ ಈ ಪ್ರಸಂಗಕ್ಕೆ ನೀನೇ ಸಮರ್ಥನು! ಲಿಂಗ ಸುಖಿದೇವನೇ, ಉತ್ಸಾಹಗೊಂಡು ಶಿವಪ್ರಸಾದವನ್ನು ತಪ್ಪದೆ ನೀನು ಈಗ ಸ್ವೀಕರಿಸುತ್ತೀಯೆ, ಅಮಮ! ಅಲ್ಲಮಪ್ರಭುದೇವ ಪ್ರೀತಿಯಿಂದ ಈಗ

---

1 ಮಂ(ಅ)

ತ್ರ್ಯಂಬಕದೇವನುಂಡಪನೆ ಭಾಪುರೆ ಸಾಲದು ಮಾಯಿದೇವನಾ
ಡಂಬರವಾಳ್ದ ಕುಕ್ಷಿಗೆ ಮಹೇಶ್ವರದೇವನ ಪೊಟ್ಟೆ ಸತ್ವರಂ
ತುಂಬದು ದಾಸಿದೇವನುದರಂ ತನಿವೆರ್ಚದು ಶಂಭುದೇವನೇ
ಸೋಜಿನೊ ಮೆಲ್ಲನುಂಡಪನಳುಂಬವಿದುದ್ಭಟದೇವನುಜ್ಜುಗಂ ೬೪

ಪಿಡಿ ಪಿಡಿ ಪಾತ್ರೆಯಂ ಸಸಿನೆ ಸಂಗಮದೇವ ಗಜೇಶದೇವ ಕೆ
ಯ್ಯುಗ್ಗಡಿತೆಯೊಳೀಂಟುವೈ ದಸರಿದೇವ ಜವಂಗಿಡದುಂಡಪೈ ಬಸಿಱ್
ಕಡು ಪಿರಿದಲ್ತೆ ಕೇಳ್ನಿನಗೆ ಪರ್ವತದೇವ ಪಯೋರಸಕ್ಕಿದಿ
ರ್ಮಡಿ ಗಡ ಬಂಕಿದೇವ ಸುಱಿವೈ ಸುಱಿಕೆನ್ನದೆ ಮಲ್ಲಿದೇವ ನೀಂ ೬೫

ತಲೆಯಂ ತೊನೆಯದಿರಿನ್ನುಂ
ನೆಲೆವೆರ್ಚದು ಪೊಡೆ ಕುಮಾರದೇವಯ್ಯ ಸಡಿ
ಲ್ಚಲೆ ಜಘನಸೂತ್ರಮಂ ಸಿ
ಮ್ಮಲಿಗೆಯ ಚಂದಯ್ಯ ಭೋಗ ಭುಂಜಿಸು ಜವದಿಂ ೬೬

ಪುರುಡಿಂ ಪಿರಿದುಂಡಪನೀ
ವಿರುಪಯ್ಯಂ ಭಲರೆ ಬೊಮ್ಮಿದೇವಂ ಪೀರ್ದಂ
ಕರಗಮೆರಡಱೊಳೆ ತಂದುದ
ನರರೆ ಕರಂ ತಣಿದನಲ್ತೆ ಕಲಕೇತಾರ್ಯಂ ೬೭

ನೀನು ಊಟ ಮಾಡಬೇಕು. ತ್ರ್ಯಂಬಕ ದೇವನು ಊಟ ಮಾಡುವನೇ ? ಮಾಯಿದೇವನ ಆ ದೊಡ್ಡ ಹೊಟ್ಟೆಗೆ ಸಾಲದು ! ಮಹೇಶ್ವರದೇವನ ಹೊಟ್ಟೆ ಬೇಗ ತುಂಬುವುದಲ್ಲ ! ದಾಸಿದೇವನ ಹೊಟ್ಟೆಯು ಮೇಲಕ್ಕೆ ಹೆಚ್ಚಾಗಿ ಉಬ್ಬತಕ್ಕದ್ದಲ್ಲ ! ಶಂಭುದೇವನು ಅದೆಷ್ಟು ಊಟಮಾಡುವನೋ ! ಉದ್ಭಟದೇವನು ಮೆಲ್ಲಗೆ ಊಟ ಮಾಡುತ್ತಿರುವನು (ಅವನ ಊಟ ಮಾಡುವ) ಈ ಉದ್ಯೋಗವು ಮನೋಹರವಾದದ್ದು ! ಸಂಗಮದೇವ, ಪಾತ್ರೆಯನ್ನು ಸರಿಯಾಗಿ ಹಿಡಿ ಹಿಡಿ ! ಗಜೇಶಮಸಣಯ್ಯನೇ, ಬೊಗಸೆಯಲ್ಲಿ ಹಿಡಿದು ಕುಡಿಯುತ್ತಿರುವೆಯಲ್ಲಾ ! ದಸರಿದೇವನೇ, ಶಕ್ತಿಗುಂದದೆ ಕುಡಿಯುತ್ತಿರುವೆಯಲ್ಲಾ ! ಪರ್ವತ ದೇವನೇ ಕೇಳು : ನಿನ್ನ ಹೊಟ್ಟೆ ಬಹು ದೊಡ್ಡದಲ್ಲವೇ ! ಬಂಕಿದೇವನೇ ಹಾಲಿನ ರುಚಿಗೆ ಇಮ್ಮಡಿ ರುಚಿಯಾಗಿದೆಯಲ್ಲವೇ ! ಮಲ್ಲಿದೇವ, ನೀನು ಸುರಕ್ ಎಂಬ ಧ್ವನಿ ಮಾಡದೆ ಹಾಗೆಯೇ ಸುರಿಯುತ್ತಿರುವಯಲ್ಲಾ ! ೬೬–೭೧. ಕುಮಾರದೇವಯ್ಯ (ಸಾಕು ಎಂದು) ತಲೆಯನ್ನಾಡಿಸಬೇಡ ; ಹೊಟ್ಟೆಯು ಇನ್ನೂ ದಪ್ಪನಾಗಲಿ ಹೊಡೆ ! ಸಿಮ್ಮಲಿಗೆಯ ಚಂದಯ್ಯ ಉಡಿದಾರವನ್ನು ಸಡಿಲುಗೊಳಿಸು, ಭೋಗಯ್ಯ ಬೇಗನೆ ಊಟ ಮಾಡು ; ಈ ವಿರುಪಯ್ಯನು ಸ್ಪರ್ಧೆಯಿಂದ ಹೆಚ್ಚಾಗಿ ಊಟ ಮಾಡುತ್ತಿದ್ದಾನೆ. ಬೊಮ್ಮಿದೇವನು ಎರಡು ಕೊಡಗಳಲ್ಲಿ ತುಂಬಿ ತಂದುದನ್ನು ಅಬ್ಬಬ್ಬಾ ! ಕುಡಿದು ಬಿಟ್ಟನು. ಕೇತಯ್ಯನು ಚೆನ್ನಾಗಿ ತಣಿದನಲ್ಲವೇ ; ಸಂತೋಷದಿಂದ ಹೊಟ್ಟೆಯ ಕಂಠ ಪೂರ್ತಿಯಾಗುವವರೆಗೆ (ಏಕಾಂತ) ರಾಮನು ತುಂಬಿದನು. ಅಪ್ಪಿದೇವನು ಮೈ ಅಳು

ಪದೆದು ಕೊರಲ್ವರೆಗಂ ತುಂ
ಬಿದನುದರದ ರಾಮುನಪ್ಪಿದೇವಂ ಪೆಯ್ಯಾ
ಡದೆ ಪಿರಿದುಂ ಪೀರ್ದಂ ಸಗ
ರದ ಬೊಮ್ಮಂ ಸವಿದನಳ್ಕಱಿಂ ತಣಿವನ್ನಂ ೬೮

ಸವಿಯೆಂತುಟೊ ಸುಱಿದಪನೀ
ಶಿವದೇವಂ ಪೀರ್ದು ತಣಿದು ತೇಗಿದನೀಗ
ಳ್ಕವಿತೆಯ ಬೊಮ್ಮಂ ಕೆಲವಲ
ದವರೊಳ್ಪುರುಡಿಸುತೆ ಪೀರ್ದಪಂ ಕಾಶೀಶಂ ೬೯

ಮುನ್ನೆಱೆದುದನೀಂಟಿದನೀ
ಕನ್ನದ ಬೊಮ್ಮಯ್ಯನಿನ್ನುವೆಱೆ ಬಱಿದಾಯ್ತೀ
ಚನ್ನಯ್ಯನ ಪರಿಯಣಮಿ
ತ್ತನೋಡಂಬಿಗರ ಚೌಡನಾರೋಗಿಸಿದಂ ೭೦

ಸಾಲದು ತನಗೆನುತಿರ್ದಪ
ನೀ ಲಿಂಗಣದೇವನೊಲ್ದಿವಂಗೆಱೆ ಜವದಿಂ
ದಾಲೋಕಿಪುದಿತ್ತ ಮಹಾ
ಕಾಲಯ್ಯಂ ಬಱಿಯ ಬಟ್ಟಲಂ ಪಿಡಿದಿರ್ಪಂ ೭೧

ನಿನಗೇಂ ಸಾಲ್ದುದೆ ಶಾಂತದೇವ ತಲೆದೂಗುತ್ತಿರ್ಪೆ ಮಾಧುರ್ಯಮೆಂ
ತೊ ನಿತಾಂತಂ ಗಣದಾಸಭೀಮಧವಳೇಶಂಗಾದುದೇ ತೃಪ್ತಿ ನೀ
ನಿನಿತಂ ಕೊಳ್ಳಕಳೇಶ ಸಾಲ್ದುದೆನುತಿರ್ಪೈ ಸುಮ್ಮನಾದಯ್ಯ ನಿ
ನ್ನನುಮಂ ಬಲ್ಲೆನಿಳೇಶ ಬೊಮ್ಮ ನಗದಿರ್ಮಾದಾರ್ಯ ನೀನೀಂಟಿದಂ ೭೨

ಎನಗಿನ್ನುಂ ತರ್ಪುದೀತಂಗೆಱೆ ಮೊರಡದ ಬಂಕಂಗೆ ಲಿಂಗಾರ್ಪಣಂಗೆ
ಯ್ದು ನಿತಾಂತಂ ಶ್ರೀಗುರುಧ್ಯಾನದಿನೆಱೆದನಿತಂ ಪೀರ್ದಪಂ ಜೊಮ್ಮಿದೇವಂ

ಗಾಡಿಸದಂತೆ ಹೆಚ್ಚಾಗಿಯೇ ಕುಡಿದನು. ಸಗರದ ಬೊಮ್ಮಯ್ಯನು ತಣಿವಾಗುವ ಹಾಗೆ ಪ್ರೀತಿಯಿಂದ ಊಟ ಮಾಡಿದನು. ಶಿವದೇವನು (ಇನ್ನೂ) ಸುರಕೊಳ್ಳುತ್ತಲೇ ಇದ್ದಾನೆ ಸವಿ ಇನ್ನೆಷ್ಟಿದ್ದೀತು! ಕವಿತೆಯ ಬೊಮ್ಮಯ್ಯನು ಈಗ ಕುಡಿದು ತಣಿದು ತೇಗುತ್ತಿದ್ದಾನೆ. ಕಾಶೀಪತಿಯು ಅಕ್ಕಪಕ್ಕದವರೊಢನೆ ಪಣಕಟ್ಟಿ (ಶಪಥ ಮಾಡಿ) ಕುಡಿಯುತ್ತಿದ್ದಾನೆ. ಕನ್ನದ ಬೊಮ್ಮಯ್ಯನು ಮೊದಲು ನೀಡಿದ್ದನ್ನೆಲ್ಲ ಕುಡಿದನು, ಇನ್ನೂ ನೀಡಿರಿ. ಈ ಚೆನ್ನಯ್ಯನ ಪರಿಯಾಣವು–ತಟ್ಟೆಯು–ಬರಿದಾಗಿದೆ. ಇತ್ತನೋಡು ಈ ಅಂಬಿಗರ ಚೌಡಯ್ಯನು ಊಟ ಮಾಡಿ ಬಿಟ್ಟನು. ಈ ಲಿಂಗಣ್ಣನು ತನಗೆ ಸಾಲ ದೆನ್ನುತ್ತಿದ್ದಾನೆ, ಪ್ರೀತಿಯಿಂದ ಇವನಿಗೆ ಇನ್ನೂ ನೀಡಿರಿ, ಶೀಘ್ರವಾಗಿ ಅತ್ತ ನೋಡಿರಿ ಮಹಾಕಾಳಯ್ಯನು, ಬರಿಯ ಬಟ್ಟಲನ್ನು (ತಟ್ಟೆಯನ್ನು) ಹಿಡಿದುಕೊಂಡಿದ್ದಾನೆ. ೭೨–೭೩. ಶಾಂತ ದೇವನೇ, ತಲೆದೂಗುತ್ತಿದ್ದೀಯೆ ನಿನಗೆ ಸಾಕಾಯಿತೇನೋ ? ರುಚಿ ಹೇಗಿದೆಯೋ ? ಗಣದಾಸ ಭೀಮಧವಳೇಶನಿಗೆ ಬಹಳವಾಗಿ ತೃಪ್ತಿಯಾಯಿತೇ ?

ಬಿಸದಂಗೆಯ್ಯುತ್ತೆ ಪೂಣ್ದಂತಿರೆ ಸವಿದಪನೀ ಡಕ್ಕೆ ಮಾರಯ್ಯನೀ ಗೋ
ವಿಸ ಮಾರಂ ಸಾಲದೆಂದೀಂಟಿದಪನಮರ್ದುಗೊಳ್ವಂತಿರಾನಂದದಿಂದಂ ೭೩

ಪ್ರಮಥರ ಕೃಪೆಯಿಂದೆನ್ನು
ತ್ತಮಾಂಗಮಿದು ಬಹಳ ರಸನೆವಡೆದೊಡೆ ಪೀರ್ವೆಂ
ಸುಮಹತ್ಕಟಾಹವಿಷಮನಿ
ತುಮನೆಂಬಂ ಮಿಂಡ ಸಂಗನೇಂ ಕಡುಗಲಿಯೋ ೭೪

ಚೊಕ್ಕಳತನದಿಂ ಸವಿದಂ
ಮೊಕ್ಕಳಮೇಕಾಂತರಾಮನೀಂಟಿದಪಂ ಕೆ
ಯ್ಯಿಕ್ಕಿ ಮೊಗೆಮೊಗೆದು ಬಗಸೆಯೊ
ಳೊಕ್ಕಲಿಗರ ಮುದ್ದನೊರ್ವನೊಲ್ದ ಸವಸದಿಂ ೭೫

ಚಿಕ್ಕಯ್ಯನುಮೀ ಡೋಹರ
ಕಕ್ಕಯ್ಯನುಮೊಡನೆ ಪೀರ್ದರರಿದೆನೆ ಪದಪಿಂ
ದೊಕ್ಕುದು ಮಿಕ್ಕುದು ಬಸವಂ
ಗಕ್ಕುಂ ಸವಿಯಲ್ಕೆ ಚನ್ನಬಸವಸಮೇತಂ ೭೬

ಸಕಳೇಶಮಾದರಸರೇ, ನೀವು ಇನ್ನೂ ಸ್ವಲ್ಪ ತೆಗೆದುಕೊಳ್ಳಿ! ಆದಯ್ಯನವರೇ, ಸುಮ್ಮ ಸುಮ್ಮನೆ ಸಾಕು ಎನ್ನುತ್ತಿದ್ದೀರಿ (ಊಟ ಮಾಡುವ) ನಿಮ್ಮ ಸಾಮರ್ಥ್ಯವನ್ನು ನಾನು ಬಲ್ಲೆನು. ಮಹಾರಾಜರಾದ ಬೊಮ್ಮಯ್ಯನವರೇ, ನಗಬೇಡಿರಿ, ಮಾದಿ ರಾಜರೇ, ನೀನು ಇದನ್ನು ಕುಡಿಯಿರಿ. ನನಗೆ ಇನ್ನೂ ಸ್ವಲ್ಪ ತನ್ನಿರಿ, ಮೊರಟದ ಬಂಕಿದೇವನಿಗೆ ತಂದುನೀಡಿರಿ. ಲಿಂಗಾರ್ಪಣೆ ಮಾಡಿ ಅಧಿಕವಾಗಿ ಶ್ರೀ ಗುರುಧ್ಯಾನ ಮಾಡುತ್ತ, ನೀಡಿದಷ್ಟನ್ನೆಲ್ಲ ಜೊಮ್ಮಿದೇವನು ಕುಡಿದು ಬಿಟ್ಟನು. ವಿನೋದ ಮಾಡುತ್ತ ಪ್ರತಿಜ್ಞೆ ಮಾಡಿದ ರೀತಿಯಲ್ಲಿ ಈ ಡಕ್ಕೆಯ ಮಾರಯ್ಯನು ಸ್ವೀಕರಿಸಿ ಬಿಟ್ಟನು. ಈ ಗೋವನ್ನು ಕಾಯುವ ಮಾದಯ್ಯನು ಸಾಲದು ಎನ್ನುತ್ತ ಆನಂದದಿಂದ ಹಾಲುಕುಡಿಯುವ ರೀತಿಯಲ್ಲಿ ಕುಡಿದು ಬಿಟ್ಟನು. ೭೪. ಪ್ರಮಥ ಗಣಗಳ ಕೃಪಾ ವಿಶೇಷದಿಂದ ನನ್ನ ಶಿರಸ್ಸು ಅನೇಕ ನಾಲಿಗೆಗಳನ್ನು ಹೊಂದಿದ್ದಾದರೆ ಶ್ರೇಷ್ಠವಾದ ಈ ದೊಡ್ಡ ದೊಡ್ಡ ಕೊಪ್ಪರಿಗೆಗಳಲ್ಲಿರುವ ಎಲ್ಲ ವಿಷವನ್ನೆಲ್ಲ ಕುಡಿಯುತ್ತೇನೆಂಬು ಮಿಂಡ ಸಂಗಯ್ಯನು ಅನ್ನುತ್ತಿದ್ದಾನೆ. (ಅಬ್ಬಾ!) ಅವನು ಅದೆಂಥಾ ಮಹಾ ಶೂರನೋ! ೭೫. ಪ್ರೀತಿಯನ್ನು ಹೊಂದಿ ಅಧಿಕವಾಗಿ ಏಕಾಂತ ರಾಮಯ್ಯನು ಕುಡಿದನು. ಕೈ ಗಳನ್ನು ಹಾಕಿ ಬೊಗಸೆಯಲ್ಲಿ ತುಂಬಿ ತುಂಬಿ ಒಕ್ಕಲಿಗರ ಮುದ್ದಯ್ಯನು ಪ್ರೀತಿಯಿಂದ ಅವಸರವಸರವಾಗಿ ಒಬ್ಬನೇ ಕುಡಿದನು. ೭೬. ಚಿಕ್ಕಯ್ಯನೂ, ಈ ಡೋಹರ ಕಕ್ಕಯ್ಯನೂ ಇದು ಆಶ್ಚರ್ಯವೆನ್ನುವ ರೀತಿಯಲ್ಲಿ ಕೂಡಲೇ ಪ್ರೀತಿಯಿಂದ ಕುಡಿದು ಬಿಟ್ಟರು. ಕುಡಿದು ಬಿಟ್ಟ ಮಿಕ್ಕ ವಿಷವು ಚೆನ್ನ ಬಸವಣ್ಣನ ಸಮೇತವಾಗಿ ಬಸವಣ್ಣನಿಗೆ

ವ॥ ಎಂಬ ಸಂಭ್ರಮೋಕ್ತಿಗಳಿಂಬುವಡೆಯೆ ಮತ್ತಮಲ್ಲಿ—

ಗೊಗ್ಗಾಂಬೆ ಚಾಕಲಾಂ[1]ಬಿಕೆ
ದುಗ್ಗಳೆ ಕಮಲಾಂಬೆ ಕಾಳಿ ಶಿವದೇವಿ ಲಸ
ತ್ಸುಗ್ಗಲೆ ಶಾಂಭವಿ ನಿಂಬಿಯು
ಮುಗ್ಧದ ಮಾದೇವಿ ವಿಮಳೆ ರೇಕಾಂಬಿಕೆಯರ್ ೭೭

ಸೋಮಾಂಬಿಕೆ ಮಾದಾಂಬಿಕೆ
ಭೀಮಾಂಬಿಕೆ ಬೀಚಿದೇವಿ ಬಲಿದೇವಿ ಮಹಾ
ಕಾಮಾಂಬಿಕೆ ನಾಗಾಂಬಿಕೆ
ರೇಮಾಂಬಿಕೆ ರೇಚಿದೇವಿ ವೀರಾಂಬಿಕೆಯರ್ ೭೮

ಲಿಂಗಾಂಬೆ ಸೂರಸೇನೆ ಸು
ಮಂಗಳೆ ಸತ್ಯಕ್ಕನಲ್ಲಮಾಂಬಿಕೆ ವಿಳಸ
ದ್ಗಂಗಾಂಬೆ ಗೌರಿ ಶಾಂಕರಿ
ಸಂಗಾಂಬಿಕೆ ಚಂಡಿಯರಸಿಯಾ[2]ದಾಂಬಿಕೆಯರ್ ೭೯

ವ॥ ಇವರ್ಮೊದಲಾದ ಶಿವಯೋಗಿನಿಯರ್ಮೇಲಣ ಪಙ್ತಿಗೊಂಡು ಕುಳ್ಳಿರ್ದು ಪರಮಾನು ರಾಗದಿಂ ಶಿವಪ್ರಸಾದಿತ ವಿಷಾಮೃತಪಾನಲೀಲೆಯನಾಳ್ದು ತಣಿದು ತೇಗಿ ಬೀಗುತ್ತುಮಿರೆ—

ಓರೊರ್ವರ ಪರಿಯಣಮುಮ
ನೋರೊರ್ವರ್ಕೊಂಡು ಶೇಷಮಂ ಸವಿಸವಿವು

ಕುಡಿಯಲಿಕ್ಕೆ ಸಾಕಾಗುವುದು. ವ॥ ಹೀಗೆಂದೆನ್ನುವ ಸಂಭ್ರಮದ ಮಾತುಗಳು ಅಧಿಕ ವಾಗುತ್ತಿದ್ದವು. ಮತ್ತು ಅಲ್ಲಿ ೭೭–೭೯. ಗೊಗ್ಗವ್ವೆ, ಚಾಕಲಾಂಬಿಕೆ, ದುಗ್ಗಳೆ, ಕಮಲಾಂಬೆ, ಕಾಳಮ್ಮ, ಶಿವದೇವಮ್ಮ, ಶ್ರೇಷ್ಠಳಾದ ಸುಗ್ಗಲಾದೇವಿ, ಶಾಂಭವಿ, ನಿಂಬ್ಯಕ್ಕ, ಪವಿತ್ರಳಾದ ಮಹಾದೇವಿ, ಪರಿಶುದ್ಧಳಾದ ರೇಣುಕಾಂಬೆಯರೂ, ಸೋಮ ಲಾಂಬಿಕೆ, ಮಾದಲಾಂಬಿಕೆ, ಭೀಮಲಾಂಬಿಕೆ, ಬೀಚಿದೇವಿ, ಬಲಿದೇವಿ, ಮಹಾಕಾ ಮಾಂಬಿಕೆ, ನಾಗಲಾಂಬಿಕೆ, ರೇಮಾಂಬಿಕೆ ರೇಚಿದೇವಿ, ವೀಲಾಂಬಿಕೆಯರೂ, ಲಿಂಗಾಂಬೆ, ಸೂರಸೇನಮ್ಮ, ಸುಮಂಗಳಮ್ಮ, ಸತ್ಯಕ್ಕ, ಅಲ್ಲಮಾಂಬಿಕೆ, ಪ್ರಕಾಶಮಾನಳಾದ ಗಂಗಾಂ ಬಿಕೆ, ಗೌರಮ್ಮ, ಶಾಂಕರಿ, ಸಂಗಾಂಬಿಕೆ, ಚಂಡಿಯರಸಿ, ಆ ಮಾದಾಂಬಿಕೆಯರೂ, ವ॥ ಇವರೇ ಮೊದಲಾದ ಶಿವಯೋಗಿನಿಯರು ಮೇಲ್ಭಾಗದ ಪಙ್ತಿಯಲ್ಲಿ ಕುಳಿತುಕೊಂಡು, ಪರಮ ಪ್ರೀತಿಯಿಂದ ಶಿವನಿಗೆ ಅರ್ಪಿಸಲ್ಪಟ್ಟ ವಿಷವೆಂಬ ಅಮೃತ ಪಾನವನ್ನು ಮಾಡಿ ದವರಾಗಿ, ತೃಪ್ತಿಗೊಂಡು ತೇಗಿ, ಬೀಗುತ್ತಿರಲಾಗಿ ೮೦. ಒಬ್ಬೊಬ್ಬರ ಹರಿವಾಣವನ್ನು ಇನ್ನೊಬ್ಬೊಬ್ಬರು ತೆಗೆದುಕೊಳ್ಳುತ್ತ ಅವುಗಳಲ್ಲಿ ಉಳಿದಿರುವ ಪ್ರಸಾದವನ್ನು (ಹುಡು

1 ಮಾಂ(ದ) 2 ಮಾ(ಮು), ದೂ(ಅ)

ತ್ತೋರೊರ್ವರೊಡನೆ ಕುಳ್ಳಿ
ರ್ದೋರೊರ್ವರ್ತವ್ಮೊಳೀಂಟುತುಂ ಬಿನದಿಸುತುಂ ೮೦

ಅರೆಮುಚ್ಚಿ ತೆಱೆವುತುಂ ಕ
ಣ್ಮರಲಂ ಕಾಲ್ನೀಡಿ ನಿಗುರುತುಂ ಪಾತ್ರೆಗಳಂ
ಕರತಳದೊಳಾಂತು ನರ್ತಿಸು
ತಿರದಾರ್ದುಪ್ಪರಿಸಿ ನೆಗೆವುತುಂ ನಗೆನಗುತುಂ ೮೧

ತಣಿವುತ್ತುಂ ತೇಗುತುಂ ಬೀಗುತೆ ಪೊಡವಡುತುಂ ಪೊಂಗುತುಂ ಕೂಗಿಡುತ್ತುಂ
ಕುಣಿವುತ್ತುಂ ಬಣ್ಣಿಸುತ್ತುಂ ಬಲವರುತವಾರುತ್ತಮಪ್ಪುತ್ತುಂ ಪೆರ್ಚುತುಂ ಸಂ
ದಣಿಸುತ್ತುಂ ಸಾರುತುಂ ಮೈಮುರಿವುತೊಲೆವುತೊಲ್ದಾಡುತುಂ ಪಾಡುತಂ ಬಿ
ನ್ನಣಮಂ ತೋಱುತ್ತೆ ಬೀಱುತ್ತಭಿನವರಸಮಂ ನೋಡುತುಂ ಗಾಡಿಯಿಂದಂ ೮೨

ಬಸವನನೊರ್ಮೆ ಲಿಂಗಮುಮನೊರ್ಮೆ ನಿರೀಕ್ಷಿಸುತ್ತುಂ ಬೆಮರ್ತು ಕಂ
ಪಿಸುತೆ ಸುಖಾಶ್ರುವಿಂ ನನೆವುತುಂ ನೆನೆವುತ್ತೆ ಶಿವಾಂಘ್ರಿಪದ್ಮಮು
ಪೊಸಬಗೆವೆತ್ತುಘೇಯೆನುತೆ ಗದ್ಗದವೊಪ್ಪಿರೆ ಸತ್ಪುರಾತನ
ಪ್ರಸರಮನುರ್ವಿ ಕೀರ್ತಿಸುತೆ ಕೆಯ್ಮುಗಿವುತ್ತೆ ಪೊದಳ್ದ ಭಕ್ತಿಯಿಂ ೮೩

ನರಪತಿಮುಖ್ಯರ್ನೋಡು
ತ್ತಿರೆ ಸಾದ್ಭುತಹೃದಯರಿಂತು ಗಣವರರಾಗ

ಹುಡುಕಿ) ಸ್ವೀಕಾರಮಾಡುತ್ತ, ಒಬ್ಬೊಬ್ಬರೂ ಪಕ್ಕಪಕ್ಕದಲ್ಲಿ ಕೂಡಿಕೊಂಡು ಕುಳಿತು ವಿನೋದದ ಮಾತನಾಡುತ್ತ ಕುಡಿಯುತ್ತಿದ್ದರು. ೮೧–೮೨. ಹೂವಿನಂತಿರುವ ಕಣ್ಣುಗಳನ್ನು ಅರ್ಧಮುಚ್ಚಿ ತೆರೆಯುತ್ತ, ಕಾಲುಗಳನ್ನು ಚಾಚಿ ನಿಗುರುತ್ತ ಹರಿವಾಣಗಳನ್ನು ಕೈಗಳಲ್ಲಿ ಹಿಡಿದುಕೊಂಡು, ನರ್ತನಮಾಡುತ್ತ, (ಸಂತೋಷದಿಂದ) ಕೂಗಾಡುತ್ತ, ಮೇಲಕ್ಕೆ ಕುಪ್ಪಳಿಸಿ ನೆಗೆದಾಡುತ್ತ, ನಗುತ್ತ, ತೃಪ್ತಿಗೊಳ್ಳುತ್ತ, ತೇಕಾಡುತ್ತ, ಸೆಡೆದು ನಿಲ್ಲುತ್ತ, ನಮಸ್ಕಾರ ಮಾಡುತ್ತ, ಬಾಗಿ ನಿಲ್ಲುತ್ತ, (ಶಿವಶಿವ ಎಂದು) ಕೂಗುತ್ತ, ಕುಣಿದಾಡುತ್ತ, ವರ್ಣನೆ ಮಾಡುತ್ತ, ಪ್ರದಕ್ಷಿಣೆ ಬರುತ್ತ, ಉಬ್ಬುತ್ತ, ಒಟ್ಟೊಟ್ಟಾಗಿ ಸೇರುತ್ತ, ದೂರದೂರ ಸರಿಯುತ್ತ, ಮೈಮುರಿಯುತ್ತ, ಒಲೆದು ನಿಲ್ಲುತ್ತ, ಒಲೆದು ನಲಿದಾಡುತ್ತ ಹಾಡುತ್ತ, ಒಯ್ಯಾರವನ್ನು ತೋರ್ಪಡಿಸುತ್ತ, ನೂತನ ರಸಭಾವವನ್ನು ವ್ಯಕ್ತಪಡಿಸುತ್ತ, (ಒಬ್ಬರನ್ನೊಬ್ಬರು) ಸಂಭ್ರಮದಿಂದ ನೋಡುತ್ತ (ಇದ್ದರು). ೮೩–೮೪. ಒಮ್ಮೆ ಬಸವಣ್ಣನನ್ನೂ ಒಮ್ಮೆ ಲಿಂಗವನ್ನೂ ನಿರೀಕ್ಷಣೆ ಮಾಡುತ್ತ, ಬೆವರಿ ಕಂಪನಗೊಳ್ಳುತ್ತ, ಸಂತೋಷದ ಕಣ್ಣೀರಿನಿಂದ ನೆನೆಯುತ್ತ, ಶಿವನ ಪಾದಕಮಲವನ್ನು ನೆನೆಯುತ್ತ, ನೂತನ ಮನಸ್ಸುಳ್ಳವರಾಗಿ ಉಘೇ! ಎನ್ನುತ್ತ, ಗದ್ಗದ ಕಂಠದಿಂದ ಕೂಡಿ ಶ್ರೇಷ್ಠ ಪುರಾತನರ ಸಮೂಹವನ್ನು ಹೊಗಳುತ್ತ, ಹೊರಹೊಮ್ಮುತ್ತಿರುವ ಭಕ್ತಿ ಭಾವದಿಂದ ಕೈ ಮುಗಿಯುತ್ತ ಮಹಾರಾಜನಾದ ಬಿಜ್ಜಳನೇ ಮೊದಲಾದ ಪ್ರಮುಖರೆಲ್ಲರೂ

ಳ್ಗರಳರಸಪಾನಕೇಳಿಯು
ನಿರದಾಳ್ದೋಲಾಡಿದರ್ಸುಖಾಂಭೋನಿಧಿಯೊಳ್ ೮೪

ಗುಣನಿಧಿ ಬಸವಂ ಕಂಡಾ
ಗಣನಿವಹಸಮುತ್ಸವಂಗಳಂ ನಲಿದೊಲವಿಂ
ಮಣಿದಾಂ[1]ತು ತತ್ಪ್ರಸಾದಮ
ನಣಿಯರವಾರೋಗಿಸುತ್ತೆ ತಣಿದೊಪ್ಪಿರ್ದಂ ೮೫

ಗರಳಧರನೀಂಟಿದಮೃತಂ
ಗರಳಂ ತಾನಾದುದಮೃತಮಯರೀಂಟಿದ ತ
ದ್ಗರಮಮೃತಮಾದುದೆಂದೆನೆ
ಧರೆಯೊಳ್ಖಲಸಾಧುಸಂಗಮೇಗೆಯ್ಯದೊ ಪೇಳ್ ೮೬

ವ॥ ಎಂದು ಬಲ್ಲಬರ್ಣಿಸುತ್ತುಮಿರೆ ಮತ್ತಮಲ್ಲಿ ವೇತ್ರಧರರ್ಗೆ ನಿಯ[2]ಮಿಸಿ—

ಬರಿಸಿದನಳ್ತಿವಟ್ಟು ಗಣಕಾವಳಿಯುಂ ಸಚಿವಪ್ರತಾನಮುಂ
ಧರಣಪಪುತ್ರರಂ ಜನಪಬಾಂಧವರಂ ನೃಪನಾಪ್ತಮಿತ್ರರಂ
ಚರಸುಭಟರ್ಕಳಂ ಗುರುಪುರೋಹಿತರಂ ಪುರರಕ್ಷಕೌಘಮುಂ
ಸುರುಚಿರವಿಪ್ರರಂ ಸುಕರದಾಸಿಯರಂ ಸುನಟೀವಿತಾನಮುಂ ೮೭

ಕ್ಷೋಣೀಂದ್ರ ಪ್ರಮದಾಳಿಯುಂ ವ್ಯಜನಭೃಂಗಾರಾತಪತ್ರೋಲ್ಲಸ
ನ್ಮಾಣಿಕ್ಯಾಂಚಿತದರ್ಪಣಾಭರಣ ಚಂಚಚ್ಚಾಮರಾಂದೋಳಿಕಾ

ನೋಡುತ್ತಿರುವಂತೆ ಅದ್ಭುತ ಹೃದಯ ಸಂಪತ್ತಿನಿಂದ ಕೂಡಿದ ಶಿವಗಣಶ್ರೇಷ್ಠರುಗಳೆಲ್ಲ ಈ ರೀತಿ ವಿಷಪಾನ ಕ್ರೀಡಾಮಗ್ನರಾಗಿ, ತತ್ಸಂಬಂಧವಾದ ಸುಖವೆಂಬ ಸಮುದ್ರದಲ್ಲಿ ತೇಲಾಡುತ್ತಿದ್ದರು. ೮೫. ಸದ್ಗುಣಗಳಿಗೆ ನಿಧಿಯಂತಿರುವ ಬಸವಣ್ಣನು ಈ ಶಿವಗಣ ಸಮೂಹದ ಉತ್ಸವಗಳನ್ನು ಕಂಡು ಸಂತೋಷದಿಂದ ಒಲಿದು ನಮಸ್ಕಾರ ಮಾಡಿ, ಅವರುಗಳ ಪ್ರಸಾದವನ್ನು ಸಡಗರದಿಂದ ಸ್ವೀಕಾರ ಮಾಡಿ ತೃಪ್ತಿಗೊಂಡು ಶೋಭಿಸುತ್ತಿದ್ದನು. ೮೬. ವಿಷವನ್ನು ಧರಿಸಿದ ಶಿವನು ಕುಡಿದ ಅಮೃತವು ತಾನು ವಿಷವಾಯಿತು, ಅಮೃತ ಸ್ವರೂಪರಾದ ಶಿವಶರಣರು ಕುಡಿದ ಆ ವಿಷವೇ ಅಮೃತಮಯವಾಯಿತು, ಎಂದು ಹೇಳುವ ಹಾಗೆ, ಲೋಕದಲ್ಲಿ ದುಷ್ಟರು ಮತ್ತು ಸತ್ಪುರುಷ ಸಂಗವು ಏನನ್ನು ಮಾಡಲಿಕ್ಕಿಲ್ಲ! ಹೇಳು, ವ॥ ಹೀಗೆಂದು ತಿಳಿದವರೆಲ್ಲರೂ ವರ್ಣನೆ ಮಾಡುತ್ತಿದ್ದರು. ಮತ್ತು ಅಲ್ಲಿ (ಬಸವಣ್ಣನನ್ನು) ಬೆತ್ತವನ್ನು ಕೈಯಲ್ಲಿ ಹಿಡಿದು ಸೇವೆ ಮಾಡುವವರಿಗೆ ಆಜ್ಞೆ ಮಾಡಿ ಕಳುಹಿಸಿ ೮೭–೮೮. ಬಸವಣ್ಣನು ಸಂತೋಷಗೊಂಡು ಲೆಕ್ಕಿಗರ ಸಮೂಹವನ್ನೂ (ಗಣಿತಜ್ಞರ ಸಮೂಹವನ್ನೂ), ಮಂತ್ರಿಗಳ ಸಮೂಹವನ್ನೂ, ರಾಜಪುತ್ರರನ್ನೂ, ಅರಸನ ಬಂಧು ಬಾಂಧವರನ್ನೂ. ಅರಸನ ಆಪ್ತರಾದ

1 ದಾಂ(ಚ) 2 ಯಾ(ಚ, ಮು)

ಶ್ರೇಣಿಧಾರಕರಂ ಸುಗಂಧಹಿಮವೀಟೀದಾನಧೌರೇಯರುಂ
ವೀಣಾವೇಣುಮೃದಂಗತಾಳಕಹಳಾವಾದ್ಯಪ್ರವೀಣರ್ಕಳಂ ೮೮

ಪಂಡಿತರಂ ಲಾಸ್ಯಕಳಾ
ಮಂಡಿತರಂ ಗಾಯಕರ್ಕಳಂ ಕವಿಗಳನು
ದ್ದಂಡನಿಗಮಾಗಮಜ್ಞರ
ತಂಡಮನುರುತರಪುರಾಣಪರಿಣತ ಬುಧರಂ ೮೯

ವರವಾದಿವಂದಿಮಾಗಧ
ಪರಿಹಾಸಕಸುವಿಟವಾಗ್ಮಿ ಪಾಠಕಚಯಮಂ
ತರಮಱಿದು ಕುಳ್ಳಿರಿಸಿ ಘನ
ಗರಳಾಮೃತಮೆಱೆದು ತಣಿಪಿದಂ ವೃಷಭೇಂದ್ರಂ ೯೦

ಅವರನಿಬರುಮೀಂಟಿದರು
ತ್ಸವದಿಂ ಸುಧೆಯುಂತಿರಾದ ವಿಷಮಂ ತಣಿದ

ಮಿತ್ರವರ್ಗವನ್ನೂ, ಗೂಢಚಾರರನ್ನೂ, ಮಹಾಶೂರರುಗಳನ್ನೂ, ಗುರುಗಳನ್ನೂ, ಪುರೋಹಿತರನ್ನೂ, ನಗರ ರಕ್ಷಕರುಗಳ ಸಮೂಹವನ್ನೂ, ಶ್ರೇಷ್ಠರಾದ ಬ್ರಾಹ್ಮಣರುಗಳನ್ನೂ, ಒಳ್ಳೆಯ ಸೇವೆ ಮಾಡುವ ದಾಸೀ ವರ್ಗದವರನ್ನೂ, ಶ್ರೇಷ್ಠ ನೃತ್ಯಗಾರ್ತಿಯರನ್ನೂ, ರಾಜನ ಅಂತಃಪುರದ ಸ್ತ್ರೀಯರ ಸಮೂಹವನ್ನೂ, ಬೀಸಣಿಕೆ, ಭೃಂಗಾರ, ಛತ್ರಿ, ಹೊಳೆಯುತ್ತಿರುವ ಮಾಣಿಕ್ಯ ರತ್ನಗಳಿಂದ ಶ್ರೇಷ್ಠವೆನಿಸಿದ ಕನ್ನಡಿ, ಆಭರಣ, ಬೀಸುವ ಚಾಮರ ಮೇಣೆ (ಅಥವಾ ಪಲ್ಲಕ್ಕಿ) ಇವುಗಳ ಸಮೂಹವನ್ನೂ ಧರಿಸಿ ಸೇವೆ ಮಾಡುವ ಸೇವಕ ವರ್ಗದವರನ್ನೂ, ಸುವಾಸನಾ ದ್ರವ್ಯಗಳು, ಪಚ್ಚಕರ್ಪೂರ ಮಿಶ್ರಿತವಾದ ತಾಂಬೂಲವನ್ನು ಕೊಡುವುದರಲ್ಲಿ ಸಮರ್ಥರಾದ ಸೇವಕ ವರ್ಗದವರನ್ನೂ, ವೀಣೆ, ಕೊಳಲು, ಮೃದಂಗ, ತಾಳ, ಕಹಳೆಯೇ ಮೊದಲಾದ ವಾದ್ಯವನ್ನು ಬಾರಿಸುವುದರಲ್ಲಿ ಪ್ರವೀಣರಾದ ಕಲಾವಿದರನ್ನೂ ಬರಮಾಡಿಕೊಂಡನು. ೮೯–೯೦. ಆ ಬಸವಣ್ಣನು ಪಂಡಿತರುಗಳನ್ನೂ, ನೃತ್ಯ, (ಮೃದುನೃತ್ಯ) ಕಲೆಯಿಂದ ಅಲಂಕಾರಗೊಂಡವರನ್ನೂ, ಸಂಗೀತಗಾರರನ್ನೂ, ಕವಿಗಳನ್ನೂ, ಶ್ರೇಷ್ಠರಾದ ವೇದ, ಆಗಮಗಳಲ್ಲಿ ತಜ್ಞರ ಸಮೂಹವನ್ನೂ ಶ್ರೇಷ್ಠವಾದ ಪುರಾಣಗಳನ್ನು ಹೇಳುವುದರಲ್ಲಿ ಕುಶಲರಾದವರನ್ನೂ, ಶ್ರೇಷ್ಠ ತಾರ್ಕಿಕರನ್ನೂ, ಸ್ತುತಿ ಪಾಠಕರನ್ನೂ, ಬಿರುದನ್ನು ಹೊಗಳುವ ಭಟ್ಟಂಗಿಗಳನ್ನೂ, ಹಾಸ್ಯಗಾರರನ್ನೂ, ವಿಟರು, ಉಪನ್ಯಾಸಕರು, ಅಧ್ಯಾಪಕರನ್ನೂ ಕ್ರಮವಾಗಿ ಕುಳ್ಳಿರಿಸಿ, ಘನವಾದ ಅಮೃತದಂತಾಗಿರುವ ವಿಷವನ್ನು ಕುಡಿಸಿ, ತಣಿಸಿದನು. ೯೧. (ಹೀಗೆ ಸೇರಿದ) ಅವರೆಲ್ಲರೂ ಅಮೃತದಂತಾದ ವಿಷವನ್ನು ಸಂತೋಷದಿಂದ

ರ್ವಿವಿಧೋಕ್ತಿಗಳಿಂ ಪೊಗಳ್ದ
ರ್ನವೀನ ಸುಖವಾಳ್ದು ಭಕ್ತಿರತ್ನಾಕರನಂ ೯೧

ವ॥ ಮತ್ತಂ ಸಾಂಕುಶನಿಬದ್ಧಾಂಜಲಿಗಳಾಗಿ ನಿಂದಿರ್ದ ಗಜಾರೋಹಕರಂ ಮಹಿಮಾಕರನ ಳೀಕ್ಷಿಸಿ—

ರಣಕೋಲಾಹಲನಂ ಕರಾಳರದನಂ ನೀಲಾಚಲಸ್ಪರ್ಧಿಯಂ
ಗಣನಾಥಪ್ರಿಯನಂ ಸುಭದ್ರಗಜಮಂ ದಂತಾವಳೋತ್ತಂಸನಂ
ಗುಣರತ್ನಾಕರನಂ ಗಜೇಂದ್ರಮಣಿಯಂ ಗಂಭೀರನಾದಾಂಕಪಾ
ರಣರಾಜೇಂದ್ರನನಿಂದ್ರದಂತಿನಿಭನಂ ವಿಂಧ್ಯಾದ್ರಿಸಂಕಾಶನಂ ೯೨

ಕಳಭವರೇಣ್ಯನಂ ಕರಟಿಪುಂಗವನಂ ಕರಿಸಾರ್ವಭೌಮನಂ
ಮಳಯವಿಹಾರಿಯಂ ಮಹಿತವಿಭ್ರಮನಂ ಮದಗಂಧಭಾಸಿಯಂ
ಜಳಧರಘೋಷನಂ ಜನಪವಲ್ಲಭನಂ ಜಗದೇಕಶೂ[1]ರನಂ
ವಿಳಸಿತಸತ್ವನಂ ವಿಪುಳವಿಗ್ರಹನಂ ವಿಜಯಾಭಿರಾಮನಂ ೯೩

ಕುಡಿದರು ; ತೃಪ್ತಿಪಟ್ಟರು ; ಭಕ್ತಿರತ್ನಾಕರನೆನಿಸಿದ ಬಸವಣ್ಣನನ್ನು ಅನೇಕ ಪ್ರಕಾರದ ಮಾತುಗಳಿಂದ ಹೊಸಬಗೆಯ ಸುಖವನ್ನು ಹೊಂದಿದವರಾಗಿ ಹೊಗಳಿದರು. ವ॥ ಮತ್ತು ಕೈಯಲ್ಲಿ ಹಿಡಿದ ಆನೆಯ ಅಂಕುಶ ಸಮೇತವಾಗಿ ಕೈಮುಗಿದುಕೊಂಡು ನಿಂತಿದ್ದ ಮಾವುತರನ್ನು (ಆನೆ ಹತ್ತುವವರನ್ನು) ಮಹಿಮಾಶಾಲಿಯಾದ ಬಸವಣ್ಣನು ನೋಡಿ ೯೨–೯೬. ರಣಕೋಲಾಹಲನೆಂದು ಕರೆಸಿಕೊಳ್ಳುವ ಆನೆಯನ್ನು, ಭಯಂಕರದಂತವುಳ್ಳ ಆನೆಯನ್ನು, ನೀಲಾಚಲದೊಡನೆ ಸ್ಪರ್ಧೆ ಮಾಡುತ್ತಿರುವುದೋ ಎಂಬ ಆನೆಯನ್ನು, ಶಿವನಿಗೆ ಪ್ರಿಯನೆನಿಸಿದ ಆನೆಯನ್ನು, ಶ್ರೇಷ್ಠವಾದ ಮಂಗಳ ಲಕ್ಷಣಗಳುಳ್ಳ ಆನೆಯನ್ನು (ಪಟ್ಟದಾನೆಯನ್ನು), ಆನೆಗಳಲ್ಲೆಲ್ಲ ಶಿರೋ ರತ್ನವೆನಿಸಿರುವ ಆನೆಯನ್ನು, ಸದ್ಗುಣಗಳಿಂದ ಸಮುದ್ರಕ್ಕೆ ಸಮಾನವೆನಿಸಿದ ಆನೆಯನ್ನು. ಶ್ರೇಷ್ಠ ಗಜಗಳಲ್ಲೆಲ್ಲ ರತ್ನಮಯವಾದು ದೆಂದೆನಿಸುವ ಆನೆಯನ್ನು, ಗಂಭೀರವಾಗಿ ಬೃಂಹಿತ ಮಾಡುವುದೆಂದು ಗೊತ್ತಾಗಿರುವ ಆನೆಗಳಿಗೆಲ್ಲ ರಾಜನಂತಿರುವ ಆನೆಯನ್ನು, ಇಂದ್ರನ ಐರಾವತಕ್ಕೆ ಸರಿಸಮಾನವಾದ ಆನೆಯನ್ನು, ವಿಂಧ್ಯಪರ್ವತಕ್ಕೆ ಸಮಾನವೆನಿಸಿರುವ ದೊಡ್ಡ ಆನೆಯನ್ನು, ಆ ಶ್ರೇಷ್ಠ ಮರಿ ಆನೆಯನ್ನು. ಆನೆಗಳಲ್ಲೆಲ್ಲ ಪುಂಗವನೆನಿಸಿರುವುದನ್ನು, ಆನೆಗಳಲ್ಲೆಲ್ಲ ಸಾರ್ವಭೌಮ ನೆನಿಸಿದುದನ್ನು, ಮಲಯ ಪರ್ವತದಲ್ಲಿ (ಸದಾ) ವಿಹರಿಸುತ್ತಿರುವುದನ್ನು, ಸಂಭ್ರಮ ದಿಂದ ಖ್ಯಾತಿವೆತ್ತುದನ್ನು, ಮದೋದಕದ ಸುಗಂಧದಿಂದ ಪ್ರಕಾಶಿಸುವ ಆನೆಯನ್ನು, ಮೇಘದಂತೆ ಗರ್ಜಿಸುವಂತಹವುವನ್ನು, ಜಗತ್ತಿನಲ್ಲಿ ಇದೊಂದೇ ಶೂರನೆಂದೆನಿಸಿರುವ ಆನೆಯನ್ನು, ಪ್ರಕಾಶಮಾನವಾದ ಸತ್ವದಿಂದ ಕೂಡಿದುದೆಂದು ಹೆಸರಾದುದನ್ನು, ದೊಡ್ಡ ಶರೀರವುಳ್ಳದ್ದನ್ನು, ವಿಜಯ ಎಂಬ ಹೆಸರಿನಿಂದ ಮನೋಹರವಾಗಿರುವ ಆನೆಯನ್ನು,

1 ವೀ(ಅ)

ಸಮರಪಟುವಿಕ್ರಮನನ
ಭ್ರಮೋಪವಿಭ್ರಮನನಭ್ರಕಾಯನನಹಿತೋ
ಗ್ರಮತಂಗಜಮದಹರನಂ
ಚಮೂವಿಭೂಷಣನನಿಭಕುಲಪ್ರಭು ಕರಿಯುಂ ೯೪

ಕುಂಜರವರನಂ ಭೂಧರ
ಭಂಜನನಂ ಕಾಲರುದ್ರನಂ ರಟದಳಿನೀ
ರಂಜನನಂ ಮದಸುರಭಿಸ
ಮಂಜಸನಂ ಶಂಕರಪ್ರಿಯಾಹ್ವಯಗಜಮುಂ ೯೫

ರಿಪುರಾಜಭಯಂಕರನಂ
ತ್ರಿಪುರಾಂತಕನಂ ಪ್ರಮತ್ತನಂ ಜಂಗಮದಾ
ಸ್ಯಪರಾಯಣನಂ ಸಬಳ
ದ್ವಿಪೇಂದ್ರಮಂ ತನ್ನಿಮೆಂದು ತಾಂ ಬೆಸಸುತ್ತುಂ ೯೬

ಬರಿಸಿ ಘನಕರಿಗಳಂ ಬಸ
ವರಸಂ ಸಾಲ್ಗೊಳಿಸುತೆಱೆದು ಗರಳಾಮೃತಮಂ
ದ್ವಿರದಂಗಳನುಱೆ ತಣಿಪಿದ
ನರಿದೆಂದಚ್ಚರಿಯನಾಳ್ದು ಪೊಗಳೆ ನರೇಂದ್ರಂ ೯೭

ಯುದ್ಧ ಭೂಮಿಯಲ್ಲಿ ಸಮರ್ಥವಾದ ಪರಾಕ್ರಮವುಳ್ಳ ಆನೆಯನ್ನು, ಆಕಾಶದ ಆನೆಯಾದ ಐರಾವತದ ಭ್ರಾಂತಿಯನ್ನುಂಟು ಮಾಡುವ ಮೋಡದಂತೆ ಕಪ್ಪಾದ ಶರೀರವುಳ್ಳ ಆನೆಯನ್ನು ವೈರಿಗಳಿಗೆ ಭಯಂಕರವೆನಿಸಿ ಮತಂಗಜನೆಂಬ ರಾಕ್ಷಸನನ್ನು ಸಂಹರಿಸಿದ ಆನೆಯಂತಿರುವ ಆನೆಯನ್ನು, ಸಮಸ್ತ ಸೈನ್ಯಕ್ಕೆಲ್ಲ ಭೂಷಣ ಪ್ರಾಯವಾದ ಆನೆಯನ್ನು, ಆನೆಗಳ ವಂಶಕ್ಕೆಲ್ಲ ಪ್ರಭುವೆನಿಸಿರುವ ಆನೆಯನ್ನು, ಆನೆಗಳಲ್ಲಿ ಶ್ರೇಷ್ಠವಾದದ್ದೆನಿಸಿರುವ ಆನೆಯನ್ನು, ಪರ್ವತಗಳನ್ನೆಲ್ಲ ಕಿತ್ತು ಬಿಸಾಡುವಂತಹ ಆನೆಯನ್ನು, ಪ್ರಳಯ ಕಾಲದ ರುದ್ರನೆಂಬ ಹೆಸರಿನ ಆನೆಯನ್ನು, (ಮದೋದಕದ ಕಾರಣದಿಂದ) ಸುತ್ತಿ ಝೇಂಕರಿಸುತ್ತಿರುವ ಹೆಣ್ದುಂಬಿಗಳನ್ನುಳ್ಳ ಆನೆಯನ್ನು, ಮದೋದಕದಿಂದ ಸುವಾಸನೆಯಿಂದೊಡಗೂಡಿದ ಆನೆಯನ್ನು, ''ಶಂಕರಪ್ರಿಯ'' ಎಂಬ ಹೆಸರುಳ್ಳ ಆನೆಯನ್ನು, ವೈರಿರಾಜರುಗಳಿಗೆ ಭಯವನ್ನುಂಟುಮಾಡುವ 'ತ್ರಿಪುರಾಂತಕ' ಎಂಬ ಹೆಸರಿನದನ್ನು, ವಿಶೇಷಗರ್ವವಿಶಿಷ್ಟವಾದುದನ್ನು. ಜಂಗಮರುಗಳ ಸೇವಾಕಾರ್ಯಧುರಂಧರನೆನಿಸಿದ ಆನೆಯನ್ನು, (ಇವೇ ಮೊದಲಾದ) ವಿಶೇಷಬಲಶಾಲಿಯಾದ ಶ್ರೇಷ್ಠ ಆನೆಗಳನ್ನು ತನ್ನಿರಿ ಎಂದು (ಆ ಸೇವಕ ವರ್ಗದವರಿಗೆ) ಆಜ್ಞೆಮಾಡಿದನು. ೯೭. (ಈ ರೀತಿಯಲ್ಲಿ) ಶ್ರೇಷ್ಠವಾದ ಆನೆಗಳನ್ನೆಲ್ಲ ಬರಮಾಡಿಕೊಂಡು, ಸಾಲಾಗಿ ನಿಲ್ಲಿಸಿ ಬಸವೇಶ್ವರನು ಅವಕ್ಕೆಲ್ಲ ವಿಷದಅಮೃತವನ್ನು ಕುಡಿಸಿ, ಇದು (ಲೋಕದಲ್ಲಿ) ಅಸಾಧ್ಯವಾದ ಕಾರ್ಯವೆನ್ನುತ್ತ ಆಶ್ಚರ್ಯಗೊಂಡು ಬಿಜ್ಜಳನರೇಂದ್ರನು ಹೊಗಳುತ್ತಿರುವಂತೆ ಹೆಚ್ಚಾಗಿ ತೃಪ್ತಿ

ವ॥ ಮತ್ತಂ ಕಶಾಗರ್ಭಿತಕರಸಂಪುಟಘಟಿತನಿಟಿಲತಟರಾಗಿ ನಿಂದಿರ್ದ ತುಂಗತುರಂಗಿಗಳಂ ಮಂಗಳಮಯುಂ ಪಿಂಗದೆ ನೋಡಿ—

ಭರದಿಂದಂ ತನ್ನಿಮಶ್ವೇಶ್ವರನನತುಳ ಭದ್ರಾಂಗನಂ ಸೌಮ್ಯನಂ ಸೌಂ
ದರನಂ ಚಿತ್ರಾಂಗನಂ ಮಂಗಳಮಯನನಜೇಯಾಖ್ಯನಂ ಸಂಗರಶ್ರೀ
ಧರನಂ ತತ್ವಜ್ಞನಂ ಮಂಜುಳಗಮನನನುದ್ದಂಡನಂ ಚಂಡವೇಗೋ
ದ್ಧುರನಂ ಚಂಡಾಂಶುವಾಜಿಪ್ರಭನನಭಯನಂ ತುಂಗನಂ ಮಾಣದೀಗಳ್ ೯೮

ಸುಲಲಿತಕಾಯನಂ ಸುಭಗವಾಜಿಯನಾಜಿವಿಹಾರಧೀರನಂ
ವಿಲಸಿತಸತ್ವನಂ ವಿಪುಳವಿಕ್ರಮನಂ ಜಯಶೀಲನಂ ಮಹೋ
ಜ್ವಲಹಯರಾಜನಂ ಕುಸುಮಬಾಣನನುನ್ನತಚಂದ್ರಹಾಸನಂ
ಬಲಿಮದಮರ್ದಿಯಂ ಬಹಳವಿಭ ಮನಂ ಜಿತವೈನತೇಯನಂ ೯೯

ಜವಗನನಿಂದ್ರಾಯುಧನಂ
ದಿವಿಜಾಶ್ವಸ್ಪರ್ಧಿಯಂ ತುರಂಗಮವಿಭುವಂ
ಶಿವಸೇವಾಭೂಷಣನಂ
ರವಿಹಾಸನನತುಳಚೇರಮಪ್ರಿಯಹಯಮಂ ೧೦೦

ಪಡಿಸಿದನಂ. ॥ವಚನ॥ ಕೈಯಲ್ಲಿ ಚಾಟಿಯನ್ನು ಹಿಡಿದು ಆ ಚಾಟಿಸಮೇತವಾಗಿಯೇ ಹಣೆಯಮೇಲೆ ಕೈಯೆತ್ತಿಮುಗಿಯುತ್ತನಿಂತಿರುವ ಎತ್ತರವಾದ ಕುದುರೆಗಳ ಸವಾರರುಗಳನ್ನು ಮಂಗಳಮೂರ್ತಿಯಾದ ಬಸವಣ್ಣನು ತಪ್ಪದೆನೋಡುತ್ತ ೯೮. ಅಶ್ವಗಳಿಗೆಲ್ಲ ಈಶ್ವರನೆನಿಸುವ ಕುದುರೆಯನ್ನು, ಅನುಪಮವಾದ 'ಭದ್ರಾಂಗ' ಎಂಬ ಹೆಸರಿನ ಕುದುರೆಯನ್ನು, ಸೌಮ್ಯ, ಚಿತ್ರಾಂಗ, ಮಂಗಳಮಯ, ಅಜೇಯ ಎಂಬ ಹೆಸರುಗಳುಳ್ಳ ಕುದುರೆಗಳನ್ನು, ಯುದ್ಧಭೂಮಿಯಲ್ಲಿ ಶ್ರೀಯನ್ನು ಧರಿಸಿದುದೆನಿಸುವ ಕುದುರೆಯನ್ನು, ತತ್ತ್ವಜ್ಞ, ಮಂಜುಳಗಮನ; ಉದ್ದಂಡ, ಚಂಡವೇಗದಲ್ಲಿ ಸಮರ್ಥವೆನಿಸಿದುದೆಂಬ ಹೆಸರಿನಕುದುರೆಯನ್ನು, ಸೂರ್ಯನಕುದುರೆಗಳಿಗೆ ಸಮನೆನಿಸಿದುದನ್ನು, ಅಭಯ, ತುಂಗ, ಇತ್ಯಾದಿ ಹೆಸರುಗಳುಳ್ಳ ಕುದುರೆಗಳನ್ನು ತಪ್ಪದೆ ತ್ವರಿತವಾಗಿ ತನ್ನಿರಿ. ೯೯. ಮನೋಹರವಾದ ದೇಹವುಳ್ಳದ್ದೆನಿಸುವುದನ್ನು, ಸುಭಗ (ಸೌಂದರ) ಎಂಬ ಕುದುರೆಯನ್ನು, ಯುದ್ಧಭೂಮಿಯಲ್ಲಿ ವಿಹಾರಮಾಡುವ ಶೂರನೆಂದು ಹೆಸರುಳ್ಳ ಕುದುರೆಯನ್ನು, ಮನೋಹರವಾದ ಸತ್ವವುಳ್ಳ ಕುದುರೆಯನ್ನು, ವಿಪುಲವಿಕ್ರಮ, ಜಯಶೀಲ, ಮಹೋಜ್ವಲಹಯರಾಜ, ಕುಸುಮಬಾಣ, ಎತ್ತರವಾದ ಚಂದ್ರಹಾಸ, ಬಲಿಮದಮರ್ದಿ, ಅತಿವಿಭ್ರಮ, ಜಿತವೈನತೇಯ (ವೇಗದಲ್ಲಿ ಗರುಡನನ್ನು ಸೋಲಿಸಿದ)--ಇತ್ಯಾದಿ ಹೆಸರಿನ ಕುದುರೆಗಳನ್ನು ಭರದಿಂದತನ್ನಿರಿ. ೧೦೦. ಜವಗ (ಅತಿತೀವ್ರವಾಗಿ ಓಡುವ), ಇಂದ್ರಾಯುಧ, ದಿವಿಜಾಶ್ವ (ಉಚ್ಚೈಶ್ರವಸ್ಸು) ದೊಡನೆ ಸ್ಪರ್ಧೆಮಾಡುವಂತಹುದೆನಿಸುವ ಕುದುರೆಯನ್ನು, ಕುದುರೆಗಳಿಗೆಲ್ಲ ಪ್ರಭುವೆನಿಸಿದ ಕುದುರೆಯನ್ನು, ಶಿವನಸೇವೆಯಿಂದ ಭೂಷಣನೆನಿಸುವ ಕುದುರೆಯನ್ನು, ರವಿಹಾಸ, ಅಸಮಾನವಾದ ಚೇರಮಪ್ರಿಯ ಎಂಬ

ವ॥ ಎಂದಿ[1]ವು ಮೊದಲಾದವಂ ತರಿಸುತಸಮವಿಷಸುಧಾರಸಮನಾ ವಾಜಿರಾಜಿಗೋಜೆ ಯಿನೆಱೆದು ತಣಿಪಿ ವಿಶ್ವರಕ್ಷಣವಿಚಕ್ಷಣನಚ್ಚರಿ ವಿಹಾರಿ ವಿರಾಜಿಸುತ್ತುಮಿರ್ಪಿನಮಾಗಳ್

ಮೊಳಗಿದುದಭ್ರದೊಳ್ದಿವಿಜದುಂದುಭಿ ಧಾಂಧಳಮೆಂದು ಭೋರೆನು
ತ್ತಿಳಿದುದು ಪುಷ್ಪವೃಷ್ಟಿ ಸುರಕಿನ್ನರಸಿದ್ಧಕದಂಬಯುಕ್ತಮು
ಜ್ವಳಮತಿಯಿಂದೆ ಬಣ್ಣಿಸಿದುದಗ್ಗದ ರುದ್ರಗಣಂ ಕೃಪಾಸುಧಾ
ವಿಳಸಿತವರ್ಷಮಂ ಕಱೆದುದೇಳ್ಗೆಯ ಭಕ್ತಗಣಂ ವಿಳಾಸದಿಂ ೧೦೧

ಪೊಗಳ್ದಂ ಬಿಜ್ಜಳಭೂಪತಿ
ನೆಗಳ್ದತಿಶಯ ಕೌತುಕಕ್ಕೆ ಬಗೆಮುಚ್ಚಿ ಧರಿ
ತ್ರಿಗೆ ಮುದಮೊದವಿದುದು ಮನಂ
ಬುಗೆ ಕೊಂಡಾಡಿದುದು ವಿವಿಧ ವಿಬುಧವಿತಾನಂ ೧೦೨

ವ॥ ಮತ್ತಂ ಭಕ್ತಗಣಂ ನಲವೇರ್ಪ ಮುಚ್ಚಿ—

ಬಸವಕುಮಾರ ಭಕ್ತಿಸುಖಸಾರ ಭವಾಂಬುಧಿಕರ್ಣಧಾರ ಸ
ದ್ವಿಸರಲಲಾಮ ಸತ್ಯಗುಣಧಾಮ ಸಮುನ್ನತಪುಣ್ಯನಾಮ ಚಿ
ದ್ರಸಭರಿತಾಂಗ ಚಿತ್ತಜವಿಭಂಗ ಚಿರಂತನಶಿಷ್ಟಸಂಗ ತಾ
ಮಸವನದಾವ ತತ್ವಮಯಭಾವ ತತಾಖಿಲದೇವಸೇವಿತಾ ೧೦೩

ಹೆಸರುಳ್ಳ ಕುದುರೆಗಳನ್ನು (ಭರದಿಂದ ತನ್ನಿರಿ). ॥ವಚನ॥ ಹೀಗೆಂದೆನ್ನುವವುಗಳೇ ಮೊದಲಾದ ಕುದುರೆಗಳನ್ನು ಬರಮಾಡಿಸಿಕೊಂಡು ಅಸಮಾನವಾದ ವಿಷವೆಂಬ ಅಮೃತ ರಸವನ್ನು ಆ ಕುದುರೆಗಳ ಸಮೂಹಕ್ಕೆ ಕ್ರಮವಾಗಿ ಕುಡಿಸಿ ತೃಪ್ತಿಪಡಿಸಿ, ವಿಶ್ವವನ್ನು ರಕ್ಷಣೆಮಾಡುವುದರಲ್ಲಿ ಕುಶಲನೆನಿಸಿದವನೂ. ಆಶ್ಚರ್ಯಕರ ವಿಹಾರಿಯೆನಿಸಿದವನೂ ಆದ ಬಸವಣ್ಣನು ಶೋಭಿಸುತ್ತ ಇರುತ್ತಿರುವ ಸಮಯದಲ್ಲಿ ೧೦೧. ಆಕಾಶದಲ್ಲಿ 'ಧಾಂಧಳಂ ಎಂದು ದೇವದುಂದುಭಿಯು ಮೊಳಗಿತು. ಹೂಮಳೆಯು 'ಭೋರ್' ಎನ್ನುತ್ತ ಇಳಿಯಿತು. ಸುರರು, ಕಿನ್ನರರು, ಸಿದ್ಧರುಗಳ ಸಮೂಹವು ಪ್ರಕಾಶಮಾನವಾದ ತಮ್ಮ ಮನಃಪೂರ್ವಕ ವರ್ಣನೆ ಮಾಡಿತು. ರುದ್ರಗಣ, ಭಕ್ತಗಣಗಳು ಸಂಭ್ರಮದಿಂದ ತಮ್ಮ ಕೃಪೆಯೆಂಬ ಅಮೃತದ ಮನೋಹರ ಮಳೆಯನ್ನು ಸುರಿಸಿದರು. ೧೦೨. ಪ್ರಕಟಪಡಿಸಿದ (ಬಸವಣ್ಣನ) ಅತಿಶಯವಾದ ಆಶ್ಚರ್ಯಕರ ಘಟನೆಗೆ ಬಿಜ್ಜಳಭೂಪಾಲನು ಮನಸ್ಸುಬ್ಬಿ ಹೊಗಳಿದನು. ಭೂಮಂಡಲಕ್ಕೆ ಸಂತೋಷವುಂಟಾಯಿತು. ವಿವಿಧ ವಿದ್ವಾಂಸರ ಸಮೂಹವು ಮನಃಪೂರ್ವಕವಾಗಿ ಕೊಂಡಾಡಿದರು. ॥ವಚನ॥ ಮತ್ತು ಭಕ್ತರುಗಳ ಸಮೂಹವು ಅತಿಸಂತೋಷದಿಂದ ಮೆಚ್ಚಿ —೧೦೩–೧೦೬. ಬಸವಕುಮಾರನೇ, (ನೀನು) ಸಾರಭೂತವಾದ ಭಕ್ತಿಯ ಸುಖವುಳ್ಳವನು ; ಹುಟ್ಟುಸಾವುಗಳ ರೂಪವಾದ ಈ

1 ಬಿ(ಅ)

ಶರಣಜನಾನುಕೂಲ ಜಿತಕಾಲ ಜಗತ್ತ್ರಯಪಾಲ ಜಂಗಮ
ಸ್ಥಿರಭಜನಾತಿಲೋಲ ಶುಭಶೀಲ ಸುರಾಸುರಜಾಲವಂದ್ಯ ಭಾ
ಸುರಭಸಿತಾಂಕಫಾಲಸುವಿಶಾಲ ಸುಖದ್ರುಮಮೂಲ ಭಕ್ತಿಭಾ
ಸುರಸರಸೀಮರಾಲ ಘನಲೀಲ ಗಣಾಂಬುಜಬಾಲಭಾಸ್ಕರಾ ೧೦೪

ಭವಾಪಹಾರಿಭವ್ಯ ಭಕ್ತಭಾವ್ಯ ಭದ್ರಮೂರ್ತಿ ಸ
ದ್ಭವೋಪಯುಕ್ತಚಿತ್ತ ಮತ್ತವಾದಿಭಂಜನಾ ಲಸ
ಚ್ಛಿವೋಪರಮ್ಯಪಾದಪದ್ಮಭೃಂಗ ಚಿನ್ಮಯಾಂಗವ
ಚ್ಛಿವಾಪರಾವತಾರ ಧೀರಸಾರ ನುತ್ಯವೈಭವಾ ೧೦೫

ಶುಭಶೀಲ ವಿಶ್ವಪತಿ ಸ
ನ್ನಿಭ ನಿಗಮಾತೀತಮಹಿಮ ನಿನಗೆ ಪಲಂ ದು

ಸಂಸಾರವೆಂಬ ಸಾಗರವನ್ನು ದಾಟಿಸುವ ನಾವಿಕನು ; ಸತ್ವಗುಣಸಮೂಹಗಳುಳ್ಳವರಲ್ಲಿ ತಿಲಕಪ್ರಾಯನು ; ಸತ್ಯದಿಂದ ಕೂಡಿದ ಗುಣಗಳಿಗೆ ಮೂಲಸ್ಥಾನನಾದವನು ; ಔನ್ನತ್ಯ ದಿಂದ ಕೂಡಿದ ಪುಣ್ಯಪ್ರದಖ್ಯಾತಿಯುಳ್ಳವನು ; ಶಿವಜ್ಞಾನವೆಂಬ ರಸದಿಂದ ತುಂಬಿದ ಶರೀರವುಳ್ಳವನು ; ಮನ್ಮಥನನ್ನು ಭಂಗಗೊಳಿಸಿದವನು ; ಸತತವೂ ಶಿಷ್ಟರಾದ ಜನರು ಗಳ ಸಂಗವುಳ್ಳವನು ; ತಮೋಗುಣವೆಂಬವನಕ್ಕೆ ದಾವಾನಳ ಸ್ವರೂಪನು ; ಶಿವತತ್ತ್ವ ದಿಂದ ತುಂಬಿಹೋದ ಭಾವದಿಂದ ಕೂಡಿದವನು ; ಪ್ರಸಿದ್ಧರಾದ ಸಮಸ್ತದೇವತೆಗಳಿಂದ ಸೇವಿಸಲ್ಪಡುವವನು ; ಶರಣಜನರಿಗೆ ಅನುಕೂಲನಾದವನು ; ಯಮನನ್ನು ಗೆದ್ದವನು ಮೂರುಲೋಕಗಳ ಪಾಲಕನು ; ಜಂಗಮರುಗಳ ಸೇವೆಯನ್ನು ದೃಢಮನಸ್ಸಿನಿಂದ ಆಚರಿಸುವುದರಲ್ಲಿ ಆಸಕ್ತನಾದವನು : ಪವಿತ್ರವಾದ (ಮಂಗಳಕರವಾದ) ನಡತೆಯುಳ್ಳ ವನು ; ದೇವತೆಗಳು ರಾಕ್ಷಸರುಗಳಿಂದ ವಂದಿಸಿಕೊಳ್ಳಲ್ಪಡುವವನು ; ಪ್ರಕಾಶಮಾನ ವಾದ ಭಸ್ಮದ ಚಿಹ್ನೆಯಿಂದ ಶೋಭಿಸುವ ಹಣೆಯುಳ್ಳವನು ; ಶಿವಸುಖವೆಂಬ ವಿಶಾಲ ವಾದ ವೃಕ್ಷದ ಬೊಡ್ಡೆ (ಕಾಂಡ) ಯಂತಿರುವವನು ; ಪ್ರಸಿದ್ಧವಾದ ಶಿವಭಕ್ತಿಯೆಂಬ ಸರೋವರದಲ್ಲಿನ ಹಂಸಪಕ್ಷಿಎನ್ನಿಸಿರುವವನು ; ಘನವಾದ ಲೀಲೆಯಿಂದ ಕೂಡಿದವನು; ಶಿವಗಣಗಳೆಂಬ ಕಮಲಗಳಿಗೆ ಬಾಲಸೂರ್ಯನಂತಿರುವವನು ; ಸಂಸಾರ ಸಂಬಂಧವಾದ ದುಃಖವನ್ನುದೂರಮಾಡಿದವನು ; ಮಂಗಳಸ್ವರೂಪರಾದ ಶಿವಭಕ್ತಜನರುಗಳಿಂದ ಧ್ಯಾನಮಾಡುವುದಕ್ಕೆಯೋಗ್ಯವೆನಿಸಿದವನು ; ಮಂಗಳಕರ ಶರೀರಿಯು ; ಶ್ರೇಷ್ಠನಾದ ಶಿವನಿಂದ ತುಂಬಿಹೋದ ಮನಸ್ಸುಳ್ಳವನು (ಶಿವಭಾವಾಪನ್ನಮನಸ್ಸಿನವನು), ಮದ ದಿಂದ ಕೂಡಿದ ವಾದಿಜನಗಳನ್ನು ಭಂಗಗೊಳಿಸಿದವನು ; ಪ್ರಕಾಶಮಾನವಾದ ಶಿವನ ಮನೋಹರವಾದ ಪಾದಕಮಲಗಳಲ್ಲಿ ಭೃಂಗದೋಪಾದಿಯಲ್ಲಿರುವವನು ; ಜ್ಞಾನ ಮಯವಾದ ಶರೀರದಿಂದ ಕೂಡಿ ಶಿವನ ಬೇರೊಂದು ಅವತಾರವೋ ಎನಿಸಿದವನು ; ಶ್ರೇಷ್ಠರಾದ ವಿದ್ವಾಂಸರಿಂದ ಹೊಗಳಿಸಿಕೊಳ್ಳುವುದಕ್ಕೆ ಯೋಗ್ಯನಾಗಿರುವವನು ;

ರ್ಲಭಮಾವುದೊ ಬಗೆವೊಡೆ ಘನ
ವಿಭವೋನ್ನತ ವಿಶ್ವಭುವನದೊಳ್ವೃಷಭೇಂದ್ರಾ ೧೦೬

ಭವದೀಯ ಮಹಿಮೆಯುಂ ಕೇ
ಳ್ಶಿವನಱಿವಂ ಪ್ರಮಥರಱಿವರುಮೆಯಱಿವಳ್ಮೇ
ಣ್ಭುವನದೊಳಾರಱಿವರ್ಪೆಱ
ರವಿಕಳ ಶಿವಭಕ್ತಿಭಾಮಿನೀಮಣಿಮುಕುರಾ ೧೦೭

ಅಂಗಜವೈರಿ ನುಂಗಲಗಿದೊಯ್ಯನೆ ಭೀಕರಕಾಲಕೂಟಮಂ
ತುಂಗಗಳಸ್ಥಳಾಂತರದೊಳಾಂತನದಂ ಜವದಿಂ ಕೊರಲ್ವರಂ
ಪಿಂಗದೆ ಪೀರ್ದೆ ನಿನ್ನಯ ಮಹತ್ವಮಿದದ್ಭುತಮದ್ಭುತಂ ಕೃಪಾ
ಸಂಗತಚಿತ್ತ ನಿನ್ನಳವನಾರ್ತಿಳಿವರ್ಮಹಿಯೊಳ್ ವೃಷಾಧಿಪಾ ೧೦೮

ಅಮರ್ದೀಂಟಿಯುಮಮರರ್ಮರ
ಣಮನಾಂಪರ್ಗಡ ಜಗದ್ಭಯಂಕರ ಮೃತ್ಯೂ
ಪಮವಿಷಮನೀಂಟಿ ನಿತ್ಯ
ತ್ವಮನಾಳ್ದೆ ವೃಷೇಂದ್ರ ನಿನ್ನ ಬಗೆ ಚಿತ್ರತರಂ ೧೦೯

ವ॥ ಎಂದಖಿಳರುಂ ಕೀರ್ತಿಸುತ್ತುಮಿರ್ದರಾ ಪ್ರಸ್ತಾವದೊಳ್—

ಮಂಗಳಕರ ಶೀಲವುಳ್ಳವನು : ಸಮಸ್ತವಿಶ್ವಕ್ಕೆ ಪತಿಯೆನಿಸಿದ ಶಿವನಿಗೆ ಸಮಾನನಾದವನು ; ವೇದಾಗಮಗಳಿಗೂ ಸಿಲುಕದ ಮಹಿಮಾಶಾಲಿಯು—ಇಂಥ ಮಹಿಮಾಶಾಲಿಯಾದ ಬಸವೇಶ್ವರ, ನಿಜವಾಗಿಯೂ ಈ ಘನವಾದ ವೈಭವದಿಂದ ಉನ್ನತವಾದದ್ದೆನಿಸುವ ವಿಶ್ವವೆಂಬ ಮನೆಯಲ್ಲಿ ವಿಚಾರಮಾಡಿನೋಡಿದ್ದಾದರೆ, ಯಾವುದುತಾನೆ ನಿನಗೆ ಅಸಾಧ್ಯವಾದದ್ದುಂಟು? ೧೦೭. ದೃಢವಾದ ಶಿವಭಕ್ತಿಯೆಂಬ ಸ್ತ್ರೀ ಯಳು ತನ್ನ ಸ್ವರೂಪ ನೋಡಿಕೊಳ್ಳುವ ರತ್ನದಕನ್ನಡಿಯಂತಿರುವ ಬಸವೇಶ್ವರಾ, ನಿನ್ನ ಸಂಬಂಧವಾದ ಮಹಿಮೆಯನ್ನು ಶಿವನೊಬ್ಬ ಕೇಳಿಬಲ್ಲನು; ಪ್ರಮಥಗಣಗಳು ತಿಳಿಯುವರು; ಪಾರ್ವತೀ ದೇವಿಬಲ್ಲಳು : ಬೇರೆಯವರು ಲೋಕದಲ್ಲಿ ಯಾರು ಬಲ್ಲರು ? ೧೦೮. ವೃಷಾಧಿಪನೇ, ಭಯಂಕರ ಕಾಲಕೂಟ ವಿಷವನ್ನು ಪರಮೇಶ್ವರನು ನುಂಗಲಿಕ್ಕೆ ಹೆದರಿ ಶ್ರೇಷ್ಠವಾದ ಕಂಠ ಪ್ರದೇಶದಲ್ಲಿಯೇ ಅದನ್ನು ಧರಿಸಿಬಿಟ್ಟನು. ನೀನು ಶೀಘ್ರವಾಗಿ ಕಂಠಪೂರ್ತಿಯಾಗಿ ತಪ್ಪದೆ ಕುಡಿದುಬಿಟ್ಟೆ. ಈ ನಿನ್ನ ಮಹತ್ವವು ಅದ್ಭುತ ! ಅದ್ಭುತ !! ಕೃಪೆಯಿಂದ ಕೂಡಿದ ಮನಸ್ಸುಳ್ಳವನೇ ಈ ಲೋಕದಲ್ಲಿ ನಿನ್ನ ಮಹಿಮೆಯನ್ನು ಯಾರು ತಾನೇ ತಿಳಿಯಲು ಶಕ್ಯರಾದಾರು ? ೧೦೯. ಹೇ ಬಸವೇಶ್ವರನೇ, ನಿನ್ನ ಈ ರೀತಿಯು ವಿಚಿತ್ರವಾದದ್ದು ; (ಏಕೆಂದರೆ) ಅಮೃತವನ್ನು ಕುಡಿದೂಕೂಡ ದೇವತೆಗಳು ಮರಣವನ್ನು ಹೊಂದುವರಲ್ಲವೆ ; ನೀನು ಜಗತ್ತಿಗೆ ಭಯಂಕರ ಮೃತ್ಯುವಿಗೆ ಸಮಾನವಾದ ವಿಷವನ್ನು ಕುಡಿದು ನಿತ್ಯತ್ವ (ಶಾಶ್ವತತನ)ವನ್ನು ಹೊಂದಿದೆಯಲ್ಲವೇ ! ॥ವಚನ॥ ಹೀಗೆಂದು

ಭಯದಿಂದಂ ಚಂಡಪುತ್ರರ್ನಡುಗಿ ಸೆರೆದು ಬಾಯ್ವಿಟ್ಟು ತತ್ಪಾದಪದ್ಮ
ದ್ವಯಕತ್ಯಂತಾರ್ತಭಾವಂಬಡೆದೆಱಗಿ ಶರಣ್ಪೊಕ್ಕು ದುಷ್ಟಾತ್ಮರಂ ದು
ರ್ನಯರಂ ರಕ್ಷಿಪ್ಪುದೆಮ್ಮಂ ಬಸವವಿಭುವೆ ಕಾರುಣ್ಯದಿಂದೆಂದು ಕೊಂಡಾ
ಡಿ ಯಶೋವಾರಾಶಿಯಿಂದಂ ಪಡೆದಭಯಮನೊಲ್ದೆಯ್ದಿದರ್ಭಕ್ತಿಯುಕ್ತರ್ ೧೧೦

ಮದನರಿಪುಭಕ್ತಿಭಾವಾ
ಸ್ಪದಶರಣರ್ಗಲ್ಲದೀಶಶೇಷಂ ಸಲೆ ಸಂ
ಲ್ಲದು ಪೆಱರ್ಗೆಂದೀ ಬಗೆಯಂ
ಪದಪಿಂದಂ ತೋಱಿ ಬೀಱಿ ಮೆಱೆದಂ ಬಸವಂ ೧೧೧

ಪರವಾದಿಗಳಂ ಸೋಲಿಸಿ
ಪರಸಮಯಮನಿಂತು ಗೆಲಿಸಿ ಪಾಲಿಸಿದಂ ಮ
ದ್ವರಬಸವನೆಂದು ಶರಣ
ರ್ಪಿರಿದ.ಂ ಸಂಭ್ರಮದೆ ಕೀರ್ತಿಸುತ್ತೆಸೆದಿರ್ದರ್ ೧೧೨

ಅರಸಂ ಪೌರಪ್ರಧಾನಾದ್ಯರಿನರಿದೆನುತುಂ ಸಾಡೆ ಕೊಂಡಾಡಿ ದಿವ್ಯಾಂ
ಬರಭೂಷಾಶ್ರೇಣಿಯಿಂ ಪೂಜಿಸಿ ಮುಗಿದು ಕರಾಂಭೋಜಮಂ ತನ್ನ ಮಾದ್ಯ

ಸಮಸ್ತರೂ ಬಸವೇಶ್ವರನನ್ನು ಹೊಗಳುತ್ತಿದ್ದರು. ಆ ಸಂದರ್ಭದಲ್ಲಿ—೧೧೦. ಚಂಡಪುತ್ರರುಗಳು ಭಯದಿಂದ ನಡುಗುತ್ತ ತೆರೆದಬಾಯುಳ್ಳವರಾಗಿ, (ಏನನ್ನೂ ಮಾತನಾಡಲರಿಯದವರಾಗಿ) ಆ ಬಸವೇಶ್ವರನ ಎರಡೂ ಪಾದಕಮಲಗಳಿಗೆ ಅತ್ಯಂತ ದೈನ್ಯ ಭಾವದಿಂದ ನಮಸ್ಕಾರಮಾಡಿ ಶರಣುಹೊಕ್ಕರು, ದುಷ್ಟಹೃದಯವುಳ್ಳವರೂ, ದುಷ್ಟನೀತಿಯುಳ್ಳವರೂ, ಆದ ನಮ್ಮನ್ನು ಹೇ ಬಸವಪ್ರಭುವೇ, ಕಾರುಣ್ಯದಿಂದ ಸಂರಕ್ಷಿಸಬೇಕು. ಎಂದು ಕೊಂಡಾಡಿದರು. ಕೀರ್ತಿಗೆ ಸಮುದ್ರಪ್ರಾಯನಾದ ಬಸವೇಶ್ವರನಿಂದ ಭಕ್ತಿಭಾವದಿಂದ ಕೂಡಿದ ಆ ಚಂಡಪುತ್ರರುಗಳು ಅಭಯವನ್ನು ಪಡೆದು ಸಂತೋಷಗೊಂಡು ಹೊರಟುಹೋದರು. ೧೧೧. ಈಶ್ವರನ ಶೇಷ ಪ್ರಸಾದವು (ಮಿಕ್ಕ ಪ್ರಸಾದವು) ಆ ಮದನ ವೈರಿಯಾದ ಪರಶಿವನಲ್ಲಿ ಭಕ್ತಿಭಾವವನ್ನಿಟ್ಟಿರುವ ಶರಣಜನರಿಗಲ್ಲದೆ ಬೇರೆಯವರಿಗೆ ಸಲ್ಲತಕ್ಕದ್ದಲ್ಲವೆಂಬ ಈ ರೀತಿಯನ್ನು ಪ್ರಸಿದ್ಧವಾಗಿ ತೋರಿಸಿ, ಪ್ರಚುರಪಡಿಸಿ ಬಸವಣ್ಣನು ಶೋಭಿಸುತ್ತಿದ್ದನು. ೧೧೨. ಪರ ಸಮಯದ ತಾರ್ಕಿಕರನ್ನು ಸೋಲಿಸಿ ಈ ರೀತಿ ಪರ ಸಮಯವನ್ನು ಗೆಲ್ಲುವಂತೆಮಾಡಿ, ನಮಗೆಲ್ಲ ವರಪ್ರಸಾದರೂಪನಾದ ಬಸವಣ್ಣನು ರಕ್ಷಿಸಿದನು ಎಂದು ಶರಣ ಜನರು ಅತಿಶಯ ಸಂಭ್ರಮದಿಂದ ಹೊಗಳುತ್ತ ಶೋಭಿಸುತ್ತಿದ್ದರು. ೧೧೩. ಅರಸನಾದ ಬಿಜ್ಜಳನು ಪೌರಜನರೂ, ಪ್ರಧಾನಾಧಿಕಾರಿಗಳೂ ಸಮೇತನಾಗಿ (ಬಸವಣ್ಣನ ಈ ಮಹಿಮೆಯು) ಆಶ್ಚರ್ಯಕರವಾದದ್ದೆಂದು ಅತಿಶಯವಾಗಿ ಕೊಂಡಾಡಿದರು. ದಿವ್ಯವಾದ ವಸ್ತ್ರ, ಆಭರಣ ಸಮೂಹಗಳಿಂದ ಆ ಬಸವಣ್ಣನನ್ನು ಪೂಜಿಸಿ, ಕರಕಮಲಗಳನ್ನು ಮುಗಿದು, ತನ್ನ ಮದವಿಶಿಷ್ಟವಾದ (ಪಟ್ಟದ) ಆನೆಯನ್ನು ಬರ

ತ್ಕರಿಯಂ ಕೆಯ್ಗೆಯ್ದು ತಂದೇಱಿಸಿ ಕಳುಪೆ ಮಹಾಸಂಭ್ರಮಂಬೆತ್ತು ಬಂದೀ
ಶ್ವರಭಕ್ತವ್ರಾತಮಂ ಮನ್ನಿಸುತೆಸೆದನುಮಾಕಾಂತಹೃತ್ಪದ್ಮಸದ್ಮಂ ೧೧೩

ಬಸವಂ ಬಿಸವಂದವಿದೆನೆ
ಬಿಸವಂ ಸುಧೆಗೆಯ್ದು ಸವಿದ ಕಥೆಯನಿದಂ ಸಂ
ತಸವಲರೆ ಕೇಳ್ದ ನರರೀ
ರಸೆಯೊಳ್ ಘನಭಕ್ತಿ ಮುಕ್ತಿ ಸುಖಮಂ ಪಡೆವರ್ ೧೧೪

ಮಂಗಳಮಯಾಂಗಿ ಸುಭುಜಂಗಪತಿವೇಣೀ
ಭೃಂಗಕಚಭಾಸುರೆ ಸದಂಗಶುಕಪಾ[1]ಣೀ
ತುಂಗಕುಚೆ ಭಾಜಿತಪತಂಗೆ ಮೃದುವಾಣೀ
ಸಾಂಗಶಿವಭಕ್ತಿಸುಪಥಂಗುಡು ಮೃಡಾನೀ ೧೧೫

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ವಿಷವಿತರಣಕಥನಂ
ಚತ್ವಾರಿಂಶಾಶ್ವಾಸಂ ಸಮಾಪ್ತಂ
ಅಂತು ಆಶ್ವಾಸ ೪೦ಕ್ಕೆ ಪದಗಣನೆ ೩೩೫೧ಕ್ಕೆ ಮಂಗಳಮಹಾ ಶ್ರೀ॥

ಮಾಡಿಕೊಂಡು ಅದರ ಮೇಲೆ ಹತ್ತಿಸಿ ಮನೆಗೆ ಕಳುಹಿಸಿಕೊಟ್ಟನು. (ಬಸವಣ್ಣನು ಆ ಆನೆಯನ್ನೇರಿ) ಅತ್ಯಂತ ಸಂಭ್ರಮದಿಂದ ಬಂದು ಈಶ್ವರ ಭಕ್ತ ಸಮೂಹವನ್ನು ಮನ್ನಣೆಗೊಳಿಸಿ, ಆ ಉಮಾಪತಿಯಾದ ಪರಶಿವನ ಹೃದಯಕಮಲವನ್ನೇ ಮನೆಯಾಗುಳ್ಳ ಬಸವಣ್ಣನು (ತನ್ನಮಹಾಮನೆಯಲ್ಲಿ) ಶೋಭಿಸುತ್ತಿದ್ದನು. ೧೧೪. ಬಸವಣ್ಣನು ವಿಷವನ್ನು ಇದು ಆಶ್ಚರ್ಯ (ಕೌತುಕ) ವೆನ್ನುವಂತಹರೀತಿಯಲ್ಲಿ ಅಮೃತವನ್ನಾಗಿಮಾಡಿ ಊಟಮಾಡಿದ ಈ ಕಥೆಯನ್ನು ಸಂತೋಷವು ಅರಳುವಹಾಗೆ ಕೇಳುವಂತಹ ನರರು ಈ ಲೋಕದಲ್ಲಿ ಶ್ರೇಷ್ಠವಾಗಿ ಸೌಖ್ಯವನ್ನು, ಮುಕ್ತಿಯನ್ನು, ಪಡೆಯುವರು. ೧೧೫. ಮಂಗಳಮಯವಾದ ಶರೀರವುಳ್ಳವಳೇ, ಶ್ರೇಷ್ಠ ಹಾವುಗಳ ಒಡೆಯನಾದ ಆದಿಶೇಷನಂತೆ ಜಡೆಯುಳ್ಳವಳೇ, ಭೃಂಗಗಳಂತಿರುವ ತಲೆಗೂದಲುಗಳಿಂದ ಪ್ರಕಾಶಿಸುವವಳೇ, ಚಂದವಾದ ಶರೀರವುಳ್ಳ ಗಿಳಿಯನ್ನು ಹಸ್ತದಲ್ಲಿ ಹಿಡಿದಿರುವವಳೇ, ಎತ್ತರವಾದ (ದಪ್ಪವಾದ) ಸ್ತನಗಳುಳ್ಳವಳೇ, ದೇಹಕಾಂತಿಯಿಂದ ಸೂರ್ಯನನ್ನು ಜಯಿಸಿದವಳೇ, ಮೃದುವಾದ ಮಾತುಳ್ಳವಳೇ, ಹೇಪಾರ್ವತೀದೇವಿಯೇ (ನನಗೆ) ಯಥಾಸಾಂಗವಾಗಿ ಶಿವಭಕ್ತಿಯ ಶ್ರೇಷ್ಠಮಾರ್ಗವನ್ನು ದಯಪಾಲಿಸು.

ನಾಲ್ವತ್ತನೆಯ ಆಶ್ವಾಸವು ಸಮಾಪ್ತವಾಯಿತು.

---

1 ವಾ(ಮು)

# ಏಕಚತ್ವಾರಿಂಶಾಶ್ವಾಸಂ

## [ಜಗದೇವನ ಕಥೆ]

ಶ್ರೀಮದಜಭಾಮಿನೀನುತ
ಹೈಮವತೀಮಧುರಗಾನನವರಸಲೋಲಂ
ಸೋಮಕಳಾಧರನತುಳ ಕ
ಳಾಮಂದಿರನೀಗೆ ಸೌಖ್ಯಮಂ ಶಿವಲಿಂಗಂ ೧

ವ॥ ಮತ್ತಮೊಂದು ಶುಭವಾಸರದೊಳ್—

ಜಗದೇವನೆಂಬ ವಿಪ್ರಂ
ನಿಗಮಾಗಮವೇದಿ ಶಿವಪದಾಂಬುಜಭೃಂಗಂ
ಸುಗುಣನಿಧಿ ತನ್ನ ಗೃಹದೊ
ಳ್ಮಿಗೆ ಭುಂಜಿಸಲೆಂದು ಬಸವನಂ ಪ್ರಾರ್ಥಿಸಿದಂ ೨

ವ॥ ಅಂತವಂ ಭಕ್ತಿಯಿಂ ಪ್ರಾರ್ಥಿಸೆ ಬಸವರಾಜಂ ನೋಡಿ

ಜಗದೇವ ನೀಂ ದ್ವಿಜಂ ಗಡ
ಮಿಗೆ ಮಜ್ಜಂಗಮಳದಂಬಸಮ್ಮರ್ದಮನೆಂ
ತಗಲದೆ ಪೈರಿಪೆಯೆನೆ ಕೆ
ಯ್ಮುಗಿದೆಂದಂ ನಿಮ್ಮ ಚಿತ್ತಮೊಲ್ವಂತೀಗಳ್ ೩

### ಜಗದೇವನ ಕಥೆ

೧. ಮಂಗಳಕರಳಾದ ಬ್ರಹ್ಮನ ಸತಿ ಸರಸ್ವತಿಯಿಂದ ಹೊಗಳಿಸಿಕೊಳ್ಳುವವಳಾದ ಹಿಮವಂತನ ಪುತ್ರಿ ಪಾರ್ವತೀದೇವಿಯ ಮಾಧುರ್ಯಯುಕ್ತ ನೂತನ ಸಂಗೀತ ರಸದಲ್ಲಿ ಆಸಕ್ತಿಯುಳ್ಳವನೂ, ಚಂದ್ರನ ಒಂದು ಕಳೆಯನ್ನು ಧರಿಸಿದವನೂ, ಸಮಸ್ತ ವಿದ್ಯೆಗಳಿಗೆ ಮಂದಿರ (ಆಶ್ರಯ) ನಾದವನೂ ಎನಿಸಿದ ಶಿವಲಿಂಗನು ನಮಗೆ ಸೌಖ್ಯವನ್ನು ಕೊಡಲಿ. ವ॥ ಮತ್ತೊಂದು ಶುಭ ದಿವಸದಲ್ಲಿ ೨. ವೇದಾಗಮ ವಿಶಾರದನೂ, ಶಿವನ ಪಾದ ಕಮಲಗಳಲ್ಲಿ ಭೃಂಗದೋಪಾದಿಯಲ್ಲಿರುವವನೂ, ಸದ್ಗುಣಗಳಿಗೆ ನಿಧಿಯೂ ಎನಿಸಿದ 'ಜಗದೇವ' ಎಂಬ ಹೆಸರಿನ ಬ್ರಾಹ್ಮಣನು ತನ್ನ ಮನೆಯಲ್ಲಿ ಊಟಮಾಡಬೇಕೆಂದು ಬಸವಣ್ಣನನ್ನು ಪ್ರಾರ್ಥಿಸಿದನು. ವ॥ ಆ ರೀತಿ ಅವನು ಭಕ್ತಿಯಿಂದ ಪ್ರಾರ್ಥಿಸಲಾಗಿ ಬಸವೇಶ್ವರನು ನೋಡಿ,—೩. 'ಜಗದೇವನೇ, ನೀನು ದ್ವಿಜನಲ್ಲವೇ ! ಹೆಚ್ಚಾಗಿರುವ ನನ್ನ ಜಂಗಮ ಸಮುದಾಯದ ತೊಂದರೆಯನ್ನು ಹೇಗೆ ಸಂಬಾಳಿಸುತ್ತೀಯೆ ?' ಎನ್ನಲು ಆ ಜಗದೇವನು ಕೈಮುಗಿದು 'ನಿಮ್ಮ ಚಿತ್ತವು ಸಂತೋಷಗೊಳ್ಳುವ ಹಾಗೆ ಈಗಲೇ'—

ವ॥ ಎಲ್ಲಮುಂ ಸಾಂಗಮಾದಪುದೀಗಳೆನ್ನ ಮೇಲಣ ದಯೆಯಿಂ ಬಿಜಯಂಗೆಯ್ವುದೆಂದು ಭೂತಿದಾನಪುರಸ್ಸರಂ ಬಿನ್ನಪಂಗೆಯ್ದು ನಿಜಗೃಹಕ್ಕೇಳ್ತಂದು ಸಂಭ್ರಮಂ ಮಿಗೆ ಸಕಲಪಾಕಸಾಮಗ್ರಿಯಂ ನೆರಪಿ ಪಂಚಪ್ರಕಾರದಾಹಾರಂಗಳನಳುಂಬವೊಡರ್ಚೆ ಬಸವಾಗಮನದಿಂ ಮುನ್ನಮೆ—

ಕರೆದಾತ್ಮಮಂದಿರಕೆ ಪಾ
ರ್ವರನಾದರಿಸುತ್ತೆ ಪೂಜೆಗೆಯ್ದಂ ಜಗದೇ
ವರಸಂ ತದ್ವಾರ್ತೆಯಂನನು
ಚರರಿಂದಂ ಕೇಳ್ದು ಬಸವರಾಜಂ ಮುಳಿದಂ ೪

ವ॥ ಅಂತು ಮುಳಿದಿವಂ ದುರಾಚಾರಮಂ ನೆಗಳ್ದನೆಂದೇಳಿದಂಗೆಯ್ದಿರ್ಪುದುಮಾಗಳ್—

ಕಳುಪಿ ಧರಾಮರರನವಂ
ಬಳಿಕೇಳ್ತಂದಂ ವೃಷೇಂದ್ರನಂ ಕರೆಯಲ್ಕೆಂ
ದೆಳಸಿ ತೆರೆಗೆಯ್ಸಿ ಬಸವಂ
ಖಳವೀಕ್ಷಣಕಲಸುತದಱ ಮಱೆಯೊಳಗಿರ್ದಂ ೫

ವ॥ ಅಂತಿರ್ದು ತನ್ನಂ ಕರೆಯಲೆಳಸಿರ್ದ ಜಗದೇವಂಗಿಂತೆಂದಂ—

ಭವಿಸಂಗಪಂಕಜಲಮ
ಗ್ನ ವಿಚಾರಿಪೊಡೆಲವೊ ನಿನಗೆ ಶಿವಭಕ್ತಿಸುಧಾ

ವ॥ 'ಎಲ್ಲವೂ ಸಾಂಗವಾಗಿ ನನ್ನ ಮೇಲಿನ ದಯೆಯಿಂದ ನಡೆಯುವುದು. ದಯಮಾಡಿಸಬೇಕು.' ಎಂದು ವಿಭೂತಿಯನ್ನು ಕೊಡುವುದರ ಮೂಲಕ ಬಿನ್ನಹ ಮಾಡಿಕೊಂಡು, ತನ್ನ ಮನೆಗೆ ಹೊರಟು ಬಂದು, ವಿಶೇಷ ಸಂಭ್ರಮದಿಂದ ಎಲ್ಲ ಅಡಿಗೆಯ ಸಾಮಗ್ರಿಗಳನ್ನೂ ಜೋಡಿಸಿ, ಭಕ್ಷ್ಯ, ಭೋಜ್ಯ, ಲೇಹ, ಚೋಷ್ಯ, ಖಾದ್ಯಾದಿ ಐದು ಪ್ರಕಾರದ ಆಹಾರ ಪದಾರ್ಥಗಳನ್ನು ಯಥೇಚ್ಛವಾಗಿ ಮಾಡಿಸಿ, ಬಸವಣ್ಣನ ಬರುವಿಕೆಗೆ ಮೊದಲೇ—೪. ಜಗದೇವನು ತನ್ನ ಮಂದಿರಕ್ಕೆ ಬ್ರಾಹ್ಮಣರುಗಳನ್ನು ಕರೆದು ಆದರಿಸಿ ಪೂಜೆ ಮಾಡಿದನು. ಈ ಸುದ್ದಿಯನ್ನು ಸೇವಕರುಗಳಿಂದ ಬಸವೇಶ್ವರನು ಕೇಳಿ ಕೋಪಗೊಂಡನು. ವ॥ ಹಾಗೆ ಕೋಪಗೊಂಡು, ಈ ಜಗದೇವನು ದುರಾಚಾರವನ್ನು ಮಾಡಿದನೆಂದು ತಿರಸ್ಕಾರ ಮಾಡಿ ಇರುತ್ತಿರಲಾಗಿ, ಆಗ ೫. ಜಗದೇವನು (ತನ್ನ ಮನೆಗೆ ಬಂದಿದ್ದ) ಬ್ರಾಹ್ಮಣರುಗಳನ್ನು ಕಳುಹಿಸಿಕೊಟ್ಟು, ಬಸವರಾಜನನ್ನು ಕರೆಯುವುದಕ್ಕೆಂದು ಅಪೇಕ್ಷಿಸಿ ಬಂದನು. ಬಸವಣ್ಣನು ದುಷ್ಟನಾದ ಈ ಜಗದೇವನನ್ನು ನೋಡುವುದಕ್ಕೆ ಇಚ್ಛೆಪಡದೆ ತೆರೆಯನ್ನು ಕಟ್ಟಿಸಿ, ಅದರ ಮರೆಯಲ್ಲಿದ್ದನು. ವ॥ ಹಾಗೆ ತೆರೆಯ ಮರೆಯಲ್ಲಿದ್ದು, ತನ್ನನ್ನು ಕರೆಯಲಿಕ್ಕೆ ಬಂದ ಜಗದೇವನಿಗೆ ಹೀಗೆ ಹೇಳಿದನು. ೬. 'ಎಲವೋ ಜಗದೇವನೇ, ಭವಿಗಳ ಸಂಸರ್ಗವೆಂಬ ಕೆಸರು ನೀರಿ (ರಾಡಿನೀರಿ) ನಲ್ಲಿ ಮುಳುಗಿರುವ ನಿನಗೆ ವಿಚಾರಮಾಡಿ ನೋಡಿದರೆ, ಶಿವಭಕ್ತಿಯೆಂಬ

ರ್ಣವಕೇಳಿಯೊಪ್ಪುಗುಮೆ ನಿ
ನ್ನವೊಲಾವಂ ಗಾಂಪನೆಳಸಿ ಬರ್ಪುದೆ ಮರುಳೇ ೬

ಕುಲದೈವಮಿರೆ ಮಹೇಶ್ವರ
ನೆಲೆ ನೀಂ ಬಹುಮಾರ್ಗದಲ್ಲಿ ನಡೆದಪೆ ಗಿರಿಶೋ
ಜ್ವಲಭಕ್ತಿಯೆತ್ತ ನಿನಗೀ
ಮಲಿನಾತ್ಮರ ಸಂಗಮೆತ್ತ ಪೇಳ್ಜಗದೇವಾ ೭

ಹರಭಕ್ತಪಾದಸೇವಾ
ಪರ ಕರಯುಗಳಕ್ಕಿದುಚಿತಮೋ ಹರಭಕ್ತೋ
ತ್ಕರದೂಷಣಪರವಿಪ್ರರ
ಚರಣಾರ್ಚನಕರ್ಮಮಧಿಕದುರ್ಮತಿನಿಳಯಾ ೮

ಶರಣಜನಚರಣಜಲಮಂ
ಶಿರದೊಳ್ತಳೆದೆಯ್ದೆ ಧನ್ಯನೆನಿಸಿದ ನಿನಗೀ
ದುರಿತಕುಲಭರಿತಭೂಸುರ
ಚರಣಜಲಂದಾಳ್ವುದುಚಿತಮೋ ವಸುಮತಿಯೊಳ್ ೯

ವಿಳಸಿತ ಶಿವಪ್ರಸಾದಾ
ಮಳತನುವೆನಿಸಿರ್ದ ಲಿಂಗಭಕ್ತಂಗೆ ಶಿವೋ
ಜ್ವಳಭಕ್ತಿರಹಿತಭೂಸುರ
ಕುಳಪಙ್ಕ್ತಿಯೊಳುಣ್ಬ ಕಜ್ಜಮೆಂತಳವಡುಗುಂ ೧೦

ಅಮೃತ ಸಮುದ್ರದ (ಜಲ) ಕೇಳಿಯು ಯೋಗ್ಯವಾದೀತೇ ? ನಿನ್ನಂತಹ ಮೂರ್ಖನು ಯಾವನಿದ್ದಾನೆ ? (ನಮ್ಮನ್ನು) ಅಪೇಕ್ಷಿಸಿ (ನೀನು) ಬರಬಹುದೇ ?' ೭. 'ಎಲೈ ಜಗದೇವನೇ, ಪರಮೇಶ್ವರನೇ ನಿನಗೆ ಕುಲ ಕುಲದೈವವಾಗಿರುವಾಗ, ನೀನು ಅನೇಕ ಬಗೆಯ ಮಾರ್ಗಗಳಲ್ಲಿ ಹೋಗುತ್ತಿದ್ದೀಯೆ. ನಿನಗೆ ಪರಮೇಶ್ವರನ ಪ್ರಕಾಶಮಯವಾದ ಮಾರ್ಗವೆತ್ತ ? ಈ ಮಲಿನಾತ್ಮರಾದವರ ಸಂಗವೆತ್ತ ? ಹೇಳು.' ೮. 'ವಿಶೇಷವಾದ ದುರ್ಬುದ್ಧಿಗೆ ಮನೆಯಾಗಿರುವ ಎಲೈ ಜಗದೇವನೇ, ಶಿವಭಕ್ತರ ಚರಣಗಳ ಸೇವೆಯಲ್ಲಿ ಆಸಕ್ತವಾದ ಎರಡೂ ಕೈಗಳಿಗೆ, ಹರಭಕ್ತರನ್ನು ದೂಷಣೆಮಾಡುವುದರಲ್ಲಾಸಕ್ತರಾದ ವಿಪ್ರರ ಪಾದಾರ್ಚನಾ ಕರ್ಮವು ಉಚಿತವಾದುದೇ ?' ೯. 'ಈ ಭೂಮಂಡಲದಲ್ಲಿ, ಶರಣಜನರ ಪಾದಜಲವನ್ನು ಶಿರಸ್ಸಿನಲ್ಲಿ ಧರಿಸಿ, ವಿಶೇಷವಾಗಿ ಧನ್ಯತೆಯನ್ನು ಪಡೆದ ನಿನಗೆ, ಈ ಪಾಪಸಮೂಹದಿಂದ ಕೂಡಿದ ಭೂಸುರರ ಪಾದ ಜಲವನ್ನು ಧರಿಸುವುದು ಉಚಿತವಾದದ್ದೇ ?' ೧೦. ನಿರ್ಮಲವಾದ ಶಿವಪ್ರಸಾದವನ್ನು ಸೇವಿಸುವುದರ ಮೂಲಕ ಪವಿತ್ರ ತನುವಾದುದೆನಿಸಿದ ಶಿವಲಿಂಗಭಕ್ತರಿಗೆ, ಶಿವನ ಪ್ರಕಾಶಮಯ ಭಕ್ತಿಯಿಲ್ಲದ ಭೂಸುರರುಗಳ ಸಹಪಙ್ಕ್ತಿಯಲ್ಲಿ ಕುಳಿತು ಊಟಮಾಡುವ

ನಡೆ ನುಡಿ ನೋಟಂ ನಗೆ ಸಂ
ಗಡಿಗತನಂ ಪಙ್ತಿಭೋಜನವುಮೆಂಬಿನಿತಂ
ಜಡಭವಿಗಳೊಡನೆ ನೆಗಳ್ವನೆ
ಮೃಡಭಕ್ತಂ ಭವವಿದೂರನಮಳಚರಿತ್ರಂ ೧೧

ಶೂಲಿಪದಭಕ್ತನನುಪಮ
ಶೀಲವ್ರತಯುಕ್ತನತುಳ ಚಿತ್ರಚರಿತ್ರಂ
ಭೂಲೋಕದೊಳೊಪ್ಪುವನೊಸೆ
ದೇಲೇಶಕ್ಷೇತ್ರಪಾಲನೆಂಬ ಮಹಾತ್ಮಂ ೧೨

ಅವನ ಚರಿತ್ರಮಂ ಪೊಗಳ್ವೊಡಾರ್ಗಳವಪ್ಪುದೊ ನೈಜಪುತ್ರಮಿ
ತ್ರವನಿತೆಯರ್ಕಳಂ ಸಕಳಗೋತ್ರಜಬಾಂಧವಚೇಟಿಯರ್ಕಳಂ
ಭವನದೊಳಿರ್ಪ ಸರ್ವರುಮನೊಪ್ಪಿರೆ ಲಿಂಗಸಮನ್ವಿತಾಂಗರಂ
ಜವದೆ ನೆಗಳ್ಚಿ ರಂಜಿಸುತೆ ಲಿಂಗವಿಹೀನರೊಳಾಡನೊರ್ಮೆಯುಂ ೧೩

ನಡೆನೋಡಂ ನುಡಿಯಾಡನೀಯನವರಿಂದೇನೊಂದನೆಂತಾದೊಡಂ
ಪಿಡಿಯಂ ಸೋಂಕನವಂದಿರಾಳ್ವ ನೆಲನಂ ತಾಂ ಮೆಟ್ಟನಾ ದುಷ್ಟರೊ
ಳ್ಕೊಡರಂ ಸಾಲಮನೊಲ್ಲನಂತವರ ಕೆಯ್ಯಿಂದಂ ಕುಡಂ ಕೂರ್ಮೆಯಿಂ
ಕಡಮಂ ತತ್ಕಥೆಗೇಳನಿಂತೆಸೆವುತಿರ್ದಂ ಭಕ್ತಿರತ್ನಾಕರಂ ೧೪

ಕಾರ್ಯವು ಹೇಗೆ ಆಳವಟ್ಟೀತು ? ೧೧. ಭವಿಗಳಿಂದ ದೂರನಾದವನೂ, ಪರಿಶುದ್ಧ ಚರಿತ್ರೆಯುಳ್ಳವನೂ ಆದ ಶಿವಭಕ್ತನು, ನಡೆವಳಿಕೆ, ನುಡಿವಳಿಕೆ, ನೋಡುವಿಕೆ, ನಗುವಿಕೆ, ಕೂಡಿ ವ್ಯವಹಾರ ಮಾಡುವಿಕೆ, ಒಂದೇ ಪಙ್ತಿಯಲ್ಲಿ ಕುಳಿತು ಭೋಜನ ಮಾಡುವಿಕೆಯೇ ಮೊದಲಾದ ಕ್ರಿಯೆಗಳನ್ನು ಅಜ್ಞಾನಿಗಳಾದ ಭವಿಗಳೊಡನೆ ಮಾಡುತ್ತಾನೆಯೇ ? ೧೨. ಪರಮೇಶ್ವರನ ಪಾದಭಕ್ತನೂ, ಅನುಪಮವಾದ ಶೀಲವುಳ್ಳವನೂ, ಶಿವವ್ರತಯುಕ್ತನೂ, ಅಸಮಾನವಾದ ವಿಚಿತ್ರ ಚರಿತ್ರೆಯುಳ್ಳವನೂ ಆದ 'ಏಲೇಶ್ವರ ಕ್ಷೇತ್ರಪಾಲ' ನಾದ ಕೇತಯ್ಯನೆಂಬ ಮಹಾತ್ಮನು ಈ ಭೂಮಂಡಲವಲ್ಲಿ ಶೋಭಿಸುತ್ತಿರುವನು. ೧೩. ಈ ಮಹಾತ್ಮನ ಚರಿತ್ರೆಯನ್ನು ಹೊಗಳುವುದಕ್ಕೆ ಯಾರಿಗೆ ಸಾಮರ್ಥ್ಯವುಂಟೋ ! ತನ್ನ ಪುತ್ರರು, ಮಿತ್ರರು, ಹೆಂಡತಿ, ತನ್ನ ವಂಶದಲ್ಲಿ ಹುಟ್ಟಿದ ಸಮಸ್ತರು, ದಾಸೀ ಜನಗಳನ್ನು, ಮನೆಯಲ್ಲಿದ್ದ ಇನ್ನಿತರ ಸಮಸ್ತ ಜನಗಳನ್ನು ಒಪ್ಪುವ ಹಾಗೆ ಶೀಘ್ರವಾಗಿ ಲಿಂಗದಿಂದ ಕೂಡಿದ ದೇಹವುಳ್ಳವರನ್ನಾಗಿ ಮಾಡಿ ಶೋಭಿಸುತ್ತಿದ್ದನು. ಒಮ್ಮೆಯೂ ಲಿಂಗವಿಹೀನರಾದವರೊಡನೆ ವ್ಯವಹರಿಸುತ್ತಲಿರಲಿಲ್ಲ. ೧೪. ಶಿವಭಕ್ತಿಗೆ ಸಮುದ್ರಪ್ರಾಯನಾದ ಅವನು (ಲಿಂಗ ವಿಹೀನರನ್ನು) ದಿಟ್ಟಿಸಿ ನೋಡನು; ಮಾತನಾಡನು; ಏನನ್ನೂ ಕೊಡನು ; ಅವರಿಂದ ಏನಾದರೂ ಒಂದನ್ನು ಹೇಗಾದರೂ ಸ್ವೀಕರಿಸನು; ಮುಟ್ಟನು ; ಅವರು ಆಳುವ ನೆಲವನ್ನೂ ಮೆಟ್ಟನು ; ಆ ದುಷ್ಟರೊಡನೆ ಸಂಬಂಧವನ್ನೂ, ಸಾಲವನ್ನೂ ಒಲ್ಲನು ; ಅದರಂತೆಯೇ ಪ್ರೀತಿಯಿಂದ ಅವರಿಗೆ

ವ॥ ಆಗಳಾ ಮಹಾತ್ಮನಿರವಂ ಕಂಡು ಸೈರಿಸಲಾಱದಸೂಯೆಯಿಂ ದುಷ್ಟಮತಸ್ಥರೆಲ್ಲರೊಂದುಗೂಡಿ—

ಪಿಡಿಯುಂ ಸಾಲಮನೆಂದುಂ
ಕಡಂಗುಡಂ ಭವಿಗಳೆಂದು ತೆಗಳುತ್ತೆಮ್ಮೊ
ಳ್ನುಡಿಯಂ ಲೆಕ್ಕಿಸನೀತನ
ಪೊಡರ್ಪು ಪೊಸತೆಂದಸೂಯೆ ಮಿಗೆ ಕುಟಿಲಾತ್ಮರ್ ೧೫

ಇವನ ಪೊಸ ಧಾನ್ಯಬೀಜದ
ಭವನಮನುರುಪುತ್ತೆ ಬಳಿಯೊಳೀತನ ಚಲದಂ
ದವನಱಿವೆಮೆಂದು ಬಗೆದಾ
ಭವಿಗಳ್ ತದ್ಧಾನ್ಯಗೃಹಮನುರುಪಿದರಾಗಳ್ ೧೬

ವ॥ ಅಂತುರುಪೆ ಮೂಡೆಗಟ್ಟಿರ್ದ ಬೀಜಧಾನ್ಯರಾಶಿಯೆಲ್ಲಂ ಭಸ್ಮರಾಶಿಯಾಗೆ ಕಂಡು ಮುಗುಳ್ನಗೆ ನಕ್ಕು ತದ್ಭಸ್ಮರಾಶಿಯನೆ ಭಂಡಿಯೊಳ್ಕೊಂಡುಪೋಗಿ ಪೊಲದೊಳ್ ಬಿಳ್ತು[1]ನೆಂತಂತೆ ಬಿತ್ತಿ—

ಕಡವನ್ನು ಕೈಯಾರ ಕೊಡನು ; ಅವರ ಸಂಬಂಧದ ಕಥೆಗಳನ್ನು ಕೇಳನು. ವ॥ ಆಗ (ಈ ರೀತಿಯ) ಆ ಮಹಾತ್ಮನ ಇರುವಿಕೆಯನ್ನು ಕಂಡು ಸೈರಿಸಲಾರದೆ ಮಾತ್ಸರ್ಯದಿಂದ ದುಷ್ಟಮತದವರೆಲ್ಲ ಒಂದುಗೂಡಿ—೧೫–೧೬. ಕುಟಿಲ ಬುದ್ಧಿಯ ಆ ಭವಿಗಳು ಅತಿಶಯ ಅಸೂಯೆಯಿಂದ–ಈತನು ಎಂದೂ ಸಾಲವನ್ನೂ (ನಮ್ಮಿಂದ) ಪಡೆಯುತ್ತಿಲ್ಲ ; ನಮ್ಮನ್ನು ಭವಿಗಳೆಂದು ತಿರಸ್ಕರಿಸುತ್ತ ಕಡವನ್ನೂ ಕೊಡುತ್ತಿಲ್ಲ ; ನಮ್ಮ ಮಾತುಗಳನ್ನು ಲೆಕ್ಕಕ್ಕೇ ತೆಗೆದುಕೊಳ್ಳುವುದಿಲ್ಲ. ಈ ರೀತಿಯ ಇವನ ಸಾಮರ್ಥ್ಯ ನೂತನವಾದದ್ದೆಂದು ಕೊಂಡರು. ಇವನ ಹೊಸ ಧಾನ್ಯದ ಬೀಜಗಳನ್ನು ತುಂಬಿದ್ದ ಮನೆಯನ್ನು ಸುಟ್ಟುಹಾಕಿ, ಆಮೇಲೆ ಈತನ ಹಟದ ರೀತಿಯನ್ನು ತಿಳಿಯೋಣವೆಂದು ಯೋಚಿಸಿ, ಆ ಭವಿಗಳು ಆಗ ಅವನ ಧಾನ್ಯದ ಬೀಜಗಳನ್ನು ತುಂಬಿದ ಮನೆಯನ್ನು ಸುಟ್ಟುಹಾಕಿದರು. ವ॥ ಈ ರೀತಿ ಸುಟ್ಟು ಹಾಕಲು, ಮೂಡೆಗಳಲ್ಲಿ ಕಟ್ಟಿ ಇಟ್ಟಿದ್ದ ಬೀಜದ ಕಾಳುಗಳ ರಾಶಿಯೆಲ್ಲವೂ ಬೂದಿಯ ರಾಶಿಯಾಗಿರುವುದನ್ನು ಕಂಡು, ಆ ಕ್ಷೇತ್ರಪಾಲನು ಮುಗುಳುನಗೆ ನಕ್ಕು, ಆ ಬೂದಿಯ ರಾಶಿಯನ್ನೇ ಬಂಡಿಯಲ್ಲಿ ತುಂಬಿಕೊಂಡು ಹೋಗಿ, ಹೊಲದಲ್ಲಿ ಬೀಜಗಳನ್ನು ಹೇಗೆ ಬಿತ್ತುವರೋ ಹಾಗೆ (ಬೂದಿಯನ್ನೇ)

---

1 ತ್ತು(ಅ)

ಬೆಳೆದೆಂದಿನ ಬೆಳಸಿಂ ಪೆ
ರ್ಚೆಳಸಂ ಬಹುಧಾನ್ಯರಾಶಿವಡೆದಂ ಗಡ ನಿ
ರ್ಮಳಮತಿ ಮಣ್ಣಂ ಪಿಡಿದೊಡೆ
ಗಳಿಲನೆ ಪೊನ್ನಪ್ಪುದಲ್ತೆ ತ[1]ಪ್ಪದೆ ಧರೆಯೊಳ್ ೧೭

ಅಂದಿಳೆಯಾಳ್ವ ಬೊಮ್ಮವಿಭು ಬಿತ್ತ[2]ದೆಯುಂ ಬೆಳೆದಂ ಧರಿತ್ರಿಯೊ
ಳ್ಸಂದಿರೆ ತನ್ನ ಪೆಂಪು ಪೊಸಧಾನ್ಯಮನೆಂದಿಳೆ ಪೇಳ್ಗುಮಂತದಂ
ಕುಂದದೆ ಕೇಳ್ವೆವಿಂದಮಮ ಕಂಡೆವಿದಂ ಘನಕೇತಿ[3]ರಾಜನೋ
ರಂದದಿ ಬಿತ್ತಿ ಬೂದಿಯನೆ ಪೆರ್ವೆಳಸಂ ಪಡೆದಂ ವಿಳಾಸದಿಂ ೧೮

ವ॥ ಎಂದು ಕೂರ್ಮೆ ಮಿಗೆ ಪಲವೆಱೆಯಿಂ ತನ್ನ ಪೆರ್ಮೆಯಂ ಭಕ್ತಜನಂ ಪೊಗಳುತ್ತುಮಿರ್ದುದಲ್ಲಿ ಪೆಱತೊಂದು ದಿವಸಂ ದುರಾತ್ಮಕರಾದ ಜೈನರಾ ಕ್ಷೇತ್ರಪಾಲದೇವನ ತುಱುಗಳಂ ತಸ್ಕರರಿಂ ಕೊಳಿಸೆ ತುಱುಪಟ್ಟಿಯಿನಾ ಚೋರರೆಲ್ಲಾ ಧೇನುಗಳನಿರುಳೊಳ್ಬಿಟ್ಟು ಕಡುದೂರಂಬೆತ್ತ ಪರದೇಶಕ್ಕೆ ಕಡಂಗಿ ಪೊಡೆವಾಗಳ್—

ಮೇಯದೆ ಪುಲ್ಗಳಂ ಪಥದೊಳಾದೊಡಮುಂಡದೆ ಸತ್ಸರೋನದೀ
ತೋಯಮನಿಂತು ಸಪ್ತದಿವಸಂಬರೆಗಂ ತುಱುಗಳ್ಬಳಲ್ವಿನಂ

ಬಿತ್ತಿದನು. ೧೭. ಎಂದಿನ ಬೆಳೆಗಿಂತಲೂ (ವರ್ಷವರ್ಷದ ಬೆಳೆಗಿಂತಲೂ) ದೊಡ್ಡದಾದ ಬೆಳೆಯನ್ನು ಬೆಳೆದು ಅಧಿಕವಾಗಿ ಧಾನ್ಯದ ರಾಶಿಯನ್ನು ಪಡೆದನಲ್ಲವೇ ! ನಿರ್ಮಲಮತಿಯುಳ್ಳವರು ಲೋಕದಲ್ಲಿ ಮಣ್ಣನ್ನು ಹಿಡಿದರೂ ಒಮ್ಮೆಲೆ ತಪ್ಪದೆ ಚಿನ್ನವಾಗುವುದಲ್ಲವೇ ! ೧೮. ಪೂರ್ವಕಾಲದಲ್ಲಿ ಭೂಪಾಲನಾದ ಬೊಮ್ಮಿದೇವನು ಭೂಮಿಯಲ್ಲಿ ಬೀಜಗಳನ್ನು ಬಿತ್ತದೆಯೇ ತನ್ನ ಅತಿಶಯವಾದ ಹಿರಿಮೆಯಿಂದ ನೂತನ ಧಾನ್ಯರಾಶಿಯನ್ನೇ ಬೆಳೆದನೆಂದು ಲೋಕವೆಲ್ಲ ಹೇಳುತ್ತಿರುವುದನ್ನು ಕೇಳಿಬಲ್ಲೆವು ; ಅಬ್ಬಾ ! ಈಗ ಶ್ರೇಷ್ಠನಾದ ಈ ಏಲೇಶ್ವರದ ಕೇತಿರಾಜನು ಕ್ರಮವಾಗಿ ಬೂದಿಯನ್ನೇ ಬಿತ್ತಿ ದೊಡ್ಡ ಬೆಳೆಯನ್ನು ವಿಲಾಸದಿಂದ ಬೆಳೆದುದನ್ನು ಕಂಡೆವು. ವ॥ ಹೀಗೆಂದು ಅತಿಶಯ ಸಂತೋಷದಿಂದ ಅನೇಕ ಬಗೆಯಾಗಿ ಆತನ ಮಹಿಮೆಯನ್ನು ಶಿವಭಕ್ತರಾದ ಜನರುಗಳು ಹೊಗಳುತ್ತಿದ್ದರು. ಆಗ ಮತ್ತೊಂದು ದಿವಸ ಕೆಟ್ಟ ಹೃದಯವುಳ್ಳವರಾದ ಜೈನರು ಆ ಕ್ಷೇತ್ರಪಾಲದೇವನ ಹಸುಗಳನ್ನು ಕಳ್ಳರಿಂದ ಕಳವು ಮಾಡಿಸಲು (ಬಯಸಿದರು.) ಹಸುಗಳ ಕೊಟ್ಟಿಗೆಯಿಂದ ಆ ಚೋರರು ಎಲ್ಲ ಹಸುಗಳನ್ನು ರಾತ್ರಿಯಲ್ಲಿ ಕಟ್ಟಿದ ಹಗ್ಗವನ್ನು ಬಿಚ್ಚಿ ಬಹು ದೂರದಲ್ಲಿರುವ ಬೇರೆ ದೇಶಕ್ಕೆ ಉತ್ಸಾಹದಿಂದ ಹೊಡೆದುಕೊಂಡು ಹೋಗುತ್ತಿರುವಾಗ—೧೯. ಆ ಹಸುಗಳು ದಾರಿಯಲ್ಲಾದರೂ ಹುಲ್ಲನ್ನು ಮೇಯದೆ, ಅಲ್ಲಿನ ಸರೋವರಗಳ ಹೊಳೆಗಳ ನೀರನ್ನು ಕುಡಿಯದೆ, ಈ ರೀತಿ ಏಳು ದಿನಗಳವರೆಗೂ

———

1 ವ(ಅ) 2 ತ(ಅ) 3 ಳಿ(ಅ)

ವಾಯಕೆ ತಂದೆವಿಂದಿವನಿವಕ್ಕಟ ಸತ್ತೊಡೆ ದೋಷಮಕ್ಕುಮ
ನ್ಯಾಯಮಿದೆಂದು ಮುನ್ನಿನೆಡೆಗಟ್ಟಿದರಾಕಳ ಪಿಂಡನಾ ಖಳರ್ ೧೯

ಎಱೆಯನೆಡೆಗಾವುಗಳ್ಬಿಡ
ದಱಿಚುತ್ತಂಬಾಯೆನುತ್ತೆ ಹೂಂಕರಿಸುತ್ತುಂ
ಮಱುಕಂ ಮಿಗೆ ನೆಗೆನೆಗೆದ
ಳ್ಕಱಿನೋಡಿ ಬರುತ್ತುಮಿರ್ದವತಿ ಭರದಿಂದಂ ೨೦

ವ॥ ಅಂತೇಳು ದಿನಂ ನಡೆದ ಬಟ್ಟೆಯನೇಳುಂ ಜಾವದೊಳ್ಕಳಿ[1]ದು ಜವದಿಂ ಪರಿತಂದ ಪಶುಗಳನಾ ಕ್ಷೇತ್ರಪಾಲದೇವಂ ವ್ರತಹೀನಂಗಳಾದ ತುಱುಗಳೀ ಕೊಟ್ಟಗೆಯಂ ಪುಗಲಾದೆಂದವಧರಿಸುತ್ತದಱಗುಸೆಯ ಬಾಗಿಲಂ ಬಂಧಿಸೆ ಪಸಿದು ಬಳಲ್ದವೆಂದು ಪೌರಜನಂ ಮಱುಗಿ ಸಾರತರಮಪ್ಪ ತೃಣಜಲಮಂ ಮುಂದಿಡೆ ಮುಟ್ಟಲೊಲ್ಲದೆ—

ಕೊಟ್ಟಗೆಯಂ ಬಲವರುತುಂ
ನೆಟ್ಟನೆ ನಿಜಲಿಂಗದರ್ಶನಂಗೆಯ್ದಪೆವೆಂ
ದಿಟ್ಟಣಿಸಿ ನಿಳ್ಕಿ ನಿಟ್ಟಿಸು
ತೊಟ್ಟಜೆಯಿಂದಱಿಚಿ ಕರೆವುತಿರ್ದುವು ಪಶುಗಳ್ ೨೧

ಅವು ಇದ್ದು ಬಳಲಿ ಹೋಗಲಾಗಿ ಅಯ್ಯೋ ! ಈ ಹಸುಗಳನ್ನು ಅಪಾಯಕ್ಕೆ ತಂದಂತಾಯಿತು. ಇವು ಸತ್ತರೆ ನಮಗೆ ಪಾಪವುಂಟಾಗುವುದು. (ನಾವು ಮಾಡಿದ) ಈ ಕಾರ್ಯವು ಅನ್ಯಾಯದ್ದೆಂದು (ತಿಳಿದು) ಆ ಆಕಳುಗಳ ಹಿಂಡನ್ನು ಅವು ಮೊದಲಿದ್ದ ಸ್ಥಳಕ್ಕೆ ಅಟ್ಟಿದರು. ೨೦. ಒಡೆಯನ ಹತ್ತಿರಕ್ಕೆ ಹಸುಗಳು ಒಂದೇ ಸಮನೆ ಅರಚುತ್ತ, 'ಅಂಬಾ' ಎನ್ನುತ್ತ, ಹೂಂಕಾರ ಮಾಡುತ್ತ, ಅತಿಶಯವಾಗಿ ಮರುಕಗೊಂಡು (ದುಃಖಗೊಂಡು), ನೆಗೆನೆಗೆದು ಅತ್ಯಂತ ವೇಗದಿಂದ ಪ್ರೀತಿಯಿಂದ ಓಡೋಡಿ ಬರುತ್ತಿದ್ದವು. ವ॥ ಆ ರೀತಿ ಏಳು ದಿನಗಳ ದಾರಿಯನ್ನು ಏಳು ಜಾವಗಳಲ್ಲಿ ನಡೆದು ಕಳೆದು, ಶೀಘ್ರವಾಗಿ ಓಡಿಬಂದ ಹಸುಗಳನ್ನು ಆ ಕ್ಷೇತ್ರಪಾಲದೇವನು ವ್ರತಹೀನಗಳಾದ (ಕುಲಗೆಟ್ಟ) ಈ ಹಸುಗಳು ಹಟ್ಟಿಯನ್ನು ಹೊಗಲಾಗದು ಎಂದು ಆ ಕೊಟ್ಟಿಗೆಯ ಮುಂಬಾಗಿಲನ್ನು (ಹೆಬ್ಬಾಗಿಲನ್ನು) ಮುಚ್ಚಿದನು. ಪಟ್ಟಣದ ಜನಗಳು ಈ ಹಸುಗಳು ಬಳಲಿಹೋಗಿವೆ, ಎಂದುಕೊಂಡು ಮರುಗಿ ಸಾರವತ್ತಾದ ಹುಲ್ಲನ್ನೂ ನೀರನ್ನೂ ತಂದು ಮುಂದಿಡಲು ಅವನ್ನು ಮುಟ್ಟಲು ಮನಸ್ಸುಮಾಡದೆ—೨೧. ಆ ಕೊಟ್ಟಿಗೆಗೆ ಪ್ರದಕ್ಷಿಣೆ ಹಾಕಿ, ಚೆನ್ನಾಗಿ ಶಿವಲಿಂಗ ದರ್ಶನವನ್ನು ಮಾಡುತ್ತೇವೆಂದು ಗುಂಪಾಗಿ ಸೇರಿ ಇಣಿಕಿ

1 ಳ(ಮು)

ಒಳಗೆ ಕಡುಪಸಿದು ಬಡವಾ
ದೆಳೆಗಱುಗಳ್ಕೇಳ್ದುಮವಱ ದನಿಯುಂ ಬತವಿಂ
ದಳಿದುದಿವಕೆಂದು ಮಱುಕಮ
ನುಳಿದಱಿಚದೆ ಸುಮ್ಮನಿರ್ದವೆಳಸದೆ ಸುಧೆಯುಂ ೨೨

ವ॥ ಅನಿತಱ[3]ೊಳೇಲೇಶ್ವರ ಕೇತಯ್ಯಂ ತುಱುಗಳಾಹಾರಂಗೊಳದ ಬಗೆಯಂ ಬಗೆದಂತೆ ಕಂಡು ನಿಜವ್ರತಮಂ ಬಿಟ್ಟವಲ್ಲೆಂದು ತಿಳಿದು [1]ಗೋಷ್ಠಿ[1]ಕವಾಟಪುಟಮಂ ಭೋಂಕನೆ ಬಿರ್ಚಲೊಡನೆ—

ಸಂದಣಿಸಿ ಪೊಕ್ಕು ಲಿಂಗದ
ಮುಂದಣ್ಗೆರದೆಯ್ದಿ ಕಱುಗಳಂ ಬಗೆಯದೆ ನ
ಣ್ಪಿಂದೀಕ್ಷಿಸಿ ತುಱುಗಳ್ಪಲ
ವಂದೆಱಗುತೆ ಮುಟ್ಟಿ ಲಿಂಗಮಂ ಮಸ್ತಕದಿಂ ೨೩

ಪರುಸಸ ನೇಮಮಂನೆಸಗು
ತ್ತುರುತರ ಮುದಮಾಳ್ದು ಶರಣನಡಿದಾವರೆಗಾ
ದರದಿಂ ನಸುಬಾಗುತೆ ನಿಂ
ದಿರೆ ಕಂಡಾ ಕೇತಿರಾಜನತಿ ಕೃಪೆಯಿಂದಂ ೨೪

ಎಳೆವುಲ್ಲಂ ತಿಳಿನೀರಂ
ಗಳಿಲನೆ ಮುಂದಿಟ್ಟನಾ[2]ಗಳಾಕಳ ತಂಡಂ
ಕೆಳೆಗೊಂಡು ಮೇವುತುಂ ಪು
ಲ್ಗಳನಂಬುಗೊಳುತ್ತೆ ಕಳೆದುದಧ್ವಶ್ರಮಮಂ ೨೫

ನೋಡುತ್ತ ಆವೇಶಗೊಂಡು ಅರಚುತ್ತ ಆ ಪಶುಗಳು ಕರೆಯುತ್ತಿದ್ದವು. ೨೨. ಕೊಟ್ಟಿಗೆಯ ಒಳಭಾಗದಲ್ಲಿ ಅತಿಯಾಗಿ ಹಸಿದು ಸೊರಗಿಹೋದ ಎಳೆಯ ಕರುಗಳು (ತಾಯಿ) ಹಸುಗಳ ಧ್ವನಿಯನ್ನು ಕೇಳಿಯೂ ಕೂಡ, ಇವುಗಳ (ಶಿವಭಕ್ತಿ) ವ್ರತವು ಅಳಿದುಹೋಗಿದೆ, ಎಂದು ತಿಳಿದು ಅವುಗಳ ಹಾಲನ್ನೂ ಕೂಡ ಅಪೇಕ್ಷಿಸದೆ ಸುಮ್ಮನೆ ಇದ್ದವು. ವ॥ ಅಷ್ಟರಲ್ಲಿ ಏಲೇಶ್ವರ ಕೇತಯ್ಯನು ಹಸುಗಳು ಆಹಾರವನ್ನು ಸ್ವೀಕಾರ ಮಾಡದ ರೀತಿಯನ್ನು ತಿಳಿದು ಇವು ತಮ್ಮ ವ್ರತವನ್ನು ಬಿಟ್ಟಿಲ್ಲವೆಂದು ಯೋಚಿಸಿ, ಕೊಟ್ಟಿಗೆಯ ಕದವನ್ನು ಒಮ್ಮೆಲೇ ತೆರೆದು ಬಿಡಲು ೨೩–೨೪. ಆ ಹಸುಗಳು ಒಮ್ಮೆಲೆ ಕೊಟ್ಟಿಗೆಯನ್ನು ಹೊಕ್ಕು, ತಮ್ಮ ಕರುಗಳನ್ನೂ ಗಣನೆಗೆ ತೆಗೆದುಕೊಳ್ಳದೆ (ಮೊದಲು) ಪ್ರೀತಿಯಿಂದ ಶಿವಲಿಂಗದ ಮುಂದಕ್ಕೆ ಹೋಗಿ, ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಹಣೆಯಿಂದ ಆ ಲಿಂಗವನ್ನು ಮುಟ್ಟಿ ಶಿವಲಿಂಗ ಸ್ಪರ್ಶ ಮಾಡುವ ನೇಮವನ್ನು ಮಾಡಿ, ಅತ್ಯಂತ ಸಂತೋಷಗೊಂಡುವುಗಳಾಗಿ, ಶಿವಶರಣರ ಪಾದಕಮಲ ಗಳಿಗೆ ಸ್ವಲ್ಪ ಬಗ್ಗಿ ನಮಸ್ಕರಿಸಿ ನಿಂತವು. (ಹೀಗೆ ನಿಂತಿರುವ ಆ ಹಸುಗಳನ್ನು) ಕೇತಿರಾಜನು ಅತ್ಯಂತ ಕೃಪೆಯಿಂದ ನೋಡಿದನು. ೨೫. (ಆ ಹಸುಗಳಿಗೆ) ಎಳೆಯಹುಲ್ಲು ತಿಳಿಯಾದ ನೀರನ್ನು ಆ ಕೂಡಲೆ ತಂದುಮುಂದಿಟ್ಟನು. ಆಗ ಆಕಳುಗಳ ಸಮೂಹವು ಉತ್ಸಾಹಗೊಂಡು ತಂದಿಟ್ಟ ಆ ಹುಲ್ಲನ್ನು ಮೇಯುತ್ತ ನೀರು ಕುಡಿಯುತ್ತ ತಮ್ಮ

---

1 ಗೊಟ್ಟ(ಅ) 2 ರಾ(ಚ)

ವ॥ ಅಂತು ಕಳೆದು ಸಂತಸಂದಳೆದಿರ್ಪಾಗಳ್ಕಱುಗಳಿಂತಾದುದೆಲ್ಲಮುಂ ಕಂಡು—

ವ್ರತಭಂಗಮಿಲ್ಲಮೆಂದೆಮ
ದತಿಶಯ ಮುದಮಾಳ್ದು ತೊರೆದ ಪಶುಗಳ ಮೊಲೆಯಂ
ಮತಿ ಮಿಗೆ ನಲಿದುಂಡುವು ಜನ
ತತಿಯಚ್ಚರಿವಡೆದು ಕೀರ್ತಿಸುತ್ತಿರೆ ಧರೆಯೊಳ್ ೨೬

ಬಿಡದಾದುವಲ್ತೆ ಪಶುಗಳು
ಮೊಡನಾತ್ಮವ್ರತಮನಧಿಕ ಸಂಕಟದೊಳಮಿಂ
ದೊಡೆ ಬಿಟ್ಟ ಮನುಜನವಱಿಂ
ಕಡೆ ನಿಜಸುವ್ರತಮನವನಿಯೊಳ್ಜಗದೇವಾ ೨೭

ಧರೆಯೊಳಗೆ ಕೇತಿರಾಜನ
ಪರಿಯಂ ಮುನ್ನಱಿದೆಯಪ್ಪೊಡೀ ಭವಿಸಂಗಂ
ದೊರೆಕೊಳ್ಗುಮೆ ನಿನಗೆಂದಾ
ಶರಣಾಗ್ರಣಿಯೊರೆದು ಮತ್ತಮಿಂತೆಂದಂ ೨೮

ಧರೆಯೊಳೆ ನಾಚಿದೇವನೆನಿಪೊರ್ವನುಮಾಧವಭಕ್ತನಾತ್ಮಸೌಂ
ದರಿ ತರುಣದ್ವಯಂ ಪುದಿದ ಗರ್ಭಮನಾಳ್ದಿರುತಿರ್ದು ಪೆತ್ತೊಡಿ
ರ್ವರನವರೊಳ್ ಮೊದಲ್ಚನಿಯಿಪಂಗೆ ದೃಢವ್ರತನೊಂದು ಲಿಂಗಮಂ
ಧರಿಯಿಸಿ ಮತ್ತೆ ಪುಟ್ಟಿದುದನೀಕ್ಷಿಸಿ ಕಾಲಮತೀತಮಪ್ಪುದಂ ೨೯

ಮಾರ್ಗಶ್ರಮವನ್ನು ಕಳೆದವು, ॥ವಚನ॥ ಈ ರೀತಿ ಮಾರ್ಗಶ್ರಮವನ್ನು ಕಳೆದು ಸಂತೋಷಗೊಂಡು ಇರುವಾಗ ಕರುಗಳು ಹೀಗೆ ನಡೆದುದೆಲ್ಲವನ್ನೂ ಕಂಡು—೨೬. ಈ ನಮ್ಮ ತಾಯಿ ಹಸುಗಳಿಗೆ ವ್ರತಭಂಗವಾಗಿಲ್ಲವೆಂದು ತಿಳಿದು ಅತ್ಯಂತ ಸಂತೋಷಗೊಂಡು, ತೊರೆದ ಆ ಹಸುಗಳ ಮೊಲೆಯನ್ನು ಲೋಕದಜನವೆಲ್ಲ ಅತ್ಯಂತ ಆಶ್ಚರ್ಯಗೊಂಡು ಹೊಗಳುವಂತೆ ಮನಃಪೂರ್ವಕವಾಗಿ ನಲಿದು ಕುಡಿದವು. ೨೭. ಅತ್ಯಂತ ಸಂಕಟ ಸಮಯದಲ್ಲಿ ಪಶುಗಳೂ ಕೂಡ ತಮ್ಮ ವ್ರತವನ್ನು ಬಿಡಲಿಲ್ಲವಲ್ಲವೇ ! ಎನ್ನುವಾಗ ಲೋಕದಲ್ಲಿ ತಮ್ಮ ಶ್ರೇಷ್ಠವ್ರತವನ್ನು ಬಿಟ್ಟಮನುಷ್ಯನು ಆ ಪಶುಗಳಿಗಿಂತಲೂ ಕಡೆ ಯಲ್ಲವೇ ಜಗದೇವ ? (ಎಂದು ಬಸವಣ್ಣನು ಜಗದೇವನಿಗೆ ಹೇಳಿದನು.) ೨೮. ಲೋಕದಲ್ಲಿ ಕೇತಿರಾಜನ ರೀತಿಯನ್ನು ಮೊದಲು ತಿಳಿದಿದ್ದೆಯಾದರೆ, ನಿನಗೆ ಈ ಭವಿಗಳ ಸಂಗವುಂಟಾಗುತ್ತಿತ್ತೇ ? ಎಂದು ಆ ಶರಣರಿಗೆಲ್ಲ ಅಗ್ರಗಣ್ಯನಾದ ಬಸವಣ್ಣನು ತಿಳಿಸಿ ಪುನಃ ಹೀಗೆ ಹೇಳಿದನು : ೨೯–೩೨. ಭೂಮಂಡಲವಲ್ಲಿ ಒಬ್ಬ ಪರಮೇಶ್ವರಭಕ್ತ ನೆನಿಸಿದ 'ನಾಚಿದೇವ' ಎಂಬುವವನು ಇದ್ದನು. (ಅವನು) ಎರಡು ಗಂಡುಮಕ್ಕ ಳಿಂದ ತುಂಬಿದ ಹೊಟ್ಟೆಯುಳ್ಳ (ಬಸುರಿಯಾದ) ತನ್ನ ಸುಂದರಪತ್ನಿಯೊಡನೆ ಇರುತ್ತಿದ್ದು (ಅವಳು) ಇಬ್ಬರು ಗಂಡುಮಕ್ಕಳನ್ನು ಹೆತ್ತಳು. ಅವರಲ್ಲಿ ಮೊದಲು

ಲಿಂಗಮನದಕಳವಡಿಸದೆ
ಪಿಂಗಿರೆ ಕಂಡಬಳೆ ನುಡಿದಳೀ ಶಿಶುಗೀಗಳ್
ಸಂಗತಮಪ್ಪಂತಿರೆ ಶಿವ
ಲಿಂಗಮನಳವಡಿಸದಿರ್ಪಿರೇಂ ಕಾರಣದಿಂ ೩೦

ಎನೆ ನಾಚಿರಾಜನೆಂದು
ವನಿತೆಗೆ ಕೇಳ್ತರುಣಿ ತರುಣನರ್ಘೋದಯದೊಳ್
ಘನಲಿಂಗಮನಳವಡಿಪುದು
ವಿನುತಾಗಮವಿಹಿತ ವೀರಶೈವಾಚರಣಂ ೩೧

ಅಳವಡದೀ ಶಿಶುವಿಂ[1]ಗಾ
ವಿಳಸತ್ಕ್ರಿಯೆ ಬಿಸುಟು ಕಳೆವುದಪರಿಂದಿದನೆಂ
ದಿಳೆಯರಿಯೆ ಬಿಸುಡಿಸಿದನಾ
ಗಳೆ ಮಗುವಂ ಭಕ್ತನೆಂದೊಡೇವಣ್ಣಿಪುದೋ ೩೨

ಇಂತೆಸೆವ ವೀರಶೈವ ಮ
ಹಾಂತರ ಸನ್ಮಾರ್ಗವೊಪ್ಪುತಿರೆ ಬಿಟ್ಟದನೋ
ರಂತೆ ಕುಮಾರ್ಗದೊಳಡಿಯಿಡ
ಲೆಂತೊಲ್ದ ದುರಾತ್ಮಬೋಧೆಯೇಗೆಯ್ದುದೊ ಪೇಳ್ ೩೩

ಹುಟ್ಟಿದಮಗನಿಗೆ ದೃಢವ್ರತನಾದ ನಾಚಿದೇವನು ಒಂದು ಲಿಂಗವನ್ನು ಧಾರಣೆಮಾಡಿಸಿ, ಆ ಮೇಲೆ ಹುಟ್ಟಿದ ಮಗುವನ್ನು ನೋಡಿ ಕಾಲವು ಮಿಕ್ಕಿಹೋಯಿತೆಂದುಕೊಂಡು ಅದಕ್ಕೆ ಲಿಂಗಧಾರಣೆಮಾಡದೆ ದೂರಸರಿದನು. (ಇದನ್ನು) ಕಂಡ ಆ ಹೆಂಡತಿಯು ಏನು ಕಾರಣದಿಂದ ಈಗ ಈ ಶಿಶುವಿಗೆ ಸಂತೋಷವುಂಟಾಗುವ ಹಾಗೆ ಶಿವಲಿಂಗವನ್ನು ಧಾರಣೆಮಾಡದೆ ಇದ್ದೀರಿ ? ಎನ್ನಲು, ಆ ಹೆಂಡತಿಗೆ ನಾಚಿದೇವನು 'ತರುಣಿಯೇ ಕೇಳು : ತರುಣನ ಅರ್ಘೋದಯದಲ್ಲಿಯೇ (ಅರ್ಧಶಿಶುವು ತಾಯಿಯ ಗರ್ಭದಿಂದ ಹೊರಬಂದಾಗಲೇ) ಶ್ರೇಷ್ಠವಾದ ಲಿಂಗವನ್ನು ಧರಿಸುವುದು ಶ್ಲಾಘ್ಯವಾದ ಆಗಮೋಕ್ತವೀರಶೈವದ ನೀತಿಯಾಗಿದೆ. ಈ ಶಿಶುವಿಗೆ ಆ ಶ್ರೇಷ್ಠವಾದ ಲಿಂಗಧಾರಣೆ ಕ್ರಿಯೆಯು ಉಚಿತವಾಗುವುದಿಲ್ಲವೆಂದು ಲಿಂಗಧಾರಣೆಮಾಡಲಿಲ್ಲವೆಂದು ತಿಳಿಸಿ, ಲೋಕಕ್ಕೆಲ್ಲ ತಿಳಿಯುವಂತೆ ಶಿವಭಕ್ತನಾದ ಅವನು ಆ ಮಗುವನ್ನು ಆಗಲೇ ಬಿಸಾಡಿಸಿಬಿಟ್ಟನು, ಎನ್ನುವಾಗ ಅವನ್ನು ಏನೆಂದು ವರ್ಣಿಸುವುದೋ ! ೩೩. ಈ ರೀತಿಯಲ್ಲಿ ವೀರಶೈವ ಮಹಾವ್ಯಕ್ತಿಗಳ ಶ್ರೇಷ್ಠಮಾರ್ಗವು ಒಪ್ಪುತ್ತಿರುವಾಗ ಅಂಥ. ಮಾರ್ಗವನ್ನು ಬಿಟ್ಟು ಕ್ರಮವಾಗಿ ದುಷ್ಟಮಾರ್ಗದಲ್ಲಿ ಹೆಜ್ಜೆಯಿಡಲು ಹೇಗೆಮನಸ್ಸು ಮಾಡಿದೆ ? ದುರಾತ್ಮ

---

1 ಲಿಂ(ಚ, ದ)

ಅಲ್ಲದುದನಪ್ಪುಕೆ[1]ಯ್ಪುವ
ರಿಲ್ಲದುದಂ ತೋರ್ಪರುಳ್ಳುದಂ ವಂಚಿಪರೆ
ಲ್ಲೆಲ್ಲಿಯುಮಿೂ ಖಳರವನೀ
ವಲ್ಲಭರ ಮರುಳ್ಚಿ ಸೆಳೆವರೀಪ್ಸಿತವಸುವಂ ೩೪

ವಿಮಳ ನಿಗಮಾಂತ ಗದಿತೋ
ತ್ತಮ ಶಿವಧರ್ಮಮನಗಲ್ದು ಮುನಿಶಾಪಹತ
ಕುಮತಮನವಲಂಬಿಸಿ ದು
ರ್ದಮರೀ ದ್ವಿಜರಭವಭಕ್ತರಂ ನಿಂದಿಸುವರ್ ೩೫

ಹರಚರಣದ್ರೋಹಿಗಳೀ
ಶ್ವರವಿಮುಖರೆನಿಪ್ಪ ಪರಮ ಪಾಪಂಡರಿವಂ
ದಿರ ಸಂಸರ್ಗಂ ಶ್ರೇಯ
ಸ್ಕರಮಕ್ಕುಮೆ ಲಿಂಗಭಕ್ತಸಂತತಿಗಿಳೆಯೊಳ್ ೩೬

ಪಶುಕುಳಪಾಶಹಾರಿ ಪರಮೇಶ್ವರನೊಪ್ಪಿರೆ ಬಿಟ್ಟು ನ[2]ಲ್ಮೆಯಿಂ
ಪಶುಗಳನಾವನೊಂದಿ ನಿಜಪಾಶವಿಮುಕ್ತಿಗೆ ಸೇವೆಗೆಯ್ವನಾ
ಪಶುನರನಾಸ್ಯದೊಳ್ ಮಿಸುಪ ಮೂಗರಿದಿಟ್ಟಿಗೆಯುರ್ದಿ ಬೇಗದಿಂ
ಪಶುಪತಿಯಾ ಮೊಗಕ್ಕೆ ಮುಕುರಂಬಿಡಿದಾಗಳೆ ತೋಜದಿರ್ಪನೇ ೩೭

ರಾದವರಬೋಧನೆಯು ಏನನ್ನು ತಾನೆ ಮಾಡುವುದಿಲ್ಲ ? ಹೇಳು. ೩೪. ಈ ದುಷ್ಟರು ಅಲ್ಲವಾದದ್ದನ್ನೇ ಅಂಗೀಕರಿಸುವಂತೆ ಮಾಡುವರು; ಇಲ್ಲದೆ ಇದ್ದುದನ್ನು ತೋರಿಸುವರು; ಇರುವುದನ್ನೇ ವಂಚಿಸಿ ಇಲ್ಲದಂತೆ ಮಾಡುವರು; ರಾಜರುಗಳನ್ನು ಮರಳುಗೊಳಿಸಿ ತಮ್ಮ ಇಷ್ಟಾರ್ಥವನ್ನು ಸೆಳೆದುಕೊಳ್ಳುವರು. ೩೫. ಶ್ರೇಷ್ಠ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟ ವೀರಶೈವ ಧರ್ಮವನ್ನು ಬಿಟ್ಟು, ಮುನಿಶಾಪದಿಂದ ಕೊಲ್ಲಲ್ಪಟ್ಟು ದುಷ್ಟ ಮತವನ್ನು ಅವಲಂಬಿಸಿ, ಕೆಟ್ಟಮದದಿಂದ ಕೂಡಿದ ಈ ದ್ವಿಜರು ಶಿವಭಕ್ತರನ್ನು ನಿಂದಿಸುತ್ತಿದ್ದಾರೆ. ೩೬. ಈ ಲೋಕದಲ್ಲಿ ಲಿಂಗಭಕ್ತರ ಸಮೂಹಕ್ಕೆ ಪರಮೇಶ್ವರನ ಪಾದದ್ರೋಹಿಗಳೂ, ಈಶ್ವರನಿಂದ ವಿಮುಖರಾದವರೂ ಎನಿಸಿರುವ ಈ ನಾಸ್ತಿಕರುಗಳ ಸಹವಾಸವು ಶ್ರೇಯಸ್ಕರವಾದೀತೇ ? ೩೭. ವಿಷ್ಣುಬ್ರಹ್ಮಾದಿ ಪಶುಗಳ ಮಾಯೆಯೆಂಬ ಪಾಶವನ್ನು ಪರಿಹರಿಸುವ ಪರಮೇಶ್ವರನಿರುವಾಗ ಅವನನ್ನು ಬಿಟ್ಟು, ತಮ್ಮ ಮಾಯಾಪಾಶದ ಬಿಡುಗಡೆಗೆ, ಪಶುಗಳೆನಿಸಿರುವ ವಿಷ್ಣುಬ್ರಹ್ಮರನ್ನು ನಂಬಿ ಯಾವನು ಸೇವೆಮಾಡುವನೋ ಅಂಥ ಪಶುಸ್ವರೂಪದ ಮನುಷ್ಯರ ಮುಖದಲ್ಲಿ ಶೋಭಿಸುವ ಮೂಗನ್ನು ಕೊಯ್ದು, ಪರಮೇಶ್ವರನು ಇಟ್ಟಿಗೆಯಿಂದ ಉಜ್ಜಿ, ಬೇಗನೆ

1 ಗೆ(ಅ) 2 ವ(ಚ)

ವಿಮಳಾಂಬುವಿನೊಳ್ಬಿಂಬಿಪ
ಕಮಳಸಖಂ ಪಂಕದಲ್ಲಿ ಬಿಂಬಿಸುಗುಮೆ ಜಂ
ಗಮಲಿಂಗಭಕ್ತರೊಳೆ ತ
ಳ್ತ ಮಹೇಶ್ವರನನ್ಯ ಭವಿಗಳೊಳ್ಬೆರಸುಗುಮೇ ೩೮

ಬಲ್ಲನೆ ಗಾನಮಂ ಬಧಿರನಂಧಕನಗ್ಗದ ರತ್ನದೀಪಮಂ
ಬಲ್ಲನೆ ಸ[1]ತ್ಸುಧಾರಸದ ಬಲ್ಪವಿಯುಂ ಜ್ವರಿತಾಂಗಮಾನವಂ
ಬಲ್ಲನೆ ಪುರ್ಚುಗೊಂಡ ಮನುಜಂ ಶಿವತತ್ವಸದರ್ಥಸಾರಮಂ
ಬಲ್ಲನೆ ಬಲ್ಲನೇ ಕುಕವಿ ಸತ್ಕವಿಕಾವ್ಯಕಲಾಕಲಾಪಮಂ ೩೯

ಖರಮೇಂ ಬಲ್ಲುದೆ ನಾಕಲೋಕಸುಖಮಂ ಮಾಣಿಕ್ಯಮಂ ಧೂರ್ತವಾ
ನರಮೇಂ ಬಲ್ಲುದೆ ಗೂಗೆ ಬಲ್ಲುದೆ ಲಸನ್ಮಾರ್ತಂಡನಂ ಗಂಧಬಂ
ಧುರ ಕಂಜಾತಮರಂದಮಂ ನೊಳವಡೇತುಂ ಬಲ್ಲುದೇ ಕರ್ದಮ
ಸ್ಥಿರ ಮಂಡೂಕಮೊಱಲ್ದು ಬಲ್ಲುದೆ ಮಹಾಂಭೋರಾಶಿಗಾಂಭೀರ್ಯಮಂ ೪೦

ಆ ಮುಖಕ್ಕೆ ಕನ್ನಡಿಯನ್ನು ಹಿಡಿಯುದಿರುವನೇ ? ೩೮. ಪರಿಶುದ್ಧವಾದ ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನು ಕೆಸರಿನಲ್ಲಿ ಪ್ರತಿಬಿಂಬಿಸುವನೇ ? ಜಂಗಮಲಿಂಗಭಕ್ತರ ಸೇವೆಯಲ್ಲಿ ತೊಡಗಿದ ಮಹೇಶ್ವರನು (ಶಿವಭಕ್ತನು) ಅನ್ಯಭವಿಗಳ ಸಂಗದಲ್ಲಿ ಕೂಡುವನೇ? (ಭವಿ—ಮದ್ಯಪಾಯಿ, ಮಾಂಸಭಕ್ಷಕ, ಶಿವನಿಗಿಂತ ಭಿನ್ನವಾದ ದೇವತಾಪೂಜಕ, ಶಿವೇತರಮತವಾದಿ, ಶಿವಮತದೂಷಕ ಈ ಐದು ಪ್ರಕಾರದವರು ಭವಿಗಳೆಂದು ಸಾಮಾನ್ಯ ಗ್ರಹಿಕೆ ೩೯. ಕಿವುಡನು ಸಂಗೀತವನ್ನು ಬಲ್ಲನೇ ? ಕುರುಡನು ಶ್ರೇಷ್ಠವಾದ ರತ್ನದ ದೀಪವನ್ನು ತಿಳಿಯುವನೇ ? ಶ್ರೇಷ್ಠವಾದ ಅಮೃತರಸದ ಒಳ್ಳೆಯ ರುಚಿಯನ್ನು ಜ್ವರದಿಂದ ಕೂಡಿದ ದೇಹವುಳ್ಳವನು ತಿಳಿಯುವನೇ ? ಹುಚ್ಚನಾದ ಮನುಷ್ಯನು ಈಶ್ವರತತ್ತ್ವಾರ್ಥದ ಸಾರವನ್ನು (ಶಿವಜೀವೈಕ್ಯವನ್ನು ಬೋಧಿಸುವ ತತ್ತ್ವದ ಸಾರವನ್ನು) ಬಲ್ಲನೇ ? ದುಷ್ಟನಾದ ಕವಿಯು (ಸಾಮಾನ್ಯ ಕವಿಯು) ಶ್ರೇಷ್ಠಕವಿಯೆನಿಸಿದವನ ಕಾವ್ಯದ ಕಲೆಯ ಸಮೂಹವನ್ನು ಬಲ್ಲನೇ ? ೪೦. ಕತ್ತೆಯು ಸ್ವರ್ಗಲೋಕಸುಖವನ್ನು ಬಲ್ಲುದೇನು ? ಮಾಣಿಕ್ಯದ ಬೆಲೆಯನ್ನು ಧೂರ್ತ ಕೋತಿಯು ತಿಳಿದೀತೇನು ? ಗೂಗೆಯು ಪ್ರಕಾಶಮಾನನಾದ ಸೂರ್ಯನನ್ನು ತಿಳಿದೀತೇನು ? ಸುಗಂಧದಿಂದ ತುಂಬಿದ ಕಮಲದಲ್ಲಿನ ಮಕರಂದವನ್ನು ನೊಣವು ಹೇಗಾದರೂ ತಿಳಿದೀತೇನು? ತುಂಬಿದ ಕಮಲದಲ್ಲಿನ ಮಕರಂದವನ್ನು ನೊಣವು ಹೇಗಾದರೂ ತಿಳಿದೀತೇನು? ಕೆಸರಿನಲ್ಲಿ ಸ್ಥಿರಗೊಂಡ (ನೆಲಸಿದ) ಕಪ್ಪೆಯು ಕೂಗುತ್ತ ಮಹಾಸಮುದ್ರದ

---

1 ತ(ಅ)

ನಿನ್ನಾತ್ಮನದೇಂ ಬಲ್ಲುದೆ
ಪನ್ನಗಧರಶರಣಚರಣಸರಸಿಜಸೇವಾ
ಸನ್ನುತಸುಖಮುಂ ಭವಮದ
ಪನ್ನಾಗಮತಂಗಜಾರಿಯುಂ ಜಗದೇವಾ ೪೧

ಸುರಮಣಿ ಪಾಣಿಯಲ್ಲಿರೆ ಬಿಸುಟ್ಟಳಿಗಾಜನಪೇಕ್ಷಿಪಂತೆ ನಿ
ರ್ಜರತರು ಪಿತ್ತಿಲಲ್ಲಿರೆ ತದರ್ಥನೆಗೆಯ್ಯದೆ ಬೂರಮಂ ಸಮಂ
ತೆರೆವವನಂತೆ ದೇವಪಶುಮಂಗಣದಲ್ಲಿರೆ ಮಾಣ್ದು ಕಳ್ತೆಯುಂ
ಕರೆದಮರ್ದಿಂಟಲಾದರಿಪವೋಲ್ ನಿಧಿ ಮುಂದಿರೆ ನೂಂಕಿ ವಾರಿಯಿಂ ೪೨

ಜರಗಂ ಕರ್ಚುವವೋಲ್ಸುಧಾಸುರಸಮಿಂಬಾಗುತ್ತೆ ಕೈವಟ್ಟಲ
ಲ್ಲಿರೆ ಕೂರ್ತೀಂಟದೆ ಗಂಜಿಯೊಂಟಲೆಸಪಂತಾಮೋದದಾಮೋದತಾ
ಮರಸಂ ತಳ್ತಿರೆ ಬಿಟ್ಟು ಗೋರಟೆಯ ಪೂಗೊಲ್ವಂತವೋಲ್ಖಂಡಶ
ರ್ಕರೆ ಕೆಯ್ಸಾರ್ದಿರೆ ಮೆಲ್ಲದಂತಿರಿಸಿ ಬೇವಂ ಮೆಲ್ವವೋಲ್ಧಾತ್ರಿಯೊಳ್ ೪೩

ವಿಮಳ ಶಿವಂಕರ ಶಿವಭ
ಕ್ತಿಮಾರ್ಗಮಿರೆ ವರ್ಜಿಸುತ್ತೆ ಭವಿಕರ್ಮವಿಧಾ

ಗಾಂಭೀರ್ಯವನ್ನು ತಿಳಿದೀತೇನು? ೪೧. ಜಗದೇವ, ಸಂಸಾರವೆಂಬ ಮದೋನ್ಮತ್ತ ಆನೆಗೆ ಸಿಂಹ ಪ್ರಾಯನಾದ ಸರ್ಪಧರನಾದ ಪರಮೇಶ್ವರನ ಶರಣರುಗಳ ಪಾದಕಮಲಗಳ ಶ್ಲಾಘ್ಯವಾದ ಸೇವೆಯ ಸುಖವನ್ನು ನಿನ್ನ ಹೃದಯವು (ಆತ್ಮವು) ತಿಳಿದೀತೇ ? ೪೨–೪೪. ಚಿಂತಾರತ್ನವೇ ಕಯ್ಯಲ್ಲಿರುವಾಗ ಅದನ್ನು ಬಿಸಾಡಿ ಹೀನವಾದ ಗಾಜಿಗೆ ಅಪೇಕ್ಷಿಪಡುವವನಂತೆ, ಕಲ್ಪವೃಕ್ಷವೇ ಹಿತ್ತಿಲಲ್ಲಿರಲು ಅದನ್ನು (ಹೋಗಿ) ಬೇಡದೆ ಬೂರುಗದ ಮರವನ್ನು ಕುರಿತು ಬೇಡುವವನ ಹಾಗೆ, ಕಾಮಧೇನುವೇ ತನ್ನ ಮನೆಯ ಅಂಗಳದಲ್ಲಿರುವಾಗ ಅದನ್ನು ಬಿಟ್ಟು ಕತ್ತೆಯ ಹಾಲನ್ನು ಹೆಚ್ಚಾಗಿ ಕರೆದು ಕುಡಿಯಲು ಆದರ ತೋರಿಸುವವನಂತೆ, ನಿಧಿಯೇ ಮುಂದಿರುವಾಗ ಅದನ್ನು ಬಿಟ್ಟು ನೀರಿನಿಂದ ಮಳಲ ಗುಡ್ಡೆಯನ್ನು ಜಾಲಿಸಿ ತೊಳೆಯುವ ಹಾಗೆ (ಮಳಲಗುಡ್ಡೆಯನ್ನು ಜಾಲಿಸಿ ಅದರಲ್ಲಿನ ಬಂಗಾರದಕಣಗಳನ್ನು ಸಂಗ್ರಹಿಸಲು ಅಪೇಕ್ಷೆಪಡುವವನ ಹಾಗೆ), ಅಧಿಕವಾಗಿ ಅಮೃತ ರಸವೇ ಬಟ್ಟಲಲ್ಲಿ ತುಂಬಿರುವಾಗ ಅದನ್ನು ಪ್ರೀತಿಯಿಂದ ಕುಡಿಯದೆ, ಗಂಜಿಯನ್ನು ಕುಡಿಯಲು ಬಯಸುವವನಂತೆ, ಸಂತೋಷವನ್ನುಂಟುಮಾಡುವ ಪರಿಮಳ ಭರಿತವಾದ ಕಮಲವನ್ನು ಹೊಂದಿಯೂ ಅದನ್ನು ಬಿಟ್ಟು ಗೋರಂಟಿಯ (ಸುಗಂಧವಿಲ್ಲದ) ಹೂವಿಗೆ ಇಚ್ಛೆಪಡುವವನಂತೆ, ಖಂಡಸಕ್ಕರೆಯೇ (ಕಲ್ಲುಸಕ್ಕರೆಯೇ) ಕಯ್ಯಿಗೆ ಬಂದಿರುವಾಗ ಅದನ್ನು ತಿನ್ನದಹಾಗೆ ಬದಿಗೆಸರಿಸಿ ಬೇವನ್ನು ತಿನ್ನುವಹಾಗೆ, ಭೂಮಿಯಲ್ಲಿ ಪರಿಶುದ್ಧವಾದ ಶುಭವನ್ನುಂಟುಮಾಡುವ ಪರಮೇಶ್ವರ ಭಕ್ತಿಮಾರ್ಗವಿರುತ್ತಿರಲು,

ನಮಗೊಲ್ದೆಸಗಿದೆ ಕೇಳೆಲೆ
ಕುಮತಿಕುಲೋತ್ತಂಸ ನಿನ್ನನೇನೆಂದಪ್ಪುದೋ ೪೪

ಭವಸಾಗರಮಂ ದಾಂಟಿಪ
ಶಿವಭಕ್ತಿಯೆನಿಪ್ಪ ತೆಪ್ಪಮಂ ಸಾರದೆ ದು
ರ್ಭವಿಭಜನಮೆಂಬ ತುಂಬಿನ
ನವಫಲದೊಡೆದೊಡಕನೇಕೆ ಪಿಡಿದೆ ಮದಾಂಧಾ ೪೫

ಅಂಗುಳಮಂದರ್ಮಾವರೆಯ ಜೇ
ನಂಗಳದ ನಿಧಾನಮಾದ ಶಿವಭಕ್ತಿಯ ನೀಂ
ಪಿಂಗಿ ಭವಿವೃತ್ತಿದಾಳ್ದು ಕ
ಡಂಗುತೆ ನಿನ್ನನ್ನನನ್ಯನಾವನೊ ಗಾಂಪಂ ೪೬

ಜಲದೊಳ್ನಾಂದೆ ಶಿಲಾಚಯಕ್ಕೆ ಮೃದುಭಾವಂ ಬರ್ಪುದೇ ನೀರ್ಗಳಿಂ
ತೊಳೆಯುತ್ತುಂ ಪಿಳಿದೆತ್ತಿ ಕಂಬಳಿ ಬೆಳರ್ಪಂ ತಾಳ್ವುದೇ ಪಾಲನು
ಜ್ವಳಸರ್ಪಂಗೆಱೆದೋವೆ ನಿರ್ವಿಷತೆಯಂ ಕೆಯ್ಕೊಳ್ವುದೇ ಕಟ್ಟು ನೇ
ರ್ಪಳವಟ್ಟೊಪ್ಪಿರೆ ನೀವೆ ಜಾಯಿಲನ ಬಾಲಂ ನೇರಿತೇನಪ್ಪುದೇ ೪೭

ನಿಂಬಮಿನಿದಪ್ಪುದೇ ಮಧು
ವಿಂ ಬೆರಸುತೆ ಪಾಲನೆಱೆಯೆ ಮೂಢಂಗೆನಿತುಂ

ಅದನ್ನು ತಿರಸ್ಕರಿಸಿ, ಭವಿಗಳಿಗೆ ಉಚಿತವಾದ ಕರ್ಮದ ವಿಧಾನವನ್ನು ಸಂತೋಷದಿಂದ ಮಾಡಿದೆ. ಎಲೈ ದುಷ್ಟಬುದ್ಧಿಯುಳ್ಳವರಲ್ಲಿ ಶ್ರೇಷ್ಠನಾದ ಜಗದೇವನೇ, ಕೇಳು: ನಿನ್ನನ್ನು ಏನೆನ್ನಬೇಕೋ ? (ತಿಳಿಯದು) ೪೫. ಎಲೈ ಮದಾಂಧನಾದ ಜಗದೇವನೇ, ಜನನ ಮರಣಾತ್ಮಕವಾದ ಈ ಸಂಸಾರವೆಂಬ ಸಾಗರವನ್ನು ದಾಟಿಸುವ ಶಿವಭಕ್ತಿಯೆಂಬ ತೆಪ್ಪವನ್ನು ಆಶ್ರಯಿಸದೆ, ದುಷ್ಟರಾದ ಭವಿಜನರ ಭಜನವೆಂಬ (ಸೇವನೆಯೆಂಬ) ಈಸು ಗುಂಬಳಕಾಯಿಯ (ಸೋರೆಕಾಯಿಯ) ಒಡೆದ ಒಡಕನ್ನು ಏಕೆ ಹಿಡಿದಿದ್ದೀಯ? ೪೬. ಗಂಟಲಿನಲ್ಲಿಯೇ ಇರುವ ಅಮೃತದ, ಪಕ್ಕದಲ್ಲಿಯೇ ಇರುವ ಜೇನುತುಪ್ಪದ, ಅಂಗಳ ದಲ್ಲಿಯೇ ಇರುವ ಹೂಳಿಟ್ಟಧನವಾದ ಶಿವಭಕ್ತಿಯನ್ನು ನೀನು ದೂರೀಕರಿಸಿ, ಭವಿ ಜನರಿಗೆ ಉಚಿತವಾದ ವೃತ್ತಿಯನ್ನು ಉತ್ಸಾಹಗೊಂಡು ಸ್ವೀಕರಿಸಿದೆ. ನಿನ್ನಂಥ ಬೇರೆ ಮೂರ್ಖನು ಇನ್ನಾವನೋ ? ೪೭. ನೀರಿನಲ್ಲಿ ಕಲ್ಲುಗಳ ಸಮೂಹವನ್ನು ನಾದಿದರೆ (ಮಿದಿದರೆ) ಮಾರ್ದವತ್ವ (ಮೃದುತ್ವ) ವುಂಟಾದೀತೇ ? ಕಂಬಳಿಯನ್ನು (ಕಪ್ಪಾದ ಕಂಬಳಿಯನ್ನು) ನೀರುಗಳಿಂದ ತೊಳೆಯುತ್ತ ಹಿಂಡಿ ಮೇಲಕ್ಕೆತ್ತಿದರೆ ಬಿಳಿತನವನ್ನು ಹೊಂದೀತೆ ? ಹಾಲನ್ನು ಭಯಂಕರ ಸರ್ಪಕ್ಕೆ ಎರೆದು ಸಂರಕ್ಷಿಸಿದರೆ, ವಿಷವಿಲ್ಲದಿರು ವಿಕೆಯನ್ನು ಪಡೆಯುವುದೇ ? ನೆಟ್ಟಗಾಗುವಂತೆ ನಾಯಿಯಬಾಲವನ್ನು ಕಟ್ಟಿ ನೀವಿದರೆ ಆ ಬಾಲವು ನೆಟ್ಟಗಾಗುವುದೇನು ? -೪೮. ಲೋಕದಲ್ಲಿ ಬೇವಿನ ಮರಕ್ಕೆ ಜೇನು ತುಪ್ಪದಲ್ಲಿ ಹಾಲನ್ನು ಬೆರಸಿ (ಬುಡಕ್ಕೆ) ಎರೆದರೆ ಸವಿ (ರುಚಿ)ಯಾದೀತೇ ? ಏಕಪ್ರಕಾರ

ಬೆಂಬಿಡದೆ ಬೋಧಿಸಿದೊಡಂ
ತ್ರ್ಯಂಬಕಪದಭಕ್ತಿಸೌಖ್ಯಮಾಂಪನೆ ಧರೆಯೊಳ್ ೪೮

ಭವನದ ಮುಂಗಡೆಯೊಪ್ಪುವ
ಕವಿಲೆಯನುಳಿದಧಮ ಶುನಕನಂ ಪೂಜಿಪವೋ
ಲ್ತ್ರಿನಯನನುಳಿದಧಮ ದೈವಮ
ನವಿವೇಕದಿನರ್ಚಿಪಾತನೇಂ ಜಡಮತಿಯೋ ೪೯

ಹರನಂ ಪೂಜಿಸದುಳಿದ
ಧ್ವರಮಂ ಖಲದಕ್ಷನೆಸಗಿ ಪರದೇವತೆಯುಂ
ಪಿರಿದರ್ಚಿಸಿ ದುರ್ಮತಿ ನಿಜ
ಶಿರಮಂ ಪೋಗಾಡಿ ನಗಿಸಿಕೊಂಡಂ ಧರೆಯೊಳ್ ೫೦

ಭೂತಳದೊಳಂದು ಭೂಸುರ
ಜಾತಮನರ್ಚಿಸಿದ ಗೌತಮಂ ಗೋಹತ್ಯಾ
ಪಾತಕಕೊಳಗಾದಂ ಗಡ
ಮಾತೇಂ ದ್ವಿಜಭಜನವೊಳ್ಪನೇಂ ಸಾರ್ಚುಗುಮೋ ೫೧

ತರುಣಿಗೆ ಕಿಡುವುದು ಗಡ ಪಾ
ದರದಿಂ ಚಿರಕಾಲರಚಿತಪತಿಭಕ್ತಿ ಮಹೇ
ಶ್ವರಭಕ್ತಿಯುಳಿಗುಮನ್ಯಾ
ಮರಭಜನದಿನೀಶಭಕ್ತನಾದಂಗಿಳೆಯೊಳ್ ೫೨

ವಾಗಿ (ಬೆನ್ನುಹತ್ತಿ) ಮೂರ್ಖನಾದವನಿಗೆ ಎಷ್ಟೇ ಬೋಧಿಸಿದರೂ ಪರಮೇಶ್ವರನ ಪಾದಭಕ್ತಿಯ ಸೌಖ್ಯವನ್ನು ಹೊಂದುತ್ತಾನೆಯೇ ? ೪೯. ಮನೆಯ ಮುಂಭಾಗದಲ್ಲಿಯೇ ಇರುವ ಹಸುವನ್ನು ಬಿಟ್ಟು ಕೀಳು ನಾಯಿಯನ್ನು ಪೂಜೆಮಾಡುವಹಾಗೆ ಶಿವನನ್ನು ಬಿಟ್ಟು ಅಧಮ ದೇವತೆಯನ್ನು ಅವಿವೇಕದಿಂದ ಪೂಜಿಸುವವನು ಎಂಥ ಮೂರ್ಖನೋ! ೫೦. ದುಷ್ಟಬುದ್ಧಿಯ ನೀಚನಾದ ದಕ್ಷನು ಹರನನ್ನು ಪೂಜಿಸದೆ, ಉಳಿದ ಬೇರೆದೇವತೆಯನ್ನು ಯಜ್ಞಮುಖದಲ್ಲಿ ಘನವಾಗಿ ಪೂಜಿಸಿ, ತನ್ನ ಶಿರವನ್ನು ಕಳೆದು ಕೊಂಡು ಲೋಕದಲ್ಲಿ ನಗೆಗೀಡಾದನು. ೫೧. ಭೂಮಂಡಲದಲ್ಲಿ ಹಿಂದೆ (ದ್ವಾದಶವಾರ್ಷಿಕ ಬರಬಿದ್ದಾಗ ಮರೆಹೊಕ್ಕವರಿಗೆ ಉಪಕಾರ ಮಾಡುವ ಬುದ್ಧಿಯಿಂದ) ಬ್ರಾಹ್ಮಣರ ಸಮೂಹವನ್ನು ಅರ್ಚನೆಮಾಡಿ, ಗೌತಮ ಮಹರ್ಷಿಯು (ಆ ಬ್ರಾಹ್ಮಣರುಗಳೇ ಸೃಷ್ಟಿಸಿದ ಒಂದು) ಗೋವಿನ ಹತ್ಯೆಯನ್ನು ಮಾಡಿದ ಪಾಪಕ್ಕೆ ಒಳಗಾದನಲ್ಲವೇ ! ಹೆಚ್ಚಿಗೆ ಮಾತಿನಿಂದೇನು (ಪ್ರಯೋಜನ) ? ದ್ವಿಜರನ್ನು ಸೇವಿಸಿದವನು ಒಳಿತನ್ನು ಹೊಂದುವನೇನು ? ೫೨. ಹಾದರ ಮಾಡುವುದರಿಂದ ಅನಂತಕಾಲ ಪತಿಭಕ್ತಿಯನ್ನಾಚರಿಸಿದ ಸ್ತ್ರೀಯೂ ಕೆಡುವುದಿಲ್ಲವೇ ! (ಹಾಗೆಯೇ) ಲೋಕದಲ್ಲಿ ಈಶ್ವರ ಭಕ್ತನಾದವನು ಅನ್ಯ ದೇವತೆಗಳ ಭಕ್ತಿಯನ್ನು ಆಚರಿಸುವುದರಿಂದ ಅವನ ಆ ಮಹೇಶ್ವರ ಭಕ್ತಿಯು ನಾಶ

ಪರದೈವ ಭಜನದಿಂ ಭ
ಕ್ತಿರಸಂ ಬಱಿದಪ್ಪುದೊಡೆದ ಕುಂಭದ ಜಲದಂ
ತಿರೆ ಶೀಲಂ ತುಹಿನಂ ಪೊ
ಯ್ದರವಿಂದದವೋಲ್ವಿನಷ್ಟಮಪ್ಪುದು ನಿಜದಿಂ ೫೩

ಹರಭಕ್ತಂಗೊರ್ವಂಗಾ
ದರದಿಂದುಣಲಿತ್ತಸುಕೃತಕೆಣೆಯಲ್ತು ಮಹೀ
ಸುರಕೋಟಿಗುಣಲ್ಬಡಿಸುತೆ
ನೆರಪಿದ ಸುಕೃತಂ ದಲೆಂಬುದಾಗಮವಚನಂ ೫೪

ಸುವಿವೇಕ ಚಂದ್ರಜಲಧರ
ಮವಿವೇಕ ಮಹೀಜಬೀಜಮಘಘೂಕಸಮು
ತ್ಸವಕರ ತಿಮಿರಂ ಭವ ಘೋ
ರ ವಿಷೋರಗದಂತಮಲ್ತೆ ಭವಿಸಂಸರ್ಗಂ ೫೫

ವ॥ ಎಂದಿಂತು ಭಕ್ತಿರತ್ನಾಕರು ನುಡಿದಾಕ್ಷೇಪೋಕ್ತಿಗೇಳ್ದು ಜಗದೇವಂ ಬೆರ್ಚಿ ಬೆಗಡು ಗೊಂಡು ನಿಜಾಪರಾಧಮಂ ನೆನೆದು ಬೆಮರ್ತು ಕಂಪಿಸಿ ಶೋಕಾಕುಲೀಕೃತಚಿತ್ತನಾಗಿ ಸಾಷ್ಟಾಂಗವೆಱಗಿ ಗಣಸಭೆಗೆ ಕೆಯ್ಗಳಂ ಮುಗಿದು ನಿಂದು—

ವಾಗುವುದು. ೫೩. ಒಡೆದ ಕುಂಭದಲ್ಲಿನ ನೀರಿನಂತೆ ಅನ್ಯದೈವವನ್ನು ಭಜಿಸುವಿಕೆ ಯಿಂದ ಈಶ್ವರನ ಭಕ್ತಿರಸವೆಂಬುದು ಬರಿದಾಗಿ ಹೋಗುವುದು. ಅವನ ಶೀಲವು ಹಿಮದಿಂದ ಮುಸುಕಲ್ಪಟ್ಟ ಕಮಲದ ಹಾಗೆ ನಿಜವಾಗಿಯೂ ನಷ್ಟಹೊಂದುವುದು, ೫೪. ಆಗಮ ವಚನವು ಕೋಟಿಜನ ದ್ವಿಜರಿಗೆ ಊಟಕ್ಕಿಟ್ಟು ಸಂಪಾದಿಸಿದ ಪುಣ್ಯವು ನಿಜ ವಾಗಿಯೂ ಓರ್ವ ಶಿವಭಕ್ತನಿಗೆ ಪ್ರೀತಿಯಿಂದ ಊಟಕ್ಕೆ ಇಕ್ಕಿದ ಪುಣ್ಯಕ್ಕೆ ಸಮನಲ್ಲ ವೆನ್ನುವುದು. ೫೫. ಭವಿಗಳ ಸಂಪರ್ಕವು (ಲಿಂಗವಿಹೀನರ ಸಂಪರ್ಕವು) ಒಳ್ಳೆಯ ವಿವೇಕವೆಂಬ ಚಂದ್ರನಿಗೆ ಮೋಡದಹಾಗೆ ; ಅವಿವೇಕವೆಂಬ ಗಿಡಕ್ಕೆ ಬೀಜವಿದ್ದ ಹಾಗೆ ; ಪಾಪವೆಂಬ ಗೂಗೆಗೆ (ಗೂಬೆಗೆ) ಸಂತೋಷವನ್ನುಂಟುಮಾಡುವ ಕತ್ತಲೆಯಂತೆ ; ಸಂಸಾರವೆಂಬ (ಜನನ ಮರಣಾತ್ಮಕವಾದ ಸಂಸಾರವೆಂಬ) ಭಯಂಕರ ವಿಷದಿಂದ ಕೂಡಿದ ಸರ್ಪದ ಹಲ್ಲು ಇದ್ದಹಾಗೆ. ವ॥ ಹೀಗೆಂದು ಭಕ್ತಿಗೆ ಸಮುದ್ರದೋಪಾದಿ ಯಲ್ಲಿರುವ ಬಸವೇಶ್ವರನು ನುಡಿದ ಆಕ್ಷೇಪವನ್ನುಂಟುಮಾಡುವ ಮಾತನ್ನು ಕೇಳಿ ಜಗದೇವನು ಬೆಚ್ಚಿಬಿದ್ದು, ಗಾಬರಿಗೊಂಡು ತಾನುಮಾಡಿದ ಅಪರಾಧವನ್ನು ಚಿಂತಿ ಸುತ್ತ ಮೈಬೆವರಿ, ನಡುಗುತ್ತ ದುಃಖದಿಂದ ಆಕುಲಗೊಂಡ ಚಿತ್ತವುಳ್ಳವನಾಗಿ (ಬಸವೇಶ್ವರನಿಗೆ) ಸಾಷ್ಟಾಂಗ ಪೂರ್ವಕ ನಮಸ್ಕಾರಮಾಡಿ, ಶಿವಗಣಗಳ ಸಭೆಗೆ ಕೈ

ಅತಿಪಾಪಾತುರನಂ ವಿನಷ್ಟಮತಿಯಂ ದುಷ್ಟಾತ್ಮನಂ ಧೂರ್ತಸಂ
ಗತನಂ ದುರ್ಮುಖನಂ ದುರುಕ್ತಿಪರನಂ ದುರ್ಭಾಗ್ಯನಂ ಸದ್ವ್ರತ
ಚ್ಯುತನಂ ಸತ್ಯವಿಹೀನನಂ ಖಲನನಾತ್ಮದ್ರೋಹಿಯಂ ದುರ್ಗುಣಾ
ನ್ವಿತನಂ ನಿತ್ಯ ಕೃತಾಪರಾಧಶತನಂ ನಿರ್ಲಜ್ಜನಂ ನೀಚನಂ ೫೬

ಶಿವಭಕ್ತಿದೂರನಂ ಶಾಂ
ಭವಮಹಿಮೆಯುನಱಿಯದಜ್ಞನಂ ತಾಮಸನಂ
ಭವಪಂಕಮಗ್ನಪಶುವಂ
ತವೆ ರಕ್ಷಿಪುದೆನ್ನನೆಲೆ ಕೃಪಾರಸಜಲಧೀ ೫೭

ವ॥ ಎಂದತಿ ದೈನ್ಯಂ ಮಿಗೆ ಬಿನ್ನೈಸಿ ಮತ್ಕೃತಾಪರಾಧೋಚಿತಪ್ರಾಯಶ್ಚಿತ್ತವೊಂದಂ ದಯೆಯಿಂ ನಿರೂಪಿಸಲ್ವೇಳ್ಕುಮೆನೆ ಶರಣಗಣಾಜ್ಞೆಯಿಂ ಶಿವಜ್ಞಾನಧುರೀಣನಿಂತೆಂದಂ—

ಜಗದೇವ ಕೇಳ್ವುದೆಸೆವೀ
ನಗರದೊಳೊಗೆವುದು ವಲಂ ಶಿವದ್ರೋಹಮದಂ
ನೆಗಳ್ದನನಂತಕಪುರಮಂ
ಪುಗಿಸೆಲೆ ನೀಂ ನೆಗಳ್ದ ದೋಷಕಿದು ಪರಿಹಾರಂ ೫೮

ಮುಗಿದು ನಿಂತುಕೊಂಡು—೫೬-೫೭. ಅತ್ಯಂತ ಪಾಪದಿಂದ ಆತುರಗೊಂಡವನೂ, ಹಾಳಾದಬುದ್ಧಿಯುಳ್ಳವನೂ, ದುಷ್ಟಆತ್ಮವುಳ್ಳವನೂ, ನೀಚರಾದವರ ಸಂಗವನ್ನು ಮಾಡಿದವನೂ, ಕೆಟ್ಟಮುಖವುಳ್ಳವನೂ, ದುರ್ಭಾಷೆಯಿಂದಕೂಡಿದವನೂ, ಕೆಟ್ಟಭಾಗ್ಯವುಳ್ಳವನೂ, ಶ್ರೇಷ್ಠವಾದ ಶಿವವ್ರತದಿಂದ ದೂರನಾದವನೂ, ಸತ್ಯದಿಂದ ದೂರನಾದವನೂ, (ಜಾರಿದವನೂ), ದುಷ್ಟನೂ, ಆತ್ಮ ದ್ರೋಹಮಾಡಿಕೊಂಡವನೂ, ದುರ್ಗುಣಗಳಿಂದ ಕೂಡಿದವನೂ, ನಿತ್ಯವೂ ನೂರಾರು ಅಪರಾಧಗಳನ್ನು ಮಾಡುವವನೂ, ನಾಚಿಕೆಯಿಲ್ಲದವನೂ, ನೀಚಬುದ್ಧಿಯವನೂ, ಶಿವಭಕ್ತಿಯಿಂದ ದೂರವಾದವನೂ, ಶಿವನ ಸಂಬಂಧವಾದ ಮಹಿಮೆಯನ್ನು ತಿಳಿಯದ ಅಜ್ಞಾನಿಯೂ ತಮೋಗುಣವುಳ್ಳವನೂ, ಸಂಸಾರವೆಂಬ ಕೆಸರಿನಲ್ಲಿ ಮುಳುಗಿದ ಪಶುವೂ ಆಗಿರುವ ನನ್ನನ್ನು ಎಲೈ ಕೃಪಾನಿಧಿಯಾದ ಬಸವೇಶ್ವರನೇ ನನ್ನನ್ನು ಚೆನ್ನಾಗಿ ರಕ್ಷಣೆ ಮಾಡು. ॥ವ॥ ಎಂದು ಅತ್ಯಂತ ದೀನಭಾವದಿಂದ ವಿಶೇಷವಾಗಿ ಪ್ರಾರ್ಥಿಸಿಕೊಂಡು ನಾನು ಮಾಡಿದ ತಪ್ಪಿಗೆ ಸಮಾನವಾದ ಒಂದು ಪ್ರಾಯಶ್ಚಿತ್ತವನ್ನು ಕೃಪೆಯಿಟ್ಟು ಅಪ್ಪಣೆಕೊಡಿಸಬೇಕೆಂದು ಎನ್ನಲು ಶಿವಶರಣರುಗಳ ಆಜ್ಞೆಯನ್ನನುಸರಿಸಿ ಶಿವಜ್ಞಾನಧುರೀಣನಾದ ಬಸವೇಶ್ವರನು ಈ ಪ್ರಕಾರವಾಗಿ ಹೇಳಿದನು. ೫೮. ಜಗದೇವನೇ ಕೇಳುವುದು : ಶೋಭಿಸುವ ಈ ಕಲ್ಯಾಣನಗರದಲ್ಲಿ ಒಂದು ಶಿವದ್ರೋಹದ ಪ್ರಸಂಗವು ನಿಶ್ಚಯವಾಗಿ ಉಂಟಾಗುವುದು ; ಅದನ್ನು ಮಾಡಿದವನನ್ನು ನೀನು ಯಮನ ಪಟ್ಟಣಕ್ಕೆ

ವ॥ ಎನೆ ದೇವ ಮಹಾಪ್ರಸಾದಮೆಂತೆ ಮಾಳ್ಪೆನೆಂದೆಱಗಿ ತದ್ದತ್ತ ವೀರ ತಾಂಬೂಲಮಂ ಕೊಂಡು ವಿಜಯೋದ್ಧತಂ ಬಸವಪ್ರಮುಖ ಶಿವಗಣಂಗಳ್ಗೆ ದಯೆ ಪುಟ್ಟುವಂತೆ ದಾಸಭಾವದೋಱಿ ಪಲಗಳ್ದು ಮೆಯ್ಯಿಕ್ಕಿ ನಿಜಗೃಹಕ್ಕೆ ಬಿಜಯಂಗೆಯ್ಸಿ ತಂದು ಸಾದರಂ ಮಿಗೆ ಪಾದಪ್ರಕ್ಷಾಳನಂಗೆಯ್ದು ಪಾದೋದಕಂಡಳೆದು ಸಾಂಗಮೆನೆ ತತ್ಪೂಜೆಯ ನೋಜೆಯಿಂ ವಿರಚಿಸಿದಾಗಳ್—

ಫಣಿರಾಡ್ಭೂಷಣನ ಮಹಾ
ಗಣತತಿ ಜಗದೇವರಚಿತ ಪೂಜೋತ್ಸವದಿಂ
ತಣಿವೇಱಿ ಶಿವನ ಸುಖಸಂ
ದಣಿವಡೆದೊಪ್ಪಿರ್ದುದತುಳ ಸಂಭ್ರಮದಿಂದಂ ೫೯

ವ॥ ಆ ಪ್ರಸ್ತಾವದೊಳ್—

ಶರಣಾನಂದಾಬ್ಧಿಚಂದ್ರಂ ಶಿವಗಣಚರಣಾಂಭೋಜ ಪೂಜಾವಿತಂದ್ರಂ
ಕರುಣಾಪೂರ್ಣಾಂತರಂಗಂ ಕಲಿತನಿಜಶಿವಾದ್ವೈತ ವಿದ್ಯಾಪ್ರಸಂಗಂ
ಪರಮಾರ್ಥಜ್ಞಾನದೀಪಂ ಪ್ರಬಳಜಗದುಪಾರೂಢ ಮಾಯಾವಿಲೋಪಂ
ಗುರುರೂಪಂ ರಂಜಿಸಿರ್ದಂ ಗುಣನಿಧಿವಿತತಾನಂದಸಾಂದ್ರಂ ವೃಷೇಂದ್ರಂ ೬೦

ಹೊಗಿಸು. ನೀನುಮಾಡಿದ ದೋಷಕ್ಕೆ ಇದೇ ಪರಿಹಾರ ವ॥ ಎಂದು ಹೇಳಲಾಗಿ ದೇವಾ, ಮಹಾಪ್ರಸಾದ ಹಾಗೇ ಮಾಡುತ್ತೇನೆ ಎಂದು ನಮಸ್ಕಾರಮಾಡಿ, ಆ ಬಸವೇಶ್ವರನಿಂದ ಕೊಡಲ್ಪಟ್ಟ ವೀರ ತಾಂಬೂಲವನ್ನು ಸ್ವೀಕರಿಸಿ, (ಈಗಾಗಲೇ) ವಿಜಯದಿಂದ ಕೊಬ್ಬಿದವನಂತಾಗಿ ಬಸವಣ್ಣನೇ ಮೊದಲಾದ ಶಿವಗಣದವರಿಗೆ ದಯೆಯು ಹುಟ್ಟುವ ರೀತಿಯಲ್ಲಿ ಸೇವಕತನದ ಮನೋಭಾವವನ್ನು ವ್ಯಕ್ತಪಡಿಸಿ, ಮತ್ತೊಮ್ಮೆ ನಮಸ್ಕರಿಸಿ, ತನ್ನ ಮನೆಗೆ ಬರುವಂತೆಮಾಡಿ ಬಂದು ಅತ್ಯಂತ ಸಂತೋಷದಿಂದ ಅವರ ಪಾದಗಳನ್ನು ತೊಳೆದು ಯಥಾಸಾಂಗವಾಗಿ ಅವರ ಪೂಜೆಯನ್ನು ಕ್ರಮವಾಗಿ ಮಾಡಿದನು.—ಆಗ ೫೯. ಆದಿಶೇಷನೇ ಆಭರಣವಾಗಿ ಉಳ್ಳ ಪರಮೇಶ್ವರನ ಮಹಾಶರಣ ಸಮೂಹವು ಜಗದೇವನು ಮಾಡಿದ ಪೂಜೋತ್ಸವಾದಿಗಳಿಂದ ಸಂತೃಪ್ತರಾಗಿ ಶಿವಸಂಬಂಧವಾದ ಸೌಖ್ಯಸಮೂಹವನ್ನು ಪಡೆದು, ಅತ್ಯಂತ ಸಂಭ್ರಮದಿಂದ ಶೋಭಿಸುತ್ತಿತ್ತು. ವ॥ ಆ ಸಮಯದಲ್ಲಿ—೬೦. ಶಿವಶರಣರ ಆನಂದವೆಂಬ ಸಮುದ್ರಕ್ಕೆ ಚಂದ್ರನಂತಿರುವ, ಶಿವಶರಣಸಮೂಹದ ಚರಣಕಮಲಗಳ ಪೂಜೆಯಲ್ಲಿ ಆಲಸ್ಯರಹಿತನಾದ, ಕಾರುಣ್ಯದಿಂದ ಪೂರ್ಣಗೊಂಡ ಹೃದಯವುಳ್ಳ, ಸತ್ಯಶುದ್ಧವಾದ ಶಿವಾದ್ವೈತ ತತ್ತ್ವ ವಿದ್ಯಾಪ್ರಸಂಗದಿಂದ ಕೂಡಿದ, ಪಾರಮಾರ್ಥಿಕ ಜ್ಞಾನಕ್ಕೆ ದೀಪದಂತಿರುವ, ಜಗತ್ತನ್ನೆಲ್ಲ ಆವರಿಸಿರುವ ಪ್ರಬಲವಾದ ಮಾಯೆಯನ್ನು

ವಿದ್ಯಾರೂಪೇ ವಿಧಿವಿಧುವಧೂವಂದ್ಯಮಾನಾಂಘ್ರಿಪದ್ಮೇ
ವಿದ್ಯುದ್ವಲ್ಲೀಪ್ರತಿಭಟಕಟಾಕ್ಷಚ್ಛಟಾಭಾಸಮಾನೇ
ಹೃದ್ಯಾಮರ್ತ್ಯಸ್ತುತಗುಣಗಣೇ ವಿಶ್ವಲೋಕೈಕಮಾತೇ
ಸದ್ಯೋಗೀಂದ್ರಪ್ರಕರವರದೇ ಪಾಲಿಸೆನ್ನಂ ಭವಾನೀ ೬೧

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ
ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ
ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ
ಶ್ರೀಷಡಕ್ಷರಿದೇವಭಕ್ತಿವಿರಚಿತ
ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ಬಸವೋಪದೇಶ ಕಥನಂ
ಏಕಚತ್ವಾರಿಂಶಾಶ್ವಾಸಂ ಸಮಾಪ್ತಂ.
ಅಂತು ಆಶ್ವಾಸ ೪೧ಕ್ಕೆ ಪದಗಣನೆ ೩೪೧೭ಕ್ಕೆ ಮಂಗಳಮಹಾ ಶ್ರೀ॥

ಇಲ್ಲದಂತೆ ಮಾಡಿದ, ಗುರುಸ್ವರೂಪನಾದ, ಸದ್ಗುಣಗಳಿಗೆ ನಿಧಿಯೆನಿಸಿದ, ವಿಸ್ತಾರವಾದ ಆನಂದದಿಂದ ತುಂಬಿದ ಬಸವೇಶ್ವರನು ಶೋಭಿಸುತ್ತಿದ್ದನು. ೬೧. ವಿದ್ಯಾಸ್ವರೂಪಳೇ, ಚತುರ್ದಶವಿದ್ಯೆಗಳಿಗೆ ಆಸ್ಪದಳೆನಿಸಿದವಳೇ, ಬ್ರಹ್ಮವಿಷ್ಣುಗಳ ಹೆಂಡತಿಯರುಗಳಿಂದ ನಮಸ್ಕರಿಸಿಕೊಳ್ಳಲ್ಪಡುವ ಪಾದಕಮಲವುಳ್ಳವಳೇ, ಮಿಂಚಿನಬಳ್ಳಿಯನ್ನು ಪ್ರತಿಭಟಿಸುವಂತಹ ಕಡೆಗಣ್ಣುಗಳ ಕಾಂತಿಗಳ ಸಮೂಹದಿಂದ ಪ್ರಕಾಶಿಸುವವಳೇ, ಮನೋಹರರಾದ ದೇವತೆಗಳಿಂದ ಸ್ತುತಿಸಿಕೊಳ್ಳಲ್ಪಡುವ ಸದ್ಗುಣಸಮೂಹವುಳ್ಳವಳೇ, ಸಮಸ್ತ ಬ್ರಹ್ಮಾಂಡಕ್ಕೆ ಏಕೈಕ ಮಾತೆಯೆನಿಸಿದವಳೇ ಪವಿತ್ರರಾದ ಯೋಗಿಶ್ರೇಷ್ಠರಸಮೂಹಕ್ಕೆ ವರಗಳನ್ನು ದಯಪಾಲಿಸುವವಳೇ, ಭವಾನಿಯೇ ನನ್ನನ್ನು ರಕ್ಷಿಸು—

ನಾಲ್ವತ್ತೊಂದನೆಯ ಆಶ್ವಾಸವು ಸಮಾಪ್ತವಾಯಿತು

# ದ್ವಾಚತ್ವಾರಿಂಶಾಶ್ವಾಸಂ

ಶ್ರೀಶಾಂಭವೀಶುಭಾಂಗನಿ
ವೇಶಿತವಾಮಾಂಗನಂಗಜಾಹಿತನುರಗಾ
ಧೀಶಧರನಮಳಗುಣನಿಧಿ
ಕೋಶಂ ಕುಡುಗೆಮಗೆ ಭಕ್ತಿಯುಂ ಶಿವಲಿಂಗಂ ೧

ವ॥ ನಿಜಾಂತಃಪುರದೊಳ್ ಶಿವಗಣಾನುಭವಗೋಷ್ಠಿಯೊಳ್ ನೆಲಸಿ ಮಹಿಮಾಕ[1]ರಂ ಸುಖಮಿರ್ಪನ್ನೆಗಮಾ ನಗರಿಯೊಳಲ್ಲಯ್ಯನುಂ ಮಧುವಯ್ಯನುಮೆನೆ ಪೆಸರ್ವಡೆದು—

ಗುರುಚರಲಿಂಗಾರಾಧಕ
ರುರುತರ ಶೀಲವ್ರತಾನ್ವಿತರ್ಜಿತಮಾಯು
ರ್ಪರಮಶಿವತತ್ತ್ವವಿದರೀ
ಶ್ವರಭಕ್ತವರೇಣ್ಯರೆಸೆವರಮಳಚರಿತ್ರರ್ ೨

ವ॥ ಅಂತವರಿರ್ವರುಮನ್ಯೋನ್ಯಸಮಾರೂಢಸೌಹಾರ್ದದಿಂ ಕೆಲವಾನುಂ ದಿವಸಂ ಶಿವಭಕ್ತಿ ಸೌಖ್ಯದಿನೊಪ್ಪುತ್ತುಮಿರ್ಪಿನಮಲ್ಲಿ ತಚ್ಚರಿತ್ರವೈಭವಮಂ ಕಂಡಸೂಯೆಯಿಂ ಸೈರಿಸಲಾರದೆ ಪಿಸುಣ್ಗೆಡೆದ ಪರಸಮಯಿಗಳ ಕುಹಕೋಕ್ತಿಯುಂ ಕೇಳ್ದು—

## ಅಲ್ಲಯ್ಯ ಮಧುವಯ್ಯಗಳ ಕಥೆ

೧. ಮಂಗಳ ಕರಳಾದ ಪಾರ್ವತೀದೇವಿಗೆ ತನ್ನ ಶುಭಕರವಾದ ಎಡಗಡೆಯ ದೇಹದಲ್ಲಿ ಆಶ್ರಯವಿತ್ತವನೂ, ಪಾರ್ವತಿಗೆ ಹಿತವಾಗಿರುವವನೂ, ಸರ್ಪಗಳ ಒಡೆಯನಾದ ಆದಿಶೇಷನನ್ನು ಧರಿಸಿದವನೂ, ಪವಿತ್ರವಾದ ಗುಣಗಳ ಸಮೂಹಕ್ಕೆ ಕೇಶರೂಪನಾಗಿರುವವನೂ ಆದ ಶಿವಲಿಂಗನು ನಮಗೆ ಭಕ್ತಿಯನ್ನು ಕೊಡಲಿ. ವ॥ ಮಹಿಮಾಕರನಾದ ಬಸವಣ್ಣನು ತನ್ನ ಅಂತಃಪುರದಲ್ಲಿ ಶಿವಶರಣರುಗಳೊಡನೆ ಶಿವಾನುಭವ ಗೋಷ್ಠಿಯಲ್ಲಿ ಸುಖದಿಂದ ಇರುತ್ತಿರುವಾಗ ಆ ಕಲ್ಯಾಣ ನಗರದಲ್ಲಿ ಅಲ್ಲಯ್ಯನೂ, ಮಧುವಯ್ಯನೂ ಎಂದು ಪ್ರಸಿದ್ಧರಾಗಿ—೨. ಗುರು-ಲಿಂಗ-ಜಂಗಮರ ಆರಾಧಕರೂ, ಶ್ರೇಷ್ಠವಾದ ಶೀಲ (ನಡತೆ) ವುಳ್ಳವರೂ, ಮಾಯೆಯನ್ನು ಜಯಿಸಿದವರೂ, ಪವಿತ್ರವಾದ ಶಿವತತ್ತ್ವವನ್ನು ಬಲ್ಲವರೂ, ಪರಮೇಶ್ವರನ ಭಕ್ತಶ್ರೇಷ್ಠರೂ ಆದ ಪರಿಶುದ್ಧ ಚರಿತೆಯುಳ್ಳವರು ಶೋಭಿಸುತ್ತಿದ್ದರು. ವ॥ ಈ ಪ್ರಕಾರವಾಗಿ ಅವರೀರ್ವರೂ ಅನ್ಯೋನ್ಯತೆಯಿಂದ ಕೂಡಿದ ಸ್ನೇಹಭಾವದಿಂದ ಅನೇಕದಿವಸಗಳು ಶಿವನಸಂಬಂಧದ ಭಕ್ತಿಯ ಸುಖದಿಂದ ಶೋಭಿಸುತ್ತಿರುವಷ್ಟರಲ್ಲಿ ಅವರ ಚರಿತ್ರೆಯ ವೈಭವವನ್ನು ಕಂಡು ಮಾತ್ಸರ್ಯದಿಂದ ಸೈರಿಸಲಾರದವರಾಗಿ ಚಾಡಿಯನ್ನು ಹೇಳಿದ ಪರಸಮಯದವರ ಕಪಟ

1 ಕಾ(ಜ)

ತಿಳಿದಿರ್ದುಂ ವೃಷಭೇಂದ್ರನ
ಬಳವನ್ಮಹಿಮೆಯನಘಾಗ್ನಿಶೋಷಿತಸಂವಿ
ಜ್ಜಳ ಬಿಜ್ಜಳನಾ ಭಕ್ತರ
ವಿಳಸದ್ರುಚಿಲೋಚನಂಗಳಂ ತೆಗೆಯಿಸಿದಂ ೩

ವ॥ ಆಗಳಾ ವಾರ್ತೆಗೇಳ್ದು ಕನಲ್ದು ವೃಷಭೇಂದ್ರಾದಿ ಗಣಂಗಳೊಂದೆಡೆಯೊಳೊಂದುಗೂಡಿ ನಿಜಾನುಚರರಿಂ ತದ್ಭಕ್ತರಂ ಬರಿಸಿ ಯಥೋಚಿತ ಸನ್ಮಾನಂಗೆಯ್ದು—

ಪರಮಶಿವಗಣದನುಜ್ಞೆಯ
ನಿರದಾಂತು ನಿರೀಕ್ಷಿಸುತ್ತೆ ತದ್ಭಕ್ತರ್ಗಾ
ದರದಿಂ ಕಣ್ಗಳನಿತ್ತಂ
ಕರುಣಾನಿಧಿ ಬಸವನಸಮನನುಪಮಮಹಿಮಂ ೪

ವ॥ ಅಂತಿತ್ತು ಜಗನ್ನುತನೊಪ್ಪಿರೆ ತತ್ಪುರದ ಪೌರಜನಂ ಗುಜುಗುಜುಂಗೊಂಡಲ್ಲಲ್ಲಿ ನೆರೆದು—

ಯಮಪುರಿಗೆಯ್ದುವ ಸಮಯಂ
ಸಮನಿಸಿದುದಿವಂಗೆ ನೃಪತಿಗಲ್ಲದೊಡೀ ದ್ರೋ
ಹಮನಳ್ಕದೆ ಮಾಳ್ಪನೆ ಮುಳಿ
ಯೆ ಮಹೇಶ್ವರಭಕ್ತರುಳಿವರಾರ್ಧಾರಿ[1]ಣಿಯೊಳ್ ೫

ವಚನಗಳನ್ನು ಕೇಳಿ—೩. ಬಸವಣ್ಣನ ಬಲವತ್ತರವಾದ ಮಹಿಮೆಯನ್ನು ತಿಳಿದಿದ್ದರೂ ಕೂಡ, ಪಾಪವೆಂಬ ಬೆಂಕಿಯಿಂದ ತನ್ನ ತಿಳುವಳಿಕೆಯೆಂಬ ಜಲವನ್ನು ಶೋಷಣೆಗೊಳಿಸಿಕೊಂಡು (ಬತ್ತಿಸಿಕೊಂಡು), ಬಿಜ್ಜಳನು ಅಲ್ಲಯ್ಯಮಧುವಯ್ಯರೆಂಬ ಶಿವಭಕ್ತರುಗಳ ಪ್ರಕಾಶಮಾನವಾದ ಕಾಂತಿಯುಳ್ಳ ಕಣ್ಣುಗಳನ್ನು ತೆಗೆಸಿಹಾಕಿದನು. ವ॥ ಆಗ ಆ ವಾರ್ತೆಯನ್ನು ಕೇಳಿ, ಕೋಪಗೊಂಡು ಬಸವೇಶ್ವರನೇ ಮೊದಲಾದ ಶಿವಗಣಗಳು ಒಂದುಕಡೆಯಲ್ಲಿ ಒಟ್ಟುಗೂಡಿ, ತಮ್ಮ ಅನುಚರರುಗಳಿಂದ ಆ ಭಕ್ತರುಗಳನ್ನು ಬರಮಾಡಿಕೊಂಡು ಉಚಿತವಾದ ಸನ್ಮಾನವು ಹೇಗೋಹಾಗೆಮಾಡಿ ೪. ಕರುಣಾನಿಧಿಯೂ, ಅನುಪಮ ಮಹಿಮಾ ಶಾಲಿಯೂ ಆದ ಬಸವಣ್ಣನು ಪವಿತ್ರರಾದ ಶಿವಭಕ್ತಗಣದ ಆಜ್ಞೆಯನ್ನು ತಪ್ಪದೆ ಧರಿಸಿ ಆ ಭಕ್ತರುಗಳಿಗೆ ಸಂತೋಷದಿಂದ ಕಣ್ಣುಗಳನ್ನುಕೊಟ್ಟನು. ವ॥ ಈ ರೀತಿ ಕಣ್ಣುಗಳನ್ನು ಕೊಟ್ಟು ಜಗತ್ತಿನ ಜನರಿಂದ ಶ್ಲಾಘಿಸಲ್ಪಡುವ ಬಸವೇಶ್ವರನು ಶೋಭಿಸುತ್ತಿರಲು, ಆ ಪಟ್ಟಣದ ನಾಗರಿಕಜನರು ಅಲ್ಲಲ್ಲಿ ಗುಜುಗುಜು ಎನ್ನುತ್ತ ೫. ಈ ಮಹಾರಾಜನಾದ ಬಿಜ್ಜಳನಿಗೆ ಯಮ ಪುರಕ್ಕೆ ಹೋಗುವ ಸಮಯವು ಕೂಡಿಬಂದಿರುವುದು, ಅಲ್ಲದಿದ್ದರೆ (ಭಕ್ತರ ಕಣ್ಣನ್ನು ಕೀಳಿಸುವಂತಹ) ದ್ರೋಹವನ್ನು ಭಯಪಡದೆ ಮಾಡಿಸುತ್ತಿದ್ದನೇ ? ಲೋಕದಲ್ಲಿ ಮಹೇಶಭಕ್ತರು ಕೋಪಗೊಂಡರೆ

1 ರು (ಮು)

ಹರಶರಣರಳವನವರುರು
ತರಮಹಿಮೆಯುನೆಯ್ದೆ ಮುನ್ನ ಕಂಡಱಿಯನೆ ಭೂ
ವರನಿಂತು ಶಿವದ್ರೋಹಮ
ನಿರದೆಸಗಿದನಕಟ ಕುಮತಿಯಿನ್ನುಳಿದಪನೇ ೬

ವ॥ ಎಂದಲ್ಲಿ ನುಡಿವುತ್ತುಮಿರ್ಪಿನಮಾ ಶರಣವರೇಣ್ಯರೆಲ್ಲಕೋಪೋದ್ದೀಪಿತಹೃದಯರೀ ಪೊಳಲೊಳಿನ್ನಿರಲ್ತಕ್ಕುದಲ್ತೆ[1]ಂದು ನಿರ್ಧರಿಸಿ ಜಗದೇವನಂ ಬಳಿಯಟ್ಟಿ ಬರಿಸಿ ಬಿಜ್ಜಳನೆಸಗಿದ ಪರಾಧಮನವಂಗೊರೆದು—

ಅಂದಿತ್ತ ನಿನ್ನ ಭಾಷೆಗೆ
ಬಂದುದು ದಿನಮಿೂ ಮಹೇಶ್ವರದ್ರೋಹಿಯನೋ
ರಂದದೆ ಸಂಹರಿಪುದು ನೀ
ನೆಂದಾಗಳ್ಬೆಸನನಿತ್ತು ಕಳುಪಿದರವನಂ ೭

ವ॥ ಅಂತು ಕಳುಪಿ ಮಾಚಿದೇವನುಂ ಮಾದಿರಾಜನುಂ ಸುರಗಿಯ ಚೌಡಯ್ಯನುಂ ಮುಸುಟಿಯ ಚೌಡಯ್ಯನುಂ ಕಿನ್ನರ ಬೊಮ್ಮಯ್ಯನುಂ ಕನ್ನದ ಬೊಮ್ಮಯ್ಯನುಂ ಕಲಕೇತಯ್ಯನುಂ ಕರುಳಕೇತಯ್ಯನುಂ ಮುಖ್ಯರಾದ ಶರಣರ್ಜರಲಿಂಗಸಂದೋಹದೊಡನೆ ಬಿಜ್ಜಳನಂ ಶಪಿಯಿಸಿ ಬಸವರಸನೊಡನೆ ಸಂಗಮಸ್ಥಾನಮೆನಿಪ ಕಪ್ಪಡಿಗೇಳ್ತರುತ್ತುಮಿರ್ದರಿತ್ತಲ್—

ಉಳಿಯುವರು ಯಾರು ? ೬. ದುಷ್ಟಬುದ್ಧಿಯ ಈ ಮಹಾರಾಜನು ಈ ಮೊದಲು ಪರಮೇಶ್ವರನ ಭಕ್ತರಾದವರ ಮಹಿಮೆಯನ್ನು ನೋಡಿ ತಿಳಿಯದವನೇ ? ಅಯ್ಯೋ ! ಈ ರೀತಿಯ ಶಿವದ್ರೋಹವನ್ನು ಮಾಡಿಪನಲ್ಲವೇ ! ಇನ್ನು ಇವನು ಉಳಿಯುವನೇ ? ವ॥ ಹೀಗೆನ್ನುತ್ತ ಅಲ್ಲಲ್ಲಿ ನುಡಿಯುತ್ತಿರುವಷ್ಟರಲ್ಲಿ ಎಲ್ಲ ಶರಣರೂ ಕೋಪದಿಂದ ಜಾಜ್ವಲ್ಯಮಾನವಾದ ಹೃದಯವುಳ್ಳವರಾಗಿ ಈ ಪಟ್ಟಣದಲ್ಲಿ ಇನ್ನು ಇರುವುದು ಯೋಗ್ಯವಲ್ಲವೆಂದು ನಿರ್ಧಾರಮಾಡಿ, ಜಗದೇವನನ್ನು ಕರೆಯಕಳುಹಿಸಿ ಬರಮಾಡಿಕೊಂಡು, ಬಿಜ್ಜಳನು ಮಾಡಿದ ಅಪರಾಧವನ್ನು ಅವನಿಗೆ ತಿಳಿಸಿ ೭. ಹಿಂದೆ ನೀನು ಕೊಟ್ಟ ಭಾಷೆಗೆ (ಯೋಗ್ಯ) ದಿನವು ಬಂದಿತು. ಈ ಮಹೇಶ್ವರ ದ್ರೋಹಿಯಾದ ಬಿಜ್ಜಳನನ್ನು ನೀನು ಯಥಾರೀತಿಯಲ್ಲಿ ಸಂಹರಿಸಬೇಕು ಎಂದು ಆಗ ಅಪ್ಪಣೆಮಾಡಿ ಅವನನ್ನುಕಳುಹಿಸಿ ಕೊಟ್ಟರು. ವ॥ ಈ ರೀತಿ ಹೇಳಿಕಳುಹಿಸಿ, ಮಡಿವಳಮಾಚಿದೇವ, ಮಾದಿರಾಜ, ಸುರಗಿಯಚೌಡಯ್ಯ, ಮುಸುಟಿಯಚೌಡಯ್ಯ,ಕಿನ್ನರಿಯಬೊಮ್ಮಯ್ಯ, ಕನ್ನದಬೊಮ್ಮಯ್ಯ, ಕಲಕೇತಬೊಮ್ಮಯ್ಯ, ಕರುಳಕೇತಯ್ಯನೇ ಮೊದಲಾದ ಶರಣರುಗಳು ಜಂಗಮಲಿಂಗ ಸಮೂಹದವರೊಡನೆ, ಬಿಜ್ಜಳನಿಗೆ ಶಾಪವಿತ್ತು ಬಸವಣ್ಣನವರೊಡನೆ, ಸಂಗಮಸ್ಥಳ

---

2 ಲ್ಲೆಂ (ದ, ಜ, ಮು)

ಪೊಳಲ ಸಿರಿ ತನ್ಮಹಾತ್ಮರ
ಬಳಿವಿಡಿದೆಯ್ದಿದುದು ಪೊಳಲೊಳುತ್ಪಾತಶತಂ
ಮೊಳೆತು ಬಳೆದುರ್ಬಿ ಪರ್ಬಿದು
ದಿಳೆ ಕಂಪಿಸಿದತ್ತು ಪೆಳೆರ್ದುದಾ ಪೌರಜನಂ ೮

ಇರಲಾಗದಿನ್ನೆನುತ್ತುಂ
ಪುರಮಂ ಪೊಱಮಟ್ಟು ಪೋದರರೆಬಭ್ರೂಮಿಮೊ
ಸುರರಲ್ಲಿ ಶಾಂತಿಹೋಮೋ
ತ್ಕರಮಂ ನೆಗಳುತ್ತುಮಿರ್ದರತಿಭಯಚಕಿತರ್ ೯

ಅಡರ್ದ ಮೃಗರಾಜಪೀಠಂ
ನಡುಗಿದುದು ನಿಜೋತ್ತಮಾಂಗಮಂ ಜನಪಂ ಕ
ನ್ನಡಿಯಲ್ಲಿ ನೋಡಿ ಕಾಣದೆ
ಸಿಡಿಮಿಡಿಗೊಳುತಿರ್ದನಸ್ತಧೈರ್ಯೋದ್ರೇಕಂ ೧೦

ಜಗದೇವಂ ಮನೆಗೇಳ್ತರೆ
ನೆಗಳ್ದಾತನ ಜನನಿ ವೀರಭಕ್ತಿರಸಂ ಕೆ
ಯ್ಮಿಗೆ ನೋಡಿ ನುಡಿದಳಿಂತೆಂ
ದಗಲದೆ ನಿಜತನುಜನೊಡನೆ ಕನಲುತ್ತಾಗಳ್ ೧೧

ವಸುಧೆಯೊಳೆ ಶಿವದ್ರೋಹಮ
ನೆಸಗಿದನಂ ಕಂಡು ಸೈರಿಸುವನಾವನವಂ
ಮುಸಕಂಗುಂದದ ಪಾಪ
ಪ್ರಸರಕೆ ಪಕ್ಕಾಗಿ ಭವಸರೋಧಿಯೊಳಾಳ್ಗುಂ ೧೨

ವೆನಿಸುವ ಕಪ್ಪಡಿಗೆ ಹೊರಟುಬರುತ್ತಲಿದ್ದರು. ಇತ್ತಕಡೆಗೆ—೮. ಕಲ್ಯಾಣಪಟ್ಟಣದ ಸಂಪತ್ತೆಲ್ಲ ಆ ಮಹಾತ್ಮರನ್ನು ಹಿಂಬಾಲಿಸಿಯೇ ಹೋಯಿತು. ಆ ಪಟ್ಟಣದಲ್ಲಿನೂರಾರು ಅಪಶಕುನಗಳು ತಲೆದೋರಿ ಬೆಳೆದು ಆಧಿಕ್ಯಗೊಂಡು ಹಬ್ಬಿದವು. ಭೂಮಿಯು ನಡುಗಿತು. ಪೌರಜನಗಳು ಭಯಭೀತರಾದರು. ೯. ಅರ್ಧಮರ್ಧಜನಗಳು ಇನ್ನು ಇಲ್ಲಿ ಇರಲಾಗದು ಎನ್ನುತ್ತ ಪಟ್ಟಣವನ್ನು ಬಿಟ್ಟುಹೊರಟುಹೋದರು. ಬ್ರಾಹ್ಮಣರುಗಳು ಅತ್ಯಂತ ಭಯದಿಂದ ಚಕಿತಗೊಂಡವರಾಗಿ ಶಾಂತಿಹೋಮಗಳ ಸಮೂಹವನ್ನು ಮಾಡತೊಡಗಿದರು. ೧೦. ಹತ್ತಿಕುಳಿತ ಸಿಂಹಾಸನವು ನಡುಗಿತು ; ಮಹಾರಾಜನು ಕನ್ನಡಿಯಲ್ಲಿ ತನ್ನ ತಲೆಯನ್ನು ನೋಡಿಕೊಂಡು ಕಾಣದೆ ಇರಲು ಮುಳುಗಿಹೋದ (ಕಳೆದುಕೊಂಡ) ಧೈರ್ಯವುಳ್ಳವನಾಗಿ (ವೃಥಾ) ಕೋಪಗೊಳ್ಳತೊಡಗಿದನು. ೧೧. ಜಗದೇವನು ಮನೆಗೆ ಬರಲಾಗಿ ಪ್ರಖ್ಯಾತಳಾದ ಆತನ ತಾಯಿಯು ಅತ್ಯಧಿಕವಾದ ವೀರಭಕ್ತಿರಸದ ಆವೇಶದಿಂದ ನೋಡಿ, ಕೋಪಗೊಳ್ಳುತ್ತ ತನ್ನ ಮಗನೊಡನೆ ತಪ್ಪದೆ ಹೀಗೆಂದು ನುಡಿದಳು : ೧೨. ಭೂಮಂಡಲದಲ್ಲಿ ಶಿವದ್ರೋಹಮಾಡಿದವನನ್ನು ಕಂಡು ಯಾವನು ಸೈರಿಸುವನೋ ಅವನು ಶಾಶ್ವತವಾದ ಪಾಪಸಮೂಹಕ್ಕೆ ಕಾರಣನಾಗಿ

ಗಿರಿಶದ್ರೋಹಿಯನಿಕ್ಕಿ ಕೊಲ್ವುದು ಸಮರ್ಥಂ ಮಾಣದಾದಂದು ತಾಂ
ಮರಣಂಬೊಂದುವುದಣ್ಮ ಶಕ್ತಿ ತನಗಿಲ್ಲಾದಂದು ಭಕ್ತಂಗೆ ಸ
ಚ್ಚರಿತಂ ಮೇಣಿದು ಯುಕ್ತಮಾತ್ಮಲಲನಾಪುತ್ರಾಪ್ತಮಿತ್ರರ್ಕಳೊಳ್
ಪುರಭಿದ್ದ್ರೋಹಮನಾಳ್ದರಂ ತಱಿದುರುಳ್ಚಲ್ವೇಳ್ಕುಮೀಶಾಜ್ಞೆಯಿಂ ೧೩

ಹರನಿಂದೆಗೇಳ್ದು ತನ್ನಯ
ಹರಣಮನೇಂ ಬಿಡಳೆ ದೇವಿಯುಪಮನ್ಯುಮುನೀ
ಶ್ವರನುರಿದು ಭಸ್ಮವಾಗನೆ
ಗುರುತರನಿಜಕೋಪಶಿಖಿಯಿನೊಲ್ವಿನಮಭವಂ ೧೪

ಅಸುವಂ ಶಿವಕಾರ್ಯಕೆ ವಂ
ಚಿಸುವಧಮಂಗಲ್ಪಮತಿಗೆ ಕುಟಿಲಾತ್ಮಂಗೀ
ರಸೆಯೊಳ್ ಶಿವನೊಲ್ವನೆ ಮ
ನ್ನಿಸುವರೆ ಗಣಪರ್ಯರಕ್ಕುಮೇ ಮುಕ್ತಿಸುಖಂ ೧೫

ಹರಭಕ್ತದ್ರೋಹಮಂ ಮಾಡಿದ ನರಪತಿಯಂ ಕೊಲ್ವುದುಂ ಗೆಲ್ವುದುಂ ಶಂ
ಕರಭಕ್ತಪ್ರೋತ್ಕರಕ್ಕೇನರಿದೆ ಪಿರಿದೆ ತದ್ಭಕ್ತನೊರ್ವಂಗೆ ಕಾಯ್ವಂ

ಸಂಸಾರ ಸಾಗರದಲ್ಲಿ ಮುಳುಗಿಹೋಗುವನು. ೧೩. ಸಮರ್ಥನಾದವನು ಪರಮೇಶ್ವರ ದ್ರೋಹಿಯನ್ನು ಹೊಡೆದು ಕೊಲ್ಲಬೇಕು; ಹಾಗೆ ಮಾಡಲಾಗದಿದ್ದರೆ ಪರಾಕ್ರಮವನ್ನು ತೋರಿಸಿ ಮರಣಹೊಂದಬೇಕು. ಶಕ್ತಿಯು ತನಗಿಲ್ಲದ ಭಕ್ತನಾದವನಿಗೆ ಹೀಗೆ ಆಚರಿಸುವುದೇ ಶ್ರೇಷ್ಠನಡವಳಿಕೆ ಮತ್ತು ಮಾಡಬೇಕಾದ ಕಾರ್ಯವೆನಿಸಿದೆ. ತನ್ನ ಹೆಂಡತಿ, ಮಕ್ಕಳು, ಆಪ್ತಮಿತ್ರರುಗಳಲ್ಲಿ ಯಾರೇ ಆಗಿರಲಿ ತ್ರಿಪುರಸಂಹಾರಿಯಾದ ಶಿವನಿಗೆ ದ್ರೋಹ ಮಾಡಿದವರನ್ನು ಕತ್ತರಿಸಿ ಉರುಳಿಸಬೇಕು. ಇದು ಈಶ್ವರನ ಆಜ್ಞೆ. ೧೪. ಪರಮೇಶ್ವರನ ನಿಂದೆಯನ್ನು ಕೇಳಿ ಪಾರ್ವತೀದೇವಿಯು (ದಕ್ಷಯಾಗ ಸಮಯದಲ್ಲಿ) ತನ್ನ ಪ್ರಾಣವನ್ನೇ ಬಿಡಲಿಲ್ಲವೇ ? ಶ್ರೇಷ್ಠನಾದ ಉಪಮನ್ಯು ಮುನಿಯು (ಇಂದ್ರನ ವೇಷದಿಂದ ಶಿವನು ಬಂದು ಶಿವನನ್ನು ತಿರಸ್ಕರಿಸಿದಾಗ ಶಿವನಿಂದೆಯನ್ನು ಕೇಳಿದೆನಲ್ಲಾ ಎಂದು) ಭಯಂಕರವಾದ ತನ್ನ ಕೋಪವೆಂಬ ಬೆಂಕಿಯಿಂದ ಪರಮೇಶ್ವರನು ಒಲಿಯುವ ಹಾಗೆ ಉರಿದು ಭಸ್ಮವಾಗಲಿಲ್ಲವೇ ? ೧೫. ಶಿವನ ಕಾರ್ಯಕ್ಕಾಗಿ ತನ್ನ ಪ್ರಾಣವನ್ನು ವಂಚನೆಮಾಡುವ ಅಧಮನಿಗೆ, ಅಲ್ಪಬುದ್ಧಿಯವನಿಗೆ, ಕುಟಿಲವಾದ ಆತ್ಮ ವುಳ್ಳವನಿಗೆ, ಈ ಲೋಕದಲ್ಲಿ ಶಿವನು ಒಲಿಯುವನೇ ? ಶಿವಗಣಸಮುದಾಯವು ಮನ್ನಣೆಕೊಡು ವರೇ ? ಮುಕ್ತಿಸುಖವು ಲಭ್ಯವಾಗುವುದೇ ? ೧೬. ಶಿವಭಕ್ತರಾದವರಿಗೆ ದ್ರೋಹವನ್ನು ಮಾಡಿದ ರಾಜನನ್ನು ಕೊಲ್ಲುವುದೂ, ಗೆಲ್ಲುವುದೂ ಪರಮೇಶ್ವರನ ಭಕ್ತಿಸಮೂಹಕ್ಕೇನು ಅಸಾಧ್ಯವೇ ? ಈಶ್ವರ ಭಕ್ತನೊರ್ವನಿಗೆ ರಕ್ಷಣೆಯನ್ನುಂಟುಮಾಡುತ್ತ ಬಾಳುವವನಿಗೆ (ಈ ಕಾರ್ಯ) ವೇನು ದೊಡ್ಡದೆ. ಭೂಮಂಡಲದಲ್ಲಿ ಇಂದ್ರ, ವಿಷ್ಣುಗಳೇ ಮೊದಲಾದ

ನೆರಪುತ್ತುಂ ಬಾಳ್ವನಾವಂ ಭುವನತತಿಯೊಳೆಂದಾಪ್ರಚ್ಯುತಾದ್ಯರ್ಕಳೊಳ್ಳಿ
ನ್ನಿರವಂ ನೋಡಲ್ಕೆ ಬೇಗಂ ಬೆಸಸಿ ತಳರ್ದರೀ ಕಜ್ಜಮಂ ಭಕ್ತವರ್ಯರ್ ೧೬

ಇದು ನಿನಗೆ ಸಮುಚಿತಂ ಗಡ
ಮೊದಲೊಳ್ನೀನಿತ್ತ ಭಾಷೆ ಸಲ್ವುದು ಖಳನಂ
ಸದೆಯೆ ಸದೆಯಲ್ಕೆ ನೀಂ ತ
ಳ್ವಿದೆ ದುರ್ಮತಿ ನಿನ್ನವೋಲ್ದುರಾತ್ಮರುಮೊಳರೇ ೧೭

ನೆಱೆ ಪೂಣ್ದ ಪೂಣ್ಕೆಯುಂ ನೀಂ
ಮಱೆದೆಯೊ ದೃಢವೀರಭಕ್ತಿಯುಜ್ಜುಗದೊಲವಂ
ತೊಱೆದೆಯೊ ನಿಜಾಸುಭಯದಿಂ
ಪೆಱತೆಗೆದೆಯೊ ಪೇಳು ನನ್ನಿಯುಂ ಜಗದೇವಾ ೧೮

ಪ್ರಮಥದ್ರೋಹಿಯನಿಕ್ಕದಿಂತು ಮನೆಗೇಳ್ತಂದೈ ಮಹೇಶಪ್ರಸಾ
ದಮನಾರೋಗಿಸಲೆಂದು ಚಿಃ ಖಳ ಗಣಾಜ್ಞೋಲ್ಲಂಘನಂ ಗೆಯ್ದೆ ದು
ರ್ದಮ ನೀಂ ಕುಕ್ಕುರನಪ್ಪೆಯೆಂದುಱೆ ಚಿಟುಂಕಿಂದುಚ್ಚಿರೇ[1]ಯೆಂದನು
ಕ್ರಮದಿಂದಂ ಕರೆವುತ್ತೆ ಮುಂದಿರಬಹಿದ್ವಾರಾಂತಭೂಭಾಗದೊಳ್ ೧೯

ಸುರಿದಳ್ ಶಿವಪ್ರಸಾದಮ
ನಿರದಾಂ ಸೊಣಗು ದಲಪ್ಪೆನೆನುತವನುಣಲೊ

ವರಲ್ಲಿ ನಿನ್ನ ಪಾತ್ರವನ್ನು ನೋಡಬೇಕೆಂದು ಈ ಕಾರ್ಯವನ್ನು ನಿನಗೆ ಅಪ್ಪಣೆಮಾಡಿ ಭಕ್ತಶ್ರೇಷ್ಠರಾದ ಬಸವಣ್ಣನೇ ಮೊದಲಾದವರು (ಕಲ್ಯಾಣವನ್ನು ಬಿಟ್ಟು) ಹೊರಟು ಹೋದರು. ೧೭. ಈ ಕಾರ್ಯವು (ಬಿಜ್ಜಳವಧೆಯನ್ನು ಮಾಡುವ ಕಾರ್ಯವು) ನಿನಗೆ ಯೋಗ್ಯವಾದದ್ದಲ್ಲವೇ ! ಈ ಪೂರ್ವದಲ್ಲಿ ನೀನು ಕೊಟ್ಟಭಾಷೆಯು ಆ ದುಷ್ಟನನ್ನು ಕೊಂದರೆ, ಸರಿಯಾದಂತಾಗುವುದು. ಕೊಲ್ಲುವುದಕ್ಕೆ ನೀನು ಹಿಂಜರಿದರೆ (ತಡಮಾಡಿದರೆ) ದುಷ್ಟಬುದ್ಧಿಯುಳ್ಳವನಾದ ನಿನ್ನಂತಹ ನೀಚರು ಇದ್ದಾರೆಯೇ ? ೧೮. ಜಗದೇವಾ, ನಿಜವಾಗಿ ನೀನು ಪ್ರತಿಜ್ಞೆಮಾಡಿದ ಪ್ರತಿಜ್ಞೆಯನ್ನು ಮರೆತೆಯೋ ? (ಅಥವಾ) ನಿಶ್ಚಲವಾದ ವೀರಶೈವ ಭಕ್ತಿ ಕಾರ್ಯದಲ್ಲಿನ ಪ್ರೀತಿಯನ್ನೇ ತೊರೆದುಬಿಟ್ಟೆಯೋ ? ನಿನ್ನ ಪ್ರಾಣಭಯದಿಂದ ಹಿಂಜರಿದೆಯೋ ನಿಜವನ್ನುಹೇಳು. ೧೯–೨೦, 'ಪ್ರಮಥಗಣಂಗಳ ದ್ರೋಹಿಯಾದ ಬಿಜ್ಜಳನನ್ನು ಕೊಲ್ಲದೆ ಈ ರೀತಿ ಮನೆಗೆ ಪರಮೇಶ್ವರನ ಪ್ರಸಾದವನ್ನು ಊಟಮಾಡಬೇಕೆಂದು ಮನೆಗೆ ಬಂದೆಯಾ ? ಥೀ ! ದುಷ್ಟಾ !! ಶಿವಗಣಂಗಳ ಆಜ್ಞೆಯನ್ನು ಉಲ್ಲಂಘನ ಮಾಡಿದೆ. ದುರ್ದಮಾ, ನೀನು ನಿಜವಾಗಿಯೂ ನಾಯಿಗೆ ಸಮ, (ನಾಯಿಗೆ ಹಾಕುವಂತೆ) ಬೆರಳ ಚಿಟಿಕಿಯನ್ನು ಹಾಕಿ ಉಚ್ಚಿರೇ ! (ಎಂದು ನಾಯಿಯನ್ನು ಕರೆಯುವಂತೆ) ಕ್ರಮವಾಗಿ ಕರೆಯುತ್ತ ಮನೆಯ ಹೊರಬಾಗಿಲಿನ ಮುಂಭಾಗದ

[1] ಠ (ದ, ಮೂ, ಜ)

ಲ್ದಿರೆ ಬಂದರಲ್ಲಿಗತಿ ನಿ
ರ್ಭರದಿಂದಂ ಮಲ್ಲಬೊಮ್ಮರೆಂಬ ಮಹಾತ್ಮರ್ ೨೦

ಅವನೊಡನುಂಡವರ್ಮುದದಿಂ
ಶಿವಪ್ರಸಾದಮನುದಗ್ರಶೌರ್ಯಾಭರಣ
ರ್ಭವಭಕ್ತಿಭಾಸುರರ್ಶಾ
ತ್ರವಸಂಹರಣಪ್ರಸನ್ನಮಾನಸಮಹಿತರ್ ೨೧

ವ॥ ಅನಂತರಂ ಜಗದೇವಸಮೇತ ತನ್ಮಾತೆಯ ಪದತಳಕ್ಕೆಱಗಿ ನಲವರಕೆಗಳಂ ಗೆಲ್ಲ ಸೇಸೆಗಳಂ ಪಡೆದು ವೀರತಾಂಬೂಲಮಂ ಕೆಯ್ಕೊಂಡು ದೇವಾಂಗಮಂ ಬಿಗಿದುಟ್ಟು ಬೀರಗಚ್ಚೆಯ ಸಮರ್ಚೆ ಬಂಕುಡಿಯುಂ ಕಟ್ಟಿ ಭಸಿತಮನಂಗದೊಳುದ್ಧೂಳಿಸಿ ರುದ್ರಾಕ್ಷಿಯ ತೊಡವಂ ತೊಟ್ಟು ಕಾಲರುದ್ರ ನುಗ್ರಾಪಾಂಗದಂತಿರ್ದ ಕರಾಳಖಡ್ಗಂಗಳಂ ಕರತಳ ದೊಳ್ಪಿಡಿದು ಜಡಿದು ವೀರ ಪ್ರಮಥರಂಘ್ರಿಗಳಂ ನೆನೆದು ಪಟುಶೌರ್ಯಾಟೋಪಮಂ ತಾಳ್ದುಮಾ ಮೂವರುಂ ಗೃಹಮಂ ಪೊಱ ಮಟ್ಟು ರಾಜವೀಥಿಯೊಳ್ಸರಭಸಂ ಬರ್ಪಾಗಳ್ಕಟ್ಟಿದಿರಲ್ಲಿ—

ಮುಂಗಡೆಯೊಳೊಂದು ವೃಷಭಂ
ಶೃಂಗಮನಾಡಿಸುತೆ ಮುಂದಿಯಂ ತೊಲಗಿಸುತುಂ

ನೆಲದ ಮೇಲೆ ಶಿವಪ್ರಸಾದವನ್ನು (ಅನ್ನವನ್ನು) ಆ ಕೂಡಲೇ ಸುರಿದಳು. ನಾನು ನಿಜವಾಗಿ ನಾಯಿಯಾದೆನೇ ! ಎಂದು ಅವನು ಊಟ ಮಾಡದೆ ಇರಲು ಆ ಹೊತ್ತಿಗೆ ಅಲ್ಲಿಗೆ ಅತಿವೇಗದಿಂದ ಮಲ್ಲ, ಬೊಮ್ಮಯ್ಯರೆಂಬ ಇಬ್ಬರು ಮಹಾತ್ಮರು ಬಂದರು. ೨೧. ಜಗದೇವನೊಡನೆ ಅತ್ಯಂತ ಶೌರ್ಯವೇ ಆಭರಣವಾಗಿ ಉಳ್ಳವರೂ, ಶಿವಭಕ್ತಿಯಿಂದ ಪ್ರಕಾಶಮಾನವಾದವರೂ, ಶತ್ರುವಿನ ಸಂಹಾರ ವಿಷಯದಲ್ಲಿ ಸಂತೋಷಗೊಂಡ ಮನಸ್ಸುಳ್ಳವರೂ ಆದ ಆ ಮಲ್ಲ ಮತ್ತು ಬೊಮ್ಮಯ್ಯಗಳು ಶಿವಪ್ರಸಾದವನ್ನು ಸಂತೋಷದಿಂದ ಊಟಮಾಡಿದರು. ವ॥ ಆಮೇಲೆ ಜಗದೇವ ಸಮೇತವಾಗಿ ಜಗದೇವನ ತಾಯಿಯ ಪಾದಕ್ಕೆ ನಮಸ್ಕಾರ ಮಾಡಿ, ಒಳ್ಳೆಯ ಆಶೀರ್ವಾದವನ್ನು ಜಯಾರ್ಥವಾದ ಸೇಸೆಗಳನ್ನು (ಮಂತ್ರಾಕ್ಷತೆಗಳನ್ನು) ಪಡೆದು, ವೀರ ತಾಂಬೂಲವನ್ನು ಸ್ವೀಕಾರಮಾಡಿದರು. ಮಡಿ ಬಟ್ಟೆಗಳನ್ನು ಬಿಗಿದು ಉಟ್ಟು ಕೊಂಡರು, ವೀರಗಚ್ಚೆಯನ್ನು ಹಾಕಿಕೊಂಡು, ನಡುಕಟ್ಟನ್ನು ಕಟ್ಟಿ, ದೇಹಕ್ಕೆಲ್ಲ ವಿಭೂತಿಯನ್ನು ಬಳಿದುಕೊಂಡು, ರುದ್ರಾಕ್ಷಿಯ ಆಭರಣಗಳನ್ನು ಧರಿಸಿದರು. ಪ್ರಳಯಕಾಲನ ಭಯಂಕರ ಕಡೆಗಣ್ಣಿನಂತೆ ಹೊಳೆಯುತ್ತಿರುವ ಭಯಂಕರ ಖಡ್ಗಗಳನ್ನು ಕೈಯಲ್ಲಿ ಹಿಡಿದು ಝಳಪಿಸುತ್ತ, ವೀರರಾದ ಪ್ರಮಥ ಶಿವಗಣಗಳ ಪಾದಗಳನ್ನು ಧ್ಯಾನಿಸಿ, ಸಮರ್ಥವಾದ ಶೌರ್ಯದ ಅಟ್ಟಹಾಸವನ್ನು ಹೊಂದಿ, ಆ ಮೂರು ಜನರೂ (ಜಗದೇವ, ಮಲ್ಲ, ಬೊಮ್ಮಿದೇವರುಗಳು) ಮನೆಯಿಂದ ಹೊರಹೊರಟು, ರಾಜಬೀದಿಯಲ್ಲಿ ವೇಗವಾಗಿ ಬರುತ್ತಿರುವಾಗ ನೇರಎದುರಿನಲ್ಲಿ—೨೨. ಒಂದು ಗೂಳಿಯು (ಎತ್ತು) ಮುಂಭಾಗದಲ್ಲಿ ಕೋಡುಗಳನ್ನು ಅಲ್ಲಾಡಿಸುತ್ತ ನೆರೆದವರುದಿ

ಮಂಗಲರವದಿಂ ಕಿಲೆವುತೆ
ಕಂಗೊಳಿಸುತೆ ನಡೆಯೆ ಕಂಡು ಮುದಮಂ ತಳೆದರ್ ೨೨

ಬಂದರರಮನೆಯ ಬಾಗಿಲ
ಮುಂದಣ್ಗಿದಿರಲ್ಲಿ ಕಂಡರರಸಾಳ್ಗಳನೋ
ರಂದದ ಕರಿತುರಗಂಗಳ
ಸಂದಣಿಯಂ ಮಂತ್ರಿಮಂಡಳಿಕಪಟುಭಟರಂ ೨೩

ವ॥ ಅಂತವರೆಲ್ಲರುಮಿದಿರೊಳ್ಕಂಡಗಿದು ಕೆಲಂದೊಲಗೆ ರೌದ್ರರಸಂ ಮಸಗಿ ರುದ್ರಾವತಾರರುತ್ಪಾತನಿಶಿತಾಸಿಗಳಂ ಕುರುಳ್ಚುತುಂ ಬಂದು ಪಜ್ಜಳಿಪ ಬಿಜ್ಜಳನ ಸಭಾಸ್ಥಳಮಂ ಭೋಂಕನೆ ಪೊಕ್ಕು—

ಬಳಿಗೊಂಡಿರ್ದನುಯಾಯಿಗಳ್ಪಟುಭಟಧಾತ್ರೀಶಪುತ್ರರ್ಕಳು
ಜ್ವಳಖಡ್ಗಂಗಳನಾಂತಿದಿರ್ಚಲೆಸಪಂದಂಗಂಡು ಮುಂಕೊಂಡು ತ
ತ್ಫಳಕಾಸ್ಫೋಟನಮಾತ್ರದಿಂ ಬಿಡದಿದಿರ್ಚುತ್ತೋಡಿಸುತ್ತಣ್ಮಿ ಬಿ
ಜ್ಜಳನಂ ಪೊಕ್ಕಿಱಿದರ್ಕೃಪಾಣದಿನವರ್ವಿಕ್ರಾಂತವಿಶ್ವಾಧಿಕರ್ ೨೪

ಯನ್ನು ಅತ್ತ ಇತ್ತ ಸರಿಸುತ್ತ ಮಂಗಳಕರವಾದ ಧ್ವನಿಯಿಂದ ಶಬ್ದಮಾಡುತ್ತ ಕಂಗೊಳಿಸುತ್ತ ಮುಂದೆ ಮುಂದೆ ನಡೆಯುತ್ತಿರಲು ಇದನ್ನು ಕಂಡು (ಇವರು)ಸಂತೋಷವನ್ನು ಹೊಂದಿದರು. ೨೩. ಅವರು ಅರಮನೆಯ ಬಾಗಿಲ ಮುಂಭಾಗಕ್ಕೆ ಬಂದರು. ಅಲ್ಲಿ ಅರಸನ ಆಳುಗಳನ್ನೂ, ಕ್ರಮವಾಗಿ ನಿಂತುಕೊಂಡಿದ್ದ ಆನೆ, ಕುದುರೆಗಳ ಸಮೂಹವನ್ನೂ, ಮಂತ್ರಿಗಳು, ಮಾಂಡಳಿಕರು, ಸಮರ್ಥರಾದ ಶೂರಭಟರುಗಳನ್ನೂ ಕಂಡರು. ವ॥ ಹಾಗೆ ನಿಂತುಕೊಂಡಿದ್ದ ಅವರೆಲ್ಲರೂ (ಬಂದ ಈ ಮೂವರು ಶೂರರನ್ನು) ಎದುರಿನಲ್ಲಿ (ಈ ಮೂವರನ್ನೂ) ಕಂಡು ಹೆದರಿ, ಪಕ್ಕಕ್ಕೆ ತೊಲಗಿದರು. ರೌದ್ರರಸವು ವ್ಯಾಪಿಸುತ್ತಿರಲು ರುದ್ರನ ಅವತಾರ ಸ್ವರೂಪರಾದ ಮೂವರೂ ವೈರಿಯನ್ನು ಸಂಹರಿಸುವುದರಲ್ಲಿ ತೀಕ್ಷ್ಣವೆನಿಸಿದ ಖಡ್ಗಗಳನ್ನು ಝಳಪಿಸುತ್ತ ಬಂದು ಪ್ರಜ್ವಲಿಸುತ್ತಿದ್ದ ಬಿಜ್ಜಳ ಮಹಾರಾಜನ ಸಭಾಭವನವನ್ನು ಒಮ್ಮೆಲೇ ಪ್ರವೇಶಮಾಡಿದರು. ೨೪. ಶೌರ್ಯದಲ್ಲಿ ವಿಶ್ವಕ್ಕೆಲ್ಲ ಅಧಿಕರೆನಿಸಿದ ಜಗದೇವ, ಮಲ್ಲ, ಬೊಮ್ಮಯ್ಯಗಳು (ಬಿಜ್ಜಳನ) ಸಮೀಪದಲ್ಲಿಯೇ ಇದ್ದ ಅನುಯಾಯಿಗಳು, ಸಮರ್ಥರಾದ ಶೂರಭಟರು, ರಾಜಪುತ್ರರುಗಳು ತೀಕ್ಷ್ಣ ಖಡ್ಗಗಳನ್ನು ಧರಿಸಿ ಎದುರಿಸಲು ಸಿದ್ಧರಾಗಿರುವುದನ್ನು ಕಂಡು, ಮುನ್ನುಗ್ಗಿ, (ತಮ್ಮ ಕಯ್ಯಲ್ಲಿನ) ಆ ಗುರಾಣಿಗಳನ್ನು ಅಪ್ಪಳಿಸುವುದರ ಮೂಲಕವೇ ತಪ್ಪದೆ ಅವರನ್ನು ಎದುರಿಸಿ ಪರಾಕ್ರಮದಿಂದ ನುಗ್ಗಿ ಹೋಗಿ ತಮ್ಮ

ಹರಭಕ್ತಕರಸ್ಪರ್ಶನ
ಪರಿಪೂತನಿಶಾತಖಡ್ಗದಿಂ ಮಡಿದ ಮಹೀ
ಶ್ವರನೈಂದ್ರಪದಂಬಡೆದಂ
ಪಿರಿದುತ್ಸವಮಾಳ್ದು ಶರಣರುಬ್ಬಿದರಾಗಳ್ ೨೫

ಹರಭಕ್ತರ್ಗೆ ಜಯಂ ಜಯಮೆನುತ್ತುದ್ಘೋಷಿಸುತ್ತಾರ್ದು ನಿ
ರ್ಭರದಿಂ ಸೀಳ್ದವನುನ್ನತೋದರವನಲ್ಲಿಟ್ಟಾರ್ಪಿನಿಂ ಕೊಯ್ದು ತ
ಚ್ಛಿರಮಂ ಭಕ್ತಗಣಾಜ್ಞೆಯಿಂ ನೆಗಳ್ದೆವಾವೀ ಕಜ್ಜಮಂ ಮಾಣದೆಂ
ದಿರದಾರ್ದೆತ್ತಿ ಕೃಪಾಣಮಂ ಜಡಿದು ಚಿಮ್ಮುತ್ತಯ್ದೆ ವಿಕ್ರಾಂತದಿಂ ೨೬

ಹರಭಕ್ತದ್ರೋಹಮನಾ
ವಿರಚಿಪರವರ್ಗೀ ನೃಪಾಲಗತಿಯಪ್ಪುದೆನು
ತ್ತಿರದೊಂದೋಲೆಯನೊಳ್ಪಿಂ
ಬರೆದಾತನ ಕೆಯ್ಗೆ ಕಟ್ಟಿದರ್ಕಡುಗಲಿಗಳ್ ೨೭

ನಲಿನಲಿದು ನರ್ತಿಸುತೆ ಕರ
ಫಲಕಾಸ್ಫೋಟನವನೆಸಗುತುಂ ಕರವಾಳಂ
ಬಲಿದೆತ್ತಿ ಚಿಮ್ಮುತುಂ ಕಲ
ಕಲರವದಿಂ ನಗುತೆ ಪಾಡುತುಂ ಗಣತತಿಯುಂ ೨೮

ಚಂಡಬಳರಿವರೊಡನೆ ಭೂ
ಮಂಡಳದೊಳ್ಸೆಣಸಲಾರ್ಪ ಕಲಿಯಾರೆನುತುಂ

ಕೈಯ ಖಡ್ಗದಿಂದ ಬಿಜ್ಜಳ ಭೂಪಾಲನನ್ನು ಕತ್ತರಿಸಿ ಹಾಕಿದರು. ೨೫. ಶಿವಭಕ್ತರಾದವರ ಕರಸ್ಪರ್ಶದಿಂದ ಪರಿಶುದ್ಧಗೊಂಡ ತೀಕ್ಷ್ಣ ಖಡ್ಗದೇಟಿನಿಂದ ಸತ್ತುಹೋದ ರಾಜನಾದ ಬಿಜ್ಜಳನು ಇಂದ್ರಪದವಿಯನ್ನು ಪಡೆದನು. ಶರಣರು ಅಧಿಕವಾದ ಸಂತೋಷದಿಂದ ಆಗ ಉಬ್ಬಿಹೋದರು. ೨೬–೨೭. ಹರಭಕ್ತರಿಗೆ ಜಯ ಜಯ ! ಎಂದು ಗಟ್ಟಿಯಾಗಿ ಕೂಗಿ ಘೋಷಣೆ ಮಾಡುತ್ತ, ಅತಿಶಯವಾಗಿ ಸೀಳಿಹಾಕಿದ ಆ ಬಿಜ್ಜಳನ ದೊಡ್ಡ ಹೊಟ್ಟೆ (ದೇಹ) ವನ್ನು ಅಲ್ಲಿಯೇ ಬಿಟ್ಟು ಶೌರ್ಯದಿಂದ ಆ ಶಿರಸ್ಸನ್ನು ಕತ್ತರಿಸಿ, ಭಕ್ತಜನರುಗಳ ಆಜ್ಞೆಯ ಪ್ರಕಾರ ಈ ಕಾರ್ಯವನ್ನು ತಪ್ಪದೆ ಮಾಡಿದ್ದೇವೆಂದು ಗಟ್ಟಿಯಾಗಿ ಸಾರುತ್ತ ಶಿರಸ್ಸನ್ನು ಮೇಲಕ್ಕೆತ್ತಿ (ತೋರಿಸುತ್ತ), ಕೈಯ ಖಡ್ಗವನ್ನು ಝಳಪಿಸುತ್ತ ಶೌರ್ಯದಿಂದ ತಪ್ಪದೆ ಜಿಗಿದಾಡುತ್ತ ಹರಭಕ್ತರಾದವರಿಗೆ ಯಾರು ದ್ರೋಹವನ್ನು ಬಗೆಯುವರೋ, ಅವರಿಗೆ ಈ ಮಹಾರಾಜನಿಗಾದ ಗತಿಯೇ ಅಗುವುದು ಎನ್ನುತ್ತ ಒಂದು ಓಲೆಯನ್ನು ಸ್ಪಷ್ಟವಾಗಿ ಬರೆದು, ಮಹಾರಾಜನ ಕೈಗೆ (ಹೆಣದಕೈಗೆ) ಆ ಮಹಾಶೂರರು ಕಟ್ಟಿದರು. ೨೮–೨೯. ನಲಿನಲಿದು ಕುಣಿದಾಡುತ್ತ ಕೈಯಲ್ಲಿನ ಗುರಾಣಿಯನ್ನು ಪರಸ್ಪರ ಅಪ್ಪಳಿಸುತ್ತ, ಖಡ್ಗಗಳನ್ನು ಗಟ್ಟಿಯಾಗಿ ಹಿಡಿದು ಮೇಲಕ್ಕೆತ್ತಿ, ತಿರುಪಾಡುತ್ತ, (ಅಥವಾ ಝಳಪಿಸುತ್ತ) ಕಲಕಲ ಧ್ವನಿಮಾಡಿ ನಗುತ್ತ,

ಮಂಡಳಿಕರಳ್ಕುತಿರೆ ನಡೆ
ಗೊಂಡಪೊರ್ಱಮಟ್ಟು ಸಭೆಯಿಂನಭವನ ಸುಭಟರ್ ೨೯

ನಿಡುಸರದಿಂ ವಂದಿಗಳು
ಗ್ಗಡಿಸುತ್ತಿರೆ ಮುಂದೆ ನಿಂದು ಬಿರುದಾವಳಿಯಂ
ನಡೆತಂದು ಪೊಕ್ಕನೊಡವರೆ
ಕಡುಗಲಿಗಳ್ತನ್ನ ಭವನಮಂ ಜಗದೇವಂ ೩೦

ವ॥ ಅಂತು ಪೊಕ್ಕು ಜನನಿಯಡಿದಾವರೆಗವರ್ಗೆರಸು ಮಣಿದು—

ಮಾತೆ ನಿಮ್ಮ ಮನಕ್ಕೆ ಸಂತಸಮಪ್ಪ ಮಾಳ್ಕೆಯೊಳಿಂದು ನಿ
ರ್ಭೀತಿಯಿಂದೆ ಶಿವಾಪರಾಧಿಯನಿಕ್ಕಿ ಬಂದೆವೆನುತ್ತೆ ಸಂ
ಪ್ರೀತಿಯಿಂದೆಱಗಿರ್ದ ಪುತ್ರನನಳ್ಕಱಿಂ ಪರಸುತ್ತೆ ಸಂ
ಜಾತಸಂಭ್ರಮೆ ಮೆಚ್ಚುತುಂ ಪೊಗಳುತ್ತೆ ತಳ್ತಮರ್ದಪ್ಪಿದಳ್ ೩೧

ಸಮುದಿತಗುಣಕೀರ್ತನದಿಂ
ನಮಿಯಿಸೆ ಮಲ್ಲಯ್ಯ ಬೊಮ್ಮಯರ್ಪದಪೀಠಂ
ಪ್ರಮುದಮನೊಡರ್ಚಿ ಮನ್ನಿಸಿ
ಸಮುಚಿತಸತ್ಕಾರಮಂ ಕರಂ ರಚಿಯಿಸಿದಳ್ ೩೨

ಶಿವಗಣ ಸಮೂಹವನ್ನು ಕುರಿತು ಹಾಡುತ್ತ ಪ್ರಚಂಡ ಬಲಶಾಲಿಗಳಾದ ಇವರೊಡನೆ ಭೂಮಂಡಲದಲ್ಲಿ ಕಾಳಗ ಮಾಡುವ ಸಾಮರ್ಥ್ಯವುಳ್ಳ ಶೂರರು ಯಾರಿದ್ದಾರೆ ? ಎಂದು (ಅಲ್ಲಿದ್ದ ಬಿಜ್ಜಳನ) ಮಾಂಡಳಿಕರೆಲ್ಲ ಹೆದರಿಕೊಳ್ಳುತ್ತಿರಲು ಆ ಮಹಾಶೂರರು ಸಭೆಯಿಂದ ನಡೆದು ಹೊರಹೊರಟರು. ೩೦. ಉತ್ತರ ಸ್ವರದಿಂದ ಮುಂಭಾಗದಲ್ಲಿ ನಿಂತುಕೊಂಡು ಬಿರುದನ್ನು ಹೊಗಳುವವರು (ವಂದಿಗಳು) ಬಿರುದಾವಳಿಗಳನ್ನು ಉದ್ಘೋಷಿಸುತ್ತಿದ್ದರು. ಜಗದೇವನು ತನ್ನೊಡನೆಯೇ ಬಂದ ಮಲ್ಲಯ್ಯ, ಬೊಮ್ಮಯ್ಯ ಗಳೊಡನೆ ತನ್ನ ಮನೆಯನ್ನು ಕುರಿತು ಬಂದು ಪ್ರವೇಶಿಸಿದನು. ವ॥ ಆ ರೀತಿ ತನ್ನ ಮನೆಯನ್ನು ಪ್ರವೇಶಿಸಿ, ತಾಯಿಯ ಪಾದಕಮಲಗಳಿಗೆ ಮಲ್ಲಯ್ಯ ಬೊಮ್ಮಯ್ಯ ರೊಡನೆ ಕೂಡಿ ನಮಸ್ಕಾರ ಮಾಡಿ— ೩೧. ಅಮ್ಮಾ, ನಿನ್ನ ಮನಸ್ಸಿಗೆ ಸಂತೋಷ ವಾಗುವ ರೀತಿಯಲ್ಲಿ ಈ ದಿವಸ ಯಾರ ಹೆದರಿಕೆಯೂ ಇಲ್ಲದೆ, ಶಿವನಲ್ಲಿ ಅಪರಾಧ ವೆಸಗಿದ ಬಿಜ್ಜಳನನ್ನು ಕೊಂದು ಬಂದೆವು ಎನ್ನುತ್ತ ಅತ್ಯಂತ ಪ್ರೀತಿಯಿಂದ ನಮಸ್ಕಾರ ಮಾಡಿದ ಮಗನನ್ನು ಅಕ್ಕರೆಯಿಂದ ಆಶೀರ್ವಾದ ಮಾಡುತ್ತ, ಸಂಭ್ರಮದಿಂದ ಕೂಡಿದ ತಾಯಿಯು ಮೆಚ್ಚುಗೆ ವ್ಯಕ್ತಪಡಿಸುತ್ತ ಹೊಗಳಿ ಗಟ್ಟಿಯಾಗಿ ಅಪ್ಪಿಕೊಂಡಳು. ೩೨. (ಇದರಂತೆ) ಮಲ್ಲಯ್ಯ ಬೊಮ್ಮಯ್ಯಗಳೂ ಸಮೀಚೀನವಾದ ಆ ಜಗದೇವನ ತಾಯಿಯ ಸದ್ಗುಣಗಳನ್ನು ಹೊಗಳುತ್ತ ನಮಸ್ಕಾರ ಮಾಡಲಾಗಿ, ಸಂಭ್ರಮದಿಂದ ಅವರ ಮನಸ್ಸಿಗೆ ಹರ್ಷವನ್ನುಂಟು ಮಾಡಿ, ಮನ್ನಣೆಗೊಳಿಸಿ ಯಥಾಯೋಗ್ಯವಾದ

ವ॥ ಆಗಳಾ ಜಗದೇವನುತ್ಕಟಿಸಿ—

ವಿಹಿತಂ ಭಕ್ತಂಗೆ ತಾನೇ ತಪ್ಪದಘಹರದ್ರೋಹಿಯಂ ಮಾಣ್ದುದಂ ಮೇ
ಣ್ಮಹಿಯೊಳ್ಭಕ್ತಪ್ರತಾನಂ ಬೆಸಸೆ ಬಳಿಯಿನಾ ದ್ರೋಹಿಯಂ ಕೊಂದೆನಾಂ ದು
ರ್ವಹಪಾಪಂಬೆತ್ತೆನೀ ಪಾಪಮನಳಿವೊಡೆ ಮತ್ಪ್ರಾಣಮಂ ಬಿಟ್ಟಪೆಂ ನಿಃ
ಸ್ಪೃಹೆಯಿಂದಾನೆಂದು ಖಡ್ಗಾಗ್ರದೆ ನಿಜಶಿರಮಂ ಕೊಯ್ದನಾ ಭಕ್ತವರ್ಯಂ ೩೩

ವ॥ ಅಂತು ಕಳ್ಕನೆ ಕೊಱೆದಿಕ್ಕುವುದುಮುಮಾರಮಣಂ ಪ್ರಸನ್ನನಾಗಿ—

ಸುರನಿಮ್ನಗೆ ನಲ್ವೆಱೆ ಕೆಂಜೆಡೆ ತ
ಳ್ತುರಿಗಣ್ತ್ರಿಶೂಳಂ ಗರಳಂ ಭಸಿತಂ
ಕರಿಕೃತ್ತಿ ಧರಾಧರಪುತ್ರಿ ಫಣಾ
ಧರನೊಪ್ಪಿರೆ ರಂಜಿಸಿದಂ ಗಿರಿಶಂ ೩೪

ವ॥ ಅಂತು ರಂಜಿಸಿ ನಿಜಭಕ್ತನ ಶಿರಮಂ ಪತ್ತಿಸಿ ಹರಣಮನಲರ್ಚಿ ತನಗೆಱಗಿರ್ದನಂ ತೆಗೆದೆತ್ತಿ ಬಿಗಿಯಪ್ಪಿ ಪೊಗಳ್ದು ಮನ್ನಿಸಿ ಮಾತೃಮಿತ್ರಸಮೇತಮವನಂ ಮಣಿಪುಷ್ಪಕಮನೇಱಿಸಿ—

ಸತ್ಕಾರವನ್ನು ಅವರಿಗೆ ಉಂಟುಮಾಡಿದರು. ವ॥ ಆಗ ಆ ಜಗದೇವನು ಸಂಭ್ರಮಗೊಂಡು—೩೩. ಲೋಕದಲ್ಲಿ ಶಿವನಲ್ಲಿ ದ್ರೋಹವೆಸಗುವವನನ್ನು ಕೊಲ್ಲುವುದು ಭಕ್ತನಾದವನಿಗೆ ಯೋಗ್ಯ ಕಾರ್ಯ ತಾನೇ. ಆದರಂತೆ ತಪ್ಪದೆ ಆ ದ್ರೋಹಿಯಾದ ಬಿಜ್ಜಳನನ್ನು ಶಿವಭಕ್ತರುಗಳ ಅಪ್ಪಣೆಯ ಮೇರೆಗೆ ನಾನು ಕೊಂದೆನು. ಆದ ಕಾರಣ ನಾನೀಗ ಹೊರಲಾರದ ಪಾಪವನ್ನು ಹೊತ್ತಂತಾಗಿದೆ. ಈ ಪಾಪವನ್ನು ಕಳೆದುಕೊಳ್ಳುವುದಕ್ಕೆ ನಿರಾಶೆಯಿಂದ (ದೇಹದ ಮೇಲೆ ಯಾವ ಆಶೆಯೂ ಇಲ್ಲದವನಾಗಿ) ನಾನೇ ನನ್ನ ಪ್ರಾಣವನ್ನು ಬಿಡುತ್ತೇನೆನ್ನುತ್ತ ಆ ಭಕ್ತನು ಖಡ್ಗದ ಕೊನೆಯಿಂದ ತನ್ನ ಶಿರಸ್ಸನ್ನು ಕತ್ತರಿಸಿಕೊಂಡನು. ವ॥ ಆ ರೀತಿ 'ಕಳಕ್' ಎಂದು (ತನ್ನ ಶಿರಸ್ಸನ್ನು) ಕತ್ತರಿಸಿ ಇಕ್ಕುತ್ತಿದ್ದ ಹಾಗೆಯೇ ಪಾರ್ವತೀಪತಿಯಾದ ಶಿವನು ಸಂತೋಷಗೊಂಡು—೩೪. ದೇವಗಂಗಾನದಿ, ಒಳ್ಳೆಯ ಚಂದ್ರ, ಕೆಂಪಾದ ಜಡೆ, (ಹಣೆಯ ಮೇಲೆ) ಧರಿಸಿದ ಅಗ್ನಿನೇತ್ರ, ತ್ರಿಶೂಲ, ಕಂಠದ ವಿಷ, (ದೇಹಕ್ಕೆಲ್ಲ ಧರಿಸಿದ) ಭಸ್ಮ, (ಉಟ್ಟ) ಆನೆಯ ಚರ್ಮ, ಹಿಮವಂತನ ಪುತ್ರಿಯಾದ ಪಾರ್ವತಿ, ಹಾವುಗಳ ಆಭರಣ (ಅಥವಾ ಧರಿಸಿದ ಹಾವು)—ಇವೆಲ್ಲ ಶೋಭಿಸುತ್ತಿರಲು ಪರಮೇಶ್ವರನು ಪ್ರಕಾಶಿಸುತ್ತಿದ್ದನು. ವ॥ ಈ ರೀತಿಯಲ್ಲಿ ಪರಮೇಶ್ವರನು ಪ್ರಕಾಶಿಸುತ್ತ ತನ್ನ ಭಕ್ತನಾದ ಜಗದೇವನ (ಕತ್ತರಿಸಿದ) ಶಿರಸ್ಸನ್ನು ಮುಂಡಕ್ಕೆ ಹತ್ತಿಸಿ, ಪ್ರಾಣವನ್ನು ಅರಳಿಸಲಾಗಿ, ತನಗೆ ಎರಗಿದ ಆ ಜಗದೇವನನ್ನು ಹಿಡಿದೆತ್ತಿ ಬಿಗಿಯಾಗಿ ಅಪ್ಪಿಕೊಂಡು, ಕೊಂಡಾಡಿ ಮನ್ನಣೆ ಮಾಡಿ, ತಾಯಿ, ಮಿತ್ರರು ಸಮೇತವಾಗಿ ಅವನನ್ನು ರತ್ನಖಚಿತ ಪುಷ್ಪಕ ವಿಮಾನದಲ್ಲಿ

ಅರಲ ಸರಿ ಸುರಿಯೆ ಭೋರೆಂ
ದಿರದಮರಾನಕರವಂಗಳುಲಿವುತ್ತಿರೆ ಶಂ
ಕರನವನಂ ನಿಜಪುರಿಗೊ
ಯ್ದಿರಿಸಿದನತುಳಪ್ರಸನ್ನಸುಖಸಂಪದದೊಳ್ ೩೫

ವ॥ ಆಗಳಿಂತು ಜಗದೇವನೆಸಗಿದ ಕಡುಗಜ್ಜದಾದ್ಯಂತಮೆಲ್ಲಮನಿತ್ಮಲ್ಬಸವರಸಂ ಕೇಳ್ದು ಪಿರಿದು ಸಂ[1]ತಸಂ[1]ದಾಳ್ದು ನಿಜಗುರುವಪ್ಪ ಕೂಡಲಸಂಗಮೇಶ್ವರನಂ ಕಾಣ್ಬ ಸಡಗರದಿಂ ಭಕ್ತಗಣ ಸಂಯುಕ್ತನಾ ಕಪ್ಪಡಿಗೇಳ್ತಂದಾ ಲಿಂಗಮಂದಿರಂಬುಗುವಾಗಳ್—

ಮೊದಲ ಗುರುರೂಪನಾಳ್ದೊ
ಪ್ಪಿದನಿದಿರೊಳ್ಸಂಗಮೇಶ್ವರಂ ಬಸವಂ ಕಂ
ಡುದಿತೋತ್ಸವಮುಲರುತ್ತಿರೆ
ಸದಮಳಸದ್ಭಕ್ತಿಭಾವಸಂಭ್ರಮದಿಂದಂ ೩೬

ತನು ರೋಮಾಂಚಮನಾಳೆ ನೇತ್ರಯುಗದಿಂದಾನಂದಬಾಷ್ಪಾಂಬು ಸೂ
ಸೆ ನಿತಾಂತಂ ಕನಿವೆರ್ಚೆ ಗದ್ಗದಸಮಾಲಾಪಂ ಕೊರಲ್ಗೊಂಡು ಕಂ
ಪನಮಂ ತಾಳ್ದೊಡಲಾನೆ ಬಚ್ಚೆವರನಾನಂದಾಬ್ಧಿ ನೀರೇಱೆ ಪಾ
ವನವೃತ್ತಂ ನೆಗಳ್ದಂ ತದಂಘ್ರಿಗೊಲವಿಂ ದಂಡಪ್ರಣಾಮಂಗಳಂ ೩೭

ಕುಳ್ಳಿರಿಸಿಕೊಂಡು—೩೫. ಹೂವುಗಳ ಮಳೆ ಸುರಿಯುತ್ತಿರಲು, ಭೋರೆಂದು ತಪ್ಪದೆ ದೇವದುಂದುಭಿಗಳು ಧ್ವನಿಮಾಡುತ್ತಿರಲು, ಶಂಕರನು ಅವರನ್ನು ತನ್ನ ಕೈಲಾಸ ಪಟ್ಟಣಕ್ಕೆ ಕರೆದೊಯ್ದು ಅನುಪಮವಾದ ಕೃಪೆಯನ್ನು ತೋರಿಸಿ ಸುಖಸಂಪತ್ತಿನಲ್ಲಿ ಇರಿಸಿದನು. ವ॥ ಆಗ ಜಗದೇವನು ಈ ರೀತಿಯಲ್ಲಿ ಮಾಡಿದ ಅದ್ಭುತಕಾರ್ಯದ ತುದಿ ಮೊದಲೆಲ್ಲವನ್ನೂ (ಕಪ್ಪಡಿಸಂಗಮಕ್ಕೆ ಹೊರಟಿದ್ದ) ಬಸವಣ್ಣನು ಕೇಳಿ, ಅತಿಶಯ ಸಂತೋಷ ಹೊಂದಿ, ತನ್ನ ಗುರುವಾದ ಕೂಡಲ ಸಂಗಮೇಶ್ವರನನ್ನು ಕಾಣುವ ಸಡಗರದಿಂದ (ಅನೇಕ) ಶಿವಭಕ್ತ ಸಮೂಹದೊಡಗೊಂಡಿದ್ದ ಅವನು ಕಪ್ಪಡಿ ಸಂಗಮಕ್ಕೆ ಬಂದು ಶಿವಲಿಂಗದ ಮಂದಿರವನ್ನು ಪ್ರವೇಶಿಸುವಾಗ—೩೬–೩೭. ಎದುರಿನಲ್ಲಿ ಸಂಗಮೇಶ್ವರನು ಮೊದಲಿನಂತೆ (ತಾನು ಜನ್ಮಧಾರಣೆ ಮಾಡುವ ಕಾಲದಲ್ಲಿ ಕಾಣಿಸಿಕೊಂಡ ರೀತಿಯಲ್ಲಿಯೇ) ಗುರುರೂಪವನ್ನು ಹೊಂದಿ ಶೋಭಿಸಿದನು. ಬಸವಣ್ಣನು (ಆ ರೀತಿಯಲ್ಲಿರುವ ಸಂಗಮೇಶ್ವರನನ್ನು) ಕಂಡು ಉತ್ಪನ್ನವಾದ ಸಂತೋಷವುಳ್ಳವನಾಗಿ, ಶ್ರೇಷ್ಠವೂ, ಪವಿತ್ರವೂ ಆದ ಭಕ್ತಿಭಾವವು ಅರಳುತ್ತಿರಲು, ಸಂಭ್ರಮದಿಂದ ದೇಹವು ರೋಮಾಂಚನಗೊಂಡಿತು ; ಎರಡೂ ಕಣ್ಣುಗಳಿಂದ ಸಂತೋಷ ಬಾಷ್ಪಗಳು ಅತ್ಯಧಿಕವಾಗಿ ಸುರಿದವು ; ಕಂಠದಿಂದ ಗದ್ಗದಿತವಾದ ಮಾತುಗಳು ಅತಿಶಯವಾಗಿ ಹೊಮ್ಮಿದುವು ; ನಡುಗುವಿಕೆಯನ್ನು ಹೊಂದಿದ ದೇಹವು ಬೆವರೇರಿತು. ಆನಂದವೆಂಬ ಸಮುದ್ರವು ಉಕ್ಕಿತು ; ಪಾವನ ಚರಿತ್ರೆಯನ್ನುಳ್ಳ ಬಸವೇಶ್ವರನು ಆ ಪರಮೇಶ್ವರನ

1 ತೋಷಂ (ಜ)

ವ॥ ಅಂತು ನೆಗಳ್ದು ಕೃತಾಂಜಲಿಪುಟಮಂ ಪೊತ್ತು ನಿಂದು—

ಸ್ವಾಮಿ ಮದೀಯಮಾನಸವನೇಜದಿನೇಶ್ವರ ಮಾಧವಾಜಸು
ತ್ರಾಮಕಿರೀಟಮಂಡಿತಪದಾಂಬುಜ ವಿಶ್ವಕುಟುಂಬರಕ್ಷಣೋ
ದ್ದಾಮ ದಯಾಸುಧಾರಸಸಮಗ್ರಕಟಾಕ್ಷ ಕಲಂಕದೂರ ನಿ
ಷ್ಕಾಮ ಚಿದಂಗನಾರಮಣ ದೇಶಿಕ ಕೂಡಲಸಂಗಮೇಶ್ವರಾ ೩೮

ನಿರುಪಮ ನಿತ್ಯ ನಿಷ್ಕಳ ನಿರಾಕುಳ ನಿರ್ಭಯ ನೀಲಕಂಠನಿ
ರ್ಜರನುತ ನಿಷ್ಪ್ರಪಂಚ ನಿಗಮಾಗಮವಂದ್ಯ ನಿರೀಹ ನಿಸ್ಸೃತ
ಸ್ಮರ ನಿರವದ್ಯ ನಿರ್ಮದ ನಿರರ್ಗಳ ನಿಶ್ಚಳ ನಿಸ್ತುಳಪ್ರಭಾ
ಕರ ನಿರುಪಾಧಿ ನಿರ್ಗುಣ ನಿರಾಮಯ ಕೂಡಲಸಂಗಮೇಶ್ವರಾ ೩೯

ಜಂಗಮಲಿಂಗಸಂಗತ ನಿರಂಗ ಕುರಂಗಧರೋತ್ತಮಾಂಗ ನಿ
ರ್ಭಂಗ ಪತಂಗಜಾಂಗಜಮತಂಗಜತುಂಗಮೃಗೇಂದ್ರ ಸದ್ದಯಾ

ಪಾದಕಮಲಗಳಿಗೆ ದೀರ್ಘದಂಡ ಪ್ರಣಾಮಗಳನ್ನು ಮಾಡಿದನು. ವ॥ ಹೀಗೆ ಪ್ರಣಾಮಗಳನ್ನು ಮಾಡಿ ಕೈಗಳನ್ನು ಮುಗಿದು ತಲೆಯ ಮೇಲೆ ಹೊತ್ತುನಿಂತು— **ಬಸವೇಶ್ವರ ಕೃತ ಶ್ರೀ ಸಂಗಮೇಶ್ವರ ಪ್ರಾರ್ಥನೆ**—೩೮. ಸ್ವಾಮಿಯಾದ ಕೂಡಲ ಸಂಗಮೇಶ್ವರ ದೇಶಿಕನೇ, ನನ್ನ ಮನಸ್ಸೆಂಬ ಕಮಲಕ್ಕೆ ಸೂರ್ಯನಂತಿರುವವನೇ, ವಿಷ್ಣು, ಬ್ರಹ್ಮ, ದೇವೇಂದ್ರಾದಿಗಳ ಕಿರೀಟಗಳಿಂದ ಅಲಂಕಾರಗೊಂಡ ಪಾದಕಮಲಗಳುಳ್ಳವನೇ, ವಿಶ್ವವೆಂಬ (ದೊಡ್ಡ) ಕುಟುಂಬವನ್ನು ಸಂರಕ್ಷಣೆ ಮಾಡುವುದರಲ್ಲಿ ಸ್ವಾತಂತ್ರವುಳ್ಳವನೇ, ದಯೆಯೆಂಬ ಅಮೃತರಸದಿಂದ ಪೂರ್ಣ ತುಂಬಿಹೋದ ಕಡೆಗಣ್ಣುಳ್ಳವನೇ, ಪಾಪ ದೂರನೇ, ಇಚ್ಛಾರಹಿತನೇ, (ಬಯಕೆಗಳೇ ಇಲ್ಲದವನೇ) ಜ್ಞಾನವೆಂಬ ಸ್ತ್ರೀಯ ಪತಿಯೇ (ರಕ್ಷಿಸು.) ೩೯. ಹೋಲಿಕೆಯೇ ಇಲ್ಲದವನೂ ; ಎಂದೆಂದೂ ಇರುವವನೂ (ಮತ್ತು ಇದ್ದವನೂ), ಕಲಾರಹಿತನೂ, ಯಾವ ಕಳವಳವೂ ಇಲ್ಲದವನೂ, ಭಯರಹಿತನೂ ಆದ ನೀಲಕಂಠನೇ, (ಸಮಸ್ತ) ದೇವತೆಗಳಿಂದ ಸ್ತೋತ್ರಮಾಡಿಸಿ ಕೊಳ್ಳುವವನೇ, ಪ್ರಪಂಚದ ಲೇಪವಿಲ್ಲದವನೇ, ವೇದಾಗಮಗಳಿಂದ ವಂದಿಸಿಕೊಳ್ಳಲ್ಪಡುವವನೇ, ಇಚ್ಛಾರಹಿತನೇ, ಮನ್ಮಥನನ್ನು ತಿರಸ್ಕರಿಸಿದವನೇ, ತಪ್ಪಿಲ್ಲದವನೇ (ಕಲಂಕರಹಿತನೇ), ಮದವಿಲ್ಲದವನೇ, ತಡೆಯೇ ಇಲ್ಲದವನೇ, ದೃಢನೇ, (ಇನ್ನೊಂದರ) ಹೋಲಿಕೆಯನ್ನೇ ಇಲ್ಲದವನೇ, ಪ್ರಕಾಶವನ್ನುಂಟುಮಾಡುವವನೇ, (ನಿನಗೆ ಬೇರೊಂದು) ಕಾರಣವೇ ಇಲ್ಲದವನೇ, ಸತ್ವರಜಸ್ತಮೋಗುಣ ರಹಿತನೇ (ಅತೀತನಾದವನೇ), ವ್ಯಾಧಿ ರಹಿತನೇ ಕೂಡಲ ಸಂಗಮೇಶ್ವರಾ (ರಕ್ಷಿಸು). ೪೦. ಚರಜಂಗಮ ಲಿಂಗದಲ್ಲಿ ಒಡೆಮೆರೆತ ಆಕಾರದಲ್ಲಿ ಕಾಣಿಸಿಕೊಳ್ಳುವವನೇ, ದೇಹವಿಲ್ಲದವನೇ, ಚಂದ್ರನನ್ನು ಶಿರಸ್ಸಿನಲ್ಲಿ ಧಾರಣ ಮಾಡಿರುವವನೇ, (ಯಾರಿಂದಲೂ) ಭಂಗಗೊಳ್ಳದವನೇ, ಸೂರ್ಯಪುತ್ರನಾದ ಯಮ, ಮನ್ಮಥರುಗಳೆಂಬ ಆನೆಗಳಿಗೆ ಸಿಂಹ ಸ್ವರೂಪನಾದವನೇ, ಶ್ರೇಷ್ಠವಾದ

ಪಾಂಗ ತರಂಗಿಣೀಧರ ಪಿಶಂಗಜಟಾಭರ ಸರ್ವಮಂಗಳಾ
ಲಿಂಗಿತ ಮಂಗಳಾಂಗ ಮಹಿಮೋನ್ನತ ಕೂಡಲಸಂಗಮೇಶ್ವರಾ ೪೦

ಮನುತತಿಪೂಜ್ಯ ಮಾನ್ಯ ಮಿಹಿರದ್ಯುತಿ ಮೀನವಿಮರ್ದಿ ಮುಗ್ಧಮೂ
ರ್ತಿ ನಿಯತಮೇರುಧನ್ವಕರ ಮೈಹಿರ ಭಂಜನ ಮೋಹದೂರ ಮೌ
ಲಿನಿಹಿತಚಂದ್ರ ಮಂಗಳಗುಣಾಕರಮಸ್ತಕಮಾಲಿಕಾಂಕ ಮ
ಜ್ಜನಕ ಮದೀಶ ಮದ್ಗುರು ಕೃಪಾಕರ ಕೂಡಲಸಂಗಮೇಶ್ವರಾ ೪೧

ಭವ ಭವಭಂಜನಾಂಜನವಿವರ್ಜಿತ ನಿರ್ಜಿತಮಿತ್ರಗಾತ್ರಸಂ
ಭವ ಭುವನೇಶ ಪಾಶಹರ ಕಿಂಕರಶಂಕರ ಚಂಡತಾಂಡವೋ
ತ್ಸವ ಧವಳಾಂಗ ಪುಂಗವಗ ನಿರ್ಮದ ಶರ್ಮದ ಶರ್ವ ಪಾರ್ವತೀ
ಧವ ಶಿವಲಿಂಗ ಪಿಂಗಳಜಟಾಧರ ಕೂಡಲಸಂಗಮೇಶ್ವರಾ ೪೨

ದಯೆಯಿಂದ ತುಂಬಿದ ಕಡೆಗಣ್ಣೋಟವುಳ್ಳವನೇ, ದೇವ ಗಂಗಾಧರನೇ, ಪಿಶಂಗವರ್ಣ (ಕೆಂಪು ಹಳದಿ ಮಿಶ್ರವರ್ಣ) ದ ಅತಿಶಯವಾದ ಜಡೆಯನ್ನು ಧರಿಸಿದವನೇ, ಸರ್ವ ಮಂಗಳಾದೇವಿಯನ್ನು ಆಲಿಂಗಿಸಿಕೊಂಡವನೇ (ಸರ್ವಮಂಗಳಾ ದೇವಿಯನ್ನು ತನ್ನ ಅರ್ಧಾಂಗದಲ್ಲಿರಿಸಿಕೊಂಡವನೇ) ಉನ್ನತವಾದ ಮಹಿಮೆಯುಳ್ಳವನೇ, ಕೂಡಲ ಸಂಗ ಮೇಶ್ವರಾ (ರಕ್ಷಿಸು). ೪೧. ಮನುಗಳ ಸಮೂಹದಿಂದ ಪೂಜೆಗೊಳ್ಳಲ್ಪಡುವವನೇ, (ಸಮಸ್ತಲೋಕದ) ಮನ್ನಣೆಗೆ ಪಾತ್ರನಾದ ಸೂರ್ಯನ ಪ್ರಕಾಶವುಳ್ಳವನೇ, ಮತ್ಸ್ಯವನ್ನು ನಾಶಮಾಡಿದವನೇ, (ವಿಷ್ಣುವು ಮತ್ಸ್ಯಾವತಾರ ಮಾಡಿದನಂತರ ಆ ಮತ್ಸ್ಯವನ್ನು ಛೇದಿಸಿದವನು) ಸುಂದರಾಕಾರವುಳ್ಳ ದೇಹವುಳ್ಳವನೇ, ಮೇರು ಪರ್ವತವನ್ನು ಕರದಲ್ಲಿ ಧನುಸ್ಸನ್ನಾಗಿ ಧರಿಸಿದವನೇ, ಮಿಹಿರ (ಸೂರ್ಯ) ಪುತ್ರನಾದ ಯಮನನ್ನು ಭಂಗಗೊಳಿಸಿ ದವನೇ, ಮೋಹದಿಂದ ದೂರನಾಗಿರುವವನೇ, ಜಡೆಯಲ್ಲಿ ಧರಿಸಲ್ಪಟ್ಟ ಚಂದ್ರನನ್ನುಳ್ಳ ವನೇ, ಮಂಗಳಕರಗಳಾದ ಗುಣಗಳಿಗೆ ಆಗರನೆನಿಸಿದವನೇ, ಶಿರಸ್ಸುಗಳ ಮಾಲೆಗಳೇ ಗುರುತಾಗುಳ್ಳವನೇ, ನನ್ನ ತಂದೆಯೇ, ನನ್ನ ಈಶ್ವರನೇ, ನನ್ನ ಗುರುವೇ, ಕೃಪೆ ದೋರುವವನೇ ಕೂಡಲ ಸಂಗಮೇಶ್ವರಾ, (ರಕ್ಷಿಸು). ೪೨. ಭವ ಎಂದರೆ ತನ್ನಿಂದಲೇ ಹುಟ್ಟಿದ ಸಮಸ್ತ ಪ್ರಪಂಚದ ಭವವನ್ನು ಎಂದರೆ ಪಾಪ ಸಮೂಹವನ್ನು ನಾಶಗೊಳಿಸು ವವನೇ, 'ಅಂಜನ' ಎಂದರೆ ಕತ್ತಲೆಯನ್ನು ಅಥವಾ ಮಾಯೆಯನ್ನು ದೂರಗೊಳಿಸಿ ದವನೇ, ಸೂರ್ಯದೇಹದಿಂದುತ್ಪನ್ನನಾದ ಯಮನನ್ನು ಗೆದ್ದವನೇ, (ಸಮಸ್ತ) ಲೋಕಗಳ ಒಡೆಯನೇ, (ಭಕ್ತರ) ಬಂಧನಗಳನ್ನೆಲ್ಲ ನಿವಾರಿಸುವವನೇ, ಕಿಂಕರರಾದವರಿಗೆ ಸುಖ ವನ್ನುಂಟು ಮಾಡುವವನೇ. ಭಯಂಕರವಾದ ತಾಂಡವ ನೃತ್ಯದಿಂದ ಉತ್ಸಾಹಗೊಳ್ಳುವ ವವನೇ, ಶುಭ್ರ ಶರೀರಿಯಾದ ವೃಷಭೇಶ್ವರನನ್ನು ವಾಹನಮಾಡಿಕೊಂಡು ಸಂಚರಿಸು ವವನೇ ; ಮದರಹಿತನೇ, ಸುಖದಾಯಕನೇ, ಶರ್ವನೇ, (ಪ್ರಳಯ ಕಾಲದಲ್ಲಿ ಸಕಲ ಪ್ರಾಣಿಗಳನ್ನೂ ಹಿಂಸಿಸುವವನೇ), ಪಾರ್ವತೀಪತಿಯೇ, ಹಳದಿ ಕೆಂಪು ಮಿಶ್ರವಾದ ಬಣ್ಣದಿಂದ ಕೂಡಿರುವ ಜಡೆಯುಳ್ಳವನೇ, ಶಿವಲಿಂಗವೇ, ಕೂಡಲ ಸಂಗಮೇಶ್ವರ

ಸುರತಟಿನೀಪಯಃಕಣಕಳಾಪಜಟಾಭರ ಪದ್ಮವೈರಿಶೇ
ಖರ ನಿಗಮಾಂತಮೃಗ್ಯಚರಣಾಂಬುಜ ಶಾಶ್ವತರೂಪ ಶಾಕ್ವರೇ
ಶ್ವರವರವಾಹ ವಾರಿಧರಕರ್ಬುರಕಂಧರ ಕಾಲದರ್ಪಸಂ
ಹರ ಹರಿವಂದ್ಯಪಾದ ಜಗದೀಶ್ವರ ಕೂಡಲಸಂಗಮೇಶ್ವರಾ ೪೩

ಶರಣಕದಂಬಶಂಬರಧಿ ಶಂಬರಜಾಹಿತ ಶಂಬರಾರಿ ಶಂ
ಬರದಪಟುಪ್ರಭಂಜನ ನಿರಂಜನರಂಜಿತ ಕುಂಜರೇಂದ್ರಸಂ
ಹರ ಹರಿಣಾಂಕಪಾಣಿ ಹರಿಣಾಂಕಹುತಾಶದಿನೇಶನೇತ್ರ ಶಂ
ಕರ ಕರುಣಾನಿವಾಸ ಗುಣಭೂಷಣ ಕೂಡಲಸಂಗಮೇಶ್ವರಾ ೪೪

ಪುರುಷವರೇಣ್ಯ ಪುಣ್ಯಮಯ ಪೂರ್ಣ ಪುರಂದರವಂದ್ಯ ವಿಶ್ವವಿ
ಸ್ತರಣವಿನೋದ ವಿಶ್ರುತವಿಹಾರ ವಿರಾಜಿತವೀರಶೈವಭಾ

(ರಕ್ಷಿಸು). ೪೩. ದೇವಗಂಗಾನದಿಯ ಚಿಕ್ಕ ಚಿಕ್ಕ ನೀರಿನ ಹನಿಗಳ ಸಮೂಹದಿಂದ ತುಂಬಿರುವ ಜಡೆಯುಳ್ಳವನೇ, ಕಮಲವೈರಿಯಾದ ಚಂದ್ರನನ್ನು ಧರಿಸಿದವನೇ, ಉಪನಿಷತ್ತುಗಳಿಂದ ಹುಡುಕಿಸಿಕೊಳ್ಳಲ್ಪಡುವ ಪಾದಕಮಲವುಳ್ಳವನೇ, ಶಾಶ್ವತವಾದ (ಎಂದೂ ನಾಶವಿಲ್ಲದ) ಶ್ರೇಷ್ಠ ರೂಪವುಳ್ಳವನೇ, ಶ್ರೇಷ್ಠನಾದ (ಗೂಳಿಯೇ) ನಂದೀಶ್ವರನೇ ವಾಹನವಾಗುಳ್ಳವನೇ. ಮೇಘದಂತೆ ಕಪ್ಪಾದ ಕಂಠವುಳ್ಳವನೇ, ಯಮನ ಗರ್ವವನ್ನು ಸಂಹಾರ ಮಾಡಿದವನೇ, ವಿಷ್ಣುವಿನಿಂದ ನಮಸ್ಕರಿಸಿಕೊಳ್ಳಲ್ಪಡುವ ಪಾದವುಳ್ಳವನೇ, ಜಗತ್ತಿಗೆಲ್ಲ ಸ್ವಾಮಿಯಾದ ಕೂಡಲ ಸಂಗಮೇಶ್ವರಾ (ರಕ್ಷಿಸು). ೪೪. ಶರಣ ಜನ ಸಮೂಹವೆಂಬ ಸಮುದ್ರಕ್ಕೆ ಚಂದ್ರನೋಪಾದಿಯಲ್ಲಿರುವವನೇ, ಶಂಬರನ ವೈರಿಯಾದ ಮನ್ಮಥನೆಂಬ ಮೋಡಕ್ಕೆ ಸಮರ್ಥವಾದ ಬಿರುಗಾಳಿಯಂತಿರವವನೇ, ನಿರಂಜನನೆನಿಸಿ ಶೋಭಿಸುವವನೇ, ಶ್ರೇಷ್ಠ ಗಜಾಸುರನನ್ನು ಸಂಹರಿಸಿದವನೇ, ಜಿಂಕೆಯೇ ಗುರುತಾದ ಹಸ್ತವುಳ್ಳವನೇ (ಜಿಂಕೆಯನ್ನು ಹಸ್ತದಲ್ಲಿ ಧರಿಸಿದವನೇ), ಚಂದ್ರ, ಅಗ್ನಿ, ಸೂರ್ಯರುಗಳನ್ನು ನೇತ್ರವಾಗಿ ಉಳ್ಳವನೇ, ಸುಖವನ್ನುಂಟು ಮಾಡುವವನೇ, ಕರುಣೆಯೇ ಮನೆಯಾಗಿ ಉಳ್ಳವನೇ, (ಸಕಲ ಸದ್ಗುಣಗಳೇ ಆಭರಣವಾಗಿ ಉಳ್ಳವನೇ ಕೂಡಲ ಸಂಗಮೇಶ್ವರಾ (ರಕ್ಷಿಸು) [ಶಂಬರಧಿ–ಸಮುದ್ರ ; ಶಂಬರಜಾಹಿತ–ನೀರಿನಲ್ಲಿ ಹುಟ್ಟಿದ ಕಮಲಕ್ಕೆ ಅಹಿತನೆಂದರೆ ಶತ್ರುವಾಗಿರುವವನು–ಚಂದ್ರ ; ಶಂಬರದ–ನೀರನ್ನು ಕೊಡುವಂತಹುದು ಮೋಡ ; ಹರಿಣಾಂಕ, ಹುತಾಶ, ದಿನೇಶ ನೇತ್ರ-ಜಿಂಕೆಯನ್ನೇ ಗುರುತಾಗಿ ಉಳ್ಳ ಚಂದ್ರ, ಹೋಮ ಮೂಲಕವಾಗಿ ಅಶನವನ್ನು ಸ್ವೀಕರಿಸುವ ಅಗ್ನಿ, ದಿನಕ್ಕೆ ಒಡೆಯನಾದ ಸೂರ್ಯ :] ೪೫. ಪುರುಷ ಶ್ರೇಷ್ಠನೇ, ಪುಣ್ಯ ಸ್ವರೂಪನೇ, ಪರಿಪೂರ್ಣನೇ, ದೇವೇಂದ್ರನಿಂದ ನಮಸ್ಕರಿಸಿಕೊಳ್ಳಲ್ಪಡುವವನೇ, ಪ್ರಪಂಚವನ್ನು ವಿಸ್ತಾರಗೊಳಿಸುವಿಕೆಯಲ್ಲಿ ಸಂತೋಷಗೊಳ್ಳುವವನೇ, ಪ್ರಸಿದ್ಧವಾದ ಕ್ರೀಡೆಯಿಂದ ಪ್ರಕಾಶಿಸುವವನೇ, ವೀರಶೈವ ಧರ್ಮತತ್ತ್ವದಿಂದ ಪ್ರಕಾಶಮಾನನಾದ

ಸುರ ಭವದೂರ ಭರ್ಗ ಭಜಕವ್ರಜಭದ್ರದ ಭಕ್ತವಶ್ಯ ವಾ
ಗ್ವರದ ವರಪ್ರಸನ್ನ ಜಯು ಚಿನ್ಮಯು ಕೂಡಲಸಂಗಮೇಶ್ವರಾ ೪೫

ತರುಣಾದಿತ್ಯಪ್ರಕಾಶಾವರಣ ಶರಣಸಂದೋಹಮಂದಾರ ಚಂದ್ರಾ
ಭರಣಾಂಚನ್ಮೌಳಿ ಚಂಚದ್ಗರಳಗಳ ಕಳಾಧುರ್ಯ ಗಾಂಭೀರ್ಯಶೌರ್ಯಾ
ಕರ ಕಂದರ್ಪಾರಿ ಶೌರಿಸ್ತುತ ಗುಣಗಣರಂಗತ್ತರಂಗಾಂಗ ಗಂಗಾ
ಧರ ಮತ್ಪ್ರಾಣೇಶ ಸಂಗಪ್ರಭುವೆ ವಿಭುವೆ ರಕ್ಷಿಪ್ಪುದೆಂದಂ ವೃಷೇಂದ್ರಂ ೪೬

ವ॥ ಇಂತು ತನ್ನಂ ಕಟ್ಟಳ್ಕಱಿಂ ಪೊಗಳ್ದ ನಿಜಕುಮಾರನಪ್ಪ ಗುಣಭೂಷಣನಂ ಫಣಿಭೂಷಣಂ ನಡೆ ನೋಡಿ ತೆಗೆದು ಬಿಗಿಯಪ್ಪಿ ನಿಜಪ್ರಸಾದಮನಿತ್ತು ಮನ್ನಿಸಿ ನಿರುಪಮಾನ ವಾತ್ಸಲ್ಯಮಂ ಬೀಱಿ ಗರ್ಭಗೃಹದಂತರಾಳಮನವಂಬೆರಸು ಪೊಕ್ಕಾಗಳ್—

ಬೆಳಗಿನೊಳ್ ಬೆಳಗು ಬೆರೆದಂ
ತಳವಿಗೆ ಮಿಗಿಲಾದ ಸುಖಮನೊಳಕೊಂಡತಿ ಮಂ

ವನೇ, ಜನನ ಮರಣಾತ್ಮಕ ಸಂಸಾರದಿಂದ ದೂರನಾದವನೇ, ಭರ್ಗನೇ (ಯುವ ಮನ್ಮಥಾದಿಗಳನ್ನು ನಾಶಮಾಡಿದವನೇ), ನಿನ್ನನ್ನು ಭಜಿಸುವ ಭಕ್ತ ಸಮೂಹಕ್ಕೆ ಮಂಗಳವನ್ನುಂಟು ಮಾಡುವವನೇ, ಭಕ್ತರಿಗೆ ಅಧೀನನಾದವನೇ, ವಾಣೀಪತಿಯಾದ ಬ್ರಹ್ಮನಿಗೆ ವರವನ್ನು ಕೊಟ್ಟು ಸಂತೋಷಗೊಳಿಸಿದವನೇ, ಜ್ಞಾನಪ್ರಕಾಶಮಯನೇ ಜಯು. ಕೂಡಲ ಸಂಗಮೇಶ್ವರಾ (ರಕ್ಷಿಸು). ೪೬. ಬಾಲಸೂರ್ಯನ ಕಾಂತಿಯಂತಿರುವ ಕಾಂತಿಯು ಹೊದಿಕೆಯುಳ್ಳವನೇ, ಶರಣಜನ ಸಮೂಹಕ್ಕೆ ಕಲ್ಪವೃಕ್ಷವೆನಿಸಿದವನೇ, ಚಂದ್ರನನ್ನೇ ಆಭರಣವಾಗಿ ಕಿರೀಟದಲ್ಲಿ ಧರಿಸಿದವನೇ, ಹೊಳೆಯುತ್ತಿರುವ ವಿಷವನ್ನು ಕಂಠದಲ್ಲಿ ಧರಿಸಿದವನೇ, ಸಮಸ್ತ ವಿದ್ಯೆಗಳಿಂದ ತುಂಬಿದವನೇ (ಸಮರ್ಥನಾದವನೇ), ಗಾಂಭೀರ್ಯ ಮತ್ತು ಶೌರ್ಯಗಳಿಗೆ ಆಗರನೆನಿಸಿದವನೇ, ಮನ್ಮಥನ ವೈರಿಯೇ, ವಿಷ್ಣುವಿನಿಂದ ಸ್ತೋತ್ರಮಾಡಿಸಿಕೊಳ್ಳುವವನೇ, ಸಮಸ್ತ ಸದ್ಗುಣ ಸಮೂಹವುಳ್ಳವನೇ, ಚಲಿಸುತ್ತಿರುವ (ಕುಣಿಯುತ್ತಿರುವ) ತರಂಗಗಳೇ ಅಂಗವಾಗಿ ಉಳ್ಳ ಗಂಗಾದೇವಿಯನ್ನು ತಲೆಯಲ್ಲಿ ಧರಿಸಿರುವವನೇ, ನನ್ನ ಪ್ರಾಣದೊಡೆಯನೇ, ಸಂಗಮದೇವ ಪ್ರಭುವೇ, ವಿಭುವೇ ನನ್ನನ್ನು ಸಂರಕ್ಷಿಸಬೇಕೆಂದು ಬಸವೇಶ್ವರನು ಎಂದನು. ವ॥ ಈ ರೀತಿ ಅತ್ಯಂತ ಪ್ರೀತಿಯಿಂದ ಹೊಗಳಿದ ತನ್ನ ಮಗನಾದ ಸದ್ಗುಣಗಳಿಂದ ಅಲಂಕಾರಗೊಂಡ ಬಸವೇಶ್ವರನನ್ನು ಪರಮೇಶ್ವರನು ದಿಟ್ಟಿಸಿ ನೋಡಿ, ಬಾಚಿ ಗಟ್ಟಿಯಾಗಿ ತಬ್ಬಿಕೊಂಡು ತನ್ನ ಪ್ರಸಾದವನ್ನು ಕೊಟ್ಟು, ಮನ್ನಣೆಗೊಳಿಸಿ, ಅಸದೃಶವಾದ ವಾತ್ಸಲ್ಯವನ್ನು ತೋರಿಸಿ, ಆ ಬಸವೇಶ್ವರನೊಡನೆ ಗರ್ಭಗುಡಿಯ ಒಳಭಾಗವನ್ನು ಹೊಕ್ಕಾಗ—೪೭. ಬಸವಣ್ಣನು ಬೆಳಕಿನೊಳಗೆ ಬೆಳಕು ಬೆರೆತಹಾಗೆ ಲೆಕ್ಕವಿಲ್ಲದ ಅತ್ಯಂತ ಸುಖವನ್ನು

ಗಳಮಯಲಿಂಗದೊಳೊಡವೆರೆ
ದಲಕ್ಷ್ಯಭಾವಮನೆ ತಾಳ್ದು ಮೆಱೆದಂ ಬಸವಂ ೪೭

ಪ್ರಮಥರ್ಪೂಮಳೆಗಱೆದ
ರ್ಪ್ರಮುದದೆ ಗಣಭೇರಿ ಧಾಂಧಳಂ ಧ್ವನಿಗೆಡೆ ಸಂ
ಭ್ರಮದಿನುಘೇಯೆನುತಿರ್ದ
ರ್ವಿಮಳಾಂತಃಕರಣಭರಣರಭವನ ಶರಣರ್ ೪೮

ಅನುಪಮನಪ್ರತರ್ಕ್ಯಮಹಿಮಂ ಶರಣಾಗತವಜ್ರಪಂಜರಂ
ವಿನಯಸುಧಾಸರೋಧಿ ಕರುಣಾಮೃತಪೂರ್ಣಕಟಾಕ್ಷನೀಶಹೃ
ದ್ವನಜನಿವಾಸನೆಲ್ಲೆಡೆಯ ಭಕ್ತರ ಮಾನಸಮಧ್ಯದಲ್ಲಿ ನೆ
ಟ್ಟನೆ ನೆಲೆಗೊಂಡು ರಂಜಿಸಿದನಲ್ಲದೊಡೆಲ್ಲಿಯ ಭ[1]ಕ್ತಿಮು[2]ಕ್ತಿಗಳ್ ೪೯

ಗುಣಿ ಬಸವಚರಿತಮಣಿದ
ರ್ಪಣದೊಳ್ಮಾರ್ಪೊಳೆದುವಲ್ತೆ ಗಣನಿವಹದ ಸ
ದ್ಗುಣಗಣಚರಿತ್ರಮಹಿಭೂ
ಷಣನೆಸಕದಿನೆಸಗೆ ವಿಶ್ವವಿಶ್ವಂಭರೆಯೊಳ್ ೫೦

ಹೊಂದಿದವನಾಗಿ ಮಂಗಳಮಯವಾದ ಲಿಂಗದೊಡನೆ ಐಕ್ಯಗೊಂಡು, ಲಕ್ಷ್ಯರಹಿತವಾದ ಭಾವ ಅಂದರೆ ಕಣ್ಣಿಗೆ ಇನ್ನಾವುದೂ ಕಾಣದೆಯಿರುವ ಭಾವನೆಯನ್ನು ಹೊಂದಿದವನಾಗಿ ಶೋಭಿಸಿದನು. ೪೮, ಪ್ರಮಥಗಣಗಳು ಹೂವಿನ ಮಳೆಯನ್ನು ಕರೆದರು ; ಸಂತೋಷದಿಂದ ಶಿವಗಣಗಳ ನಗಾರಿಯಧ್ವನಿ 'ಧಾಂಧಳಂ' ಎಂದು ಧ್ವನಿಮಾಡುತ್ತಿತ್ತು; ಪರಿಶುದ್ಧವಾದ ಅಂತಃಕರಣವೇ ಆಭರಣವಾಗಿ ಉಳ್ಳ ಪರಮೇಶ್ವರನ ಶರಣರುಗಳು ಸಂಭ್ರಮದಿಂದ ಉಘೇ ! ಎನ್ನುತ್ತಿದ್ದರು. ೪೯. ಉಪಮಾರಹಿತನೂ, ಊಹಿಸಲಸಾಧ್ಯವಾದ ಮಹಿಮಾತಿಶಯವುಳ್ಳವನೂ, ಶರಣಾಗತರಾದವರಿಗೆ ವಜ್ರಪಂಜರದಂತಿರುವವನೂ, ವಿನಯಕ್ಕೆ ಕ್ಷೀರಸರೋವರದಂತಿರುವವನೂ, ಕಾರುಣ್ಯವೆಂಬ ಅಮೃತದಿಂದ ತುಂಬಿದ ಕಡೆಗಣ್ಣುಗಳುಳ್ಳವನೂ, ಈಶ್ವರನ ಹೃದಯವೆಂಬ ಕಮಲ ಮಧ್ಯದಲ್ಲಿ ವಾಸಿಸುವವನೂ, ಎಲ್ಲೆಡೆಯಲ್ಲೂ ಇರುವ ಭಕ್ತರ ಮನಸ್ಸಿನ ಮಧ್ಯದಲ್ಲಿ ಚೆನ್ನಾಗಿ ಸ್ಥಿರಗೊಂಡು, ರಂಜಿಸುತ್ತಿದ್ದಾನೆ, ಹಾಗಲ್ಲದಿದ್ದರೆ (ಲೋಕಕ್ಕೆ) ಎಲ್ಲಿಯ ಭಕ್ತಿ ; ಎಲ್ಲಿಯ ಮುಕ್ತಿ ? ೫೦. ಭೂಮಂಡಲದಲ್ಲಿ ಸದ್ಗುಣವಿಶಿಷ್ಟನಾದ ಬಸವೇಶ್ವರನ ಚರಿತ್ರೆಯೆಂಬ ರತ್ನದ ಕನ್ನಡಿಯಲ್ಲಿ ಈಶ್ವರನ (ಲೀಲಾಮಯವಾದ) ಪ್ರಯತ್ನದಿಂದ

1 ಭು (ಅ, ಜ) 2 ಯು (ಮು)

ಬಸವನಸಮಾನಮಹಿಮ
ಪ್ರಸರಸುಧಾಂಬುಧಿಯೊಳೊಗೆದ ಸೀರ್ಪನಿಯನದೇಂ
ನಿಸದಂ ಪೊಗಳಲ್ಪಲ್ಲರೆ
ಬಿಸರುಹಭವನುಂ ಫಣೀಂದ್ರನುಂ ಸುರಗುರುವುಂ ೫೧*

ಪ್ರಮಥೇಂದ್ರಪ್ರಥಮಪ್ರಧಾನಪುರುಷಂ ಚಿದ್ರೂಪನಾದ್ಯಂತಶೂ
ನ್ಯಮಹಾವೈಭವನಪ್ರತರ್ಕ್ಯಮಹಿಮಂ ವಿಶ್ವಾವನೀರಕ್ಷಣ
ಕ್ಷಮನುಕ್ಷೇಂದ್ರಪರಾವತಾರನನಘಂ ಕಾರುಣ್ಯವಾರಾಶಿ ಭ
ದ್ರಮಯಂ ಭಕ್ತಿಪರಾಯಣಂ ಪರಶಿವಶ್ರೀಮನ್ಮನೋಮಂದಿರಂ ೫೨

ಗುರುರೂಪಂ ಲಿಂಗರೂಪಂ ಪರತರಚರರೂಪಂ ಪ್ರಸಾದಸ್ವರೂಪಂ
ಹರಪಾದಾಂಭಸ್ಸ್ವರೂಪಂ ಭಸಿತಲಸಿತರೂಪಂ ಸುರುದ್ರಾಕ್ಷರೂಪಂ
ವರಷಡ್ವರ್ಣಸ್ವರೂಪಂ ಪರಮಶಿವಮಯಾನಾದಿಭಕ್ತಸ್ವರೂಪಂ
ಪರ[1]ಶಕ್ತಿಸ್ವಸ್ವ[1]ರೂಪಂ ಬಸವನಸದೃಶಾನಂದಸತ್ಯಸ್ವರೂಪಂ ೫೩

ಶಿವಗಣದ ಸದ್ಗುಣಸಮೂಹದ ಚರಿತ್ರೆಯು ಪ್ರತಿಫಲಿತವಾದುವಲ್ಲವೇ ? ೫೧. ಬಸವಣ್ಣನ ಅನುಪಮವಾದ ಮಹಿಮೆಯ ಸಮೂಹವೆಂಬ ಕ್ಷೀರ ಸಮುದ್ರದಲ್ಲಿ ಹುಟ್ಟಿದ ಒಂದು ಸಣ್ಣ ಕಣದಷ್ಟನ್ನಾದರೂ ಬ್ರಹ್ಮನೂ, ಆದಿಶೇಷನೂ, ಬೃಹಸ್ಪತಿಯೂ ನಿಜವಾಗಿ ಹೊಗಳಲು ಶಕ್ಯರಾದಾರೇ ? ೫೨. (ಬಸವಣ್ಣನು) ಶ್ರೇಷ್ಠಪ್ರಮಥಗಣದಲ್ಲಿ ಮೊದಲನೆಯ ಪ್ರಧಾನ ಪುರುಷನೂ, ಜ್ಞಾನಸ್ವರೂಪನೂ, ತುದಿಮೊದಲುಗಳೇ ಇಲ್ಲದ ಮಹಾವೈಭವವುಳ್ಳವನೂ, ಊಹಿಸಲಸಾಧ್ಯವಾದ ಮಹಿಮೆಯುಳ್ಳವನೂ, ಸಮಸ್ತ ವಿಶ್ವದಲ್ಲಿರುವ ಭೂಭಾಗವನ್ನು ರಕ್ಷಿಸುವ ಸಾಮರ್ಥ್ಯವುಳ್ಳವನೂ, ವೃಷಭೇಂದ್ರನ (ನಂದೀಶ್ವರನ) ಅಪರಾವತಾರನೂ, ಪಾಪರಹಿತನೂ, ಕರುಣಾಸಮುದ್ರನೂ, ಮಂಗಳಮಯನೂ, ಉತ್ಕೃಷ್ಟ ಶಿವಭಕ್ತಿ ಮಾರ್ಗದಲ್ಲಿ ಚರಿಸುವವನೂ, ಪರಮೇಶ್ವರನ ಮಂಗಳಕರವಾದ ಮನಸ್ಸನ್ನೇ ಮನೆಯಾಗಿ ಉಳ್ಳವನೂ (ಎನಿಸಿದ್ದಾನೆ.) ೫೩. ಗುರುರೂಪನೂ, ಲಿಂಗರೂಪನೂ, ಪವಿತ್ರವಾದ ಜಂಗಮರೂಪನೂ, ಪ್ರಸಾದ ಸ್ವರೂಪನೂ, ಶಿವಪಾದತೀರ್ಥ ಸ್ವರೂಪನೂ, ಶ್ರೇಷ್ಠಭಸ್ಮಸ್ವರೂಪನೂ, ಪವಿತ್ರ ರುದ್ರಾಕ್ಷರೂಪನೂ, ಪವಿತ್ರ ಷಡಕ್ಷರ ಮಂತ್ರಸ್ವರೂಪನೂ, ಪರಮ ಶಿವಮಯನೂ, ಅನಾದಿ ಭಕ್ತಿಸ್ವರೂಪನೂ, ಶ್ರೇಷ್ಠ ಶಕ್ತಿ ಸ್ವರೂಪನೂ ಆದ ಬಸವಣ್ಣನು ಅನುಪಮವಾದ ಆನಂದ ಸ್ವರೂಪನೂ, ಸತ್ಯಸ್ವರೂಪನೂ ಎನಿಸಿದ್ದಾನೆ [ಇಲ್ಲಿ ಬಸವಣ್ಣನನ್ನು ಸಮಗ್ರ

---

*ಆ ಪ್ರತಿಯಲ್ಲಿ ಈ ಪದ್ಯವಿಲ್ಲ. [1]ಶಕ್ತಿಚಿತ್ಸ್ವ (ಮ) ಚಿಚ್ಛಕ್ತಿಸ್ವ (ದ)

ವ॥ ಎಂದಿಂತು ಪಲವಂದದಿಂ ಪೊಗಳುತ್ತುಂ ಚನ್ನಬಸವರಾಜನುಂ ಮಾದಿರಾಜನುಂ ಮಾಚಿದೇವನುಂ ಶರಣಗಣದೊಡನೆ ಸಂಭ್ರಮದಿಂದುಳುವೆಗೆಯ್ತಂದು ಶಿವತತ್ವಾನು ಭವಸಂಜನಿತಪರಮಾನಂದಸುಧಾಸಮುದ್ರದೊಳವಗಾಹಂಗೆಯ್ದು —

ಕರಮೆಸೆದಿರ್ದರ್ಕೆಲರೀ
ಶ್ವರಭಕ್ತರ್ ಶ್ರೀಗಿರೀಂದ್ರಕೆಯ್ದಿದರಿತ್ತಲ್
ವರಗಂಗಾಂಬಿಕೆ ತನ್ನಯ
ಕರಸರಸಿಜಲಿಂಗದೊಡನೆ ಬೆರೆದೆಸೆದಿರ್ದಳ್ ೫೪

ಪ್ರಮಥಪತಿ ಬಸವರಾಜನ
ವಿಮಳಚಿದಂಗಸ್ವರೂಪಮಾ ಭಕ್ತರ ಹೃ
ತ್ಕಮಳದೊಳೆ ತಳ್ತು ನೆಲೆಗೊಂ
ಡಮರ್ದೊಪ್ಪಿದುದಧಿಕಮುದಮನೊದವಿಸುತಾಗಳ್ ೫೫

ಬಸವಪದಾಬ್ಜದಾಸನೆನಿಸಿರ್ದ ಷಡಕ್ಷರಿದೇವನಿಂತು ನಿ
ರ್ಮಿಸಿದ ಪುರಾಣಮಂ ಮುದದಿಂ ಬರೆದೋದುವ ಕೇಳ್ವ ಮಾನವ

ವೀರಶೈವ ತತ್ತ್ವ ಮೂರ್ತಿಯೆಂದು ಹೇಳಲಾಗಿದೆ.] ವ॥ ಹೀಗೆಂದು ಹಲವಾರು ಪ್ರಕಾರದಿಂದ ಹೊಗಳುತ್ತ ಚೆನ್ನಬಸವರಾಜನೂ ಮಾದಿರಾಜನೂ, ಮಾಚಿದೇವನೂ, ಶರಣ ಸಮೂಹದೊಡನೆ ಸಂಭ್ರಮದಿಂದ ಉಳುವೆಗೆ ಹೊರಟು ಬಂದು, ಶಿವ ತತ್ತ್ವಾನು ಭವದಿಂದ ಉತ್ಪನ್ನವಾದ ಶ್ರೇಷ್ಠವಾದ ಆನಂದವೆಂಬ ಅಮೃತ ಸಮುದ್ರದಲ್ಲಿ ಸ್ನಾನಮಾಡಿ ೫೪. ಚೆನ್ನಾಗಿ ಶೋಭಿಸುತ್ತಿದ್ದರು; ಕೆಲವು ಜನ ಈಶ್ವರ ಭಕ್ತರು ಶ್ರೀಶೈಲಪರ್ವತಕ್ಕೆ ಹೋದರು. ಇತ್ತ ಕಡೆ (ಬಸವ ಪತ್ನಿಯಾದ) ಗಂಗಾಂಬಿಕೆಯು ತನ್ನ ಕರಕಮಲದಲ್ಲಿರುವ ಲಿಂಗದಲ್ಲಿ ಐಕ್ಯಗೊಂಡು ಶೋಭಿಸುತ್ತಿದ್ದಳು. ೫೫. ಪ್ರಮಥಗಣಗಳ ಒಡೆಯನಾದ ಬಸವಣ್ಣನ ಪವಿತ್ರವಾದ ಜ್ಞಾನಾಂಗ ಸ್ವರೂಪವು ಆ ಭಕ್ತರೆಲ್ಲರ ಹೃದಯ ಕಮಲದಲ್ಲಿ ಸೇರಿ ನೆಲೆಗೊಂಡು, ಅತ್ಯಧಿಕ ಸಂತೋಷವನ್ನುಂಟುಮಾಡುತ್ತ ಆಗ ಐಕ್ಯಗೊಂಡು (ಬೆಸುಗೆಗೊಂಡು) ಶೋಭಿಸುತ್ತಿತ್ತು.* ೫೬. ಬಸವಣ್ಣನ ಪಾದಕಮಲಗಳ ದಾಸನೆನಿಸಿರುವ ಷಡಕ್ಷರದೇವನನು ಈ ರೀತಿ ನಿರ್ಮಿಸಿರುವ (ಈ ವೃಷಭೇಂದ್ರ ವಿಜಯ ಅಥವಾ ಬಸವರಾಜ ವಿಜಯವೆಂಬ) ಪುರಾಣವನ್ನು ಸಂತೋಷದಿಂದ ಇದನ್ನು ಬರೆದು ಓದುವ, ಕೇಳುವ ಮನುಷ್ಯರು

*ಗ್ರಂಥಾಂತರ ಈ ಪದ್ಯವಾದ ಮೇಲೆ ಬೇರೆ ೧೯ ಪದ್ಯಗಳು ಕಂಡುಬರುತ್ತವೆ. ಗದ್ಯಾನುವಾದಕ್ಕೆತ್ತಿಕೊಂಡಿರುವ ಕರ್ನಾಟಕ ವಿ. ವಿ.ದ ಕನ್ನಡ ಕಾವ್ಯಮಾಲೆ ೯. ಈ ಪುಸ್ತಕದಲ್ಲಿ ಅಷ್ಟು ಪದ್ಯಗಳಿಲ್ಲ.

ರ್ವಸುಧೆಯೊಳತ್ಯಪೂರ್ವಸುಖಭೋಗವನಾಳ್ದು ನಿರಾಮಯತ್ವದಿಂ
ದೆಸೆದಸಮಾಕ್ಷನಿಂ ಪರದೊಳಗ್ಗಳಮೋಕ್ಷಮನಾಳ್ದು ರಂಜಿಪರ್ ೫೬

ಸುರಪನ ಭೋಗಮುಂ ಧನದನೈಸಿರಿಯುಂ ರವಿಯುಚ್ಚತೇಜಮುಂ
ಗುರುವಿನ ಬುದ್ಧಿಯುಂ ಗುಹನ ಸಾಹಸಮುಂ ರತಿರಾಜನಂದಮುಂ
ಮರುತನ ಸತ್ವಮುಂ ಬಿದಿಯ ವಿದ್ಯೆಯುಮಂಬುಜನಾಭನೇಳ್ಗೆಯುಂ
ದೊರೆವುದು ಕೇಳ್ದ ಮರ್ತ್ಯತತಿಗೀ ಬಸವೇಶ್ವರಸತ್ಪುರಾಣಮಂ ೫೭

ಪದೆದಿದನೋದುವರ್ಥಯಿಸುವಾಲಿಪ ಪೂಜಿಪ ಮಾನವರ್ಗೆ ದು
ರ್ಗದಮಪಮೃತ್ಯುತಸ್ಕರ ವಿಷಗ್ರಹ ದುಷ್ಟಮೃಗಾದಿ ಭೀತಿ ಕು
ಮದ ಜಡಭಾವ ದುಃಖಿತೆ ದರಿದ್ರತೆ ಕಂಟಕಮೆಂಬಿವೆಲ್ಲಮಂ
ಸದಮಳಧರ್ಮರೂಪ ಪಱಿದಿಕ್ಕಿ ಸುಖಂಗೊಡು ನೀಂ ವೃಷಾಧಿಪಾ ೫೮

ಘನಶರಣಪ್ರತಾನದ ಮಹತ್ವಮನೀಶ್ವರನೊರ್ವನಲ್ಲದ
ಬ್ಜನಯನ ವಾಗ್ವರಾದಿ ದಿವಿಜರ್ಮುನಿಗಳ್ತಿಳಿಯಲ್ಕಸಮರ್ಥರ
ಲ್ತೆನೆ ಜಡಬುದ್ಧಿಗೇನೆನಗೆ ಶಕ್ಯಮೆ ತನ್ಮಹಿಮಾಬ್ಧಿಯೊಂದು ಸೀ
ರ್ಪನಿಯನಿತಂ ವೃಷೇಂದ್ರ ಪೊಗಳ್ದೆಂ ಕ್ಷಮಿಸೆನ್ನಯ ಸಾಸದೇಳ್ಗೆಯಂ ೫೯

ಗುರು ಪಾಲ್ಕುಱಿಕೆಯ ಸೋಮಾ
ರ್ಯರ ಭೀಮಕವೀಂದ್ರ ಶಂಕರಾರ್ಯರ ಪಾದಾಂ

ಭೂಮಂಡಲದಲ್ಲಿ ಅತ್ಯಂತ ಅಪೂರ್ವವಾದ ಸುಖಭೋಗಗಳನ್ನು ಹೊಂದಿ, ನಿರೋಗವಂತರಾಗಿ, ಶೋಭಿಸಿ, ಪರಮೇಶ್ವರನಿಂದ ಪರಲೋಕದಲ್ಲಿ ಪವಿತ್ರವಾದ ಮೋಕ್ಷವನ್ನು ಹೊಂದಿ ಪ್ರಕಾಶಿಸುವರು. ೫೭. ಈ ಬಸವೇಶ್ವರನ ಸಂಬಂಧದ ಪವಿತ್ರ ಪುರಾಣವನ್ನು ಕೇಳಿದ ಮನುಷ್ಯ ಸಮೂಹಕ್ಕೆ ದೇವೇಂದ್ರನ ಭೋಗವೂ, ಕುಬೇರನ ಐಶ್ವರ್ಯವೂ, ಸೂರ್ಯನ ನಿರ್ಮಲವಾದ ತೇಜಸ್ಸೂ, ಬೃಹಸ್ಪತಿಯ ಬುದ್ಧಿಯೂ, ಷಣ್ಮುಖನ ಸಾಹಸವೂ, ಮನ್ಮಥನ ಚಂದವೂ, ಮಾರುತನ ಸತ್ವವೂ, ಬ್ರಹ್ಮನ ವಿದ್ಯೆಯೂ, ವಿಷ್ಣುವಿನ ಅಭಿವೃದ್ಧಿಯೂ, ಉಂಟಾಗುವುದು. ೫೮. ಸಂತೋಷದಿಂದ ಓದುವ, ಅರ್ಥಮಾಡುವ, ಕೇಳುವ, ಪೂಜಿಸುವ, ಮನುಷ್ಯರಿಗೆ ಕೆಟ್ಟ ಬೇನೆಯು, ಅಕಾಲಮೃತ್ಯುವಿನ, ಕಳ್ಳರ, ವಿಷಗ್ರಹದ, ಕ್ರೂರಮೃಗಗಳೇ ಮೊದಲಾದವುಗಳ ಭಯವೂ, ಮೂರ್ಖತನ, ದುಃಖದ ಭಾವ, ಬಡತನ, ಕೆಟ್ಟ ಅಪಾಯಗಳೇ ಮೊದಲಾದವುಗಳೆಲ್ಲವನ್ನೂ, ಪರಿಶುದ್ಧ ಧರ್ಮಸ್ವರೂಪನಾದ ಬಸವೇಶ್ವರನೇ ನೀನು ಪರಿಹರಿಸಿ ಸುಖವನ್ನುಂಟುಮಾಡು. ೫೯. ಶ್ರೇಷ್ಠರಾದ ಶರಣಸಮೂಹದ ಮಾಹಾತ್ಮೆಯನ್ನು ಹೊಗಳಲು ಈಶ್ವರನೊಬ್ಬನೇ ಅಲ್ಲದೆ,ವಿಷ್ಣು ಬ್ರಹ್ಮನೇ ಮೊದಲಾದ ದೇವತೆಗಳೂ, ಮುನಿಗಳೂ ಸಮರ್ಥರಲ್ಲವೆನ್ನುವಾಗ ಮಂದ ಬುದ್ಧಿಯುಳ್ಳ ನನಗೆ ಶಕ್ಯವಾದೀತೇ ? ಆ ಬಸವೇಶ್ವರನ ಮಹಿಮೆಯೆಂಬ ಸಮುದ್ರದ ಒಂದು ತುಂತುರು ಹನಿಯಷ್ಟನ್ನು ಹೊಗಳಿದ್ದೇನೆ, ಬಸವೇಶ್ವರನೇ, ನನ್ನ ಈ ಸಾಹಸದ

ಬುರುಹಕ್ಕೆ ಮಣಿದವಂದಿರ
ವರಕೃಪೆಯಿಂದೊರೆದೆನೀ ಪುರಾಣಮನಿಳೆಯೊಳ್ ೬೦

ಜಪದಿಂದಂ ಜ್ಞಾನದಿಂದಂ ಸದಮಳಮತಿಯಿಂದಂ ಸದಾಚಾರದಿಂದಂ
ತಪದಿಂದಂ ಹೋಮದಿಂದಂ ಮುನಿಪಭಜನದಿಂ ಕ್ಷೇತ್ರಯಾತ್ರಾದಿಯಿಂದಂ
ವ್ಯಪದೇಶಂಬೆತ್ತ ದಾನಕ್ರಿಯೆಯಿನೊದವಿದತ್ಯಂತ ಪುಣ್ಯೌಘಮೀ ದಿ
ವ್ಯಪುರಾಣಾಕರ್ಣನೋದ್ಯತ್ಸುಕೃತದೊರೆಗೆ ತಾಂ ಸಾಟಿಯಲ್ಲಲ್ಲಜಸ್ರಂ ೬೧

ಪ್ರಮಥಗಣಾಂಘ್ರಿಪಂಕಜಕೆ ರುದ್ರಗಣೇಂದ್ರಪದಾಂಬುಜಕ್ಕೆ ಸಂ
ಯಮಿನುತವೃತ್ತಿಯುಕ್ತಶಿವಭಕ್ತಮಹಾಗಣಪಾದವಾರಿಜ
ಕ್ಕಮರ್ದರ್ತಿ ಭಕ್ತಿಯಿಂದಗಣಿತ ಪ್ರಣವಸ್ತುತಿಗೆಯ್ದು ದಾಸಭಾ
ವಮನೊಡನಾಳ್ದು ಜಾಱೆ ಭವಮಾಲೆ ಕೃತಾರ್ಥತೆದಾಳ್ದು ಬಾಳ್ವೆನಾಂ ೬೨

ತಿರುನೀಲಕಂಠನ ಕನ್ಯೆ ಸಂಗವಿಭು ಕಣ್ಣಪ್ಪಂ ಮಹಾದೇವಿ ಶಂ
ಕರನಿಷ್ಠರ್ಕಲಿನಾಥ ರುದ್ರಪಶುಪರ್ ಭಾಸ್ವನ್ನಮಿತ್ತಂಡಿಯೆಂ
ಬರಿವರ್ ಮುಗ್ಧಮಹೇಶಭಕ್ತರಿವರಂಘ್ರಿಧ್ಯಾನಮೆಂದೆಂಬ ಭಾ
ಸುರಚಂದ್ರಾತಪದಿಂ ಮದೀಯಪರಿತಾಪಧ್ವಾಂತಮಂ ನೀಗುವೆಂ ೬೩

ಏಳಿಗೆಯನ್ನು ಕ್ಷಮಿಸು ೬೦. ಗುರುವಾದ ಪಾಲ್ಕುರಿಕೆಯ ಸೋಮನಾಥನ, ಭೀಮಕವಿ ಶ್ರೇಷ್ಠನ, ಕಂಚಿಯ ಶಂಕರಾಚಾರ್ಯರ ಪಾದಕಮಲಗಳಿಗೆ ನಮಸ್ಕರಿಸಿ ಭೂಮಿಯಲ್ಲಿ ಅವರ ಶ್ರೇಷ್ಠಕೃಪೆಯಿಂದ ಈ ಪುರಾಣವನ್ನು ಹೇಳಿದ್ದೇನೆ. ೬೧. ಜಪವನ್ನು ಮಾಡುವುದರಿಂದ, ಜ್ಞಾನಸಂಪಾದನೆಯಿಂದ, ಪರಿಶುದ್ಧವಾದ ಬುದ್ಧಿಯಿಂದ, ಸದಾಚಾರದಿಂದ, ತಪಸ್ಸುಮಾಡುವುದರಿಂದ, ಹೋಮಮಾಡುವುದರಿಂದ, ಮುನಿಶ್ರೇಷ್ಠರನ್ನು ಭಜಿಸುವದರಿಂದ, ಕ್ಷೇತ್ರಯಾತ್ರಾದಿಗಳನ್ನು ಮಾಡುವುದರಿಂದ ನೆಪವನ್ನು ಹೊಂದಿದ ದಾನ ಮಾಡುವ ಕಾರ್ಯದಿಂದ ಉಂಟಾಗುವ ಅತ್ಯಂತ ಪುಣ್ಯಸಮೂಹವು ಈ ಪವಿತ್ರಪುರಾಣವನ್ನು ಕೇಳುವುದರಿಂದುಂಟಾಗುವ ಉತ್ಕೃಷ್ಟಪುಣ್ಯದ ಸಾದೃಶ್ಯಕ್ಕೆ ತಾನು ಯಾವಾಗಲೂ, ಸಮಾನವಾಗಲಾರದು. ೬೨. ಪ್ರಮಥಗಣಗಳ ಪಾದಕಮಲಗಳಿಗೆ, ಶ್ರೇಷ್ಠ ರುದ್ರಗಣಗಳ ಪಾದಕಮಲಗಳಿಗೆ, ಸಂಯಮಿಗಳಾದ ಋಷಿಗಳಿಂದ ಶ್ಲಾಘಿಸಲ್ಪಡುವ ಭಕ್ತಿಕ್ರಿಯೆಯಲ್ಲಿ ಕೂಡಿ ವ್ಯವಹರಿಸುವ ಶಿವಭಕ್ತರುಗಳ ಮಹಾಸಮೂಹದ ಪಾದಕಮಲಕ್ಕೆ ದೃಢವಾದ ಭಕ್ತಿಯಿಂದ ಅಗಣಿತವಾದ ನಮಸ್ಕಾರಗಳೊಡನೆ ಸ್ತೋತ್ರಮಾಡಿ, ಸೇವಕನೆಂಬ ಭಾವನೆಯೊಡನೆ ಬೆರೆತು ಜನನಮರಣಾತ್ಮಕವಾದ ಈ ಸಂಸಾರವೆಂಬ ಮಾಲೆಯು ತೊಲಗಿ ಹೋಗುವಹಾಗೆ ಕೃತಕೃತ್ಯತೆಯನ್ನು ಹೊಂದಿ ನಾನು ಬಾಳುತ್ತೇನೆ. ೬೩. ತಿರುನೀಲಕಂಠರ ಪತ್ನಿಯಾದ ಮುತ್ತೈದೆ, ಸಂಗಮೇಶ್ವರಪ್ರಭು, ಬೇಡರಕಣ್ಣಪ್ಪ, ಉಡುತಡಿಯಮಹಾದೇವಿಯಕ್ಕ, ಶಂಕರನಲ್ಲಿ ನಿಷ್ಠೆಯಿಂದ ವರ್ತಿಸಿದ ಕಲಿನಾಥ, ರುದ್ರಪಶುಪತಿ, ಪ್ರಕಾಶಿಸುವ ನಟ್ಟಮಿತ್ತಂಡಿ (ನಮಿತ್ತಂಡಿ) ಎಂಬ ಹೆಸರಿನ ಈ ಮುಗ್ಧರಾದ ಪರಮೇಶ್ವರನ ಭಕ್ತರುಗಳ ಪಾದಧ್ಯಾನವೆಂಬ ಶೋಭಿಸುವ ಬೆಳದಿಂಗಳಿನಿಂದ ನನ್ನ ಆಧ್ಯಾತ್ಮಿಕ, ಆಧಿದೈವಿಕಗಳೆಂಬ (ಪರಿತಾಪಗಳ) ಕತ್ತಲೆಯನ್ನು ದೂರಮಾಡಿ

ವರದಾಸಂ ಶಿವಲೆಂಕಮಂಚಣನುದಾರಶ್ರೀಪತೀಶಗುರ್ಣಾ
ಕರನಾ ಡೋಹರ ಕಕ್ಕಯಂ ಶ್ವಪಚದೇವಂ ಜ್ಞಾನಸಂಬಂಧ ಬಾ
ಚರಸರ್ಪಂಡಿತ ಮಲ್ಲಿಕಾರ್ಜುನರಜಸ್ರಂ ಪಾಲಿಸುತ್ತಿರ್ಕೆ ಸಾ
ದರಮೆಮ್ಮಂ ಪರಶಾಸ್ತ್ರವಿದ್ವಿಜಯಭಕ್ತರ್ ಸತ್ಕಳಾಮಂಡಿತರ್ ೬೪

ಅಜಗಣ್ಣನನಿಮಿಷಯ್ಯಂ
ನಿಜಗುಣನುಂ ಸಿದ್ಧರಾಮನುರುಲಿಂಗಾರ್ಯಂ
ವೃಜಿನಹರ ಪೂಸಲಯ್ಯನು
ಮಜಡಮಹಾಯೋಗಿ ಭಕ್ತರಿವರೆಮಗಾಳ್ದರ್ ೬೫

ವರಪಾಲ ಗೂರ್ಜರಂ ಸೌಂ
ದರನಾಥಂ ಮಲ್ಲಣಯ್ಯನುದ್ಭಟದೇವಂ
ಸುರುಚಿರ ಸತ್ಯಣ್ಣನಿವ
ರ್ಪರಶಿವಯುತ ಭೋಗಿಭಕ್ತರಿವರಂ ಪೊಗಳ್ವೆಂ ೬೬

ಅತಿಭಕ್ತಂ ಗೊಲ್ಲಳನು
ನ್ನತ ಕನ್ನದ ಬೊಮ್ಮ ಜೊಮ್ಮರಾ ನಿಂಬಿ ಜಗ
ನ್ನುತ ಮೂರ್ಖನಾಥರವರ
ನ್ವಿತಶಿವನಿರ್ಲೇಪ ಭಕ್ತರೆಮ್ಮಯ ವಿಭುಗಳ್ ೬೭

ಕೊಳ್ಳುತ್ತೇನೆ. ೬೪. ಶ್ರೇಷ್ಠದಾಸಿಮಯ್ಯ, ಶಿವಲೆಂಕಮಂಚಣ್ಣಪಂಡಿತ, ಔದಾರ್ಯ ಭಾವದ ಶ್ರೀಪತಿಪಂಡಿತರು, ಸದ್ಗುಣಗಳಿಗೆ ಆಗರನಾದ ಡೋಹರಕಕ್ಕಯ್ಯ, ಶ್ವಪಚಯ್ಯ, ತಿರುಜ್ಞಾನ ಸಂಬಂಧರು, ಬಾಚರಸರು, ಮಲ್ಲಿಕಾರ್ಜುನಪಂಡಿತಾರಾಧ್ಯರು–ಇವರೇ ಮೊದಲಾದ ಅನ್ಯಧರ್ಮಶಾಸ್ತ್ರಗಳನ್ನು ವಾದಮುಖದಲ್ಲಿ ಗೆದ್ದಭಕ್ತರೂ, ಶ್ರೇಷ್ಠವಾದ ಶಿವತತ್ತ್ವ ವಿದ್ಯಾಲಂಕೃತರೂ, ಆದವರು ಸತತವೂ ಆದರ ಪೂರ್ವಕವಾಗಿ ನಮ್ಮನ್ನು ರಕ್ಷಣೆಮಾಡುತ್ತಿರಲಿ. ೬೫. ಅಜಗಣ್ಣ, ಅನಿಮಿಷಾರ್ಯರು, (ಕೆಂಬಾವಿಯ ಚಂದಿಮರಸರಗುರುವಾದ) ನಿಜಗುಣಶಿವಯೋಗಿ, ಸೊನ್ನಲಿಗೆಯ ಸಿದ್ಧರಾಮೇಶ್ವರ ಗುರುಲಿಂಗಾರ್ಯ, ಪಾಪಹರನಾದ ಪೂಸಲಯ್ಯ–ಇವರೇ ಮೊದಲಾದ ಶಿವಜ್ಞಾನ ಸಂಪನ್ನರೂ, ಮಹಾಶಿವಯೋಗದಲ್ಲಿ ನಿರತರೂ ಆದ ಶಿವಭಕ್ತರು ನನ್ನ ಒಡೆಯರೆನಿಸಿದ್ದಾರೆ. ೬೬. ಶ್ರೇಷ್ಠನಾದ ಪಾಲುಗುರ್ಜರ, ಸೌಂದರನಂಬಿಯಣ್ಣ, ಮಲ್ಲಣ್ಣಯ್ಯ, ಉದ್ಭಟದೇವ, ಮನೋಹರನಾದ ಸತ್ಯಣ್ಣ–ಇವರೆಲ್ಲ ಪರಶಿವನೊಡನೆ ಕೂಡಿದ ಸೌಖ್ಯಾನುಭವವುಳ್ಳವರು ಇಂಥವರನ್ನು ಸ್ತೋತ್ರಮಾಡುತ್ತೇನೆ. ೬೭. ಅತಿಭಕ್ತ, ಗೊಲ್ಲಾಳಯ್ಯ, ಶ್ರೇಷ್ಠ ಕನ್ನದಬೊಮ್ಮಯ್ಯ ತೆಲುಗು ಜೊಮ್ಮಯ್ಯಗಳು, ಆ ನಿಂಬ್ಯಕ್ಕ, ಜಗತ್ತಿನ ಜನರಿಂದ ಶ್ಲಾಘಿಸಲ್ಪಡುವ ಮೂರ್ಖನಾಥರು ಇವರೆಲ್ಲರೂ ಶಿವನೊಡನೆ ಬೆರೆತು ಹೋದವರಾದ್ದರಿಂದ ಸಂಸಾರಲೇಪನದಿಂದ ದೂರರಾದ ಭಕ್ತರು ನನ್ನಪ್ರಭು

ವರವಾಗೀಶಂ ಸಕಲೇ
ಶ್ವರನೋಹಿಲ ಮೋಳಿಗಾರ್ಯ ಮಾದೇವಿ ಶುಭಾ
ಕರಕೇಶಿರಾಜರಿವರುರು
ತರ ನಿಜವೈರಾಗ್ಯಭಕ್ತರಾನಿವರಣುಗಂ ೬೮

ತಿರುನೀಲಕಂಠರಘಸಂ
ಹರ ದಸರಂ ಸೇದಿರಾಜನೇಣಾಧಿಪನ
ಚ್ಚರಿಯಮರನೀತಿ ಮೊನೆಯಿಡು
ವರಧಿಕತರ ಶಾಂತಭಕ್ತರಾನಿವರ ಸುತಂ ೬೯

ಉರುವೀರ ಶಂಕರಂ ಸೌ
ದರನಾಚಾರ್ಯಮರಲೇಶ ಕೇತಯ್ಯಂ ಬಂ
ಧುರ ಕಲ್ಲಿನಾಥ ಸೋಮಾ
ರ್ಯರ ಶಿವಮತಶೀಲಭಕ್ತರನುಚರನಪ್ಪೆಂ ೭೦

ಅತಿದಾನಿ ಭಕ್ತರೆನಿಪು
ನ್ನತ ಸಿಂಧುಮರಾಳ ಸಿಂಧುಬಲ್ಲಾಳರ ವಿ
ಶ್ರುತಮಾನಕಂಜರನ ಜನ
ನುತ ಸಿರಿಯಾಳ್ವನ ಪದಾಬ್ಜಸೇವಕನಪ್ಪೆಂ ೭೧

ಕರಿಕಾಲಚೋಳ ನಿಂಬಿಗ
ಳುರು ಮಲಯಾಧಿಪ ಹಲಾಯುಧರ್ಚಗಂಗಳೆ ಬಂ

ಗಳು. ೬೮. ಶ್ರೇಷ್ಠರಾದ ವಾಗೀಶರು, ಸಕಲೇಶ್ವರ ಮಾದರಸರು, ಓಹಿಲದೇವ, ಮೋಳಿಗೆಯ ಮಾರಯ್ಯ, (ಅವರ ಧರ್ಮಪತ್ನಿ) ಮಹಾದೇವಮ್ಮ, ಶುಭವನ್ನುಂಟು ಮಾಡುವ ಕೇಶಿರಾಜ, ಇವರು ಅತ್ಯಂತ ಶ್ರೇಷ್ಠವಾದ ನಿಜವೈರಾಗ್ಯ ಸಂಪನ್ನರಾದ ಶಿವ ಭಕ್ತರು. ನಾನು ಇವರ ಮಗ. ೬೯. ತಿರುನೀಲಕಂಠರು, ಪಾಪ ಸಂಹಾರಕನಾದ ದಸರಿದೇವ, ಸೇದಿರಾಜರು, ಏಣಾಧಿನಾಥರು, ಆಶ್ಚರ್ಯವನ್ನುಂಟುಮಾಡುವ ಅಮರ ನೀತಿಗಳು, ಮೊನೆಯಿಡುವರು—ಇವರೆಲ್ಲ ಅತ್ಯಧಿಕವಾದ ಶಾಂತಿಭಕ್ತರು, ನಾನು ಇವರೆಲ್ಲರ ಮಗನು. ೭೦. ಶ್ರೇಷ್ಠ ವೀರನಾದ ಶಂಕರ ದಾಸಿಮಾರ್ಯ, ಸೌಂದರ ಪಾಂಡ್ಯ (ಕೂನಪಾಡ್ಯ) ಆಚಾರ್ಯನಾದ ಏಲೇಶ್ವರದಕೇತಯ್ಯ, ದೃಢನಾದ ಕಲ್ಲಿನಾಥ, ಸೋಮಾರ್ಯನೇ ಮೊದಲಾದ ಶಿವಮತವೇ (ವೀರಶೈವಮತವೇ) ಶೀಲವಾಗಿ ಉಳ್ಳ ಭಕ್ತರುಗಳ ಹಿಂಬಾಲಕನೆನಿಸಿದ್ದೇನೆ. (ಆಳು ಎನಿಸಿದ್ದೇನೆ.) ೭೧. ಅತಿಶಯದಾನಗುಣದ ಶಿವಭಕ್ತರೆನಿಸಿದ ಶ್ರೇಷ್ಠಸಿಂಧುಮರಾಳ, ಸಿಂಧುಬಲ್ಲಾಳ, ಸುಪ್ರಸಿದ್ಧ ಮಾನಕಂಜರ, ಲೋಕದ ಜನರಿಂದ ಶ್ಲಾಘ್ಯನಾದ ಸಿರಿಯಾಳಸೆಟ್ಟಿ—ಇವರ ಪಾದಕಮಲಗಳ ಸೇವಕನೆನಿಸಿದ್ದೇನೆ. ೭೨. ಕರಿಕಾಲ ಚೋಳಮಹಾರಾಜ, ನಿಂಬಿಯಕ್ಕಗಳು, ಶ್ರೇಷ್ಠಮಲೆಯರಾಜ, ಹಲಾ

ಧುರ ಸಾಮವೇದಿಗಳಿವ
ರ್ಪರಹಿತಕರ ಭಕ್ತರಿವರ ತೊಳ್ತಾನಪ್ಪೆಂ ೭೨

ಮೊರಟದ ಬಂಕಯ್ಯಂ ಶಂ
ಕರದಾಸಂ ಮಾಚಿದೇವನಿಱಿವತ್ತಂ ರಾ
ಮರಸಂ ದಾಚಯ್ಯಂ ಭಾ
ಸ್ಕರದೇವಂ ವೀರಭಕ್ತರಿವರಡಿವಿಡಿವೆಂ ೭೩

ಭೂಮಿಯೊಳದ್ಭುತ ಭಕ್ತರ್
ವೇಮಯ್ಯಂ ಮುಸುಟಿ ಚೌಡನಾ ಮಾದರಸಂ
ರೇಮಯ್ಯಂ ಕಿನ್ನರನಭಿ
ರಾಮಂ ಬಾಹೂರ ಬೊಮ್ಮನೆಮಗೆಱೆಯರಿವರ್ ೭೪

ವಿಲಸತ್ಸ್ವತಂತ್ರಭಕ್ತ
ರ್ಫಲದಂಕಂ ಘಟ್ಟಿವಳ್ಳನಾ ಮೆಱೆಮಿಂಡಂ
ಕಲಿಗಣನಾಥಂ ಚಂದಯ
ಹಲಾಯುಧಪ್ರಭುಗಳಿವರ ಕಿಂಕರನಪ್ಪೆಂ ೭೫

ಗುರುಭಕ್ತಂ ಗುರುಭಕ್ತನಾತ್ಮಘನಲಿಂಗಪ್ರಾಣಿ ಸತ್ಯಣ್ಣನಾ
ಚರಭಕ್ತಂ ಕಲಿಕಂಬಯಂ ಭಸಿತನಿಷ್ಠಂ ಜ್ಞಾನಸಂಬಂಧಿ ಸೌಂ
ದರಮಿತ್ರಂ ಗಿರಿಶಾಕ್ಷನಿಷ್ಠನುರುಮಾರಂ ಪಾವತೀರ್ಥಪ್ರಿಯಂ
ಚರಶೇಷಪ್ರಿಯನಪ್ಪ ಬಾಚರಸರೀ ಸದ್ಭಕ್ತರಂ ಮದಿಪೆಂ ೭೬

ಯುಧ, ಚಂಗಳೆ (ಸಿರಿಯಾಳನ ಧರ್ಮಪತ್ನಿ), ದೃಢಭಕ್ತಿಯ ಸಾಮವೇದಿ, ಇವರೆಲ್ಲ ಪರರಹಿತಕ್ಕಾಗಿ ಕಾರ್ಯಮಾಡಿದ ಶಿವಭಕ್ತರು. ಇವರೆಲ್ಲರ ಸೇವಕನು ನಾನಾಗಿದ್ದೇನೆ. ೭೩. ಮೊರಟದಬಂಕಯ್ಯ, ಶಂಕರದಾಸಿಮಾರ್ಯ, ಮಡಿವಳಮಾಚಿದೇವ, ಇರಿವತ್ತ, ರಾಮರಸ (ರಾಮದೇವ), ನಾಚಯ್ಯ ಬಾಚರಸದೇವ (ಭಾಸ್ಕರದೇವ), ಇವರೆಲ್ಲ ವೀರರಾದ ಭಕ್ತರು ಇವರ ಪಾದಗಳನ್ನು ಹಿಡಿಯುತ್ತೇನೆ. ೭೪. ಭೂಮಿಯಲ್ಲಿ ಅದ್ಭುತಭಕ್ತರೆನಿಸಿದ ವೇಮಯ್ಯ, ಮುಸುಟಿಯ ಚೌಡಯ್ಯ, ಆ ಮಾದರಸರು, ಕದಿರ ರೇಮಯ್ಯ, ಕಿನ್ನರಿಯ ಬೊಮ್ಮಯ್ಯ, ಮನೋಹರನಾದ ಬಾಹೂರಬೊಮ್ಮಯ್ಯ–ಇವರು ನಮಗೆ ಒಡೆಯರುಗಳು. ೭೫. ಪ್ರಕಾಶಮಾನರಾದ ಸ್ವತಂತ್ರಭಕ್ತರಾದವರು ಫಲವೇ ಅಂಕವಾಗಿಉಳ್ಳಘಟ್ಟಿವಾಳಯ್ಯ, ಆಮುರೆಮಿಂಡದೇವ, ಕಲಿಗಣನಾಥ, ಚೆಂದಯ್ಯ (ನುಲಿಯ ಚೆಂದಯ್ಯ) ಹಲಾಯುಧಪ್ರಭುಗಳು. (ನಾನು) ಇವರ ಸೇವಕನಾಗುತ್ತೇನೆ. ೭೬. ಗುರುವಿನಲ್ಲಿ ಅತ್ಯಂತ ಭಕ್ತಿ ಪ್ರಕಟಿಸಿದ ಗುರುಭಕ್ತನೂ, ತನ್ನ ಶ್ರೇಷ್ಠವಾದ ಆತ್ಮಲಿಂಗವೇ ಪ್ರಾಣವಾಗಿಉಳ್ಳ ಸತ್ಯಣ್ಣ, ಆ ಜಂಗಮಭಕ್ತನಾದ ಕಲಿಕಂಬಯ್ಯ, ಭಸ್ಮದಲ್ಲಿ ನಿಷ್ಠೆತೋರಿದ ಜ್ಞಾನಸಂಬಂಧಿ, ರುದ್ರಾಕ್ಷಧಾರಣೆಯಲ್ಲಿ ನಿಷ್ಠೆತೋರಿಸಿದ ಸೌಂದರಮಿತ್ರ, ಗುರುಲಿಂಗಜಂಗಮ ಪಾದತೀರ್ಥದಲ್ಲಿ ಪ್ರೀತಿಯುಳ್ಳ ಶ್ರೇಷ್ಠಮಾರಯ್ಯ, ಜಂಗಮರ ಶೇಷ ಪ್ರಸಾದದಲ್ಲಿ ಪ್ರೀತಿಯನ್ನುಳ್ಳ ಬಾಚರಸ ಈ ಶ್ರೇಷ್ಠಭಕ್ತರಿಗೆಲ್ಲ

ಇಳೆಯೊಳೆ ಮಾಣದಿಂತು ಚಲದಿಂ ಬಲದಿಂದತಿನಿಷ್ಠೆಯಿಂ ಮನಂ
ಗೊಳಿಸುವ ಭಕ್ತಿಯಿಂ ತನುಮನೋವನಿತಾಸುತಮುಖ್ಯವಸ್ತುಸಂ
ಕುಳಮನವಂಚಕತ್ವದಿನೊಲ್ದಭವಂಗೆ ಸಮರ್ಪಿಸುತ್ತೆ ನಿ
ಶ್ಚಳಸುಖಮಾಳ್ದ ಸರ್ವಶಿವಭಕ್ತರ ಪಾದುಕೆಯಾಂಪ ಭಕ್ತನಾಂ ೭೭

ಪಲವಂದದಾಚರಣೆಗಳಿ
ನಲಸದೆ ಪದೆದಂದುಮಿಂದು ಮುಂದಭವನನೊ
ಲ್ದೊಲಿಸಿದೊಲಿಸಲ್ಕೆ ನೆರೆದಿ
ರ್ದೊಲಿಯಿಪ ಶಿವಶರಣರೆಲ್ಲರಂಘ್ರಿಗೆ ಮಣಿವೆಂ ೭೮

ಜಯ ಜಯ ದೇವ ಸುಧಾಮಯಧಾಮ ಯಶಸ್ಕ ಮಹಸ್ಕಲಿತಾಕ್ಷ ನಿರಾ
ಮಯ ಮಹಿತಾಂಗ ಸದಂಗನ ಪುಂಗವವಾಹ ವಿಮೋಹ[1]ವಿಮೋಹ[1] ಕುಶೇ
ಶಯನಯನೇಕ್ಷಣ ಸಾರಸಸಾದಸಮರ್ಚಿತಪಾದಪಯೋಜ ಸದಾ
ಶ್ರಯ ಭಯದೂರ ಕುಮಾರ ಕುಮಾರಸುಧಾಕರಶೇಖರ ಶೂಲಧರಾ ೭೯

ನಮಸ್ಕರಿಸುತ್ತೇನೆ. ೭೭. ಭೂಮಂಡಲದಲ್ಲಿ ಈ ರೀತಿಯಲ್ಲಿ ತಪ್ಪದೆ ಚಲದಿಂದಲೂ, ಶಕ್ತಿಪ್ರದರ್ಶನದಿಂದಲೂ, ಅತ್ಯಂತ ನಿಷ್ಠೆಯಿಂದಲೂ ಮನಸ್ಸನ್ನಾಕರ್ಷಿಸುವ ಭಕ್ತಿ ಜೀವನದಿಂದ ತನ್ನ ದೇಹ, ಮನಸ್ಸು, ಹೆಂಡಿರು, ಮಕ್ಕಳೇ ಮೊದಲಾದ ಪ್ರಮುಖ ವಸ್ತು ಸಮೂಹವನ್ನು ನಿರ್ವಂಚಕಭಾವದಿಂದ ಪ್ರಸಿದ್ಧವಾಗಿ ಶಿವನಿಗೆ ಸಮರ್ಪಣೆ ಮಾಡುತ್ತ ಶಾಶ್ವತವಾದಸುಖವನ್ನು ಹೊಂದಿದ ಸಮಸ್ತ ಶಿವನಭಕ್ತರ ಪಾದುಕೆಗಳನ್ನು ಹೊರುವ ಭಕ್ತನು ನಾನಾಗಿದ್ದೇನೆ. ೭೮. ಅನೇಕ ಪ್ರಕಾರದ ಭಕ್ತಿಯ ಆಚರಣೆ ಗಳಿಂದ ಆಲಸ್ಯಪಡದೆ, ಸಂತೋಷದಿಂದ ಹಿಂದಿನಕಾಲದಲ್ಲಿ, ಈ ಕಾಲದಲ್ಲಿ ಮತ್ತು ಮುಂದಿನದಿನಗಳಲ್ಲಿ ಪ್ರೀತಿಯಿಂದ ಪರಮೇಶ್ವರನನ್ನು ಒಲಿಸಿಕೊಂಡಂಥ, ಒಲಿಸಿಕೊಳ್ಳು ವುದಕ್ಕೆ ಪ್ರಯತ್ನಿಸುವಂಥ, ಒಲಿಸಿಕೊಳ್ಳುತ್ತಿರುವ ಸಮಸ್ತಶಿವಶರಣರ ಪಾದಗಳಿಗೆ ನಮಸ್ಕರಿಸುತ್ತೇನೆ. ೭೯. ಜಯ ! ಜಯ ! ಪರಮೇಶ್ವರನೇ, ಅಮೃತ ಸ್ವರೂಪ ವಾದ ಚಂದ್ರನಕಿರಣಗಳಂತಹ ಕೀರ್ತಿಯುಳ್ಳವನೇ, ತೇಜಸ್ಸಿನಿಂದ (ಮಹಃ) ಕೂಡಿದ ಹಣೆಗಣ್ಣುಳ್ಳವನೇ, ರೋಗ ರಹಿತನೇ, ಶ್ರೇಷ್ಠಳಾದ ಪಾರ್ವತೀದೇವಿಯೆಂಬ ಹೆಂಡತಿ ಯೊಡನೆ ಒಡವರೆದ ಅಂಗವುಳ್ಳವನೇ (ಅರ್ಧನಾರೀಶ್ವರನೇ) ವೃಷಭೇಶ್ವರನನ್ನು ವಾಹನವನ್ನಾಗಿ ಉಳ್ಳವನೇ, ವಿಶೇಷವಾದ ಮೋಹದಿಂದಾಗುವ ಗೊಂದಲದಿಂದ ದೂರನಾದವನೇ, ಕಮಲನೇತ್ರನಾದ ವಿಷ್ಣುವಿನ ಕಣ್ಣೆಂಬ ಕಮಲದಿಂದ ಪೂಜೆಮಾಡಿಸಿ ಕೊಂಡ ಪಾದಕಮಲವುಳ್ಳವನೇ, ಸತ್ಪುರುಷರಿಗೆ ಆಧಾರನಾದವನೇ, ಭಯದಿಂದ ದೂರ ನಾದವನೇ, ಕುಮಾರಸ್ವಾಮಿಯನ್ನೇ ಕುಮಾರನನ್ನಾಗಿ ಉಳ್ಳವನೇ, ಚಂದ್ರಶೇಖರನೇ,

1 × (ದ)

ಕುಂಡಲೀಶ್ವರಕುಂಡಲಾಂಚಿತಗಂಡಮಂಡಲ ಖಂಡಿತಾ
ಖಂಡಸಾಹಸದಂಡಭೃದ್ಭುಜದಂಡ ಚಂಡಕರಪ್ರಭಾ
ಮಂಡಿತಾಂಗ ಸದಂಡಜಧ್ವಜಕಾಂಡರಕ್ಷಿತಕಾಂಡದೋ
ದ್ದಂಡ ಪಾಲಯ ಚಂಡಿಕಾಮುಖಪುಂಡರೀಕದಿವಾಕರಾ ೮೦

ಮತಿಯಿಂದಂ ಭಕ್ತಿಯಿಂದಂ ಛಲದೆ ಬಲದೆ ವೈರಾಗ್ಯದಿಂ ಧ್ಯಾನದಿಂ ಸ
ನ್ನುತಿಯಿಂದಂ ಶ್ರದ್ಧೆಯಿಂದಂ ಜಪ[ದ] ತಪದನುಷ್ಠಾನದಿಂ ದೇವ ನಿಮ್ಮಂ
ಕ್ಷಿತಿಯೊಳ್ಭಕ್ತರ್ಸಮರ್ಥರ್ಬಿಡದೊಲಿಸಿದರಾಂ ದೀನನೇಗೆಯ್ವೆಸಸ್ಮ
ತ್ಪತಿಧರ್ಮಂ ನಿಮ್ಮದೆನ್ನಂ ಪೊರೆ ಪೊರೆ ಪುರುಳಂ ನೋಡದೆನ್ನೊ[1]ಳ್ಪುರಾರೀ[1] ೮೧

ತ್ರಿಶೂಲಧರನೇ, (ಪೊರೆ ! ಪೊರೆ !) ೮೦. ಶ್ರೇಷ್ಠ ಕರ್ಣಾಭರಣವಾಗಿರುವ ಆದಿಶೇಷನಿಂದ ಪೂಜ್ಯವಾದ ಕೆನ್ನೆ (ಕಪೋಲ) ಭಾಗವುಳ್ಳವನೂ, ಅಖಂಡಸಾಹಸದ ಯಮನ, ಭುಜದಂಡಗಳನ್ನು ಖಂಡಿಸಿದವನೂ (ಕತ್ತರಿಸಿಹಾಕಿದವನೂ)ಸೂರ್ಯನ ಕಾಂತಿಯಂತಿರುವ ದೇಹಕಾಂತಿಯಿಂದ ಅಲಂಕರಿಸಲ್ಪಟ್ಟವನೂ, ಶ್ರೇಷ್ಠವಾದ ಗರುಡ (ಅಂಡಜ)ನೇ ಧ್ವಜವಾಗಿ ಉಳ್ಳ ವಿಷ್ಣುವನ್ನು ಬಾಣ (ಕಾಂಡ)ವನ್ನಾಗಿ ಮಾಡಿ ದಂಡದಂತಿರುವ ಬಾಹುಗಳಿಂದ ಧರಿಸಿ ಸಮಸ್ತ ಬ್ರಹ್ಮಾಂಡವನ್ನು ರಕ್ಷಿಸಿದವನೂ, ಚಂಡಿದೇವಿ (ಪಾರ್ವತೀದೇವಿ)ಯ ಮುಖವೆಂಬ ಕಮಲಕ್ಕೆ ಸೂರ್ಯನೋಪಾದಿಯಲ್ಲಿರುವವನೂ ಆದ ಶಿವನೇ (ನನ್ನನ್ನು) ರಕ್ಷಿಸು. [ಕುಂಡಲೀಶ್ವರ = ಸರ್ಪಶ್ರೇಷ್ಠನಾದ ಆದಿಶೇಷನು ; ಕುಂಡಲಾಂಚಿತ–ಕುಂಡಲವಾಗಿ ಪೂಜ್ಯತೆ ಪಡೆದಿರುವ ; ದಂಡಭೃತ್–ಯಮ ; ಸದಂಡಜ = ಸತ್+ಅಂಡಜ—ಶ್ರೇಷ್ಠ ಪಕ್ಷಿಯಾದ ಗರುಡ ; ಕಾಂಡ—ಕ + ಅಂಡ = ಬ್ರಹ್ಮನಿಂದ ನಿರ್ಮಾಣಗೊಂಡ ಅಂಡ ಅಂದರೆ ಬ್ರಹ್ಮಾಂಡ ; ಚಂಡಿಕಾ + ಮುಖ + ಪುಂಡರೀಕ + ದಿವಾಕರಾ—ಚಂಡಿಕೆಯ ಮುಖವೆಂಬ ಕಮಲಕ್ಕೆ ಸೂರ್ಯಪ್ರಾಯನಾದ ಶಿವನೇ ;] ೮೧. ಹೇ ದೇವಾ, ಬುದ್ಧಿಯಿಂದ, ಭಕ್ತಿಯನ್ನಾಚರಿಸುವುದರಿಂದ, ಛಲದಿಂದ, ಬಲದಿಂದ, ವೈರಾಗ್ಯ ಭಾವದಿಂದ, ಧ್ಯಾನಮಾಡುವಿಕೆಯಿಂದ, ಶ್ರೇಷ್ಠವಾಗಿ ಸ್ತೋತ್ರ ಮಾಡುವುದರಿಂದ, ಶ್ರದ್ಧೆಯಿಂದ, ಜಪದಿಂದ, ತಪಸ್ಸನ್ನಾಚರಿಸುವಿಕೆಯಿಂದ ನಿಮ್ಮನ್ನು ಭೂಮಂಡಲದಲ್ಲಿ ಸಮರ್ಥರಾದ ಭಕ್ತರುಗಳು ತಪ್ಪದೆ ಒಲಿಸಿಕೊಂಡರು. ನಾನು (ಏನೂ ಇಲ್ಲದ) ಬಡವನು. ಏನುಮಾಡಲಿ ! ನನ್ನ ಒಡೆಯನಾಗಿರುವುದು ನಿಮ್ಮ ಧರ್ಮ. (ನೀವೆ ನನ್ನ ಒಡೆಯರೆಂದು ಮಾತ್ರ ನಂಬಿರುವವನು ನಾನು) ಹೇ ತ್ರಿಪುರ ಸಂಹಾರಿಯೇ

---

1 ಳ್ಕೃಪೇಂದ್ರಾ ಎಂದು ಮಾತ್ರ ಪಾಠಾಂತರದಿಂದ ಈ ಪದ್ಯವು 'ದ' ಪ್ರತಿಯಲ್ಲಿ ಈ ಆಶ್ವಾಸದ ೨೧ನೆಯ ಪದ್ಯವಾಗಿದೆ.

ಶಿವ ಶಿವ ದೇವದೇವ ಪರಮೇಶ ರಮೇಶಸುಬಾಣ ಬಾಣದಾ
ನವ ನವಸಂಪದಪ್ರದ ಸುಧಾಮಸುಧಾಮ ಭವಾರಿ ವಾರಿಜೋ
ದ್ಭವಭವವಂದ್ಯ ವಂದ್ಯ ಮೃಗಲಕ್ಷಣಲಕ್ಷಣ ಗೋಪ ಗೋಪಬಾಂ
ಧವ ಧವಳಾಂಗ ಕುಂಡಲಿಪಕುಂಡಲ ಪಾಲಿಪುದೆನ್ನನೀಶ್ವರಾ ೮೨

ಕಾಮುಸಾಮಜಸಾಮಜಾರಿ ಜಿತಾಮಯಂ ಕರುಣಾಮಯಂ
ಸೋಮತಾಮರಸಾಪ್ತಸಪ್ತಶಿಖಾಕ್ಷನಂಧಕಬಂಧಕಂ
ಭೂಮಧಾಮ ಜಟಾಧರಂ ಗಣಪೋಷಣಂ ಗುಣಭೂಷಣಂ
ಸ್ವಾಮಿ ಕಾಮಿತಮೀಗೆ ಭಕ್ತಜನಕ್ಕೆ ವೀತಭವಂ ಶುಭಂ ೮೩

ಶುಭವಿಭವಮನಭವಂ ಕುಡು
ಗೆ ಭವಾನಿ ಸುಸಂಪದಂಗಳಂ ಮಾಳ್ಕೆ ಪೊದ

ನನ್ನಲ್ಲಿ ಯಾವ ತಿರುಳನ್ನೂ ನೋಡದೆ ನನ್ನನ್ನು ರಕ್ಷಿಸು ! ರಕ್ಷಿಸು ! ೮೨. ಹೇ ಮಂಗಳಕರನಾದ ಶಿವನೇ, ದೇವತೆಗಳಿಗೆಲ್ಲ ದೇವನೆನಿಸಿದವನೇ, ಪರಮೇಶ್ವರನೇ, ರಮಾಪತಿಯಾದ ವಿಷ್ಣುವೆಂಬ ಶ್ರೇಷ್ಠ ಬಾಣವುಳ್ಳವನೇ, ಬಾಣನೆಂಬ ರಾಕ್ಷಸನಿಗೆ ನೂತನ ಸಂಪತ್ತನ್ನು ಅನುಗ್ರಹಿಸಿದವನೇ, ಅತಿಶಯವಾದ ತೇಜಸ್ಸಿನಿಂದ ಕೂಡಿದ ಸೂರ್ಯಮಂಡಲ ಮಧ್ಯಸ್ಥನಾದವನೇ (ಸೂರ್ಯಮಂಡಲವೇ ಸ್ಥಾನವಾಗಿ ಉಳ್ಳವನೇ), ಜನನ ಮರಣಾತ್ಮಕ ಸಂಸಾರಕ್ಕೆ ಶತ್ರುವೆನಿಸಿದವನೇ ಕಮಲದಿಂದ ಉದ್ಭವಿಸಿದ ಬ್ರಹ್ಮಪುತ್ರನಾದಂದಿನಿಂದ ನಮಸ್ಕರಿಸಿಕೊಳ್ಳಲ್ಪಡುವವನೇ, ಸಮಸ್ತ ಲೋಕಗಳಿಂದ ನಮಸ್ಕರಿಸಲ್ಪಡುವವನೇ, ಮೃಗವೇ ಲಕ್ಷಣವಾಗಿ ಉಳ್ಳ ಚಂದ್ರನನ್ನು ಧರಿಸುವಿಕೆ ಯಿಂದ ಚೆಂದಕಾಣುವವನೇ, ವೇದರಕ್ಷಕನೇ, ಗೋವುಗಳಿಗೆಲ್ಲ ಪತಿಯೆನಿಸಿದ ವೃಷಭನನ್ನು ಬಂಧುವಾಗಿ ಉಳ್ಳವನೇ, ಶುಭ್ರವಾದ ಅಂಗವುಳ್ಳವನೇ, ಸರ್ಪಗಳಿಗೆಲ್ಲ ಪತಿಯೆನಿಸಿದ ಆದಿಶೇಷನೇ ಕರ್ಣಾಭರಣವಾಗಿ ಉಳ್ಳ ಈಶ್ವರನೇ; ನನ್ನನ್ನು ರಕ್ಷಿಸು. [ಗೋಪ=ವೇದರಕ್ಷಕ ಗೋಪಬಾಂಧವ–ಗೋವುಗಳಿಗೆ ಪತಿಯಾದ ನಂದಿಯೇ ಬಾಂಧವ ನೆನಿಸಿದವ] ೮೩. ಮನ್ಮಥನೆಂಬ ಮದ್ದಾನೆಗೆ ಸಿಂಹಪ್ರಾಯನಾದವನೂ ಭವವೆಂಬ ರೋಗ ವನ್ನು ಗೆದ್ದವನೂ, ಕರುಣಾಮಯನೂ, ಚಂದ್ರ, ಸೂರ್ಯ, ಅಗ್ನಿ ಇವುಗಳೇ ನೇತ್ರವಾಗಿ ಉಳ್ಳವನೂ, ಅಂಧಕಾಸುರನನ್ನು ಬಂಧನಕ್ಕೊಳಪಡಿಸಿದವನೂ ಮಹಾತೇಜಸ್ವಿಯೂ, ಜಟಾಧರನೂ, ಶಿವಗಣಗಳನ್ನು ಪೋಷಿಸುವವನೂ, ಸದ್ಗುಣಗಳಿಂದ ಭೂಷಣಗೊಂಡ ವನೂ, ಪಾಪವನ್ನು ಹೋಗಲಾಡಿಸಿದವನೂ, ಮಂಗಳಕರನೂ ಆದ ಸ್ವಾಮಿಯು ಭಕ್ತ ಸಮೂಹಕ್ಕೆ ಇಷ್ಟಾರ್ಥಸಿದ್ಧಿಯನ್ನು ಕೊಡಲಿ. (ಕಾಮಸಾ+ಮಜ+ಸಾಮಜಾರಿ–ಕಾಮನೆಂಬ ಆನೆಗೆ, ಆನೆಗಳ ವೈರಿಯಾದ ಸಿಂಹ; ಸೋಮ+ತಾಮರಸಾಪ್ತ+ಸಪ್ತ ಶಿಖ+ಅಕ್ಷ=ಚಂದ್ರ, ಕಮಲಕ್ಕೆ ಆಪ್ತನಾದ ಸೂರ್ಯ, ಅಗ್ನಿಗಳು ಕಣ್ಣಾಗಿ ಉಳ್ಳವ–ಶಿವ; ಭೂಮಧಾಮ=ಅತಿಶಯವಾದ ತೇಜಸ್ಸುಳ್ಳವನು. ೮೪. ಲೋಕದ ಸಜ್ಜನ ಸಮೂಹಕ್ಕೆ ಸದಾ ಕಾಲವೂ, ಪರಮೇಶ್ವರನು ಮಂಗಳಕರವಾದ ಐಶ್ವರ್ಯವನ್ನು ಕೊಡಲಿ

ಳ್ದಿ ಭವದನನೀಗೆ ನಿರ್ವಿ
ಘ್ನಭಾವಮಂ ಸುಜನವಿತತಿಗಿಳೆಯೊಳಜಸ್ರಂ ೮೪

ಪರಮಕೃಪಾಕರಂ ಪ್ರಬಳದೇಶಿಕವಂಶಸರೋಜಭಾಸ್ಕರಂ
ದುರಿತನಿವಾರಣ ದುರಭಿಮಾನಮತಾಂಬುಜವ ತ್ತವಾರಣಂ
ವರಗುಣಭೂಷಣಂ ವಿರಹಿತೇಷಣನಾಗಮವಿದ್ವರೇಣ್ಯ ಮ
ದ್ಗುರು ಚಿಕವೀರದೇಶಿಕಶಿಖಾಮಣಿ ರಕ್ಷಿಸುಗೆಮ್ಮನಾವಗಂ ೮೫

ಬಸವಾಂಘ್ರಿತ್ರಯಕೊಳ್ಪಿನಿಂ ಸಮೆದು ಮೂಱುಂ ಕಬ್ಬಮಂ ಮಾಣದ
ರ್ಪಿಸಿದರ್ಸೋಮಕವೀಂದ್ರಭೀಮಕವಿಗಳ್ ಶ್ರೀಶಂಕರಾರಾಧ್ಯರಿಂ
ಪೆಸೆವನ್ನಂ ನೆಗಳ್ದೊಂದು ಕಬ್ಬಮನಿದಂ ಮಿಕ್ಕಂಘ್ರಿಗಾದಂ ಸಮ
ರ್ಪಿಸಿದಂ ಸತ್ಕೃಪೆಯಿಂ ಷಡಕ್ಷರಿಶಿವಾಚಾರ್ಯಂ ಮಹಾಭಕ್ತಿಯಿಂ ೮೬†

ಧರಣೀಭಾಗದೊಳೀ ಪುರಾಣಮನಮಂದಾನಂದದಿಂದೋದುವಾ
ದರದಿಂದಾಲಿಸುವರ್ಥಮಂ ಪದೆದು ಪೇಳ್ವತ್ಯಂತ ಶಿಷ್ಟರ್ಗೆ ಶಾಂ

(ಅಷ್ಟೈಶ್ವರ್ಯಗಳನ್ನು ಕೊಡಲಿ); ಪಾರ್ವತಿಯು ಶ್ರೇಷ್ಠವಾದ ಸಂಪತ್ತನ್ನುಂಟುಮಾಡಲಿ; ಪ್ರಕಾಶಿಸುವ ಗಣಪತಿಯು ವಿಘ್ನವಿಲ್ಲದಿರುವಿಕೆಯನ್ನು ಉಂಟು ಮಾಡಲಿ. ೮೫. ಪವಿತ್ರ ಕೃಪೆಯನ್ನುಂಟುಮಾಡುವ, ಪ್ರಬಲರಾದ ಗುರುಶ್ರೇಷ್ಠರಾದವರ ವಂಶವೆಂಬ (ಪಠಂ ಪರೆಯೆಂಬ) ಕಮಲಗಳಿಗೆ ಸೂರ್ಯನೋಪಾದಿಯಲ್ಲಿರುವ. ಪಾಪನಿವಾರಕನೆನಿಸಿದ, ದುರಭಿಮಾನದಿಂದ ಕೂಡಿದ ಮತಗಳೆಂಬ ಕಮಲಗಳಿಗೆ ಮದೋನ್ಮತ್ತ ಆನೆಯಂತಿರುವ, ಶ್ರೇಷ್ಠವಾದ ಸದ್ಗುಣಗಳಿಂದ ಅಲಂಕಾರಗೊಂಡಿರುವ, ಅರ್ಥೇಷಣ, ಪುತ್ರೇಷಣ, ದಾರೇಷಣಗಳೆಂಬುವನ್ನು ದೂರೀಕರಿಸಿದ, ಆಗಮ ವಿದ್ಯೆಯನ್ನು ತಿಳಿದವರಲ್ಲಿ ಶ್ರೇಷ್ಠನೆಂದೆನಿಸಿದ ನನ್ನಗುರುವಾದ ಗುರುವರ್ಗಕ್ಕೆಲ್ಲ ಶಿರೋರತ್ನವೆನಿಸಿದ ಚಿಕ್ಕವೀರ ಗುರುವು ನಮ್ಮನ್ನು ಸದಾ ರಕ್ಷಿಸಲಿ. ೮೬. ಆದಿ ವೃಷಭನ ಮೂರುಪಾದಗಳಿಗೆ ಮೂರು ಕಾವ್ಯಗಳನ್ನು ಚೆನ್ನಾಗಿ ರಚನೆ ಮಾಡಿ, ಪಾಲ್ಕುರಿಕೆ ಸೋಮನಾಥ ಕವಿಶ್ರೇಷ್ಠನೂ, ಭೀಮ ಕವಿಯೂ, ಕಂಚಿಯ ಶಂಕರಾರಾಧ್ಯರೂ ಅರ್ಪಿಸಿದರು. ಮಾಧುರ್ಯವು ಶೋಭಿಸುವಂತೆ ಪ್ರಸಿದ್ಧವಾದ ಇನ್ನೊಂದು ಕಾವ್ಯವಾದ ಈ ವೃಷಭೇಂದ್ರವಿಜಯ (ಅಥವಾ ಬಸವರಾಜವಿಜಯ) ವೆಂಬ ಹೆಸರಿನ ಈ ಕಾವ್ಯವನ್ನು ಉಳಿದ ಇನ್ನೊಂದು ಪಾದಕ್ಕೆ (ನಾಲ್ಕನೆಯ ಪಾದಕ್ಕೆ) ರಚಿಸಿ, ಮಹಾಭಕ್ತಿಭಾವದಿಂದ ಷಡಕ್ಷರಿ ಎಂಬ ಹೆಸರಿನ ಶಿವಾಚಾರ್ಯನು ಪರಮಾತ್ಮನ ಕೃಪಾ ವಿಶೇಷದಿಂದ ಸಮರ್ಪಿಸಿದನು. ೮೭. ಭೂಮಂಡಲದಲ್ಲಿ ಈ ವೃಷಭೇಂದ್ರ ವಿಜಯವೆಂಬ ಕಾವ್ಯವನ್ನು ವಿಶೇಷವಾದ ಆನಂದದಿಂದ ಓದುವ, ಆದರಭಾವದಿಂದ ಕೇಳುವ, ಅರ್ಥವನ್ನು ಸಂತೋಷದಿಂದ ಹೇಳುವ, ಅತ್ಯಂತ ಶಿಷ್ಟರೆನಿಸಿರುವ ಜನರಿಗೆ

---

† ಈ ಪದ್ಯ ಗ, ಚ ಪ್ರತಿಗಳಲ್ಲಿ ಇರುವುದಿಲ್ಲ

ಕರಿಯಾಳ್ಕೃಂ ಸಲೆ ಮಾಳ್ಕೆ ಬೇಳ್ಪ ವರಮಂ ನಿತ್ಯಾಯುಃವಂ ಶ್ರೀಯುಃಮಂ
ಪರಮಾನಂದಮಂನಾತ್ಮಭಕ್ತಿಯೊಲವಂ ವಿಶ್ವಾಧಿಕಂ ಶಂಕರಂ ೮೭

ಸೋಮಸಾಕಂ ಸೋಮಃನುದ್ಯದ್ವೃಷನಟಸ[1]ಶಿವಂ ಭಿಕ್ಷು ಕಾಮಾಂತಕಾಭ್ರ
ಗ್ರಾಮೋದ್ರಾರ್ಯಬ್ಜಜೇಪ್ಟ್ಯಚ್ಯುತರಿಪು ಪಕ್ಷರರ್ಧಾಂಗನಂ ವ್ಯಾಧಲೀಲೋ

ಪಾರ್ವತೀಪತಿಯು ಅವರು ಬೇಡುವ ವರವನ್ನೂ, ದೀರ್ಘವಾದ ಆಯುಷ್ಯವನ್ನೂ, ಸಂಪತ್ತನ್ನೂ, ಶ್ರೇಷ್ಠವಾದ ಆನಂದವನ್ನೂ, ಪರಮೇಶ್ವರನಲ್ಲಿ ಭಕ್ತಿಯ ಪ್ರೀತಿಯನ್ನೂ, ಕೈಲ್ಲ ಶ್ರೇಷ್ಠನೆನಿಸಿರುವ (ದೊಡ್ಡವನೆನಿಸಿರುವ) ಶಂಕರನು, ಚೆನ್ನಾಗಿ ಉಂಟುಮಾಡು ವವನಾಗಲಿ. ೮೮. ಚಂದ್ರನನ್ನು ಗುರುತನ್ನಾಗಿಧರಿಸಿದ **'ಚಂದ್ರಕಳಾಧರ ಲೀಲೆ'** ಉಮಾಸಹಿತನಾದ **'ಉಮಾಮಹೇಶ್ವರಲೀಲೆ'**: ಶ್ರೇಷ್ಠವಾದ ವೃಷಭನನ್ನು ವಾಹನ ವನ್ನಾಗಿ ಮಾಡಿಕೊಂಡ **'ವೃಷಭವಾಹನಲೀಲೆ'** ತಾಂಡವನೃತ್ಯಮಾಡಿದ **'ತಾಂಡವಲೀಲೆ'** **ಶಿ**ವನು ಮಂಗಳ ಸಮೇತನಾದ**'ಗಿರಿಜಾ ಕಲ್ಯಾಣಲೀಲೆ'**; ಭಿಕ್ಷುಕನಾಗಿ ನಟಿಸಿದ **'ಭಿಕ್ಷಾಟನ ಲೀಲೆ'**; ಮನ್ಮಥನಿಗೆ ಅಂತಕನಾಗಿ ವರ್ತಿಸಿದ **'ಮಾರಹರಲೀಲೆ'**; ಯಮನನ್ನು ಸಂಹರಿ ಸಿದ **'ಕಾಲಾಂತಕಲೀಲೆ'**; ಅಂತರಿಕ್ಷದಲ್ಲಿದ್ದ ಮೂರುಗ್ರಾಮಗಳನ್ನು ಸುಟ್ಟು ಉರುಪಿದ **'ತ್ರಿಪುರ ಸಂಹಾರ ಲೀಲೆ'**; ಇಂದ್ರನ ವೈರಿಯಾದ **'ಜಲಂಧರ ಸಂಹಾರಲೀಲೆ'**; (ತಾನು ಸೃಷ್ಟಿಸಿದ ಸರಸ್ವತಿಯನ್ನೇ ಮೋಹಿಸಿದ) ಬ್ರಹ್ಮನನ್ನು ಸಂಹಾರ ಮಾಡಿದ **'ಅಜಾರಿ ಲೀಲೆ'**; ದಕ್ಷ ಬ್ರಹ್ಮನ ಯಜ್ಞವನ್ನು ವೀರಭದ್ರನಾಗಿ ನಾಶಪಡಿಸಿದ **'ದಕ್ಷಾಧ್ವರಹರ ಲೀಲೆ'**; ನಾರಸಿಂಹಾವತಾರ ಮಾಡಿದ್ದ ವಿಷ್ಣುವನ್ನು ಶರಭನಾಗಿ ಸಂಹರಿಸಿದ **'ಶರಭಾವ ತಾರ ಲೀಲೆ'**; ಅರ್ಧ ದೇಹವನ್ನು ಪಾರ್ವತಿಗೆ ಕೊಟ್ಟ **'ಉಮಾಮಹೇಶ್ವರಲೀಲೆ'**; ವ್ಯಾಧನಾಗಿ ಭಕ್ತನಾದ ಅರ್ಜುನನಿಗೆ ವರಪ್ರದಾನ ಮಾಡಿದ **'ಶಬರಶಂಕರಲೀಲೆ'**; ಉದ್ದಾಮನಾದ ತ್ರಿವಿಕ್ರಮನನ್ನು ಸಂಹರಿಸಿ ಅವನ ಬೆನ್ನು ಮೂಳೆಯನ್ನು ಧರಿಸಿದ **'ಕಂಕಾಳಧರ ಲೀಲೆ'** ಚಂಡೇಶನೆಂಬ ಭಕ್ತನಿಗೆ ವರಪ್ರದಾನ ಮಾಡಿದ **'ಚಂಡೇಶಾನು ಗ್ರಹಲೀಲೆ'**; ಸಮುದ್ರಮಥನ ಕಾಲದಲ್ಲಿ ಹುಟ್ಟಿದ ಭಯಂಕರ ಕಾಲಕೂಟ ವಿಷವನ್ನು ಧರಿಸಿದ **'ವಿಷಧರಲೀಲೆ'** ; ವಿಷ್ಣು, ಗಣಪತಿ, ಷಣ್ಮುಖ ಇವರುಗಳಿಗೆ ಕ್ರಮವಾಗಿ ಚಕ್ರ ವನ್ನು ಕೊಟ್ಟು **'ಚಕ್ರಧರಲೀಲೆಯಃನ್ನೂ'** ಗಣಪತಿಗೆ ಶಿವಗಣಗಳ ಯಾಜಮಾನ್ಯವನ್ನು ಕೊಟ್ಟ **'ವಿಘ್ನಪ್ರಸಾದಲೀಲೆ'** ಯಃನ್ನೂ, ತನ್ನ ವೀರ್ಯದಿಂದಲೇ ಷಣ್ಮುಖನಾಗಿ ಬೆಳೆದು ತಾರಕಸಂಹಾರ ಮಾಡಿಸಿದ **'ಉಮಾಸ್ಕಂಧಲೀಲೆ'**, ಆಕಾಶದಲ್ಲಿ ನಿಂತ ಒಂದೇ ಪಾದವುಳ್ಳ **'ಏಕಪಾದ ಲೀಲೆ'**, ಸುಖವನ್ನುಂಟು ಮಾಡುವ **'ಸುಖಾವಹಲೀಲೆ,'** **'ದಕ್ಷಿಣಾ ಮೂರ್ತಿ ಲೀಲೆ'**, ಉರಿಲಿಂಗಾಕಾರನಾಗಿ **'ಲಿಂಗೋದ್ಭವಲೀಲೆ'**–(ಹೀಗೆ ಇಪ್ಪತ್ತೈದು ಲೀಲೆಗಳಿಂದ

---

[1] ನು (ಅ, ಗ, ಜ)

ದ್ದಾಮಂ ಕಂಕಾಳಿ ಚಂಡೇಷ್ಟದ ವಿಷಪಹರೀಭಾಸ್ಯಡ್ವಕ್ತ್ರದಾತಂ
ವ್ಯೋಮೋತ್ಥೈಕಾಂಘ್ರಿಯೆಮ್ಮಂ ಪೊರೆಗೆ ಸುಖಕರಂ ದಕ್ಷಿಣಾಮೂರ್ತಿಲಿಂಗಂ ೮೮

ಒದವಿದ ಚಂದ್ರಬಾಣನಿಧಿಭೂಧರಸಂಖ್ಯೆಯನಾಳ್ದು ಸಂದ ಸ
ಮ್ಮದಕರ ಶಾಲಿವಾಹನಶಕಾಬ್ದದ ಸಾಧು ನಳಾಬ್ದಮಾಘಮಾ
ಸದ ಸಿತಪಕ್ಷಪಂಚಮಿಯ ಭಾರ್ಗವವಾರದೊಳೀ ಪುರಾಣಮಾ
ದುದು ಪರಿಪೂರ್ಣಮೀಶಕೃಪೆಯಿಂದೆ ಷಡಕ್ಷರಿದೇವನಿರ್ಮಿತಂ ೮೯

ಶಿವಭಕ್ತರ್ಗೆ ಶಿವಾರ್ಚಕರ್ಗೆ ಶಿವಲಿಂಗಧ್ಯಾನಯುಕ್ತರ್ಗೆ ಶಾಂ
ಭವತತ್ವಾನುಭವಪ್ರಭಾವಭರಿತಸ್ವಾಂತರ್ಗೆ ಲಿಂಗಾಂಗಸಂ
ಗವಿಶಿಷ್ಟಾಗ್ರರ್ಗಳ ವೀರಶೈವಶರಣರ್ಗೆಂದುಂ ವೃಷೇಂದ್ರಂ ಕೃಪಾ
ರ್ಣವನೊಲ್ದೀಗೆ ಸಮಸ್ತಸೌಖ್ಯಪದಮಂ ಕಲ್ಯಾಣಕಲ್ಪದ್ರುಮಂ ೯೦*

ಶೋಭಿಸುವ) ಶಿವನು ನಮ್ಮನ್ನು ರಕ್ಷಿಸಲಿ. [ಸೋಮಾಂಕ, ಸೋಮ, ಉದ್ಯದ್ ವೃಷ, ನಟ, ಸಶಿವಂ, ಭಿಕ್ಷು, ಕಾಮ, ಅಂತಕ, ಅಘ್ರಗ್ರಾಮ, ಇಂದ್ರಾರಿ, ಅಬ್ಜಜ, ಇಷ್ಟಿ, ಅಚ್ಯುತರಿಪು, ಪುರರರ್ಧಾಂಗನಂ. ವ್ಯಾಧಲೀಲಾ. ಉದ್ದಾಮಂ, ಕಂಕಾಳಿ, ಚಂಡ, ಇಷ್ಟದ, ವಿಷಪ, ಹರಿ, ಇಭಾಸ್ಯ, ಷಡ್‌ವಕ್ತ್ರ, ದಾತಂ, ವ್ಯೋಮ, ಉತ್ಥೈಕ, ಅಂಘ್ರಿ, ಎಮ್ಮಂಪೊರೆಗೆ, ಸುಖಕರಂ ದಕ್ಷಿಣಾಮೂರ್ತಿ, ಲಿಂಗಂ ಹೀಗೆ ಈ ಪದ್ಯದ ಪದಚ್ಛೇದ ಮಾಡಿ ಶಿವನ ಇಪ್ಪತ್ತೈದು ಲೀಲೆಗಳನ್ನು ಅನ್ವಯಿಸಿಕೊಳ್ಳಬೇಕು. ಈ ಎಲ್ಲ ಇಪ್ಪತ್ತೈದು ವಿಶೇಷಣಗಳಿಂದ ಶಿವನ ಇಪ್ಪತ್ತೈದು ಲೀಲೆಗಳು ಈ ಒಂದು ಪದ್ಯದಲ್ಲಿ ಹೇಳಲ್ಪಟ್ಟಿವೆ.] ೮೯. ಕೂಡಿಕೊಂಡ (ಪ್ರಾಪ್ತವಾದ) ಚಂದ್ರ. (೧), ಪಂಚಬಾಣ (೫), ನವನಿಧಿ (೯) ಭೂಧರ ಅಂದರೆ ಸಪ್ತಕುಲಾಚಲ ಪರ್ವತಗಳು (೭) ಅಂದರೆ ೧೫೯೭ ನೆಯ ಶಾಲಿವಾಹನ ಶಕ ಸಂಖ್ಯೆಯ ವರ್ಷದ [illegible]ಷ್ಯವೂ, ಸಂತೋಷದಾಯಕವೂ, ಆದ, ಸಾಧುಲಕ್ಷಣದ ನಳ ಸಂವತ್ಸರದ ಮಾಘಮಾಸ ಶುಕ್ಲಪಕ್ಷ ಪಂಚಮಿ ತಿಥಿಯ ಶುಕ್ರವಾರದಲ್ಲಿ ಈಶ್ವರನ ಕೃಪೆಯಿಂದ ಷಡಕ್ಷರ ದೇವನಿಂದ ರಚಿತವಾದ ಈ ಪುರಾಣವು ಪರಿಪೂರ್ಣವಾಯಿತು. ೯೦. ಕಲ್ಯಾಣನಗರದ ಕಲ್ಪವೃಕ್ಷ ಸದೃಶನಾದ, ಕೃಪಾಸಮುದ್ರನಾದ ವೃಷಭೇಶ್ವರನು ಶಿವಭಕ್ತರಿಗೆ ಶಿವನನ್ನು ಅರ್ಚಿಸುವವರಿಗೆ, ಶಿವಲಿಂಗವನ್ನು ಧ್ಯಾನ ಮಾಡುವುದರಲ್ಲಿ ಆಸಕ್ತರಾದವರಿಗೆ, ಶಂಭು ಸಂಬಂಧವಾದ ತತ್ತ್ವದ ಅನುಭಾವದ ಪ್ರಭಾವದಿಂದ ತುಂಬಿದ ಮನಸ್ಸುಳ್ಳವರಿಗೆ, ಶಿವ ಜೀವೈಕ್ಯ ಭಾವದಿಂದ ಕೂಡಿ ಅಧಿಕರೆನಿಸಿದ ವೀರಶೈವ ಮಾರ್ಗಗಾಮಿಗಳಾದ ಶರಣರಿಗೆ ಸದಾ ಸಮಸ್ತ ಸೌಖ್ಯಸ್ಥಾನವನ್ನು

---

*ಈ ಪದ್ಯದ ತರುವಾಯ 'ದ' ಪ್ರತಿಯಲ್ಲಿ ಈ ಕೆಳಗಣ ಇನ್ನೊಂದು ಪಾರ್ವತೀಸ್ತುತಿಪದ್ಯವಿದೆ :

ಮುರಹರ ಸುರವರ ಪರಿನುತಚರಣಾಂಭೋಜಯುತೇ ಯಮಿರಾಜಸುತೇ
ಸುರುಚಿರಕರಿವರಮುಖಜನನಿ ಗಣಾನಂದಕರೇ ತರುಣೇಂದುಧರೇ
ಗುರುತರಗಿರಿವರತನುಭವೆ ತತವಿದ್ಯಾನಿಕರೇ ಜಿತಭಾನುಕರೇ
ಪೊರೆ ಪರತರಪುರಹರನರಸಿ ಜಗನ್ಮಾತೆ ಶಿವೇ ಪರಿಭೂತಭವೇ ||

ಸುಪರ್ಣರಥಪೂಜಿತೇ ಸುಕರಕೀರ್ತಿವಿಭ್ರಾಜಿತೇ
ಕ್ಷಪಾಕರಕಳಾಧರೇ ಕ್ಷಪಿತಕಾಲಲೀಲಾಧರೇ
ಕೃಪಾರಸತರಂಗಿಣೇ ಕುಪಿತದೈತ್ಯಸಂಹಾರಿಣೇ
ಪ್ರಸನ್ನಶುಭದಾಯಿನೀ ಪೊರೆವುದೆನ್ನ ಕಾತ್ಯಾಯನೀ ೯೧

ಇದು ವಿನಮದಖಿಳ ಸುರಾಸುರೇಂದ್ರಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ

ತರುಣಾರುಣಾತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದಪರಾಗಭಸಿತ

ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ

ಶ್ರೀಷಡಕ್ಷರಿದೇವಭಕ್ತಿವಿರಚಿತ

ಶ್ರೀಮದ್ ಬಸವರಾಜವಿಜಯಮಹಾಪುರಾಣದೊಳ್ ವೃಷಭೇಂದ್ರವಿಜಯ ವರ್ಣನಂ

ದ್ವಾಚತ್ವಾರಿಂಶಾಶ್ವಾಸಂ ಸಮಾಪ್ತಂ

ಅಂತು ಆಶ್ವಾಸ ೪೨ಕ್ಕೆ ಪದಗಣನೆ ೩.೫೧೩ಕ್ಕೆ ಮಂಗಳಂ ಮಹಾಶ್ರೀ॥

ಶ್ರೀಮದ್ಬಸವರಾಜವಿಜಯ ಮಹಾಪುರಾಣಂ ಸಮಾಪ್ತಂ

ಪ್ರೀತಿಯಿಂದ ಕೊಡಲಿ. ೯೧. ಗರುಡನನ್ನೇ ರಥವನ್ನಾಗಿ ಉಳ್ಳ ವಿಷ್ಣುವಿನಿಂದ ಪೂಜಿಸಲ್ಪಡುವವಳೇ, ಒಳ್ಳೆಯ ಯಶಸ್ಸಿನಿಂದ ವಿರಾಜಿಸುವವಳೇ, ಚಂದ್ರ ಕಳೆಯನ್ನು ಧರಿಸಿರುವವಳೇ, ಯಮನನ್ನು ನಾಶಗೊಳಿಸಿದ ಲೀಲೆಯನ್ನು ಧರಿಸಿದವಳೇ ಕೃಪೆಯೆಂಬ ರಸಕ್ಕೆ ನದಿಯಂತಿರುವವಳೇ, ಕೋಪವಿಶಿಷ್ಟಳಾಗಿ ದೈತ್ಯರನ್ನು ಸಂಹರಿಸಿದವಳೇ ಪ್ರಸನ್ನಳಾಗಿ (ಸದ್ಭಕ್ತರಿಗೆ) ಶುಭವನ್ನುಂಟು ಮಾಡುವವಳೇ, ಕಾತ್ಯಾಯಿನೀದೇವಿಯೇ ನನ್ನನ್ನು ರಕ್ಷಿಸುವುದು.

ನಲ್ವತ್ತೆರಡನೆಯ ಆಶ್ವಾಸವು ಸಮಾಪ್ತವಾಯಿತು.

# ಮುನ್ನುಡಿ

ಮಹಾಕವಿ ಷಡಕ್ಷರಿದೇವನು ಶಾ. ಶ. ೧೫೪೨ (ಕ್ರಿ. ಶ. ೧೬೨೦)ರಲ್ಲಿ 'ಬಸವ ಕೃತಿ' ಎಂಬ ಗ್ರಂಥವನ್ನು ಬರೆದು ಪೂರ್ತಿಗೊಳಿಸಿದನು. ಅದು ಬಸವಸ್ತುತಿಪದ್ಯಗಳ ಸಂಗ್ರಹ. ವಿವಿಧ ವೃತ್ತ ಕಂದಗಳ ಛಂದದಲ್ಲಿದೆ. ಆ ಪದ್ಯಗಳು ಆತನ 'ಬಸವರಾಜ ವಿಜಯ' (ಇದನ್ನು ವೃಷಭೇಂದ್ರವಿಜಯವೆಂದೂ ಕರೆಯುತ್ತಾರೆ) ಮಹಾಪುರಾಣದಲ್ಲಿ, ಹೆಚ್ಚು ಹಸ್ತ ಪ್ರತಿಗಳಲ್ಲಿ ಕೊನೆಯ ಆಶ್ವಾಸದಲ್ಲಿ ಒತ್ತಟ್ಟಿಗೆಯೂ, 'ದ' ಪ್ರತಿಯಲ್ಲಿ ೩೦ನೆಯ ಆಶ್ವಾಸದಿಂದ ೪೨ನೆಯ ಆಶ್ವಾಸದ ವರೆಗೆ ಪ್ರತಿ ಆಶ್ವಾಶದಲ್ಲಿ ಎರಡೆರಡ ರಂತೆಯೂ ಅಳವಡಿಸಲ್ಪಟ್ಟಿವೆ. ಆದರೆ, ಇವು ಸ್ವತಂತ್ರಕೃತಿಗೆ ಸೇರಿದವುಗಳೆಂದೂ ಪುರಾಣಿಕರು ಅಥವಾ ವಾಚಕರು ಬಸವರಾಜವಿಜಯ ಕಾವ್ಯದೊಡನೆ ತಮ್ಮಿಚ್ಛಾನು ಸಾರವಾಗಿ ಸೇರಿಸಿ ಓದುತ್ತಿರಬೇಕೆಂದೂ ಹಸ್ತಪ್ರತಿಗಳ ಪರಿಶೀಲನೆಯಿಂದ ಕಂಡು ಬಂದಿತು. ಆದುದರಿಂದ, ಬಸವರಾಜ ವಿಜಯಾಂತರ್ಗತವಾಗಿದ್ದ ಈ ಪದ್ಯಗಳನ್ನು ಪ್ರತ್ಯೇಕಿಸಿ, ಪರಿಶಿಷ್ಟದಲ್ಲಿ ಕೊಡುತ್ತಿದ್ದೇವೆ.

ಈ ಬಸವಸ್ತುತಿ ಪದ್ಯಸಂಗ್ರಹದಲ್ಲಿ ಎರಡು ಬಗೆಯ ಪದ್ಯಗಳಿವೆ : ೧. ಸಂಸ್ಕೃತ ಪದಭೂಯಿಷ್ಠವಾದ ಅರ್ಥಗಾಂಭೀರ್ಯದ ವೈಭವದಿಂದ ಬಸವೇಶನ ವ್ಯಕ್ತಿತ್ವವನ್ನು ಚಿತ್ರಿಸುವ ಲಲಿತಪದವೃತ್ತಗಳು ; ೨. ಕವಿಯ ಅಂತರಂಗದಿಂದ ಹೊರಹೊಮ್ಮಿದ ಭಾವಲಹರಿಗಳನ್ನು ಸೂಸುವ ಆತ್ಮನಿವೇದನಪರವಾದ ಇತರ ವೃತ್ತಕಂದಗಳು. ಈ ಕೃತಿನಿರ್ಮಿತಿಯ ಕಾಲವನ್ನು ಹೇಳುವ, ಸಂಗ್ರಹದ ಕೊನೆಯ ಪದ್ಯದಲ್ಲಿ ನಿರ್ದೇಶಿಸಿದ 'ಬಸವಕೃತಿ' ಎಂಬ ಹೆಸರನ್ನೇ ಈ ಸಂಗ್ರಹಕ್ಕೆ ಇಟ್ಟಿದೆ. ಈ ಹೆಸರು ಇತರ ವೃತ್ತಕಂದ ಗಳ ೨ನೆಯ ಮಾಲಿಕೆಗೆ ಸಂಬಂಧಪಟ್ಟುದೆಂದು ತೋರುವುದಾದರೂ ಲಲಿತಪದವೃತ್ತ ಗಳು ಭಿನ್ನಸ್ವರೂಪದವಾದರೂ ಎರಡರಲ್ಲಿಯೂ ಬಸವಸ್ತುತಿ ಏಕವಿಷಯವಾಗಿರುವುದ ರಿಂದ ಎರಡನ್ನೂ ಒಂದೆಂದೇ ಎಣಿಸಿದ್ದೇವೆ. ಅಲ್ಲದೆ, ಲಲಿತಪದವೃತ್ತಗಳ ರಚನಾಕಾಲ ವನ್ನಾಗಲಿ ಹೆಸರನ್ನಾಗಲಿ ಹೇಳುವ ಪದ್ಯ ದೊರೆತಿಲ್ಲ ; ಮತ್ತು ಎರಡೂ ಬಸವರಾಜ ವಿಜಯದಲ್ಲಿಯೇ ಬಂದವುಗಳು. ಸಾಮಾನ್ಯವಾಗಿ ಎಲ್ಲ ಹಸ್ತಪ್ರತಿಗಳಲ್ಲಿಯೂ ಲಲಿತ ಪದವೃತ್ತಗಳು ಕಾವ್ಯಾರಂಭದಿಂದ ಕೊನೆಯವರೆಗೂ ಇತರ ವೃತ್ತಗಳು ಕೊನೆಯ ಆಶ್ವಾಸದಲ್ಲಿಯೂ ಬಂದಿರುವುದರಿಂದ, ಈ ಸಂಗ್ರಹದಲ್ಲಿ ಲಲಿತಪದವೃತ್ತಗಳನ್ನು ಪ್ರಥಮಖಂಡವಾಗಿಯೂ ಇತರ ವೃತ್ತಗಳನ್ನು ದ್ವಿತೀಯ ಖಂಡವಾಗಿಯೂ ಕೊಟ್ಟಿ ದ್ದೇವೆ.

ಈ ಎಲ್ಲ ವಿಷಯದ ವಿವರ ಚರ್ಚೆಯನ್ನು ಕಾವ್ಯದ ಪ್ರಸ್ತಾವನೆಯಲ್ಲಿ ಮಾಡಿದ್ದೇವೆ.

# ಪರಿಶಿಷ್ಟ-೧

## ಬಸವಸ್ತುತಿ ರೂಪವಾದ ಲಲಿತ ಪದವೃತ್ತಗಳು ಮತ್ತು ಇತರ ವೃತ್ತಗಳು

### ಷಡಕ್ಷರ ದೇವನ ಬಸವ ಕೃತಿ :

ವೃಷಭೇಂದ್ರ ವಿಜಯ ಅಥವಾ ಬಸವರಾಜ ವಿಜಯ ಮಹಾಪುರಾಣವು ಸಂಪೂರ್ಣವಾಗಿ ಪಾಲ್ಕುರಿಕೆ ಸೋಮನಾಥರ ಪರಂಪರೆಯಿಂದ ಹರಿದು ಬಂದ ಕಥಾ ಸಾರವೇ ಆಗಿದೆ. ಸೋಮನಾಥರ ತೆಲಗು ಬಸವಪುರಾಣ ಕೃತಿ ಭೀಮ ಕವಿಯ ಬಸವಪುರಾಣವೆನಿಸಿ ಷಟ್ಪದಿಯಲ್ಲಿ ರಚಿತವಾದರೆ ಅದೇ ಪುರಾಣವೇ ಚಂಪೂರೂಪದಲ್ಲಿ ಷಡಕ್ಷರಿಯ ಬಸವರಾಜ ವಿಜಯವಾಗಿದೆ. ಇದು ಗುಬ್ಬಿಯ ಮಲ್ಲಣಾರ್ಯರ ಭಾವ ಚಿಂತಾರತ್ನಕೃತಿಯು 'ರಾಜಶೇಖರ ವಿಳಾಸ'ವಾದಂತೇನೂ ಅಲ್ಲ. ಆದುದರಿಂದ ಷಡಕ್ಷರದೇವನು ಈ ಕೃತಿಯಲ್ಲಿ ಸ್ವಾತಂತ್ರ್ಯವನ್ನೇನೂ ಉಪಯೋಗಿಸಲಿಲ್ಲ. ಆದರೆ ಬಸವಣ್ಣನವರ ಬಗೆಗೆ ಸ್ತೋತ್ರ ರೂಪವಾಗಿ ಸುಮಾರು ೬೦ ರಷ್ಟು 'ಲಲಿತಪದವೃತ್ತ'ಗಳಲ್ಲಿ ಕವಿ ತನ್ನ ಅತ್ಯಂತಿಕ ಭಕ್ತಿಯನ್ನು ಪ್ರಕಟಿಸಿದ್ದಾನೆ. ಈ ಲಲಿತ ಪದವೃತ್ತಗಳಲ್ಲದೆ ವಿವಿಧವೃತ್ತ ಕಂದಗಳಲ್ಲೂ ಕೆಲವು ಸ್ತೋತ್ರ ಪದ್ಯಗಳನ್ನು ಬರೆದಿದ್ದಾನೆ. ಈ ಪದ್ಯಗಳಲ್ಲಿ ಮಾತ್ರವೇ ಷಡಕ್ಷರ ದೇವನು ತನ್ನ ಸ್ವಾತಂತ್ರ್ಯ ಪ್ರಕಟಸಿಕೊಂಡಿರುವನಲ್ಲದೆ ಪುರಾಣಕಥಾವಿಷಯದಲ್ಲಲ್ಲ.

ಈ ಲಲಿತಪದ ವೃತ್ತಗಳು ಮತ್ತು ಇತರ ವೃತ್ತಗಳು ವೃಷಭೇಂದ್ರ ವಿಜಯ ಮಹಾಪುರಾಣಂತರ್ಗತವಾಗಿಯೇ ಅನೇಕ ಪ್ರಾಚೀನ ಮುದ್ರಣಗಳಲ್ಲಿ ಕಂಡುಬರುತ್ತವೆ. ಪ್ರತಿ ಆಶ್ವಾಸಾಂತ್ಯದಲ್ಲಿ ಮತ್ತು ಕೆಲವು ಆಶ್ವಾಸಗಳ ಆದಿಯಲ್ಲಿ ಲಲಿತಪದವೃತ್ತಗಳ ಬಳಕೆಯೂ, ಉಳಿದ ಬಸವಸ್ತುತಿರೂಪವಾದ ವೃತ್ತಕಂದಗಳು ೪೨ ನೆಯ ಆಶ್ವಾಸಾಂತ್ಯದಲ್ಲೂ ಕಂಡುಬರುತ್ತವೆ.

ಇತ್ತೀಚೆಗೆ ೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿರುವ 'ಬಸವರಾಜ ವಿಜಯಂ' ಗ್ರಂಥದಲ್ಲಿ ಈ ಪದ್ಯಗಳೆಲ್ಲ ಷಡಕ್ಷರ ದೇವನ ಪ್ರತ್ಯೇಕವಾದ ಸ್ತೋತ್ರ ಪದ್ಯಗಳೆಂದೂ ಪ್ರವಚನಕಾರರು ಪ್ರವಚನ ಮಾಡುವಾಗ ವೃಷಭೇಂದ್ರವಿಜಯದೊಡನೆ ಅಂತರ್ಭಾವಗೊಳಿಸಿ ಹೇಳುವ ಪದ್ಧತಿ ಬೆಳೆದು ಬಂದು ಇವೆಲ್ಲ ಆ ಕೃತಿಯಲ್ಲಿ ಸೇರಿ ಹೋಗಿವೆಯೆಂದೂ ಅಭಿಪ್ರಾಯಪಟ್ಟು ಪ್ರತ್ಯೇಕಿಸಿ ಪರಿಶಿಷ್ಟದಲ್ಲಿ ಅವನ್ನು ಕೊಟ್ಟಿದ್ದಾರೆ. ಪರಿಶಿಷ್ಟ ೧ ರಲ್ಲಿ ಲಲಿತಪದವೃತ್ತಗಳನ್ನೂ, ಪರಿಶಿಷ್ಟ ೨ ರಲ್ಲಿ ಇತರ ವೃತ್ತಗಳನ್ನು ತೋರಿಸಿದ್ದಾರೆ. ಆದರೆ ಇವರ ಈ ಪ್ರಕಟನೆಯಲ್ಲೂ ಕೂಡ ೧೦ ಲಲಿತಪದ ವೃತ್ತಗಳು ಗ್ರಂಥದಲ್ಲಿಯೇ ಅಂತರ್ಭಾವಗೊಂಡಿವೆ. ಒಂದು ವೃತ್ತ ೫೫ ಮತ್ತು ೯ ನೆಯ

ಅಧ್ಯಾಯಗಳ ಕೊನೆಯಲ್ಲಿ ಎರಡು ಸಲ ಪ್ರಯೋಗಗೊಂಡಿದೆ. ೫ನೆಯ ಅಧ್ಯಾಯವೊಂದರಲ್ಲೆ ೩ ಲಲಿತಪದ ವೃತ್ತಗಳ ಬಳಕೆಯಿದೆ. ಇವೇನೇ ಇರಲಿ. ಈ ಗ್ರಂಥದಲ್ಲಿ ಈಗ ಬಳಕೆಯಾಗಿರುವ ಒಟ್ಟು ೯ ಲಲಿತಪದ ವೃತ್ತಗಳನ್ನೂ ಬಿಟ್ಟು ಉಳಿದವುಗಳಿಗೆ ಈ ಗ್ರಂಥದ ಪರಿಶಿಷ್ಟದಲ್ಲಿ ಕೊಟ್ಟ ಕ್ರಮಾಂಕವನ್ನನುಸರಿಸಿ ಅರ್ಥವನ್ನು ಬರೆಯಲಾಗಿದೆ. ಕ್ರಮಾಂಕದಲ್ಲಿ ಬಂದ ಪದ್ಯಗಳಿಗೆ ಈ ಗ್ರಂಥದಲ್ಲಿ ಹಿಂದೆ ಅರ್ಥಬಂದಿದ್ದರೆ ಎಲ್ಲಿ ಬಂದಿದೆಯೆಂಬುದನ್ನು ತಿಳಿಸಿ ಮುಂದುವರಿದಿದೆ. ಪರಿಶಿಷ್ಟ ೨ರಲ್ಲಿ ಉಳಿದ ವೃತ್ತ ಕಂದಗಳ ಅರ್ಥವನ್ನೂ ಅದೇ ಕ್ರಮಾಂಕವನ್ನನುಸರಿಸಿ ಅರ್ಥಕೊಡಲಾಗಿದೆ. ಸಾಮಾನ್ಯವಾಗಿ ಈ ಪದ್ಯಗಳಲ್ಲಿ ಬಸವಣ್ಣ ಮತ್ತು ಶಿವ ಇವರಲ್ಲಿ ಅಭೇದವಾಗಿ ವರ್ಣಿಸಿರುವುದೇ ಹೆಚ್ಚು. ಶಿವನರೂಪವೇ ಬಸವಣ್ಣ ಎಂಬ ಭಾವವೂ ಕೆಲವು ಕಡೆ ವ್ಯಕ್ತವಾಗಿದೆ. ಶಿವನಿಷ್ಠ ಧರ್ಮಗಳೆಲ್ಲವೂ ಬಸವೇಶ್ವರನಲ್ಲಿ ಆರೋಪಿಸಲ್ಪಟ್ಟಿವೆ. ಇದಕ್ಕೆ ಕಾರಣ ಬಸವೇಶ್ವರನೂ ಶಿವನೂ ಒಂದೇ ಎಂಬ ಭಾವ ಮತ್ತು ಬಸವೇಶ್ವರನನ್ನು ದ್ವಿತೀಯ ಶಂಭುವೆಂದು ನಂಬುವ ನಂಬಿಕೆಗಳು ಪರಿಶಿಷ್ಟ ೧ ರಲ್ಲಿನ ಲಲಿತಪದವೃತ್ತಗಳಿಗೆ '**ಬಸವಕೃತಿ**' ಎಂಬ ಹೆಸರನ್ನೂ, ಉಳಿದ ವೃತ್ತಗಳಿಗೆ ಪರಿಶಿಷ್ಟ ೨ ರಲ್ಲಿ '**ಇತರವೃತ್ತಗಳು**' ಎಂಬ ಶಿರೋನಾಮೆಯನ್ನೂ ಕ.ವಿ.ಪಿ. ನಿಲಯದ ಪ್ರಕಟನೆಯವರು ಕೊಟ್ಟರೀತಿಯಲ್ಲಿಯೇ ಕೊಡಲಾಗಿದೆ.

೧

# ಲಲಿತಪದವೃತ್ತಗಳು

ಶ್ರೀಕರಗುಣಾಂಬುಧಿಸುಧಾಕರ ಕಳಾಧರಕೃ–
ಪಾಕಲಿತಲೋಚನ ದಿವಾಕರಸಹಸ್ರಾ–
ಲೋಕರುಚಿವಿಗ್ರಹ ಪಿನಾಕಧರದರ್ಶನಕ–
ಳಾಕರ ಸುಪುಣ್ಯಪರಿಪಾಕಯುತ ಸೇವ್ಯಾ
ಭೀಕರಯಮಪ್ರಹರ ನಾಕಸದನಾರ್ಚ್ಯಪದ -
ಕೋಕನದ ನಿರ್ಜಿತವರಾಕಪರವಾದಾ -
ನೀಕ ವಿನತಾಸುತಪತಾಕನುತ ಪಾಲಿಸು ಗ–
ಣೈಕಪತಿ ಪಾಲಿತಸುಲೋಕ ಬಸವೇಶಾ ೧

ಶಂಕರಕುಮಾರಕ ನಿಶಂಕಟವಿಹಾರಕ ಕ–
ಲಂಕಮತದೂರ ಹರಸಾಕಘನಕರ್ಣಾ–
ಲಂಕರಣ ಶೈಪಮತಪಂಕರುಹಭಾಸ್ಕರ ಭ–
ಯಂಕರಯಮಾಪಹ ನಿರಂಕುಶಚರಿತ್ರಾ
ಸಂಕಲಿತಕಾಯ ಮಕರಾಂಕಮದಮರ್ದನ ವೃ–
ಗಾಂಕಧರಸೇವಕಸುಖಂಕರಕಟಾಕ್ಷಾ-
ಹಂಕರಣದೂರ ಶಿವಕಿಂಕರಚಯಾನ್ವಿತ ವೃ–
ಷಾಂಕನಗಣಾಧಿಪ ವಿಶಂಕ ಬಸವೇಶಾ ೨

ಆಖುಪತಿವಾಹನವಿಶಾಖನುತ ನೀತವ್ಯಾಡ -
ಲೇಖನಲಿಪಿಜ್ಞ ಜಿತಭೂಖಲ ಫಣಾಭೃ–
ನ್ಮೇಖಲ ಸುಧಾಕರಮಯೂಖ ನಿಶಿತಾಂಘ್ರಿಸಮು–
ಹಾಖುರಕೃತಾರಿಹೃದಯಾಖನನಕೃತ್ಯಾ

## (೧) ಬಸವ ಕೃತಿ

೧–೪. ಜಂಗಮರ ಪಾದ ಪೂಜೆಯನ್ನು ಮಾಡುವ, ಸರ್ಪಗಳ ಆಭರಣಗಳಿಂದ ಭೂಷಣಗೊಂಡ, ಮನೋಹರವಾದ ಚರಿತ್ರೆಯನ್ನುಳ್ಳ, ಶಿವಗಣಗಳ ಸಂಗಮದಲ್ಲಿ ಆಸಕ್ತಿಯನ್ನುಳ್ಳ, ಮನ್ಮಥನ ಗರ್ವವನ್ನು ನಾಶಪಡಿಸಿರುವ, ಶುಭ ಲಕ್ಷಣಗಳುಳ್ಳ ಶರೀರದಿಂದ ಕೂಡಿದ, ಋಷಿ ಜನರನ್ನು ಸಂತೋಷಪಡಿಸುವ, ಸೂರ್ಯಪುತ್ರನಾದ ಯಮನ ಗರ್ವವನ್ನು ನಾಶಪಡಿಸಿದ, ಚಂದ್ರಧರನಾದ ಪರಮೇಶ್ವರನಿಗೆ ವಾಹನನೆನಿಸಿದ ಮಂಗಳಕರಳಾದ ಸದ್ಗುಣಗಳಿಂದ ಕೂಡಿದ, ಚಕ್ರಧರನಾದ ವಿಷ್ಣುವಿನಿಂದ ಪೂಜಿಸಿ,

ಲೇಖಪತಿಪದ್ಮಜಮಹಾಖಗರಥಾರ್ಚ್ಯ ಶಂಖ-
ರೇಖಪದ ಸೂರಿಸುರಶಾಖಿ ಯಮಿಜಿಹ್ವಾ-
ಲೇಖಲಿಖಿತಾಭಿದ ದಿಶಾಖಚಿತಕೀರ್ತಿ ಪೊರೆ
ಶೇಖರಿತಶೀತಕರರೇಖ ಬಸವೇಶಾ ೩

ಜಂಗಮಪದಾರ್ಚಕ ಭುಜಂಗಮವಿಭೂಷ ಹೃದ-
ಯಂಗಮಚರಿತ್ರ ಗಣಸಂಗಮವಿಲೋಲಾ-
ನಂಗಮದಭಂಜನ ಶುಭಾಂಗ ಮುನಿರಂಜನ ಪ-
ತಂಗಜವಿಮರ್ದನ ಸುಧಾಂಗಧರವಾಹ
ಮಂಗಳಗುಣಾನ್ವಿತ ರಥಾಂಗಧರಸೇವಿತ ಕು-
ರಂಗಧರಕಾಂತರುಚಿಸಂಗತ ದಯಾರ್ದ್ರಾ-
ಪಾಂಗ ಪೊರೆಯೆನ್ನನವಿಭಂಗವಪುರಾತ್ತಶಿವ
ಲಿಂಗ ಗಣಹೃನ್ನಳಿನಭೃಂಗ ಬಸವೇಶಾ ೪

ಋಗ್ಯಜುರಭಿಸ್ತುತ ವಿರಾಗ್ಯಧಿಕ ಪದ್ಮಸಮ-
ದೃಗ್ಯುಗಳ ಭಕ್ತಕೃತಭಾಗ್ಯಚಯ ನಿತ್ಯಾ-
ರೋಗ್ಯ ನಿರವದ್ಯಬಹುಭೋಗ್ಯ ನಿಗಮಪ್ರಬಲ
ಯಾಗ್ಯ ಪುರಭಿದ್ಭಜನಯೋಗ್ಯಜನಲೋಲಾ
ಪ್ರಾಗ್ಯಮಿಪವಿಶಿಷ್ಟ ದಶದಿಗ್ವ್ಯತಯಶಸ್ಕ ಮನು-
ವಾಗ್ಯಜನ ರಾಗಕೃತಸಾಗ್ಯ ಮಹ[1]ರಂಗಾ[1]-
ಸ್ಪೃಗ್ಯತಿವರೇಣ್ಯ ಜಲಮುಗ್ಯದುಕೂಲೇಪಸಿತ
ರುಗ್ಯುಗುರುಕಂಠ ಜಯ ವೃಗ್ಯ ಬಸವೇಶಾ ೫

ಭಾರ್ಗವಶಂಕಾದಿಮುನಿವರ್ಗನುತ ಶಾಂಭವಸು-
ಮಾರ್ಗಗಚರಿತ್ರ ಹೃತದುರ್ಗತಿ ಸಮಸ್ತ-
ಸ್ವರ್ಗಭವನಾರ್ಚಿತ ನಿಸರ್ಗಗುಣರಂಜಿತ ಯು-
ಜುರ್ಗತಮಹಾಮಸು ವಪುರ್ಗುಣವಿದೂರಾ-
ನರ್ಗಳಚಿದಾತ್ಮ ವಿಧುಮಾರ್ಗಣ ಹೃತೇಂದ್ರಪುರ
ದುರ್ಗಯಮದರ್ಪಹರ ಭರ್ಗಹೃದಯಾಬ್ಜಾಂ-
ತರ್ಗತ ಲಸನ್ನಿಗಮಸರ್ಗಕರ ಮಾಳ್ಪುದಪ-
ವರ್ಗಸುಖಮಂ ನತಬುಧರ್ಗೆ ಬಸವೇಶಾ ೬

ಕೊಂಡ, ಚಂದ್ರನ ಮನೋಹರವಾದ ಕಾಂತಿಯಂತಿರುವ ಕಾಂತಿಯಿಂದ ಕೂಡಿದ, ದಯೆಯಿಂದ ತೊಯ್ದುಹೋದ ಕಡೆಗಣ್ಣುಗಳ ನೋಟವುಳ್ಳ, ಶರೀರದಲ್ಲಿ ಧಾರಣ ಮಾಡಿದ (ಪಡೆಯಲಟ್ಟ) ನಾಶರಹಿತವಾದ ಶಿವಲಿಂಗವನ್ನುಳ್ಳ, ಪ್ರಮಥಗಣಗಳ ಹೃದಯವೆಂಬ ಕಮಲಕ್ಕೆ ಭೃಂಗದೋಪಾದಿಯಲ್ಲಿರುವ, ಬಸವೇಶ್ವರಾ, ಎನ್ನನ್ನು ರಕ್ಷಿಸು. ೫–೧೦. ನಿರ್ಮಲವಾದ ಬುದ್ಧಿಯುಳ್ಳ ಜನರ ಆಪತ್ತುಗಳನ್ನು ನಾಶಪಡಿಸುವುದರಲ್ಲಿ ಪ್ರಸಿದ್ಧನೆನಿಸಿದನೂ, ಲೋಕಗಳನ್ನು ಸಂರಕ್ಷಿಸುವವನೂ, ಪರತತ್ತ್ವವನ್ನು ತಿಳಿದ ಇಚ್ಛಾ

[1]ರಾಂಗ (ಗ, ದ, ಚ, ಜ, ಮ) ಭಾಗ್ಯಾ (ಅ)

ರಾಘವವಿಬೋಧಕ ಮಹಾಘಟಭವಸ್ತುತ ಯ–
ಶೋಘಚಿತದಿಕ್ತಟ ಸುಧೀಘನಜನೈನೋ–
ಮಾಘಮದಸಂಹೃತಿನಿದಾಘ ಕರುಣಾಮೃತ ರ–
ಸೌಘಪರಿಪೂರ್ಣದೃಗಮೋಘವರದಾತಾ
ಮೇಘ ರುಚಿಕಂಧರ ವಿಲಾಘವಚರಿತ್ರ ಸುಕ-
ಳಾಘಟನಧೀರ ಮುನಿಪೌಘಕೃತನಿತ್ಯ–
ಶ್ಲಾಘ ಭವಸಂಚಯಘನಾಘನಸಮೀರ ಪೊರೆ
ಭೂಘಟಕುಲಾಲ ವಿಜಿತಾಘ ಬಸವೇಶಾ ೭

ಮಾಚವಿಭುಸನ್ನುತಸದಾಚರಣ ವಾದಿಮದ–
ಮೋಚನಸಮರ್ಥ ಪರಬಾಚಯುದಯಾದ್ರ್ಯ–
ಲೋಚನಸಮೀಕ್ಷ್ಯ ಯಮಿಗೋಚರಪದಾಬ್ಜ ಶಿವ–
ವಾಚಕಸಮನ್ವಿತ ಚರಾಚರಸುರಕ್ಷಾ
ಖೇಚರಪರಿಸ್ತುತ ಕಳಾಚತುರ ಧೈರ್ಯವಿಜಿ–
ತಾಚಲ ವಿತರ್ಜಿತವಿರೋಚನಜ ಮಾಯಾ–
ರೇಚಕ ಸುತತ್ತ್ವ ನಿಧಿಸೂಚಕವಚಸ್ಕಪೊರೆ
ಕೀಚಕರಿಪುಪ್ರಿಯ ಸುವಾಚ ಬಸವೇಶಾ ೮

ಪಂಚಜನಭಂಜನವಿರಿಂಚಿಮುಖನಿರ್ಜರಸ–
ಮಂಚಿತಪದಾಂಬುಜ ವಿಮಂಚಿತಮನೋಜಾ
ಪ್ರಾಂಚಿತಕೃಪಾರಸದೃಗಂಚಲ ಶಿವೈಕ್ಯಗುಣ–
ಸಂಚಿತನಿಧಾನ ಯಮಿಸಂಚಯವರೇಣ್ಯಾ
ಕಾಂಚನನಗೇಂದ್ರತಟಸಂಚರಣಶೀಲ ಸಮು–
ದಂಚಿತಮಹತ್ತ್ವಮಣಿಕಂಚುಕ ಚರೌಘಾ–
ವಂಚಕ ಬುಧಪ್ರಣುತ ಚುಚದಮಳಾಂಗ ಪೊರೆ
ಪಂಚಮುಖ ಮಂತ್ರರಸನಾಂಚಲ ವೃಷೇಂದ್ರಾ ೯

ಸ್ವಚ್ಛಮತಿಮಜ್ಜನವಿಪಚ್ಛಮನ ವಿಶ್ರುತಜ–
ಗಚ್ಛರಣ ತತ್ತ್ವವಿದನಿಚ್ಛಮುನಿವಂದ್ಯಾ–
ರಿಚ್ಛಲನಿವಾರಕ ಘೃಣಿಚ್ಛುರಿತವಿಗ್ರಹಶ-
ರಚ್ಛಶಿಸುಧಾಬ್ಧಿಧವಳಚ್ಛವಿಯಶಸ್ಕ

ರಹಿತರಾದ ಮುನಿಜನರುಗಳಿಂದ ನಮಸ್ಕರಿಸಿಕೊಳ್ಳಲು ಯೋಗ್ಯನಾದವನೂ, ವೈರಿಗಳಾದವರ ಕಪಟವನ್ನು ನಿವಾರಿಸುವವನೂ, ಕಾಂತಿಯಿಂದ ವ್ಯಾಪ್ತವಾದ ಶರೀರವುಳ್ಳವನೂ, ಶರತ್ಕಾಲದ ಚಂದ್ರ (ಮತ್ತು) ಕ್ಷೀರ ಸಾಗರಗಳೋಪಾದಿಯಲ್ಲಿ ಶುಭ್ರವಾದ ಯಶಸ್ಸುಳ್ಳವನೂ, ಶ್ರೇಷ್ಠ ಮುಂಗಳವನ್ನುಂಟುಮಾಡುವ ವರಗಳನ್ನು ಕೊಡುವವನೂ, ದಿಕ್ಕುಗಳೇ ವಸ್ತ್ರಗಳಾಗಿ ಉಳ್ಳ, ಸಂಹರಿಸಲ್ಪಟ್ಟ ಮಹಾಬಲ ಶಾಲಿಯಾದ ಕಾಮನನ್ನುಳ್ಳ ಈಶ್ವರನೊಡನೆ ಸಮಾನನೆನಿಸಿದವನೂ, ಪ್ರಕಾಶಿಸುವ ಶಾಂತಿ ಇಂದ್ರಿಯನಿಗ್ರಹಾದಿಗಳೇ ಚಿಹ್ನೆ

ಸಚ್ಚಭವರಪ್ರದ ದಿಶಾಚ್ಛದ ಹೃತಪ್ರಬಳ-
ಕಚ್ಚಪಸದೃಕ್ಷವಿಲಸಚ್ಛವುದಮಾಂಕಾ-
ತುಚ್ಛ ಪರವಾದಿಜನಹೃಚ್ಛಿದಘದೂರ ಪೊರೆ-
ಯಚ್ಛಶಿವಭಾವ ಜಿತಹೃಚ್ಛಯು ವೃಷೇಂದ್ರಾ ೧೦

ರಾಜಶಕಲಾಂಕಮತರಾಜದುರುಸಿಂಧುಪತಿ-
ರಾಜ ಭುವನಾವನಿಜಬೀಜ ಶಿವಪಾದಾಂ-
ಭೋಜಮದಷಟ್ಪದ ಕಳಾಜನನಭೂಮಿ ಜಗ-
ತೀಜನವಿನುತ್ಯ ಕವಿತಾಜಲರುಹಾರ್ಕಾ
ಮಾಜಮದಮರ್ದನ ಪರಾಜಯವಿದೂರ ವಿನ-
ತಾಜರಥಕೀರ್ತಿತ ಮಹೋಜಸ ಸದಾನಿ-
ರ್ವ್ಯಾಜಮೃಡಭಕ್ತಿರಸಭಾಜನ ಬುಧಾಳಿಸುರ-
ಭೂಜ ಪೊರೆ ಧೀಗುಣಜಿತಾಜ ಬಸವೇಶಾ ೧೧

ಕುಂಜರಮಹಾದನುಜಭಂಜನಪದಾಂಬುಜಕೃ-
ತಾಂಜಲಿ ಸುಭಕ್ತಗಣರಂಜನ ನಿತಾಂತ-
ಪ್ರಾಂಜುಳಯಶೋಧನ ಧನಂಜಯಮೃಗರ್ಚಕ ಪ-
ತಂಜಲಿಮುನಿಸ್ತುತ ಸಮಂಜಸಗುಣಾಂಕಾ

ಯಾಗುಳ್ಳವನೂ, ಕುತ್ಸಿತರೆನಿಸಿದ ಪರಮತವಾದಿಗಳ ಮಾತುಗಳನ್ನು ಛೇದಿಸುವವನೂ, ಪಾಪದಿಂದ ದೂರನಾದವನೂ, ನಿರ್ಮಲವಾದ ಶಿವ ಭಾವಾಪನ್ನ ಮನಸ್ಸುಳ್ಳವನೂ, ಮನ್ಮಥನನ್ನು ಜಯಿಸಿದವನೂ ಆದ ವೃಷೇಂದ್ರನೇ ರಕ್ಷಿಸು-೧೧. ಚಂದ್ರನ ಒಂದು ತುಣುಕನ್ನೇ ಚಿಹ್ನೆಯಾಗುಳ್ಳ ಪರಮೇಶ್ವರನ ಮತವೆಂಬ (ವೀರಶೈವ ಮತವೆಂಬ) ಸಮುದ್ರರಾಜನಿಗೆ ಚಂದ್ರನೋಪಾದಿಯಲ್ಲಿರುವವನೂ, ಲೋಕಗಳೆಂಬ ಗಿಡಗಳಿಗೆ ಬೀಜರೂಪನೆನಿಸಿದ ಪರಮೇಶ್ವರನ ಪಾದವೆಂಬ ಕಮಲದಲ್ಲಿ ಮದವಿಶಿಷ್ಟ ವಾದ ಭ್ರಮರದೋಪಾದಿಯಲ್ಲಿರುವವನೂ, ಕಲೆಗಳ (ಸದ್ವಿದ್ಯೆಗಳ) ಜನನಕ್ಕೆ ಭೂಮಿ ಯೆನಿಸಿದವನೂ, ಜಗತ್ತಿನ ಜನರುಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುವುದಕ್ಕೆ ಯೋಗ್ಯನಾದವನೂ, ಕವಿತ್ವವೆಂಬ ಕಮಲಕ್ಕೆ ಸೂರ್ಯನೋಪಾದಿಯಲ್ಲಿರುವವನೂ, ಮನ್ಮಥ (ಮಾ+ಜ-ಲಕ್ಷ್ಮಿಯ ಮಗ)ನ ಮದವನ್ನು ನಾಶಗೊಳಿಸಿದವನೂ, ಸೋಲಿ ನಿಂದ ದೂರನಾದವನೂ, ಗರುಡನನ್ನು ರಥವನ್ನಾಗಿ ಉಳ್ಳ ಶ್ರೀವಿಷ್ಣುವಿನಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಅಧಿಕ ಪರಾಕ್ರಮ ಶಾಲಿಯಾದವನೂ, ಸತತವೂ ನಿಷ್ಕಾಪಟ್ಯ ವಾದ ಶಿವನ ಭಕ್ತಿಯೆಂಬ ಜಲಕ್ಕೆ ಭಾಂಡ (ಪಾತ್ರೆ) ದಂತಿರುವವನೂ, ವಿದ್ವಾಂಸರ ಸಮೂಹಕ್ಕೆ ಕಲ್ಪವೃಕ್ಷ ಪ್ರಾಯನಾದವನೂ, ಬುದ್ಧಿಯಿಂದ (ಬುದ್ಧಿಶಕ್ತಿಗುಣದಿಂದ) ಬ್ರಹ್ಮನನ್ನು ಜಯಿಸಿದವನೂ ಆದ ಬಸವೇಶ್ವರನೇ (ನನ್ನನ್ನು) ರಕ್ಷಿಸು. ೧೨. ಗಜಾಸುರ ಸಂಹಾರಕನಾದ ಪರಮೇಶ್ವರನ ಪಾದಕಮಲಗಳಿಗೆ ಕೈಗಳನ್ನು ಮುಗಿಯು ತ್ತಿರುವವನೂ, ಶ್ರೇಷ್ಠರಾದ ಭಕ್ತರ ಸಮೂಹವನ್ನು ಸಂತೋಷಪಡಿಸುವವನೂ

ಮಂಜುಳಕಟಾಕ್ಷರುಚಿಸಂಜನಿತಲೋಕ ಗುಣ-
ಪುಂಜಯುತ ಭಕ್ತಪವಿಪಂಜರ ಸದರ್ಥ-
ವ್ಯಂಜಕವಚಸ್ಕ ಪೊರೆ ಕಂಜಭವವಂದ್ಯ ಭವ-
ಕುಂಜಭದವಪಾವಕ ನಿರಂಜನ ವೃಷೇಂದ್ರಾ ೧೨

ಸಜ್ಜನಸಮರ್ಚ ಚರಪಜ್ಜಳಸಮಾರಚಿತ-
ಮಜ್ಜನ ನಿಜಾಂಘ್ರಿವಿನಮಜ್ಜನಸಮೂಹಾ-
ಪಜ್ಜಳದಮಾರುತ ಮರುಜ್ಜನಕ ಶಿಷ್ಟಪರಿ-
ಷಜ್ಜಲಜಭಾನು ಭವರಜ್ಜುಕರವಾಲಾ
ರುಜ್ಜಲಧಿಬಾಡಬ ಜಗಜ್ಜಠರ ತಾರಕಲ-
ಸಜ್ಜಪನಿಯುಕ್ತ ಮದವಜ್ಜನವಿದೂರ-
ಪ್ರೋಜ್ಜನಿತತತ್ತ್ವಕುಲ ಬಿಜ್ಜಳಪರಿಸ್ತುತ ವಿ-
ಲಜ್ಜಖಿಲಭಂಜನ ಸಸಜ್ಜ ಬಸವೇಶಾ '೧೩

ಲಾಟಮಗಧಾಂಧ್ರಕವಿರಾಟವಿಷಯಾಧಿಪಕಿ-
ರೀಟತಟರತ್ನರುಚಿಪಾಟಲಿತಪಾದ
ಸ್ಫಾಟಿಕಸುಪೀಠ ಭೃತಕಾಟನಪದಾರಿ ಪೃತ-
ತಾಟಕವಿನುತ್ಯ ಮೃಡನಾಟಕಸಹಾಯಾ

ಅತ್ಯಂತ ಮನೋಹರವಾದ ಕೀರ್ತಿಯೇ ದ್ರವ್ಯವಾಗಿ ಉಳ್ಳವನೂ, ಅಗ್ನಿಯೇ ನೇತ್ರವಾಗಿ ಉಳ್ಳ ಪರಮೇಶ್ವರನನ್ನು ಪೂಜಿಸುವವನೂ, ಪತಂಜಲಿ ಮುನಿಯಿಂದ ಸ್ತುತಿಸಿಕೊಳ್ಳುವವನೂ, ಸರ್ವಾಭಿಮತವೆನಿಸಿದ ಸದ್ಗುಣಗಳೇ ಲಕ್ಷಣವಾಗಿ ಉಳ್ಳವನೂ (ಗುರುತಾಗಿ ಉಳ್ಳವನೂ). ಮನೋಹರವಾದ ಕಡೆಗಣ್ಣುಗಳ ನೋಟದ ಕಾಂತಿಯಿಂದ ಹುಟ್ಟಿಸಲ್ಪಟ್ಟ ಲೋಕಗಳನ್ನುಳ್ಳವನೂ, ಸದ್ಗುಣಗಳಸಮೂಹದಿಂದ ಕೂಡಿದ ಭಕ್ತರಿಗೆ ವಜ್ರಪಂಜರ ಸ್ವರೂಪನಾದವನೂ, ಒಳ್ಳೆಯ ಅರ್ಥವನ್ನು ವ್ಯಕ್ತಪಡಿಸುವ ಮಾತುಗಳನ್ನಾಡುವವನೂ, ಕಮಲಭವನಾದ ಬ್ರಹ್ಮನಿಂದ ನಮಸ್ಕರಿಸಿಕೊಳ್ಳಲಿಕ್ಕೆ ಯೋಗ್ಯನಾದವನೂ, ಪಾಪವೆಂಬ ಕಾಡಿಗೆ ಕಾಡ್ಗಿಚ್ಚೆನಿಸಿರುವವನೂ, ಮಾಯಾರಹಿತನಾದವನೂ ಆದ ಬಸವೇಶ್ವರನೇ (ನನ್ನನ್ನು) ರಕ್ಷಿಸು. ೧೩–೧೪. ಲಾಟ, ಮಗಧ, ಆಂಧ್ರಕ, ವಿರಾಟಾದಿ ದೇಶಾಧಿಪತಿಗಳ ಕಿರೀಟಗಳ ದಂಡೆಯಲ್ಲಿ (ಕೊನೆಯಲ್ಲಿ) ಕೆತ್ತಲ್ಪಟ್ಟ ರತ್ನಗಳ ಕಾಂತಿಯಿಂದ ಕೆಂಪಾಗಿ ಕಾಣುವಂತೆ ಮಾಡಿದ ಪಾದಗಳನ್ನಿಟ್ಟಿರುವ ಸ್ಫಟಿಕಮಣಿಯಿಂದ ಮಾಡಿದ ಕಾಲುಮಣೆಯ ಪೀಠವನ್ನುಳ್ಳವನೂ, ಮನ್ಮಥನ ಶತ್ರುವಾದವನೂ, ತಾಟಕಾಸುರನನ್ನು ಸಂಹರಿಸಿದ ಶ್ರೀ ರಾಮಚಂದ್ರನಿಂದ ಸ್ತೋತ್ರಮಾಡಿಸಿಕೊಳ್ಳುವುದಕ್ಕೆ ಯೋಗ್ಯನಾದವನೂ, ಈಶ್ವರನ ಈ ಪ್ರಪಂಚದ ವ್ಯಾಪಾರವೆಂಬ ನಾಟಕಕ್ಕೆ ಸಹಾಯಕನಾದವನೂ, ಮನೋಹರವಾದ ಮಾತುಗಳಿಂದ ಕೂಡಿದ ಪರಮತವಾದಿಗಳೆಂಬ ವೃಕ್ಷಗಳನ್ನು ಕಿತ್ತುಹಾಕುವುದರಲ್ಲಿ

ಚಾಟುಪರವಾದಕುಜಪಾಟನಪಟಿಷ್ಠ ಮುನಿ-
ಕೋಟಿಹೃದಯಾಂಬುರುಹಕೋಟರಗ ಶೃಂಗಾ
ತಾಟಿತನಗ ಶ್ರುತಿಸುಘೋಟಕಮತಾದ್ರಿಮಣಿ-
ಕೂಟ ಪೊರೆ ನವ್ಯಶಶಿಜೂಟ ಬಸವೇಶಾ ೧೪

ದುಷ್ಟಜನದರ್ಪಹರ ಶಿಷ್ಟಜನರಕ್ಷಕ ಸ-
ದಿಷ್ಟಜನಸನ್ನುತ ನತೇಷ್ಟದಪದಾಬ್ಜೋ-
ತ್ಕೃಷ್ಟಗಣಸೇವ್ಯ ಹೃತದುಷ್ಟಮಕರಧ್ವಜ ನಿ-
ವಿಷ್ಟಮುನಿಮಾನಸ ಸುಹೃಷ್ಟಮೃದುಭಾಷಾ
ನಷ್ಟಪರವಾದ ಪರಿತುಷ್ಟಪರಮೇಶ ಲಸ-
ದಷ್ಟದಿಗಧೀಶನುತ ಸೃಷ್ಟಜಗದಂಡಾ-
ಕ್ಲಿಷ್ಟಮತಿ ಸಾಧುಪರಿಪುಷ್ಟಸಕಲಾರ್ಥ ಪೊರೆ
ವಿಷ್ಟಪಕದಂಬಕವಿಶಿಷ್ಟ ಬಸವೇಶಾ ೧೫

ಸಮರ್ಥನಾದವನೂ, ಅನೇಕ ಜನ ಋಷಿಗಳ ಹೃದಯ ಕಮಲವೆಂಬ ಪೊದೆಗಳನ್ನು ಹೊಂದಿರುವವನೂ, (ತನ್ನ) ಕೊಂಬುಗಳಿಂದ ಪರ್ವತಗಳನ್ನು ತಿವಿಯುವಂಥವನೂ (ಕೊಂಬಿನ ಮಣ್ಣಿನಾಟದಿಂದ) (ವಪ್ರಕ್ರೀಡೆಯಿಂದ ಪರ್ವತಗಳನ್ನು ತಿವಿ ತಿವಿದು ಉರುಳಿಸುವವನೂ ಎಂಬ ಭಾವ), ವೇದಗಳೇ ಶ್ರೇಷ್ಠವಾದ ಕುದುರೆಗಳನ್ನಾಗಿ ಉಳ್ಳ ಶಿವನ ವೀರಶೈವಮತವೆಂಬ ಪರ್ವತಕ್ಕೆ ರತ್ನಶಿಖರನಾಗಿ ಉಳ್ಳವನೂ, ನೂತನ ಚಂದ್ರನನ್ನೇ ಜಡೆಯಲ್ಲುಳ್ಳವನೂ ಆದ ಬಸವೇಶ್ವರನೇ (ನನ್ನನ್ನು) ರಕ್ಷಿಸು. [ಇಲ್ಲಿ ಬಸವಣ್ಣನನ್ನು ಶಿವನ ಅಭೇದದಿಂದ ವರ್ಣಿಸಲಾಗಿದೆ. [ಭೃತಕಾಟನ ಪದಕಾಟನ ಎಂದರೆ ನೀರಿನಲ್ಲಿ ಸಂಚರಿಸುವುದು ಮೀನು ಅದನ್ನು ಧ್ವಜದಲ್ಲಿ ಚಿಹ್ನೆಯಾಗುಳ್ಳವನು ಮೀನಕೇತನ-ಮನ್ಮಥ;] ೧೫. ದುಷ್ಟಜನರ ಗರ್ವವನ್ನು ನಾಶಮಾಡುವ, ಸತ್ಪುರುಷರನ್ನು ರಕ್ಷಿಸುವ, ಸಮೀಚೀನರಾದ ಆಪ್ತ ಜನರಿಂದ ಸ್ತುತಿಸಲ್ಪಡುವವನು, ನಮಸ್ಕರಿಸಿದವರಿಗೆ ಇಷ್ಟಾರ್ಥವನ್ನು ಕೊಡುವ ಪಾದ ಕಮಲವುಳ್ಳ, ಉತ್ತಮಗುಣವುಳ್ಳವರಿಂದ ಸೇವಿಸಲ್ಪಡುವುದಕ್ಕೆ ಯೋಗ್ಯನಾದ, ದುಷ್ಟನಾದ ಮನ್ಮಥನನ್ನು ಸಂಹರಿಸಿದ, ಋಷಿ ಜನರ ಚಿತ್ತದಲ್ಲಿ ಕುಳಿತಿರುವ, ಸಮೀಚೀನವೂ, ಸಂತೋಷ ಜನಕವೂ ಆದ ಕೋಮಲ ಮಾತುಗಳನ್ನುಳ್ಳ, ಅಮಂಗಳಕರಗಳಾದ ಮತವಾದಿಗಳನ್ನು ನಾಶಗೊಳಿಸಿದ, ಈಶ್ವರನನ್ನು ಸಂತೋಷಪಡಿಸಿದ (ನಡೆನುಡಿಯುಳ್ಳ), ಶೋಭಿಸುವ ಅಷ್ಟದಿಕ್ಪಾಲಕರಿಂದ ಸ್ತೋತ್ರಮಾಡಿಸಿಕೊಳ್ಳುವ, ಲೋಕವೆಂಬ ತತ್ತಿಯನ್ನು ಹುಟ್ಟಿಸಿದ, ಕ್ಲೇಶಕ್ಕೊಳಗಾದ ಸಾಧು ಸತ್ಪುರುಷರನ್ನು ಪೋಷಿಸುವಂಥ, ಸಮಸ್ತ ಐಶ್ವರ್ಯ ಸಂಪನ್ನನಾದ,

ಶುಂಠಶಿಶುಮಾರಮದಲುಂಠನಸಮರ್ಥ ದಶ-
ಕಂಠನತಭೂಭೃದುಪಕಂಠತತಿಲೀಲೋ-
ತ್ಕಂಠ ಭೃಗುಗಾರ್ಗ್ಯಹರಕಂಠಸನಕಸ್ತುತ ವಿ-
ಕುಂಠಿಸುವ ಮಾನಿಪ್ರಿಯ ಸುಕಂಠಸುರಗೇಯಾ
ಕುಂಠಿತದುರೀಹ ವಿಪಕಂಠಕೃತಚಾರುತರ-
ಕಂಠಿಕ ಗಜಾಸ್ಯಶಿತಿಕಂಠರಥಮುದ್ರಾ
ಕುಂಠನಿಜಶೌರ್ಯ ಪೊರೆ ಠಂಠಣಿತನಾದಕಳ
ಕಂಠರುಚಿನೀಲಗರಕಂಠ ಬಸವೇಶಾ ೧೬

ದಂಡಧರಬಾಧಿತಮೃಕಂಡುಭವರಕ್ಷ ಪರಿ-
ಪಾಂಡುರಕಳೇವರ ಪಿಚಂಡಭೃತವಿಶ್ವಾ-
ಜಾಂಡ ಫಣಕುಂಡಲಿಪಕುಂಡಲಮನೋಜ್ಞತತ
ತಾಂಡವಮೃಡಪ್ರಯುತ ಚಂಡಗಣನುತ್ಯಾ
ಪಂಡಿತಜನಾಂಬುರುಹಷಂಡರವಿ ದೃಪ್ತರಿಪು-
ಖಂಡನಜಗದ್ಭರಣಶೌಂಡ ನಿಖಿಲಾಶಾ-
ಖಂಡಿತಸುಕೀರ್ತಿ ಮಹಿಮಂಡಲಮಹೇಶ ಪೊರೆ
ಮಂಡಿತಮಹಾಗುಣಕರಂಡ ಬಸವೇಶಾ ೧೭

ಗೂಢಶಿವತತ್ತ್ವನಿಧಿ ಗೂಢಪದಕಂಕಣ ನಿ-
ಗೂಢಶಿವಮಂತ್ರ ಪರಿಲೀಢಬಹುಶಾಸ್ತ್ರಾ-
ರೂಢಮತಿಸಂಯುತ ಸಮೂಢಘನಸಾರರುಚಿ
ಮೂಢಮತಿವರ್ಜಿತ ನವೋಢಸುರಸೇವ್ಯಾ

ಜಗತ್ಸಮೂಹದಿಂದ ಕೂಡಿದ ಬಸವೇಶ್ವರನೇ ರಕ್ಷಿಸು. ೧೬–೧೭. ಯಮನಿಂದ ಪೀಡಿಸಲ್ಪಟ್ಟ ಮಾರ್ಕಂಡೇಯನನ್ನು ರಕ್ಷಿಸಿದ, ವಿಶೇಷ ವಾದ ಶುಭ್ರಶರೀರಿಯಾದ ಗರ್ಭದಲ್ಲಿಟ್ಟು ಸಕಲ ಬ್ರಹ್ಮಾಂಡಗಳನ್ನು ಪರಿಪಾಲಿಸುವ, ಶ್ರೇಷ್ಠನಾದ ಆದಿ ಶೇಷನ ಕರ್ಣಕುಂಡಲದಿಂದ ಮನೋಹರನಾದ, ವಿಸ್ತಾರವಾದ ತಾಂಡವ ನರ್ತನ ವನ್ನುಳ್ಳ ಈಶ್ವರನಿಂದ ಕೂಡಿಕೊಂಡಿರುವ, ಪ್ರಚಂಡರಾದ ಶಿವಗಣಗಳ ಸಮೂಹ ದಿಂದ ಕೊಂಡಾಡಿಸಿ ಕೊಳ್ಳುವುದಕ್ಕೆ ಯೋಗ್ಯವಾದ, ವಿದ್ವಾಂಸರೆಂಬ ಕಮಲಗಳ ಸಮೂಹಕ್ಕೆ ಸೂರ್ಯನಂತಿರುವ, ಕೊಬ್ಬಿದ ಶತ್ರುಗಳನ್ನು ಕತ್ತರಿಸುವಿಕೆ (ಮತ್ತು) ಲೋಕಗಳನ್ನು ಸಂರಕ್ಷಿಸುವಿಕೆ ಇವುಗಳಲ್ಲಿ ಸಮರ್ಥನಾದ, ಸಮಸ್ತ ದಿಕ್ಕು ಗಳಲ್ಲೂ ವಿಚ್ಛಿತ್ತಿಯಿಲ್ಲದಿರುವ (ನಿಬಿಡವಾದ) ಕೀರ್ತಿಯನ್ನುಳ್ಳ, ಭೂಮಂಡಲಕ್ಕೆಲ್ಲ ದೊಡ್ಡ ಮಹೇಶ್ವರನೆನಿಸಿದ, ಅಧಿಕವಾದ ಸದ್ಗುಣಗಳಿಂದ ಅಲಂಕರಿಸಲ್ಪಟ್ಟ ಭರಣಿ ಯಂತಿರುವ ಬಸವೇಶ್ವರನೇ ರಕ್ಷಿಸು. ೧೮. ಗೂಢವಾದ ಶಿವತತ್ತ್ವಗಳೆಂಬ ನಿಧಿಗೆ ರಹಸ್ಯಸ್ಥಾನನೆನಿಸಿದ, ಕಾಲಿನ ಕಟಕ (ಬಳೆ)ದಲ್ಲಿ ನೆಲೆಗೊಂಡಿರುವ ಶಿವ ಸಂಬಂಧದ ಮಂತ್ರಗಳನ್ನುಳ್ಳ ಚೆನ್ನಾಗಿ ಆಸ್ವಾದಿಸಲ್ಪಟ್ಟ (ಅಭ್ಯಸಿಸಲ್ಪಟ್ಟ)

ಗಾಢರಿಪುವರ್ಗಹರ ಬಾಢದುರಿತಾರ್ದನ ಸ-
ದೋಢವೃಢ ಶಶ್ವದವಗಾಢಶಿವಧರ್ಮ
ಪ್ರೌಢಬುಧನುತ್ಯ ದೃಗಪೋಢಭವ ರಕ್ಷಿಸಧಿ-
ರೂಢಶಶಿಭೃನ್ಮತನಿರೂಢ ಬಸವೇಶಾ ೧೮

ಕ್ಷೋಣಿಜನರಕ್ಷಣಧುರೀಣ ಬಲದುರ್ಮದಕ-
ರೇಣುನಿಶಿತಾಂಕುಶ ಸದೇಣಧರಲಕ್ಷ-
ಪ್ರಾಣ ಸುರವಂದ್ಯಪದಶೋಣಸರಸೀರುಹ ವಿ-
ಷಾಣದಳಿತಾಸುರ ಸವೀಣಮುನಿನುತ್ಯಾ-
ಪ್ರೀಣಿತಮಹಾಗಣ ಪುರಾಣಪರಿಷನ್ನುತ ಹೃ-
ತಾಣವಕಲಂಕ ಸುಮಬಾಣಮದಭಂಗಾ-
ಕ್ಷೀಣಬಲ ರಕ್ಷಿಪುದು ಪಾಣಿನಿಕಣಾದನುತ-
ವಾಣಿ ವರದಾಭಯದಪಾಣಿ ಬಸವೇಶಾ ೧೯

ಶಿವನ ಸಂಬಂಧದ ಶಾಸ್ತ್ರಗಳನ್ನುಳ್ಳ, ಪಾರಲೌಕಿಕವಾದ ಬುದ್ಧಿಯಿಂದ ಕೂಡಿದ ರಾಶಿಮಾಡಿದ ಪಚ್ಚಕರ್ಪೂರದ ಕಾಂತಿಯಂತಿರುವ ಕಾಂತಿಯುಳ್ಳ, ಮೂರ್ಖ ಬುದ್ಧಿಯುಳ್ಳವರಿಂದ ದೂರನಾದ, ನೂತನ ಕಲ್ಯಾಣ (ಲಗ್ನ)ದಿಂದ ಕೂಡಿದ ದೇವತೆಗಳಿಂದ ಸೇವಿಸಿಕೊಳ್ಳುವುದಕ್ಕೆ ಯೋಗ್ಯನಾದ, ಗಾಢವಾದ ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ನಾಶಮಾಡಿದ, ಶೀಘ್ರವಾಗಿ ಪಾಪಗಳನ್ನು ನಾಶಗೊಳಿಸುವಂತಹ, ಸಮೀಚೀನವಾಗಿ ಈಶ್ವರನನ್ನು ಹೊರುವಂತಹ, ಬಾರಿ ಬಾರಿಗೂ ಈಶ್ವರ ಧರ್ಮವನ್ನು ಚಿಂತನೆ ಮಾಡುತ್ತಿರುವ, ಪ್ರೌಢರಾದ ವಿದ್ವಾಂಸರುಗಳಿಂದ ಸ್ತೋತ್ರಮಾಡಿಸಿಕೊಳ್ಳುವುದಕ್ಕೆ ಯೋಗ್ಯನೆನಿಸಿದ, ಕಣ್ಣಿನ ನೋಟಮಾತ್ರದಿಂದ ಪಾಪಗಳನ್ನು ಹೋಗಲಾಡಿಸುವ, ರೂಢವಾಗಿರುವ ವೀರಶೈವ ಮತವನ್ನು (ಅಥವಾ ಅಭಿವೃದ್ಧಿಗೊಂಡಿರುವ ಶಿವನ ಮತವನ್ನು) ಹೊಂದಿರುವ ಬಸವೇಶ್ವರನೇ ರಕ್ಷಿಸು. ೧೯. ಭೂಮಂಡಲದಲ್ಲಿರುವ ಜನರುಗಳ ಸಂರಕ್ಷಣೆಯಲ್ಲಿ ಸಮರ್ಥನಾದ, ನೀಚವಾದ ಕೆಟ್ಟಗರ್ವವೆಂಬ ಹೆಣ್ಣಾನೆಗೆ ತೀಕ್ಷ್ಣವಾದ ಅಂಕುಶದಂತಿರುವ, ಸಮೀಚೀನವಾದ ಚಂದ್ರನೇ ಜಡೆಯಲ್ಲಿ ಚಿಹ್ನೆಯಾಗಿ ಉಳ್ಳ ಈಶ್ವರನಿಗೆ ಪ್ರಾಣಸ್ವರೂಪನಾದ, ದೇವತೆಗಳಿಂದ ನಮಸ್ಕರಿಸಲ್ಪಡುವುದಕ್ಕೆ ಯೋಗ್ಯವಾದ ಕೆಂದಾವರೆಯಂತಿರುವ (ರಕ್ತ ವರ್ಣದ ಕಮಲದಂತಿರುವ) ಪಾದಗಳನ್ನುಳ್ಳ, ಕೊಂಬಿನಿಂದ ರಾಕ್ಷಸರುಗಳನ್ನು ಸೀಳಿ ಹಾಕಿದ, ವೀಣಾಪಾಣಿಯಾದ ನಾರದಮಹರ್ಷಿಯಿಂದ ಸ್ತೋತ್ರಮಾಡಿಸಿಕೊಳ್ಳುವ, ಶಿವ ಮಹಾಗಣಗಳಿಂದ ಸಂತೋಷಗೊಳಿಸಲ್ಪಟ್ಟ, ಪುರಾಣಗಳಿಂದ ಹೊಗಳಿಸಿಕೊಳ್ಳಲ್ಪಡುವ, ಆಣವವೆಂಬ ಮಲವನ್ನು ನಾಶಗೊಳಿಸಿದ, ಪುಷ್ಪಬಾಣನಾದ ಮನ್ಮಥನ ಗರ್ವವನ್ನು ನಾಶಗೊಳಿಸಿದ, ನಾಶವಾಗದ ಶಕ್ತಿಯುನ್ನುಳ್ಳ, ಪಾಣಿನಿ, ಕಣಾದಾದಿಗಳಮಾತಿನಿಂದ ಸ್ತೋತ್ರಮಾಡಿಸಿಕೊಂಡ, ಇಷ್ಟವಾದವರಗಳನ್ನು ಅಭಯುವನ್ನು ಕೊಡುವ ಕೈ

ವಾರಣಮುಖಸ್ತುತ ವಿಚಾರಣದುರೀಷಣನಿ-
ವಾರಣ ಗಣಾಬ್ಜತರುಣಾರುಣ ಕೃತಾತ್ಮ-
ಪ್ರೇರಣಜಗನ್ನಿಕರಕಾರಣ ಭವಾಂಬುನಿಧಿ-
ತಾರಣ ತತಾತ್ಮ ಸುಖಪೂರಣಕಟಾಕ್ಷಾ
ದಾರುಣಸುರಾಹಿತವಿದಾರಣ ನತಾಪದನ
ಧೀರಣ ಕಳಾಕುಳವಿಸಾರಣ ನಿಯುಕ್ತೋ
ದೀರಣ ಮದೀಶ ಜಯ ಧಾರಣಯಮಾಂಕ ನಗ
ಚಾರಣ ಖಲಾಂಬುದಸಮೀರಣ ವೃಷೇಂದ್ರಾ ೨೦

ಕೃತ್ತಪರವಾದಮದಮತ್ತಜನ ಸಾರಶುಭ-
ವೃತ್ತ ಶಿವಸುವ್ರತನಿಮಿತ್ತ ಶಿವಶೇಷೋ-
ಪಾತ್ತಸುಖಭೋಗ ಮೃದುಚಿತ್ತ ಗಣನಾಯಕ ನಿ-
ವೃತ್ತವಿಷಯಭ್ರಮ ಸಮಾತ್ತಶಿವಯೋಗಾ-

ಗಳನ್ನುಳ್ಳ ಬಸವೇಶ್ವರನೇ ರಕ್ಷಿಸು. ೨೦. ಗಣಪತಿಯಿಂದ ಸ್ತೋತ್ರಮಾಡಿಸಿಕೊಳ್ಳುವ. ವಿಚಾರಶೀಲತೆಯಿಂದ ದಾರೇಷಣ, ಪುತ್ರೇಷಣ, ವಿತ್ತೇಷಣಾದಿ ಈ ಷಣತ್ರಯಗಳನ್ನು ದೂರಗೊಳಿಸಿದ, ಶಿವಗಣಗಳೆಂಬ ಕಮಲಗಳಿಗೆ ಉದಯ ಕಾಲದಸೂರ್ಯನೆನಿಸುವ, ಆತ್ಮಪ್ರೇರಣೆಯಿಂದ ಜಗತ್ತಿನ ಸಮೂಹಗಳ ಹುಟ್ಟುವಿಕೆಗೆ ಕಾರಣಕರ್ತನೆನಿಸಿದ, ಜನನಮರಣಾತ್ಮಕವಾದ ಸಂಸಾರವೆಂಬ ಸಾಗರವನ್ನು ದಾಟಿಸುವ, ವಿಸ್ತಾರವಾದ (ವಿಶೇಷವಾದ) ಆತ್ಮಸುಖವನ್ನುಂಟುಮಾಡುವ ಕಡೆಗಣ್ಣುಗಳ ನೋಟವುಳ್ಳ, ಕ್ರೂರರಾದ ರಾಕ್ಷಸರುಗಳನ್ನು ಸಂಹರಿಸಿದ, ನಮಸ್ಕರಿಸಿದವರ ಆಪತ್ತುಗಳನ್ನು ದೂರೀಕರಿಸುವ, ಸಕಲ ವಿದ್ಯಾಸಮೂಹವನ್ನು ವಿಸ್ತಾರಪಡಿಸುವ, (ಭಕ್ತಜನರ) ಉದ್ಧಾರಕಾರ್ಯದಲ್ಲಿ ಕೂಡಿದ, ಧಾರಣಯಮಗಳೆಂಬ ಯೋಗಗಳೇ ಗುರುತುಳ್ಳ, ಕೈಲಾಸಾದ್ರಿಯಲ್ಲಿ ಸಂಚರಿಸುವ, ದುಷ್ಟರೆಂಬ ಮೋಡಗಳಿಗೆ ಗಾಳಿಯಂತಿರುವ, ಹೇ ನನ್ನ ಸ್ವಾಮಿಯೇ ಬಸವೇಶ್ವರನೇ ಜಯ. ೨೧. ಅನ್ಯಮತದ ಪರ ವಾದವನ್ನು ಮಾಡುವ ಕೊಬ್ಬಿದಜನರನ್ನು ಕತ್ತರಿಸಿದ, ಶ್ರೇಷ್ಠವಾಗಿಯೂ ಶುಭವಾಗಿಯೂ ಇರುವ ಚರಿತ್ರೆಯುನ್ನುಳ್ಳ, ಶಿವಸಂಬಂಧವಾದನಿಯಮಗಳಿಗೆ ಕಾರಣನೆನಿಸಿದ, ಈಶ್ವರನ ಶೇಷಪ್ರಸಾದದಿಂದ ಸೌಖ್ಯಾತಿಶಯವನ್ನು ಹೊಂದಿರುವ, ಕೋಮಲವಾದ ಮನಸ್ಸನ್ನುಳ್ಳ, ಶಿವಗಣಗಳಿಗೆಲ್ಲ ಅಧಿಪತಿಯೆನಿಸಿದ, ಇಂದ್ರಿಯವ್ಯಾಪಾರಗಳ ಭ್ರಾಂತಿಯಿಂದ ವಿಮುಖನಾದ (ಹಿಂದಿರುಗಿದ), ಶಿವಯೋಗದಿಂದ ಪಡೆದ ಶಿವನ

ದತ್ತಶಿವಚಿತ್ಸುಖ ಭವೋತ್ತರಣಶೀಲ ಗುಣ-
ವಿತ್ತನಿಧಿ ಕಾನಕಕುಭೃತ್ತಟವಿಹಾರಾ-
ಯತ್ತಮುದ ಪಾಲಿಸೊಲವಿತ್ತು ಬಿಡದೆನ್ನನೆನ-
ಗಿತ್ತು ಮೃಡಭಕ್ತಿಯನುದಾತ್ತ ಬಸವೇಶಾ ೨೧

ತಪ್ತಕನಕಪ್ರಭ ನಿಗುಪ್ತನಿಜಮಾನಸಸು
ಜಪ್ತಶಿವಮಂತ್ರ ತನುಲಿಪ್ತಸಿತಭಸ್ಮ
ಪ್ರಾಪ್ತಶಿವಭಾವ ಜಿತದೃಪ್ತಕರಣೇಂದ್ರಿಯ ಸ-
ಮಾಪ್ತಬಹುಕೃತ್ಯ ಪರಿತೃಪ್ತಚರಲಿಂಗಾ
ಕ್ಷಿಪ್ತಮದ ಸತ್ತ್ವಗುಣಲುಪ್ತಜಡಮೋಹ ಚಿದ-
ಸುಪ್ತರುಚಿದೀಪಪರಿದೀಪ್ತಕರಣಾಶಾ
ವ್ಯಾಪ್ತಸಿತಕೀರ್ತಿ ಪೊರೆ ಸಪ್ತಹಯಚಂದ್ರಪವ-
ನಾಪ್ತನಯನಾಂಕಧರಗೋಪ್ತ ಬಸವೇಶಾ ೨೨

ಸಂಬಂಧದ ಜ್ಞಾನದಿಂದ ಉಂಟಾದ ಸುಖವನ್ನು ಹೊಂದಿರುವ, ಸಂಸಾರದಿಂದ ದಾಟಿಸುವ ಶೀಲವುಳ್ಳ, ಸದ್ಗುಣಗಳೆಂಬ ಐಶ್ವರ್ಯಕ್ಕೆ ರಾಶಿಯೆನಿಸಿರುವ, ಕನಕಪರ್ವತವೆನಿಸಿದ ಮೇರುವಿನ ತಪ್ಪಲಿನಲ್ಲಿ ವಿಹಾರಮಾಡುವುದರಿಂದ ಪಡೆದ ಸಂತೋಷವನ್ನುಳ್ಳ, ಹೇ ಉದಾತ್ತನಾದ ಬಸವೇಶ್ವರನೇ (ನನ್ನಲ್ಲಿ) ಪ್ರೀತಿಯನ್ನು ಹೊಂದಿ, ನನಗೆ ಪರಮೇಶ್ವರ ಸಂಬಂಧದ ಭಕ್ತಿಯನ್ನು ಕೊಟ್ಟು ತಪ್ಪದೆ ಪಾಲಿಸುವವನಾಗು. ೨೨. ಕಾಯ್ದು ಕರಗಿದ ಬಂಗಾರದ ಕಾಂತಿಯಂತಿರುವ ಕಾಂತಿಯಿಂದ ಕೂಡಿದ, ಗೂಢವಾದ (ಗಂಭೀರವಾದ) ತನ್ನ ಮನಸ್ಸಿನಿಂದಕೂಡಿದ, ಚೆನ್ನಾಗಿ ಜಪಿಸುತ್ತಿರುವ ಶಿವಷಡಕ್ಷರ ಮಂತ್ರವನ್ನುಳ್ಳ, ಶುಭ್ರವಾದ ವಿಭೂತಿಯನ್ನು ದೇಹದಲ್ಲಿ ಧರಿಸಿದ, ಶಿವಭಾವಾಪನ್ನ ಚಿತ್ತವನ್ನುಳ್ಳ, (ಅಥವಾ ಮಂಗಳಕರವಾದ ಭಾವವನ್ನುಳ್ಳ), ಗರ್ವ ವಿಶಿಷ್ಟವಾದ ವಾಕ್ಕು, ಪಾಣಿ, ಪಾದ, ಗುದ. ಉಪಸ್ಥಗಳೆಂಬ ಐದುಕರ್ಮೇಂದ್ರಿಯ, ಮೂಗು, ಕಣ್ಣು, ಕಿವಿ, ಚರ್ಮ, ನಾಲಿಗೆಯೆಂಬ ಐದು ಜ್ಞಾನೇಂದ್ರಿಯಗಳನ್ನು ಗೆದ್ದಿರುವ, ಅನೇಕ (ಲೋಕಕಲ್ಯಾಣಕಾರಕ) ಕ್ರಿಯೆಗಳನ್ನು ಮಾಡಿಮುಗಿಸಿದ, ಜಂಗಮಸಮೂಹವನ್ನು ತೃಪ್ತಿಗೊಳಿಸಿದ, ಗರ್ವವನ್ನು ನಾಶಗೊಳಿಸಿದ, ಮಾಯೆಯೆಂಬ ಜಾಡ್ಯವನ್ನು ಶಾಂತಿಗುಣದಿಂದ ಲೋಪ (ನಾಶ) ಗೊಳಿಸಿದ, ಸದಾ ಜಾಗರೂಕವಾದ ಜ್ಞಾನವೆಂಬ ಕಾಂತಿಯುಳ್ಳದೀಪದಿಂದ ಪ್ರಕಾಶಗೊಳಿಸಿಕೊಂಡಿರುವ ಇಂದ್ರಿಯಗಳನ್ನುಳ್ಳ (ಜ್ಞಾನವೆಂಬ ಬೆಳಕಿನಿಂದ ಕೂಡಿದ ಇಂದ್ರಿಯಗಳುಳ್ಳ), ದಿಕ್ಕುಗಳಲ್ಲೆಲ್ಲ ವ್ಯಾಪಿಸಿರುವ ಶುಭ್ರವಾದ ಯಶಸ್ಸನ್ನುಳ್ಳ, ಸೂರ್ಯ, ಚಂದ್ರ, ಅಗ್ನಿಗಳೇ ಕಣ್ಣಾಗಿಉಳ್ಳ ಶಿವನ ಚಿಹ್ನೆಯಾದ ಶಿವಲಿಂಗವನ್ನು ಧರಿಸಿರುವವರನ್ನು ಸಂರಕ್ಷಿಸುವ ಬಸವೇಶ್ವರನೇ (ನನ್ನನ್ನು ರಕ್ಷಿಸು)·

ವಾಸ್ತವಗುಣಾಕರ ನಿರಸ್ತನಿಖಿಲಾಮಯ ಪ-
ರಾಸ್ತಪರವಾದ ಯಮಿಶಸ್ತಶಿವಯೋಗಾ-
ಭ್ಯಸ್ತ ನಿಜಭಾವನವಚಸ್ತತಮಹಾಗಮ ಮ-
ಹಸ್ತಿಜಿತಾರ್ಕ ನಿಗಮಸ್ತವವಿಲೋಲಾ
ಧ್ವಸ್ತಕಲಿಕಲ್ಮಷ ಸಮಸ್ತಬುಧಸನ್ನುತ ಯ
ಶಸ್ತತದಿಗಂತ ಸುರಮಸ್ತಕಸಮೂಹ-
ನ್ಯಸ್ತಪದ ಪಾಲಿಸು ನಿರಸ್ತಮಯ ಸಾರಗುಣ-
ವಿಸ್ತರ ಲಸದ್ವರದಹಸ್ತ ಬಸವೇಶಾ ೨೩

ತ್ಯಕ್ತಕರಣೇಂದ್ರಿಯನಿಯುಕ್ತವಿಷಯಭ್ರಮ ಸ-
ದುಕ್ತಪರಮಾರ್ಥ ಪರಿಭಾಕ್ತಪರವಾದ
ಪ್ರಾಕ್ತನಮಹೇಶಪದಭಕ್ತ ಕರುಣಾಮೃತನಿ
ಷಿಕ್ತ ಸುಯಶೋಭರಿತದಿಕ್ತಟ ಕವೀಂದ್ರ-

೨೩. ವಾಸ್ತವವಾದ ಅಂದರೆ ಸ್ವಭಾವ ಸಿದ್ಧವಾದ ಸದ್ಗುಣಗಳಿಗೆ ಆಶ್ರಯನಾದ, ಸಮಸ್ತರೋಗಗಳನ್ನು ನಾಶಗೊಳಿಸಲ್ಪಟ್ಟ, ಶಿವನಿಂದ ಭಿನ್ನವಾದ ಮತಸ್ಥರ ವಾಗ್ವಾದಗಳನ್ನು ನಾಶಗೊಳಿಸಿದ, ಋಷಿಜನಗಳಿಂದ ಹೊಗಳಲ್ಪಟ್ಟ ಶಿವಯೋಗವನ್ನುಳ್ಳ, ಸ್ಥಿರವಾದ (ಶಿವನ) ಅನುಭಾವವನ್ನು ಅಭ್ಯಾಸ ಮಾಡಿದ, ತನ್ನ ಮಾತುಗಳಿಂದ ಪ್ರಚಾರಗೊಳಿಸಿದ ಶಿವಾಗಮಗಳನ್ನುಳ್ಳ (ಶಿವಾಗಮಗಳ ತತ್ತ್ವವನ್ನು ತನ್ನ ವಚನಗಳಿಂದ ಪ್ರಚಾರಗೊಳಿಸಿದ ಎಂದು ಭಾವ), ತನ್ನ ತೇಜಸ್ಸಿನ ಸಮೂಹದಿಂದ ಸೂರ್ಯನನ್ನು ಜಯಿಸಿದ, ವೇದಗಳ ಸ್ತುತಿಯಲ್ಲಿ ಆಸಕ್ತನಾದ, ಕಲಿಕಾಲದ ಪಾಪವನ್ನು ನಾಶಗೊಳಿಸಿದ, ಸಮಸ್ತ ವಿದ್ವಾಂಸರಿಂದ ಸ್ತೋತ್ರಮಾಡಿಸಿಕೊಳ್ಳುವ, ದಿಕ್ಕುಗಳ ಕೊನೆಯವರೆಗೂ ಹರಡಿದ ಕೀರ್ತಿಯನ್ನುಳ್ಳ, ದೇವತೆಗಳ ಶಿರಸ್ಸುಗಳ ಸಮೂಹದಲ್ಲಿ ಪಾದಗಳನ್ನು ಇಟ್ಟಿರುವ, ನಾಶರಹಿತಗಳಾಗಿಯೂ, ಶ್ರೇಷ್ಠಗಳಾಗಿಯೂ ಇರುವ ವಿಶಾಲವಾದ ಗುಣಸಮೂಹವನ್ನುಳ್ಳ, ಪ್ರಕಾಶಿಸುವ ಇಷ್ಟಾರ್ಥಗಳನ್ನು ಕೊಡುವ ಕೈಗಳನ್ನುಳ್ಳ, ಬಸವೇಶ್ವರನೇ ರಕ್ಷಿಸು. ೨೪. ದೇಹಇಂದ್ರಿಯಗಳಲ್ಲಿ ಕೂಡಿದ ವಿಷಯ ಸಂಬಂಧವಾದ ಭ್ರಮೆಯನ್ನು ದೂರೀಕರಿಸಿರುವ, ಶಿವನಿಂದ ಅನ್ಯರಾದವರ ವಾದವನ್ನು ಭೇದಿಸಿದ (ನಾಶಗೊಳಿಸಿದ), ಪುರಾತನರಾದ ಶಿವನಭಕ್ತರ ಕಾರುಣ್ಯವೆಂಬ ಅಮೃತರಸದಿಂದ ಸೇಚನಗೊಳಿಸಲ್ಪಟ್ಟ (ಸಿಂಪಡಿಸಲ್ಪಟ್ಟ), ಸತ್ಕೀರ್ತಿಯಿಂದ ದಿಕ್ಕುಗಳನ್ನೆಲ್ಲ ತುಂಬಿರುವ, ಕವಿಶ್ರೇಷ್ಠರಿಂದ ಸ್ಫುಟವಾಗಿ (ವರ್ಣಿಸಲ್ಪಟ್ಟ) ಪ್ರಕಾಶಮಾನವಾದ ಪಾದಗಳನ್ನುಳ್ಳ, ಸತ್ಯವಚನವೆಂಬ ರತ್ನಗಳ ಆಭರಣಗಳನ್ನು ಕಿವಿಗಳಿಗೆ ಸಂಬಂಧಗೊಳಿಸಿಕೊಂಡಿರುವ ಸತ್ಯವಚನಗಳೇ ಕರ್ಣಾಭರಣ

ವ್ಯಕ್ತರುಚಿಸಾರಪದ ಸೂಕ್ತಮಣಿಭೂಷಣನಿ-
ಷಕ್ತನಿಜಕರ್ಣ ಪರಿಭುಕ್ತಗರ ಮಾನೋ-
ದ್ರಿಕ್ತಮದವಾರಣ ವಿರಕ್ತಹಿತ ರಕ್ಷಿಸು ನಿ-
ರುಕ್ತಶಿವತತ್ತ್ವಪರ ಮುಕ್ತ ಬಸವೇಶಾ ೨೪

ಶಾಂತನಿಜಮಾನಸನಿಶಾಂತ ಪರಿತರ್ಜಿತಲ-
ತಾಂತಶರ ನಿರ್ಜಿತಕೃತಾಂತ ಶಿವಯೋಗಾ-
ಶ್ರಾಂತಸುಖಯುಕ್ತ ನಿಗಮಾಂತಚಿದಭಿಜ್ಞ ಭವ-
ತಾಂತ ನತರಕ್ಷ ಶಶಿಕಾಂತಧವಳಾಂಗಾ
ದಾಂತ ಪರಮೇಶಪರಿಚಿಂತನಪರಾಯಣ ನಿ-
ತಾಂತಶಿವಮಂತ್ರಕಲಿತಾಂತರ ನಿರುದ್ಧ-
ಸ್ವಾಂತಶಿವಲಿಂಗ ಜಯ ಸಂತತಕೃಪಾಕರ ನಿ
ರಂತ ಗಣನಂದನವಸಂತ ಬಸವೇಶಾ ೨೫

ಸತ್ಯಮಯವಾಕ್ಯ ಶುಭಕೃತ್ಯ ಚರಲಿಂಗಪದ-
ಭೃತ್ಯ ನಿಗಮಾಗಮವಿನುತ್ಯಮಹಿಮಾಂಕಾ-
ಮಾತ್ಯಕುಲಶೇಖರ ವಿಭೂತ್ಯಧಿಕ ಭಕ್ತಹಿತ
ಧೃತ್ಯತುಳವಿಸ್ಫುಟಿತಚೈತ್ಯಗೃಹವೃಂದಾ

ವಾಗಿಉಳ್ಳ), ವಿಷವನ್ನು ಊಟಮಾಡಿದ, ಗರ್ವದಿಂದ ಕೊಬ್ಬಿದವರ ಅಹಂಕಾರವನ್ನು ನಿಲ್ಲಿಸಿದ, ವಿರಕ್ತರಾದವರಿಗೆ ಮಿತ್ರನೆನಿಸಿದ, (ವೈರಾಗ್ಯ ಸಂಪನ್ನರ ಮಿತ್ರನಾದ), ಶಿವತತ್ತ್ವವನ್ನು ಹೇಳುವ, ಉತ್ಕೃಷ್ಟ (ನಿತ್ಯ) ಮುಕ್ತಿಯನ್ನು ಹೊಂದಿದ ಬಸವೇಶ್ವರನೇ ರಕ್ಷಿಸು. ೨೫. ಶಾಂತವಾದ ತನ್ನ ಮನಸ್ಸನ್ನುಳ್ಳ, ಮನ್ಮಥ (ಲತಾಂತಶರ)ನನ್ನು ಶೀಘ್ರವಾಗಿ ಪರಿತ್ಯಾಗಗೊಳಿಸಿದ, ಯಮನನ್ನು ಸೋಲಿಸಿದ, ಶಿವ ಸಂಬಂಧವಾದ ಅಧಿಕ ಸುಖದಿಂದ ಕೂಡಿದ, ವೇದಾಂತ ವಿಷಯಕವಾದ ಜ್ಞಾನದಲ್ಲಿ ಪ್ರೌಢನಾದ, ಪಾಪವನ್ನು ನಾಶಗೊಳಿಸಿದ, ನಮಸ್ಕರಿಸಿದವರನ್ನು ಪಾಲಿಸುವ, ಚಂದ್ರಕಾಂತ ಶಿಲೆಯೋಪಾದಿಯಲ್ಲಿ ಶುಭ್ರವಾದ ಶರೀರವುಳ್ಳ ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿರುವ, ಈಶ್ವರನ ಧ್ಯಾನದಲ್ಲಿ ಆಸಕ್ತನಾದ, ಶ್ರೇಷ್ಠವಾದ (ಅತ್ಯಧಿಕವಾದ) ಷಡಕ್ಷರೀಮಂತ್ರದಿಂದ ಕೂಡಿದ ಮನಸ್ಸನ್ನುಳ್ಳ, ಅನ್ಯತ್ರ ಚಲಿಸದ ಹಾಗೆ ತಡೆಯಲ್ಪಟ್ಟ ಮನಸ್ಸಿನಲ್ಲಿ ಶಿವಲಿಂಗವನ್ನುಳ್ಳ, ಸತತವೂ ಕೃಪೆಯನ್ನುಂಟು ಮಾಡುವ, ಸತತವೂ ಶಿವಗಣಗಳೆಂಬ ನಂದನವನಕ್ಕೆ ವಸಂತ ಋತುವಿನಂತಿರುವ ಬಸವೇಶ್ವರನೇ, ಜಯ. ೨೬. ಸತ್ಯದಿಂದ ತುಂಬಿದ ಮಾತುಳ್ಳ, ಮಂಗಳಕರವಾದಕ್ರಿಯೆಗಳನ್ನುಳ್ಳ, ಜಂಗಮಲಿಂಗದಪಾದಸೇವಕನಾದ, ವೇದಾಗಮಗಳಿಂದ ಸ್ತೋತ್ರಮಾಡಿಸಿಕೊಳ್ಳುವುದಕ್ಕೆ ಯೋಗ್ಯವಾದ ಮಹತ್ವವೇ ಗುರುತಾಗಿಉಳ್ಳ, ಮಂತ್ರಿ ಜನಸಮೂಹದ ಶಿರೋಭೂಷಣನೆನಿಸಿದ, ಅಧಿಕವಾದ ಐಶ್ವರ್ಯದಿಂದ ತುಂಬಿದ, ಶಿವಭಕ್ತರಿಗೆ ಆಪ್ತನೆನಿಸಿದ

ಶ್ವೈತ್ಯರುಚಿರಾಂಗ ಸಿತಮತ್ಯನಘ ಪದ್ಮಭವ-
ಸೂತ್ಯನಿಶಗೇಯ ತತದೈತ್ಯಮದಭಂಗಾ-
ದಿತ್ಯಶತದೀಪ್ತಿಯುತ ಯತ್ಯಮಳಚಿತ್ತಮಣಿ-
ಭಿತ್ತ್ಯಮಳಬಿಂಬ ಪೊರೆ ನಿತ್ಯ ಬಸವೇಶಾ ೧೬

ಶೀತಕರಶೇಖರಸದಾತನನಿಜಾಂಗ ಜಗ-
ತೀತಳಜನಾನತನಿಶಾತಶರಧಾರಾ-
ಘಾತ ಹೃತದೈತ್ಯ ಕರನೀತಸಕಳೇಷ್ಟ ಝಷ-
ಕೇತನಹರಾಂಕಧರಗೀತಸರಸೀಸಂ
ಜಾತದಿನನಾಯಕ ಜಿತೇತರನಿತಾಂತಜಡ-
ಚೇತನ ಜಗನ್ನಿಚಯತಾತ ಘನನಂದಿ
ಖ್ಯಾತಗಣನಾಥಕಲಕೇತಸಖ ಕಿನ್ನರದ-
ಯಾತತರಸಾರ್ಥಿ ಹರಜಾತ ಜಯ ಧೀರಾ ೧೭

ಅಸದೃಶವಾದ ಧೈರ್ಯಗುಣದಿಂದ ಸೀಳಿಹಾಕಿದ ಚೈತ್ಯಾಲಯಗಳ ಸಮೂಹವನ್ನುಳ್ಳ, ಧವಳವರ್ಣದಿಂದ ಮನೋಹರವಾದ ಶರೀರವುಳ್ಳ, ಶುಭ್ರವಾದ ಬುದ್ಧಿಯುಳ್ಳ, ಪಾಪರಹಿತನಾದ ಬ್ರಹ್ಮಕುಮಾರನಾದ ನಾರದ ಮಹರ್ಷಿಯಿಂದ ಸತತವೂ ಹಾಡುವುದಕ್ಕೆ ಯೋಗ್ಯನಾದ, ವಿಶೇಷ (ವಿಸ್ತಾರ)ವಾದ ರಾಕ್ಷಸರ ಗರ್ವವನ್ನು ನಾಶಪಡಿಸಿದ, ನೂರಾರು ಸೂರ್ಯರಕಾಂತಿಯಂತಿರುವ ಕಾಂತಿಯಿಂದ ಕೂಡಿದ, ಋಷಿಜನರ ನಿರ್ಮಲವಾದ ಚಿತ್ತೆಂಬರತ್ನಮಯ ಗೋಡೆಯನ್ನು ಹೊಂದಿ ಪ್ರತಿಬಿಂಬಿತನಾಗಿರುವ, (ಮುನಿಜನರ ಮನಸ್ಸಿನಲ್ಲಿ ನೆಲೆಸಿ ಪ್ರಕಾಶಿಸುತ್ತಿರುವ), ನಿತ್ಯನಾದ ಬಸವೇಶ್ವರನೇ (ನನ್ನನ್ನು) ರಕ್ಷಿಸು. ೧೭. ಸತತವೂ ಪರಮೇಶ್ವರನ ಪಾದಗಳಿಗೆ ನಮಸ್ಕಾರಮಾಡುವ ತನ್ನ ದೇಹವುಳ್ಳವನೂ, ಜಗತ್ತಿನ ಸಮಸ್ತಜನಗಳಿಂದ ನಮಸ್ಕರಿಸಿ ಕೊಳ್ಳಲ್ಪಡುವವನೂ, ತೀಕ್ಷ್ಣವಾದ ಬಾಣಗಳ ಪರಂಪರೆಯ ಹೊಡೆತದಿಂದ ರಾಕ್ಷಸಸಮೂಹವನ್ನು ಸಂಹಾರಮಾಡಿದವನೂ, ಸಕಲ ಇಷ್ಟಾರ್ಥಗಳನ್ನು ಕೊಡುವವನೂ, ಮೀನಕೇತನನಾದ ಮನ್ಮಥನನ್ನು ಸಂಹರಿಸಿದ ಪರಮೇಶ್ವರನ ಚಿಹ್ನೆಯಾದ ಶಿವಲಿಂಗವನ್ನು ಧರಿಸಿದವರ ಗೀತಗಳೆಂಬ ಕಮಲಗಳಿಗೆ ಸೂರ್ಯನಂತಿರುವವನೂ, ಇತರ ವಿಶೇಷವಾದ ಮೂರ್ಖಚೇತನರೆನಿಸಿದ ಜನರನ್ನು ಗೆದ್ದವನೂ, ಜಗತ್ತಿನ ಸಮೂಹಗಳಿಗೆಲ್ಲ ವೃದ್ಧನೆನಿಸಿದ (ಯಜಮಾನನೆನಿಸಿ)ದವನೂ, ಶ್ರೇಷ್ಠನಂದೀಶ್ವರನೂ, ವಿಖ್ಯಾತವಾದ ಶಿವಗಣಗಳಿಗೆಲ್ಲ ಒಡೆಯನೆನಿಸಿದವನೂ, ಕಲಕೇತಬೊಮ್ಮಯ್ಯನ ಮಿತ್ರನೂ, ಕಿನ್ನರಿಬೊಮ್ಮಯ್ಯನ ವಿಶೇಷವಾದ ದಯಾರಸವನ್ನು ಬೇಡುವವನೂ, ಪರಮೇಶ್ವರಾಂಶ

ಪಾರ್ಥಿವಸಮರ್ಚಿತ ಚತುರ್ಥ ವಿಬುಧೇಷ್ಟಪುರು-
ಷಾರ್ಥದ ಪವಿತ್ರಿತಸುತೀರ್ಥಪದ ಧೂತಾ
ನರ್ಥಮತ ರಂಜಿತಸದರ್ಥಪರಮಾಗಮ ಪ-
ರಾರ್ಥಪರಿಪಾಲನ ಸುಕೃತಾರ್ಥಿಜನಪಕ್ಷಾ
ಪಾರ್ಥಪಟುರೋಪದ ಕದರ್ಥನಖಿಲಾಹಿತ ಪ-
ದಾರ್ಥಿತಗಣೋತ್ಸವ ಸದರ್ಥಿಜನತಾಸಂ-
ಪ್ರಾರ್ಥಿತಸುರದ್ರು ಪೊರೆ ಸಾರ್ಥನಿಗಮಸ್ತುತ ಸ-
ಮರ್ಥಿತಮಹಾವ್ರತ ಸಮರ್ಥ ಬಸವೇಶಾ ೨೮

ಮಂದರಧರಾಧರಸುಮಂದಿರ ಮನೋಹರ ಮು-
ಕುಂದಚತುರಾನನಪುರಂದರಹುತಾಶಾ-
ಮಂದಯಮಮುಖ್ಯಸುರಬೃಂದಪರಿಪೂಜಿತ ಸ-
ನಂದಸನಕಾರ್ಚಿತ ಸದಿಂದುಧರಭಕ್ತಾ-

ಸಂಭೂತನೂ, ಧೀರನೂ ಆದ (ಬಸವೇಶ್ವರನೇ), ಜಯ. ೨೮. ರಾಜನಿಂದ (ಬಿಜ್ಜಳರಾಜನಿಂದ) ಪೂಜಿಸಿಕೊಂಡ, ಜ್ಞಾನಿಗಳಿಂದ ಬಯಸಲ್ಪಡುವ ನಾಲ್ಕನೆಯದಾದ ಮೋಕ್ಷವೆಂಬ ಪುರುಷಾರ್ಥವನ್ನುಂಟುಮಾಡುವ, ಶ್ರೇಷ್ಠವಾದ ತೀರ್ಥಜಲದಿಂದ ಪವಿತ್ರಗೊಂಡ ಪಾದಗಳುಳ್ಳ, ಅನರ್ಥಕಾರಿಗಳಾದ (ಅರ್ಥವಿಲ್ಲದ) ಮತಗಳನ್ನು ತಿರಸ್ಕರಿಸಿದ, ಪ್ರಕಾಶಮಾನವಾದ ಒಳ್ಳೆಯ ಅರ್ಥದಿಂದ ಕೂಡಿದ ಶ್ರೇಷ್ಠ ಆಗಮಜ್ಞಾನವುಳ್ಳ, ಪರರಿಗೋಸುಗ ಅರ್ಥವನ್ನು ರಕ್ಷಿಸುವ, ಪುಣ್ಯಶೀಲತೆಯೇ ಐಶ್ವರ್ಯವಾಗಿಉಳ್ಳ ಜನರ ಪಕ್ಷದವನಾದ (ಸಹಾಯಕನಾದ) ಅರ್ಜುನನಿಗೆ ಸಮರ್ಥವಾದ ಬಾಣವನ್ನುಕೊಟ್ಟ, ಕೆಟ್ಟಯೋಚನೆಯ ನೀಚಜನಕ್ಕೆ ಶತ್ರುವಾದ, ಸತತವೂ ಬೇಡುತ್ತಿರುವ ಶಿವಗಣಗಳಿಗೆ ಸಂತೋಷವನ್ನುಂಟುಮಾಡುವ, ಶ್ರೇಷ್ಠವಾದ ಯೋಚನೆಯನ್ನು ಮಾಡುವ ಜನಸಮೂಹದಿಂದ ಬೇಡಿಸಿಕೊಳ್ಳುವ ಕಲ್ಪವೃಕ್ಷಸ್ವರೂಪನಾದ, ವೇದಗಳಿಂದ ಒಳ್ಳೆಯ ಅರ್ಥಪೂರ್ಣವಾಗಿ ಹೊಗಳಿಸಿಕೊಳ್ಳುವ, ಮಹಾವ್ರತವನ್ನು ಸಮರ್ಥಿಸುವ (ಸಾಧಿಸುವ) (ಗುರುಲಿಂಗಜಂಗಮ ಸಂಬಂಧದ ಮಹಾವ್ರತವನ್ನು ಸಾಧಿಸುವ ಅಥವಾ ಸಮರ್ಥಿಸುವ), ಸಮರ್ಥನಾದ ಬಸವೇಶ್ವರನೇ ಪೊರೆ. ೨೯. ಮಂದರವೆಂಬ ಹೆಸರಿನ ಪರ್ವತವೇ ಮನೆಯಾಗಿಉಳ್ಳ, ಮನೋಹರಾಕಾರ ಮುಕುಂದ, ಬ್ರಹ್ಮ, ದೇವೇಂದ್ರ, ಅಗ್ನಿ, ಅಧಿಕನಾದ ಯಮ (ತೀಕ್ಷ್ಣನಾದಯಮ) ಇವರೇ ಮೊದಲಾದ ದೇವತೆಗಳ ಸಮೂಹದಿಂದ ಪೂಜಿಸಲ್ಪಡುವ, ಸನಕಸನಂದಾದಿ ಮುನಿಜನಗಳಿಂದ ಅರ್ಚನೆ ಮಾಡಿಸಿಕೊಳ್ಳುವ, ಶ್ರೇಷ್ಠರಾದ ಶಿವಭಕ್ತರುಗಳಿಗೆ ಆನಂದವನ್ನುಂಟುಮಾಡುವ, ಜ್ಞಾನವೆಂಬ

ನಂದಕರ ಚಿದ್ರಸಮರಂದಮದಷಟ್ಚರಣ
ಕುಂದಹಿಮಹೀರಶಶಿಚಂದನಸಿತಾಂಗಾ
ಸ್ಕಂದನತಭಾಸ್ವದರವಿಂದಪದ ಪಾಲಿಪುದ-
ಸಿಂದಿತಕೃಪಾಸಲಿಲಕಂದ ಬಸವೇಶಾ ೨೯

ಚಿದ್ರಮಣ ಶೈವಶುಭಮುದ್ರ ಭುವನಾವನವಿ-
ನಿದ್ರ ಭವಭಕ್ತಪರಿಷದ್ರಸ ಮನೋಜೋ-
ಪದ್ರವವಿದೂರ ತತಭದ್ರ ಬಹುಜನ್ಮಗದ-
ವಿದ್ರವಕರಾಮಿತದಯಾರ್ದ್ರಸುಕಟಾಕ್ಷಾ
ಕ್ಷುದ್ರಮತಿಭಂಜನ ಲಸದ್ರವಿಶತಪ್ರಭ ಹ-
ರಿದ್ರುಹಿಣಕಾಮಿತಸುರದ್ರುನಿಭ ವಿದ್ಯಾ-
ವಿದ್ರುಚಿರ ಸದ್ಗುಣಸಮುದ್ರ ಪೊರೆಯೆನ್ನನಘ-
ವದ್ರಹಿತ ಭೂಮಹಿತರುದ್ರ ಬಸವೇಶಾ ೩೦

ಸಿಂಧುರಮಹಾಸುರ-ಜಲಂಧರ-ಮೃಗಾರಿ-ಸಮ-
ದಾಂಧಕ-ಮದಪ್ರಹರ ಸಿಂಧುಧರಲೀಲಾ
ಸಿಂಧುಹಿಮದೀಧಿತಿ ಕಬಂಧಜಮುಖೋದ್ಗಮಸು-
ಗಂಧಭರಮಾಲ್ಯನಿಜಕಂಧರಶುಭಾಂಗಾ

ಮಕರಂದದ ರಸಕ್ಕೆ ಮದಿಸಿದ ಭ್ರಮರದಂತಿರುವ, ಒಳ್ಳೆಯ ಮೊಲ್ಲೆಯ ಹೂವು, ಪಚ್ಚಕರ್ಪೂರ (ಹಿಮ), ವಜ್ರ (ಹೀರ), ಚಂದ್ರ, ಶ್ರೀಗಂಧ,-ಇವುಗಳ ಹಾಗೆ ಶುಭ್ರವಾದ ದೇಹವುಳ್ಳ, ಷಣ್ಮುಖನಿಂದ ನಮಸ್ಕರಿಸಿಕೊಂಡ ಕಮಲದಂತಹ ಪಾದಗಳುಳ್ಳ, ನಿರ್ದುಷ್ಟನಾದ ಕೃಪೆಯೆಂಬ (ದಯೆಯೆಂಬ) ನೀರಿನಿಂದ ಕೂಡಿದ ಮೇಘಸ್ವರೂಪ ನಾದ ಬಸವೇಶ್ವರನೇ ರಕ್ಷಿಸುವುದು. ೩೦. ಚಿತ್ತಿಗೆ ರಮಣ (ಅಧಿಪತಿ)ನೆನಿಸಿದ, ಶೈವಸಂಬಂಧವಾದ ಮಂಗಳಕರ ಚಿಹ್ನೆಗಳನ್ನುಳ್ಳ, ಲೋಕಗಳನ್ನು ಸಂರಕ್ಷಿಸುವುದರಲ್ಲಿ ಆಲಸ್ಯರಹಿತನಾದ (ಜಾಗರೂಕನಾದ), ಶಿವನ ಭಕ್ತರುಗಳ ಸಭೆಯಲ್ಲಿ ಪ್ರೀತಿ ಯನ್ನುಳ್ಳ, ಮನ್ಮಥಸಂಬಂಧವಾದ ಪೀಡೆಗಳಿಂದ ದೂರನಾಗಿರುವ, ವಿಶಾಲವಾದ (ವಿಸ್ತಾರವಾದ) ಮಂಗಳಗಳುಳ್ಳ, ಅನೇಕ ಜನ್ಮಗಳೆಂಬ ರೋಗವನ್ನು ನಾಶಗೊಳಿಸಿದ (ಒಣಗಿಸಿದ), ಅಪರಿಮಿತವಾದ ಕೃಪಾರಸದಿಂದ ನೆನೆದ ಶ್ರೇಷ್ಠ ಕಡೆಗಣ್ಣುಗಳ ನೋಟವುಳ್ಳ, ನೀಚ ಬುದ್ಧಿಯ ಜನವನ್ನು ನಾಶಗೊಳಿಸಿದ, ಪ್ರಕಾಶಮಾನ ವಾದ ನೂರಾರು ಸೂರ್ಯರುಗಳ ಕಾಂತಿಯಂತೆ ಕಾಂತಿಯುಳ್ಳ, ವಿಷ್ಣು ಬ್ರಹ್ಮರು ಗಳ ಇಷ್ಟಾರ್ಥಕ್ಕೆ ಕಲ್ಪವೃಕ್ಷ ಸದೃಶನಾದ, ಶಿವಸಂಬಂಧವಾದ ವಿದ್ಯೆಯನ್ನು ತಿಳಿದವರಲ್ಲಿ ಮನೋಹರನೆನಿಸಿದ, ಸದ್ಗುಣಗಳಿಗೆ ಸಮುದ್ರದೋಪಾದಿಯಲ್ಲಿರುವ, ಪಾಪದಿಂದ ಕೂಡಿದವರನ್ನು ದೂರೀಕರಿಸಿದ, ಭೂಮಿಗೆ ಹಿತವನ್ನುಂಟು ಮಾಡುವ ರುದ್ರಸ್ವರೂಪನಾದ, ಬಸವೇಶ್ವರನೇ, ನನ್ನನ್ನು ರಕ್ಷಿಸು. ೩೧. ಗಜಾಸುರನೆಂಬ ಮಹಾರಾಕ್ಷಸನ, ಜಲಂಧರ, ವ್ಯಾಘ್ರಾಸುರ, ಮದಾಂಧನಾದ ಅಂಧಕಾಸುರ ಮೊದ

ಬಂಧುರ ಜಗತ್ತ್ರಯಧುರಂಧರ ಪದಾನತಭ-
ವೇಂಧನಹುತಾಶ ವಿಧಿಕಂಧರಕರಾಶಾ-
ಬಂಧಹರ ರಕ್ಷಿಸಘಕಂಧರಚಯಪ್ರಬಲ-
ಗಂಧವಹ ಭಕ್ತಗಣಬಂಧು ಬಸವೇಶಾ ೩೧

ಸಿದ್ಧಪರಮಾಗಮ ನಿಬದ್ಧಶಿವತತ್ತ್ವರುಚಿ
ವೃದ್ಧಮುನಿಸೇವ್ಯ ಜಿತಬೌದ್ಧಮುಖವಾದಾ-
ಶ್ರದ್ಧಜನದುರ್ಲಭ ನಿರುದ್ಧಕರಣೇಂದ್ರಿಯ ನಿ-
ಷಿದ್ಧತನುವರ್ತನ ವಿವೃದ್ಧಶಿವಯೋಗಾ

ಲಾದವರ ಗರ್ವವನ್ನು ನಾಶಮಾಡಿದ, ಗಂಗಾಧರನಾದ ಶಿವನ ಲೀಲೆ (ಪಂಚವಿಂಶತಿಲೀಲೆ) ಗಳೆಂಬ ಸಮುದ್ರಕ್ಕೆ ಶೀತಕಿರಣನಾದ ಚಂದ್ರನಂತಿರುವ, ಕಮಲವೇ ಮುಖ್ಯವಾದ ಹೂವುಗಳ ಪರಿಮಳದ ಅತಿಶಯದಿಂದ ಕೂಡಿದ ಮಾಲಿಕೆಯೋ ತನ್ನ ಕಂಠದಲ್ಲುಳ್ಳ, ಮಂಗಳಕರವಾದ ದೇಹದಿಂದ ಮನೋಹರನೆನಿಸಿದ, ಮೂರು ಲೋಕಗಳ (ರಕ್ಷಣೆಯ) ಭಾರವನ್ನು ಹೊತ್ತಿರುವ, ಪಾದಗಳಿಗೆ ನಮಸ್ಕಾರ ಮಾಡಿದವರ ಉತ್ಪತ್ತಿಯೆಂಬ (ಹುಟ್ಟೆಂಬ) ಕಟ್ಟಿಗೆಗೆ (ಸೌದೆಗೆ) ಬೆಂಕಿಯಂತಿರುವ, ಬ್ರಹ್ಮನ ಕಪಾಲ (ಶಿರಸ್ಸ)ವನ್ನು ಧರಿಸಿರುವ ಹಸ್ತವುಳ್ಳ, ಆಶೆಯೆಂಬ ಬಂಧ (ಗಂಟು)ವನ್ನು ನಾಶಪಡಿಸಿದ, ಪಾಪವೆಂಬ ಮೋಡಗಳ ಸಮೂಹವೇ ಪ್ರಬಲಗಾಳಿ (ಬಿರುಗಾಳಿ) ಯೆನಿಸಿದ, ಶಿವಭಕ್ತರುಗಳ ಸಮೂಹವೇ ಬಂಧುಗಳಾಗಿ ಉಳ್ಳ ಬಸವೇಶ್ವರನೇ, (ನನ್ನನ್ನು) ರಕ್ಷಿಸು. [ಕಂ, ನೀರನ್ನು ಧರ–ಧರಿಸಿರುವುದು–ಮೋಡ ; ಹಿಮ–ಶೀತವಾದ ದೀಧಿತಿ–ಪ್ರಕಾಶವನ್ನುಳ್ಳವ-ಚಂದ್ರ ; ಸಿಂಧು–ನದಿ, ಧರಿ–ಧರಿಸಿರುವವ ಅಂದರೆ ಗಂಗೆಯನ್ನು ಧರಿಸಿದವ-ಶಿವ; ಕಬಂಧ-ನೀರು; ಜ-ಹುಟ್ಟಿದುದು-ಕಮಲ]; ೩೨. ಸಿದ್ಧಸ್ವರೂಪವ ಉತ್ಕೃಷ್ಟ ಆಗಮಜ್ಞಾನವನ್ನುಳ್ಳ, ಪರಶಿವ ಸಂಬಂಧವಾದ ತತ್ತ್ವಗಳಲ್ಲಿ ಪ್ರೀತಿಯಿಂದ ಕೂಡಿದ (ಕಟ್ಟಲ್ಪಟ್ಟ), (ಜ್ಞಾನ) ವೃದ್ಧರಾದ ಮುನಿಜನರುಗಳಿಂದ ಸೇವಿಸಿಕೊಳ್ಳಲ್ಪಡುವ, ಬೌದ್ಧವೇ ಮುಖ್ಯವಾದ ಧರ್ಮಗಳ ವಾದವನ್ನು ಗೆದ್ದವನಾದ, ಶ್ರದ್ಧಾರಹಿತರಾದ ಜನಗಳಿಗೆ ಸಿಕ್ಕದಿರುವ, ಸಂಯಮಗೊಳಿಸಿಕೊಂಡಿರುವ ಮನ ಬುದ್ಧಿಚಿತ್ತಾಹಂಕಾರಗಳೆಂಬ ಕರಣಗಳು ಮತ್ತು ಮೂಗು, ಕಣ್ಣು, ನಾಲಿಗೆ, ಚರ್ಮ, ಕಿವಿಗಳೆಂಬ ಪಂಚೇಂದ್ರಿಯಗಳನ್ನುಳ್ಳ, ದೇಹವ್ಯಾಪಾರವನ್ನು ನಿಲ್ಲಿಸಿದ (ಧರ್ಮವಿರುದ್ಧವಾದ ದೇಹವ್ಯಾಪಾರವನ್ನು ನಿಲ್ಲಿಸಿದ), ಶಿವಯೋಗವನ್ನು ಅಭಿವೃದ್ಧಿಗೊಳಿಸಿಕೊಂಡಿರುವ, ಜ್ಞಾನವೆಂಬ ಧನದಿಂದ ಕೂಡಿದ (ಅಥವಾ ಜ್ಞಾನವೇ ದ್ರವ್ಯವಾಗುಳ್ಳ), ಯಶಸ್ಸಿನ ಕಾಂತಿಯಿಂದ ಮುಚ್ಚಲ್ಪಟ್ಟ ದಶದಿಕ್ಕುಗಳುಳ್ಳ, ಆಪತ್ತುಗಳೆಂಬ ಪರ್ವತ

ಚಿದ್ಧನ ಯಶೋರುಚಿಪಿನದ್ಧದಶದಿಕ್ತಟ ವಿ-
ಪದ್ಧರಣಿಭೃತ್ಕುಲಿಶಭೃದ್ಧರಪಾದಾಬ್ಜಾ-
ನದ್ಧನಿಜಚಿತ್ತ ಜಗದುದ್ಧರಣಶೀಲ ಪೊರೆ-
ಯುದ್ಧಪರಭಂಜನ ವಿಶುದ್ಧ ಬಸವೇಶಾ ೩೨

ಸಾಧಕಜನಾಂತರವಿಶೋಧಕ ವಿಶುದ್ಧಮತಿ
ಬೋಧಕ ದುರೀಷಣನಿಷೇಧಕ ಚರೌಘಾ-
ರಾಧಕ ಮದಾಷ್ಟಕವಿರೋಧಕ ಮನೋಗತಿನಿ-
ರೋಧಕ ಸಚಿತ್ಸದವರೋಧಕ ಶುಭಾಂಗಾ
ವ್ಯಾಧಿಕಲುಷಪ್ರಕರಬಾಧಕ ವಿಶಾಲತರ-
ಮೇಧಕ ನಿಕಾಮನಿರುಪಾಧಿಕ ನಿರಸ್ತ-
ಕ್ರೋಧ ಕರುಣಾರಸಪಯೋಧಿ ಕವಿನುತ್ಯ ಪೊರೆ
ಸಾಧಿಕಗುಣಾನ್ವಿತ ಗಣಾಧಿಕ ವೃಷೇಂದ್ರಾ ೩೩

ಮಾನವಪತಿವ್ರಜಸಮಾನತಪದಾಬ್ಜ ಮುನಿ-
ಮಾನಸಮನೋಜ್ಞತರಮಾನಸಮರಾಳಾ-
ಮಾನಜನತಾಪ್ರಿಯ ವಿಮಾನಗಸುರಸ್ತುತ ಸ-
ಮಾನರಹಿತಾತ್ಮಮಹಿಮಾನಘಚರಿತ್ರಾ

ಗಳಿಗೆ ಕುಲಿಶವನ್ನು ಧರಿಸಿದ ದೇವೇಂದ್ರನೆನಿಸಿದ, ಶಿವನ ಪಾದಕಮಲದಲ್ಲಿ ತನ್ನ ಮನಸ್ಸನ್ನು ಸೇರಿಸಿರುವ (ತುಂಬಿಸಿರುವ), ಲೋಕವನ್ನು ಸಂರಕ್ಷಿಸುವುದೇ ಶೀಲವಾಗಿವುಳ್ಳ, ಕೊಬ್ಬಿದ ಶತ್ರುಗಳನ್ನು ನಾಶಮಾಡಿದ, ಪರಿಶುದ್ಧನಾದ ಬಸವೇಶ್ವರನೇ ರಕ್ಷಿಸು. ೩೩. (ಶಿವಯೋಗ) ಸಾಧನೆಯನ್ನು ಮಾಡುವ ಜನರುಗಳ ಅಂತರಂಗವನ್ನು ಪರಿಶುದ್ಧಗೊಳಿಸುವ (ವಿಶೇಷವಾಗಿ ಶೋಧಿಸುವ), ನಿರ್ಮಲ ಬುದ್ಧಿಯುಳ್ಳವರಿಗೆ ಬೋಧನೆಯನ್ನು (ತತ್ತ್ವ ಬೋಧನೆಯನ್ನು) ಮಾಡುವ, ದುಷ್ಟಗಳಾದ ದಾರೇಷಣ, ಪುತ್ರೇಷಣ, ವಿತ್ತೇಷಣಗಳನ್ನು ನಿಷೇಧಗೊಳಿಸಿದ (ತಡೆದು ನಿಲ್ಲಿಸಿದ), ಜಂಗಮ ಸಮುದಾಯವನ್ನು ಪೂಜಿಸುವ. ಧನದಮದ, ಅನ್ನಮದ, ತನುಜಮದಗಳೇ ಮೊದಲಾದ ಎಂಟು ಪ್ರಕಾರದ ಮದಗಳನ್ನು ತಡೆಗಟ್ಟಿದ, ಮನಸ್ಸಿನ ಚಂಚಲತೆಯನ್ನು ತಡೆದಿರುವ ಶಿವಜ್ಞಾನದಿಂದ ಕೂಡಿದವರಿಗೆ ಶ್ರೇಷ್ಠ ಅಂತಃಪುರದಂತೆ ಇರುವ, ಮಂಗಳಕರವಾದ ಶರೀರವುಳ್ಳ, ರೋಗ ಮತ್ತು ಪಾಪಗಳ ಸಮೂಹವನ್ನು ಪೀಡಿಸುವ (ಬಾಧೆಗೊಳಿಸಿದ) ವಿಶೇಷವಾದ ಬುದ್ಧಿಶಕ್ತಿಯನ್ನು ಹೊಂದಿದ, ಕಾಮದೂರನೂ, ಉಪಾಧಿರಹಿತನೂ ಆದ, ಕ್ರೋಧವನ್ನು ನಾಶಗೊಳಿಸಿದ. ಕಾರುಣ್ಯವೆಂಬ ರಸಕ್ಕೆ ಸಮುದ್ರದೋಪಾದಿಯಲ್ಲಿರುವ, ಕವಿಗಳಿಂದ ನುತಿಸಲ್ಪಡುವ, ವಿಶೇಷವಾದ ಸದ್ಗುಣಗಳಿಂದ ಕೂಡಿದವರೊಡನೆ, ಕೂಡಿಕೊಂಡಿರುವ ಶಿವಗಣಗಳಲ್ಲಿ ಅಧಿಕನೆನಿಸಿದ ಬಸವೇಶ್ವರನೇ ರಕ್ಷಿಸು. ೩೪. ರಾಜರುಗಳ ಸಮೂಹದಿಂದ ನಮಸ್ಕಾರ ಮಾಡಿಸಿಕೊಳ್ಳುವ ಪಾದಕಮಲಗಳುಳ್ಳ, ಋಷಿಗಳ ಮನಸ್ಸೆಂಬ ಅತಿ ಮನೋಹರವಾದ ಮಾನಸ ಸರೋವರದಲ್ಲಿರುವ ಹಂಸ ಪಕ್ಷಿಯೋ

ಮಾನವವಚೋನಿಗಮಮಾನಗದಿತಾರ್ಥವಹ-
ಮಾನ ತತಭಾಸ್ವದನುಮಾನನಯಸತ್ಸ-
ನ್ಮಾನಕರ ರಕ್ಷಿಸತಿಮಾನಫಣಿರಾಡ್ಭೃದುಪ-
ಮಾನ ಭವಮೋಘಪವಮಾನ ಬಸವೇಶಾ ೩೪

ದಾನವರಿಪುಪ್ರಿಯ ಸದಾನವಸುಭಕ್ತ್ಯಯುತ
ದಾನಗುಣಶೀಲ ವಿಮದಾನಘಚರಿತ್ರೇ-
ಶಾನಪದಭಾವನವಶಾನತವರಪ್ರದ ದ-
ಶಾನನಸಮರ್ಚಿತ ದಿಶಾನಟಯಶಸ್ಕಾ
ಭಾನುಪವನಾಪ್ತಹಿಮಭಾನುನಯನತ್ರಯನಿ-
ಭಾನುಗತಸತ್ಪಥ ಶುಭಾನುಭವಯುಕ್ತಾ
ವೀನರಥಸುಪ್ರಭ ನವೀನಗುಣ ದುಷ್ಟಫಣಿ
ವೀನ ಭೃತಶಾಂಭವಕವೀನ ಬಸವೇಶಾ ೩೫

ಪಾದಿಯಲ್ಲಿರುವ ಗರ್ವವಿಹೀನರಾದ ಜನಗಳ ಗುಂಪಿನಲ್ಲಿ ಪ್ರೀತಿಯುಳ್ಳವನಾದ, ವಿಮಾನದಲ್ಲಿ ಗಮನ ಮಾಡುವವ ದೇವತೆಗಳಿಂದ ಕೊಂಡಾಡಲ್ಪಡುವ, ಉಪಮಾರಹಿತ ವಾದ ತನ್ನ ಮಹಿಮೆಯುನ್ನುಳ್ಳ ಪಾಪರಹಿತವಾದ ಚರಿತ್ರೆಯನ್ನು ಹೊಂದಿರುವ, ಮನು ಚಕ್ರವರ್ತಿ ಸಂಬಂಧವಾದ ಮಾತುಗಳಾದ ಮನುಸ್ಮೃತಿ, ವೇದ ಇವುಗಳಲ್ಲಿ ಹೇಳ ಲ್ಪಟ್ಟ ಪ್ರಮಾಣ ವಾಕ್ಯಗಳ ತತ್ತ್ವಾರ್ಥವನ್ನು ಹೊಂದಿರುವ (ಧರಿಸಿರುವ) ಮಾನವಂತ (ಚಿತ್ತೈನ್ನತ್ಯವುಳ್ಳವ)ನಾದ ವಿಸ್ತಾರವಾಗಿ ಪ್ರಕಾಶಿಸುವವನಾದ, ಪರಮಾತ್ಮ ವಿಷಯಕ ವಾದ ಊಹೆ, ನೀತಿ ಇವುಗಳನ್ನುಳ್ಳ, ಸತ್ಪುರುಷರಿಗೆ ಮರ್ಯಾದೆಯನ್ನು ತೋರಿಸುವ. ಉಪಮಾತೀತನಾದ ಆದಿಶೇಷನನ್ನು ಧರಿಸಿರುವ ಈಶ್ವರನ ಸಾಮ್ಯವನ್ನುಳ್ಳ, ಪಾಪ ವೆಂಬ ಮೋಡಕ್ಕೆ ವಾಯುವಾದ ಬಸವೇಶ್ವರನೇ (ನನ್ನನ್ನು) ರಕ್ಷಿಸು. ೩೪, ರಾಕ್ಷಸ ವೈರಿಯಾದ ವಿಷ್ಣುವಿನ ಆಪ್ತನಾದ, ನಿತ್ಯನೂತನವಾದ ಸದ್ಭಕ್ತಿಯಿಂದ ಕೂಡಿದ, ದಾನ ಮಾಡುವ ಗುಣವೇ ಸ್ವಭಾವವಾಗಿ ಉಳ್ಳ, ಮದದೂರನಾದ (ಗರ್ವಹೀನನಾದ), ಪಾಪ ರಹಿತವಾದ ಚರಿತ್ರೆಯನ್ನುಳ್ಳ, ಪರಮೇಶ್ವರನ ಪಾದಧ್ಯಾನವುಳ್ಳವರ ಅಧೀನನಾದ, ನಮಸ್ಕಾರಮಾಡಿದವರಿಗೆ ಇಷ್ಟಾರ್ಥವನ್ನುಕೊಡುವ, ರಾವಣನಿಂದ ಪೂಜೆಗೊಂಡ, ದಿಕ್ಕುಗಳಲ್ಲೆಲ್ಲ ಕುಣಿಯುತ್ತಿರುವ ಕೀರ್ತಿಯನ್ನುಳ್ಳ, ಸೂರ್ಯ, ಚಂದ್ರ, ಅಗ್ನಿಗಳೇ ಮೂರು ಕಣ್ಣಾಗಿ ಉಳ್ಳ ಶಿವನ ಸದೃಶನಾದ, ಶ್ರೇಷ್ಠಮಾರ್ಗವನ್ನು ಅನುಸರಿಸಿ ನಡೆ ಯುತ್ತಿರುವ (ಸನ್ಮಾರ್ಗದಲ್ಲಿ ನಡೆಯುವ), ಮಂಗಳ ಕರವಾದ ಶಿವನ ಅನುಭವದಿಂದ ಕೂಡಿದ. ವಿಷ್ಣುವಿನಂತೆ ಸಮೀಚೀನವಾದ ಪ್ರಭಾವವುಳ್ಳ, ನೂತನವಾದ (ಅಪೂರ್ವ ವಾದ) ಸದ್ಗುಣಗಳುಳ್ಳ. ದುಷ್ಟರೆಂಬ ಸರ್ಪಗಳಿಗೆ ಗರುಡಸ್ವರೂಪನಾದ, ಶಿವ ಸಂಬಂಧ ವಾದ ಕವಿಗಳನ್ನು ಪೋಷಿಸುವ ಬಸವೇಶ್ವರನೇ, (ನನ್ನನ್ನು ರಕ್ಷಿಸು) [ವಿ + ಇನ =

ಕಿನ್ನರಗಣಾಧಿಪತಿ-ಚನ್ನವೃಷ-ಮಾಚವಿಭು-
ಕನ್ನದಗಣೇಶಮುಖಸನ್ನುತ ಶಿವೈಕ್ಯೋ-
ತ್ಪನ್ನಸುಖಭಾವ ಭವಪನ್ನಗಖಗಾಧಿಪತಿ
ಪನ್ನತ ಪಯೋಜಪರಿಪನ್ನವದಿನೇಶಾ
ಪ್ರೋನ್ನತಗುಣಾಕರ ವಿಪನ್ನಿವಹಸಂಹರ ಜ-
ಗನ್ನಿಕರರಕ್ಷಕ ಲಸನ್ನಿಗಮಸಾರಾ-
ಪನ್ನಮತಿ ನುತ್ಯ ಪೊರೆಯೆನ್ನನೆಲೆ ದೇವ ಕೃಪೆ-
ಯಿನ್ನಲವನಿತ್ತು ಚಿದಭಿನ್ನ ಬಸವೇಶಾ ೩೬

ಮಾಪಕೃತರೋಪಗಿರಿಚಾಪಪುರಲೋಪರಜ-
ನೀಪಸುಕಲಾಪಮತದೀಪ ನಿಹತಾನ್ಯಾ-
ಕ್ಷೇಪ ಹೃತಪಾಪ-ಜಿತತಾಪ ಗತಲೇಪ ತತ
ಚಾಪಲಮದೋಪಯುತಗೋಪರಿಪುನಾಶಾ

ವೀನ, ಪಕ್ಷಿಗಳಿಗೆಲ್ಲ ಒಡೆಯು–ಗರುಡ; ಶಂಭು ಸಂಬಂಧವಾದುದು–ಶಾಂಭವ] ೩೬. ಕಿನ್ನರ ಬೊಮ್ಮಯ್ಯನೆಂಬ ಶಿವಗಣ ಶ್ರೇಷ್ಠ, ಚೆನ್ನಬಸವೇಶ್ವರ, ಮಡಿವಾಳ ಮಾಚಿ ದೇವ ಪ್ರಭು, ಕನ್ನದ ಮಾರಿತಂದೆಯೆಂಬ ಗಣೇಶ್ವರರೇ ಮೊದಲಾದವರಿಂದ ಹೊಗ ಳಿಸಿಕೊಳ್ಳಲ್ಪಡುವ, ಶಿವನಿಂದ ಉತ್ಪನ್ನವಾದ (ಲಿಂಗಾಂಗ ಸಾಮರಸ್ಯದಿಂದುತ್ಪನ್ನವಾದ) ಸುಖವನ್ನುಳ್ಳ, ಮನ್ಮಥನೆಂಬ ಸರ್ಪಕ್ಕೆ ಗರುಡನಂತಿರುವ, (ತನ್ನ) ಪಾದಗಳಿಗೆ ನಮ ಸ್ಕರಿಸಿದ ಜನರೆಂಬ ಕಮಲಗಳ ಸಮೂಹ (ಸಭೆ)ಕ್ಕೆ ಉದಯ ಸೂರ್ಯನಂತಿರುವ, ಅತ್ಯು ತ್ಕೃಷ್ಟವಾದ ಗುಣಗಳಿಗೆ ಆಶ್ರಯನಾದ, ಅಪತ್ತು (ವಿಪತ್ತು)ಗಳ ಸಮೂಹವನ್ನು ನಾಶ ಪಡಿಸುವ, ಜಗತ್ತುಗಳ ಸಮೂಹವನ್ನು ರಕ್ಷಿಸುವವನಾದ, ಪ್ರಕಾಶಿಸುವ ವೇದಗಳ ಸಾರ ವನ್ನು ಹೊಂದಿರುವ ಬುದ್ಧಿಯುಳ್ಳ ವೇದಗಳ ಸಾರನಾದ ಪರಮೇಶ್ವರನ ಸಮೀಪವರ್ತಿ ಯಾದ ಬುದ್ಧಿಯುನ್ನುಳ್ಳ, ಶಾಶ್ವತನಾದ, ಜ್ಞಾನದಿಂದ ಭಿನ್ನನಲ್ಲದ (ಜ್ಞಾನಸ್ವರೂ ಪನೇ ಆದ) ಸ್ವಾಮಿಯೇ, ಹೇ ಬಸವೇಶ್ವರನೇ, ನನಗೆ ಕೃಪೆಯಿಂದ ಸಂತೋಷವಿತ್ತು ರಕ್ಷಿಸು. ೩೭. ವಿಷ್ಣುವನ್ನು ಬಾಣವನ್ನಾಗಿ ಮಾಡಿಕೊಂಡು, ಮೇರುಪರ್ವತವನ್ನೇ ಬಿಲ್ಲನ್ನಾಗಿ ಮಾಡಿಕೊಂಡು, ತ್ರಿಪುರಗಳನ್ನು ನಾಶಮಾಡಿದ, ಚಂದ್ರನನ್ನೇ ಒಳ್ಳೆಯ ಆಭರಣವಾಗಿ ಉಳ್ಳ ಶಿವನ ಸಂಬಂಧದ ಮತವನ್ನು ಪ್ರಕಾಶಗೊಳಿಸುವ, ಅನ್ಯ (ಶಿವೇತರ) ಗಳಾದ ಅನೇಕ ಮತಗಳನ್ನು ನಾಶಗೊಳಿಸಿದ, ಪಾಪಗಳನ್ನು ನಾಶ ಮಾಡಿದ, ಆಧ್ಯಾತ್ಮಿಕ, ಆಧಿ ಭೌತಿಕ, ಆಧಿ ದೈವಿಕಗಳೆಂಬ ತಾಪತ್ರಯಗಳನ್ನು ಜಯಿಸಿದ, ಮಾಯಾಲೇಪನವನ್ನು ಹೋಗಲಾಡಿಸಿದ, ವಿಶೇಷವಾದ ಮನಶ್ಚಾಂಚಲ್ಯ ದಿಂದಲೂ ಮದದಿಂದಲೂ ಕೂಡಿದ ದೇವೇಂದ್ರ ವೈರಿಗಳಾದ ರಾಕ್ಷಸರನ್ನು ನಾಶಗೊಳಿ ಸಿದ, ರಾಜರುಗಳ ಸಮೂಹದಿಂದ ನಮಸ್ಕಾರಗೊಳಿಸಿಕೊಳ್ಳಲ್ಪಟ್ಟ, ತಪಸ್ವಿಗಳಾದವರ ಜನನ ಮರಣಾತ್ಮಕ ಸಂಸಾರವನ್ನು ನಾಶಗೊಳಿಸುವ, ಸಮೀಚೀನವಾದ ಮಾತುಗಳ

ಭೂಪನಿವಹೋಪನತ ತಾಪಸಭವಾಪಹ ಸು-
ಲಾಪ ಸುಖಿನೋಪಕರಣೋಪಹಿತ ವಿಶ್ವ-
ವ್ಯಾಪಕ ದಯಾಪರ ಸುಧೀಪದದುರಾಪ ಜಯ
ಕೋಪಹೃತಭಾಪಸುತರೂಪ ಬಸವೇಶಾ ೩೭

ಕ್ಷಿಪ್ರಶಮಿತಾಮಯ ಭವಪ್ರಹರ ಸರ್ವಭುವ-
ನಪ್ರಥಿತವೈಭವ ಸುರಪ್ರಭುಮುಕುಂದಾ
ಜಪ್ರಮುಖದಾನವರಿಪುಪ್ರಕರಮದ್ಯಚರ-
ಣ ಪ್ರಕೃತಿವರ್ಜಿತ ಗುಣಪ್ರಯುತಚರ್ಯಾ
ಸುಪ್ರಮಥನಾಯಕ ಚರಪ್ರಚಯಭಕ್ತಿವನಿ-
ತಾಪ್ರಣಯಶೀಲ ಜಿತವಿಪ್ರಕೃತವಾದಾ-
ಪ್ತಪ್ರಣವಮಂತ್ರಮನನಪ್ರಯುತವರ್ಯ ಜಯ
ಸುಪ್ರಮದ ಶೈವಮತವಪ್ರ ಬಸವೇಶಾ ೩೮

ನ್ನುಳ್ಳ, ಸತ್ಪುರುಷರಿಗೆ ಉಪಕಾರ ಮಾಡುವುದರಿಂದ (ಅವರಿಗೆ) ಆಪ್ತನಾದ, ವಿಶ್ವವನ್ನೆಲ್ಲ ವ್ಯಾಪಿಸಿದ, ದಯೆಯಲ್ಲಿ ಆಸಕ್ತನಾದ, ವಿದ್ವಾಂಸರಾದವರ ಪದ (ಮಾತು)ಗಳಿಗೆ ಸಿಲುಕದೆಯಿರುವ, ಕೋಪದಿಂದ ಯಮನನ್ನು ನಾಶಗೊಳಿಸಿದ, ಪರಶಿವನ ಸ್ವರೂಪನಾದ ಬಸವೇಶ್ವರನೇ, ಜಯ [ಮಾಪ = ಲಕ್ಷ್ಮೀಪತಿಯಾದ ವಿಷ್ಣು, ರೋಪ = ಬಾಣ ಗೋಪ-ಸ್ವರ್ಗವನ್ನು ಪಾಲಿಸುವ ದೇವೇಂದ್ರ, ರಿಪು-ವೈರಿ = ರಾಕ್ಷಸರು ಎಂದು ಅರ್ಥ; ಭಾಪ-ಕಾಂತಿಗೆ ಅಧಿಪತಿ-ಸೂರ್ಯ, ಸುತ-ಮಗ = ಯಮ ; ಸುಧೀ-ವಿದ್ವಾಂಸ, ಪದ = ಮಾತು ಅಥವಾ ಪದ್ಯ, ದುರಾಪ-ಸಿಕ್ಕದಿರುವ = ವಿದ್ವಾಂಸ, ಹೊಗಳಿಕೆಗೆ ಸಿಲುಕದ]. ೩೮. (ಸಂಸಾರವೆಂಬ) ರೋಗವನ್ನು ತ್ವರಿತವಾಗಿ ಶಮನ (ನಾಶ)ಗೊಳಿಸಿದವನೂ, ಹುಟ್ಟು ಸಾವುಗಳನ್ನು ಸಂಹರಿಸಿದವನೂ, ಸಮಸ್ತಲೋಕದಲ್ಲಿ ಪ್ರಸಿದ್ಧವಾದ (ಭಕ್ತಿ) ವೈಭವವನ್ನುಳ್ಳವನೂ, ದೇವೇಂದ್ರ, ವಿಷ್ಣು, ಬ್ರಹ್ಮನೇ ಮುಖ್ಯರಾದ ರಾಕ್ಷಸ ಸಮೂಹದ ವೈರಿಗಳಾದವರಿಂದ ನಮಸ್ಕಾರಗೊಳಿಸಿಕೊಂಡ ಪಾದವುಳ್ಳವನೂ, ಪ್ರಕೃತಿಗುಣಗಳಿಂದ ದೂರನಾದವನೂ, ಸದ್ಗುಣ ಸಮೂಹದಿಂದ ಕೂಡಿದ ನಡೆವಳಿಕೆಯುಳ್ಳವನೂ, ಶ್ರೇಷ್ಠರಾದ ಪ್ರಮಥಗಣಗಳ ನಾಯಕನೂ, ಜಂಗಮ ಸಮೂಹದಲ್ಲಿಟ್ಟಿರುವ ಭಕ್ತಿಯೆಂಬ ವನಿತೆಯ ಪ್ರಣಯವೇ ಶೀಲವಾಗುಳ್ಳವನೂ, ಬ್ರಾಹ್ಮಣರಿಂದ ಮಾಡಲ್ಪಡುವ ವಾದವನ್ನು ಗೆದ್ದವನೂ, ಇಷ್ಟವಾದ ಓಂಕಾರ ಪ್ರಣವ ಮಂತ್ರವನ್ನು ಮನನ ಮಾಡುವ ಭಕ್ತಿಯಿಂದ (ಪರಿಶುದ್ಧಿಯಿಂದ) ಕೂಡಿದವನೂ, ಸಮೀಚೀನವಾದ ಸಂತೋಷದಿಂದ ಶಿವಸಂಬಂಧವಾದ ಮತದಲ್ಲಿ ಆಟವಾಡುವವನೂ (ಕ್ರೀಡಿಸು

ಕಂಬುಕಳಹಂಸಶರದಂಬುಧರಹಾಸವಿಧು-
ದಂಬವಿಶದಚ್ಛವಿವಿಡಂಬಕ ಮಹಸ್ಕಾ-
ಶಾಂಬರ ಜಗತ್ತ್ರಯಕುಟುಂಬ ಸುರಭೂಧರನಿ-
ತಂಬಚರಮಾಧವಕಳಂಬಶಿವಯುಕ್ತಾ
ಸಾಂಬಶರಣಾಗತಕದಂಬಪರಿಪಾಲನವಿ-
ಳಂಬರಹಿತಾಶ್ವತರಕಂಬಲಸುಕರ್ಣಾ
ಲಂಬನ ಗಣೇಂದ್ರನಿಕುರುಂಬಹಿತ ರಕ್ಷಿಸಘ-
ಡಂಬರಮಹಾಕುಧರಶಂಬ ಬಸವೇಶಾ ೩೯

ಸ್ವರ್ಭವವರಾಂಬುರುಹಗರ್ಭಮುಖವಿಶ್ರುತ ಹ-
ವಿರ್ಭುಗಿನವಂದಿತ ಯಜುರ್ಭವಸುಮಂತ್ರಾಂ-
ತರ್ಭರಿತ ಚಂದ್ರಸಿತವಾರ್ಭೃದಮಳಚ್ಛವಿವ-
ಪುರ್ಭಸಿತಭಾಸುರ ಚತುರ್ಭುಜವಿನುತ್ಯಾ

ವವನೂ) ಆದ ಬಸವೇಶ್ವರನೇ ಜಯ. ೩೯. ಶಂಖ, ಕಳಹಂಸ, ಶರತ್ಕಾಲದಮೋಡ' ಮುತ್ತಿನಹಾರ, ಚಂದ್ರಮಂಡಲ-ಇವುಗಳ ನಿರ್ಮಲಕಾಂತಿಯನ್ನು (ಕೂಡ) ತಿರಸ್ಕಾರ ಮಾಡುವ ಯಶಸ್ಸುಳ್ಳವನೂ, ದಿಕ್ಕುಗಳೇ ಬಟ್ಟೆಯಾಗಿಉಳ್ಳ, ಮೂರುಲೋಕಗಳೇ ಕುಟುಂಬವಾಗುಳ್ಳ, ದೇವತೆಗಳ ಪರ್ವತವಾದ ಮೇರುವಿನ ತಪ್ಪಲು ಪ್ರದೇಶದಲ್ಲಿ ಸಂಚರಿಸುವ, ವಿಷ್ಣುವನ್ನೇ ಬಾಣವಾಗಿ ಉಳ್ಳ ಪರಮೇಶ್ವರನಿಂದ ಕೂಡಿದ. ಈಶ್ವರನನ್ನು ಸಂರಕ್ಷಕನನ್ನಾಗಿ ಹೊಂದಿರುವ ಭಕ್ತರ ಸಮೂಹವನ್ನು ಸಂರಕ್ಷಣೆಮಾಡುವುದರಲ್ಲಿ ವಿಳಂಬವಿಲ್ಲದಿರುವ (ಅಥವಾ ಜಾಗರೂಕನಾದ), ಕಂಬಲಾಶ್ವತರೆಂಬ ಗಂಧರ್ವರೇ ಸಮೀಚೀನವಾದ ಕರ್ಣಗಳ ಆಶ್ರಯದಲ್ಲಿ ಉಳ್ಳಂಥ ಪರಮೇಶ್ವರನ ಗಣಶ್ರೇಷ್ಠರ ಸಮೂಹಕ್ಕೆ ಹಿತವನ್ನುಂಟುಮಾಡುವ (ಆಪ್ತನಾದ), ಅಧಿಕವಾದ ಪಾಪವೆಂಬ ದೊಡ್ಡಪರ್ವತಕ್ಕೆ ವಜ್ರಾಯುಧನಾದ ಬಸವೇಶ್ವರನೇ (ನನ್ನನ್ನು) ರಕ್ಷಿಸು. ೪೦. ಸ್ವರ್ಗದಲ್ಲಿ ಹುಟ್ಟಿದವರಲ್ಲಿ ಶ್ರೇಷ್ಠನೆನಿಸಿದ ಬ್ರಹ್ಮ, ವಿಷ್ಣು ಇವರುಗಳೇ ಮೊದಲಾದ ಪ್ರಸಿದ್ಧ ದೇವಶ್ರೇಷ್ಠರಿಂದ ನಮಸ್ಕಾರಗೊಳಿಸುವ, ಯಜುರ್ವೇದದಲ್ಲಿ ಹುಟ್ಟಿದ (ಯಜುರ್ವೇದಾಂತರ್ಗತವಾದ) ಶ್ರೇಷ್ಠ ಶಿವಮಂತ್ರದೊಳಗೆ ತುಂಬಿಕೊಂಡಿರುವ, ಚಂದ್ರ, ಶುಭ್ರ, ಮೋಡ ಇವುಗಳೋಪಾದಿಯಲ್ಲಿ ನಿರ್ಮಲಕಾಂತಿಯಿಂದ ಕೂಡಿದ ಶರೀರವುಳ್ಳ, ಭಸ್ಮದಿಂದ ಪ್ರಕಾಶಿಸುವ, ವಿಷ್ಣುವಿನಿಂದ ಹೊಗಳಿಸಿ ಕೊಳ್ಳಲ್ಪಡುವ, ಪೋಷಿಸಲಶಕ್ಯವಾದ ಲೋಕಗಳನ್ನು ಸುರಕ್ಷಿಸುವುದರಲ್ಲಿ ಜಾಗರೂಕನಾದ, ರಾಕ್ಷಸರುಗಳನ್ನು ನಾಶಗೊಳಿಸಿದ, ಪುನಃ ಹುಟ್ಟುವಿಕೆಯನ್ನು ನಾಶಗೊಳಿಸುವ (ಜನನನಾಶಕನಾದ ಅಂದರೆ ಮುಕ್ತಿಯನ್ನುಂಟುಮಾಡುವ) ಮೇರು ಪರ್ವತವೆಂಬ ಧನುಸ್ಸನ್ನು ಧರಿಸಿದ,

ದುರ್ಭರಜಗದ್ಭರಣನಿರ್ಭರ ಹೃತಾಸುರ ಪು-
ನರ್ಭವಹರಾದ್ರಿಪಥನುರ್ಭೃದಖಿಳೇಶಾ-
ವಿರ್ಭವದನೂನಗುಣ ಗೀರ್ಭರಣವಕ್ತ್ರ ಮೃಡ-
ಪೂರ್ಭವನ ರಕ್ಷಿಸಭವಾರ್ಭಕ ವೃಷೇಂದ್ರಾ ೪೦

ತಾಮರಸಲೋಚನಪಿತಾಮಹನಿಷೇವ್ಯ ವಿತ-
ತಾಮಳಚರಿತ್ರ ಸತತಾಮಯವಿದೂರಾ-
ತಾಮಸಜನಪ್ರಿಯ ನತಾಮರಮಹೀಜ ಮೃದು-
ತಾಮಧುರಭಾಷಜನತಾಮತವಿನೋದಾ
ಸಾಮಜಪಸಂಯುತರಸಾಮರಪರಿಸ್ತುತ ಸ-
ಸಾಮಹಿತಕಾರ್ಯ ಗುಹಸಾಮಜಮುಖಾರ್ಚ್ಯ-
ಕಾಮಶರಣಪ್ರಿಯ ನಿಕಾಮಶುಭಶೀಲ ಜಯ
ಕಾಮರಿಪುರೂಪ ಜಿತಕಾಮ ಬಸವೇಶಾ ೪೧

ಸೋಮಗುರುವರ್ಯವರಭೀಮಕವಿರಾಜಗುಣ
ಧಾಮಘನಶಂಕರಸುನಾಮಕೃತಕಾವ್ಯ-
ಸ್ತೋಮನುತವೈಭವ ನಿರಾಮಯ ನಿರರ್ಗಳಮ-
ಹಾಮಹಿಮಸಾರ ವಿಬುಧಾಮರಮಹೀಜಾ

ಸಕಲಕ್ಕೂ ಒಡೆಯನಾದ, ಅಭಿವೃದ್ಧಿಗೊಳ್ಳುತ್ತಿರುವ ಅಧಿಕವಾದ ಸದ್ಗುಣಗಳುಳ್ಳ, ಸರಸ್ವತಿಯೇ ಆಭರಣವಾಗುಳ್ಳ ಮುಖದಿಂದ ಕೂಡಿದ, ಶಿವನ ನಗರವಾದ ಕೈಲಾಸವೇ ಮನೆಯಾಗಿ ಉಳ್ಳ, ಶಿವನ ಪುತ್ರನಾದ ಬಸವೇಶ್ವರನೇ, (ನನ್ನನ್ನು) ರಕ್ಷಿಸು ೪೧. ಕಮಲನೇತ್ರನಾದ ವಿಷ್ಣು ಮತ್ತು ಬ್ರಹ್ಮರುಗಳಿಂದ ಸೇವಿಸಲ್ಪಡುವ, ವಿಸ್ತಾರವಾದ (ವಿಶೇಷವಾದ) ಪರಿಶುದ್ಧ ಚರಿತ್ರೆಯುನ್ನುಳ್ಳ, ಸದಾರೋಗ (ಜನನಮರಣಾತ್ಮಕವಾದ ರೋಗ) ದಿಂದ ದೂರನಾದ ತಮೋಗುಣರಹಿತರಾದ ಜನರಲ್ಲಿ ಪ್ರೀತಿಯುಳ್ಳ ನಮಸ್ಕಾರಮಾಡಿದ ಜನರಿಗೆ ಕಲ್ಪವೃಕ್ಷ ಪ್ರಾಯನಾದ, ಮೃದುತ್ವದಿಂದಲೂ, ಮಧುರವಾಗಿಯೂ ಮಾತನಾಡುವ ಜನರುಗಳ ತತ್ತ್ವ ವಿಚಾರ (ಮತ)ದಲ್ಲಿ ವಿನೋದಗೊಳ್ಳುವ, ಸಾಮವೇದ ಮಂತ್ರಜಪದ ರಾಗರಸದಲ್ಲಿ ಮಗ್ನರಾದ ದೇವತೆಗಳಿಂದ ಹೊಗಳಿಸಿಕೊಳ್ಳಲ್ಪಡುವ, ಸಾಮೋಪಾಯದಿಂದ (ಎಲ್ಲರಿಗೂ) ಹಿತವಾಗುವ ಕಾರ್ಯಗೌರವವುಳ್ಳ, (ಶಾಂತಿಯಿಂದ ಕೂಡಿದ ಜನರಿಗೆ ಆಪ್ತವಾದ ಕಾರ್ಯಗಳನ್ನುಳ್ಳ) ಷಣ್ಮುಖ, ಗಣಪತಿ (ಸಾಮಜಮುಖ)ಯರಿಂದ ಪೂಜಿಸಲ್ಪಡುವ, ನಿಷ್ಕಾಮರಾದ ಶರಣಜನರಿಗೆ ಪ್ರಾಯನೆನಿಸಿದ, ಅತ್ಯಂತ ಶುಭಕರವಾದ ಶೀಲವುಳ್ಳ, ಪರಮೇಶ್ವರ ರೂಪನಾದ, ಮನ್ಮಥ ಸಂಬಂಧದ ವಿಕಾರವನ್ನು ಜಯಿಸಿದ, ಬಸವೇಶ್ವರನೇ ಜಯ. ೪೨. ಗರುಶ್ರೇಷ್ಠರಾದ ಪಾಲ್ಕುರಿಕೆ ಸೋಮನಾಥರು, ಶ್ರೇಷ್ಠರಾದ ಭೀಮಕವಿರಾಜರು, ಸದ್ಗುಣಗಳಿಗೆ ಆಶ್ರಯರಾದ ಶ್ರೇಷ್ಠ ಕಂಚಿಯ ಶಂಕರಾರಾಧ್ಯರೆಂಬ ಸಮೀಚೀನ ಹೆಸರಿನವರು ಬರೆದು (ಮಾಡಿದ) ಕಾವ್ಯಗಳ ಸಮೂಹದಿಂದ (ಪದ್ಯಗಳಸಮೂಹದಿಂದ)

ವ್ಯೋಮಕಚಸನ್ನಿಭ ಕೃಪಾಮಹಿತಚಿತ್ತ ವಿಭು
ವೇಮನಲಸತ್ಕದಿರರೇಮಹಿತಚರ್ಯೋ-
ದ್ದಾಮ ಹೃತಬಿಜ್ಜಳಮನೋಮದಸುವಾಕ್ಯ ಪೊರೆ
ಕಾಮದ ಪುರಾತನಲಲಾಮ ಬಸವೇಶಾ ೪೨

ಧೌಮ್ಯಶುಕಸೇವಿತ ನಿಯಮ್ಯಸಚರಾಚರ ಸು-
ಸೌಮ್ಯಗುಣಹಾರ ಮೃಡಸಾಮ್ಯಯುಗಮರ್ತ್ಯಾ-
ನಮ್ಯಪದ ಸಂಸರಣತಾಮ್ಯದಭಿರಕ್ಷ ಮುನಿ-
ಗಮ್ಯ ಜಿತದುಷ್ಟಮತಗಾಮ್ಯಖಿಲಧೀರ-
ಸ್ವಾಮ್ಯಧಿಕಭಕ್ತಿನಿಜಕಾಮ್ಯ ತಪನೇಂದುಗುರು
ಸೌಮ್ಯನುತಸಾರಗುಣ ಭೂಮ್ಯಧಿಪನುತ್ಯ
ಭ್ರಾಮ್ಯದಸುರೋಧಕರ ಯಮ್ಯಧಿಕಚಿಂತ್ಯ ಜಯ
ದಮ್ಯನಘದಿವ್ಯತನುರಮ್ಯ ಬಸವೇಶಾ ೪೩

ಹೊಗಳಿಸಿಕೊಂಡ ವೈಭವವುಳ್ಳ, ಭವವೆಂಬ ರೋಗದಿಂದ ದೂರನಾದ, ತಡೆಯಿಲ್ಲದ ಅಧಿಕ ಮಹಿಮೆಯನ್ನುಳ್ಳ, ಶ್ರೇಷ್ಠರಾದ ವಿದ್ವಾಂಸರಿಗೆ ಕಲ್ಪವೃಕ್ಷ ಪ್ರಾಯನಾದ, ಆಕಾಶವೇ ಕೇಶವಾಗಿ ಉಳ್ಳ (ಜಡೆಯಾಗಿ ಉಳ್ಳ) ಶಿವನಿಂದ ಕೂಡಿದ, ಕೃಪಾವಿಶೇಷ ದಿಂದ ಪೂಜ್ಯವಾದ ಮನಸ್ಸುಳ್ಳ ಸ್ವಾಮಿಯೆನಿಸಿದ, ವೇಮನಾರ್ಯ, ಶೋಭಿಸುವ ಕದಿರ ರೇಮಾರ್ಯ ಇವರುಗಳಿಗೆ ಹಿತ (ಆಪ್ತ)ವುಳ್ಳವನಾದ, ಉತ್ಕೃಷ್ಟ ನಡೆವಳಿಕೆಯನ್ನುಳ್ಳ, ಬಿಜ್ಜಳ ಭೂಪಾಲನ ಮನಸ್ಸಿನ ಮದವನ್ನು ನಾಶಪಡಿಸಿದ, ಒಳ್ಳೆಯ ಮಾತಿನಿಂದ ಕೂಡಿದ, ಇಷ್ಟಾರ್ಥವನ್ನು ಕೊಡುವ, ಅರುವತ್ತುಮೂವರು ಪುರಾತನರು (ನೂತನ ಪುರಾತನರು)ಗಳಿಗೆ ಭೂಷಣಪ್ರಾಯನಾದ ಬಸವೇಶ್ವರನೇ ನನ್ನನ್ನು ರಕ್ಷಿಸು. ೪೩. ಧೌಮ್ಯಮಹರ್ಷಿ, ಶುಕಮಹರ್ಷಿಗಳಿಂದ ಸೇವಿಸಲ್ಪಟ್ಟ, ಸಚರಾಚರ ಜಗತ್ತಿಗೆಲ್ಲ (ಸ್ಥಾವರಜಂಗಮಾತ್ಮಕ ಜಗತ್ತಿಗೆ) ಆಜ್ಞೆಮಾಡುವುದಕ್ಕೆ ಯೋಗ್ಯನಾದ, ಒಳ್ಳೆಯ ಕಾಂತಿಯುಕ್ತ ಗುಣಗಳೇ ಕಂಠಹಾರ ವಾಗುಳ್ಳ, ಪರಮೇಶ್ವರನ ಸಾದೃಶ್ಯವನ್ನು ಹೊಂದಿದ (ಮೃಡನ ಸಾಮ್ಯಕ್ಕೆ ಯೋಗ್ಯನಾದ), ದೇವತೆಗಳಿಂದ ನಮಸ್ಕರಿಸಿ ಕೊಳ್ಳುವುದಕ್ಕೆ ಯೋಗ್ಯವಾದ ಪಾದಗಳುಳ್ಳ ಸಂಸಾರ ತಾಪದಿಂದ ಬತ್ತಿ ಹೋಗು ತ್ತಿರುವವರನ್ನು ಸಂರಕ್ಷಣೆಮಾಡುವ, ಮುನಿಗಳಿಂದ ಪಡೆಯುವುದಕ್ಕೆ ಯೋಗ್ಯ ನಾದ, ದುರ್ಮತಗಳಿಂದ ಕೂಡಿದ ಜನರುಗಳನ್ನು ಜಯಿಸಿದ ಸಮಸ್ತಧೀರರಿಗೂ, ಸ್ವಾಮಿಯೆನಿಸಿದ (ಅವಿಕಾರಿಗಳಾದ ಸಮಸ್ತಜನರಿಗೂ ಸ್ವಾಮಿಯೆನಿಸಿದ), ಅಧಿಕ ವಾದ ಶಿವಭಕ್ತಿಯೇ ತನ್ನ ಬಯಕೆಯಾಗುಳ್ಳ, ಸೂರ್ಯ, ಚಂದ್ರ, ಬೃಹಸ್ಪತಿ ಬುಧಾದಿಗಳಿಂದ ಹೊಗಳಿಸಿಕೊಳ್ಳುವ ಶ್ರೇಷ್ಠಗುಣಗಳಿಂದ ಕೂಡಿದ, ರಾಜರುಗಳಿಂದ ಹೊಗಳಿಸಿಕೊಳ್ಳುವುದಕ್ಕೆ ಯೋಗ್ಯನಾದ, ಭ್ರಮಣಗೊಳ್ಳುತ್ತಿರುವ (ಸುತ್ತುತ್ತಿರುವ) ಪ್ರಾಣವಾಯುವನ್ನು ತಡೆಗಟ್ಟುವ, ಯಮಾದಿಯೋಗ ಸಂಪನ್ನರಲ್ಲಿ ಶ್ರೇಷ್ಠರೆನಿಸಿ ಕೊಂಡವರಿಂದ ಧ್ಯಾನಿಸಲ್ಪಡುವುದಕ್ಕೆ ಯೋಗ್ಯನಾದ, ಅಂತರಿಂದ್ರಿಯ (ಮನಬುದ್ಧಿ ಚಿತ್ತಾಹಂಕಾರಾದಿ ಅಂತರಿಂದ್ರಿಯ) ನಿಗ್ರಹವುಳ್ಳ, ಪಾಪರಹಿತವೂ, ಪವಿತ್ರವೂ ಆದ

[1]ಕಾಯಗುಣವರ್ಜಿತ[1] ವಿಮಾಯ ಗಣಸಂಚಯಸ
ಹಾಯ ನಿಗಮಾಗಮನಿಕಾಯಸರಳೋಕ್ತ
ನ್ಯಾಯಜಿತವಾದಿಸಮುದಾಯ ಶಿವಭಕ್ತಸಮ
ವಾಯಜಯದಾನಸದುಪಾಯ ಮಹನೀಯ
ಧ್ಯೇಯ ಖಚರೇಂದ್ರಚಯಗೇಯ ಚರಶಂಕರವಿ
ಧೇಯ ಬುಧನುತ್ಯ ರುಚಿರಾಯ ಪರವೃಂದಾ-
ಜೇಯ ಪೊರೆ ಪೂರ್ಣಗುಣಜಾಯ ಸಕಲೇಷ್ಟಫಲ-
ದಾಯಕ ಗಿರೀಶಗಣನಾಯಕ ವೃಷೇಂದ್ರಾ ೪೪

ಶೌರ್ಯಜಸದಾಕೃತಸಪರ್ಯ ಭುವನಪ್ರಕರ-
ಧುರ್ಯ ಗಣನಾಥಹಿತಕಾರ್ಯ ಸುಜನಾಂಭೋ-
ಜಾರ್ಯಮ ಸುಕೀರ್ತಿನುತಭಾರ್ಯ ಮುನಿಹೃನ್ನಳಿನ-
ಧಾರ್ಯಪದ ಸತ್ಪದವಿಪರ್ಯಟನಶೀಲ

ದೇಹದಿಂದ ರಮಣೀಯನೆನಿಸಿದ (ಮನೋಹರನೆನಿಸಿದ) ಬಸವೇಶ್ವರನೇ ಜಯ. ೪೪. ದೇಹಗುಣಗಳಾದ ಕ್ಷುತ್ಪಿಪಾಸಾದಿ ಷಡೂರ್ಮಿಗಳಿಂದ ಅಂದರೆ ಹಸಿವು, ನೀರಡಿಕೆ, ಶೋಕ, ಮೋಹ, ಜರಾ, ಮರಣಗಳಿಂದ ದೂರನಾದ, ಮಾಯಾರಹಿತರಾದ ಶಿವಗಣ ಸಮೂಹಕ್ಕೆ ಸಹಾಯಕನಾದ, ವೇದಾಗಮಗಳ ಸಮೂಹದಿಂದ ಸರಳವಾಗಿ ಹೇಳಲ್ಪಟ್ಟ (ಹೊಗಳಲ್ಪಟ್ಟ), ಪರಮತವಾದಿಗಳನ್ನು ತರ್ಕಶಾಸ್ತ್ರದಿಂದ ಸೋಲಿಸಿದ, ಶಿವಭಕ್ತರಾದವರ ಸಮೂಹಕ್ಕೆ ಗೆಲ್ಲುವಿಕೆಯನ್ನು ಉಂಟುಮಾಡಿಕೊಡುವುದೇ ಒಳ್ಳೆಯ ಯುಕ್ತಿಯಾಗಿ ಉಳ್ಳ, ಮಹಾತ್ಮರುಗಳಿಂದ ಧ್ಯಾನಿಸಲ್ಪಡುವುದಕ್ಕೆ ಯೋಗ್ಯನಾದ, ದೇವತಾಶ್ರೇಷ್ಠರ ಸಮೂಹದಿಂದ ಗಾನಮಾಡಿಸಿಕೊಳ್ಳುವುದಕ್ಕೆ (ಹಾಡಿಸಿಕೊಳ್ಳುವುದಕ್ಕೆ) ಯೋಗ್ಯನೆನಿಸಿದ, ಜಂಗಮ ಸಮೂಹ ಮತ್ತು ಈಶ್ವರ ಇವರುಗಳಿಗೆ ವಿಧೇಯನಾದ, ವಿದ್ವಾಂಸರಿಂದ ಹೊಗಳಿಸಿಕೊಳ್ಳುವುದಕ್ಕೆ ಯೋಗ್ಯನಾದ, ಮನೋಹರಗಳೂ, ಮಂಗಳಕರಗಳೂ ಆದ ಕ್ರಿಯೆಗಳನ್ನುಳ್ಳ, ಅನ್ಯಮತಸ್ಥರ ಸಮೂಹದಿಂದ ಜಯಿಸುವುದಕ್ಕೆ ಅಸಾಧ್ಯನೆನಿಸಿದ, ಸಮಗ್ರ ಸದ್ಗುಣಗಳಿಂದ ತುಂಬಿದ ಹೆಂಡತಿ (ಗಂಗಾಂಬಿಕೆಯೆಂಬ) ಯನ್ನುಳ್ಳ, ಇಚ್ಛಿಸಿದ ಸಕಲ ಇಷ್ಟಾರ್ಥಗಳನ್ನು ಕೊಡುವಂಥ, ಶಿವಗಣಂಗಳಿಗೆಲ್ಲ ಸ್ವಾಮಿಯೆನಿಸಿದ ಬಸವೇಶ್ವರನೇ, (ನನ್ನನ್ನು)ರಕ್ಷಿಸು. ೪೫. ವಿಷ್ಣು ಬ್ರಹ್ಮರುಗಳಿಂದ ಸದಾ ಪೂಜೆಯನ್ನು ಮಾಡಿಸಿಕೊಳ್ಳುವ, ಲೋಕಸಮುದಾಯದ ಭಾರವನ್ನು ಧರಿಸುವುದರಲ್ಲಿ ಸಮರ್ಥನಾದ, ಗಣಾಧಿನಾಥರಿಗೆ ಹಿತವಾಗುವ ಕೆಲಸವನ್ನುಳ್ಳ, ಸಜ್ಜನರೆಂಬ ಕಮಲಗಳಿಗೆ ಸೂರ್ಯನಾದ, ಶ್ರೇಷ್ಠವಾದ ಯಶಸ್ಸೆಂಬ ಶ್ಲಾಘ್ಯಳಾದ ಹೆಂಡತಿಯನ್ನುಳ್ಳ (ಅಂದರೆ ಸತ್ಕೀರ್ತಿಯನ್ನು ತನ್ನ ಪತ್ನಿಯಂತೆ ತಿಳಿದು ಅರ್ಜಿಸಿದವ

1 ಕಾಯಜವಿಮರ್ದನ (ಗ, ಜ, ಮು)

ಸ್ಥೈರ್ಯಯುತ ನಿರ್ಜಿತಸುರವೈರ್ಯಧಿಕಮೇರುನಿಭ-
ಧೈರ್ಯ ನಿಗಮಾಂತಪರಿಚರ್ಯಯುತ ಲೋಕಾ-
ಚಾರ್ಯಪತಿ ಪಾಲಿಪುದಪಾರ್ಯಮಹಿಮಾಂಕ ಗಣ-
ವರ್ಯ ಸಕಳಾದಿಜಗದಾರ್ಯ ಬಸವೇಶಾ ೪೫

ಚಿತ್ರತರಮಂಗಳಚರಿತ್ರ ಚರಲಿಂಗಸುಪ-
ವಿತ್ರಮಯಪಾದಶತಪತ್ರಮದಭೃಂಗಾ-
ಮಿತ್ರಚಯಭಂಜನ ಜಗತ್ತ್ರಯಧುರೀಣ ಜಿತ-
ವೃತ್ರವಿಧಿಪಂಕರುಹನೇತ್ರಸುರವಂದ್ಯಾ
ಗೋತ್ರರಿಪುನಂದನಸುಪತ್ರದ ಮಹೇಶಮತ-
ಸತ್ರಪರಿವೃದ್ಧಿಕರಚೈತ್ರ ಬುಧವೃಂದ-
ಸ್ತೋತ್ರನಿಕುರುಂಬಪರಪಾತ್ರ ಪೊರೆಯೆನ್ನನಘ-
ಜೈತ್ರ ಭವವಾರಿಧಿವಹಿತ್ರ ಬಸವೇಶಾ ೪೬

ನೆಂದುಭಾವ) ಋಷಿಗಳಹೃದಯಕಮಲದಲ್ಲಿ ಧರಿಸಲ್ಪಡುವುದಕ್ಕೆ ಯೋಗ್ಯವಾದಪಾದಗಳುಳ್ಳ, ಶ್ರೇಷ್ಠವಾದ ಮಾರ್ಗದಲ್ಲಿ ಸಂಚರಿಸುವುದೇ ಸ್ವಭಾವವಾಗಿವುಳ್ಳ, ಮನಸ್ಸಿನ ಸ್ಥಿರತೆಯಿಂದ ಕೂಡಿದ, ದೇವತೆಗಳ ವೈರಿಗಳಾದ ರಾಕ್ಷಸರನ್ನು ಜಯಿಸಿದ, ಮೇರು ಪರ್ವತಕ್ಕೆ ಸದೃಶವಾದ ಅಧಿಕ ಧೈರ್ಯವುಳ್ಳ, ಉಪನಿಷತ್ತುಗಳು ಮಾಡುವ ಸೇವೆಯಿಂದ ಕೂಡಿದ, ಸಮಸ್ತ ಲೋಕಾಧಿಪತಿಗಳಿಗೆ ಸ್ವಾಮಿಯಾದ, ಇತರರಿಂದ ನಿವಾರಿಸಲ್ಪಡುವುದಕ್ಕೆ ಸಾಧ್ಯ ಅಶಕ್ಯವಾದ ಮಹತ್ವವೇ ಗುರುತಾಗಿವುಳ್ಳ, ಗಣಶ್ರೇಷ್ಠನಾದ, ಸಕಲಕ್ಕೂ ಮೊದಲನೆಯವನಾದ, ಜಗದ್ಗುರುವಾದ ಬಸವೇಶ್ವರನೇ, (ನನ್ನನ್ನು) ರಕ್ಷಿಸುವುದು.

೪೬. ಅತ್ಯಾಶ್ಚರ್ಯಕರವೂ, ಮಂಗಳಕರವೂ ಆದ ಚರಿತ್ರೆಯುಳ್ಳ, ಜಂಗಮಲಿಂಗಗಳ ಅತಿ ಪವಿತ್ರಮಯವಾದ ಚರಣಗಳೆಂಬ ಕಮಲಗಳಿಗೆ ಮದಿಸಿದ ಭ್ರಮರದೋಪಾದಿಯಲ್ಲಿರುವ, ಶತ್ರುಗಳ ಸಮೂಹವನ್ನು ನಾಶಗೊಳಿಸಿದ, ಮೂರು ಲೋಕಗಳ ಭಾರವನ್ನು ಧರಿಸುವುದರಲ್ಲಿ ಸಮರ್ಥನಾದ, ವೃತ್ರಾಸುರನನ್ನು ಜಯಿಸಿದ ದೇವೇಂದ್ರ, ಬ್ರಹ್ಮ, ವಿಷ್ಣು ಇವರೇ ಮೊದಲಾದ ದೇವತೆಗಳಿಂದ ನಮಸ್ಕರಿಸಿ ಕೊಳ್ಳುವುದಕ್ಕೆ ಯೋಗ್ಯನಾದ, ಪರ್ವತಗಳಿಗೆ ಶತ್ರುವಾದ ದೇವೇಂದ್ರನ ಪುತ್ರನಾದ ಅರ್ಜುನನಿಗೆ ಶ್ರೇಷ್ಠವಾದ ಬಾಣವನ್ನು ಕೊಟ್ಟ ಶಿವನ ಮತ (ವೀರಶೈವ ಮತ) ವೆಂಬ ಅರಣ್ಯವನ್ನು ಅಭಿವೃದ್ಧಿಗೊಳಿಸುವ ಚೈತ್ರಮಾಸದಂತಿರುವ, ವಿದ್ವಾಂಸರ ಸಮೂಹದ ಸ್ತುತಿಯ ಸಮೂಹಕ್ಕೆ ಪರಮ ಆಶ್ರಯನೆನಿಸಿದ, ಪಾಪವನ್ನು ಜಯಿಸಿದ, ಸಂಸಾರವೆಂಬ

ಹೀರಹಿಮತಾರಗಿರಿನಾರದಪಟೀರಘನ-
ಸಾರಸುರವಾರಣತುಷಾರಕರತಾರಾ-
ಹಾರಸಿತನೀರಧರಪಾರದಸುಧಾರಸಸ-
ಮೀರಭುಗಿನಾರುಚಿರಗೌರಸುಯಶೋಂಕಾ
ಘೋರಭವದೂರ ಜಿತಶೂರತರಮಾರ ಶುಭ-
ಸಾರಯಮಿವಾರನುತ ವೀರಶಿವಭೃತ್ಯಾ-
ಧಾರ ಸದುದಾರ ಸದಪಾರಸುಖಪೂರ ಜಯ
ಚಾರಪದಸಾರಸವಿಹಾರ ಬಸವೇಶಾ ೪೭

ಚಾಲಶಶಿಮೌಲಿಕ ಕಪಾಲಧರ ಶೂಲಕರ
ಕಾಲಹರಕೋಲಪರಲಾಲಸ ಮನೋಜ್ಞ-
ವ್ಯಾಲಧರಲೀಲ ಶುಭಶೀಲ ಬುಧಜಾಲನುತಿ-
ಲೋಲ ಕರುಣಾಲಸಿತ ಫಾಲಶಿಖಿನೇತ್ರ

ಸಮುದ್ರಕ್ಕೆ ಹಡಗಿನಂತಿರುವ, ಬಸವೇಶ್ವರನೇ ನನ್ನನ್ನು ರಕ್ಷಿಸು. ೪೭. ವಜ್ರ, ಮಂಜು, ಬೆಳ್ಳಿಯ ಪರ್ವತ (ಕೈಲಾಸ ಪರ್ವತ), ನಾರದ, ಶ್ರೀಗಂಧ, ಪಚ್ಚ ಕರ್ಪೂರ, ಐರಾವತ, ಚಂದ್ರ, ನಕ್ಷತ್ರ, ಮುತ್ತಿನಹಾರ, ಬಿಳಿಯಮೋಡ, ಪಾದರಸ, ಅಮೃತ, ಆದಿಶೇಷ (ಸಮೀರ ಭುಗಿನ) ಇವರುಗಳ ಹಾಗೆ ಎಲ್ಲ ದೃಷ್ಟಿಯಿಂದಲೂ (ಎಲ್ಲ ಕಡೆಯಿಂದಲೂ) ಮನೋಹರವಾದ ಶುಭ್ರತೆಯಿಂದ ಕೂಡಿದ, ಒಳ್ಳೆಯ ಕೀರ್ತಿಯೇ ಗುರುತಾಗಿವುಳ್ಳ, ಭಯಂಕರವಾದ ಸಂಸಾರದಿಂದ ದೂರನಾದ, ಯಮ, ಮನ್ಮಥ ಇವರುಗಳನ್ನು ಜಯಿಸಿದ, ಮಂಗಳಕರರೂ, ಶ್ರೇಷ್ಠರೂ ಆದ ಋಷಿಗಳ ಸಮೂಹದಿಂದ ಹೊಗಳಿಸಿಕೊಳ್ಳಲ್ಪಟ್ಟ, ವೀರಶೈವ ಭೃತ್ಯರಿಗೆ ಆಧಾರನಾದ (ವೀರಶೈವವನ್ನು ಭೃತ್ಯರಂತೆ ಆಚರಿಸುವವರಿಗೆ ಆಧಾರಭೂತನಾದ ಎಂದು ಭಾವ), ಒಳ್ಳೆಯ ಉದಾರ ಗುಣವುಳ್ಳ, ತಡೆಯಿಲ್ಲದ ಶ್ರೇಷ್ಠಸುಖದ ಪ್ರವಾಹದಂತಿರುವ ಜಂಗಮ ಸಂಬಂಧವಾದ ಪಾದಗಳೆಂಬ ಕಮಲಗಳಲ್ಲಿ ಕ್ರೀಡಿಸುವ ಬಸವೇಶ್ವರನೇ (ನನ್ನನ್ನು ಪೊರೆ). ೪೮. ಬಾಲಚಂದ್ರನೇ ಕಿರೀಟದಲ್ಲುಳ್ಳ, ಬ್ರಹ್ಮಕಪಾಲವನ್ನು ಧರಿಸಿದ, ತ್ರಿಶೂಲಾಯುಧವೇ ಕಯ್ಯಲ್ಲುಳ್ಳ ಯಮನನ್ನು ನಾಶಮಾಡಿದ, ವರಾಹ ರೂಪನಾದ ವಿಷ್ಣುವಿಗೆ ಶತ್ರುವಾದ ಶಿವನಲ್ಲಿ ಆಸಕ್ತನಾದ, ಮನೋಹರವಾದ ಸರ್ಪವನ್ನು ಧರಿಸಿದ ಶಿವನ ಲೀಲಾಸ್ವರೂಪನಾದ, ಮಂಗಳಕರವಾದ ಶೀಲವುಳ್ಳ (ಸದಾಚಾರವುಳ್ಳ), ವಿದ್ವಾಂಸರ ಸಮೂಹದ ಸ್ತೋತ್ರದಲ್ಲಿ ಆಸಕ್ತನಾದ, ಕರುಣೆಯಿಂದ ಪ್ರಕಾಶಮಾನನಾದ, ಹಣೆಯಲ್ಲಿ ಅಗ್ನಿನೇತ್ರವುಳ್ಳ, ಕೈಲಾಸಪರ್ವತದಲ್ಲಿರುವ ವಿಶಾಲವೂ, ಮನೋಹರವೂ ಆದ ಮನೆಯಲ್ಲಿ ಕ್ರೀಡಿಸುವ, ಶಿವಗಣಗಳ ಸಮೂಹದೊಡನೆ ಮಾಡಿದ ಸಂಗಸುಖವುಳ್ಳ, ಹಂಸಪಕ್ಷಿಯ ಮೇಲೆ ಸಂಚರಿಸುವ ಬ್ರಹ್ಮನಿಂದ

ತ್ರೈಲಗವಿಶಾಲರುಚಿರಾಲಯಸುಖೇಲನ ಗ-
ಣಾಲಿಕೃತಮೇಲನ ಮರಾಲಗಮನಾರ್ಚ್ಯ-
ಸ್ಥೂಲತನುಶಾಲಿ ವನಮಾಲಿವಿಧಿಮೂಲಕ ತ-
ಮಾಲದಲನೀಲಗಳ ಪಾಲಿಸು ವೃಷೇಂದ್ರಾ ೪೮

ಭಾವಭವಭಂಜನಸಭಾವಲಯಮಂಡನ ಶು-
ಭಾವಹ ಮಹೇಶಕೃತಭಾವ ಪರವಿದ್ಯಾ-
ಭಾವನ ಸದಾಸದನುಭಾವ ನತದತ್ತಗುಣ
ಭಾವ ಮುದಿತೋಗ್ರಶರಭಾವತರಣಾಂಕಾ
ಪಾವನಮಯಾಂಗ ಸುರಪಾವನತ ತಾರಕಜ-
ಪಾವಗತವಕ್ತ್ರ ಮುನಿಪಾವನಕಟಾಕ್ಷಾ
ದೇವಕುಲಸೇವ್ಯ ವಸುದೇವಸುತಮುಖ್ಯನರ-
ದೇವನುತ ರಕ್ಷಿಸೆಲೆ ದೇವ ಬಸವೇಶಾ ೪೯

ಕಾವ್ಯಗುರುಮುಖ್ಯಸುರಸೇವ್ಯಪದಪದ್ಮ ಶಶಿ-
ರವ್ಯನಲನೇತ್ರ ಪಠಿತವ್ಯನಿಜನಾಮಾ-
ಭವಜನದೂರ ಹೃತಹವ್ಯವಹಜಿಹ್ವ ವಿಜಿ-
ತವ್ಯಸನ ಸದ್ಗುಣಪದವ್ಯಜನಲೋಲಾ

ಪೂಜಿಸಲ್ಪಡುವುದಕ್ಕೆ ಯೋಗ್ಯನಾದ, ಸ್ಥೂಲವಾದ ದೇಹದಿಂದ ಶೋಭಿಸುವ, ವಿಷ್ಣು, ಬ್ರಹ್ಮರುಗಳಿಗೆ ಮೂಲಕಾರಣನೆನಿಸಿದ, ಹೊಂಗೆಯ ಎಲೆಗಳಂತೆ ನೀಲವರ್ಣದ ಕಂಠವನ್ನುಳ್ಳ ವೃಷಭೇಂದ್ರನೇ (ನನ್ನನ್ನು) ಪಾಲಿಸು. ೪೯. ಭಾವೋದ್ಭವನಾದ ಮನ್ಮಥನನ್ನು ನಾಶಗೊಳಿಸಿದ ಶಿವನ ಸಭಾಮಂಡಲಕ್ಕೆ ಅಲಂಕಾರಪ್ರಾಯನಾದ, ಮಂಗಳವನ್ನುಂಟುಮಾಡುವ, ಈಶ್ವರನಲ್ಲಿ (ಮಾಡಲ್ಪಟ್ಟ) ಇಟ್ಟ ಮನಸ್ಸನ್ನುಳ್ಳ, ಉತ್ಕೃಷ್ಟವಾದ ಶಿವತತ್ತ್ವಬೋಧಕ ವಿದ್ಯೆಯನ್ನೇ ಧ್ಯಾನಿಸುವ, ಸದಾಕಾಲದಲ್ಲೂ ಶ್ರೇಷ್ಠವಾದ ಶಿವಾನುಭಾವದಿಂದ ಕೂಡಿದ, ನಮಸ್ಕರಿಸಿದವರಿಗೆ ಸದ್ಗುಣ ಸಮೂಹವನ್ನು ಕೊಡುವ (ಅಥವಾ ಶಿವಗುಣಗಳನ್ನು ಕೊಡುವ), ಭಯಂಕರವಾದ ಶರಭಾವತಾರವೇ ಗುರುತಾಗಿ ಉಳ್ಳ ವೀರಭದ್ರನನ್ನು ಸಂತೋಷಪಡಿಸುವ, ಕಡೆಗಣ್ಣಿನ ನೋಟದಿಂದ ಪರಿಶುದ್ಧಿಯನ್ನುಂಟು ಮಾಡುವ, ದೇವೇಂದ್ರನಿಂದ ನಮಸ್ಕಾರ ಮಾಡಿಸಿಕೊಳ್ಳುವ, ತಾರಕ ಮಂತ್ರ ಜಪದಿಂದ ಕೂಡಿದ ಬಾಯುಳ್ಳ, ಮುನಿಶ್ರೇಷ್ಠರನ್ನು ಪರಿಪಾಲಿಸುವ, ಶುಭಕರವಾದ ದೇಹವುಳ್ಳ, ದೇವತೆಗಳ ಸಮೂಹದಿಂದ ಸೇವಿಸಿಕೊಳ್ಳುವುದಕ್ಕೆ ಯೋಗ್ಯನಾದ, ಕೃಷ್ಣನೇ ಮೊದಲಾದ ಮನುಷ್ಯಾಧಿಪತಿಗಳಿಂದ (ರಾಜರುಗಳಿಂದ) ನಮಸ್ಕಾರಮಾಡಿಸಿಕೊಳ್ಳುವ ಸ್ವಾಮಿಯಾದ ಎಲೈ ಬಸವೇಶ್ವರನೇ ರಕ್ಷಿಸು. ೫೦. ಶುಕ್ರಾಚಾರ್ಯ (ಕಾವ್ಯ), ಬೃಹಸ್ಪತಿಯೇ ಮುಖ್ಯರಾದ ದೇವತೆಗಳಿಂದ ಸೇವಿಸಲ್ಪಡುವುದಕ್ಕೆ ಯೋಗ್ಯವಾದ ಪಾದಕಮಲವುಳ್ಳ, ಚಂದ್ರ, ಸೂರ್ಯ, ಅಗ್ನಿಗಳೇ ಕಣ್ಣಾಗುಳ್ಳ, ಈಶ್ವರನಿಂದ ಉದ್ಘಾಟಿಸುವುದಕ್ಕೆ (ಹೇಳುವುದಕ್ಕೆ) ಯೋಗ್ಯವಾದ ತನ್ನ ಹೆಸರನ್ನುಳ್ಳ, ಅಮಂಗಳದಿಂದ ಕೂಡಿದ ಜನರಿಂದ ದೂರ

ದ್ರವ್ಯಪತಿಮಿತ್ರ ಸತತವ್ಯಪಗತಾಶ ಭವಿ-
ತವ್ಯಸಕಲಜ್ಞ ಲಸದವ್ಯಯಗುಣಾಂಕಾ
ಶ್ರಾವ್ಯಶುಭಕೀರ್ತಿಯುತ ನವ್ಯಮತಿಯುಕ್ತ ಪೊರೆ
ದಿವ್ಯಮುನಿವೃಂದಪರಿಭಾವ್ಯ ಬಸವೇಶಾ ೫೦

ಕೇಶವಪರಿಸ್ತುತ ಕೃಪಾಶರಧಿ ಕೃತ್ತಭವ-
ಪಾಶ ಮೃಡಮಾನಸನಿವೇಶ ಪರಬಿಂದ್ವಾ-
ಕಾಶರವಿ ಸಂತತನಿರಾಶ ಶಿವತತ್ತ್ವನಿಧಿ-
ಕೋಶ ಕುಮತಸ್ಮಯವಿನಾಶ ಗಣಸೇವ್ಯಾ-
ಕ್ಲೇಶಘನಕಾನನಹುತಾಶ ಹೃದಯಾರ್ಚಿತಮ-
ಹೇಶ ನಿಜಕೀರ್ತಿಭರಿತಾಶ ಶಿವಲಿಂಗಾ-
ವೇಶ ಪೊರೆಯೆನ್ನನಘನಾಶ ಯಮಿರಾಜದುಪ-
ದೇಶಕರ ವಿಶ್ವಜಗದೀಶ ಬಸವೇಶಾ ೫೧

ದಲ್ಲಿರುವ, ಅಗ್ನಿಯ ನಾಲಿಗೆಯನ್ನು ನಾಶಗೊಳಿಸಿದ, ಸಪ್ತವ್ಯಸನಗಳನ್ನು ಗೆದ್ದ, ಶ್ರೇಷ್ಠರಾದ ಶಿವಗಣಗಳ ಮಾರ್ಗದಲ್ಲಿ ಸಂಚರಿಸುವ ಜನಗಳಲ್ಲಿ ಆಸಕ್ತನಾದ, ಕುಬೇರನಿಗೆ ಅಪ್ತ (ಮಿತ್ರ) ನೆನಿಸಿದ, ಸದಾ ಆಸೆಯಿಂದ ದೂರನಾದ ಭವಿಷ್ಯದ ಸಮಸ್ತ ವಿಷಯಗಳನ್ನು ಅರಿತಿರುವ, ಚ್ಯುತಿಯಿಲ್ಲದ ಪ್ರಕಾಶಮಾನವಾದ ಸದ್ಗುಣಗಳೇ ಚಿಹ್ನೆಯಾಗುಳ್ಳ, ಭೂಮಿಯ ಜನಗಳಿಂದ ಕೇಳುವುದಕ್ಕೆ ಯೋಗ್ಯವಾದ ಮಂಗಳಕರ ವಾದ ಯಶಸ್ಸಿನಿಂದ ಕೂಡಿದ, ಅಪೂರ್ವವಾದ (ನೂತನವಾದ) ಬುದ್ಧಿಯಿಂದ ಕೂಡಿದ ಶ್ರೇಷ್ಠರಾದ ಋಷಿಗಳ ಸಮೂಹದಿಂದ ಧ್ಯಾನಮಾಡಿಸಿಕೊಳ್ಳುವುದಕ್ಕೆ ಯೋಗ್ಯ ನಾದ ಬಸವೇಶ್ವರನೇ ರಕ್ಷಿಸು. ೫೧. ವಿಷ್ಣುವಿನಿಂದ ಹೊಗಳಿಸಿಕೊಂಡ, ದಯಾಸಮುದ್ರ ನಾದ, ಸಂಸಾರವೆಂಬ ಪಾಶವನ್ನು ಕತ್ತರಿಸಿ ಹಾಕಿದ, ಪರಮೇಶ್ವರನ ಮನಸ್ಸೆಂಬ ಮನೆ ಯಲ್ಲಿ ವಾಸಮಾಡಿದ, ಉತ್ಕೃಷ್ಟವಾದ ಬಿಂದುಸ್ವರೂಪದ ಆಕಾಶವಲ್ಲಿ ಸೂರ್ಯನಾಗಿ ರುವ, ಸತತವೂ ಆಶಾರಹಿತನಾದ, ಶಿವಸಂಬಂಧವಾದ ತತ್ತ್ವವಿದ್ಯೆಯೆಂಬ ನಿಕ್ಷೇಪಕ್ಕೆ ಬೊಕ್ಕಸದೋಪಾದಿಯಲ್ಲಿರುವ, ಕೆಟ್ಟ ಮತಗಳ ಗರ್ವವನ್ನು ನಾಶಗೊಳಿಸಿದ, ಶಿವಗಣ ಗಳಿಂದ ಸೇವಿಸಲ್ಪಡುವುದಕ್ಕೆ ಯೋಗ್ಯನಾದ, ಪಂಚಕ್ಲೇಶಗಳೆಂಬ ದಟ್ಟವಾದ ಕಾಡಿಗೆ ಬೆಂಕಿಯಾಗಿರುವ, ಶಿವನನ್ನು ಮನಸ್ಸಿನಲ್ಲಿ (ಸದಾ) ಪೂಜಿಸುವ, ತನ್ನ ಯಶಸ್ಸಿನಿಂದ ದಿಕ್ಕುಗಳನ್ನೆಲ್ಲ ತುಂಬಿದ, ಶಿವಲಿಂಗದಲ್ಲಿ ಆವೇಶವುಳ್ಳ (ಪ್ರವೇಶವುಳ್ಳ), ಪಾಪವನ್ನು ನಾಶಗೊಳಿಸಿದ, ಋಷಿ ಜನಗಳಿಗೆ ಪ್ರಕಾಶಿಸುವ ಶಿವತತ್ತ್ವೋಪದೇಶವನ್ನು ಮಾಡಿದ, ಸಮಸ್ತಲೋಕ (ವಿಶ್ವ) ಗಳಿಗೂ ಸ್ವಾಮಿಯೆನಿಸಿದ ಬಸವೇಶ್ವರನೇ ನನ್ನನ್ನು ರಕ್ಷಿಸು.

ಶಶ್ವದನುನಿಶ್ಸೃತನಿಜಶ್ವಸಿತಸಂಭವಪ-
ಟುಶ್ವಸನಚಾಲಿತಸುರೇಶ್ವರವಿಮಾನಾ-
ನಶ್ವರಪದಸ್ಥ ಹರಿದಶ್ವಶತಕಾಂತಿಮಯ-
ಶಾಶ್ವತವಪುರ್ಧರ ಸಿತಾಶ್ವಶರದಾಂಕಾ
ಪಶ್ವಧಿಪ ಸಾರನಿಗಮಾಶ್ವಭಜಕಪ್ರಿಯಕ-
ರಶ್ವಪತಿವಾಹನನತೈಶ್ವರಪದಸ್ಥಾ-
ಶೇಶ್ವರಸಮರ್ಚ್ಯ ಪೊರೆ ವಿಶ್ವಪರಿಪಾಲಕ ರ-
ತೀಶ್ವರಮದಾಪಹ ಗಣೇಶ್ವರ ವೃಷೇಂದ್ರಾ ೫೨

ಈಷಣವಿವರ್ಜಿತ ಸರೋಷಪರಮರ್ದನ ಮು-
ನೀಪಿತಸುರದ್ರುಮ ಸುಭಾಷಿತ ಸುವೃತ್ತಾ-
ನೇಷಿತಪದಾಬ್ಜ ಪರಿತೋಷಿತಮಹೇಶ ಶುಭ-
ವೇಷಧರ ತತ್ತ್ವವಿದಶೇಷಬುಧವಂದ್ಯಾ

೫೨. ಬಾರಿಬಾರಿಗೂ ಮೂಗನ್ನನುಸರಿಸಿ ಹೊರ ಹೊರಟ ತನ್ನ ಉಸುರಿನಿಂದ ಹುಟ್ಟಿದ ಸಮರ್ಥವಾದ ಉಸುರಿನ ಗಾಳಿಯಿಂದ ದೇವೇಂದ್ರನ ಪುಷ್ಪಕ ವಿಮಾನವನ್ನು ಅಲ್ಲಾಡುವಂತೆ ಮಾಡುವ, ನಶ್ವರವಲ್ಲದ (ಶಾಶ್ವತವಾದ) ಸ್ಥಾನದಲ್ಲಿರುವ, ನೂರಾರು ಸೂರ್ಯರ ತೇಜಸ್ಸಿನಂತಿರುವ ತೇಜೋ ರೂಪನಾದ, ಶಾಶ್ವತವಾದ ದೇಹವನ್ನು ಧರಿಸಿರುವ, ಶುಭ್ರವಾದ ಕುದುರೆಗಳನ್ನುಳ್ಳ ಅರ್ಜುನನಿಗೆ ಬಾಣವನ್ನು ಕೊಟ್ಟ ಶಿವನ ಗುರುತನ್ನುಳ್ಳ (ಅಂದರೆ ಶಿವಲಿಂಗವನ್ನು ಧರಿಸಿರುವ ಎಂದು ಭಾವ), ವೃಷಭೇಶ್ವರನಾದ, ಶ್ರೇಷ್ಠವಾದ ವೇದಗಳನ್ನೇ ಕುದುರೆ ಯನ್ನಾಗಿ ಉಳ್ಳ ಶಿವನನ್ನು ಧ್ಯಾನಿಸುವವರಿಗೆ ಹಿತವನ್ನುಂಟುಮಾಡುವ, ಶ್ರೇಷ್ಠವಾದ ನಾಯಿಯೇ ವಾಹನವಾಗಿ ಉಳ್ಳ ಭೈರವನಿಂದ ನಮಸ್ಕರಿಸಲ್ಪಟ್ಟ, ಶಿವನ ಸಂಬಂಧದ ಆಸ್ಥಾನದಲ್ಲಿರುವ, ದಿಕ್ಪತಿಗಳಾದ ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ವಾಯು, ಕುಬೇರ, ಈಶಾನರುಗಳಿಂದ ಪೂಜಿಸುವುದಕ್ಕೆ ಯೋಗ್ಯನಾದ, ಪ್ರಪಂಚವನ್ನು ಪರಿಪಾಲಿಸುವ, ಮನ್ಮಥನ ಗರ್ವವನ್ನು ನಾಶ ಮಾಡಿದ, ಗಣಶ್ರೇಷ್ಠನಾದ ವೃಷಭೇಂದ್ರನೇ ರಕ್ಷಿಸು. ೫೩. ದಾರೇಷಣ, ಪುತ್ರೇಷಣ, ಅರ್ಥೇಷಣಗಳೆಂಬ ಮೂರು ದುರಾಸೆಗಳನ್ನು ದೂರೀಕರಿಸಿದ, ಕೋಪದಿಂದ ಕೂಡಿದವನಾಗಿ ಶತ್ರುಗಳನ್ನು ನಾಶಗೊಳಿಸಿದ, ಮುನಿಗಳ ಇಷ್ಟಾರ್ಥ ವಿಷಯದಲ್ಲಿ ಕಲ್ಪದ್ರುಮ ಸದೃಶನಾದ, ಒಳ್ಳೆಯ ಮಾತುಗಳನ್ನುಳ್ಳ, ಒಳ್ಳೆಯ ಚರಿತ್ರೆಯುಳ್ಳವರಿಂದ ಹುಡುಕಲ್ಪಟ್ಟ ಪಾದಕಮಲಗಳುಳ್ಳ, ಈಶ್ವರನನ್ನು ಸಂತೋಷಪಡಿಸುವ, ಮಂಗಳಕರವಾದ ವೇಷವನ್ನು ಧರಿಸಿದ, ಶಿವತತ್ತ್ವ ವಿದ್ಯೆಯನ್ನು ತಿಳಿದ ಸಕಲ ವಿದ್ವಾಂಸರಿಂದಲೂ ನಮಸ್ಕರಿಸಿಕೊಳ್ಳುವುದಕ್ಕೆ ಯೋಗ್ಯನಾದ, ಭಯಂಕರವಾದ ಪುನಃ ಪುನಃ ಹುಟ್ಟುವಿಕೆಯಿಂದ ಮಾಲಿನ್ಯದಿಂದ ಕೂಡಿದ (ಭವ) ರೋಗವನ್ನು

ಭೀಷಣಪುನರ್ಭವಸದೋಷಗದಸಂಹರಣ
ಭೇಷಜನಿಜಾಖ್ಯ ನತಪೋಷ ಮೃಡಭಕ್ತ-
ದ್ವೇಷಿಮದಪಂಕಪರಿಶೋಷಣ ಗಣೇಂದ್ರ ಪೊರೆ
ಶೇಷಧರಭಕ್ತಿಮಣಿಭೂಷ ಬಸವೇಶಾ ೫೩

ವಾಸವಗುರುಸ್ತುತ ಮಹಾಸುರಮಹೀಧರಶ-
ರಾಸನಮನೋಂಬುಜನಿವಾಸ ಶಿವಯೋಗಾ-
ಭ್ಯಾಸರತವತ್ಸಲ ಕೃಪಾಸದನ ರಮ್ಯದರ-
ಹಾಸರುಚಿರಾಸ್ಯ ಶಿವದಾಸಹಿತಕಾರ್ಯಾ
ವಾಸರಕರಪ್ರಕರಭಾಸಹಿತ ದುರ್ಮತನಿ-
ರಾಸ ಕುಸುಮಾಯುಧದುರಾಸದನಿಜಾತ್ಮಾ
ವ್ಯಾಸಶುಕಮುಖ್ಯನುತಭಾಸುರಚರಿತ್ರ ಕುಡು
ಲೇಸನೆಮಗುನ್ನತವಿಲಾಸ ಬಸವೇಶಾ ೫೪

ಆಹವಸಮಾಗತಸಸಾಹಸಪರಪ್ರಹರ-
ಬಾಹ ಗಣನಾಯಕಸಮಾಹಿತಸುಕಾರ್ಯ-
ವ್ಯೂಹ ಪರಿವರ್ಜಿತವಿಮೋಹ ಭುವನೋತ್ತರಕ-
ಟಾಹಬಹಿರಾತತಸುಗೇಹಕೃತವಾಸಾ

ನಾಶಪಡಿಸುವುದರಲ್ಲಿ ಔಷಧದಂತಿರುವವನೆಂಬ ತನ್ನ ಹೆಸರನ್ನು ಹೊಂದಿದ (ಪ್ರಸಿದ್ಧ ನಾದ), ನಮಸ್ಕರಿಸಿದವರನ್ನು ಸಂರಕ್ಷಿಸುವ, ಪರಮೇಶ್ವರನ ಭಕ್ತರುಗಳಲ್ಲಿ ದ್ವೇಷ ವುಳ್ಳವರ ಗರ್ವವೆಂಬ ಕೆಸರನ್ನು ಒಣಗಿಸುವ, ಗಣಶ್ರೇಷ್ಠನೆನಿಸಿದ, ಶಿವಭಕ್ತಿಯೆಂಬ ರತ್ನಾಭರಣವನ್ನು ಧರಿಸಿದ, ಬಸವೇಶ್ವರನೇ ಸಂರಕ್ಷಿಸು. ೫೪. ದೇವೇಂದ್ರ, ಬೃಹಸ್ಪತಿ ಇವರುಗಳಿಂದ ಹೊಗಳಲ್ಪಟ್ಟವನಾದ, ಮಹತ್ತರವಾದ ಮೇರುಪರ್ವತವೇ ಬಿಲ್ಲಾಗಿ ಉಳ್ಳ ಶಿವನ ಹೃದಯ ಕಮಲವೇ ಮನೆಯಾಗಿವುಳ್ಳ, ಶಿವಯೋಗದ ಅಭ್ಯಾಸದಲ್ಲಿ ಪ್ರೀತಿಯುಳ್ಳವರಾರೋ ಅವರಲ್ಲಿ ವಾತ್ಸಲ್ಯವನ್ನು ಹೊಂದಿದ, ದೇಹವೆಂಬ ರಸಕ್ಕೆ ಮನೆ ಯಂತಿರುವ, ಮನೋಹರವಾದ ಮುಗುಳುನಗೆಯಿಂದ ಸುಂದರವಾದ ಮುಖವುಳ್ಳ ಶಿವ ನನ್ನು ಸೇವಿಸುವವರಿಗೆ ಪ್ರಿಯವಾದ (ಹಿತವಾದ) ಕಾರ್ಯಗೌರವವುಳ್ಳ, ಸೂರ್ಯರ ಸಮೂಹದ ಕಾಂತಿಯಂತಿರುವ ಕಾಂತಿಯಿಂದ ಕೂಡಿದ, ಕೆಟ್ಟ ಮತಗಳನ್ನು ನಾಶ ಪಡಿಸಿದ, ಮನ್ಮಥನಿಂದ ಪಡೆಯುವುದಕ್ಕೆ ಅಸಾಧ್ಯವಾದ ತನ್ನ ಆತ್ಮ (ದೇಹ) ವುಳ್ಳ ಮನ್ಮಥ ಸಂಬಂಧದ ಮನೋವಿಕಾರಾದಿಗಳಿಂದ ದೂರನಾದ ಎಂದು ಭಾವ, ವ್ಯಾಸ ಮಹರ್ಷಿ, ಶುಕಮಹರ್ಷಿ ಇವರುಗಳೇ ಮುಖ್ಯರಾದ ಋಷಿಗಳಿಂದ ಸ್ತೋತ್ರಮಾಡಿಸಿ ಕೊಂಡ, ಪ್ರಕಾಶಿಸುವ ಚರಿತ್ರೆಯುಳ್ಳ, ಉತ್ಕೃಷ್ಟವಾದ ಲೀಲೆಯನ್ನು ಹೊಂದಿದ ಬಸವೇಶ್ವರನೇ, ನನಗೆ ಒಳ್ಳೆಯದನ್ನು ಕೊಡು. ೫೫. ಯುದ್ಧಕ್ಕೆ ಬಂದ ಸಾಮರ್ಥ್ಯ ದಿಂದ ಕೂಡಿದ ಶತ್ರುಗಳನ್ನು ನಾಶಮಾಡುವ ತೋಳ್ಬಲವುಳ್ಳ, ಶಿವಗಣ ಶ್ರೇಷ್ಠರಿಗೆ ಪ್ರಿಯವಾಗುವಂತಹ ಶ್ರೇಷ್ಠಕಾರ್ಯಗಳ ಸಮೂಹವನ್ನುಳ್ಳ, ಅಜ್ಞಾನವನ್ನು ದೂರೀ

ವ್ಯಾಹತಪರೋಕ್ತಿಪರಿವಾಹ ಬುಧಸನ್ನುತಸ-
ದೂಹ ಸಕಳೇಷ್ಟಕರಣೇಹ ಚರಭಕ್ತ-
ಸ್ನೇಹ ಪರಿಪಾಲಿಸು ಸುದೇಹ ಪರಮೇಶ್ವರಮ-
ನೋಹರಗುಣಾಭರಣವಾಹ ಬಸವೇಶಾ ೫೫

ವ್ಯಾಳಪತಿಕಂಕಣ ಕರಾಳಖಳಸೂದನ ಮ-
ರಾಳರಥಮಾನಿತವಿಶಾಳಮತಿಯುಕ್ತಾ
ಕ್ಷ್ವೇಳಗಳ ಸದ್ಭಸಿತಫಾಳ ಫಣಿರಾಜನಿಭ-
ವಾಳ ಖುರನಿರ್ಮಥಿತಕಾಳದನುಜೇಂದ್ರಾ
ಗಾಳವದಧೀಚಿಮುನಿಪಾಳನಪರಾಯಣ ಸ-
ದೈಳಬಿಳಭಾಗ್ಯದಸುಖೇಳನ ಕಟಾಕ್ಷಾ-
ಕ್ಷಾಳಿತದಿಗಂತ ಗಣಮೇಳನವಿಲೋಲ ಪೊರೆ
ಶೈಳನಿಭಕಾಯ ಕರುಣಾಳು ಬಸವೇಶಾ ೫೬

ಪಕ್ಷಿಪರಥಾಕ್ಷಿಪದ ಋಕ್ಷಪವಳಕ್ಷಕ ದಿ-
ದೃಕ್ಷುವಿಜಿತಾಕ್ಷ ಸುಮುಮುಕ್ಷುಜನವೀಕ್ಷಾ-
ಲಕ್ಷಿತ ತರಕ್ಷುತನುರಾಕ್ಷಸವಿಪಕ್ಷ ಖಲ-
ದಕ್ಷಮುಖಶಿಕ್ಷ ನಿಟಲಾಕ್ಷಗಮಹೋಕ್ಷಾ

ಕರಿಸಿದ, ಲೋಕವೆಂಬ ದೊಡ್ಡ ಕೊಪ್ಪರಿಗೆಯ ಹೊರಗಡೆಯಲ್ಲೂ, ಎಲ್ಲ ಕಡೆಯಲ್ಲೂ, ವಿಸ್ತಾರವಾದ ಶ್ರೇಷ್ಠ ಮನೆಯಲ್ಲಿ ವಾಸಮಾಡಿರುವ (ಸಮಸ್ತಲೋಕದ ಎಲ್ಲ ಭಾಗ ದಲ್ಲೂ ವಾಸಮಾಡಿದ ಎಂದು ಭಾವ), ಅನ್ಯಮತಸ್ಥರ ಮಾತುಗಳ ಪ್ರವಾಹವನ್ನು ವಿಶೇಷವಾಗಿ ನಾಶಗೊಳಿಸಿದ, ವಿದ್ವಾಂಸರಿಂದ ಹೊಗಳಿಸಿಕೊಳ್ಳಲ್ಪಟ್ಟ, ಒಳ್ಳೆಯ ಊಹೆಗೆ ಕಾರಣನಾದ, ಸಕಲರಿಗೂ ಇಷ್ಟಾರ್ಥಗಳನ್ನುಂಟುಮಾಡುವುದರಲ್ಲಿ ಇಚ್ಛೆ ಯುಳ್ಳ, ಜಂಗಮ ಭಕ್ತರಲ್ಲಿ ಪ್ರೀತಿಯುಳ್ಳ, ಒಳ್ಳೆಯ ಶರೀರವುಳ್ಳ, ಮನೋಹರವಾದ ಸದ್ಗುಣಗಳೇ ಆಭರಣವಾಗಿವುಳ್ಳ, ಪರಮೇಶ್ವರನ ವಾಹನನಾದ ಬಸವೇಶ್ವರನೇ ಚೆನ್ನಾಗಿ ಸಂರಕ್ಷಣೆ ಮಾಡು. ೫೬. ಆದಿಶೇಷನೇ ಕೈಕಡಗವಾಗಿವುಳ್ಳ, ಭಯಂಕರರಾದ ದುಷ್ಟರನ್ನು ನಾಶಮಾಡಿದ, ಹಂಸಪಕ್ಷಿಯನ್ನೇ ರಥವನ್ನಾಗಿ ಮಾಡಿಕೊಂಡಿರುವ ಬ್ರಹ್ಮ ನಿಂದ ಸನ್ಮಾನಿತನಾದ, ವಿಶಾಲವಾದ ಬುದ್ಧಿಯುಳ್ಳ, ವಿಷವನ್ನು ಕಂಠದಲ್ಲುಳ್ಳ, ಶ್ರೇಷ್ಠ ಭಸ್ಮವೇ ಹಣೆಯಲ್ಲುಳ್ಳ, ಆದಿಶೇಷನಿಗೆ ಸದೃಶವಾದ ಬಾಲವುಳ್ಳ, ಗೊರಸಿನ ತುಳಿತ ದಿಂದ ಕಾಳನೆಂಬ ರಾಕ್ಷಸ ಶ್ರೇಷ್ಠನನ್ನು ಭೇದಿಸಿದ, ಗಾಲವ, ದಧೀಚಿಗಳೆಂಬ ಋಷಿ ಗಳನ್ನು ಸಂರಕ್ಷಿಸುವುದರಲ್ಲಿ ಆಸಕ್ತನಾದ, ಶ್ರೇಷ್ಠನಾದ ಕುಬೇರನಿಗೆ ಸಂಪತ್ತನ್ನು ಕೊಟ್ಟ, ಒಳ್ಳೆಯ ಕ್ರೀಡೆಯುಳ್ಳ, ಕಡೆಗಣ್ಣಿನ ನೋಟದಿಂದ ದಿಕ್ಕುಗಳ ಕೊನೆಗಳನ್ನು ತೊಳೆದ, ಶಿವಗಣಗಳ ಸಂಗದಲ್ಲಿ ಆಸಕ್ತನಾದ, ಪರ್ವತಕ್ಕೆ ಸಮಾನವಾದ ದೇಹವುಳ್ಳ, ದಯಾ ಶಾಲಿಯಾದ ಬಸವೇಶ್ವರನೇ ರಕ್ಷಿಸು. ೫೭. ಗರುಡಪಕ್ಷಿಯೇ ರಥವಾಗುಳ್ಳ ವಿಷ್ಣುವಿನ ಕಣ್ಣನ್ನು ಪಾದದಲ್ಲುಳ್ಳ, ಚಂದ್ರನಂತೆ (ಋಕ್ಷಪ) ಶುಭ್ರನಾದ, ದರ್ಶನಾಪೇಕ್ಷಿಗಳಾದ

ಯಕ್ಷಪತಿಪಕ್ಷ ಮಿಳದಕ್ಷಯಗುಣಾಕ್ಷರ ದು-
ರೀಕ್ಷವಿಷಭಕ್ಷ ಶುಭಲಕ್ಷಣ ಗಣೇಂದ್ರಾ-
ಧ್ಯಕ್ಷ ರಿಪುಕಕ್ಷದವ ಸಾಕ್ಷರಕೃತೇಕ್ಷಣ ಕ
ಟಾಕ್ಷ ಪೊರೆ ಸಕ್ಷಮವಿಚಕ್ಷಣ ವೃಷೇಂದ್ರಾ ೫೭

ಕುಷ್ಠಮುಖದುಸ್ಸಹಬಲಿಷ್ಠಗದಮರ್ದನಗ-
ರಿಷ್ಠನಿಜಪಜ್ಜಲ ಯುಧಿಷ್ಠಿರನರಾರ್ಚ್ಯಾ-
ಧಿಷ್ಠಿತಜಗತ್ತ್ರಯ ವರಿಷ್ಠಗರುಡಾಂಕಪರ-
ಮೇಷ್ಠಿನುತ ಭರ್ಗಪದನಿಷ್ಠಜನಲೋಲಾ
ಶ್ರೇಷ್ಠಸುಕವಿಪ್ರಕರಪಷ್ಠಸುರಭೂಜ ಖಲ-
ಕಾಷ್ಠದವಪಾವಕ ಪಟಿಷ್ಠಗಣವೃಂದ-
ಜ್ಯೇಷ್ಠ ಪರಿತರ್ಜಿತಲಘಿಷ್ಠಮತವಾದಿಕುಲ
ಸುಷ್ಠುವಚನೋತ್ಕರ ಮಹಿಷ್ಠ ಬಸವೇಶಾ ೫೮

ಇಂದ್ರಿಯಗಳನ್ನು ಗೆದ್ದ ಶ್ರೇಷ್ಠರಾದ ಮೋಕ್ಷಾಪೇಕ್ಷೆಯುಳ್ಳ ಜನರ ದೃಷ್ಟಿಗೆ (ವೀಕ್ಷ) ಗುರಿಯಾಗಿ ಮಾಡಲ್ಪಟ್ಟ (ಮೋಕ್ಷಾಪೇಕ್ಷಿಗಳಾದ ಸಂಯಮಿ ಜನಗಳಿಂದ ನೋಡಲ್ಪಡುವ ಎಂದು ಭಾವ), ಹುಲಿಯ ದೇಹವುಳ್ಳ ವ್ಯಾಘ್ರಾಸುರನೆಂಬ ರಾಕ್ಷಸನಿಗೆ ಶತ್ರುವಾದ, ನೀಚನಾದ ದಕ್ಷಬ್ರಹ್ಮನ ಯಜ್ಞವನ್ನು ಶಿಕ್ಷಿಸಿದ (ನಾಶಮಾಡಿದ), ಪರಮೇಶ್ವರನನ್ನು ಹೊತ್ತು ಸಂಚರಿಸುವ ದೊಡ್ಡ ವೃಷಭ (ಗೂಳಿ) ನಾದ, ಕುಬೇರನಲ್ಲಿ ವಿಶ್ವಾಸವುಳ್ಳ, ನಾಶರಹಿತವಾದ ಸದ್ಗುಣಗಳಿಂದ ಕೂಡಿದ, ಕ್ಷಯರಹಿತನಾದ (ಅಥವಾ ಪರಮಾತ್ಮ ಸ್ವರೂಪನಾದ) ನೋಡುವುದಕ್ಕಸಾಧ್ಯವಾದ ವಿಷವನ್ನು ಭಕ್ಷಿಸಿದ ಶಿವನ ಮಂಗಳಕರವಾದ ಚಿಹ್ನೆಗಳನ್ನುಳ್ಳ, ಶಿವಗಣ ಶ್ರೇಷ್ಠರಿಗೆಲ್ಲ ಅಧಿಪತಿಯಾದ, ವೈರಿಗಳೆಂಬ ಒಣಗಿದ ಕಾಡಿಗೆ ಕಾಳ್ಗಿಚ್ಚಿನಂತಿರುವ, ವಿದ್ಯಾವಂತರಲ್ಲಿ (ಸಾಕ್ಷರ) ಕಡೆಗಣ್ಣುಗಳ ಕಾಂತಿಯನ್ನು ಬೀರುವವನಾದ (ಜ್ಞಾನಿಗಳನ್ನು ಕೃಪಾಕಟಾಕ್ಷದಿಂದ ನೋಡುವ) ಕ್ಷಮಾಶೀಲರಾದವರಲ್ಲಿ ಶ್ರೇಷ್ಠನಾದ ವೃಷಭೇಶ್ವರನೇ (ನನ್ನನ್ನು) ಪೊರೆ. ೫೮. ಕುಷ್ಟರೋಗವೇ ಮೊದಲಾದ ಸಹಿಸಲಸಾಧ್ಯವಾದ ಪ್ರಬಲ ರೋಗಗಳನ್ನು, ನಾಶಗೊಳಿಸುವುದರಲ್ಲಿ ಬಹು ಸತ್ವಯುತವಾದ (ಗುರುತರವಾದ) ತನ್ನ ಪಾದಜಲವನ್ನುಳ್ಳ, ಯುಧಿಷ್ಠಿರ, ಅರ್ಜುನಾದಿಗಳಿಂದ ಪೂಜಿಸಿಕೊಳ್ಳಲ್ಪಡಲು ಯೋಗ್ಯನಾದ, ತನ್ನಲ್ಲಿ ಅಡಕವಾದ (ವಾಸಮಾಡಲ್ಪಟ್ಟ) ಮೂರುಲೋಕಗಳನ್ನುಳ್ಳ, ಶ್ರೇಷ್ಠ ಗರುಡವಾಹನನಾದ ವಿಷ್ಣು, ಬ್ರಹ್ಮರೇ ಮೊದಲಾದವರಿಂದ ಸ್ತೋತ್ರ ಮಾಡಿಸಿಕೊಳ್ಳುವ, ಈಶ್ವರನ ಪಾದದಲ್ಲಿ ಶ್ರದ್ಧೆಯುಳ್ಳ ಜನಗಳಲ್ಲಿ ಆಸಕ್ತನಾದ, ಉತ್ತಮರಾದ ಸತ್ಕವಿಗಳ ಗುಂಪಿಗೆ ಆರನೆಯ (?) ಕಲ್ಪವೃಕ್ಷ ಸದೃಶನಾದ, ನೀಚಜನಗಳೆಂಬ ಕಟ್ಟಿಗೆ (ಸೌದೆ)ಗೆ, ಕಾಳ್ಗಿಚ್ಚಿನಂತಿರುವ, ಸಮರ್ಥರಾದ ಶಿವಗಣಗಳ ಗುಂಪಿಗೆ ದೊಡ್ಡವ (ಜ್ಯೇಷ್ಠ)ನೆನಿಸಿದ, ಅತಿ ನೀಚ ಮತ ವಾದಿಗಳ ಗುಂಪನ್ನು ಭಯಪಡಿಸಿದ, ಶ್ರೇಷ್ಠವಾದ ಮಾತುಗಳ (ಶ್ರೇಷ್ಠ ವಚನಗಳ ಸಮೂಹವನ್ನುಳ್ಳ (ಶ್ರೇಷ್ಠವಾದ ವಚನಗಳನ್ನು ರಚಿಸಿದ ಎಂದು ಭಾವ)

ಭರ್ಮನಗಮಂದಿರ ಯಜ ರ್ಮನುಪರಿಸ್ತುತ ಹ-
ವಿರ್ಮುಖಸಮರ್ಚಿತ ವಿಕರ್ಮಯಮಿವಂದ್ಯಾ-
ಶೋರ್ಮಿಮದವರ್ಜಿತ ವಿನಿರ್ಮಿತಜಗತ್ರಯ ಸು-
ಶರ್ಮದ ಮಹಾಭಸಿತವರ್ಮಕಲಿತಾಂಗಾ
ಕೂರ್ಮಮದಮರ್ದಿ ಗಜಚರ್ಮಧರಭಕ್ತವರ
ನಿರ್ಮದಜನಾಂಬುರುಹಘರ್ಮಕರಲೀಲಾ
ನಿರ್ಮದಿತಮಾರ ಪೊರೆ ಗೀರ್ಮಧುರ ಪಾದಜಿತ-
ದುರ್ಮತ ಮಹೇಶ್ವರಸಧರ್ಮ ಬಸವೇಶಾ ೫೯

ಶ್ರೀದಸಹಖೇಲನವಿನೋದ ಗುಣರತ್ನವಿಸ-
ರೋದಧಿ ಮಹೇಶಕೃತಮೋದ ತತಮಾಯಾ-
ನೋದನ ಸುರೇಂದ್ರನತಪಾದಸರಸೀಜ ಕೃತ-
ವೇದ ಜಗತೀನುತಶುಭೋದಯಚರಿತ್ರಾ

ಮಹಿಮಾಶಾಲಿಯಾದ ಬಸವೇಶ್ವರನೇ, (ನನ್ನನ್ನು ರಕ್ಷಿಸು). ೫೯. ಮೇರು ಪರ್ವತವೇ ಮನೆಯಾಗಿವುಳ್ಳ, ಯಜುರ್ವೇದದ ಮಂತ್ರ (ಮನು)ದಿಂದ ಹೊಗಳಿಸಿಕೊಳ್ಳಲ್ಪಟ್ಟ, ದೇವತೆಗಳಿಂದ ಪೂಜಿಸಿಕೊಳ್ಳುವ, ವಿಶೇಷವಾದ ಸತ್ಕರ್ಮಗಳನ್ನು ಮಾಡುವ ಋಷಿಗಳಿಂದ ನಮಸ್ಕರಿಸಿಕೊಳ್ಳುವುದಕ್ಕೆ ಯೋಗ್ಯನಾದ (ಅಥವಾ ಕರ್ಮಗಳ ಜಂಜಡದಿಂದ ದೂರರಾದ ಋಷಿಗಳಿಂದ ನಮಸ್ಕರಿಸಿಕೊಳ್ಳಲು ಯೋಗ್ಯನಾದ), ಆಶೆ, ಕ್ಷುತ್ಪಿಪಾಸಾದಿ ಷಡೂರ್ಮಿ, ಅಷ್ಟಮದ ಇವುಗಳಿಂದ ದೂರನಾದ, ಮೂರು ಲೋಕಗಳನ್ನು ಸೃಷ್ಟಿಸಿದ ಶ್ರೇಷ್ಠವಾದ ಸೌಖ್ಯವನ್ನು ಕೊಡುವಂತಹ, ಶ್ರೇಷ್ಠವಾದ ಭಸ್ಮಧಾರಣೆಯಿಂದ ಕೂಡಿದ ದೇಹವುಳ್ಳ, ಕೂರ್ಮಾವತಾರ ಮಾಡಿದ ವಿಷ್ಣುವಿನ ಮದವನ್ನು ನಾಶಗೊಳಿಸಿದ, ಗಜಾಸುರನ ಚರ್ಮವನ್ನು ಧಾರಣ ಮಾಡಿದ ಶಿವನ ಶ್ರೇಷ್ಠಭಕ್ತನಾದ, ಮದದಿಂದ ದೂರರಾದ ಜನಗಳೆಂಬ ಕಮಲಗಳಿಗೆ ಉಗ್ರಕಿರಣನಾದ ಸೂರ್ಯನಂತೆ ಲೀಲೆಯುಳ್ಳ, ಮದಿಸಿದ ಮಾರನನ್ನು ನಿವಾರಿಸಿದ, ಮಧುರವಾದ ಮಾತುಳ್ಳ, ದುರ್ಮತಗಳನ್ನು ಪಾದದಲ್ಲಿ ಜಯಿಸಿದ ಪರಮೇಶ್ವರನ ಸದ್ಧರ್ಮ ಸ್ವರೂಪನಾದ ಬಸವೇಶ್ವರನೇ. ನನ್ನನ್ನು ರಕ್ಷಿಸು. ೬೦. ಕುಬೇರನ ಒಡನಾಟದಲ್ಲಿ ವಿನೋದಗೊಳ್ಳುವ, ಸದ್ಗುಣಗಳೆಂಬ ರತ್ನಗಳ ಸಮೂಹಕ್ಕೆ ಸಮುದ್ರನಾದ, ಈಶ್ವರನಿಗೆ ಸಂತೋಷವನ್ನುಂಟು ಮಾಡುವ, ವಿಸ್ತಾರವಾದ ಮಾಯೆಯನ್ನು ಹೋಗಲಾಡಿಸಿದ, ದೇವೇಂದ್ರನಿಂದ ನಮಸ್ಕಾರಗೊಳಿಸಿಕೊಳ್ಳಲ್ಪಟ್ಟ ಪಾದಕಮಲಗಳುಳ್ಳ, ವೇದಗಳನ್ನು ಉಸುರಿದ (ಮಾತಿನಿಂದ ವೇದಗಳನ್ನು ಉಂಟುಮಾಡಿದ) ಲೋಕದ ಜನಗಳಿಂದ ಸ್ತೋತ್ರಮಾಡಿಸಿಕೊಳ್ಳುವ, ಮಂಗಳಗಳನ್ನುಂಟುಮಾಡುವ ಸಚ್ಚರಿತ್ರೆಯುಳ್ಳ, ವ್ಯಾಪಕವಾದ ಸದ್ಗುಣಗಳಿಗೆ ಆಶ್ರಯನಾದ, ಶಿಲಾದ ಮಹರ್ಷಿಗೆ ಮಗನಾದ, ಸತತವೂ ಉತ್ಸವದ ಆಧಿಕ್ಯ

ಮೋದುರಗುಣಾಕರ ಶಿಲಾದಸುತಸಂತತಮು-
ಹೋದಯು ಪರಾಸ್ತಪರವಾದ ಗಣಪರ್ಯಾ-
ಹ್ಲಾದಕರ ರಕ್ಷಿಸಘಕಾದಳಗಜೇಂದ್ರ ಭುವ-
ನೋದರ ಲಸತ್ಪ್ರಣವನಾದ ಬಸವೇಶಾ

ವುಳ್ಳ (ಅಧಿಕ ಉತ್ಸವದಿಂದ ಸದಾ ಕೂಡಿರುವ) ಪರಧರ್ಮದ ವಾದವನ್ನು ನಾಶಗೊಳಿಸಿದ, ಶಿವಗಣಗಳಿಗೆ ಸಂತೋಷವನ್ನುಂಟು ಮಾಡುವ, ಪಾಪವೆಂಬ ಬಾಳೆಯ ವನಕ್ಕೆ ಮಹಾಗಜದಂತಿರುವ, ಭುವನಗಳನ್ನೆಲ್ಲ ಗರ್ಭದಲ್ಲಿ ಧರಿಸಿರುವ, ಶೋಭಿಸುವ ಓಂಕಾರನಾದ ಸ್ವರೂಪನಾದ ಬಸವೇಶ್ವರನೇ ರಕ್ಷಿಸು.

೨

# ಇತರವೃತ್ತಗಳು

ಪರಮೇಶಪ್ರೇಮಧಾಮಂ ಪ್ರಮಥಪರಿಷದಾನಂದದುಗ್ಧಾಬ್ಧಿಚಂದ್ರಂ
ತರುಣಾದಿತ್ಯಪ್ರಕಾಶಂ ತತಕುಮತಮದೇಭೇಂದ್ರಕಂಠೀರವಂ ಭಾ
ಸುರಭದ್ರಾಕಾರಸಾರಂ ಭವಭಯಹರಣಂ ಭಕ್ತಿಭಾಮಾಮನೋಜ್ಞಂ
ಕರುಣಾಂಭೋರಾಶಿ ವಿಶ್ವಪ್ರಭು ವಿಭು ವಿಬುಧಸ್ತೋತ್ರಪಾತ್ರಂ ವೃಷೇಂದ್ರಂ ೧

ಸಕಳಸುಕಳಾಧಾರಂ ಧೀರಂ ಸುಭಾಷಣಭೂಷಣಂ
ಶಕಲಿತಕಲಿಧ್ವಾಂತಂ ಶಾಂತಂ ಭವಾಂಬುಧಿಕುಂಭಜಂ
ಪ್ರಕಟಿತಕೃಪಾಪಾಂಗಂ ತುಂಗಂ ಸ್ವಭಾವಶುಭಾವಹಂ
ನಿಕೃತವಿಕೃತಿವ್ರಾತಂ ಖ್ಯಾತಂ ವಿಮಾಯಮನಾಮಯಂ ೨

## (೨) ಇತರ ವೃತ್ತಗಳು

೧. ಶಿವನ ಪ್ರೀತಿಗೆ ಆಸ್ಪದನಾದವನೂ, ಪ್ರಮಥಗಣಂಗಳ ಸಮೂಹದ ಆನಂದವೆಂಬ ಕ್ಷೀರ ಸಮುದ್ರಕ್ಕೆ ಚಂದ್ರನಂತಿರುವವನೂ, ಬಾಲಸೂರ್ಯಪ್ರಕಾಶದಂತೆ ಕಾಂತಿಯುಳ್ಳವನೂ, ದುಷ್ಟಮತಗಳೆಂಬ ಮದದಿಂದ ಕೂಡಿದ ಆನೆಗೆ ಸಿಂಹಪ್ರಾಯನಾದವನೂ, ಪ್ರಕಾಶಿಸುವ ಮಂಗಳಕರ ಶ್ರೇಷ್ಠ ಆಕೃತಿಯುಳ್ಳವನೂ, ಜನನ ಮರಣಾತ್ಮಕ ಸಂಸಾರಭಯವನ್ನು ನಾಶಗೊಳಿಸುವವನೂ, ಶಿವ ಭಕ್ತಿಯೆಂಬ ಸ್ತ್ರೀಯಳಿಗೆ ಮನೋಹರಾಕಾರನಾಗಿ ಕಾಣುವವನೂ. ಕರುಣೆಗೆ ಸಮುದ್ರದೋಪಾದಿಯಲ್ಲಿರುವವನೂ. ವಿಶ್ವಕ್ಕೆಲ್ಲ ಪ್ರಭುವಾದವನೂ, ವಿದ್ವಾಂಸರು ಮಾಡುವ ಸ್ತೋತ್ರಕ್ಕೆ ಪಾತ್ರನೂ ಆದವನು ಬಸವೇಶ್ವರನೇ ! ೨. ಸಮಸ್ತ ಶ್ರೇಷ್ಠವಿದ್ಯೆಗಳಿಗೆಲ್ಲ ಆಶ್ರಯನಾದ, ಧೀರನಾದ, ಒಳ್ಳೆಯ ಮಾತನಾಡುವಿಕೆಯೇ ಭೂಷಣವಾಗಿವುಳ್ಳ, ಕಲಿಕಾಲವೆಂಬ ಕತ್ತಲೆಯನ್ನು ನಾಶಗೊಳಿಸಿದ (ಖಂಡಿಸಿದ), ಶಾಂತನಾದ, ಸಂಸಾರವೆಂಬ ಸಮುದ್ರಕ್ಕೆ ಅಗಸ್ತ್ಯನಂತಿರುವ, ಕೃಪೆಯಿಂದ ಕೂಡಿದ ಕಡೆಗಣ್ಣುಗಳ ನೋಟವನ್ನು ಪ್ರಕಟಿಸುವ. ಉನ್ನತ (ಎತ್ತರ ಮಟ್ಟದ) ನಾದ. ಮಂಗಳವನ್ನುಂಟು ಮಾಡುವ ಸ್ವಭಾವವುಳ್ಳ. ದುಷ್ಟ (ಶಠ) ರುಗಳ ಸಮೂಹವನ್ನು ಭಯಗೊಳಿಸಿದ, (ಲೋಕ) ಪ್ರಸಿದ್ಧನಾದ, ಮಾಯಾರಹಿತ

ಪುಷ್ಕರಪುಷ್ಪಮಸ್ತಕಪದಾಂಬುಜಭೃಂಗನನಂತತತ್ತ್ವಕಾ
ವಿಷ್ಕರಣಪ್ರಮಾಣಪರಿಭಾಷಣನಾನತಲೋಕಸಂಕುಳಾ
ಯುಷ್ಕರಣಪ್ರವೀಣನನವದ್ಯಚರಿತ್ರನಮೋಘವಿಕ್ರಮಂ
ದುಷ್ಕರವಾದವಾದಿವನದಾವನಮಾಯನಮೇಯವೈಭವಂ ೩

ಅಕಳಂಕಂ ಗುರುಲಿಂಗಜಂಗಮಪದಾಂಭೋಜಾತಪೂಜಾಸಮು
ತ್ಸುಕನನ್ಯಾಧ್ವತಮಃಪ್ರಚಂಡಕರನಂಭೋರಾಶಿಗಂಭೀರನು
ದ್ಧಕಳಾಭಿಜ್ಞನಭಂಗತುಂಗಯಶನುದ್ಯದ್ಭಕ್ತಿಭಾಮಾಲಸ
ನ್ಮುಕುರಂ ಶ್ರೀವೃಷಭೇಂದ್ರನೀಗೆಮಗಮಂದಾನಂದಸಂದೋಹಮಂ ೪

ಶಿವಮಯಕಾಯ ಭವ್ಯಮಹಿಮಾಂಗ ನಿಮಾಯ ಯಮೀಶಗಮ್ಯ ಶಂ
ಭವಸುಗಮಾಸಮಾಗಮಕುಶೇಶಯಹಂಸ ಖಗೇಶವಾಹವಾ

ನಾದ, ಭವರೋಗರಹಿತನಾದ (ವೃಷಭೇಂದ್ರನೇ !) ೩. ಆಕಾಶದಲ್ಲಿರುವ ನೀರೇ (ಪುಷ್ಪ) ಮಸ್ತಕದಲ್ಲುಳ್ಳ ಶಿವನ ಪಾದಕಮಲದಲ್ಲಿ ಭೃಂಗದೋಪಾದಿಯಲ್ಲಿರುವ, ಅಪಾರವಾದ ಶಿವತತ್ತ್ವಾರ್ಥವನ್ನು ವಿಸ್ತಾರಪಡಿಸಲು ಆಧಾರ ಪೂರ್ವಕವಾಗಿ ಮಾತುಗಳನ್ನಾಡುವ, ನಮಸ್ಕರಿಸಲ್ಪಡುವ ಜನಗಳ ಸಮೂಹಕ್ಕೆ ದೀರ್ಘವಾದ ಆಯುರಭಿವೃದ್ಧಿಪಡಿಸುವುದರಲ್ಲಿ ಸಮರ್ಥನಾದ, ನಿರ್ದುಷ್ಟವಾದ ನಡೆವಳಿಕೆಯುಳ್ಳ, ವ್ಯರ್ಥವಾಗದೆಯಿರುವ ಪರಾಕ್ರಮವನ್ನುಳ್ಳ, ಅಸಾಧ್ಯವಾದ ಅನ್ಯಮತವಾದಿಗಳ ವಾದವೆಂಬ ಕಾಡಿಗೆ ಕಾಳ್ಗಿಚ್ಚಿನಂತಿರುವ, ಎಣಿಸಲಸಾಧ್ಯವಾದ ವೈಭವವನ್ನುಳ್ಳ (ಬಸವೇಶ್ವರನೇ !) ೪. ಕಲಂಕರಹಿತನಾದ, ಗುರುಲಿಂಗ ಜಂಗಮದ ಪಾದಕಮಲಗಳ ಪೂಜೆಯಲ್ಲಿ ಅತ್ಯಂತ ಸಂತೋಷವುಳ್ಳವನಾದ, ಅನ್ಯಮತಗಳ ಮಾರ್ಗವೆಂಬ ಕತ್ತಲೆಗೆ ಸೂರ್ಯನಾದ, ಸಮುದ್ರದಂತೆ ಗಂಭೀರನಾದ, ಉತ್ಕೃಷ್ಟವಾದ (ಲಿಂಗಾಂಗ ಸಂಯೋಗ ಸಂಬಂಧದ) ವಿದ್ಯೆಯನ್ನು ತಿಳಿದ, ಅವಿಚ್ಛಿನ್ನವಾದ ಉತ್ಕೃಷ್ಟ ಯಶಸ್ಸಿನಿಂದ ಕೂಡಿದ, ಉತ್ಕೃಷ್ಟಳಾದ ಶಿವಭಕ್ತಿಯೆಂಬ ಸ್ತ್ರೀಯಳು ತನ್ನನ್ನು ನೋಡಿಕೊಳ್ಳುವ ಕನ್ನಡಿಯಾದ ಮಂಗಳಕರನಾದ ಬಸವೇಶ್ವರನು ಅಧಿಕವಾದ ಆನಂದ ಸಮೂಹವನ್ನು ನಮಗೆ ಕೊಡಲಿ. ೫. ಮಂಗಳ ಸ್ವರೂಪವಾದ ದೇಹವುಳ್ಳ, ಉತ್ಕೃಷ್ಟವಾದ ಮಹಿಮೆಗಳಿಂದ ಕೂಡಿದ ಅವಯವವುಳ್ಳ ಮಾಯಾರಹಿತವಾದ, ಋಷಿಶ್ರೇಷ್ಠರಿಂದ ಪಡೆಯಲಿಕ್ಕೆ (ತಿಳಿಯಲಿಕ್ಕೆ) ಶಕ್ಯನಾದ, ಶಂಭುವಿನ ಭಕ್ತಜನರಿಗೆ ಸುಖವಾಗಿ ಹೊಂದಲು ಶಕ್ಯನಾದ, ಅಸದೃಶ, (ಅನುಪಮ) ವಾದ ಆಗಮಗಳೆಂಬ ಕಮಲಗಳಿಗೆ ಸೂರ್ಯ (ಹಂಸ)ನೆನಿಸಿದ, ವಿಷ್ಣು ದೇವೇಂದ್ರಾದಿ ಪ್ರಮುಖ ದೇವತೆಗಳಿಂದ ಧ್ಯಾನಿಸಲ್ಪಡುವುದಕ್ಕೆ ಯೋಗ್ಯನಾದ, ಪ್ರಪಂಚಕ್ಕೆ ಸ್ವಾಮಿಯಾದ, ಮನ್ಮಥನನ್ನು ನಾಶಗೊಳಿಸಿದ ಸಾಹಸವೇ ಚಿಹ್ನೆಯಾಗುಳ್ಳ, ಶಿವನಲ್ಲಿ ಅಧೀನವಾದ ಭಾವವುಳ್ಳ (ಶಿವಭಾವಾಪನ್ನಮನಸ್ಕನಾದ), ಮಂಗಳವನ್ನುಂಟುಮಾಡುವಮಾತುಗಳ ಸೌಂದರ್ಯವುಳ್ಳ ಬಸವೇಶ್ವರನೇ (ನನ್ನನ್ನು) ರಕ್ಷಿಸು. [ಈ ಚಂಪಕಮಾಲಾ ವೃತ್ತವು

ಸವಮುಖಭಾವ್ಯ ವಿಶ್ವವಿಭು ಭವಭಸಾಪಹ ಸಾಹಸಾಂಕ ಶಂ
ಭುವಶಗಭಾವ ಪಾಹಿ ಬಸವೇಶ ಶುಭಾವಹವಾಕ್ಯವೈಭವಾ ೫

ಜಯ ಜಯ ಕಾಲಕಾಲ ತತವಿಭ್ರಮ ವಿಭ್ರಮಭಾನುಭಾನು ಚಿ
ನ್ಮಯ ಮಯವಂದ್ಯ ವಂದ್ಯಪದನೀರಜ ನೀರಜ ಧೀರ ಧೀರ ಸ
ನ್ನಯನಯನಾನ್ವಿತಾನ್ವಿತನಿರಂಜನ ರಂಜನಸತ್ವ ಸತ್ವಗಾ
ಶಯಶಯ ಭಾಗ್ಯಭಾಗ್ಯಜನನಂದಿತ ನಂದಿತನು ಪ್ರಭುಪ್ರಿಯಾ ೬

ಸುರವರದಾನವೇನಪರಿಪೂಜಿತ ರಾಜಿತಲಿಂಗಸಂಗ ಬಂ
ಧುರ ನಿರಪೇಕ್ಷ ಮೋಕ್ಷಕೃದಪಾಂಗ ಕೃಪಾಂಗ ಕರಾಲಕಾಲಸಂ
ಹರ ನಿರಪಾಯಕಾಯ ಗುಣಮಂಡಿತ ಪಂಡಿತನುತ್ಯ ಸತ್ಯಸಂ
ಗರ ಪೊರೆಯೆನ್ನನುನ್ನತವಿತಂದ್ರಗಣೇಂದ್ರ ವೃಷೇಂದ್ರ ಸಂತತಂ ೭

ಅಚಲಜಿಹ್ವಾವೃತ್ತ?' ವೆಂಬ ಚಿತ್ರಕಾವ್ಯ; ನಾಲಿಗೆಯನ್ನು ಅಲ್ಲಾಡಿಸದ ಹಾಗೆ ಈ ವೃತ್ತವನ್ನು ಅನ್ನುವುದಕ್ಕೆ ಸಾಧ್ಯ. ಇದರಲ್ಲಿ ಮೂರ್ಧನ್ಯಾಕ್ಷರಗಳಿಲ್ಲ. ಮೂರ್ಧನ್ಯಗಳೆಂದರೆ ಋ, ಟವರ್ಗ, ರ, ಷ ಈ ಅಕ್ಷರಗಳಿಲ್ಲದಂತೆ ಈ ಪದ್ಯ ರಚಿಸಲಾಗಿದೆ.] ೬. ಯಮನಿಗೂ ಯಮನಾದ, ವಿಸ್ತಾರ (ವಿಶೇಷ)ವಾದ ವಿಲಾಸ (ವಿಭ್ರಮ)ವುಳ್ಳ, ಭ್ರಾಂತಿರಹಿತನಾದ [ಅಥವಾ ಅಂತರಿಕ್ಷದಲ್ಲಿ (ವಿ). ಸುತ್ತುತ್ತಿರುವ (ಭ್ರಮ)], ಸೂರ್ಯನ ಕಾಂತಿಯಂತೆ ಕಾಂತಿಯುಳ್ಳ, ಜ್ಞಾನಸ್ವರೂಪನಾದ. ಮಯನೆಂಬ ರಾಕ್ಷಸ ಶಿಲ್ಪಿಯಿಂದ ನಮಸ್ಕರಿಸಲ್ಪಡುವುದಕ್ಕೆ ಯೋಗ್ಯನಾದ. ನಮಸ್ಕಾರಮಾಡಿಸಿಕೊಳ್ಳುವುದಕ್ಕೆ ಯೋಗ್ಯವಾದ ಪಾದಕಮಲಗಳುಳ್ಳ, ರಜೋಗುಣರಹಿತನಾದ, ಧೀರರಿಗೆಲ್ಲ ಧೀರನಾದ. ಸಮೀಚೀನವಾದ ನ್ಯಾಯದಿಂದ ಕೂಡಿದ ದೃಷ್ಟಿ (ನಯನ)ಯಿಂದ ಕೂಡಿದ. ತನ್ನ ಧರ್ಮವನ್ನನುಸರಿಸುವ ಮಾಯಾರಹಿತರಾದ ಶರಣರನ್ನು ಸಂತೋಷ(ಅನುರಾಗ) ಗೊಳಿಸುವ ಸ್ವಭಾವವುಳ್ಳ, ಶಾಂತಿ ಸ್ವಭಾವ (ಗುಣ)ವನ್ನು ಹೊಂದಿದ ಋಷಿಗಳ ಮನಸ್ಸಿನಲ್ಲಿ ಮಲಗುವ (ಹೊಂದಿಕೊಂಡಿರುವ), ಒಳ್ಳೆಯ ಭಾಗ್ಯವನ್ನು ಹೊಂದಿರುವ (ಭಾಕ್) ಜನಗಳ ಪೂಜೆ (ಯಜನ) ಯಿಂದ ಸಂತೋಷಗೊಳ್ಳುವ ಶ್ರೇಷ್ಠನಾದ ಅಲ್ಲಮಪ್ರಭುವನ್ನು ಸಂತೋಷಗೊಳಿಸುವುದರ ಮೂಲಕ (ಅವನಿಗೆ) ಪ್ರಿಯನೆನಿಸಿದ ಬಸವೇಶನೇ ಜಯ ಜಯ ೭. ದೇವಶ್ರೇಷ್ಠರು (ಅಥವಾ ದೇವೇಂದ್ರ), ದಾನವ ಶ್ರೇಷ್ಠರು (ರಾಕ್ಷಸರಲ್ಲಿ ಶ್ರೇಷ್ಠರಾದವರು) ಗಳಿಂದ ಚೆನ್ನಾಗಿ ಪೂಜಿಸಲ್ಪಟ್ಟ. ಪ್ರಕಾಶಿಸುವ ಶಿವಲಿಂಗ ಸಂಬಂಧದಿಂದ ಮನೋಹರನಾದ, ಆಶಾರಹಿತರಾದವರುಗಳಿಗೆ ಮೋಕ್ಷವನ್ನುಂಟುಮಾಡುವ ಕಡೆಗಣ್ಣಿನ ನೋಟವುಳ್ಳ, ದಯೆಯೇ ಅವಯವವಾಗಿವುಳ್ಳ. ಭಯಂಕರನಾದ ಯಮನನ್ನು ನಾಶಗೊಳಿಸಿದ, ಹಾನಿಯಿಲ್ಲದ ದೇಹವುಳ್ಳ, ಸದ್ಗುಣಗಳಿಂದ ಅಲಂಕಾರಗೊಂಡ ವಿದ್ವಾಂಸರುಗಳಿಂದ ಹೊಗಳಿಸಿಕೊಳ್ಳಲು ಯೋಗ್ಯನಾದ, ದೃಢವಾದ ಪ್ರತಿಜ್ಞೆಯನ್ನುಳ್ಳ, ಉನ್ನತವಾದ ಜಾಗರೂಕತೆಯಿಂದ ಸದಾ) (ಕೂಡಿದ, ಶಿವಗಣ ಶ್ರೇಷ್ಠನಾದ ಬಸವೇಶ್ವರನೇ

ನೀನೆ ಗುರು ನೀನೆ ಲಿಂಗಂ
ನೀನೆ ಚರಂ ನೀನೆ ಮಾತೆ ನೀನೆ ಪಿತಂ ಕೇ
ಳ್ನೀನೆ ಗತಿ ನೀನೆ ಮತಿ ಪತಿ
ನೀನೆ ಸಮಂತೆನಗೆ ಬಸವ ಪಾಲಿಪುದೆನ್ನಂ ೮

ಕ್ಷಿತಿರೇಣುವದಗಣಿತಭವ
ತತಿಯೊಳ್ಸಲೆ ಬಂದು ನೊಂದೆನಿನ್ನಾದೊಡಮು
ನ್ನತಕೃಪೆಯಿಂ ಭವಬಂಧ
ಸ್ಥಿತಿಯಂ ಪಱಿದೆನ್ನ ಪೊರೆ ಕೃಪಾನಿಧಿ ಬಸವಾ ೯

ಮಾಡದ ಪಾಪಮಿಲ್ಲ ಮನಮಂಟದ ಮಾರವಿಕಾರಮಿಲ್ಲ ಕೂ
ರ್ತಾಡದ ನಿಂದೆಯಿಲ್ಲ ಕೊಱಚಾಡದ ಸಜ್ಜನರಿಲ್ಲ ವಾಂಛೆಯಿಂ
ಬೇಡದ ವಸ್ತುವಿಲ್ಲ ಬಱಿದಾಗದ ಮಾನಮದಿಲ್ಲ ದೇವ ನೀಂ
ನೋಡದಿರೆನ್ನ ದುರ್ಗುಣಶತಂಗಳನಯ್ಯ ವೃಷಾಧಿನಾಯಕಾ ೧೦

ಕ್ರಿಯೆಯೊಳ್ಚರ್ಯೆಯೊಳೀಶ್ವರಾನುಗತಯೋಗಜ್ಞಾನಮಾರ್ಗಂಗಳೊಳ್
ನಿಯಮಂದಪ್ಪದ ಮಾಳ್ಕೆಯಿಂ ಚರಿಸಲುದ್ಯದ್ಭಕ್ತಿವೈರಾಗ್ಯನಿ
ರ್ಣಯದೊಳ್ವರ್ತಿಸಲೆಂತುಮಾಱದ ಜಡಾತ್ಮಂ ನೋಳ್ಪೊಡಾನೇ ಗುಣಾ
ಶ್ರಯ ನಿನ್ನಂ ಮಱಿವೊಕ್ಕೆನಯ್ಯ ಪೊರೆ ನೀನೆನ್ನಂ ವೃಷಾಧೀಶ್ವರಾ ೧೧

ಸತತವೂ ನನ್ನನ್ನು ಸಂರಕ್ಷಿಸು. ೮. ಬಸವೇಶ್ವರನೇ ನನಗೆ ನೀನೇ ಗುರು, ನೀನೇ ಲಿಂಗ ನೀನೇ ಜಂಗಮ, ನೀನೇ ತಂದೆ, ನೀನೇ ತಾಯಿ, ಕೇಳು : ನೀನೇಗತಿ, ನೀನೇಮತಿ, ನೀನೇ ಪತಿ. ನನ್ನನ್ನು ಚೆನ್ನಾಗಿ ನೀನು ನನ್ನನ್ನು ರಕ್ಷಿಸುವವನಾಗು. ೯. ಕೃಪಾನಿಧಿಯಾದ ಬಸವೇಶ್ವರನೇ, ಭೂಮಿಯಲ್ಲಿರುವ ರೇಣು, (ಕಣ)ಗಳಹಾಗೆ ಅಸಂಖ್ಯಾತವಾದ ಜನ್ಮ (ಜನನ)ಗಳ ಸಮುದಾಯದಲ್ಲಿ ಜನಿಸಿ ಬಂದು ನೊಂದಿದ್ದೇನೆ. ಇನ್ನಾದರೂ ಶ್ರೇಷ್ಠವಾದ ಕೃಪೆಯಿಂದ ನನ್ನ ಈ ಜನನ ಮರಣಾತ್ಮಕವಾದ ಬಂಧನವನ್ನು ಕತ್ತರಿಸಿಹಾಕಿ, ರಕ್ಷಿಸು ವವನಾಗು. ೧೦. ನಾನು ಮಾಡದೆ ಇರುವ ಪಾಪವಿಲ್ಲ; ಮನಸ್ಸಿನಲ್ಲಿ ಅಂಟದೆಯಿರುವ ಮನ್ಮಥ ಸಂಬಂಧವಾದ ವಿಕಾರವಿಲ್ಲ. ಪ್ರೀತಿಯಿಂದ ಆಡದೆಯಿರುವ ಪರದೂಷಣೆಯೇ ಇಲ್ಲ; ಹಾಸ್ಯ (ಪರಿಹಾಸ) ಮಾಡದೆಯಿರುವ ಸಜ್ಜನರೇ ಇಲ್ಲ; ಆಸೆಪಟ್ಟು ಬೇಡದೆ ಯಿರುವ ವಸ್ತುವೇ ಇಲ್ಲ; ನಾಶವಾಗದೆಯಿರುವ ಮಾನವೇ ಇಲ್ಲ (ಆಗದೆಯಿರುವ ಮಾನಹಾನಿಯೇ ಇಲ್ಲ) ಹೇ ದೇವ, ವೃಷಾಧಿನಾಯಕನೇ, ಅಯ್ಯ, ನನ್ನ ಈ ನೂರಾರು ದುರ್ಗುಣಗಳನ್ನು ಎಣಿಸಬೇಡ (ನೋಡಬೇಡ). ೧೧. ಬಸವೇಶ್ವರನೇ, ಕ್ರಿಯಾ ಚಾರದಲ್ಲಿ, ನಡತೆಯಲ್ಲಿ, ಈಶ್ವರನನ್ನಸರಿಸಿದ ಶಿವ ಯೋಗಜ್ಞಾನ ಮಾರ್ಗಗಳಲ್ಲಿ, ನಿಯಮವನ್ನು ತಪ್ಪದ ರೀತಿಯಲ್ಲಿ ನಡೆಯುವುದಕ್ಕೆ, ಶ್ರೇಷ್ಠವಾದ ಭಕ್ತಿ, ವೈರಾಗ್ಯ ಮಾರ್ಗಗಳ ನಿರ್ಣಯದಲ್ಲಿ ವ್ಯವಹರಿಸುವುದಕ್ಕೆ ವಿಚಾರಮಾಡಿನೋಡಿದರೆ ಹೇಗೂ ಯೋಗ್ಯನಲ್ಲದ (ಶಕ್ಯನಲ್ಲದ), ಅಜ್ಞಾನದಿಂದ ಕೂಡಿದವನು ನಾನು ಸಮರ್ಥನೇ ? ಸದ್ಗುಣಗಳಿಗೆ ಆಶ್ರಯನಾದ ನಿನ್ನನ್ನು ಮರೆಹೊಕ್ಕಿದ್ದೇನೆ ಅಯ್ಯಾ, ನೀನು ನನ್ನನ್ನು

ಖಲನಂ ಕಾಮುಕನಂ ಕದರ್ಯಪರನಂ ದುರ್ದಾಂತನಂ ಧೂರ್ತನಂ
ಕಲಹಾನಂದಿತನಂ ಕುಮಾರ್ಗರತನಂ ದುಃಪ್ಪಾತ್ಮನಂ ದುರ್ಮದಾ
ವಿಲನಂ ದುಃಖಸಮುದ್ರಮಧ್ಯಗತನು ಕಾರುಣ್ಯದಿಃದೆನ್ನನ
ಸ್ಖಲಿತಶ್ರೀಕರ ನೋಡಿ ರಕ್ಷಿಸು ನಿತಾಂತಂ ನೀಂ ವೃಪಾಧೀಶ್ವರಾ* ೧೨

ನಿನ್ನಯ ದಿವ್ಯಮೂರ್ತಿ ಬಿಡದೆನ್ನ ಮನೋಂಬುಜಮಧ್ಯದೊಳ್ಕರಂ
ನಿನ್ನಯ ದಿವ್ಯನಾಮಮುಮದೆನ್ನಯ ಸದ್ರಸನಾಗ್ರದಲ್ಲಿ ಕೇ
ಳ್ನಿನ್ನಯ ಭಕ್ತರಂಘ್ರಿಯುಗಮೆನ್ನಯ ಮಸ್ತಕದಲ್ಲಿ ಮಾಣದೆಂ
ದುನ್ನೆಲಸಿರ್ಪುದೊಂದು ವರಮಂ ಕುಡು ಬೇಳ್ಪೆನಿದಂ ವೃಪಾಧಿಪಾ ೧೩

ಬಸವ ಭವತ್ಪದಾಬ್ಜರಜಮೆನ್ನ ಲಲಾಟಲಲಾಮಮಾಗಿ ನಿ
ನ್ನಸಮಪದಂಗಳೆನ್ನೆದೆಗೊಳಂ ತಳೆದಂಬುಜಮಾಗಿ ನಿನ್ನ ರೂ
ಪೆಸೆವ ಮದೀಯ ಚಕ್ಷುಗಮೃತಾಂಜನಮಾಗಿ ಮದುತ್ತಮಾಂಗದೊ
ಳ್ಪಸರಿಸಿ ನಿಲ್ಕೆ ನಿನ್ನ ಪದಪಾದುಕೆ ಶೇಖರಮಾಗಿ ಸಂತತಂ ೧೪

ರಕ್ಷಿಸುವವನಾಗು. ೧೨. ದುಷ್ಟನೂ, ವಿಷಯಸುಖಾಭಿಲಾಷೆಯುಳ್ಳವನೂ, ಕೆಟ್ಟ ಧೈರ್ಯದಿಂದ ವರ್ತಿಸುವವನೂ, ಸೈರಣೆಯಿಲ್ಲದವನೂ, (ತಪದ ಬಾಧೆಯನ್ನು ಸೈರಿಸದವನೂ,) ವಂಚಕನೂ, ಜಗಳದಿಂದ ಸಂತೋಷಪಡುವವನೂ, ದುಷ್ಟಮಾರ್ಗನಿರತನೂ, ಕೆಟ್ಟಮನಸ್ಸುಳ್ಳವನೂ, ದುಷ್ಟಮದದಿಂದ ಕೂಡಿದವನೂ, ದುಃಖವೆಂಬ ಸಮುದ್ರ ಮಧ್ಯದಲ್ಲಿ ಮುಳುಗಿರುವವನೂ ಆದ ನನ್ನನ್ನು ಚಂಚಲವಾಗದಿರುವ (ಸ್ಥಿರವಾದ) ಸಂಪತ್ತನ್ನುಂಟುಮಾಡುವ ಹೇ ಬಸವೇಶ್ವರನೇ, ನೀನು ಅಧಿಕವಾದ ಕಾರುಣ್ಯದಿಂದ ನೋಡಿ ರಕ್ಷಿಸು. ೧೩. ಹೇ ಬಸವೇಶ್ವರನೇ, ನಿನ್ನ ಶ್ರೇಷ್ಠ ಮೂರ್ತಿಯು (ಆಕಾರವು) ತಪ್ಪದೆ ಎನ್ನ ಮನಸ್ಸೆಂಬ ಕಮಲ ಮಧ್ಯದಲ್ಲಿ ಚೆನ್ನಾಗಿ ನೆಲಸಲಿ ; ನಿನ್ನ ಶ್ರೇಷ್ಠವಾದ ಹೆಸರು ಅಗಲದಂತೆ ನನ್ನ ನಾಲಗೆಯ ತುದಿಯಲ್ಲಿ ನೆಲಸಲಿ; ನಿನ್ನ ಭಕ್ತರುಗಳ ಪಾದದ್ವಯವು ನನ್ನ ತಲೆಯ ಮೇಲೆ ತಪ್ಪದೆ ಯಾವಾಗಲೂ ನೆಲಸಲಿ. ಈ ಒಂದು ವರವನ್ನು ಬೇಡುತ್ತಿದ್ದೇನೆ. ಇದನ್ನು ನನಗೆ ಕೊಡು. ೧೪. ಹೇ ಬಸವೇಶ್ವರನೇ, ನಿನ್ನ ಪಾದಕಮಲಗಳ ಧೂಳಿ (ರಜ)ಯು ನನ್ನ ಹಣೆಯ ತಿಲಕವಾಗಿ, ನಿನ್ನ ಅನುಪಮವಾದ ಪಾದಗಳು ನನ್ನ ಹೃದಯವೆಂಬ ಸರೋವರವು ಧರಿಸಿರುವ ಕಮಲಗಳಾಗಿ, ನಿನ್ನ ರೂಪವು ಶೋಭಿಸುವ ನನ್ನ ಕಣ್ಣುಗಳಿಗೆ ಅಮೃತದಿಂದ ಮಾಡಿದ ಕಾಡಿಗೆಯಾಗಿ (ಕಣ್ಣ ಕಪ್ಪಾಗಿ), ನಿನ್ನ ಕಾಲ ಅವುಗೆಗಳು (ಅಥವಾಕೆರ್ಪುಗಳು) ನನ್ನ ಶಿರಸ್ಸಿನ ಮೇಲೆ ಪ್ರಕಟ

* ಆ ಪ್ರತಿಯಲ್ಲಿ ಈ ಪದ್ಯವಿಲ್ಲ.

ಪರಮ ಕೃಪಾಸಮುದ್ರ ಸತತಂ ಶರಣಾಗತವಜ್ರಪಂಜರ
ಸ್ಥಿರಬಿರುದಾಂಕ ಘೋರಭವದುಃಖದ ಕೋಟಲೆಗಳ್ಕಿ ಬಂದು ನಿ
ನ್ನುರುತರಪಾದಪದ್ಮಯುಗಮಂ ಮಱೆವೊಕ್ಕೆನುದಾರವೃತ್ತಿಯಿಂ
ಪೊರೆ ಭವಬಂಧಮಂ ಪಱಿದು ನಲ್ಮೆಯೊಳೆನ್ನ ವೃಷಾಧಿನಾಯಕಾ ೧೫

ತಱಿಸಂದಜ್ಞಾನದಿಂದಾಂ ಬಿಡದೆ ನೆಗಳ್ದ ಸರ್ವಾಪರಾಧಂಗಳಂ ನೀಂ
ಮಱೆದೆನ್ನಂ ನಿನ್ನ ಕಾರುಣ್ಯಮನೆ ಮೆಱೆದು ರಕ್ಷಿಪ್ಪುದೆಲ್ಲಂದದಿಂ ಕ
ಟ್ಟೆಱಕಂಬೆತ್ತೀವುದುದ್ಯತ್ಪರಮಶಿವಪದಾಂಭೋಜಸದ್ಭಕ್ತಿಯೊಂದ
ಳ್ಕಱನೊಳ್ಪಿಂ ದೇವ ನೀನೊಲ್ದೆನಗೆ ಬಸವ ಭಕ್ತಾಬ್ಧಿಸಂಪೂರ್ಣಚಂದ್ರಾ ೧೬

ಆಶಾವಾರಿ ಸುತಾಚಳಾವಳಿ ಷಡೂರ್ಮ್ಯೂರ್ಮಿ ದ್ವಿಷದ್ಗ್ರಾಹ ಸಂ
ಕ್ಲೇಶಾವರ್ತ ಕಳತ್ರಸಿಂಧು ಕರಣೋದ್ಯನ್ಮೀನ ಸಂಸಾರವಾ
ರಾಶಿ ಪ್ರಚ್ಯುತನಾದೆನುದ್ಧರಿಸುಕುಂ ನೀಂ ರಕ್ಷಿಸೈ ಸತ್ಕೃಪಾ
ವೇಶ ತ್ವತ್ಪದನಾವೆಯಿಂ ಕೃಪಣನಾದೆನ್ನಂ ವೃಷಾಧೀಶ್ವರಾ ೧೭

ಗೊಂಡು ಶಿರೋಭೂಷಣಗಳೆನಿಸಿ ಸದಾಕಾಲ ನಿಲ್ಲಲಿ. ೧೫. ಶ್ರೇಷ್ಠವಾದ ಕೃಪೆಗೆ ಸಮುದ್ರದೋಪಾದಿಯಲ್ಲಿರುವ, ಸತತವೂ ಶರಣಾಗತರಾಗಿರುವವರಿಗೆ ವಜ್ರಪಂಜರದಂತಿರುವವನೆಂಬ ಶಾಶ್ವತವಾದ ಬಿರುದನ್ನು ಹೊಂದಿರುವ ಹೇ ಬಸವೇಶ್ವರನೇ, ಭಯಂಕರವಾದ ದುಃಖದ ಬಾಧೆಗೆ ಹೆದರಿಬಂದು, ನಿನ್ನ ಪವಿತ್ರವಾದ ಪಾದಕಮಲದ್ವಯವನ್ನು ಮರೆಹೊಕ್ಕಿದ್ದೇನೆ. ಪ್ರೀತಿಯಿಂದ ನನ್ನ ಈ ಭವ ಬಂಧನವನ್ನು ಕತ್ತರಿಸಿ ಹಾಕಿ, ಉದಾರ ವೃತ್ತಿಯಿಂದ ಸಂರಕ್ಷಿಸು. ೧೬. ಶಿವಭಕ್ತರೆಂಬ ಸಮುದ್ರಕ್ಕೆ ಹುಣ್ಣಿಮೆಯ ಚಂದ್ರನೋಪಾದಿಯಲ್ಲಿರುವ ಬಸವೇಶ್ವರನೇ, ಹೇ ದೇವ, ಉಂಟಾದ ಅಜ್ಞಾನದಿಂದ (ಅಜ್ಞಾನ ಕಾರಣದಿಂದುಂಟಾಗಿ) ನಾನು ತಪ್ಪದೆ ಮಾಡಿರುವ ಸಮಸ್ತ ಅಪರಾಧಗಳನ್ನು ನೀನು ಮರೆದು, ನಿನ್ನ ಕಾರುಣ್ಯವನ್ನು ಮೆರೆಯಿಸಿ (ಪ್ರಕಟಪಡಿಸಿ. ಅಥವಾ ವ್ಯಕ್ತಪಡಿಸಿ), ರಕ್ಷಿಸಬೇಕು. ಎಲ್ಲರೀತಿಯಿಂದಲೂ ವಿಶೇಷ ಪ್ರೀತಿಯನ್ನು ತೋರಿಸಿ, ನನ್ನ ಮೇಲೆ ಒಲುಮೆದೋರಿ, ಶ್ರೇಷ್ಠವಾದ ಪರಮೇಶ್ವರನ ಪಾದಕಮಲಗಳ ಭಕ್ತಿಯ ಒಂದು ಅಕ್ಕರೆಯನ್ನು ನನಗೆ ಕೊಡಬೇಕು. ೧೭. ಆಸೆಯೆಂಬ ನೀರನ್ನುಳ್ಳ, ಮಕ್ಕಳೆಂಬ ಪರ್ವತ ಸಾಲುಗಳುಳ್ಳ, ಕ್ಷುತ್ ಪಿಪಾಸೆಗಳೆಂಬ ತೆರೆಗಳುಳ್ಳ, ಕಾಮಕ್ರೋಧಾದಿ ಅರಿಷಡ್ವರ್ಗಗಳೆಂಬ ಮೊಸಳೆಗಳುಳ್ಳ ಪಂಚಕ್ಲೇಶಗಳೆಂಬ ಸುಳಿಗಳುಳ್ಳ, ಹೆಂಡತಿಯೆಂಬ ಹೊಳೆಯನ್ನುಳ್ಳ (ಹೊಳೆಯಿಂದ ಕೂಡಿದ), ಇಂದ್ರಿಯಗಳೆಂಬ (ಪಂಚೇಂದ್ರಿಯಗಳೆಂಬ) ದೊಡ್ಡ ಮೀನುಗಳನ್ನು (ಈ) ಸಂಸಾರವೆಂಬ ಸಮುದ್ರದಲ್ಲಿ ಜಾರಿಬಿದ್ದಿದ್ದೇನೆ. ಸತ್ಕೃಪೆಯ ಆವೇಶದಿಂದ ಕೂಡಿದ ಹೇ ಬಸವೇಶ್ವರನೇ, ಕಾರ್ಪಣ್ಯಭಾವದ ಇಂಥ ನನ್ನನ್ನು

ವಿತತಾಯುರ್ವೃದ್ಧಿಯುಂ ಸಿದ್ಧಿಯುಮನುಪಮಸೌಭಾಗ್ಯಮುಂ ಭೋಗ್ಯಮುಂ ಸಂ
ತತ ತೇಜಃಸ್ಫೂರ್ತಿಯುಂ ಕೀರ್ತಿಯುಮುರುತರಗಾಂಭೀರ್ಯಮುಂ ಧೈರ್ಯಮುಂ ವಿ
ಶ್ರುತಶಂಭುಧ್ಯಾನಮುಂ ಜ್ಞಾನಮುಮಭವಲಸದ್ಭಕ್ತಿಯುಂ ಯು[1]ಕ್ತಿಯುಂ ಶಾ
ಶ್ವತಪೂರ್ಣಾನಂದಮುಂ ಕುಂದದೆ ಕುಡು ಶರಣಶ್ರೇಣಿಗೆಂದುಂ ವೃಷೇಂದ್ರಾ ೧೮

ದುರಿತಘನೌಘಚಂಡಪವನಂ ಗ್ರಹಸರ್ಪಸುಪರ್ಣಮಾರ್ತಿಸಿಂ
ಧುರಹರಿ ದುರ್ಗದೋಗ್ರಗಿರಿವಜ್ರಮರಾತಿಸರೋಧಿಬಾಡಬಂ
ಪರಕೃತಕಕ್ಷಮಾರುಹಕುಠಾರಮಶೇಷವಿಷಾಬ್ಜಷಂಡಕುಂ
ಜರಮಿದು ಜಾಪಕರ್ಗೆ ಭವಕಕ್ಷದವಂ ಬಸವಾಕ್ಷರತ್ರಯಂ ೧೯

ವಿವಿಧವಿಪತ್ಕದಂಬಕುಜರಾಜಿಕುಠಾರಮರಾತಿಪಾತಭು
ಕ್ಪ್ರವಿಜಿತಮೋಘವಹ್ನಿ ಯಮದರ್ಪಚಯೋತ್ಪಲಚಂಡಭಾನು ದು
ರ್ಭವನಳಿನಪ್ರತಾನತುಹಿನಂ ದುರಿತೌಘಘನಪ್ರಭಂಜನಂ
ಭುವನದ ಸಜ್ಜನಾಳಿಗೆ ವೃಷೇಂದ್ರಪದಸ್ಮೃತಿ ಸರ್ವಸೌಖ್ಯದಂ ೨೦

ನಿನ್ನ ಪಾದಗಳೆಂಬ ಹಡಗಿನಿಂದ ಮೇಲಕ್ಕೆತ್ತಿ (ಉದ್ಧರಿಸಿ) ರಕ್ಷಿಸಯ್ಯ ! ೧೮. ವಿಸ್ತಾರವಾದ ಆಯುಷ್ಯದ ವೃದ್ಧಿಯನ್ನೂ, ಅನುಪಮ (ಅಸಮಾನ)ವಾದ ಸೌಭಾಗ್ಯವನ್ನೂ, ಐಶ್ವರ್ಯವನ್ನೂ ಲಿಂಗಭೋಗೋಪಭೋಗವನ್ನೂ, ಸತತವೂ ತೇಜಸ್ಸಿನ ಸ್ಫೂರ್ತಿಯನ್ನೂ, ಕೀರ್ತಿ(ಯಶಸ್ಸು)ಯನ್ನೂ, ಶ್ರೇಷ್ಠವಾದ ಗಂಭೀರ ಭಾವವನ್ನೂ, ಧೈರ್ಯವನ್ನೂ, ಪ್ರಖ್ಯಾತವಾದ ಶಂಭುವಿನ ಧ್ಯಾನವನ್ನೂ, ಶಿವಜ್ಞಾನವನ್ನೂ, ಪ್ರಕಾಶಿಸುವ ಪರಶಿವನ ಭಕ್ತಿಯನ್ನೂ, (ಸಕ್ರಿಯಾಚಾರದ) ಯುಕ್ತಿಯನ್ನೂ, ಶಾಶ್ವತವಾದ ಪರಿಪೂರ್ಣ ಆನಂದವನ್ನೂ (ಮುಕ್ತಿ ಸುಖವನ್ನೂ), ಕುಂದಿಲ್ಲದಂತೆ ಶರಣ ಜನಸಮೂಹಕ್ಕೆ ಯಾವಾಗಲೂ ಹೇ ಬಸವೇಶ್ವರನೇ ಕೊಡು. ೧೯. 'ಬಸವ' ಎಂಬ ಮೂರಕ್ಷರಗಳು ಪಾಪವೆಂಬ ಮೋಡಗಳ ಸಮೂಹಕ್ಕೆ ಬಿರುಗಾಳಿ; ಗ್ರಹ (ಪಿಶಾಚಿ)ವೆಂಬ ಹಾವಿಗೆ ಗರುಡಪಕ್ಷಿ, ಮನೋವ್ಯಥೆಯೆಂಬ ಆನೆಗೆ ಸಿಂಹ, ಕೆಟ್ಟರೋಗವೆಂಬ ಭಯಂಕರ ಪರ್ವತಕ್ಕೆ ವಜ್ರಾಯುಧ, ಶತ್ರುಗಳೆಂಬ ಸಮುದ್ರಕ್ಕೆ ಬಡಬಾಗ್ನಿ, ಅನ್ಯರಿಂದ (ಶತ್ರುಗಳಿಂದ) ಮಾಡಲ್ಪಟ್ಟ ಕುಟಿಲ ತಂತ್ರಗಳೆಂಬ ವೃಕ್ಷಕ್ಕೆ ಕೊಡಲಿ, ಸಮಸ್ತ ವಿಷಗಳೆಂಬ ಕಮಲಗಳ ಗುಂಪಿಗೆ ಆನೆ, ಜಪಿಸುವವರಿಗೆ ಪಾಪವೆಂಬ ಒಣಗಿದ ಕಟ್ಟಿಗೆಯ ವನಕ್ಕೆ ಕಾಡುಗಿಚ್ಚು (ಆಗಿದೆ). ೨೦. 'ಬಸವೇಶ್ವರನ ಪಾದ ಸ್ಮರಣೆಯು ಅನೇಕವಿಧವಾದ ಆಪತ್ತುಗಳ ಸಮೂಹವೆಂಬ ವೃಕ್ಷಗಳ ಸಾಲಿಗೆ ಕೊಡಲಿ. ಶತ್ರುಗಳೆಂಬ ಹಾವು (ಪಾತಭುಕ್)ಗಳನ್ನು ಜಯಿಸುವ ಸಿಡಿಲಬೆಂಕಿ, ಯಮನ ದರ್ಪಗಳ ಸಮೂಹವೆಂಬ ನೈದಿಲೆಗಳ ಗುಂಪಿಗೆ ಸಮರ್ಥನಾದ ಸೂರ್ಯ, ಕೆಟ್ಟಸಂಸಾರವೆಂಬ ಕಮಲಗಳ ಗುಂಪಿಗೆ ಹಿಮ. ಪಾಪಗಳ ಸಮೂಹವೆಂಬ ಮೋಡಗಳಿಗೆ ಬಿರುಗಾಳಿ. ಭೂಮಿಯ ಸಮಸ್ತ ಸಜ್ಜನ ಸಮೂಹಕ್ಕೆ

[1]ಮು (ಗ, ಚ, ಮು)

ಪ್ರಣವಾರ್ಥಂ ನೀನೆ ಸಚ್ಚಿತ್ಸುಖರಸಮಯನುಂ ನೀನೆ ಲೀಲಾಕಟಾಕ್ಷೇ
ಕ್ಷಣದಿಂ ಬ್ರಹ್ಮಾಂಡಮಂ ಮುಂಪಡೆದು ಪೊರೆವನುಂ ನೀನೆ ಸನ್ಮುಕ್ತಿಚಿಂತಾ
ಮಣಿರೂಪಂ ನೀನೆ ತತ್ವಾಳಿಗೆ ಮೊದಲಿಗ [ನು]ಂ ನೀನೆ ಮದ್ದೇಶಿಕೇಂದ್ರಾ
ಗ್ರಣಿಯುಂ ಕೇಳ್ನೀನೆಯೆನ್ನಂ ಪೊರೆ ಪೊರೆ ಸತತಂ ನಂಬಿದೆಂ ಶ್ರೀವೃಷೇಂದ್ರಾ ೨೧

ಕಲಿಕಾಲುಷ್ಯಕಠೋರಕಾನನಕುಠಾರಂ ಭಕ್ತಿಸಂಪತ್ತಿಮ
ದ್ವಿಲಸದ್ಭಾವಮಹಾನುಭಾವನಭವೋದ್ಯದ್ಧರ್ಮರೂಪಂ ಧರಾ
ಲಲನಾಪಾವನಕೃತ್ಪದಂ ಪರಮಶೈವಾಂಭೋಧಿಚಂದ್ರಂ ಕೃಪಾ
ಕಲಿತಂ ಶ್ರೀಬಸವೇಶ್ವರಂ ಪೊರೆಗೆ ಭಕ್ತವ್ರಾತಮಂ ಸಂತತಂ ೨೨

ಶಕವರ್ಷಂ ಸಾಸಿರಂ ಮೇಲಧಿಕಮೆನಿಸಿದೈನೂಱತೊಂಭತ್ತೆರಳ್ಸೀ
ವೆ ಕರಂ ಪೆಂಪಾಂತ ಸಾಧಾರಣದ ಮಿಸುಪ ವೈಶಾಖಶುದ್ಧತ್ರಯೋದ
ಶ್ಯಕಳಂಕಾದಿತ್ಯವಾರಂ ಬಸವಕೃತಿ ವಲಂ ಪೂರ್ಣಮಾದತ್ತು ಹಸ್ತ
ರ್ಕ್ಷಕದೊಳ್ವಜ್ರಾಖ್ಯಯೋಗಂ ಕರಣಮೆಸೆವಿನಂ ಕೌಲವಾಖ್ಯಾನಯುಕ್ತಂ ೨೩

ಸೌಖ್ಯವನ್ನು ಕೊಡುವಂತಹುದು. ೨೧. ಮಂಗಳಕರನಾದ ಬಸವೇಶ್ವರನೇ ಓಂಕಾರ ಪ್ರಣವವಾಚ್ಯನೂ ನೀನೇ; ಸತ್ತು, ಚಿತ್ತು, ಆನಂದಾತ್ಮಕನೂ ನೀನೇ; ಲೀಲೆಯಿಂದ ಕೂಡಿದ ಕಡೆಗಣ್ಣುಗಳ ನೋಟದಿಂದ ಬ್ರಹ್ಮಾಂಡವನ್ನು ಮೊದಲು ಸೃಷ್ಟಿಸಿ, ಅದನ್ನು ಸಂರಕ್ಷಿಸುವವನೂ ನೀನೇ; ಶ್ರೇಷ್ಠವಾದ ಮುಕ್ತಿಯನ್ನು ಕೊಡುವ ವಿಷಯದಲ್ಲಿ ಚಿಂತಾರತ್ನವೂ ನೀನೇ; ಶಿವತತ್ತ್ವ ಸಮೂಹಗಳ ಹುಟ್ಟಿಗೆ ಮೊದಲಿಗನು ನೀನೇ (ತತ್ತ್ವ ಮೂರ್ತಿಯೂ ನೀನೇ), ಕೇಳು : ನನ್ನ ಉತ್ತಮವಾದ ಗುರುಶ್ರೇಷ್ಠನೂ ನೀನೆ; ಸತತವೂ ನಿನ್ನನ್ನೇ ನಾನು ನಂಬಿದ್ದೇನೆ. ನನ್ನನ್ನು ರಕ್ಷಿಸು ! ರಕ್ಷಿಸು !! ೨೨. ಕಲಿಕಾಲದ (ಕಲಿಯುಗದ) ಪಾಪವೆಂಬ ಕ್ರೂರವಾದ (ಭಯಂಕರವಾದ) ಕಾಡಿಗೆ ಕುಠಾರ ಪ್ರಾಯನಾದ, ಶಿವಭಕ್ತಿಯ ಸಂಪತ್ತಿನಿಂದ ಪ್ರಕಾಶಿಸುವ ಭಾವದಿಂದ ಮಹಾನುಭಾವನೆನಿಸಿದ, ಉತ್ಕೃಷ್ಟ ಶಿವಭಕ್ತಿಸ್ವರೂಪನೇ ಆದ, ಭೂಮಿಯೆಂಬ ಕಾಂತೆಯನ್ನು ಪರಿಶುದ್ಧಗೊಳಿಸುವ ಪಾದಗಳುಳ್ಳ, ಉತ್ಕೃಷ್ಟವಾದ ಶಿವಸಂಬಂಧದ ಮತವೆಂಬ ವೀರಶೈವ ಮತದಂಬ) ಸಮುದ್ರಕ್ಕೆ ಚಂದ್ರನಾದ, ಕೃಪೆಯಿಂದ ತುಂಬಿದ ಬಸವೇಶ್ವರನು ಭಕ್ತ ಸಮೂಹವನ್ನು ಸತತವೂ ರಕ್ಷಿಸಲಿ. ೨೩. ಕೌಲವಾಖ್ಯಾನಯುಕ್ತವಾದ ಬಸವಕೃತಿಯು ಶಕವರುಷಸಾವಿರದ ಮೇಲೆ ಅಧಿಕವೆನಿಸಿದ ಐದುನೂರತೊಂಬತ್ತೆರಡು ತುಂಬಿದ ಶ್ರೇಷ್ಠಹಿರಿಮೆಯಿಂದ ಕೂಡಿದ ಸಾಧಾರಣಸಂವತ್ಸರದ ಶೋಭಿಸುವ ವೈಶಾಖಶುದ್ಧ ತ್ರಯೋದಶಿಯು (೧೫೯೨ನೆಯ ಶಕವರ್ಷ ಸಾಧಾರಣಸಂವತ್ಸರ ವೈಶಾಖಶುದ್ಧ ೧೩ನೆಯ ದಿನ) ಕಳಂಕರಹಿತವಾದ ಆದಿತ್ಯವಾರದಂದು, ಹಸ್ತನಕ್ಷತ್ರದಲ್ಲಿ ವಜ್ರವೆಂಬಹೆಸರಿನ ಯೋಗ ಕರಣಗಳು ಶೋಭಿಸುತ್ತಿರಲು ಸಮಾಪ್ತವಾಯಿತು.

# ಪರಿಶಿಷ್ಟ—೩

## ಬಸವರಾಜ ವಿಜಯದಲ್ಲಿ ಬಳಸಿರುವ ಗಾದೆಗಳು

[ಇಲ್ಲಿ ಮೊದಲ ಸಂಖ್ಯೆಯು ಆಶ್ವಾಸವನ್ನೂ, ಎರಡನೆಯದು ಪದ್ಯಸಂಖ್ಯೆಯನ್ನೂ ತಿಳಿಸುವುದು.]

೧. ವಿಳಸತ್ಕರ್ಪೂರ ಸಾರಾಂಬುವ ನೆಱೆಪುದೇ ಬಬ್ಬೂರ ವೃಕ್ಷಕ್ಕೆ ? ೧–೪೨
೨. ಚಂದ್ರೋಪಳಭಾಸ್ವದ್ದರ್ಪಣಮುಂ ತೋರ್ಪುದೇ ವನಚರವಕ್ತ್ರಕ್ಕೆ ? ೧–೪೨
೩. ಮತ್ತೇಭ ಕುಂಭಸ್ಥಲ ಮುಕ್ತಾದಾಮಮುಂ ಕಟ್ಟುವುದೇ ಕರಭಕಂಠಕ್ಕೆ ? ೧-೪೨
೪. ಶರಭೇಂದ್ರನಿರಲ್ ಶೃಗಾಲಮುಂ ಪರಿನುತಿಪಂದಮಲ್ತು ೧–೪೩
೫. ವಿದಗ್ಧಮರಾಲಂ ಪರಿತಂದು ಸೇವಿಪುದೇ ಬಕನಿಕರಾತ್ತ.. ಪಲ್ವಲಮಂ ? ೧-೪೫
೬. ಕಡಂದುಱು ಮೞಿಗೆಯ್ವುವೊಳ್ಕೆ ೧-೪೬
೭. ಕುಸುಮ ಸಮುನ್ನತ ಮಾಲೆಗೀಳ್ವಕಪಿ ಸಮುನ್ನತ ಮಾಲೆಯನಂತೆನೆಗಳಲೇ ನಾರ್ತಪುದೇ ? ೧-೪೯
೮. ಲೋಕಮನೆಲ್ಲಮುಂ ತುತ್ತಲೊಡರ್ಚಿನಿಂದ ಖಳನಂ ಜವದಿಂಜವನೇಕೆ ನುಂಗನೋ ! ೧-೫೩
೯. ಬೇವಿಂಗೆಱಗುವ ಕಾಕಂ ಮಾವಿಂಗೆಱಗುಗುಮೇ ? ೧-೫೫
೧೦. ನಿಜವಿಕಾರಮಾರಾತ್ಯಪಹಾಸ್ಯಕಾರಣಂ ೧-೭೫
೧೧. ಒಲವಿಂ ಕುಣಿವರ್ಭಕ ನಿಲ್ಲದಂಗಳಂ ಮಂಜುಳಮೋ ? ೨-೩೦
೧೨. ಜೋಗುಳಮುಂ ಸಲವಿಂದ ಪಾಡದಬಾಯ್ ಬಿಲದ ಬಾಯ್ ೨-೩೨
೧೩. ಸುಮನೋದ್ಯಮದ ನೆಳಲನೊಂದಿದವನಲ್ಪಮಹೀಜದ ಬಳಿಯನೆಳಲುಂ ಸಾರ್ದಪನೇ ? ೩-೩೫
೧೪. ವಿಮಳ ಸಂಜೀವನಮುಂ ಸವಿದಾತಂ ಕ್ಷುದ್ರರಸಮನೊಲ್ದಪನೇ ? ೩-೩೬
೧೫. ಗಿರಿಯುಂ ಸೇವಿಪ ಸಿಂಗಂ ಮೊರಡಿಯು ಸೇವಿಪ ಮೊಲಂ ಪಾಸಟಿಯೇ ? ೩-೩೭
೧೬. ಭದ್ರಮಾದ ನೃಪಚಿಹ್ನಮಾಂತಮಂ ಶೂದ್ರ ಚಿಹ್ನಧರನಾಗಲೊಲ್ವನೇ ? ೩-೩೮
೧೭. ಸುರುಚಿರ ರುಚಿಭಾಸುರ ಭಾಸ್ಕರನಂ ಕೌಶಿಕವಿರಾವಮೇಗೆಯ್ದಪುದೋ ? ೩-೪೨
೧೮. ನರೆಯುಂತೆರೆಯುಂ ತನುವೊಳ್ ಧರಿಸಿದ ಜಡರ್ಕಳೆಲ್ಲ ಪಿರಿಯರೇ ? ೩-೫೩
೧೯. ಮಾರವ ಕೂಪಜಲಂಗಳ್ಜಾಹ್ನವಿಯಂಬುವಿನಂತೆ ತೃಷೆಯನೇಂ ಕಳೆದಪುವೇ ? ೩-೬೧

೨೦. ವಿಭುಸಮನೆನಿಸುವೆನೆಂಬ ಬಗೆ ವಿಜಾತಿಗೆ ನೈಜಂ ೪-೧೪
೨೧. ಗುಣಾಳಿ ಮಧುಸಾಂಗತ್ಯಾನ್ವಿತಂಗಿರ್ಕುಮೇ ? ೪-೫೬
೨೨. ಮಿತ್ರಜಾಯೆಯನೊಡಗೂಡಿದ ದೋಷಿಗೆ ಬಾಷ್ಪಕಣ ಸೂಸುವುದೊಂದು ಅಚ್ಚರಿಯೇ ? ೪-೬೨
೨೩. ವಿಧಿಬಲದಿನಾವುದಾಗದೋ ಜಗದೊಳ್ ೪-೬೭
೨೪. ಶರಣರ ಸದ್ಭಾವಮೆ ಶಂಕರನಿರ್ಪೆಡೆಯಲ್ತೆ ? ೬-೨೧
೨೫. ಘನವಿತರಣೆಯುಂ ಬೇಳ್ಪನಲ್ಪವಸ್ತುವನೆರೆಯುಂ ೬-೨೬
೨೬. ಪೀಯೂಷಮನುಂಡವಂ ಬಗೆವನೇ ಪೇಳ್ ಆರನಾಳಾಂಬುವಂ ? ೬-೩೦
೨೭. ಅಂಜೆ ಬೆಳಗಾದುದು ೬-೧೨೦
೨೮. ಖಳರ ಕೆಳೆತನದೆ ಸುಜನರ ಕಲಹಂ ಲೇಸು ೧೦-೧೪೩
೨೯. ದೇವರ ಮಹಿಮೆಯು ಭಕ್ತರಭಾವ ಮನವರೀರ್ದರಲ್ಲದುಳಿದವರರಿಯರ್ ೧೦-೧೪೪
೩೦. ಸೊದೆಗೊಂಡವನಂ ಪೋಣಂಬಿಲಂ ವಲಂ ಮೆಚ್ಚಿಕುಮೇ ? ೧೧-೬
೩೧. ಬಡತನಮಡಸಿದ ಮನುಜಂ ಕಡವರಮಂ ಕಂಡು ಬಿಡುವನೇ ? ೧೧-೫೭
೩೨. ದೀನಂದಾನ ವಿಧಾನವಾಣಿಗೆ ಮನದಂದಪ್ಪನೇ ? ೧೨-೩೪
೩೩. ಸತ್ಯಪಾಹೀನಂ ಶಾಂತಿಸುಖೋಕ್ತಿಗೇಳ್ವನೇ ? ೧೨-೩೪
೩೪. ಮನೋಜೋನ್ಮಾದಿ ವೈರಾಗ್ಯ ವಾಕ್ಯಾನೀಕಕ್ಕೆ ಸಡಿಲ್ವನೇ ? ೧೨-೩೪
೩೫. ದುರಾತ್ಮಾಲಾಪಮೇಗೆಯ್ಯದೋ ! ೧೨-೩೯
೩೬. ಶ್ರೀಮದತಿಮಿರಾಂಧರ್ಗೆ ಮಹೀಮಹಿತ ವಿಬುಧೋಕ್ತಿದೀಪಮಪ್ಪುದು ೧೨-೪೧
೩೭. ತೊಳೆವಾತನಂಬರಕ್ಕೇಂ ಮುನಿವನೇ ಕೊಳೆಗೆ ಮುನಿವನಲ್ಲದೆ ? ೧೩-೨೩
೩೮. ಮಕ್ಕಳಿಲ್ಲದ ಮನೆ ಕೆಮ್ಮನೆ ೧೪-೮೭
೩೯. ಕೆಲದೊಳ್ ಮಕ್ಕಳಿಲ್ಲದೂಟಂ ಕಾಟಂ ೧೪-೮೭
೪೦. ತನಯರ್ಕಳಿಲ್ಲದೈಸಿರಿ ಕನಸಿನ ಸಿರಿ ೧೪-೮೭
೪೧. ಕೆಡುವಾತಂಗೇಕೆ ಬರ್ಕುಂ ಸುಮತಿ ? ೧೬-೯
೪೨. ಎತ್ತಿರದೀದುದೆನುತ್ತೆ ಪೇಳೆ ಕೇಳ್ದರಕದೆ ಕಟ್ಟುಕೊಟ್ಟಿಗೆಯೊಳೆಂಬವೊಲ್ ೧೭-೩೧
೪೩. ಕಲರವಮುಂಟೆ ದುರ್ದುರದೊಳ್ ? ೧೯-೩೧
೪೪. ಅಂಬಿಲದೊಳ್ ನವನೀತವುಂಟೆ ? ೧೯-೩೧
೪೫. ಶಾಲ್ಮಲಿಯೊಳ್ ಸತ್ಫಲಮುಂಟೆ ? ೧೯-೩೧
೪೬. ಇಂಗಳರಾಶಿಯೊಳುಂಟೆ ತಂಪು ? ೧೯-೩೧
೪೭. ಕಜ್ಜಲದೊಳುಂಟೆ ಶುಭ್ರತೆ ? ೧೯-೩೧

೪೮. ಪಲಾಂಡುವಿನೊಳುಂಟೆ ಪಟೀರ ಸೌರಭಂ ? ೧೯-೩೧
೪೯. ಜಲರುಹವುಂಟೆ ಕುಂಪಟೆಯೊಳ್ ೧೯-೩೧
೫೦. ಕಡಿಯೆ ಪೊಳೆಯಿರ್ಕಡಿಯಕ್ಕುಮೇ ? ೨೧-೩೩
೫೧. ಪರಸಿದರೇಂ ಪ್ರಾಣಮನೀವರೇ ? ೨೧-೪೩
೫೨. ಬಕವೃಂದಂ ಬಲ್ಲುದೇ ಹಂಸನ ಮಹಿಮೆಯಂ ೨೨-೨೭
೫೩. ಅಂಭೋಜ ಸೌರಭ್ಯಮಂ ಭೇಕಕದಂಬಂ ಬಲ್ಲುದೇ ? ೨೨-೨೭
೫೪. ಭಾನುವಿನ ಘನಲಸತ್ತೇಜಮಂ ಬಲ್ಲುದೇ ಕೌಶಿಕಯೂಥಂ ? ೨೨-೨೭
೫೫. ಸಾರಕಂಠೀರವವಳವನದೇಂ ಬಲ್ಲುದೇ ಜಂಬುಕ ಸಂಘಂ ? ೨೨-೨೭
೫೬. ಉರ್ವಿಯೊಳ್ ನುಡಿವುದೇಂ ಬಲ್ಲರ್ಗೆ ? ೨೪-೪೨
೫೭. ಮುಂಗೈಯ ಕಂಕಣಕೇಂ ಕನ್ನಡಿಯುಂಟೆ ? ೨೪-೪೭
೫೮. ಸರಸಗಂಧ ಕುಸುಮೋತ್ಕರಮಿರೆಯುಂ ಕನಕದರಲನೊಲ್ದಂತೆ ೨೭-೪೮
೫೯. ಖಾಣಮನೆ ಕೊಂಡುದಕೆ ಕಡಿಯಾಣಮುಚಿತಂ ೨೭-೫೫
೬೦. ಸುರಮಹೀಜ ಮಹಿಮೆಯುದೆಂತುಂ ಸಮನಿಪ್ಪುದೇ ಕಾನಕುಜ ಸಮಿತಿಗೆ ೨೭-೬೯
೬೧. ವನಜವನಷಟ್ಪದೊಳ್ತಿರಿಯಲಕ್ಕುಮೇ ೨೮-೫೧
೬೨. ಸಾರಮರೀಚಿಯುಲ್ಲಿ ಭೋಂಕನೆ ತುಳುಂಕಿ ಜಲಮಂ ತರಲಕ್ಕುಮೇ ? ೨೮-೫೧
೬೩. ಸೈಕತದಲ್ಲಿ ತೈಲಮಂ ಘನತರಯತ್ನದಿಂ ತರಲಕ್ಕುಮೇ ? ೨೮-೫೧
೬೪. ಅತಿ ಮೂರ್ಖನ ಮನಮಂ ಸನ್ನುತ ಕಥೆವೇಳ್ದಾತ್ಮವಶಮೆಸಗು ೨೮-೮೪
೬೫. ಪತ್ತಿದ ನಾಗರಕಾಟಂ ಸುತ್ತೇಂ ಮಿಳ್ತುವಿನ ಮಾಟಂ ೨೯-೧೯
೬೬. ಕೂರದರ್ ಸೀತೊಡೆ ಮದುವೆಯ ಕಾರ್ಯಮಾಳಿದಪುದೇ ? ೨೯-೯೪
೬೭. ಇಷ್ಟವಧೂಕ್ತಿಗೇಳ್ದಪಂಗೆಸದರುಂಟೆ ? ೩೦-೩
೬೮. ಮುಂಗೈಯ ಕಂಕಣಕೇಂ ಕನ್ನಡಿಯ ಸಾಕ್ಷಿಯಾದುದೆ ಧರೆಯೊಳ್ ೩೬-೨೦
೬೯. ಬಿಸಿಲುಪಟಳಮಂ ಕಳೆಯಲ್ ಪೊಸಬನಮಂ ಪುಗೆದಪಾಗ್ನಿಕೊಂಡ ವೋಲ್ ೩೮-೪೯
೭೦. ಗಾಳಿಯುಲೆಯೆ ಗಿರಿಚಲಿಯಿಕುಮೇ ? ೪೦-೪೦
೭೧. ಧರೆಯೊಳ್ ಖಲಸಾಧು ಸಂಗಮೇಗೆಯ್ಯದೊ ಪೇಳ್ ೪೦-೮೬
೭೨. ನಿರ್ಮಲಮತಿ ಮಣ್ಣಂ ಪಿಡಿದೊಡೆ ಗಳಿಲನೆ ಪೊನ್ನಪ್ಪುದಲ್ತೆ ೪೧-೧೭
೭೩. ದುರಾತ್ಮಬೋಧೆ ಏಗೆಯ್ಯದೊ ಪೇಳ್ ? ೪೧-೩೨
೭೪. ವಿಮಳಾಂಬುವಿನೊಳ್ ಬಿಂಬಿಪ ಕಮಳ ಸಖಂ ಪಂಕದಲ್ಲಿ ಬಿಂಬಿಸುಗುಮೇ ? ... ... ... ೪೧-೩೮
೭೫. ಬಲ್ಲನೆ ಗಾನಮಂ ಬಧಿರಂ ? ೪೧-೩೯
೭೬. ಅಂಧಕ ನಗ್ನದ ರತ್ನದೀಪಮಂ ಬಲ್ಲನೇ ? ೪೧-೩೯

೭೭. ಸತ್ಸುಧಾರಸದ ಬಲ್ಸವಿಯಂ ಜ್ವರಿತಾಂಗ ಮಾನವಂ ಬಲ್ಲನೇ ೪೧–೩೯
೭೮. ಬಲ್ಲನೇ ಕುಕವಿ ಸತ್ಕವಿ ಕಾವ್ಯ ಕಲಾ ಕಲಾಪಮಂ ? ೪೧–೩೯
೭೯. ಖರಮೇಂ ಬಲ್ಲುದೇ ನಾಕಲೋಕ ಸುಖಮಂ ? ೪೧–೪೦
೮೦. ಮಾಣಿಕ್ಯಮಂ ಧೂರ್ತವಾನರಮೇಂ ಬಲ್ಲುದೇ ? ೪೧–೪೦
೮೧. ಗೂಗೆ ಬಲ್ಲುದೇ ಲಸನ್ಮಾರ್ತಾಂಡನಂ ೪೧–೪೦
೮೨. ಗಂಧಬಂಧುರ ಕಂಜಾತ ಮರಂದಮಂ ನೊಳವದೆಂತುಂಬಲ್ಲುದೇ ? ೪೧–೪೦
೮೩. ಕರ್ದಮ ಸ್ಥಿರ ಮಂಡೂಕಪೋಜಿಲ್ಪು ಬಲ್ಲುದೇ ಮಹಾಂಭೋರಾಶಿ ಗಾಂಭೀರ್ಯಮಂ ೪೧–೪೦
೮೪. ಸುರಮಣಿ ಪಾಣಿಯಲ್ಲಿರೆ ಬಿಸುಟ್ಟಳಿ ಗಾಜನಪೇಕ್ಷಿಪಂತೆ ೪೧-೪೨
೮೫. ನಿರ್ಜರತರು ಪಿತ್ತಿಲಲ್ಲಿರೆ ತದರ್ಥನೆಗೆಯ್ಯದೆ ಬೂರಮಂ ಸಮಂತೆರೆವವನಂತೆ ೪೧–೪೨
೮೬. ದೇವಪಶುವಂಗಣದಲ್ಲಿರೆ ಮಾಣ್ದು ಕಳ್ತೆಯಂ ಪಿರಿದಮರ್ದಿಂಟ ಲಾದರಿಪವೊಲ್ ೪೧-೪೨
೮೭. ನಿಧಿಮುಂದಿರೆ ನೂಂಕಿ ಪಾರಿಯಿಂ ಜರಗಂ ಕರ್ಚುವವೊಲ್ ೪೧–೪೨–೪೩
೮೮. ಸುಧಾರಸಂ ಇಂಬಾಗುತ್ತೆ ಕೈವಟ್ಟಲಲ್ಲಿರೆ ಕೂರ್ತಿಂಟದೆ ಗಂಜಿಯೀಂಟ ಲೆಳಪಂತೆ ೪೧–೪೩
೮೯. ಆಮೋದದಾಮೋದ ತಾಮರಸಂ ತಳ್ತಿರೆಬಿಟ್ಟು ಗೋರಟೆಯ ಪೂಗೊಯ್ವಂತೆ ೪೧–೪೩
೯೦. ಖಂಡಶರ್ಕರೆ ಕೈಸಾರ್ದಿರೆ ಮೆಲ್ಲದಂತಿರಿಸಿ ಬೇವಂ ಮೆಲ್ವವೊಲ್ ೪೧–೪೩
೯೧. ಜಲದೊಳ್ ನಾಂದೆ ಶಿಲಾಚಯಕ್ಕೆ ಮೃದುಭಾವಂ ಬರ್ಪುದೇ ? ೪೧–೪೭
೯೨. ನೀರ್ಗ್ಗಳಿಂ ತೊಳೆಯುತ್ತುಂ ಪಿಳಿದೆತ್ತೆ ಕಂಬಳಿ ಬೆಳ್ಪಂತಾಳ್ಗುದೇ ? ೪೧–೪೭
೯೩. ಪಾಲನುಜ್ವಳ ಸರ್ಪಂಗೆಱೆದೋವೆ ನಿರ್ವಿಷತೆಯಂ ಕೆಯ್ಕೊಳ್ವುದೇ ? ೪೧–೪೭
೯೪. ಕಟ್ಟಿನೇರ್ಪಳವಟ್ಟೊಪ್ಪಿರೆ ನೀವೆ ಜಾಯಿಲನ ಬಾಲಂ ನೇರಿತೇ ನಪ್ಪುದೆ ? ೪೧–೪೨
೯೫. ನಿಂಬಮಿನಿವಪ್ಪುದೇ ಮಧುವಿಂ ಬೆರಸುತ ಪಾಲನೆರೆಯೆ ? ೪೧–೪೮
೯೬. ಭವನದ ಮುಂಗಡೆಯೊಳೊಪ್ಪುವ ಕವಿಲೆಯನುಳಿದಧಮಶುನಕನಂ ಪೂಜಿಪವೊಲ್ ೪೧–೪೯

# ಪರಿಶಿಷ್ಟ—ಳ

## ಈ ಗ್ರಂಥದಲ್ಲಿ ಬಂದಿರುವ ಕೆಲವು ಪಾರಿಭಾಷಿಕ ಪದಾರ್ಥಗಳು

(ವೀರಶೈವ ತತ್ವಾನುಸಾರ.)

೧. **ಅಂಗ** i. ಶಿವಾಂಶಿಕನಾದ ಆತ್ಮನು ಅಂಗನೆನ್ನಿಸಿಕೊಳ್ಳುವನು.

ii. ಶಿರಸ್ಸು, ಉರಸ್ಸು, ಎರಡು ಭುಜ–ಇವುಕೂಡ ಅಂಗಗಳೆನಿಸುವುವು.

೨. **ಅಂತಃಕರಣ ಚತುಷ್ಟಯ** : ಮನ, ಬುದ್ಧಿ, ಚಿತ್ತ, ಅಹಂಕಾರ.

೩. **ಅಣಿಮಾದಿ ಅಷ್ಟಸಿದ್ಧಿಗಳು** : ಅಣಿಮಾ,, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ

೪. **ಅರಿಷಡ್ವರ್ಗ** : ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ.

೫. **ಅಷ್ಟದಿಗ್ಗಜಗಳು** (ದಿಕ್ಕರಿಗಳು) : ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ.

೬. **ಅಷ್ಟದಿಕ್ಪಾಲಕರು** : ಪೂರ್ವದಿಕ್–ಇಂದ್ರ; ಆಗ್ನೇಯ–ಅಗ್ನಿ; ದಕ್ಷಿಣ–ಯಮ; ನೈಋತ್ಯ–ನಿರುತಿ; ಪಶ್ಚಿಮ-ವರುಣ; ವಾಯುವ್ಯ-ವಾಯು; ಉತ್ತರ-ಕುಬೇರ; ಈಶಾನ್ಯ–ಈಶಾನ.

೭. **ಅಷ್ಟಮದ** : ಕುಲಮದ, ಛಲಮದ, ಧನಮದ, ರೂಪಮದ, ಯೌವನ ಮದ, ವಿದ್ಯಾಮದ, ರಾಜ್ಯಮದ, ತಪೋಮದ, (ಪ್ರಥ್ವಿ, ಅಪ್, ತೇಜ, ವಾಯು, ಆಕಾಶ, ರವಿ, ಶಶಿ, ಆತ್ಮ–ಇವುಗಳಿಗೆ ಸಂಬಂಧಿಸಿದ ಮದಗಳೂ ಅಷ್ಟಮದ ಗಳೆನಿಸುವುವು,)

೮. **ಅಷ್ಟಪಾಶ** (ಪಾಶಾಷ್ಟಕ) : ಕೃಷಿ, ಶಂಕೆ, ಭೀತಿ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಗರ್ವ.

೯. **ಅಷ್ಟಭೋಗ** : i. ಸತಿ, ಸ್ನಾನ, ಭೋಜನ, ವಸ್ತ್ರ. ಗಂಧ, ಪುಷ್ಪ, ತಾಂಬೂಲ, ಶಯನ. ii. ಗೃಹ, ಶಯನ, ವಸ್ತ್ರ, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬೂಲ (ಹೀಗೆ ಸ್ವಲ್ಪ ವ್ಯತ್ಯಾಸದಿಂದ ಹೇಳುವುದುಂಟು)

೧೦. **ಅಷ್ಟೈಶ್ವರ್ಯ** : ಧನ, ಧಾನ್ಯ, ವಾಹನ, ವಸ್ತ್ರ, ಬಂಧು, ಪುತ್ರ, ಭೃತ್ಯ, ದಾಸಿ.

೧೧. **ಅಷ್ಟಾಂಗ ಯೋಗ** : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ, ಸಮಾಧಿ.

೧೨. **ಅಷ್ಟವಿಧಾರ್ಚನೆ** : ಜಲ, ಗಂಧ, ಅಕ್ಷತೆ, ಪತ್ರಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ ಇವುಗಳನ್ನರ್ಪಿಸಿ ಅರ್ಚನೆಮಾಡುವಿಕೆ.

೧೩. **ಅಷ್ಟಾವರಣಗಳು :** ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ

೧೪. **ಅಷ್ಟಾದಶಪುರಾಣಗಳು :** ಶಿವಪುರಾಣ, ಲಿಂಗಪುರಾಣ, ಸ್ಕಾಂದ ಪುರಾಣ, ಅಗ್ನಿಪುರಾಣ, ಮತ್ಸ್ಯ ಪುರಾಣ, ಕೂರ್ಮ ಪುರಾಣ, (ಇವು ಆರೂ ಶಿವನಿಗೆ ಸಂಬಂಧಿಸಿದುವು). ವಿಷ್ಣುಪುರಾಣ, ಗರುಡ ಪುರಾಣ, ಭಾಗವತಪುರಾಣ, ನಾರದೀಯಪುರಾಣ, ಪದ್ಮಪುರಾಣ, ವರಾಹಪುರಾಣ, (ಈ ಆರೂ ವಿಷ್ಣುವಿಗೆ ಸಂಬಂಧಿಸಿದುವು), ಬ್ರಹ್ಮಪುರಾಣ, ಬ್ರಹ್ಮಾಂಡಪುರಾಣ, ಬ್ರಹ್ಮವೈವರ್ತಪುರಾಣ, ಮಾರ್ಕಂಡೇಯಪುರಾಣ ಭವಿಷ್ಯಪುರಾಣ (ಈ ಆರೂ ಬ್ರಹ್ಮನಿಗೆ ಸಂಬಂಧಿಸಿದವು)--ಹೀಗೆ ಒಟ್ಟು ಹದಿನೆಂಟು ಪುರಾಣಗಳು. (ಇವಲ್ಲದೆ ಅಷ್ಟಾದಶ ಉಪಪುರಾಣಗಳೂ ಉಂಟು.)

೧೫. **ಅಷ್ಟಭೈರವರು** (ಭೈರವರು) : ಅಸಿತಾಂಗ, ರುರು, ಚಂಡ, ಕ್ರೋಧ. ಉನ್ಮತ್ತ. ಕಪಾಲ, ಭೀಷಣ, ಸಂಹಾರ–ಎಂಬ ಹೆಸರುಳ್ಳವರು.

೧೬. **ಆಗಮಗಳು :** ಇವು ಮುಖ್ಯವಾಗಿ ಇಪ್ಪತ್ತೆಂಟು : ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ, ಅಂಶುಮಾನ್, ಸುಪ್ರಭೇದ, ವಿಜಯ, ನಿಶ್ವಾಸ, (ವಿಶ್ವಾಸ), ಸ್ವಾಯಂಭು, ಅನಲ, ವೀರ, ರೌರವ, ಮಕುಟ, ವಿಮಲ, ಚಂದ್ರಜ್ಞಾನ, ಬಿಂಬ, ಪ್ರೋದ್ಗೀತ, ಲಲಿತ, ಸಿದ್ಧ. ಶಾಂತ, ಸರ್ವೋಕ್ತ, ಪಾರಮೇಶ್ವರ, ಕಿರಣ, ವಾತೂಲ ಆಗಮಗಳು.

೧೭. **ಈಷಣತ್ರಯ :** ದಾರೇಷಣ, ಪುತ್ರೇಷಣ, ವಿತ್ತೇಷಣ ಹೆಂಡತಿ, ಮಕ್ಕಳು, ಧನ–ಇವುಗಳ ಮೇಲಿನ ದುರಾಸೆಯೇ 'ಈಷಣತ್ರಯ'ಗಳೆನಿಸುವುವು.

೧೮. **ಈರೇಳುಲೋಕಗಳು (ಹದಿನಾಲ್ಕು ಲೋಕಗಳು) :** ಭೂಲೋಕ, ಭುವರ್ಲೋಕ, ಮಹಾಲೋಕ, ಜನಲೋಕ, ತಪೋಲೋಕ, ಸತ್ಯಲೋಕ (ಇವು ಏಳು ಊರ್ಧ್ವಲೋಕಗಳು); ಅತಲ. ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಳ (ಇವು ಏಳು ಅಧೋಲೋಕಗಳು).

೧೯. (i) **ಏಕಾದಶರುದ್ರರು :** ಅಜೈಕಪಾದ, ಅಹಿರ್ಬುಧ್ನ್ಯ, ಹರ, ನಿರುತ, ಈಶ್ವರ, ಭುವನ, ಅಂಗಾರಕ, ಅರ್ಧಕೇತು, ಮೃತ್ಯು, ಸರ್ಪ, ಕಪಾಲಿನ್ (ವಾಯು ಪುರಾಣರೀತ್ಯಾ).

(ii) ವೀರಭದ್ರ, ಶಂಭು, ಗಿರೀಶ, ಅಜ, ಏಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಸ್ಥಾಣು, ಪಶುಪತಿ, ಭವ, ತ್ರಿಪುರಾಂತಕ––(ವಿವೇಕ ಚಿಂತಾಮಣಿರೀತ್ಯಾ)

೨೦. ಐಕ್ಯ : ವೀರಶೈವದ ಷಟ್‌ಸ್ಥಲಗಳಲ್ಲಿ ಕೊನೆಯ ಸ್ಥಲ. ಇದರಲ್ಲಿ ಕಾಯ ಲಿಂಗೈಕ್ಯ, ಜೀವ ಲಿಂಗೈಕ್ಯ. ಭಾವಲಿಂಗೈಕ್ಯವೆಂದು ಮೂರುತೆರ. (ಚೆನ್ನಬಸವಣ್ಣನವರ ವಚನ ೧೦೪೭ ಪ್ರಕಾರ.)[1] ಐಕ್ಯಸ್ಥಲಲಕ್ಷಣಗಳನ್ನು ಹೊಂದಿದ ಅಂಗನೇ ಐಕ್ಯನೆನಿಸುವನು.

1. **ಚೆನ್ನಬಸವಣ್ಣನವರ ವಚನ. ಕರ್ನಾಟಕ ವಿ. ವಿ. ಪ್ರಕಟನೆ. (೧೯೬೫)**

೨೧. **ಕರಣತ್ರಯ** :— ಕಾಯ, ವಚನ, ಮನಸ್ಸು.

೨೨. **ಕರ್ಮತ್ರಯ** :— ಸಂಚಿತ, ಪ್ರಾರಬ್ಧ, ಆಗಾಮಿಗಳೆಂಬ ಕರ್ಮತ್ರಯ ದೋಷಗಳು.

೨೩. **ಕರ್ಮೇಂದ್ರಿಯಗಳು** :— (ಪಂಚ ಕರ್ಮೇಂದ್ರಿಯಗಳು) : ವಾಕು, ಪ್ರಾಣಿ, ಪಾದ, ಉಪಸ್ಥ. ಪಾಯು (ಗುದ).

೨೪. **ಕಾಯತ್ರಯ** :— ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ತನುಗಳು ಅಥವಾ ಕಾಯಗಳು.

೨೫. **ಕುಲಾಚಲ** :— (i) ಹಿಮಾಲಯ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನ, ಹೇಮಕೂಟ.

(ii) ಸ್ವಲ್ಪ ಬದಲಾವಣೆಗಳೊಡನೆ–ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರಕ—ಹೀಗೂ ಹೇಳುವುದುಂಟು.

೨೬. **ಕ್ಲೇಶಪಂಚಕ** :— (ಪಂಚಕ್ಲೇಶ) ಅವಿದ್ಯೆ, ಅಸ್ಮಿತ. ರಾಗ, ದ್ವೇಷ, ಅಭಿನಿವೇಶ—ಇವು ಐದು ಕ್ಲೇಶಗಳು.

೨೭. **ಗುಣತ್ರಯ** :— ಸತ್ವಗುಣ, ರಜೋಗುಣ, ತಮೋಗುಣ.

೨೮. **ಗುಣಗಳು** : (ಷಡ್ಗುಣಗಳು) : (i) ಸತ್ಕುಲೀನತ್ವ, ಉಜ್ವಲತ್ವ, ಮಹಾಭಾಗ್ಯತ್ವ, ಉದಾರತೆ, ಧಾರ್ಮಿಕ, ತೇಜಸ್ಸು—ಈ ಆರು ಗುಣಗಳು.

(ii) ಬುದ್ಧಿ, ಸುಖ, ದುಃಖ, ರಾಗ, ದ್ವೇಷ, ಯತ್ನ, ಧರ್ಮ, ಅಧರ್ಮ, ಭಾವನೆ ಎಂಬ ಒಂಬತ್ತು ಬಗೆಯಲ್ಲೂ ಹೇಳುವುದುಂಟು. (ವಿ. ಚಿಂತಾಮಣಿ)

೨೯. **ಗುರು** :— ಇವರು ಮೂರು ಬಗೆ : ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು.

೩೦. **ಗುರುಲಿಂಗ** :— ಷಡ್ವಿಧ ಲಿಂಗಗಳಲ್ಲಿ ಎರಡನೆಯದು; ನಾಲಿಗೆ ಈ ಲಿಂಗಸ್ಥಾನ.

೩೧. **ಚತುರಾಚಾರ್ಯರು**:— ರೇಣುಕಾಚಾರ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ಮರುಳಾರಾಧ್ಯರು.

೩೨. **ಚತುರ್ವಿಧಪುರುಷಾರ್ಥ** :— ಧರ್ಮಾರ್ಥಕಾಮ ಮೋಕ್ಷಗಳು.

೩೩. **ಚತುರ್ವಿಧಪದವಿಗಳು** :—ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ.

೩೪. **ಚತುರ್ವೇದಗಳು** :— ಋಗ್ವೇದ, ಯಜುರ್ವೇದ. ಸಾಮವೇದ, ಅಥರ್ವಣವೇದ.

೩೫. **ಚತುರ್ವಿಧ ವಾದ್ಯಗಳು** :—ತತ (ತಂತೀವಾದ್ಯ), ಆನದ್ಧ (ಚರ್ಮವಾದ್ಯ), ಘನ (ಕಂಚು ಮುಂತಾದ ಲೋಹವಾದ್ಯ), ಸುಷಿರ (ಕೊಳಲು ಇತ್ಯಾದಿ ಊದಿಬಾರಿಸುವ ವಾದ್ಯ).

೩೬. **ಚಿಚ್ಛಕ್ತಿ :—** ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂಬ ಪಂಚಶಕ್ತಿಗಳಿಂದೊಡಗೂಡಿದ ಚೇತನಾತ್ಮಕವಾದ ಶಿವಶಕ್ತಿಯೇ ಚಿಚ್ಛಕ್ತಿಯೆನಿಸುವುದು. ಇದು ಪರಮ ಪ್ರಣವದ ಪರಮ ಪ್ರಕಾಶರೂಪ. (ಚೆ.ಬ.ವ-೪)

೩೭. **ಜಂಗಮ :—** ಚರಲಿಂಗವೆಂದೂ ಹೆಸರು. ಜಂಗಮಲಿಂಗವೆಂದೂ ಹೆಸರು. ತೂರ್ಯಾತೀತ ಜ್ಞಾನ ಪ್ರತೀಕ, ವೀರಶೈವದ ಪರಮೋಚ್ಚ ತತ್ತ್ವ; ಷಡ್ವಿಧ ಲಿಂಗಗಳಲ್ಲಿ ಮಹಾಲಿಂಗ ಪ್ರತೀಕ. ಭಾವಲಿಂಗ ಸಮರಸ ಸದ್ಭಾವ ಚೇತನ. (....ಗುರುವಿನ ಗುರು ಜಂಗಮ ಎಂದಿತ್ತು ಕೂಡಲಸಂಗಯ್ಯನ ವಚನ-ಬಸವಣ್ಣನವರ ವಚನ)

೩೮. **ಜಂಗಮಲಿಂಗ :** ಷಡ್ವಿಧಲಿಂಗಗಳಲ್ಲಿ ನಾಲ್ಕನೆಯ ಸ್ಥಾನದ ಲಿಂಗತತ್ತ್ವ. ಚರ್ಮದ ಮೂಲಕ ಉಂಟಾಗುವ ಜ್ಞಾನ ಈ ಲಿಂಗಕ್ಕೆ ಅರ್ಪಿತ.

೩೯. **ಜ್ಞಾನೇಂದ್ರಿಯ ಪಂಚಕ :** ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು. ಇವು ಕ್ರಮವಾಗಿ ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿತತ್ತ್ವದಿಂದುಂಟಾದ ಇಂದ್ರಿಯಗಳು. ಇವುಗಳಲ್ಲಿ ಕ್ರಮವಾಗಿ ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ ಆಚಾರಲಿಂಗಗಳು ಸ್ಥಾನಗಳು.

೪೦. **ತನುತ್ರಯ :** ಕಾಯತ್ರಯ ನೋಡು.

೪೧. **ತಾಪತ್ರಯ :** ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳು.

೪೨. **ತ್ರಿಕರಣ :** ಕರಣತ್ರಯ ನೋಡು.

೪೩. **ತೇರಸರು :** (ತ್ರಯೋದಶಗಣರು) ಕಲ್ಯಾಣ ಬಸವರಾಜಯ್ಯ, ಪ್ರಭಾತಗಣ ಸಿಂಗಯ್ಯ, ಬೊಮ್ಮಿಸೆಟ್ಟಿ, ಮೋಳಿಗೆ ನಿಜಸಂಗಾಂಬೆ, ಹೂವಿನ ವಾಚಯ್ಯ, ಪಡಿಹಾರಿ ಬಸವಯ್ಯ, ಸಾತ್ವಿಕ ಸಂಗಯ್ಯ, ಕಮಲಾದೇವಿ, ಬೊಪ್ಪಿದೇವಿ, ದೇವಯ್ಯ, ಕನ್ನಮಾಂಬಾ, ದೇವರಸ, ಓಹಿಲಯ್ಯ,

೪೪. **ದಶದಿಕ್ಕು :** ಪೂರ್ವ, ಆಗ್ನೇಯ, ದಕ್ಷಿಣ, ನೈಋತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ, ಊರ್ಧ್ವ (ಮೇಲೆ), ಅಧಸ್ (ಕೆಳಗೆ)

೪೫. **ದಶನಾದಗಳು** (ನಾದಗಳು) : ಸ್ವರನಿರ್ಘೋಷಣ, ನಿರ್ಣಯ ಧ್ವನಿ, ಘಂಟೆ, ಕಹಳೆ, ಶಂಖ, ಮೇಘ, ಮೃದಂಗ, ಭೇರಿ, ಮಂತ್ರ, ಅವ್ಯಕ್ತ ಪ್ರಣವಧ್ವನಿಗಳು

೪೬. **ದಶಗಣರು: —** ವೀರಘಂಟಾಮೈಲ, ದೋರಿದೇವಯ್ಯ, ಸಿಂಗಿದೇವಯ್ಯ ಬೊಪ್ಪಲದೇವಿ, ಕಾಮಲದೇವಿ, ಚೋಳಪ್ವೆ ಮಾಯಿ ದೇವಯ್ಯ, ಕನ್ನಮಾಂಬೆ, ಶೃಂಗಿರಾಜ, ಬೀಚಯ್ಯ.

೪೭. **ದ್ವಾದಶಾದಿತ್ಯರು—**(ಆದಿತ್ಯರು) :- ಧಾತಾ, ಅರ್ಯಮಾ, ಮಿತ್ರ, ವರುಣ ಇಂದ್ರ, ವಿವಸ್ವಾನ್, ಪರ್ಜನ್ಯ, ಪೂಷ, ಅಂಶುಮಾನ್, ಗಭಸ್ತಿಮಾನ್, ತ್ವಷ್ಟ್ರ, ವಿಷ್ಣು ಇವರು ಹನ್ನೆರಡು ಜನ ಆದಿತ್ಯರು. ಇವರನ್ನು ಕ್ರಮವಾಗಿ-ಪುಲಸ್ತ್ಯ. ಪುಲಹ, ಅತ್ರಿ, ವಶಿಷ್ಠ, ಅಂಗೀರಸ, ಭೃಗು, ಭರದ್ವಾಜ, ಗೌತಮ, ಕಶ್ಯಪ, ಕ್ರತು, ಜಮದಗ್ನಿ, ಕೌಶಿಕರೆಂಬ ಋಷಿಗಳು ಕೀರ್ತಿಸುವರು.

೪೮. ನವಚಕ್ರ :—ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ, ಸಹಸ್ರಾರ, ಶಿಖಾ, ಪಶ್ಚಿಮ ಎಂಬ ಒಂಬತ್ತು ಚಕ್ರಗಳು.

೪೯. ನವಲಿಂಗ : ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಇಷ್ಟ, ಪ್ರಾಣ, ಭಾವಲಿಂಗಗಳು

೫೦. ಪಂಚಾಚಾರ್ಯರು:— ರೇಣುಕ, ದಾರುಕ, ಏಕೋರಾಮ, ಪಂಡಿತಾರಾಧ್ಯ, ಮರುಳಾರಾಧ್ಯ.

೫೧. ಪಂಚಾಕ್ಷರಿ :— ಐದಕ್ಷರಗಳುಳ್ಳ 'ನಮಃ ಶಿವಾಯ' ಎಂಬ ಶಿವಮಂತ್ರ.

೫೨. ಪಂಚಾಚಾರ : (i) ಲಿಂಗಾಚಾರ, ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ. (ಅಥವಾ) (ii) ಶ್ರುತ್ಯಾಚಾರ, ಸ್ಮೃತ್ಯಾಚಾರ, ಪೌರಾಣಿಕಾಚಾರ, ಆಗಮಾಚಾರ, ತಂತ್ರಾಚಾರಗಳೆಂದು ಇನ್ನೊಂದು ವಿಧದಲ್ಲೂ ಹೇಳುವರು. ಆದರೆ ಎರಡನೆಯದು ಅಷ್ಟೊಂದು ಮುಖ್ಯವಲ್ಲ.

೫೩. ಪಂಚಮುರುತ್ : ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ.

೫೪. ಪಂಚವಿಂಶತಿಲೀಲೆ (ಲೀಲೆಗಳು) :– ಚಂದ್ರಕಲಾಧರಲೀಲೆ, ಉಮಾಮಹೇಶ್ವರಲೀಲೆ, ವೃಷಭವಾಹನಲೀಲೆ, ತಾಂಡವಲೀಲೆ, ಗಿರಿಜಾಕಲ್ಯಾಣಲೀಲೆ, ಭಿಕ್ಷಾಟನಲೀಲೆ, ಮಾರಹತಲೀಲೆ, ಕಾಲಹರಲೀಲೆ, ಜಲಂಧರಲೀಲೆ, ಅಜಾರಿಲೀಲೆ, ವೀರಭದ್ರಲೀಲೆ (ದಕ್ಷಾಧ್ವರಹರಲೀಲೆ), ಶರಭಾವತಾರಲೀಲೆ, ಹರಿಹರಲೀಲೆ, ಅರ್ಧನಾರೀಶ್ವರಲೀಲೆ, ಕಿರಾತಲೀಲೆ, ಕಂಕಾಳಧರಲೀಲೆ, ಚಂಡೇಶಾನುಗ್ರಹಲೀಲೆ, ವಿಷಧರಲೀಲೆ, ಚಕ್ರದಾನಲೀಲೆ, ವಿಘ್ನಪ್ರಸಾದಲೀಲೆ, ಉಮಾಸ್ಕಂದಲೀಲೆ, ಏಕಪಾದಲೀಲೆ, ಸುಖಾವಹಲೀಲೆ, ದಕ್ಷಿಣಾಮೂರ್ತಿಲೀಲೆ, (ಈ ಲೀಲೆಗಳೇ ಅಲ್ಪಸ್ವಲ್ಪ ಬದಲಾವಣೆಯುಳ್ಳ ಹೆಸರುಗಳಿಂದ ಗ್ರಂಥಾಂತರಗಳಲ್ಲಿ ಹೇಳಲ್ಪಟ್ಟಿವೆ. ಶಿವನ ಇಪ್ಪತ್ತೈದನೆಯ ಲೀಲೆಯಲ್ಲಿ ಲಿಂಗೋದ್ಭವ ಲೀಲೆಯನ್ನೂ ಹೇಳಲಾಗಿದೆ.)

೫೫. ಪಂಚಕ್ಲೇಶ :– ಕ್ಲೇಶ ಪಂಚಕ ನೋಡು.

೫೬. ಪಂಚಮಹಾಪಾತಕ :- (i) ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರುವಿನ ಪತ್ನಿಗಮನ, ಮತ್ತು ಈ ಆಚಾರವುಳ್ಳವರ ಸಹವಾಸ. (ಇನ್ನೊಂದು ರೀತಿ) (ii) ಕಳವು, ಹಿಂಸೆ, ಪಾರದಾರ, ಅನ್ಯದೈವಭಜನೆ, ಭವಿಸಂಗ. (iii) ಭವಿಪಾಕ, ಅನ್ಯದೈವಭಜನೆ, ಗುರುವಾಕ್ಯೋಲ್ಲಂಘನೆ, ಪರಧನ ಪರಸ್ತ್ರೀ ಮೇಲಣ ಆಸೆ. (ಚೆ. ಬ. ವಚನ ೩೮೨ರ ಪ್ರಕಾರ)

೫೭. ಪಂಚಬ್ರಹ್ಮ :– ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ.

೫೮. ಪಂಚಗವ್ಯ : ಗೋವಿನ ಹಾಲು, ಮೊಸರು, ತುಪ್ಪ, ಮೂತ್ರ, ಸಗಣಿ

೫೯. ಪಂಚಾಮೃತ :– ಹಾಲು, ಮೊಸರು, ತುಪ್ಪ, ಜೇನು, ಸಕ್ಕರೆ

೬೦. ಪ್ರಸಾದ[ತ್ರಯ] (i) ಒಕ್ಕಪ್ರಸಾದ, ಮಿಕ್ಕಪ್ರಸಾದ, ಶೇಷಪ್ರಸಾದ.

(ii) ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದತ್ರಯ.

೬೧. ಪುರಾತನರು :—ಅರುವತ್ತು ಮೂರು ಪುರಾತನರುಗಳನ್ನು 'ಪುರಾತನರು' ಇಷ್ಟೇಕರೆಯಲಾಗಿದೆ. ಅವರು ಕ್ರಮವಾಗಿ ಈ ಕೆಳಗಿನಂತೆ ಇದ್ದಾರೆ. ಈ ಹೆಸರುಗಳು ಕನ್ನಡ ಕಾವ್ಯಗಳಲ್ಲಿ ಅಲ್ಪಸ್ವಲ್ಪವ್ಯತ್ಯಾಸದಿಂದಲೂ ಕಾಣಸಿಗುತ್ತವೆ.

ಅತಿಭಕ್ತ, ಅಮರನೀತಿ, ಅಯ್ಯಡಿ, ಅರಿವಾಳ್ತಾಂಡ, ಅಃಪೂತಿ, ಆನಾಯನಾರ, ಇರಿಭಕ್ತ, ಇಹಃಪಗೆಯೂಂಡ, ಇಳೆಯೂಂಡ ಗುಡಿಮಾರ, ಎಡಗಳೆಯ (ನಿಡುಗುಡಿಯ ಪೆರ್ಮಾಡಿ), ಏಣಾದಿನಾಥ, ಒಲಘಾಂಡಮೂರ್ತಿ, ಓಹಿಲ (ವಾಯಿಲಾರ್), ಕಡವೂರ ಕಾರಿ, ಕಣಂಬುಲ್ಲು ನಂಬಿ, ಕಣ್ಣಪ್ಪ, ಕಾರಿಕಾಲಮ್ಮ, (ಕರೈಕ್ಕಾಲ್ ಅಮ್ಮೈಯಾರ್), ಕಲಿಕಂಪ (ಕಲಿಕ್ಕಂಬರ್), ಕಲಿಕಾಮದೇವ, ಕಲಿಯ ನಾಯನಾರು, ಕಲಚಿತ್ತಿಯಾಂಡರು, ಕಳಚಂಗಚೋಳ (ಕಳಚೆಂಗರು), ಕಳಚಂಗ ಪೆರುಮಾಳ (ಕೋಚ್ಚಂಗಣಚೋಳರು), ಕುಲಚ್ಚರಿ, ಕೊಂಗುಲಿಯಕಲಿಯ, ಕೊಲ್ಪುಲಿಯೂಂಡ, ಗಣನಾಥ (ಕಲಿಗಣನಾಥ) ಚಂಡೇಶ (ಚಂಡೇಶಪಿಳ್ಳೆ), ಚಿರುತೊಣೆಯಾಂಡ, ಚಿರುಪ್ಪುಲಿಯಾಂಡ, ಚೇರಮ ಜಡೆಯನಾಯನಾರ, ತಿರುನೀಲಕಂಠ, ತಿರುನೀಲಕಂಠಪಾಣ, ತಿರುನೀಲನಕ್ಕ, ಚಿರುಕುರು ಪೆಯತೊಂಡ, ತಿರುಜ್ಞಾನ ಸಂಬಂಧರು, ತಿರುನಾಳ್ಪೋವ, ತಿರುಮೂಲದೇವ, ದಂಡೀಶ (ನಮಿತ್ತಂಡಿ), ನಂಬಿಯಣ್ಣ (ಸುಂದರಮೂರ್ತಿ), ನಮಶ್ಶಿವಾಯ ಮುರುಘ, ನಮಿನಂದಿ, ನರಸಿಂಗಮೊನೆಯರು, ನೈಶಭಕ್ತ, ಪಗಲ್ಚೋಳ, ಪಗಲ್ತೊಣೆಯಾಂಡರ್ ಪಾಂಡ್ಯಮಹಾದೇವಿ (ಮಂಗೈಯಕ್ಕರಸಿಯಾರ್), ಪುಸಲೆಯಾಂಡ, ಪೆರುಮಳಲಿಯ ಕುರುಂಬ, ಮಾನಕಂಜಾರ, ಮೂರ್ಖನಾಯನಾರ್, ಮೆರೆಮಿಂಡದೇವ, ಮೊನೆಯಿಡು ವರು, ಯಸ್ಯಜ್ಞಾನಿದೇವಿ, ರುದ್ರಪಶುಪತಿ, ವಾಗೀಶ, (ತಿರುವಾಕರೀಶ) ವೆಳ್ಳೂತ, ಸಾಂಖ್ಯಕೊಂಡ, (ಸಾಂಖ್ಯನಾರ), ಚಿರುತೊಂಡ (ದಘ್ರಭಕ್ತ), ಸೇದಿರಾಜ, ಸೋಮಾಸಿಮಾರ, ಸೌಂದರಪಾಡ್ಯ.

೬೨. ಮಲತ್ರಯ :—ಆಣವಮಲ, ಮಾಯಾಮಲ, ಕಾರ್ಮಿಕಮಲ.

೬೩. ಮೂವತ್ತಾರುತತ್ತ್ವಗಳು (ಷಟ್‌ತ್ರಿಂಶತ್‌ತತ್ತ್ವ :– ಶಿವ, ಶಕ್ತಿ, ಸದಾಶಿವ, ಈಶ್ವರ, ವಿದ್ಯೆ, ಕಾಲ, ನಿಯತಿ, ಕಲೆ, ಅವಿದ್ಯೆ, ರಾಗ ಪುರುಷ, ಪ್ರಕೃತಿ, ಗುಣ, ಬುದ್ಧಿ ಅಹಂಕಾರ, ಚಿತ್ತ, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದತನ್ಮಾತ್ರೆ, ಸ್ಪರ್ಶತನ್ಮಾತ್ರೆ, ರೂಪತನ್ಮಾತ್ರೆ ರಸತನ್ಮಾತ್ರೆ, ಗಂಧತನ್ಮಾತ್ರೆ, ನಭ, ವಾಯು, ವಹ್ನಿ, ಜಲ, ಭೂಮಿ-ಇತ್ಯಾದಿ, ಮೂವತ್ತಾರು ತತ್ತ್ವಗಳು.

೬೪. ಷಟ್‌ಸ್ಥಲ :—ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

೬೫. ಷಡಕ್ಷರ ಮಂತ್ರ :—'ಓಂನಮಃ ಶಿವಾಯ' ಎಂಬ ಆರು ಅಕ್ಷರ ಮಂತ್ರ.

೬೬. ಷಡಿಂದ್ರಿಯ :—ಮೂಗು, ನಾಲಿಗೆ, ಕಣ್ಣು, ಚರ್ಮ, ಕಿವಿ, ಮನಸ್ಸು.

೬೭. (ಷೋಡಶಗಣ) :—ಹೊನ್ನಯ್ಯ, ಕಿನ್ನರಿಬೊಮ್ಮಯ್ಯ, ಕೇಕಲಾದೇವಿ, ಪಾಂಡ್ಯನಾಯಕ, ಸೇನನಾಥ, ಗುಡ್ಡವ್ವೆ, ದೇವರಬಾಚಯ್ಯ, ಬಿಜ್ಜಯ, ನಾಗಯ್ಯ, ಕುಂದುಲಗಿನಾಗಯ್ಯ, ಹೂವಿನಬಾಚಯ್ಯ, ಹೂವಿನಬಾಚಿದೇವಿ, ಪಡಿಹಾರಿ, ಸೋಮಣ್ಣ, ಉಘೇನಾಗಯ್ಯ, ಹಂದಯ್ಯ, ಕಾಲಾಂಬೆ-ಇತ್ಯಾದಿ (ಗ್ರಂಥಾಂತರದಲ್ಲಿ ಈ ಹೆಸರಿನ ಪಟ್ಟಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವೂ ಉಂಟು).

೬೨. **ಷೋಡಶೋಪಚಾರಗಳು** : ಪಾದ್ಯ, ಅರ್ಘ್ಯ, ಆಚಮನ, ಪತ್ರಪುಷ್ಪ, ಗಂಧ, ಅಕ್ಷತೆ, ರುದ್ರಾಕ್ಷಮಾಲಿಕೆ, ಛತ್ರ, ಚಾಮರ, ವ್ಯಜನ, ಗೀತ, ವಾದ್ಯ, ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ ಈ ಹದಿನಾರು ಪರಿಕರಗಳಮೂಲಕ ಮಾಡುವ ಪೂಜೆ.

೬೯. ಷಟ್‌ಚಕ್ರ :—ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾಚಕ್ರಗಳು.

೭೦ ಷಟ್‌ಸಮ್ಮಾರ್ಜನ :—ಗೋಮಯ, ಗೋಕ್ಷೀರ, ಗೋದಧಿ (ಮೊಸರು), ಗೋಮೂತ್ರ, ಗೋರೋಚನಗಳಿಂದ ನೆಲಸಾರಿಸುವುದು.

೭೧. ಷಡೂರ್ಮಿ (ಷಡ್ಭಾವವಿಕೃತಿ) :–ಹಸಿವು (ಕ್ಷುತ್), ನೀರಡಿಕೆ (ಪಿಪಾಸೆ), ಶೋಕ, ಮೋಹ, ಜರಾ, ಮರಣಗಳೆಂಬ ಪ್ರಾಣ, ಮನ, ದೇಹಗಳ ವಿಕಾರಗಳು.

೭೨. ಷಡಧ್ವ :— ಭುವನಾಧ್ವ, ಪದಾಧ್ವ, ಮಂತ್ರಾಧ್ವ, ತತ್ತ್ವಾಧ್ವ ಕಲಾಧ್ವ, ವರ್ಣಾಧ್ವ.

೭೩ ಷಡ್ರಸ :—ಸಿಹಿ, ಹುಳಿ, ಉಪ್ಪು, ಕಾರ, ಒಗರು, ಕಹಿ. (ಕ್ರಮವಾಗಿ–ಮಧುರ, ಆಮ್ಲ, ಕ್ಷಾರ, ಕಟು,ಕಷಾಯ, ತಿಕ್ತ).

೭೪. ಷಡಬ್ಜ :–ಷಟ್‌ಚಕ್ರನೋಡು.

೭೫. ಷಡ್ವಿಧಭಕ್ತಿ :– ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನಭಕ್ತಿ, ಅನುಭವ ಭಕ್ತಿ, ಆನಂದಭಕ್ತಿ, ಸಮರಸಭಕ್ತಿ. (ಇವುಕ್ರಮವಾಗಿ ಷಟ್‌ಸ್ಥಳಗಳೊಡನೆ ಸಂಬಂಧ, ಹೊಂದುತ್ತವೆ).

೭೬. ಸಪ್ತವ್ಯಸನ :– ತನು, ಮನ, ಧನ, ರಾಜ್ಯ, ವಿಶ್ವ, ಉತ್ಸಾಹ, ಸೇವಕ ಇವುಗಳಿಗೆ ಸಂಬಂಧಿಸಿದ ವ್ಯಸನಗಳು.

# ಪರಿಶಿಷ್ಟ—೫

## ಪೂರ್ವಕಥೆಗಳು

**ಆಶ್ವಾಸ ೧. ಪದ್ಯ ೧೪ : ''ವೀರಶೈವಮತ ದಿವ್ಯಮಹತ್ವ ನಿದರ್ಶನಕ್ಷಮತ್ ಪಂಡಿತರ್....**

ವೀರಶೈವ ಪ್ರಪಂಚದಲ್ಲಿ (೧) ಶ್ರೀಪತಿ ಪಂಡಿತ (೨) ಮಂಚಣ್ಣ ಪಂಡಿತ (೩) ಮಲ್ಲಿಕಾರ್ಜುನ ಪಂಡಿತರೆಂಬುವರು ಪಂಡಿತತ್ರಯರೆಂದು ಪ್ರಸಿದ್ಧರಾಗಿದ್ದಾರೆ. ಇವರನ್ನು ಕುರಿತು ಕವಿ ಹೇಳಿದ ಮಾತೇ ಅದು.

i. **ಶ್ರೀಪತಿ ಪಂಡಿತ** : ಈತನು ಕೃಷ್ಣಾ ನದೀ ತೀರದ ಬೇಜವಾಡದಲ್ಲಿದ್ದನು. ಶ್ರೀ ಶೈಲದ ಮಲ್ಲಿಕಾರ್ಜುನ ಸ್ವಾಮಿಯ ಪರಮ ಭಕ್ತನು. ಬ್ರಹ್ಮಸೂತ್ರಗಳಿಗೆ ವೀರ ಶೈವದ ಪರವಾಗಿ ಶ್ರೀಕರ ಭಾಷ್ಯ ಬರೆದಿದ್ದಾನೆಂದು ಹೇಳುವ ವಾದ ಸಂಶಯಕ್ಕೆಡೆ ಗೊಟ್ಟಿದೆ. ಬಸವಣ್ಣನವರ ಹಿರಿಯ ಸಮಕಾಲೀನರಾಗಿದ್ದರೆಂದು ತಿಳಿದುಬರುವುದು. ಮೂವರು ಪಂಡಿತರಲ್ಲಿ ಇವರೇ ಮೊದಲಿಗರು. ಆಂಧ್ರ ದೇಶದಲ್ಲಿ ವೀರಶೈವ ಧರ್ಮ ಪ್ರಸಾರ ಕಾರ್ಯಮಾಡಿದವರಲ್ಲಿ ಇವರೇ ಮೊದಲಿಗರೆಂದು ಹೇಳಲಾಗುತ್ತಿದೆ. ಈಗಿನ ಕರ್ನೂಲು, ಗುಂಟೂರು, ನೆಲ್ಲೂರು, ಕೃಷ್ಣಾ, ಗೋದಾವರೀ ಜಿಲ್ಲೆಗಳಲ್ಲಿ ಇವರ ಪ್ರಭಾವ ಹೆಚ್ಚಾಗಿತ್ತು. ಇವರ ಬಗೆಗೆ ಅನೇಕ ಪವಾಡದ ಕಥೆಗಳನ್ನು ಹೇಳಲಾಗು ತ್ತಿದೆ. ಆಂಧ್ರದ ಅನೇಕ ಶಾಸನಗಳಲ್ಲಿ ಇವನ ಬಗೆಗೆ ವಿಶೇಷ ಪ್ರಶಂಸೆಯಿದೆ.

ii. **ಮಂಚಣ್ಣ ಪಂಡಿತ** : ಈತನು ಕಾಶಿಯ ಬಹುಶ್ರುತ ವಿದ್ವಾಂಸ. ಕಾಮಿಕಾದಿ ಆಗಮಗಳಿಗೆ ವೃತ್ತಿ ಮತ್ತು ದೀಪಿಕೆಗಳನ್ನು ರಚಿಸಿ ಕಾಶಿಯಲ್ಲಿ ಶಿವ ಸಮಯವನ್ನು ಸ್ಥಿರಪಡಿಸಿದ ಶಂಭುಲಿಂಗಭಟ್ಟನೆಂಬುವನು ಈತನ ತಂದೆ. ಇವನಿಗೆ 'ಶಿವಲೆಂಕಮಂಚಣ್ಣ'ನೆಂದೂ ಹೆಸರು. ಸಕಲಾಗಮಾಚಾರ್ಯನೆಂದು ಪ್ರಸಿದ್ಧನಾದ ಇವನು ಕಲ್ಯಾಣದ ಬಸವಣ್ಣನ ಖ್ಯಾತಿಯನ್ನು ಕೇಳಿ ಕಲ್ಯಾಣಕ್ಕೆ ಬಂದು ಬಸವಣ್ಣನ ಅನುಯಾಯಿಯಾದನು. 'ಈಶಾನ್ಯ ಮೂರ್ತಿ ಮಲ್ಲಿಕಾರ್ಜುನಲಿಂಗ' ಎಂಬ ಅಂಕಿತ, ದಲ್ಲಿ ವಚನ ರಚಿಸಿದ್ದಾನೆ.

iii. **ಮಲ್ಲಿಕಾರ್ಜುನ ಪಂಡಿತ**: ಬಸವಣ್ಣನವರ ಸಮಕಾಲೀನನಾಗಿ ಶ್ರೀಶೈಲ ಪೀಠದಲ್ಲಿ ೧೨ನೆಯ ಶತಮಾನದಲ್ಲಿ ಪ್ರಖ್ಯಾತನಾಗಿದ್ದ ಮಲ್ಲಿಕಾರ್ಜುನ ಪಂಡಿತಾ ರಾಧ್ಯನೇ ಈತನು. ಕಾಕಿನಾಡಿನಲ್ಲಿರುವ ದ್ರಾಕ್ಷಾರಾಮದ ಭೀಮೇಶ್ವರಲಿಂಗದ ಪರಮ ಭಕ್ತರಾಗಿದ್ದ ಭೀಮನ ಪಂಡಿತ—ಗೌರಾಂಬೆಯರ ಪುತ್ರ. ಕೋಟಿಪಲ್ಲಾರಾಧ್ಯ ರೆಂಬುವರಿಂದ ವೀರಶೈವದೀಕ್ಷೆ ಪಡೆದು, ಶ್ರೀಶೈಲ ಪೀಠಾಧಿಪತಿಯಾದನು. ಬಸವಣ್ಣ ನವರು ಕಳಿಸಿದ ವಿಭೂತಿಯ ಮಾಹಾತ್ಮ್ಯೆಯಿಂದ ಕನ್ನಡ ಭಾಷೆ ಬಂದ ಹಾಗೆ ಹೇಳಿಕೆ

ಯಿದೆ. ಕನ್ನಡ ಮತ್ತು ತೆಲುಗುಗಳಲ್ಲಿ ಅನೇಕ ಕಾವ್ಯ ರಚಿಸಿದ್ದಾನೆ. ಬಸವಣ್ಣನವರನ್ನು ಕಾಣಲಿಕ್ಕೆಂದು ಕಲ್ಯಾಣಕ್ಕೆ ಹೊರಟು ಹಾದಿಯಲ್ಲಿಯೇ ಬಸವಣ್ಣನವರ ಲಿಂಗೈಕ್ಯದ ಸುದ್ದಿಯನ್ನು ಕೇಳಿ ಹಿಂದಕ್ಕೆ ಹೊರಟು ಶ್ರೀಶೈಲಕ್ಕೆ ಬಂದು ಲಿಂಗೈಕ್ಯನಾದನು. ಇವನ ನಂತರ ಇವನ ಮಗ ಕೇದಾರಗುರು ಶ್ರೀಶೈಲ ಸಿಂಹಾಸನದ ಪಟ್ಟವನ್ನು ಪಡೆದನು. 'ಅಮರ ಗೊಂಡದ ಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದವನು ಇವನೇ ಎಂದು ತರ್ಕಿಸಲಾಗಿದೆ.

೨. ಆ. ೧. ಪ. ೨೨. **'ಭೂರಜವುಂ ಸುವರ್ಣರಜವಾಗಿಸಿ'ದ ಕಥೆ :** ಕನ್ನ ಕೊರೆದು ಗುರುಲಿಂಗಜಂಗಮ ಸೇವೆ ಮಾಡುತ್ತ ಜೀವಿಸುತ್ತಿದ್ದ ಕನ್ನದ ಮಾರಯ್ಯನು ಒಮ್ಮೆ ಹಾಡುಹಗಲು ಬಿಜ್ಜಳನ ಭಂಡಾರಕ್ಕೆ ಕನ್ನಹಾಕಿದನು. ಕನ್ನ ಕೊರೆದಾಗ ಉದುರಿದ ಮಣ್ಣನ್ನು ಸುವರ್ಣದ ರಜವನ್ನಾಗಿಸಿ-ತೋರಿಸಿ ಆಶ್ಚರ್ಯಗೊಳಿಸಿದನು. (ಇದೇ ಗ್ರಂಥದ ೨೦ನೆಯ ಆಶ್ವಾಸದಲ್ಲಿ ಬಂದಿರುವ ಈ ಕಥೆಯನ್ನು ನೋಡಿರಿ.)

೩. ಆ. ೧. ಪ. ೨೨. **ನುಣ್ಮಣಿಗೈದು ಸಾರವಾರ್ಧಾರೆಯ ತುಂತುರಿಂ' ಎಂಬುದಕ್ಕೆ ಕಥೆ :** ಬಸವಣ್ಣನವರು 'ಬೇಡುವವರಿಲ್ಲದೆ ಬಡವಾದೆ' ಎಂಬ ವಚನವನ್ನು ಹಾಡಿದರು. ಮಡಿವಳಮಾಚಯ್ಯನವರು ಭಕ್ತರು ಬೇಡಬೇಕೆ? ಎಂದುಕೊಂಡು ಹರಿಯುತ್ತಿರುವ ಹೊಳೆಯ ನೀರನ್ನು ಕಾಲಿನಿಂದ ಒದ್ದು ಮೇಲಕ್ಕೆ ಹಾರಿಸುತ್ತಿರಲು ಆ ನೀರೇ ಮುತ್ತು ರತ್ನಗಳಾಗುತ್ತಿದ್ದವು. ವಿಟಜಂಗಮರಿಗೆ ಹೀಗೆ ನೀರಿನಿಂದಾದ ಮುತ್ತು ರತ್ನಗಳನ್ನು ಕೊಡುತ್ತಿರಲು ಅವರು ಅವನ್ನೊಯ್ದು ವೇಶ್ಯೆಯರಿಗೆ ಕೊಡುತ್ತಿದ್ದರು. ವೇಶ್ಯೆಯರು ಇದರಿಂದ ಶ್ರೀಮಂತರಾಗಿ ಉಪ್ಪರಿಗೆಯ ಮನೆಗಳಲ್ಲಿ ಸುಖವಾಗಿ ವಾಸಿಸುತ್ತಿದ್ದರು.

೪. ಆ. ೧. ಪ. ೨೨. : **ಶಿಖಿಯನುಂಬರದೊಳ್ವಿಗೆ ಕಟ್ಟಿದುದಕ್ಕೆ ಕಥೆ :** ಒಮ್ಮೆ ಶ್ರೀಪತಿ ಪಂಡಿತರಿಗೂ ಬ್ರಾಹ್ಮಣರಿಗೂ ವಾಗ್ವಾದ ನಡೆಯಿತು. ಅಗ್ನಿಯೇ ದೈವವೆಂದು ವಾದಿಸಿದ ಬ್ರಾಹ್ಮಣರ ವಾದವನ್ನು ಅತಿಗಳೆದು ಜಂಗಮವೇ ದೈವವೆಂದು ಸಿದ್ಧಾಂತಗೊಳಿಸುವ ಸಮಯದಲ್ಲಿ ಅಗ್ನಿಯನ್ನು ನನ್ನ ಅಂಕಿತದಲ್ಲಿಟ್ಟುಕೊಳ್ಳುತ್ತೇನೆಂದು ಪಂಥಮಾಡಿ, ಬ್ರಾಹ್ಮಣರ ಯಾಗಶಾಲೆಯ ಅಗ್ನಿಯನ್ನು ಬಟ್ಟೆಯಲ್ಲಿ ಕಟ್ಟಿ ಏಳುದಿನಗಳವರೆಗೆ ಒಂದು ಬನ್ನಿಯ ಮರಕ್ಕೆ ತೂಗು ಹಾಕಿದನು. ಅಗ್ನಿಯು ನಿಗಿನಿಗಿ ಉರಿಯುತ್ತಿದ್ದರೂ ಬಟ್ಟೆ ಸುಡದೆ ಏಳು ದಿನಗಳವರೆಗೆ ಆ ಅಗ್ನಿಯನ್ನು ತನ್ನ ಅಂಕಿತದಲ್ಲಿಟ್ಟು ಮೆರೆಸಿದನು.

೫. ಆ. ೧. ಪ. ೨೨. **'ಮಾರುತಾಧಾರದೆ ಸದ್ಗುಗ್ಗುಳಿ'ದ ಕಥೆ :** ಗುಜರಾತ ದೇಶದಲ್ಲಿ ಓಹಿಲಯ್ಯನೆಂಬ ಭಕ್ತನಿದ್ದನು. ಅವನು ಸೌರಾಷ್ಟ್ರದ ಸೋಮನಾಥನಿಗೆ ಗುಗ್ಗುಳದ ಧೂಪವನ್ನು ಸಮರ್ಪಿಸುವನೇಮವನ್ನು ಆಚರಿಸುತ್ತ ಭಕ್ತಿ ಜೀವನ ನಡೆಸುತ್ತಿದ್ದನು. ೧೨ ವರ್ಷಗಳ ಕಾಲ ಮಲಯ ಪರ್ವತಕ್ಕೆ ಹೋಗಿ ಗುಗ್ಗುಳವನ್ನು ತಂದು ಸಮರ್ಪಿ

ಸುತ್ತ ಶಿವನಿಗೆ ಮೆಚ್ಚಾದನು. ಒಮ್ಮೆ ಗಗ್ಗುಳ ತರುವಾಗ ಕಾಲಿಗೆ ಮುಳ್ಳು ಚುಚ್ಚಿ ನಡೆಯದಾದಾಗ ಶಿವನು ಶಬರವೇಷದಿಂದ ಮುಳ್ಳುತೆಗೆದನು. ಶಿವನು ಇವನ ಭಕ್ತಿಗೆ ಮೆಚ್ಚಿದನು. ಇವನು ಗಂಟೆಯನ್ನು ಬಾರಿಸುತ್ತ ಆಕಾಶಮಾರ್ಗದಲ್ಲಿ ನಡೆದು ಕೈಲಾಸಕ್ಕೆ ಹೋದನು. ಇವನ ಹಾಗೆಯೇ ಚೇರಮರಾಯನೂ ದೂಪ ಧೂಮದ ಮಾರ್ಗ ಹಿಡಿದು ಕೈಲಾಸಕ್ಕೆ ಹೋಗಿದ್ದಾನೆ. ಇದರಂತೆ ಉದ್ಭಟ ದೇವನೂ ಪಟ್ಟಣ ಸಮೇತ ಹೋಗಿದ್ದಾನೆ.

೬. ಆ. ೧. ಪ. ೨೨. 'ನಭಮಂ ನುಡಿಸಿದ' ಕಥೆ : ವಿಟನೋರ್ವನು ವೇಶ್ಯಾರ್ಥವಾಗಿ ಕುರಿಯೊಂದನ್ನು ಹಿಡಿದೆಳೆಯುತ್ತ ಹೋಗುವಾಗ ಆ ಕುರಿ ಹೆದರಿ ಕಿನ್ನರಿ ಬೊಮ್ಮಯ್ಯನಿದ್ದ ತ್ರಿಪುರಾಂತಕೇಶ್ವರ ದೇವಾಲಯ ಪ್ರವೇಶಿಸಲಾಗಿ ಬೊಮ್ಮಯ್ಯನವರು ಆ ವಿಟನಿಗೆ ಸಾವಿರ ಹೊನ್ನು ಕೊಟ್ಟು ಬಿಡಿಸಿದರು. ವಿಟನು ವೇಶ್ಯೆಯ ಕೋಪಕ್ಕೆ ಹೆದರಿ ಪುನಃ ಕುರಿಯನ್ನು ಕೊಡು ಎಂದು ಬರಲು ಕಿನ್ನರಯ್ಯನು ವಿಟನನ್ನು ಕೊಂದನು. ಬಿಜ್ಜಳನು ಈ ವಿಷಯದಲ್ಲಿ ಆಕ್ಷೇಪಿಸಲು ಕಿನ್ನರಯ್ಯನು ಈಶ್ವರನ ಸಾಕ್ಷಿಯನ್ನು ಬಿಜ್ಜಳನಿಗೆ ಹೇಳಲು, ವಿಸ್ತಾರವಾದ ಆಕಾಶ ಧ್ವನಿಯೊಂದು ದಶದಿಕ್ಕುಗಳನ್ನು ವ್ಯಾಪಿಸಿತು. ಹೀಗೆ ಕಿನ್ನರಯ್ಯನು ಆಕಾಶವನ್ನೇ ನುಡಿಸಿದನು.

೭. ಆ. ೧. ಪ. ೨೨. ಶಿವನೇದೈವಮೆಂದುತ್ತೆ ತೋರಿ ನಿಜಮಂ ಎಂಬುದಕ್ಕೆ ಕಥೆ : ದೇವರದಾಸಿಮಯ್ಯನು ಪೊಟ್ಟಲಕೆರೆಯ ಅರಸನಾದ ಜಯಸಿಂಹನ ಆಸ್ಥಾನದಲ್ಲಿ ಜೈನ, ಬೌದ್ಧ, ವೈಷ್ಣವವಾದಿಗಳನ್ನೆಲ್ಲ ವಾದದಲ್ಲಿ ಸೋಲಿಸಿ ಶಿವನೇ ದೈವವೆಂದು ಸಾರಿ, ಮಾಹಾತ್ಮೆಯನ್ನು ಪ್ರಕಟಿಸಿ ಅವರನ್ನೆಲ್ಲ ವೀರಶೈವರನ್ನಾಗಿ ಮಾಡಿದನು,

೮. ಆ. ೧. ಪ. ೨೩. ಶಿವನಂ ಸಂಪ್ರೀತಿಯಿಂ ದೂದಟ್ಟಿ ಎಂಬುದಕ್ಕೆ ಕಥೆ : ಚೋಳರಾಜ್ಯದ ಮುರುಂಗೊಂಟೆ (ಚೆಂಗೊಂಡೆ) ಎಂಬ ಊರಲ್ಲಿ ಪಿಡ್ಡವ್ವ ಎಂಬ ಶಿವಭಕ್ತಳಿದ್ದಳು. ಅವಳು ದೋಸೆಗಳನ್ನು ಹೊಯ್ದು ಶಿವಶರಣರಿಗೆ ಪ್ರಸಾದಕೊಡುವ ಕಾಯಕ ಮಾಡುತ್ತಿದ್ದಳು. ಚೋಳರಾಜನು ಕೆರೆಕಟ್ಟಿಸುವ ಕಾರ್ಯಕ್ಕೆ ಪಿಡ್ಡವ್ವೆ ಬಿಟ್ಟಿ ಕೆಲಸಕ್ಕೆ ಬರಬೇಕೆಂದು ಒತ್ತಾಯ ಬಂತು. ಮುದುಕಿಯಾದ ಅವಳು ಆ ಕಾರ್ಯಕ್ಕೆ ಅಸಮರ್ಥಳಾಗಿದ್ದಳು. ಶಿವನು ಓರ್ವತರುಣನ ವೇಷದಿಂದ ಅವಳ ಪರವಾಗಿ ಹೋಗಿ ಆ ಬಿಟ್ಟಿಯ ಕೆಲಸ ಮಾಡಿದನು.

೯. ಆ. ೧. ಪ. ೨೩ : ಶಿವನಿಂದ ಅದ್ಭುತಾಯುವಂ ಪಡೆದ ಕಥೆ :—ದೇವರಾಜ ಶಚೀದೇವಿಯರಿಗೆ ಪುತ್ರನಾದ ಮಲೆಯರಾಜನೆಂಬುವನು ಅಲ್ಪಾಯುಷಿಯಾಗಿದ್ದನು. ಇವನು ಶಿವಲಿಂಗವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜೆಮಾಡಿ ನೂರುವರ್ಷ ಆಯುಷ್ಯವನ್ನು ಪಡೆದು ಕೊನೆಗೆ ತನ್ನ ನವಲಕ್ಷ ದೇಶಸಹಿತ ಕೈಲಾಸಕ್ಕೆ ಹೋದನು.

೧೦. ಆ ೧-ಪ ೨೩ : **ಶಿವನೊಳ್ ಕೂರ್ತು ಒಡನುಂಡುದಕ್ಕೆ ಕಥೆ** :—ಕಾಂಚಿ ಪಟ್ಟಣದಲ್ಲಿದ್ದ ಮಾದಾರ ಚೆನ್ನಯ್ಯನು ಕಾರಿಕಾಲ ಚೋಳ ರಾಜನ ಕುದುರೆಯ ಲಾಯಕ್ಕೆ ಹುಲ್ಲು ಹಾಕುವ ಕಾಯಕ ಮಾಡಿಕೊಂಡಿದ್ದನು. ಚೆನ್ನಯ್ಯನ ಭಕ್ತಿಯನ್ನು ಲೋಕಕ್ಕೆ ಪ್ರಕಟಗೊಳಿಸಬೇಕೆಂದು ಶಿವನು ಒಂದು ದಿನ ಚೆನ್ನಯ್ಯನು ತನಗೆ ಅರ್ಪಿಸುತ್ತಿದ್ದ ಅಂಬಲಿಯನ್ನು ಹೊಟ್ಟೆ ತುಂಬ ಅವನೊಡನೆಯೇ ಊಟ ಮಾಡಿದನು. ಕಾರಿಕಾಲ ಚೋಳನು ಅರ್ಪಿಸಿದ ಷಡ್ರಸೋಪೇತ ಭಕ್ಷ್ಯವನ್ನು ಮುಟ್ಟಲಿಲ್ಲ. ಚೋಳನು ಕಾರಣ ಕೇಳಿದ್ದಕ್ಕೆ ಚೆನ್ನಯ್ಯನ ಮನೆಯಲ್ಲಿ ಊಟಮಾಡಿದ ವಿಚಾರ ತಿಳಿಸಿದನು.

೧೧. ಆ ೧-ಪ-೨೪ : **ಧನವನಿತಾ ತನೂಭವ ಮನಸ್ಸನು ಮುಖ್ಯವನ್ನಿತ್ತು ಶಂಭುಕೃಪೆ ಪಡೆದ ಅನುಪಮಭಾವರು** :—

(i) **ಧನವನ್ನಿತ್ತವನು ಎಂಬುದಕ್ಕೆ ಕಥೆ** :—ಚೋಳಮಂಡಲದ ಕಾಂಚಿ ಪಟ್ಟಣದಲ್ಲಿ ದೀಪದ ಕಲಿ, ಕಲಿಯನಾಯನಾರು, ಕಲಿಯಾರು-ಇತ್ಯಾದಿ ಅನೇಕ ಹೆಸರುಗಳಿಂದ ಪ್ರಖ್ಯಾತನಾದ ಒಬ್ಬ ವ್ಯಾಪಾರಿ ೬೬ ಕೋಟಿ ದ್ರವ್ಯದ ಒಡೆಯನೆನಿಸಿದ್ದನು. ಒಮ್ಮೆ ವ್ಯಾಪಾರಕ್ಕೆಂದು ಕಾಡಿನಲ್ಲಿ ಹೋಗುತ್ತಿದ್ದಾಗ ಹುಲಿಯ ಗರ್ಜನೆಗೆ ಹೆದರಿ ಅಡವಿ ಪಾಲಾದನು. ಅಡವಿಯಲ್ಲೊಂದು ಶಿವಾಲಯವನ್ನು ಕಂಡು ಅಲ್ಲಿಯೇ ನಿಂತು ಆ ಗುಡಿಯ ಜೀರ್ಣೋದ್ಧಾರ ಮಾಡಿಸಲು, ಅದಕ್ಕೆ ಕೋಟೆಯನ್ನು ಕಟ್ಟಲು ತನ್ನ ಧನವನ್ನೆಲ್ಲ ವ್ಯಯ ಮಾಡಿದನು. ಕೊನೆಗೆ ದೀಪ ಹೊತ್ತಿಸಲೂ ಗತಿಯಿಲ್ಲದೆ ತನ್ನ ತಲೆಗೂದಲನ್ನೇ ಕಕ್ಕಡ ಮಾಡಿ ಉರಿಸಿ ಕೈಲಾಸಕ್ಕೆ ಹೋದನು. ಇವನಂತೆಯೇ ಕಲಿಯ ನಾಯನಾರು ಎಂಬುವನೂ ಧನವನ್ನಿತ್ತ ಪುರಾತನನು.

(ii) **ವನಿತೆಯನ್ನಿತ್ತುದಕ್ಕೆ ಕಥೆ** :—ಕಾವೇರಿ ಪುರದಲ್ಲಿ ಸಿಂಧು ಬಲ್ಲಾಳನೆಂಬ ಭಕ್ತನಿದ್ದನು. ಈತನ ಭಕ್ತಿಯನ್ನು ಪರೀಕ್ಷಿಸುವುದಕ್ಕೆ ಶಿವನು ಜಂಗಮರೂಪದಿಂದ ಬಂದು ಸತಿಯನ್ನೇ ಬೇಡಿದನು. ಸಿಂಧುಬಲ್ಲಾಳನು ಹಿಂದುಮುಂದು ನೋಡದೆ ಆ ಜಂಗಮನ ಇಚ್ಛೆಯನ್ನು ಪೂರೈಸಲು ಶಿವನು ಶಿಶುವಾಗಿ ಅವಳ ಮೊಲೆಯುಣ್ಣುತ್ತಿದ್ದನು. (ಗ್ರಂಥಾಂತರದಲ್ಲಿ ಈ ಕಥೆಯಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ).

(iii) **ತನೂಭವನನ್ನಿತ್ತುದಕ್ಕೆ ಕಥೆ** :—ಕಾಂಚಿ ನಗರದಲ್ಲಿ ಚಿರುತೊಂಡ ಅಥವಾ, ಸಿರಿಯಾಳಸೆಟ್ಟಿ ಎಂಬ ಭಕ್ತನಿದ್ದನು. ಇವನ ಹೆಂಡತಿಯ ಹೆಸರು ಚಂಗಳೆ. ಶಿವನು ಇವರೀರ್ವರ ಭಕ್ತಿಯನ್ನು ಪರೀಕ್ಷಿಸಲು ಬಂದು, ಇವರ ಮಗನನ್ನು ಕೊಂದು ಆ ಮಾಂಸದ ಅಡಿಗೆಯನ್ನು ಅಪೇಕ್ಷಿಸಿದನು. ಗಂಡಹೆಂಡಿರಿಬ್ಬರೂ ಶಿವನ ಅಪೇಕ್ಷೆಯನ್ನು ಪೂರೈಸಿದರು. ಶಿವನು ಇವರ ಭಕ್ತಿಗೆ ಪ್ರಸನ್ನನಾಗಿ ಸತ್ತ ಮಗನನ್ನು ಪುನಃ ಜೀವಂತನನ್ನಾಗಿ ಮಾಡಿ ಕೈಲಾಸಕ್ಕೆ ಕರೆದೊಯ್ದನು.

(iv) **ಮನವನಿತ್ತವರು** :—ಸಾಮಾನ್ಯವಾಗಿ ಈಶ್ವರನಿಗೆ ಮನಸ್ಸನ್ನು ಇತ್ತವರು ಎಲ್ಲ ಪುರಾತನರೂ ಆಗುತ್ತಾರೆ. ಮನಸ್ಸಿನಲ್ಲಿ (ಹೃದಯದಲ್ಲಿ) ಲಿಂಗಪ್ರತಿಷ್ಠೆಯ

ಮಾಡಿ ಭಾವ ಕುಸುಮದಿಂದ ಪೂಜಿಸುತ್ತಿದ್ದ ಪಾಹಿಲ್ಯನೆಂಬುವನು ಚೋಳದೇಶದ ತಿರುಪೊನ್ನೆಯೆಂಬಲ್ಲಿದ್ದನು. ಅರುವತ್ತು ಮೂವರಲ್ಲಿ ಇವನೊಬ್ಬ. ಇವನು ಖಡ್ಗದಿಂದ ತನ್ನ ಎದೆಯನ್ನು ಸೀಳಿ ಕಲ್ಪತರು ಪುಷ್ಪಗಳಿಂದ ಪೂಜೆಗೊಂಡ ಶಿವಲಿಂಗವನ್ನು ಜಂಗಮ ಸಮೂಹಕ್ಕೆ ತೋರಿಸಿದನು. ಶಿವನಿಗೆ ಸಂಪೂರ್ಣವಾಗಿ ತನ್ನ ಮನಸ್ಸನ್ನಿತ್ತ ಪುರಾತನನೀತನಾಗಿದ್ದಾನೆ.

(v) **ತನುವನ್ನಿತ್ತವನ ಕಥೆ :**—ಸಿಂಧು ದೇಶದ ರಾಜನಾದ 'ಸಿಂಧುಮರಾಳ'ನೆಂಬುವನು ತನ್ನ ತನುಮನಧನವೆಲ್ಲ ಜಂಗಮಾರ್ಪಿತವೆಂದು ಸಾರಿದ್ದನು. ಶಿವನು ಇವನ ಭಕ್ತಿಯನ್ನು ಪರೀಕ್ಷಿಸಲು ಜಂಗಮರೂಪದಿಂದ ಬಂದು, ದೇಹದಲ್ಲಿ ಅರ್ಧಭಾಗವನ್ನು ಕೇಳಿದನು. ರಾಜನು ಗರಗಸ ತರಿಸಿ ಅರ್ಧದೇಹವನ್ನು ಕೊರೆಸಿಕೊಟ್ಟನು. ಎಡಗಡೆ ಭಾಗದಲ್ಲಿದ್ದ ಎಡಗಣ್ಣಿನಿಂದ ನೀರು ಸುರಿಯ ತೊಡಗಲು ಜಂಗಮನು 'ಅಳುತ್ತ ಕೊಡುವ ದಾನ ಸ್ವೀಕರಿಸುವುದಿಲ್ಲ'ವೆಂದಾಗ, ರಾಜನು 'ನಾನು ಅಳುತ್ತಿಲ್ಲ' ಎಡಭಾಗ ವ್ಯರ್ಥವಾಯಿತಲ್ಲಾ ! ಎಂಬ ಸಂಕಟವಾಯಿತು ಅದಕ್ಕಾಗಿ ಕಣ್ಣೀರು ಬಂದುವೆಂದನು. ಶಿವನು ಮೆಚ್ಚಿ ಕೈಲಾಸಕ್ಕೆ ಕರೆದೊಯ್ದನು.

(೧೨) ಅ. ೫, ಪ-೨೧-**ವೃಷಭನು ಶಿಂಶುಮಾರನನಿಕ್ಕಿದ ಕಥೆ :**—ತ್ರಿಪುರಸಂಹಾರ ಕಾಲದಲ್ಲಿ ಶಿಂಶುಮಾರನೆಂಬ ರಾಕ್ಷಸನಿಗೂ ನಂದೀಶ್ವರನಿಗೂ ಘೋರ ಯುದ್ಧವಾಯಿತು. ದೇವತೆಗಳನ್ನೆಲ್ಲ ಸದೆಬಡಿದ ಈತನು ನಂದಿಯನ್ನು ನುಂಗಿಬಿಡುವೆನೆಂದು ಬಾಯ್ದೆರೆಯಲು ನಂದಿಯು ಅವನ ಬಾಯಿಯ ಮೂಲಕವೇ ಗರ್ಭವನ್ನು ಪ್ರವೇಶಿಸಿ ಬೃಹದಾಕಾರವಾಗಿ ಬೆಳೆಯಲು ರಾಕ್ಷಸನು ನುಚ್ಚುನೂರಾಗಿ ಸತ್ತುಹೋದನು. (ಚೆ. ಬ. ಪುರಾಣ ತ್ರಿಪುರಸಂಹಾರಸಂಧಿ. ನೋ.).

೧೩. ಅ ೫, ಪ-೬೩–**'ಸುರಗಿಯ ಚೌಡಯ್ಯ ಶಂಕರಗೆ ತುತ್ತನೀವ ತೆರದಿಂ'** ಎಂಬುದಕ್ಕೆ **ಕಥೆ :**– ಉತ್ತರದೇಶದ ಶಿವಪುರ ಎಂಬಲ್ಲಿ ಶಿವನಿಗೆ ದಿವ್ಯಾನ್ನಗಳನ್ನು ಮಾಡಿಸಿ ಶಿವಾಲಯಕ್ಕೆ ತಂದು ನೈವೇದ್ಯಮಾಡಿ 'ಚೆನ್ನಯ್ಯನ ಮನೋನಿಧಿಯೇ, ಆರೋಗಿಸು' ಎಂದನು. ಶಿವನು ಸುಮ್ಮನೇ ಇರಲು ಖಡ್ಗದಿಂದ ಶಿರಚ್ಛೇದನ ಮಾಡಲುದ್ಯುಕ್ತನಾಗಲು ಲಿಂಗದಿಂದ ಹಸ್ತವನ್ನು ನೀಡಿ ಖಡ್ಗವನ್ನು ತಡೆದು ಶಿವನು ಆರೋಗಿಸಲುದ್ಯುಕ್ತನಾದನು. ಚೌಡಯ್ಯನೇ ಸಾಕ್ಷಾತ್ತಾಗಿ ಶಿವನ ಐದೂ ಮುಖಗಳಿಗೆ ತುತ್ತನ್ನು ಮಾಡಿ ಮಾಡಿ ಊಟ ಮಾಡಿಸತೊಡಗಿದನು.

೧೪. ಅ-೬, ಪ-೨೯–**ಚೋಳನಿಗೆ ಕನಕವೃಷ್ಟಿಯ ಕರೆಸಿದ ಕಥೆ :**– ಕಾಂಚಿನಗರದ ಕರಿಕಾಲ ಚೋಳಮಹಾರಾಜನ ಭಕ್ತಿಗೆ ಮೆಚ್ಚಿ ಇಷ್ಟಾರ್ಥವನ್ನು ಬೇಡೆನ್ನಲು ಚೋಳ ಮಹಾರಾಜನು ನನ್ನನ್ನು ಹೆತ್ತ ವೈಷ್ಣವಚೋಳನು ಲಿಂಗದ ಮೇಲಿದ್ದ ಪುಷ್ಪವನ್ನು ಮೂಸಿ ನೋಡಲು ತಿರುವರುಹನೆಂಬ ಪೂಜಾರಿಯು 'ನಿನ್ನ ಮೇಲೆ ಮಣ್ಣು ಮಳೆ ಕರೆದು ನೀನು ಸಾಯಿ' ಎಂದನು. ಆ ಕಾರಣದಿಂದ ಸತ್ತುಹೋದ ನಿಂದೆಯ ಪರಿಹಾರ

ಕ್ಕಾಗಿ ನಿಮ್ಮ ಕೃಪೆಯಿಂದ ನನಗೆ ಹೊನ್ನಿನ ಮಳೆಯನ್ನು ಸುರಿಸೆಂದನು. ಶಿವನು ಧಾರಾಕಾರವಾಗಿ ಹೊನ್ನಿನ ಮಳೆ ಸುರಿಸಿದನು. ಈ ಕಾರಣದಿಂದ ಚೋಳನ ರಾಜ್ಯದ ಎಲ್ಲ ಪ್ರಜೆಗಳೂ ಧನ್ಯರಾದರು.

೧೫. ಅ. ೫, ಪದ್ಯ-೩೧ ರಿಂದ-೪೫ ರ ವರೆಗೆ ಬರುವ ಎಲ್ಲ **ಪೂರ್ವಕಥೆಗಳೂ** ಈ ಗ್ರಂಥದಲ್ಲಿ ಅಲ್ಲಲ್ಲಿ ಬಂದಿವೆ. ಆದುದರಿಂದ ಈ ಪೂರ್ವ ಕಥೆಗಳನ್ನಿಲ್ಲಿ ಕೈಬಿಟ್ಟಿದೆ.

೧೬. ಅ-೯, ಪ-೧೦–**ಪಾರ್ಥಂ ಧನುವಿಂದೆ ಪೊಯ್ದು ಕಥೆ**-ಶಿವನ ಕಿರಾತ ರುದ್ರ ಲೀಲೆಯ ಸಂದರ್ಭದಲ್ಲಿ ಘಟಿಸಿದ ಶಿವ ಮತ್ತು ಅರ್ಜುನರ ಯುದ್ಧ ಪ್ರಸಂಗದಲ್ಲಿ ಅರ್ಜುನನು ಶಿವನನ್ನು ಧನುಸ್ಸಿನಿಂದ ಹೊಡೆದನು. (ಈ ಪದ್ಯದಲ್ಲಿ ಬಂದ ಇನ್ನಿತರ ಕಥೆಗಳೆಲ್ಲ ಸಾಮಾನ್ಯವಾಗಿ ಈ ಗ್ರಂಥದಲ್ಲಿಯೇ ಬಂದಿವೆ).

೧೭. ಅ. ೧೨, ಪ-೧೦–**ಪುಲಿಯುಡುಪನ ಕಥೆ**- ಶಿವಕೋಶವೆಂಬ ಪಟ್ಟಣದಲ್ಲಿ ಪುಲಿಯುಡುಪನೆಂಬ ಅಗಸ ಭಕ್ತನಿದ್ದನು. ಅವನ ಹೆಂಡತಿ ಶಿವಜ್ಞಾನದೇವಿ, ಇವರೀರ್ವರೂಸೇರಿ ತಮ್ಮ ಕಾಯಕ ಮಾಡಿಕೊಂಡು ಜಂಗಮ ಭಕ್ತಿಯನ್ನಾಚರಿಸುತ್ತಿದ್ದರು. ಈ ಒಂದು ದಿನ ಶಿವನು ಪುಲಿಯುಡುಪನು ಬಟ್ಟೆತೊಳೆಯುವಲ್ಲಿಗೆ ಬಂದು–'ನಮ್ಮ ಹುಲಿಯ ಚರ್ಮವು ಮಾಸಿಹೋಗಿದೆ ತೊಳೆದುಕೊಡೆ'ನ್ನಲು ಪುಲಿಯುಡುಪನು ಹಾಗೇ ಹಾಗಲೆಂದು ಅದನ್ನು ತೆಗೆದುಕೊಂಡು ತೊಳೆದುಹಾಕಿದನು. ಅದು ಮಾಯವಾಗಿ ಹೋಯಿತು. ಶಿವನು ಪುನಃ ಬಂದು ತನ್ನ ಹುಲಿಚರ್ಮವನ್ನು ಬೇಡಿದನು. ಆಗ ಪುಲಿಯುಡಪನು ಕೊರಳಿನಿಂದ ಮೊಳಕಾಲವರೆಗಿನ ತನ್ನ ದೇಹದ ಚರ್ಮವನ್ನೇ ಸುಲಿದು ಕೊಡುವಾಗ ಮೆಚ್ಚಿದ ಶಿವನು ಅವನಿಗೆ ಕೈಲಾಸ ಪದವಿಯನ್ನಿತ್ತನು.

೧೮. ಅ-೧೨, ಪ-೧೦; **ಏಕಾಳಿಯ ಕಥೆ**-ತಿರಿಕಟಕವೆಂಬ ಪಟ್ಟಣದಲ್ಲಿ ಏಕಾಳಿ-ಜ್ಞಾನಾನಂದ ದೇವಿಯರೆಂಬ ದಂಪತಿಗಳಿದ್ದರು. ಅವರು ಅಗಸರು. ಇಬ್ಬರೂ ಜಂಗಮ ಭಕ್ತಿಯನ್ನು ಮಾಡುತ್ತಿದ್ದನು. ಒಂದು ದಿನ ಶಿವನು ಇವರ ಭಕ್ತಿಯನ್ನು ಪ್ರಕಟಿಸಬೇಕೆಂದು ಏಕಾಳಿಯ ಹತ್ತಿರಕ್ಕೆ ಬಂದು ತನ್ನ ಈ ಆನೆಯ ಚರ್ಮವನ್ನು ಬಿಳುಪುಮಾಡಿ ಕೊಡೆಂದನು. ಅವನು ಅದನ್ನು ತೆಗೆದುಕೊಂಡು ಅನೇಕ ವಿಧದಲ್ಲಿ ಅದನ್ನು ತೊಳೆದರೂ ಅದು ಬೆಳ್ಳಗಾಗಲಿಲ್ಲ. ಆಗ ತನ್ನ ಎದೆಯನ್ನು ಸೀಳಿ ಆ ರಕ್ತದಲ್ಲಿ ಚರ್ಮವನ್ನುನೆನೆಸಿ ತೊಳೆಯಲು ಅದು ಬಿಳುಪಾಯಿತು. ಶಿವನು ಮೆಚ್ಚಿ ಕೈಲಾಸಕ್ಕೆ ಕರೆದೊಯ್ದನು.

೧೯. ಅ-೧೨. ಪ-೩೮; **ನರಸಿಂಹನನ್ನು ಶರಭೇಂದ್ರನು ಸೀಳಿದ ಕಥೆ** : ನರಸಿಂಹಾವತಾರ ಮಾಡಿ ವಿಷ್ಣುವು ಹಿರಣ್ಯಕಶ್ಯಪನನ್ನು ಕೊಂದಮೇಲೆ, ಆ ರಕ್ಕಸನ ನೊರೆನೆತ್ತರಿನಿಂದ ಮದೋನ್ಮತ್ತನಾಗಿ ಅವನಿಗೆಂಟುಮಡಿ ಲೋಕ ಕಂಟಕನಾಗಿ ದೇವತೆಗಳನ್ನೆಲ್ಲ ಪೀಡಿಸುತ್ತ ವರ್ತಿಸತೊಡಗಿದನು. ದೇವತೆಗಳು ಬೇಸತ್ತು ಶಿವನಿಗೆ ಮೊರೆ ಹೋಗಲು ಶಿವನು ವೀರಭದ್ರನನ್ನು ಕರೆದು 'ನರಸಿಂಹನಿಗೆ ಉಪದೇಶ ಹೇಳಿ ಕರೆದು ತಾ. ಬಾರದಿದ್ದರೆ ಅವನ ಶಿರವನ್ನೂ ಚರ್ಮವನ್ನೂ ತೆಗೆದುಕೊಂಡು ಬಾ' ಎಂದು ಹೇಳಿಕಳಿಸಿದನು.

ವೀರೇಶನು ಹೇಳಿದ ಬುದ್ಧಿವಾದವನ್ನು ಕೇಳದ ನರಸಿಂಹನನ್ನು ಕೊಂದು ಅವನ ಶಿರವನ್ನೂ ಚರ್ಮವನ್ನೂ ತಂದೊಪ್ಪಿಸಿದನು. ಶಿವನು ಸಂತೋಷ ಪಟ್ಟು ಆ ಶಿರಸ್ಸಿಗೆ 'ಕೀರ್ತಿಮುಖ'ವೆಂದು ಹೆಸರಿಟ್ಟು ತನ್ನ ಪ್ರಭಾವಳಿಯ ಮಧ್ಯದಲ್ಲಿರಿಸಿದನು. ಚರ್ಮವನ್ನು ಸಿಂಹಾಸನದಲ್ಲಿ ಅಲಂಕರಿಸಿ ಮೇಲೇರಿ ಕುಳಿತು ವೀರೇಶನನ್ನು ಸನ್ಮಾನಿಸಿದನು.

೨೦. ಆ-೧೩, ಪ-೩೩; **ದಾಸಯ್ಯನು ಶಿವನಿಗೆ ಬಟ್ಟೆಯನ್ನು ಕೊಟ್ಟು ತವನಿಧಿಯನ್ನು ಪಡೆದ ಕಥೆ :**– ದಾಸಿಮಾರ್ಯನು (ಜೇಡರ ದಾಸಿಮಾರ್ಯನು) ಕಷ್ಟಪಟ್ಟು ೧೨ ವರ್ಷ ಪರ್ಯಂತ ಹೆಂಡತಿಯಾದ ದುಗ್ಗಳೆಯೊಡನೆ ಸೇರಿ ಒಂದು ಬೆಲೆಯುಳ್ಳ ವಸ್ತ್ರವನ್ನು ನೆಯ್ದು ಸಿದ್ಧಪಡಿಸಿದ್ದನು.-ಅದನ್ನು ಮಾರಿಕೊಂಡು ಬರಲು ಸಿದ್ದಾಪುರ ಸಂತೆಗೆ ಒಯ್ದು ಅಲ್ಲಿ ಅದಕ್ಕೆ ಬೆಲೆಕೊಟ್ಟು ಕೊಳ್ಳುವವರೇ ಇಲ್ಲವಾಗಲು ತಿರುಗಿ ಮನೆಗೆ ಬರುತ್ತಿದ್ದನು. ಜಂಗಮಾಕಾರದಿಂದ ಶಿವನು ಬಂದು ಆ ವಸ್ತ್ರ ತನಗೆ ಬೇಕೆಂದು ಬೇಡಿಪಡೆದು ಅವರ ಕಣ್ಣೆದುರಿನಲ್ಲಿಯೇ ಪರ ಪರ ಹರಿದು ಹಾಕಿದನು. ಅದನ್ನು ಕಂಡ ದಾಸಿಮಾರ್ಯ ಸ್ವಲ್ಪವೂ ವ್ಯಥೆಪಟ್ಟುಕೊಳ್ಳದೆ ಸಂತೋಷ ಚಿತ್ತನೇ ಆಗಿರುವುದನ್ನು ಕಂಡು ಶಿವನು ಮೆಚ್ಚಿ ಹಿಡಿ ಧಾನ್ಯವನ್ನು ಕೊಟ್ಟನು. ಆ ಧಾನ್ಯವನ್ನು ತಂದು ದುಗ್ಗಳೆಯ ಕೈಗೆ ಕೊಟ್ಟನು, ದುಗ್ಗಳೆ ಅದನ್ನು ಖಂಡುಗಧಾನ್ಯವೆಂದು ಕಣಜದಲ್ಲಿ ಹಾಕಿದಳು. ಅದೇ ತವನಿಧಿಯಾಯಿತು.

೨೧. ಆ. ೧೪, ದ-೧೬; **ಜಲಂಧರೋಗ್ರ ಶಿರವೆಂಬವೊಲ್ ಆದುದು ಎಂಬುದಕ್ಕೆ ಕಥೆ :** ಜಲಂಧರನೆಂಬ ರಾಕ್ಷಸನು ಮದೋನ್ಮತ್ತನಾಗಿ ದೇವತೆಗಳನ್ನೆಲ್ಲ ಬಗ್ಗುಬಡಿದು ಇಂದ್ರನ ಅಮರಾವತಿಯನ್ನು ಮುತ್ತಿ ಅವನನ್ನೋಡಿಸಿ ಭಯಂಕರ ಕೋಲಾಹಲವನ್ನು ಮಾಡುತ್ತಿರಲು ದೇವತೆಗಳೆಲ್ಲ ಶಿವನ ಮೊರೆಹೊಕ್ಕರು. ಶಿವನು ಲೋಕರಕ್ಷಣಾರ್ಥವಾಗಿ ಅವನನ್ನು ಕೊಲ್ಲಲು ಹೋಗಿ ಬಾಣಗಳನ್ನು ಪ್ರಯೋಗಿಸಿದನು. ಆಗ ತನ್ನ ಹೃದಯ ಕಮಲದ ಅಖಂಡ ಚಿನ್ಮಯನನ್ನೇ ಎದುರಿನಲ್ಲಿ ಕಂಡ ಜಲಂಧರನು ಸಾಷ್ಟಾಂಗ ನಮಸ್ಕಾರ ಮಾಡಿದನು. ಶಿವನು 'ನಿನ್ನ ಭಕ್ತಿಗೆ ಮೆಚ್ಚಿದ್ದೇನೆ' ಇಷ್ಟಾರ್ಥವೇನೆಂದು ಕೇಳಿದನು. ಆಗ ಜಲಂಧರನು-'ಶಿವನೇ, ನಿನ್ನೊಡನೆ ಗರ್ವದಿಂದ ಕಾದಿದ ಈ ಒಡಲನ್ನು ಬಿಚ್ಚಿ ಬಿಸುಟು ನನ್ನ ಆತ್ಮವನ್ನು ನಿನ್ನಲ್ಲಿ ಕೂಡಿಸಿಕೋ' ಎಂದನು. ಈಶ್ವರನು ತನ್ನ ಪಾದದ ಅಂಗುಷ್ಠದಿಂದ ಭೂಮಿಯ ಮೇಲೆ ಚಕ್ರವನ್ನು ಬರೆದು ಮೂರುಕಣ್ಣಿನಿಂದ ಅದನ್ನು ನೋಡಲು ಸೂರ್ಯ ಚಂದ್ರರೇ ಅದರ ಅಲಗುಗಳಾದರು; ಅಗ್ನಿಯೇ ಪಟ್ಟಿಯಾಯಿತು. ಇಂಥ ಚಕ್ರವನ್ನು ಜಲಂಧರನ ಕುತ್ತಿಗೆಗೆ ಇಡಲು ಅದು ಕತ್ತರಿಸಿತು. ಜಲಂಧರನ ಆತ್ಮಜ್ಯೋತಿ ಈಶ್ವರನ ಹಣೆಗಣ್ಣಿನಲ್ಲಿ ಬೆರೆಯಿತು.

೨೨. ಆ. ೧೪, ಪ-೯೫; **ಗುಂಡಯ್ಯಂಗೆ ನವಯೌವನಮಂ ಕೊಟ್ಟ ಕಥೆ :** ಇಲ್ಲಿ ಗುಂಡಯ್ಯ ಎಂದರೆ ತಿರುನೀಲಕಂಠರು. ಕುಂಬಾರ ವೃತ್ತಿಯಲ್ಲಿ ಪೊನ್ನಾಂಬಲದಲ್ಲಿ ಇದ್ದ ಇವರ ಹೆಂಡತಿಯ ಹೆಸರು 'ಸತ್ಯವತಿ' ('ಮುತ್ತೈದೆ' ಎಂದು ಹರಿಹರಿಯ ಕವಿಯ ಪ್ರಕಾರ) ಗುಂಡಾಭಕ್ತರಾದ ಇವರು ತಮ್ಮ ಕಾಯಕಮಾಡಿಕೊಂಡು ಲಿಂಗಭಕ್ತಿಯಲ್ಲಿ ವ್ಯವಹರಿಸು

ತ್ತಿದ್ದರು. ಒಂದು ದಿನ ರಾತ್ರಿ ಗುಂಡಯ್ಯಗಳು ಶಿವಾಲಯದಿಂದ ಮನೆಗೆ ಬರುವಾಗ ವಿಲಾಸಿನಿಯೊಬ್ಬಳು ಚೆಲ್ಲಿದ ಎಂಜಲುತಟ್ಟೆ ತೊಳೆದ ನೀರು ತಿರುನೀಲಕಂಠರಮೇಲೆ ಬಿದ್ದಿತು. ತಿರುನೀಲಕಂಠರು ಹಾಗೆಯೇ ಮುಂದುವರಿದರು. ವಿಲಾಸಿನಿಗೆ ತನ್ನ ತಪ್ಪಿನ ಅರಿವಾಗಿ ತಿರುನೀಲಕಂಠರನ್ನು ಮನೆಗೆ ಕರೆದೊಯ್ದು ಮಜ್ಜನ ಸುಗಂಧಾನು ಲೇಪನ ದಿವ್ಯವಸ್ತ್ರ ವಿಭೂಷಣಾದಿಗಳಿಂದ ಕಳಿಸಿಕೊಟ್ಟಳು. ಮನೆಗೆ ಬಂದ ತಿರುನೀಲಕಂಠರ ಬಗೆಗೆ ಸತ್ಯವತಿಗೆ ಸಂಶಯ ಬಂದು ಮುಟ್ಟಿದರೆ ಶಿವನಾಣೆಯೆಂದು ಆಣೆ ಇಟ್ಟಳು. ಶಿವ ನಾಣೆ ಪಕ್ವಕ್ಕೆ ಬಂದಂತೆ ದೇಹಕ್ಕೂ ಮುಪ್ಪು ಬಂತು, ಶಿವನು ಇವರ ಭಕ್ತಿಯನ್ನು ಲೋಕಕ್ಕೆ ಪ್ರಕಟಿಸಲು ವೃದ್ಧ ಜಂಗಮವೇಷದಿಂದ ಬಂದು, ತನ್ನ ಭಿಕ್ಷದ ಬಟ್ಟಲನ್ನು ಅವರಕೈಗೆ ಕೊಟ್ಟು, 'ಇದನ್ನು ನಿಮ್ಮ ಮನೆಯಲ್ಲಿ ಭದ್ರವಾಗಿಟ್ಟಿರಿ, 'ನಾಳೆ ಬಂದು ಒಯ್ಯುವ'ನೆಂದು ಹೇಳಿ ಹೋಗಿ ಮರುದಿನ ಬಂದು ಬಟ್ಟಲನ್ನು ಕೇಳಿದನು. ಪೆಟ್ಟಿಗೆ ಯಲ್ಲಿಟ್ಟ ಬಟ್ಟಲು ಇಲ್ಲದಾಗಿತ್ತು. ವೃದ್ಧನು ಬಟ್ಟಲು ಬೇಕೆಂದು ಅರ್ಭಟವಮಾಡಿ ಹೆದ ರಿಸಿ, ಹಿಂಸಿಸಿದನು. ಕೊನೆಗೆ ನೀನು ನಿನ್ನ ಹೆಂಡತಿಯ ಕೈಹಿಡಿದು ಹೊಂಡದೊಳಗೆ ಹೊಕ್ಕರೆ ಬಿಡುವೆನೆನ್ನುವನು. ಅದಕ್ಕೆ ಶಿವನಾಣೆ ಅಡ್ಡ ಬಂದು ಅವರು ಒಪ್ಪಲಿಲ್ಲ; ಕೊನೆಗೆ ಒಂದು ಕೋಲಿನ ಎರಡೂ ತುದಿಗಳನ್ನು ಹಿಡಿದು ಹೊಂಡವನ್ನು ಹೊಗಲು ಕೇಳಿದನು. ಅದಕ್ಕೆ ಅವರು ಒಪ್ಪಿ ಕೋಲ ತುದಿಹಿಡಿದು ಹೊಂಡದಲ್ಲಿ ಮುಳುಗಿ ಏಳಲು ಮೊದಲಿನ ಹದಿನಾರರ ಹರಯ ಪ್ರಾಪ್ತವಾಯಿತು. ಶಿವನು ಪ್ರತ್ಯಕ್ಷನಾಗಿ, ಇನ್ನು ತೊಂಬತ್ತು ವರ್ಷ ದಾಂಪತ್ಯ ಸುಖದಲ್ಲಿದ್ದು ಕೈಲಾಸಕ್ಕೆ ಬನ್ನಿರೆಂದು ಹೇಳಿ ಅಂತರ್ಧಾನ ನಾದನು.

೨೩. ಆ. ೧೪, ಪ-೯೫ ಶಿವನು ಮಾನಕಂಜರಾಶ್ರೀಶನೆಡೆಗೆ ಕಚೌಘವುನರ್ಥಿಸಿ ಪೋದುದಕ್ಕೆ ಕಥೆ :- ಕಂಜಾರಿ ಎಂಬ ಪಟ್ಟಣದಲ್ಲಿ ಮಾನಕಂಜರನೆಂಬ ರಾಜನಿದ್ದನು. ಅವನು ಶಿವಭಕ್ತ ಶ್ರೇಷ್ಠ. ಒಮ್ಮೆ ಅವನ ತನ್ನ ಮಗಳಾದ 'ತಿರುಮುಡಿಯೊಡೆಯಳು' ಎಂಬ ಮಗಳನ್ನು ಚೋಳರಾಯನಿಗೆ ಕೊಟ್ಟು ಲಗ್ನ ನೆರವೇರಿಸುತ್ತಿರುವ ಸಂದರ್ಭದಲ್ಲಿ ಶಿವನು ಜಂಗಮರೂಪಿನಿಂದ ಬಂದು ತನ್ನ ಹಾವುಗೆಗೆ ಮೆತ್ತೆಯನ್ನು ಮಾಡಿಸಿಕೊಳ್ಳಲು ನಿನ್ನಮಗಳ ಮುಡಿಯನ್ನು ಕೊಡೆಂದು ಬೇಡಲು ಅದನ್ನು ಕತ್ತರಿಸಿ ಕೊಟ್ಟುಬಿಟ್ಟನು. ಶಿವನು ಮೆಚ್ಚಿ ಸತಿಸುತೆಯರೊಡನೆ ಆ ರಾಯನನ್ನು ಕೈಲಾಸಕ್ಕೆ ಕರೆದೊಯ್ದನು. (ಇದೇ ಆಶ್ವಾಸದ ೯೬, ೯೭ ರಲ್ಲಿ ಬರುವ ಕಥೆಗಳೆಲ್ಲ ಸಾಮಾನ್ಯವಾಗಿ ಈ ಗ್ರಂಥ ದಲ್ಲಿಯೇ ಬಂದಿವೆ).

೨೪. ಆ. ೧೭, ಪ-೪೨. ದಾಸಯ್ಯಂಗೆ ಉಮೇಶನು ಪಡಿವೆಜ್ಜಿದ ಕಥೆ :- ಮುದನೂರಿನಲ್ಲಿದ್ದ ಜೇಡರದಾಸಿಮಾರ್ಯನಿರುತ್ತಿರುವಲ್ಲಿ ಅಲ್ಲಿನ ರಾಮನಾಥ ಲಿಂಗಕ್ಕೆ ವೀರಶೈವರು ಕೈಮುಗಿಯುವುದಿಲ್ಲವೆಂದು ಹಂಗಿಸಿದರು. ಮರುದಿನ ಗುಡಿಯಬಾಗಿಲು ತೆರೆಯದೆ ಹೋಯಿತು. ಜೇಡರದಾಸಯ್ಯನು ಶಿವನನ್ನು ಬೇಡಲು ಶಿವನು ಗುಡಿಯ ಬಾಗಿಲು

ತೆರೆದು ಪ್ರತ್ಯಕ್ಷನಾದನು. ಈ ರಾಮನಾಥ ಲಿಂಗದ ಅಂಕಿತದಲ್ಲಿಯೇ ಜೇಡರದಾಸಿಮಾರ್ಯ (ದೇವರ ದಾಸಿಮಾರ್ಯ) ವಚನ ರಚಿಸಿದ್ದಾನೆ. ಇನ್ನೊಮ್ಮೆ ಶಿವನು ಜಗದ್ಭರಿತನೆಂಬ ತನ್ನ ವಾದವನ್ನು ಬ್ರಾಹ್ಮಣರಿಗೆ ತೋರಿಸಲು ವೈಷ್ಣವ ದೇವಾಲಯದ ಸಮೀಪಕ್ಕೆ ಬಂದನು. ಕದ ತಾನಾಗಿ ತೆರೆಯಿತು. ಒಳಗೆ ಶಿವಮೂರ್ತಿ ಇತ್ತು.

೨೫. ಆ. ೧೭, ಪ–೪೪; **ಸೌಂದರ ಗಣೇಶಂಗೆ ಕಾಂತಾಪಯೋಧರದೊಳ್ ಉಲಿದುದಕ್ಕೆ ಕಥೆ :-** ನಂಬಿಯಣ್ಣನು ಪರವೆ ನಾಚಿಯೊಡನೆ ಇರುವ ಎಲ್ಲಾ ಸಮಯದಲ್ಲೂ ಶಿವಧ್ಯಾನ ನಿರತನಾಗಿಯೇ ಇರುತ್ತಿದ್ದನು. ಒಮ್ಮೆ ಅವರಿಬ್ಬರೂ ಏಕಾಂತ ಸ್ಥಾನದಲ್ಲಿರುವಾಗ ನಂಬಿಯು ಅವಳ ಮೊಲೆಗಳನ್ನು 'ಸ್ತನಶಂಕರ' ಎಂದು ಸ್ತೋತ್ರಮಾಡಿದನು. ಶಿವನು ಆ ಪರವೆನಾಚಿಯ ಸ್ತನದಿಂದಲೇ ಮೂಡಿ ಮಾತನಾಡಿ ಹೊನ್ನನ್ನು ಕೊಟ್ಟನು.

೨೬. ಆ, ೧೭, ಪ-೪೪; **ಇಜುಂಪೆಯೊಳು ವಾದಂಗೆಯ್ದ ದಾಸಂಗೆ-ಎಂಬುದಕ್ಕೆ ಕಥೆ :-**

೨೭. ಕೊ ಆ. ೨೦, ಪ-೨೫; **ಮೂರ್ಖನಾಥ ವಿಭುವು ಜೂಜಾಡಿ ಶಿವನಾವಾಸಕ್ಕೆ ಪೋದ ಕಥೆ: -** ಕೊಂಡಮಂಡಲದ ಶಕ್ತ್ಯರಣ್ಯವೆಂಬಪುರದಲ್ಲಿ ಮೂರ್ಖನಾಥನೆಂಬ ಶರಣನಿದ್ದನು. ಅವನು ಜೂಜಾಡಿ ತಂದ ದ್ರವ್ಯದಿಂದ ಜಂಗಮಾರ್ಚನೆಮಾಡುತ್ತಿದ್ದನು. ಒಮ್ಮೆ ಶಿವನು ಒಬ್ಬ ವ್ಯಾಪಾರಿಯ ವೇಷದಿಂದ ಬಂದು ಈತನೊಡನೆ ಜೂಜು ಆಡಿ ಎಲ್ಲವನ್ನೂ ಸೋತನು. ಆಗ ಹಣಕೊಡಲು ಹಿಂದುಮುಂದು ನೋಡಿದ ಆ ವ್ಯಾಪಾರಿಯನ್ನು ಕೊಲ್ಲ ಹೋಗಿ ಅವನ ಕೊರಳಿನಲ್ಲಿರುವ ಲಿಂಗವನ್ನು ಕಂಡು ಪಶ್ಚಾತ್ತಾಪದಿಂದ ತನ್ನ ಪ್ರಾಣವನ್ನು ತ್ಯಾಗಮಾಡಲು ಸಿದ್ಧನಾದಾಗ ಶಿವನು ಪ್ರತ್ಯಕ್ಷನಾಗಿ ಕೈಲಾಸಕ್ಕೆ ಕರೆದೊಯ್ದನು.

೨೮. ಆ ೨೦, ಪ-೨೫; **ಮಾಂಡವ್ಯನು ಹಿಂಸೆಮಾಡಿ ಶೂಲಕ್ಕೆಪಕ್ಕಾದ ಕಥೆ :-** ಮಾಂಡವ್ಯನೆಂಬ ಋಷಿಗೆ ಚಂಚೆ, ಚಪಳೆ ಎಂಬ ಇಬ್ಬರು ಹೆಂಡತಿಯರಿದ್ದರು. ಅವರು ಮಾಂಡವ್ಯನನ್ನು ಮುದುಕನೆಂದು ತಿರಸ್ಕಾರಮಾಡಲು ಮಾಂಡವ್ಯನು ಅವರನ್ನು ಬಿಟ್ಟು ಹೊರಟು ಹೋದನು. ಆಗ ಅವರಿಬ್ಬರೂ ಎರಡು ತೊನಸಿ (ತೊಣಸಿ) ಗಳಾಗಿ ಹುಟ್ಟಿ ಇವನನ್ನು ಕಡಿಯುತ್ತ ತಪಸ್ಸಿಗೆ ವಿಘ್ನವನ್ನುಂಟುಮಾಡುತ್ತಿರಲು ಮಾಂಡವ್ಯನು ಅವನ್ನು ಹಿಡಿದು ಮುಳ್ಳುಗಳಿಂದ ಚುಚ್ಚಿಕೊಂದನು. ಈ ಪಾಪಶಮನಾರ್ಥವಾಗಿ ಮೇಣದಿಂದ ಮಾಡಿದ ಶೂಲವನ್ನು ಮಾಡಿ ಅದರ ಮೇಲೆ ಬಿದ್ದನು. ಆಗ ಮೇಣದ ಶೂಲವೇ ನಿಜವಾದ ಶೂಲವಾಗಿ ಇವನ ದೇಹದಲ್ಲಿ ನಾಟಿತು. (ಗ್ರಂಥಾಂತರವಲ್ಲಿ ಈ ಕಥೆ ಬೇರೆ ವಿಧದಲ್ಲೂ ಉಂಟು).

೨೯. ಆ. ೨೦, ಪ-೨೫; **ಚಂಡೇಶನು ತಂದೆಯನಿಕ್ಕಿ ಕೊಂದ ಕಥೆ :–** ಕಾವೇರೀತೀರದ ಚೋಳ ಮಂಡಲಕ್ಕೆ ಸೇರಿದ ತಿರುಚ್ಚೇಯ್ಞಲೂರಿನಲ್ಲಿ (ನಲ್ಲೂರಿನಲ್ಲಿ)ದ ಅಚ್ಯುತಭಟ್ಟ ಸಾವಿತ್ರಿಯರ ಮಗನಾದ ಚಂಡೇಶಪಿಳ್ಳೈಯು ತಂದೆ ತಾಯಿಯರ ಆಜ್ಞೆಯಂತೆ ಹಸುಗಳನ್ನು ಕಾಯುತ್ತಿದ್ದನು. ಅವನು ಮಳಲಲಿಂಗವನ್ನು ಮಾಡಿ ಪೂಜಿಸುತ್ತಿರಲು ಹಸು

ಗಳು ತಾವಾಗಿ ಬಂದು ಇವನು ಪೂಜಿಸಿದ ಮಳಲ ಲಿಂಗದ ಮೇಲೆ ಹಾಲು ಸುರಿಸುತ್ತಿದ್ದವು. ಹಸುಗಳ ಮೊಲೆಗಳಲ್ಲಿ ಹಾಲೇ ಇಲ್ಲದಿರುವುದನ್ನು ಕಂಡ ತಂದೆಯು ನಿಜವೃತ್ತಾಂತವನ್ನರಿತು ಮಳ್ಳುಲಿಂಗವನ್ನು ತುಳಿದು ನಾಶಮಾಡಲು ಕಾಲನ್ನೆತ್ತಿದಾಗ ಚಂಡೇಶನು ತಂದೆಯ ಕಾಲನ್ನೇ ಕತ್ತರಿಸಿದನು. ಶಿವನು ಇವನ ಭಕ್ತಿಗೆ ಪ್ರತ್ಯಕ್ಷನಾಗಿ ಕೈಲಾಸಕ್ಕೆ ಒಯ್ದನು.

೩೦. ಆ ೨೧. ಪು-೨೯ **ಕುಂಭಜನು ಪೆರ್ಗಡಲನ್ನು ಕುಡಿದುದಕ್ಕೆ ಕಥೆ :** ಕಾಲಕೇಯ ರೆಂಬ ರಾಕ್ಷಸರು ಕಶ್ಯಪಮುನಿಯಿಂದ 'ಕಾಲಾ' ಎಂಬುವಳಲ್ಲಿ ಜನಿಸಿದವರು. ಇವರು ವೃತ್ರಾಸುರನ ಒತ್ತಾಸೆಯಿಂದ ದೇವತೆಗಳನ್ನು ಪೀಡಿಸುತ್ತಿದ್ದರು. ಹಗಲೆಲ್ಲ ಸಮುದ್ರ ಮಧ್ಯದಲ್ಲಿ ಅಡಗಿಕೊಂಡಿದ್ದು ರಾತ್ರಿಯಾಗುತ್ತಲೆ ಆಶ್ರಮಗಳನ್ನು ಹೊಕ್ಕು ಋಷಿ ಗಳನ್ನು ತಿಂದುಹಾಕುತ್ತಿದ್ದರು. ಇವರ ಹಾವಳಿಯಿಂದ ದೇವತೆಗಳು ದೇವೇಂದ್ರನ ಮೂಲಕ ಬ್ರಹ್ಮನನ್ನು ಮರೆಹೊಕ್ಕರು. ಬ್ರಹ್ಮನು ಇವರನ್ನು ಅಗಸ್ತ್ಯನ ಬಳಿಗೆ ಕಳಿ ಸಿದನು. ಅಗಸ್ತ್ಯನು ಸಮುದ್ರದನೀರನ್ನು ಕುಡಿಯಲಾಗಿ ಕಾಲಕೇಯರು ಹೊರ ಬಿದ್ದರು. ದೇವತೆಗಳು ಇವರನ್ನು ಕೊಂದುಹಾಕಿದರು.

೩೧. ಆ ೨೧, ಪ. ೨೯ ; **ಶಿವದಾಸನಿಗೆ ಮಹಾನದಿ ಮಧ್ಯದಲ್ಲಿ ಹಾದಿ ಮಾಡಿ ಕೊಟ್ಟ ಕಥೆ:** ದೇವರ ದಾಸಿಮಾರ್ಯರು ಮುದನೂರಿನಲ್ಲಿದ್ದಾಗ ಪಕ್ಕದ ಊರಿನ ಭಕ್ತೆಯೊಬ್ಬಳ ಬಿನ್ನ ಹದ ಮೇರೆಗೆ ಲಗ್ನ ಸಮಾರಂಭಕ್ಕೆ ಅನೇಕ ಶಿಷ್ಯರನ್ನೊಡಗೂಡಿ ಹೊರಟನು. ಮಾರ್ಗ ದಲ್ಲಿ 'ಗೌತಮಿ' ನದಿಯು ದಡಸೂಸಿ ಹರಿಯುತ್ತಿತ್ತು. ತನಗೆ ಮುಂದಿನ ಊರಿಗೆ ಹೋಗಲು ಮಾರ್ಗ ಬೇಕೆಂದು ನದಿಗೆ ಹೇಳಲು ನದಿಯು ಇಭ್ಭಾಗವಾಗಿ ಮಾರ್ಗ ಕೊಟ್ಟಿತು. ಹೀಗೆ ಹಾದಿಯನ್ನು ಬಿಡಿಸಿಕೊಂಡು ಲಗ್ನಕಾರ್ಯವನ್ನು ಮುಗಿಸಿ ಅಲ್ಲಿ ಕೆಲ ಕಾಲ ಶಿವಾನುಭವ ಗೋಷ್ಠಿಯನ್ನು ಮಾಡಿ ಮುದನೂರಿಗೆ ಹಿಂದಿರುಗಿ ಬಂದನು.

೩೨. ಆ ೨೪. ಪ-೫೪ ; **ಘನಲಿಂಗಪ್ರಾಣಯೋಗವ್ರತ ಸಂದಿರ್ದ ಸತ್ಯೇಶ :**-ಕಲ್ಯಾಣ ನಗರದಲ್ಲಿ ಸತ್ಯಣ್ಣನೆಂಬ ಶರಣನಿದ್ದನು. ಈ ಶರಣನು ಮಲಗಿರುವಾಗ ಚೆನ್ನಬಸವಣ್ಣ ನವರು ಅವನಿಗೆ ಅರಿಯದಂತೆ ಅವನ ಕರಡಂಕದೊಳಗಿನ ಲಿಂಗವನ್ನು ತರಿಸಿ ಅದಕ್ಕೆ ನೈವೇದ್ಯಮಾಡಿ ಪುನಃ ಆ ಲಿಂಗವನ್ನು ಮತ್ತೆ ಅವನ ಕರಂಡಕದಲ್ಲಿಯೇ ಇರಿಸಿದನು. ಶರಣನು ನಿದ್ದೆಯಿಂದ ಎದ್ದ ಮೇಲೆ ಆತನನ್ನು ಪ್ರಸಾದಸೇವನೆಗೆ ಕರೆಯಲು ಅವನು 'ನಾವು ಸಲ್ಲಿಸಿದ್ದೇವೆ' ಎಂದನು. ಚೆನ್ನಬಸವಣ್ಣನವರು ಅವನ ಪ್ರಾಣಲಿಂಗಯೋಗದ ಮಹಿಮೆಗೆ ಆಶ್ಚರ್ಯಗೊಂಡರು.

೩೩. ಆ ೨೪, ಪ-೫೪ ; **ಘನಲಿಂಗಪ್ರಾಣಯೋಗವ್ರತದ ಕೊಂಡಗುಳಿಯ ಕೇಶಿರಾಜ :**- ಕೊಂಡಗುಳಿಗ್ರಾಮದಲ್ಲಿ ಕೇಶಿರಾಜನೆಂಬ ಮಹಾಶರಣನಿದ್ದನು. ಈತನು ತನ್ನ ಕಾಲ ದಲ್ಲಿ ಕಲ್ಯಾಣದಲ್ಲಿದ್ದ ಪೆರ್ಮಾಡಿಯ ಮಂತ್ರಿಯಾಗಿದ್ದನು. ಕೆಲವಿನಗಳ ಮೇಲೆ ಕೇಶಿ ರಾಜನು ಮಂತ್ರಿಪದವಿಯನ್ನು ತ್ಯಜಿಸಿದನು. ಒಂದು ಸಲ ಇವನು ನದಿಯತೀರದಲ್ಲಿ

ಶಿವ ಪೂಜೆಗೆ ಕುಳಿತಿರಲು ಒಂದು ಗರುಡಪಕ್ಷಿಯು ಇವನ ಶಿವಲಿಂಗವನ್ನು ಎತ್ತಿಕೊಂಡು ಹೋಯಿತು. ಆ ಲಿಂಗ ಆ ಗರುಡನ ಕಾಲಿನಿಂದಜಾರಿ ನದಿಗೆ ಬಿತ್ತು. ಕೇಶಿರಾಜನು ಹೃದಯದಲ್ಲಿ ಆ ಲಿಂಗವನ್ನು ನೆನೆಯುತ್ತ ಕುಳಿತಂತೆ ಅವನು ಮೊದಲು ಪೂಜೆಮಾಡಿದ ಪತ್ರಪುಷ್ಪಸಮೇತವಾಗಿ ಲಿಂಗ ಪುನಃ ಕೈಗೆ ಬಂತು. (ಲಿಂಗ ಹೋದ ಕಾರಣದಿಂದ ತಾನೂ ಶಿವೈಕ್ಯನಾಗುವೆನೆಂದು ಯೋಚಿಸಿದ ಕೇಶಿರಾಜನನ್ನು ಶಿವನು ಕೈಲಾಸಕ್ಕೆ ಕರೆದೊಯ್ದನೆಂಬ ಕಥಾಂತರವೂ ಉಂಟು).

೩೪. ಅ, ೨೪–ಪದ್ಯ ೫೪ ; **ಘನಲಿಂಗ ಪ್ರಾಣಯೋಗವ್ರತದ ಚಂದಯ್ಯ** :–ನುಲಿಯ ಚಂದಯ್ಯ ನವರೊಮ್ಮೆ ನುಲಿಗಾಗಿ ಹುಲ್ಲುಕೊಯ್ಯುತ್ತಿರುವಾಗ ಈತನ ಜಂಗಮ ಪ್ರಾಣಮಹತ್ವವನ್ನು ಲೋಕಕ್ಕರುಹಬೇಕೆಂದು ಸಜ್ಜೆಯೊಳಗಿನ ಲಿಂಗವು ನದಿಯಲ್ಲಿ ಸೇರಿತು. ತಾನಾಗಿ ಹೋದ ಲಿಂಗ ದೇವನ ಹಂಗಾದರೂ ತನಗೇಕೆ ? ಲಿಂಗಮುಖವೇ ಜಂಗಮವಾದ ಕಾರಣ ಚರಜಂಗಮಸೇವೆಯೊಂದೇ ಸಾಕೆಂದು ಚಂದಯ್ಯನು ಹೊರಟು ಹೋದನು. ಆಗ ಲಿಂಗವು ಹೆದರಿ ಆತನ ಬೆನ್ನು ಹತ್ತಿ ಸ್ವೀಕರಿಸೆಂದು ಬೇಡಿದರೂ ಸ್ವೀಕರಿಸಲಿಲ್ಲ. ಕೊನೆಗೆ ಮಡಿವಾಳಮಾಚಯ್ಯ ಅಲ್ಲಮ ಪ್ರಭುವೇ ಮೊದಲಾದ ಬಸವಾದಿ ಪ್ರಮಥರ ಮಾತಿನಂತೆ ಆ ಲಿಂಗವನ್ನು ಸ್ವೀಕರಿಸಿದನು.

೩೫. ಅ ೨೪, ಪ–೫೪ ; **ಘನಲಿಂಗ ಪ್ರಾಣಯೋಗದ ಕಮಲಾಂಬೆ** : ಚಿತ್ರವತಿಯೆಂಬ ವೇಶ್ಯೆಯ ಮಗಳಾದ ಕಮಲಾಂಬೆಯೆಂಬುವಳು ಕಲ್ಯಾಣದಲ್ಲಿದ್ದಳು. ಅವಳು ವೀರಶೈವ ವ್ರತವನ್ನು ಸ್ವೀಕರಿಸಿ ಗುರುಲಿಂಗಜಂಗಮ ಸೇವಾಧುರೀಣಳೆನಿಸಿದ್ದಳು. ಅವಳು ಶಿವನಲ್ಲಿ "ಹೇ ಶಿವನೇ ಈ ಹೆಣ್ಣು ಜನ್ಮದಲ್ಲಿ ಹುಟ್ಟಿಸೀಗೆಯೊಳಗಣ ಬಾಳೆಯಂತಾಗಿದ್ದೇನೆ. ಹೇರೂರಹೆಣ್ಣಿಗೆ, ನಿಂಬಿಯಕ್ಕನಿಗೆ ನೀನು ಕರುಣಿಸಿದಂತೆ ಕರುಣಿಸು" ಎಂದು ಬೇಡಿಕೊಳ್ಳಲು ಶಿವನು ವಿಟಜಂಗಮನಾಗಿ ಬಂದು ಇವಳೊಡನೆ ಮಂಚದ ಮೇಲೆ ಮಲಗಿರಲು ಇವಳ ಪ್ರಾಣಲಿಂಗ ಸ್ವರೂಪವನ್ನರಿಯಬೇಕೆಂದು ಕೊರಳ ಲಿಂಗವನ್ನು ತೆಗೆದು ಒಂದು ಗೂಡಿನಲ್ಲಿರಿಸಲು ಒಳಪ್ರಾಣವೂ ಹೋಯಿತು. ಇತ್ತ ಬಸವಾದಿಪ್ರಮಥರು ಇವಳ ಸಮಾಧಿಕ್ರಿಯೆ ಮಾಡಲು ಬಂದರು. ಅಂಗದ ಮೇಲೆ ಲಿಂಗವಿಲ್ಲದೆ ಸಮಾಧಿಕ್ರಿಯೆ ಸಲ್ಲದೆಂದು ಅವಳಇಷ್ಟಲಿಂಗವನ್ನು ಹುಡುಕಿ ದೇಹಕ್ಕೆ ಸೋಕಿಸಿದೊಡನೆಯೇ ಅವಳ ಪ್ರಾಣವೂ ಲಿಂಗದೊಡನೆ ಬಂದಿತು. ಅವಳು ಎದ್ದು ಎಲ್ಲ ಶರಣರಿಗೂ ನಮಸ್ಕರಿಸಿದಳು.

೩೬. ಅ ೨೪, ಪ ೫೪. **ಘನಲಿಂಗ ಪ್ರಾಣಯೋಗವ್ರತದ ತಂಗಟೂರು ಮಾರಯ್ಯ** :–ಬಸವಣ್ಣನವರ ಮಹಾ ಮನೆಯ ದಾರಿಯನ್ನು ಕಾಯುವ ಕಾಯಕದಲ್ಲಿ ನಿರತನಾಗಿದ್ದ ತಂಗಡೂರ ಮಾರಯ್ಯನೆಂಬ ಶರಣನು ಬಸವಣ್ಣನವರು ಅಪ್ಪಣೆಕೊಟ್ಟಿಲ್ಲವೆಂದು ೧೨ ವರ್ಷಗಳ ವರೆಗೂ ತನ್ನ ಮನೆಗೆ ಹೋಗಿರಲಿಲ್ಲ. ಇದನ್ನರಿತ ಬಸವಣ್ಣ ಒಂದು ದಿನ ಮನೆಗೆ ಹೋಗಲು ತಾನಾಗಿ ಅಪ್ಪಣೆ ಕೊಟ್ಟನು. ತಂಗಟೂರು ಮಾರಯ್ಯ ಮನೆಗೆ ಬಂದು ಸತಿಯೊಡನೆ ಮಲಗಿರುವಾಗ ಒಬ್ಬರಲಿಂಗ ಇನ್ನೊಬ್ಬರಿಗೆ ಪಲ್ಲಟವಾಯಿತು.

ಪ್ರಾಣಲಿಂಗಿಯಾದ ಮಾರಯ್ಯನ ಪ್ರಾಣ ಹೋಯಿತು. ಅವರ ಮನೆಯ ಸೇವೆಮಾಡುವ 'ಅಕ್ಕಮ್ಮ' ಎಂಬಾಕೆ ನೀರಿಗೆ ಹೋಗಿ ಮಾರಯ್ಯ ಲಿಂಗೈಕ್ಯವಾದ ಸುದ್ದಿಯನ್ನು ಕೇಳಿ ತಾನೂಲಿಂಗೈಕ್ಯಳಾದಳು, ಬಳಿಕ ಸತ್ಯಣ್ಣನೆಂಬ ಲಿಂಗಪ್ರಾಣಿಯು ಮಾರಯ್ಯನು ಐಕ್ಯ ವಾದ ಸ್ಥಳಕ್ಕೆಬಂದು ಇವನು ಪ್ರಾಣಲಿಂಗಿಯೆಂಬುದನ್ನರಿತು, ಅವರವರ ಲಿಂಗವನ್ನು ಅವರವರಿಗೆ ಅಳವಡಿಸಿದೊಡನೆಯೇ ಮಾರಯ್ಯನೆದ್ದು ಸತ್ಯಣ್ಣನಿಗೆ ನಮಸ್ಕರಿಸಿದನು.

೩೭. ಆ ೨೮, ಪ-೪೭ : ಒಡಲೊಳ್ ನಿಷ್ಕಾಮಮಂ ಪೋದಿರ್ದ ಉಡುತಡಿಯ ಮಹಾ ದೇವಿಯಕಥೆ :— ಉಡುತಡಿಯೆಂಬ ಪಟ್ಟಣದಲ್ಲಿದ್ದ ಮಹಾದೇವಿಯಕ್ಕನೆಂಬ ಶಿವ ಶರಣೆಯು ನಿಷ್ಕಾಮಭಕ್ತಿಯಿಂದ ಶಿವನನ್ನು ಒಲಿಸಿದುದು ಪ್ರಸಿದ್ಧಾಂಶ.

೩೮. ಆ, ೨೮, ಪ-೪೭ ; ಗಂಡಂದವಂ ಪಡೆದ ತಿಲಕಾಂಬೆಯಕಥೆ : ಜೈನಪರಂಪರೆ ಯಲ್ಲಿ ಹುಟ್ಟಿದ ತಿಲಕವ್ವೆ ಶಿವಭಕ್ತಿಪರಾಯಣೆಯಾಗಿದ್ದಳು. ಅವಳಿಗೆ ಯೌವನವುಂಟಾ ಗಲು ಜೈನವರನಿಗೆ ಕೊಟ್ಟು ಲಗ್ನಮಾಡಿ ಕೊಟ್ಟರು, ಅವಳಿಗೆ ಜೈನಧರ್ಮಸಂಬಂಧ ಬೇಡವಾಗಿತ್ತು. ಗಂಡನಮನೆಗೆ ಹೋಗುವಾಗ ಮಾರ್ಗಮಧ್ಯದಲ್ಲಿ ಸಿಕ್ಕ ಶಿವಲಿಂಗದ ಗುಡಿಗೆಹೋಗಿ "ಶಿವನೇ, ನನ್ನ ಹೆಣ್ಣು ಜನ್ಮವನ್ನು ತಪ್ಪಿಸೆಂದು ಬೇಡಲಾಗಿ ಪುರುಷಾ ಕೃತಿ ಪಡೆದಳು.

೩೯. ಆ ೨೮, ಪ-೪೭ ; ಶಿವನೇಗಂಡನೆಂದು ಭಾವಿಸಿದ್ದ ವೀರಚೋಳಾಂಬೆಯಕಥೆ :— ದ್ರಾಕ್ಷಾರಾಮದ ಭೀಮೇಶ್ವರಲಿಂಗದಲ್ಲಿ ಭಕ್ತಿಯನ್ನಾಚರಿಸುತ್ತ ವೀರಚೋಳಾದೇವಿ ಯೆಂಬ ಶಿವಶರಣೆಯಿದ್ದಳು. ಅವಳು ವೇಶ್ಯೆ. ಅವಳು ಶಿವನೇ ಗಂಡನೆಂಬ ಭಾವದಿಂದ ಸದಾ ಭಾವಿಸುತ್ತ ಜೀವಿಸುತ್ತಿದ್ದ ಅವಳ ಈ ಭಕ್ತಿಜೀವನ ಬಹುಜನಕ್ಕೆ ಅರ್ಥವಾಗಿ ರಲಿಲ್ಲ. ಒಂದುದಿನ ಬಹಿಷ್ಠೆಯಾಗಿದ್ದಾಗ ಮನೆಯಲ್ಲಿ ಪಾಯಸಮಾಡಿದ್ದರು. ಒಂದು ಬಟ್ಟಲಲ್ಲಿ ಅವಳ ಊಟಕ್ಕೆ ಪಾಯಸ ಕಳಿಸಿದ್ದರು. ಆ ಪಾಯಸವನ್ನು ನಾಲಿಗೆಯ ಮೇಲಿಟ್ಟುಕೊಂಡು ಬಹುರುಚಿಯಾಗಿರುವುದನ್ನು ಕಂಡು ತಂಗಿಯಾದ ಭೀಮಿಯನ್ನು ಕರೆದು 'ತಂಗಿ, ಪಾಯಸ ಬಹುರುಚಿಯಾಗಿದೆ. ನಿಮ್ಮ ಭಾವನಿಗೆ (ಭೀಮೇಶ್ವರ ಲಿಂಗಕ್ಕೆ) ಅರ್ಪಿಸಿ ಬಾ' ಎಂದು ಹೇಳಿ ಅವಳ ಕೈಯಲ್ಲಿ ಆ ಪಾಯಸದ ಬಟ್ಟಲನ್ನು ಕೊಟ್ಟಳು. ಅವಳು ಆ ಪಾಯಸವನ್ನು ತೆಗೆದುಕೊಂಡು ಬಂದು ಶಿವಾಲಯದ ಮಜ್ಜನ ನೀರುಬರುವ ಕಿಂಡಿಯಲ್ಲಿ ನಿಂತು 'ಭಾವಾ, ರುಚಿಯಾದ ಪಾಯಸವನ್ನು ಅಕ್ಕ ನಿನಗೆ ಊಟಕ್ಕೆ ಕಳಿಸಿದ್ದಾಳೆನ್ನಲು ಶಿವನು ಆ ಪಾಯಸ ಸ್ವೀಕರಿಸಿದನು. ಒಂದು ದಿನ ಶಿವನು. ಚೋಳಾದೇವಿಯ ಪಟ್ಟೆ ಮಂಚಕ್ಕೆ ಬಂದು ಅಲ್ಲಿದ್ದ ವೀಳ್ಯವನ್ನು ಅಗಿದು ಗೋಡೆಯ ಮೇಲೆ ಉಗಿದು, 'ಎಲೆಚೋಳಾದೇವಿ, ನಾವು ಪವಡಿಸುವಮನೆಯಲ್ಲಿ ಹೀಗೆ ಉಗುಳ ಬಹುದೇ' ? ಎನಲು, 'ನೀವಿಲ್ಲದ ಠಾವನ್ನು ತೋರಿಸಿಕೊಡಿ' ಎಂದು ಪ್ರತಿ ಉತ್ತರ ಕೊಡಲು ಶಿವನು ಮೆಚ್ಚಿ ಅವಳನ್ನುಕೈಲಾಸಕ್ಕೆ ಕರೆದೊಯ್ದನು.

೪೦. ಆ ೨೯, ಪ-೬೭ರ ಮುಂದಿನ ವಚನ; ಪಿಳ್ಳೈನಾರಗೆ ಬ್ರಹ್ಮೇಶ್ವರು ಕನನೆಗೆನ ಕಥೆ :

ಕಾವೇರಿ ತೀರದ ಶಿಯಾಳಿಪುರ (ಜೀಯಾಳಿಪುರ) ದಲ್ಲಿದ್ದ ಮಹೇಶ್ವರ ಭಟ್ಟ ಮಾದೇವಿ ಯರಮಗನೇ ಪಿಳ್ಳೈನ್ಯೆನಾರು ಎಂಬುವರು. ಇವರಿಗೆ ತಿರುಜ್ಞಾನಸಂಬಂಧಿಯೆಂದೂ ಹೆಸರು. 'ಸಂಬಂಧರು' ಎಂದರೂ ಇವರೇ. (ಇವರು ಷಣ್ಮುಖನ ಅವತಾರವೆಂದು ನಂಬಿಕೆ) ದ್ರಾವಿಡದೇಶದ ಮೂವರು ಶೈವ ಸಮಯಾಚಾರ್ಯದಲ್ಲಿ ಒಬ್ಬರು. ಒಮ್ಮೆ ಇವರು ವಾಗೀಶನಾಯನಾರರೊಂದಿಗೆ ಬ್ರಹ್ಮೇಶ್ವರಲಿಂಗದ ಗುಡಿಗೆ ಬಂದು. ಶಿವನನ್ನು ಸ್ತೋತ್ರಮಾಡಿ ಮುಚ್ಚಿದ್ದ ಕದ ತೆರೆಯುವಂತೆಮಾಡಿದರು. (ಈ ಗದ್ಯದಲ್ಲಿ ಬಂದಿರುವ ಶಿವನಕದವನ್ನು ತೆರೆಸಿದ ಕಿನ್ನರಿ ಬ್ರಹ್ಮಯ್ಯ, ದಾಸಯ್ಯ, ನಿಂಬಿ ಮೊದಲಾದ ಕಥೆಗಳು ಇದೇ ಗ್ರಂಥದಲ್ಲಿ ಬಂದಿವೆ).

೪೧. ಆ ೨೯, ಪ ೧೬೧ : **ಮಹಾಧ್ವರದೊಳ್ ಶಿಖಿಯ ನಾಲಿಗೆಯನ್ನು ಕತ್ತರಿಸಿದುದಕ್ಕೆ ಕಥೆ :** ದಕ್ಷಯಾಗದಲ್ಲಿ ವೀರಭದ್ರನು ಅಗ್ನಿಯನಾಲಿಗೆ ಮತ್ತು ತೋಳುಗಳನ್ನು ಕತ್ತರಿ ಸಿದನು.

೪೨. ಆ ೨೯, ಪ. ೧೬೨ ; **ಲಲಾಟಾಕ್ಷಿಯಲ್ಲಿ ಪ್ರಲಯೋಗ ಜ್ವಾಲೆಯನ್ನು ತಾಳ್ದ ಗಣವರ :** ಸಿದ್ಧರಾಮೇಶ್ವರನು ಹಣೆಯಲ್ಲಿ ಪ್ರಳಯೋಗ ಜ್ವಾಲೆಯನ್ನು ಹೊಂದಿದ್ದನು.

೪೩. ಆ ೨೯. ಪ-೧೬೨ ; **ಬಡಬಾಗ್ನಿಯನ್ನು ಹಣೆಯಲ್ಲಿ ತಿಲಕವನ್ನಾಗಿಮಾಡಿದವನು :** ಕೈಲಾಸದಿಂದ ಒಬ್ಬಗಣೇಶ್ವರನು ಬಂದು ಸಮುದ್ರತೀರದಲ್ಲಿ ಒಂದು ಒರತೆಯನ್ನು ತೆಗೆದು ಆ ನೀರಿನಿಂದ ಇಷ್ಟಲಿಂಗಕ್ಕೆ ಮಜ್ಜನಮಾಡಿ ಪೂಜಿಸುತ್ತಿದ್ದನು. ಆಗ ಬಡ ಬಾಗ್ನಿಯು ಧಗಧಗಿಸಲು ಗಣೇಶ್ವರನು ಆ ಧ್ವನಿಯನ್ನು ಕೇಳಿ ನಾನು ಶಿವಪೂಜೆ ಮಾಡುವಾಗ ಸಂಚಲನಮಾಡಿದೆಯಾ ? ಎಂದು ಆ ಬಡಬಾಗ್ನಿಯನ್ನು ತಮ್ಮ ಹಣೆ ಯಲ್ಲಿ ಅಡಗಿಸಲು ಅಗ್ನಿಯು ಕ್ಷಮೆಕೇಳಿತು. ಆಗ ಆ ಗಣೇಶ್ವರನು ಪುನಃ ಆ ಅಗ್ನಿ ಯನ್ನು ಸಮುದ್ರಕ್ಕೆ ಬಿಟ್ಟನು. ಆ ಗಣೇಶ್ವರನಿಗೆ 'ಬಡಬಾಗ್ನಿತಿಲಕಯ್ಯ' ಎಂಬ ಹೆಸರಾಯಿತು.

೪೪. ಆ ೨೯, ಪ. ೧೬೨ ; **ದಾಸಿಮಯ್ಯಂ ತಳೆಯನೆ ಪಣೆಗಣ್ಣೊಳ್ ಮಹಾವಹ್ನಿಯು ಎಂಬುದಕ್ಕೆ ಕಥೆ :** ಶಂಕರ ದಾಸಿಮಾರ್ಯರು ಅತ್ಯಂತ ಶ್ರದ್ಧೆಯಿಂದ ಒಂದು ಅಂಗಿಯನ್ನು ಹೊಲಿದನು. ಶಿವನು ಜಂಗಮ ರೂಪಿನಿಂದ ಬಂದು ಈ ಅಂಗಿ ತನಗೆ ಬೇಕೆಂದು ಬೇಡಿ ದನು. ಶಿವನಿಗೆ. ಆ ಅಂಗಿಯನ್ನು ಕೊಟ್ಟನು. ರಾತ್ರಿಯಲ್ಲಿ ಸೂಜಿಯಕಾಯಕ ಮಾಡು ವಾಗ ಸೂಜಿಕಾಣಿಸುವಂತೆ ಇನ್ನೊಂದು ಕಣ್ಣನ್ನು ಕೊಡೆಂದು ಶಿವನನ್ನು ಬೇಡಿದನು. ಶಿವನು ಅಗ್ನಿನೇತ್ರವನ್ನೇ ಕೊಟ್ಟನು.

೪೫. ಆ ೨೯, ಪ. ೧೬೨ ; **ಪಂಡಿತಾರಾಧ್ಯಂ ವಸನದೊಳ್ ಪಾವಕನ ಕಟ್ಟಿದ ಕಥೆ :—** (೪ನೆಯ ಕ್ರಮಸಂಖ್ಯೆಯ ಕಥೆನೋಡಿ)

೪೬. ಆ ೧೯, ಪ. ೧೬೩ ; **ವ್ಯಾಘ್ರಪಾದಸುತನನ್ನು ಶಿಖಿ ಆವರಿಸಿದ ಕಥೆ:—** ವ್ಯಾಘ್ರ ಪಾದಮಹರ್ಷಿಯ ಕುಮಾರನಾದ ಉಪಮನ್ಯುವು, ಹಾಲಿನ ಸಮೃದ್ಧಿಯ ವರವನ್ನು

ಶಿವನಿಂದ ಬೇಡಿ ಪಡೆಯಲು ತಪಸ್ಸಿಗೆ ಹೋಗಿ ಉಗ್ರತಪಸ್ಸನ್ನು ಮಾಡುತ್ತಿರಲು ತಪದ ಉಗ್ರವಾದ ಬೆಂಕಿಯು ಸುತ್ತೆಲ್ಲ ಹಬ್ಬಿತು. ಕಡಲೇಳು ಕುದಿದವು. ಅರಣ್ಯಗಳೆಲ್ಲ ಸುಡ ತೊಡಗಿದವು. ಈ ಬೆಂಕಿ ಬಾಲಕನಾದ ಉಪಮನ್ಯುವಿನ ಹತ್ತಿರಕ್ಕೂ ಬರಲಿಲ್ಲ.

೪೭. ಆ ೨೯, ಪ. ೧೬೩ ; **ವಾಗೀಶಂಗೆ ಜ್ವಳನಂ ಸರೋವರವಾದ ಕಥೆ** :-ವಾಗೀಶರು ಜೈನಧರ್ಮವನ್ನು ತ್ಯಜಿಸಿ ಶೈವವನ್ನು ಸ್ವೀಕರಿಸಿದ ಮೇಲೆ ಜೈನರು ಅವನ ಮೇಲೆ ಕೋಪಗೊಂಡು ಸುಣ್ಣದರಾಶಿಯಮೇಲೆ ಕುಳ್ಳಿರಿಸಿ ಕದವಿಕ್ಕಿ ಗವಾಕ್ಷಿಯಿಂದ ನೀರು ಸುರಿದರು ; ಅದರಿಂದ ಏನೂ ಆಗಲಿಲ್ಲ ಅಗ್ನಿಕುಂಡವಲ್ಲಿ ನೂಕಿದರು. ಆಗ ಅವರು 'ಅಗ್ನಿ ಜಿಹ್ವಾಂತಕನೇ' ಎಂದು ಕೊಂಡಾಡಲು ಅಗ್ನಿ ತಣ್ಣಗಾಗಿ ಸರೋವರ ಜಲ ದಂತಾಯಿತು.

೪೮. ಆ ೩೬, ಪ-೪೬ ; **ಶಂಭುಯುನಿರ್ಬಗೆಗೆಯ್ದು ಉರುಲಿಂಗಾಕೃತಿಯಾದ ಕಥೆ** :- ಬ್ರಹ್ಮವಿಷ್ಣುಗಳು ನಾವೇ ಜಗದೀಶ್ವರರೆಂದು ಅಹಂಕಾರದಿಂದ ಪರಸ್ಪರ ಯುದ್ಧ ಮಾಡುತ್ತಿರಲು ಕೋಟಿಸೂರ್ಯ ಪ್ರಕಾಶಮಾನವಾಗಿ ಲಿಂಗಾಕಾರದಲ್ಲಿ ಶಿವನು ಸಮುದ್ರ ಮಧ್ಯದಿಂದ ಅವರಿಬ್ಬರಮಧ್ಯದಲ್ಲಿ ಉದಯವಾದನು. ಅಶರೀರವಾಣಿಯೊಂದಾಗಿ ಈ ಲಿಂಗದ ಮೂಲವನ್ನಾಗಲಿ ಶಿರವನ್ನಾಗಲಿ ಯಾರು ನೋಡಿ ಬರುವರೇ ಅವರು ಜಗನ್ನಿಯಾಮಕರೆಂದು ಹೇಳಿದನು. ಅದರಂತೆ ಅವರಿಬ್ಬರೂ ಹೋಗಿ ಕಾಣದೆ ಹಿಂತಿರು ಗಿದರು. (ಇದು ಶಿವನ ೨೫ನೆಯ ಲಿಂಗೋದ್ಭವಲೀಲೆಯ ಕಥೆ).

೪೯. ಆ ೩೭, ಪ ೯೧; **ಭೃಗುಮುನಿಯ ಶಾಪದಿಂದ ಪನ್ನಗಶಯನಂ ಹತ್ತು ಯೋನಿಗಳಲ್ಲಿ ಹುಟ್ಟಿದುದಕ್ಕೆ ಕಥೆ** : ದೇವತೆಗಳಿಗೂ ರಾಕ್ಷಸರಿಗೂ ನಡೆದ ಯುದ್ಧದಲ್ಲಿ ರಾಕ್ಷಸರು ಭೃಗು ಮುನಿಯ ಆಶ್ರಯವನ್ನು ಹೊಕ್ಕರು: ಭೃಗುವು ಆಗ ಸಮಾಧಿಸ್ಥನಾಗಿ ಕುಳಿತಿದ್ದನು. ಅವನು ಇದೊಂದನ್ನೂ ಅರಿಯನು. ಅಲ್ಲಿಗೆ ರಾಕ್ಷಸರನ್ನು ಹುಡುಕುತ್ತ ದೇವತೆಗಳು ಪ್ರವೇಶ ಮಾಡಿದರು. ಆಗ ಭೃಗುಪತ್ನಿಯಾದ ಪ್ರಖ್ಯಾತೆಯು ರಾಕ್ಷಸರಮೊರೆಯನ್ನು ಕೇಳಿ ಕರುಣದಿಂದ ಅವರಿಗೆ ಅಭಯವಿತ್ತು, ಈಶ್ವರನನ್ನು ನೆನೆದು ಮಂತ್ರೋದಕವನ್ನು ದೇವತೆಗಳ ಮೇಲೆ ಎರಚಲು ಅವರೆಲ್ಲ ಗೊಂಬೆಗಳಂತೆ ಸ್ತಂಭಿತರಾದರು. ದೇವೇಂದ್ರನು ಇದನ್ನು ಕಂಡು ಪ್ರಖ್ಯಾತೆಯ ತಲೆಯನ್ನು ಚಕ್ರದಿಂದ ಕತ್ತರಿಸಬೇಕೆಂದು ವಿಷ್ಣುವಿಗೆ ಹೇಳಲು ವಿಷ್ಣುವು ಅವಳ ತಲೆಯನ್ನು ಕತ್ತರಿಸಿದನು. ಈ ಕೋಲಾಹಲಕ್ಕೆ ಬಹಿರ್ಮು ಖನಾದಭೃಗುವು ನಡೆದ ಸಮಸ್ತವೃತ್ತಾಂತ ತಿಳಿದು ಕೋಪದಿಂದ ತನ್ನ ಸತಿಯನ್ನು ಕೊಂದು ವಿಷ್ಣುವಿಗೆ ಮತ್ಸ್ಯಾದಿ ಹತ್ತು ಜನ್ಮಗಳಲ್ಲಿ ಹುಟ್ಟಿಬರುವಂತೆ ಶಾಪವಿತ್ತನು.

೫೦ ಆ ೩೭, ಪ. ೯೨ ; **ಜಡರುಹಲೋಚನನನುಗುಳಿದ ಕಥೆ** :-ಹಾಲಿಗಾಗಿ ಉಪ ಮನ್ಯುವು ಶಿವನನ್ನು ಕುರಿತು ತಪಸ್ಸುಮಾಡಿ ಹಾಲಿನ ಸಮುದ್ರವನ್ನೇ ಪಡೆದನು. ಆ ಕ್ಷೀರಸಮುದ್ರವನ್ನು ಕುಡಿಯುತ್ತಿರುವಾಗ ವಿಷ್ಣುವು ಬಾಯಲ್ಲಿ ಸಿಕ್ಕಿಕೊಳ್ಳಲು ಉಪಮನ್ಯುವು ಅವನನ್ನು ಕಡ್ಡಿಯೆಂದು ಉಗುಳಿದನು.

೫೧. ಆ ೩೭, ಪ. ೯೨; ಶರಭಾಕೃತಿ ವೀರಭದ್ರಸಿಂ ನರಹರಿರೂಪ ವಿಷ್ಣುವುಡಿದುಂಬು ದಕ್ಕ ಕಥೆ : (೧೯ನೆಯ ಕ್ರಮ ಸಂಖ್ಯೆಯ ಕಥೆಯನ್ನು ನೋಡಿ)

೫೨. ಆ ೩೭, ಪ. ೯೩ ; ಅಚ್ಯುತಂ ದಧೀಚಿಯೊಡನೆ ಸೆಣಸಿದುವಕ್ಕ ಕಥೆ : ದೇವತೆಗಳು ದಧೀಚಿಯಲ್ಲಿ ತಾವು ಇಟ್ಟ ಅಸ್ತ್ರಗಳನ್ನು ಮರಳಿ ಕೇಳಿದಾಗ ಅವನ್ನೆಲ್ಲ ಆಪೋಶನರೂಪ ದಿಂದ ಕುಡಿದು ಬಿಟ್ಟಿದ್ದ ದಧೀಚಿಯು ನನ್ನನ್ನು ಕೊಂದು ನನ್ನ ಮೂಳೆಗಳಿಂದ ಆಯುಧ ಮಾಡಿ ಕೊಳ್ಳಿರೆಂದು ಹೇಳಿದನು. ದೇವತೆಗಳು ಅವನನ್ನು ಕೊಂದು ಮೂಳೆಗಳನ್ನು ಪಡೆದು ಆಯುಧಮಾಡಿಕೊಂಡರು. ಆ ಕಾಲದಲ್ಲಿ ಗರ್ಭವತಿಯಾಗಿದ್ದ 'ಸುವರ್ಚೆ' ಎಂಬುವಳು ಮಗುವನ್ನು ಪಡೆದು ಅದನ್ನು ಅರಳಿಯುಮರಕ್ಕೆ ಕಟ್ಟಿ ಅಗ್ನಿಪ್ರವೇಶ ಮಾಡಿದಳು. ಅರಳಿಯುಮರವು ಮಗುವನ್ನು ರಕ್ಷಣೆಮಾಡಿ ಅದಕ್ಕೆ 'ಪಿಪ್ಪಲಾದ' ಎಂಬ ಹೆಸರಿಟ್ಟು ದೊಡ್ಡವನನ್ನಾಗಿಮಾಡಿತು. ಮುಂದೆ ಇವನು ತಪಸ್ಸುಮಾಡಿ ತಂದೆ ತಾಯಿಯರನ್ನು ಪಡೆದನು. ದೇವತೆಗಳನ್ನು ಒಂದು ವರ್ಷಪರ್ಯಂತ ಸೆರೆಯಲ್ಲಿ ಟ್ಟನು. ವಿಷ್ಣುವು ಗರ್ವಿಸಿ ತಾನೇ ವಿಶ್ವರೂಪನೆಂದು ದಧೀಚಿಗೆ ಹೇಳಿಕೊಂಡು ಹತ್ತು ದಿಕ್ಕಿನಲ್ಲೂ ಹತ್ತು ಕೋಟಿ ಹರಿಗಳನ್ನು ತೋರಿಸಿದನು. ದಧೀಚಿ ತನ್ನ ಅರುಬೆರಳು ಮೇಲೆ ಅ ಸಂಖ್ಯಾತ ಹರಿರೂಪಗಳನ್ನು ತೋರಿಸಿದನು. ಹರಿ ತನ್ನ ಚಕ್ರವನ್ನು ದಧೀ ಚಿಯ ಮೇಲೆ ಪ್ರಯೋಗಿಸಲು ದಧೀಚಿಯು ಅದನ್ನು ಮುರಿದುಬಿಸಾಡಿ ಹರಿಯ ಎದೆಗೆ ಒದೆಯಲು ಹೆದರಿದ ಹರಿ ಓಡಿ ಹೋಗಿ ಸಮುದ್ರವನ್ನು ಹೊಕ್ಕನು. (ಕಥಾಂತರದಲ್ಲಿ ಹರಿಯು ಚಕ್ರಭಂಗವಾಗಲು ಓಡಿ ಒಂದು ದಧೀಚಿಯ ಮೊರೆ ಹೊಕ್ಕನು. ಈ ಕಥೆ ಗ್ರಂಥಾಂತರಗಳಲ್ಲಿ ಅನೇಕ ಬಗೆಯಾಗಿ ಭಿನ್ನತೆಗೊಂಡಿದೆ).

(ಸ್ಥೂಲವಾಗಿ ಇಷ್ಟು ಪೂರ್ವಕಥೆಗಳನ್ನು ಕೊಡಲಾಗಿದೆ. ಈ ಗ್ರಂಥದಲ್ಲಿ ಅಸಂಖ್ಯಾತ ಪೂರ್ವಕಥೆಗಳು ಬರುತ್ತವೆ. ಅವನೆಲ್ಲ ಗ್ರಂಥಾಧಿಕ್ಯ ಭಯದಿಂದ ಕೊಡ ಲಾಗಲಿಲ್ಲ.)

# ಆಧಾರ ಗ್ರಂಥಸೂಚಿ.

೧. ಶಿವ ಶರಣಕಥಾರತ್ನಕೋಶ : ತ. ಸು. ಶಾಮರಾಯ (ಪ್ರ. ಮು ೧೯೬೭)

೨. ಪುರಾಣನಾಮ ಚೂಡಾಮಣಿ : ಬೆನಗಲ್ ರಾಮರಾವ್ ಪಿ. ಸುಂದರಶಾಸ್ತ್ರಿ (ದ್ವಿ. ಮು. ೧೯೭೧)

೩. ಷಡಕ್ಷರದೇವನ ರಾಜಶೇಖರವಿಳಾಸ ಗದ್ಯಾನುವಾದ : ಪಂಡಿತ ಚನ್ನಪ್ಪ ಎರೇಸೀಮೆ (ಪ್ರ, ಮು, ೧೯೭೭) (ಕನ್ನಡ ಸಾಹಿತ್ಯಪರಿಷತ್ ಪ್ರಕಟನೆ).

೪. ಬಸವ ತತ್ತ್ವರತ್ನಾಕರ : ಯಾದಗಿರಿ ಚಂದ್ರಶೇಖರಶಾಸ್ತ್ರಿ ಪ್ರ, ಮು. ೧೯೬೧).

೫. ಅದೃಶ್ಯಕವಿಯ ಪ್ರೌಢರಾಯನ ಕಾವ್ಯ ಪೀಠಿಕೆ : ಪ್ರೊ. ಸಂ. ಶಿ. ಭೂಸನೂರುಮಠ (ಪ್ರ.ಮು. ೧೯೫೫).

೬. ಷಡಕ್ಷರದೇವನ ಬಸವರಾಜ ವಿಜಯ ಪೀಠಿಕೆ : ಸಂ. ಆರ್. ಸಿ. ಹಿರೇಮಠ (ಪ್ರ.ಮು.೧೯೬೮).

೭. ಕಾವ್ಯಸೌಂದರ್ಯ (ಕ. ಸಾ. ಪ. ಪ್ರಕಟನೆ) ಪಂಡಿತ ಚನ್ನಪ್ಪ ಎರೇಸೀಮೆ ಅವರ ಲೇಖನ, ''ರಾಜಶೇಖರವಿಳಾಸದಲ್ಲಿ ಕಾವ್ಯ ಸೌಂದರ್ಯ' (ಪ್ರ. ಮು. ೧೯೭೮)

೮. ಸುರಂಗಕವಿಯ ತ್ರಿಷಷ್ಠಿ ಪುರಾತನರ ಚರಿತ್ರೆಯ ಪೀಠಿಕೆ : ಸಂ. ಆರ್ ಸಿ. ಹಿರೇಮಠ (ಪ್ರ.ಮು. ೧೯೬೬).

೯. ನಿಜಗುಣಶಿವಯೋಗಿಯ ವಿವೇಕ ಚಿಂತಾಮಣಿ : ಸಂ. ಪ್ರೊ. ಉಮಾಪತಿ ಶಾಸ್ತ್ರಿ ಎಂ. ಎ.

೧೦. ಶಿವಾನುಭವಶಬ್ದಕೋಶ : ಡಾ. ಫ. ಗು. ಹಳಕಟ್ಟಿ.

೧೧. ಆದಯ್ಯನವಚನಗಳು : ಸಂ. ಚನ್ನಪ್ಪ ಉತ್ತಂಗಿ

೧೨. ಚೆನ್ನಬಸವಣ್ಣನವರ ವಚನಗಳು : ಸಂ. ಆರ್. ಸಿ. ಹಿರೇಮಠ.

೧೩. ಪಾಲ್ಕುರಿಕೆ ಸೋಮನಾಥನ ವಿರಚಿತ 'ಶ್ರೀ ಶೈಲ ಪಂಡಿತಾರಾಧ್ಯ ಚರಿತ್ರಮು' ಗ್ರಂಥದ ಕನ್ನಡ ಪ್ರಸ್ತಾವನೆ : ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯ ಎಂ. ಜಿ.

೧೪. ವೇದಾಂತ ಗ್ರಂಥಾವಳಿ (ನಿಜಗುಣಶಿವಯೋಗಿಗಳವರ ಷಟ್‌ಶಾಸ್ತ್ರಗಳ ಸಂಕ್ಷೇಪರೂಪ) : ಸಂ. ಶ್ರೀ ಶಿವಾನಂದ ಸ್ವಾಮಿಗಳು. (೧೯೪೪).

೧೫. ಸಮಗ್ರ ಕನ್ನಡ ಸಾಹಿತ್ಯಚರಿತ್ರೆ : ಬೆಂಗಳೂರು ವಿ. ವಿ. ಪ್ರಕಟನೆ ಭಾಗ ೩.

೧೬. ಸೀಮಾಪುರುಷ ಷಡಕ್ಷರದೇವ : ವಿ. ಶಿವಾನಂದ (೧೯೬೬).

೧೭. ಷಡಕ್ಷರಕವಿಯ ರಾಜಶೇಖರವಿಳಾಸದ ಪೀಠಿಕೆ : ಸಂ. ಪ್ರೊ. ಆರ್. ಸಿ. ಹಿರೇಮಠ ಮತ್ತು ಡಾ. ಸುಂಕಾಪುರ (ಪ್ರ. ಮು. ೧೯೬೨).

೧೮. ಷಡಕ್ಷರದೇವನ ಕಾಲನಿರ್ಣಯ : ಶ್ರೀ ಗೋವಿಂದಪೈ : ಶರಣ ಸಾಹಿತ್ಯ ಸಂಪುಟ. ೮, ಸಂ. ೭, ಪು. ೩೫೧–೩೬೭.

೧೯. ಷಡಕ್ಷರದೇವನ ಶಬರಶಂಕರ ವಿಳಾಸದ ಪೀಠಿಕೆ : ಸಂ. ಪ್ರೊ. ಎಸ್. ಎಸ್. ಬಸವನಾಳ

೨೦. ಶಿವತತ್ತ್ವರತ್ನಾಕರ (ಸಂಸ್ಕೃತ) : ಕೆಳದಿಬಸವಭೂಪಾಲ : ಮೈಸೂರು ಪ್ರಾಚ್ಯ ಸಂಶೋಧನಾಲಯದ ಪ್ರಕಟನೆ. ಸಂ. ಹೆಚ್. ದೇವೀರಪ್ಪ (೧೯೬೪).

೨೧. ವಿರೂಪಾಕ್ಷಪಂಡಿತನ ಚನ್ನಬಸವಪುರಾಣ ಪೀಠಿಕೆ : ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಪ್ರಕಟನೆ. (೧೯೩೪).

೨೨. ಷಡಕ್ಷರ ಕವಿಯ ಕವಿಕರ್ಣರಸಾಯನ : ಮೈಸೂರು ಪ್ರಾಚ್ಯಸಂಶೋಧನಾಲಯ ಪ್ರಕಟನೆ.

೨೩. ಷಡಕ್ಷರದೇವನ ಸ್ತೋತ್ರ ಸಾಹಿತ್ಯ : ಪಂ ಚನ್ನಪ್ಪ ಎರೇಸೀಮೆ : ಕನ್ನಡ ಸಾಹಿತ್ಯಪರಿಷತ್ ಪ್ರತಿಕೆಯಲ್ಲಿನ ಲೇಖನ (ಸಂ. ೬೧ ಸಂಚಿಕೆ ೧-೨.)

೨೪. ಅಂಧ್ರವಾಙ್ಮಯ ಚರಿತ್ರೆ : ಮೂಲ. ಡಾ. ದಿವಾಕರ್ಲ ವೆಂಕಟಾವಧಾನಿ : ಕನ್ನಡ ಅನುವಾದ ಎಫ್. ಜಿ. ಮಠದ (೧೯೬೫).

೨೫. ಭೀಮಕವಿಯ ಬಸವಪುರಾಣ : ಸಂ. ಆರ್. ಸಿ. ಹಿರೇಮಠ (೧೯೬೬).

೨೬. ಸಟೀಕ ವೃಷಭೇಂದ್ರ ವಿಜಯಂ : ಪಿ. ಆರ್. ಕರಿಬಸವ ಶಾಸ್ತ್ರಿ

೨೭. ಮೊಗ್ಗೆಯ ಮಾಯಿ ದೇವ ಕೃತ : 'ಮಾಯಿದೇವ ಪ್ರಭುವಾಣಿ' ಸಂ. ಶ್ರೀ ಚೆನ್ನಮಲ್ಲಿಕಾರ್ಜುನ.

